# ಋಗ್ವೇದಸಂಹಿತಾ

ಭಾಗ ೨೪

ಆರನೆಯ ಅಷ್ಟಕದಲ್ಲಿ ೨-೩-೪ ನೇ

ಅಧ್ಯಾಯಗಳು.

ಎಂಟನೆಯ ಮಂಡಲದ ಸೂಕ್ತಗಳು ೨೧-೬೭

(ಮತ್ತು ವಾಲಖಿಲ್ಯಸೂಕ್ತಗಳು ೪೯-೬೦.)





# ಋಗ್ವೇದಸಂಹಿತಾ

ಭಾಗ ೨೮

ಆರನೆಯ ಅಷ್ಟಕದಲ್ಲಿ ೩-೪-೫ ನೇ

ಅಧ್ಯಾಯಗಳು.

ಎಂಟನೆಯ ಮಂಡಲದ ಸೂಕ್ತಗಳು ೨೧-೬೨

(ಮತ್ತು ವಾಲಖಿಲ್ಯ ಸೂಕ್ತಗಳು ೪೯-೬೦.)

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೨೪

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೨೪

ಆರನೆಯ ಅಷ್ಟಕದಲ್ಲಿ ಎರಡು, ಮೂರು ಮತ್ತು
ನಾಲ್ಕನೆಯ ಅಧ್ಯಾಯಗಳು.

ಎಂಟನೆಯ ಮಂಡಲದ ಸೂಕ್ತಗಳು ೨೧—೬೭ ಮತ್ತು
(ವಾಲಖಿಲ್ಯಸೂಕ್ತಗಳು ೪೯–೬೦.)



*Translated with Exhaustive and Critical Notes and Explanations*

*by*

**Asthana Mahavidwan**

**H. P. VENKATA RAO**

*Editor.*



*Printed at*

**SREE SHARADA PRESS,**

**MYSORE.**

**1953**

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.**

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನವಿದ್ವನ್ಮಂಡಲಿ

Translator & Editor :

ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್

**ಸಹಾಯಕ ವಿದ್ವನ್ಮಂಡಲಿ**

1. ಬ್ರ॥ ಶ್ರೀ॥ G. N. ಚಕ್ರವರ್ತಿ M.A.
   Professor of Sanskrit. St. Philomina's College, Mysore
2. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ಸಾಹಿತ್ಯ ವ್ಯಾಕರಣವಿದ್ವಾನ್,
   ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ, ಮೈಸೂರು
3. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೋತಿಷ ವಿದ್ವಾನ್
   ಮತ್ತು ಕರ್ಣಾಟಕ ಭಾಷಾಪಂಡಿತರು.
4. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು, ಋಗ್ವೇದ ಘನಪಾಠಿಗಳು.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತವಿದ್ವಾನ್.
6. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನಪಂಡಿತರು.
7. ಬ್ರ॥ ಶ್ರೀ॥ ವೆಂಕಟರಮಣಾಚಾರ್, M.A., B.T., ಸಾಹಿತ್ಯವಿದ್ವಾನ್.
8. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯವಿದ್ವಾನ್,
   Govt. Oriental Research Institute, Mysore.
10. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು.
   Govt. Oriental Research Institute, Mysore.

# ಪೀಠಿಕೆ.

---

ಋಗ್ವೇದದ ಈ ಭಾಗದಲ್ಲಿ ಎಂಟನೇ ಮಂಡಲದ ೨೧–೬೭ ಸೂಕ್ತಗಳು ಅಡಕವಾಗಿವೆ. ಈ ಸೂಕ್ತಗಳ ವಿಷಯದಲ್ಲಿ ತಿಳಿಸಬೇಕಾದ ಹೆಚ್ಚು ಸಂಗತಿಗಳೇನೂ ಇಲ್ಲದಿದ್ದರೂ ೪೯–೬೦ ವರೆಗಿನ ೧೧ ಸೂಕ್ತಗಳ ವಿಷಯವಾಗಿ ಸೂಕ್ಷ್ಮವಿವರಣೆಯು ಅವಶ್ಯಕವಾಗಿದೆ. ಈ ೧೧ ಸೂಕ್ತಗಳಲ್ಲಿ ಒಟ್ಟು ೮೦ ಋಕ್ಕುಗಳಿರುವುವು. ಇವು ವಾಲಖಿಲ್ಯ ಸೂಕ್ತಗಳೆಂದು ಪ್ರಸಿದ್ಧಿಯಾಗಿವೆ. ಈ ವಾಲಖಿಲ್ಯ ಸೂಕ್ತಗಳೆಂದರೇನು, ಇವುಗಳ ಉಪಯೋಗವೇನು ಎಂಬ ವಿಚಾರದಲ್ಲಿ ಭಾಷ್ಯಕಾರರಾದ ಸಾಯಣಾಚಾರ್ಯರಾಗಲಿ, ಇತರ ಪ್ರಾಚೀನ ವೈದಿಕವಿದ್ವಾಂಸರಾಗಲಿ, Max Muller ಮೊದಲಾದ ಪಾಶ್ಚಾತ್ಯ ಪಂಡಿತರಾಗಲಿ ಏನನ್ನೂ ಹೇಳಿರುವುದಿಲ್ಲ. ಈ ಸೂಕ್ತಗಳಿಗೆ ಸಾಯಣರು ಭಾಷ್ಯವನ್ನು ಬರೆದಿರುವುದಿಲ್ಲ ಆದರೂ ನಾವು ಪೂನಾನಗರದ ವೈದಿಕಸಂಶೋಧನಮಂಡಲಿಯವರಿಂದ ಮುದ್ರಿತವಾದ ಋಗ್ವೇದಭಾಷ್ಯದಲ್ಲಿ ಕಾಶೀನಗರದ ಪ್ರಾಚ್ಯಪುಸ್ತಕಭಂಡಾಗಾರದಲ್ಲಿ ದೊರೆತಿರುವುದೆಂದು ಹೇಳಲಾದ ಈ ವಾಲಖಿಲ್ಯ ಸೂಕ್ತಗಳ ಭಾಷ್ಯವನ್ನೇ ಅರ್ಥಸಹಿತವಾಗಿ ಇಲ್ಲಿ ಕೊಟ್ಟಿದ್ದೇವೆ. ಈ ಭಾಷ್ಯವನ್ನು ಯಾರು, ಯಾವ ಕಾಲದಲ್ಲಿ ಬರೆದರೆಂಬ ವಿಷಯವು ಖಚಿತವಾಗಿ ಗೊತ್ತಾಗುವಂತಿಲ್ಲ. ಆದರೆ ಸಾಯಣರಿಗಿಂತ ಈಚಿನವರು ಬರೆದಿರುವರೆಂದು ಭಾಷ್ಯದ ಶೈಲಿಯಿಂದ ಹೇಳಬಹುದು. ಈ ಸೂಕ್ತಗಳ ಹೆಚ್ಚು ವಿವರಣೆಯನ್ನು ಆ ಸೂಕ್ತಗಳ ಪೀಠಿಕೆಯಲ್ಲಿ ತಿಳಿಸಲಾಗಿದೆ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ, ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡ ಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರೂ ಅವರ ಸರ್ಕಾರದವರೂ ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ, ರಾಜಕುಮಾರಿಯರಿಗೂ, **ಶ್ರೀಕಂಠದತ್ತನೃಸಿಂಹರಾಜ ಒಡೆಯರ್** ಎಂಬ ಶುಭನಾಮಾಂಕಿತರಾದ ರಾಜಕುಮಾರರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿ ಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ

ಮೈಸೂರು
ವಿಜಯನಾಮ ಸಂ॥ ಕಾರ್ತೀಕಶುಕ್ಲ ಪೂರ್ಣಿಮಾ ಶುಕ್ರವಾರ
ತಾ॥ 20—11—53.

ಅನುವಾದಕ :
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್

॥ ಶ್ರೀಃ ॥

# ಋಗ್ವೇದಸಂಹಿತೆಯ ಇಪ್ಪತ್ತನಾಲ್ಕನೆಯ ಭಾಗದ

# ವಿ ಷ ಯಾ ನು ಕ್ರ ಮ ಣಿ ಕೆ

## ಆರನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು.

## ಎಂಟನೆಯ ಮಂಡಲದ ಸೂಕ್ತಗಳು.


| ಅಧ್ಯಾಯ | | ಪುಟಸಂಖ್ಯೆ |
|---|---|---|
| ೨೧. | **ವಯಮು ತ್ವಾ** ಎಂಬ ಇಪ್ಪತ್ತೊಂದನೆಯ ಸೂಕ್ತವು— | 2 |
| ೨೨. | ಓ **ತ್ಯಮಹ್ವೇ** ಎಂಬ ಇಪ್ಪತ್ತೆರಡನೆಯ ಸೂಕ್ತವು— | 23 |
| ೨೩. | **ಈಳಿಷ್ವಾ ಹಿ** ಎಂಬ ಇಪ್ಪತ್ತಮೂರನೆಯ ಸೂಕ್ತವು— | 43 |
| ೨೪. | **ಸಖಾಯ ಆ** ಎಂಬ ಇಪ್ಪತ್ತನಾಲ್ಕನೆಯ ಸೂಕ್ತವು— | 72 |
| ೨೫. | **ತಾ ವಾಂ ವಿಶ್ವಸ್ಯ** ಎಂಬ ಇಪ್ಪತ್ತೈದನೆಯ ಸೂಕ್ತವು— | 106 |
| | **ಹರಯಾಣಃ** ಎಂಬ ಶಬ್ದದ ನಿರ್ವಚನವು. | 128 |
| ೨೬. | **ಯುವೋರು** ಎಂಬ ಇಪ್ಪತ್ತಾರನೆಯ ಸೂಕ್ತವು— | 131 |
| | **ವಾಹಿಷ್ಠಃ** ಎಂಬ ಶಬ್ದದ ಅರ್ಥವಿವರಣೆ, ನಿರ್ವಚನ ಇತ್ಯಾದಿ | 147 |
| ೨೭. | **ಅಗ್ನಿರುಕ್ಥೇ** ಎಂಬ ಇಪ್ಪತ್ತೇಳನೆಯ ಸೂಕ್ತವು— | 158 |
| | **ರಿಶಾದಸಃ** ಎಂಬ ಶಬ್ದದ ನಿರ್ವಚನ ಇತ್ಯಾದಿ. | 169 |
| ೨೮. | **ಯೇ ತ್ರಿಂಶತಿ** ಎಂಬ ಇಪ್ಪತ್ತೆಂಟನೆಯ ಸೂಕ್ತವು— | 183 |
| | ಮರುದ್ದೇವತೆಗಳಲ್ಲಿ ಸಪ್ತಗಣಗಳಿರುವ ವಿಷಯ. | 189 |
| ೨೯. | **ಬಭ್ರುರೇಕಃ** ಎಂಬ ಇಪ್ಪತ್ತೊಂಭತ್ತನೆಯ ಸೂಕ್ತವು – | 189 |
| ೩೦. | **ನಹಿ ವೋ ಅಸ್ತಿ** ಎಂಬ ಮೂವತ್ತನೆಯ ಸೂಕ್ತವು— | 198 |
| ೩೧. | **ಯೋ ಯಜಾತಿ** ಎಂಬ ಮೂವತ್ತೊಂದನೆಯ ಸೂಕ್ತವು— | 203 |


ಆರನೆಯ ಅಷ್ಟಕದ ಎರಡನೆಯ ಅಧ್ಯಾಯವು ಸಮಾಪ್ತವು

## ಮೂರನೆಯ ಅಧ್ಯಾಯವು.


| | | |
|---|---|---|
| ೩೨. | **ಪ್ರ ಕೃತಾನಿ** ಎಂಬ ಮೂವತ್ತೆರಡನೆಯ ಸೂಕ್ತವು— | 225 |
| | **ಋಜೀಷ** ವೆಂಬ ಶಬ್ದದ ವಿವರಣೆ | 227 |
| | **ಕೂರ್ಪಾಶ** ಶಬ್ದದ ನಿರ್ವಚನ ಇತ್ಯಾದಿ. | 230 |
| | **ಸೃಪ್ರಃ** ಮತ್ತು **ಬೃಬದುಕ್ಥಂ** ಎಂಬ ಶಬ್ದಗಳಿಗೆ ನಿರ್ವಚನ ಮತ್ತು ಅರ್ಥವಿವರಣೆ. | 236 |

| ಅಧ್ಯಾಯ | | ಪುಟಸಂಖ್ಯೆ |
|---|---|---|
| | **ಅಂತರಾಭರಃ** ಎಂಬ ಶಬ್ದದ ವಿವರಣೆ. | 238 |
| | ದ್ವಿಜನಾದವನು ತೀರಿಸಬೇಕಾದ **ಋಣತ್ರಯಗಳ** ವಿಷಯ ಇತ್ಯಾದಿ. | 242 |
| | **ಸೋಮವಿಕ್ರಯಣ** ವಿಚಾರ. | 246 |
| ೩೩. | **ವಯಂ ಘ ತ್ವಾ** ಎಂಬ ಮೂವತ್ತಮೂರನೆಯ ಸೂಕ್ತವು— | 256 |
| ೩೪. | **ಐಂದ್ರ ಯಾಹಿ ಹರಿಭಿಃ** ಎಂಬ ಮೂವತ್ತನಾಲ್ಕನೆಯ ಸೂಕ್ತವು— | 276 |
| ೩೫. | **ಅಗ್ನಿನೇಂದ್ರೇಣ** ಎಂಬ ಮೂವತ್ತೈದನೆಯ ಸೂಕ್ತವು— | 294 |
| ೩೬. | **ಅವಿತಾಸಿ ಸುನ್ವತಃ** ಎಂಬ ಮೂವತ್ತಾರನೆಯ ಸೂಕ್ತವು— | 319 |
| ೩೭. | **ಪ್ರೇದಂ ಬ್ರಹ್ಮ** ಎಂಬ ಮೂವತ್ತೇಳನೆಯ ಸೂಕ್ತವು— | 329 |
| ೩೮. | **ಯಜ್ಞಸ್ಯ ಹಿ** ಎಂಬ ಮೂವತ್ತೆಂಟನೆಯ ಸೂಕ್ತವು— | 337 |
| ೩೯. | **ಅಗ್ನಿಮಸ್ತೋಷಿ** ಎಂಬ ಮೂವತ್ತೊಂಭತ್ತನೆಯ ಸೂಕ್ತವು— | 346 |
| ೪೦. | **ಇಂದ್ರಾಗ್ನೀ ಯುವಂ** ಎಂಬ ನಲವತ್ತನೆಯ ಸೂಕ್ತವು— | 359 |
| ೪೧. | **ಅಸ್ಮಾ ಊ ಷು** ಎಂಬ ನಲವತ್ತೊಂದನೆಯ ಸೂಕ್ತವು— | 374 |
| | **ತಮೂ ಷು ಸಮನಾ** ಎಂಬ ಋಕ್ಕಿನ ನಿರುಕ್ತವು. | 377 |
| ೪೨. | **ಅಸ್ತಭ್ನಾದ್ದ್ಯಾಂ** ಎಂಬ ನಲವತ್ತೆರಡನೆಯ ಸೂಕ್ತವು— | 389 |
| ೪೩. | **ಇಮೇ ವಿಪ್ರಸ್ಯ** ಎಂಬ ನಲವತ್ತಮೂರನೆಯ ಸೂಕ್ತವು— | 395 |
| | **ಶೀರಂ** ಮತ್ತು **ಪಾವಕಶೋಚಿಷಂ** ಎಂಬ ಶಬ್ದಗಳ ನಿರ್ವಚನವು. | 422 |
| ೪೪. | **ಸಮಿಧಾಗ್ನಿಂ ದುವಸ್ಯತ** ಎಂಬ ನಲವತ್ತನಾಲ್ಕನೆಯ ಸೂಕ್ತವು— | 424 |
| ೪೫. | **ಆ ಘಾ ಯೇ ಅಗ್ನಿಂ** ಎಂಬ ನಲವತ್ತೈದನೆಯ ಸೂಕ್ತವು— | 450 |
| | **ಆನುಷಕ್** ಎಂಬ ಶಬ್ದದ ನಿರ್ವಚನ ಮತ್ತು ಅರ್ಥವಿವರಣೆ. | 452 |
| | **ರಂಭ** ಶಬ್ದದ ನಿರ್ವಚನ ಮತ್ತು ಅರ್ಥವಿವರಣೆ. | 468 |
| | **ಕೋ ನು ಮರ್ಯಾ** ಎಂಬ ಋಕ್ಕಿಗೆ ಯಾಸ್ಕರ ನಿರುಕ್ತವು. | 483 |


ಆರನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಸಮಾಪ್ತವು.

---

## ನಾಲ್ಕನೆಯ ಅಧ್ಯಾಯವು.


| | | |
|---|---|---|
| ೪೬. | **ತ್ವಾವತಃ ಪುರೂವಸೋ** ಎಂಬ ನಲವತ್ತಾರನೆಯ ಸೂಕ್ತವು— | 489 |
| | ಸೂಕ್ತವಿನಿಯೋಗ ಋಷಿದೇವತಾಛಂದಸ್ಸುಗಳು ಇತ್ಯಾದಿ. | 490 |
| ೪೭. | **ಮಹಿ ವೋ ಮಹತಾಂ** ಎಂಬ ನಲವತ್ತೇಳನೆಯ ಸೂಕ್ತವು— | 525 |
| ೪೮. | **ಸ್ವಾದೋರಭಕ್ಷಿ** ಎಂಬ ನಲವತ್ತೆಂಟನೆಯ ಸೂಕ್ತವು— | 547 |
| | **ಇಷಿರೇಣ ತೇ** ಎಂಬ ಋಕ್ಕಿನ ನಿರುಕ್ತ ಮತ್ತು ಅರ್ಥವಿವರಣೆ. | 555 |
| | **ವಾಸರಾಣಿ** ಶಬ್ದದ ನಿರ್ವಚನ ಇತ್ಯಾದಿ. | 556 |
| | **ಋದೂದರೇಣ** ಎಂಬ ಸಬ್ದದ ನಿರ್ವಚನ. | 560 |

| ಅಧ್ಯಾಯ | | ಪುಟಸಂಖ್ಯೆ |
|---|---|---|
| | **ವಾಲಖಿಲ್ಯಸೂಕ್ತಗಳು.** | |
| | ವಾಲಖಿಲ್ಯಸೂಕ್ತಗಳ ಪೀಠಿಕೆ. | 567 |
| ೪೯. | **ಅಭಿ ಪ್ರ ವಃ** ಎಂಬ ನಲವತ್ತೊಂಭತ್ತನೆಯ (ವಾಲಖಿಲ್ಯದ ಮೊದಲನೆಯ) ಸೂಕ್ತವು— | 569 |
| ೫೦. | **ಪ್ರ ಸು ಶ್ರುತಂ** ಎಂಬ ಐವತ್ತನೆಯ (ವಾ. ಖಿ. ಸೂ. ೨) ಸೂಕ್ತವು— | 580 |
| ೫೧. | **ಯಥಾ ಮನೌ** ಎಂಬ ಐವತ್ತೊಂದನೆಯ (ವಾ. ಖಿ. ಸೂ. ೩) ಸೂಕ್ತವು— | 594 |
| ೫೨. | **ಯಥಾ ಮನೌ ವಿವಸ್ವತಿ** ಎಂಬ ಐವತ್ತೆರಡನೆಯ (ವಾ. ಖಿ. ಸೂ. ೪) ಸೂಕ್ತವು— | 603 |
| ೫೩. | **ಉಪಮಂ ತ್ವಾ** ಎಂಬ ಐವತ್ತಮೂರನೆಯ (ವಾ. ಖಿ. ಸೂ. ೫) ಸೂಕ್ತವು— | 615 |
| ೫೪. | **ಏತತ್ತ ಇಂದ್ರ** ಎಂಬ ಐವತ್ತನಾಲ್ಕನೆಯ (ವಾ. ಖಿ. ಸೂ. ೬) ಸೂಕ್ತವು— | 625 |
| ೫೫. | **ಭೂರೀದಿಂದ್ರಸ್ಯ** ಎಂಬ ಐವತ್ತೈದನೆಯ (ವಾ. ಖಿ. ಸೂ. ೭) ಸೂಕ್ತವು— | 634 |
| ೫೬. | **ಪ್ರತಿ ತೇ ದಸ್ಯವೇ** ಎಂಬ ಐವತ್ತಾರನೆಯ (ವಾ. ಖಿ. ಸೂ. ೮) ಸೂಕ್ತವು— | 639 |
| ೫೭. | **ಯುವಂ ದೇವಾ** ಎಂಬ ಐವತ್ತೇಳನೆಯ (ವಾ. ಖಿ. ಸೂ. ೯) ಸೂಕ್ತವು— | 645 |
| ೫೮. | **ಯುಮೃತ್ವಿಜೋ** ಎಂಬ ಐವತ್ತೆಂಟನೆಯ (ವಾ. ಖಿ. ಸೂ. ೧೦) ಸೂಕ್ತವು— | 651 |
| ೫೯. | **ಇಮಾನಿ ವಾಂ** ಎಂಬ ಐವತ್ತೊಂಭತ್ತನೆಯ (ವಾ ಖಿ. ಸೂ. ೧೧) ಸೂಕ್ತವು— | 656 |
| ೬೦. | **ಅಗ್ನ ಆ ಯಾಹಿ** ಎಂಬ ಅರವತ್ತನೆಯ ಸೂಕ್ತವು— | 665 |
| ೬೧. | **ಉಭಯಂ ಶೃಣವಚ್ಚ** ಎಂಬ ಅರವತ್ತೊಂದನೆಯ ಸೂಕ್ತವು— | 687 |
| | **ಜಲ್ಹವಃ** ಎಂಬ ಶಬ್ದದ ಅರ್ಥವಿವರಣೆ ಮತ್ತು ನಿರ್ವಚನ. | 700 |
| ೬೨. | **ಪ್ರೋ ಅಸ್ಮೈ** ಎಂಬ ಅರವತ್ತೆರಡನೆಯ ಸೂಕ್ತವು— | 709 |
| ೬೩. | **ಸ ಪೂರ್ವ್ಯೋ ಮಹಾನಾಂ** ಎಂಬ ಅರವತ್ತಮೂರನೆಯ ಸೂಕ್ತವು— | 722 |
| ೬೪. | **ಉತ್ತ್ವಾ ಮಂದಂತು** ಎಂಬ ಅರವತ್ತನಾಲ್ಕನೆಯ ಸೂಕ್ತವು-- | 735 |
| ೬೫. | **ಯದಿಂದ್ರ ಪ್ರಾಕ್** ಎಂಬ ಅರವತ್ತೈದನೆಯ ಸೂಕ್ತವು— | 746 |
| ೬೬. | **ತರೋಭಿರ್ವೋ** ಎಂಬ ಅರವತ್ತಾರನೆಯ ಸೂಕ್ತವು— | 757 |
| | **ಬೇಕನಾಟಾನ್** ಎಂಬ ಶಬ್ದದ ನಿರ್ವಚನ ಮತ್ತು ಅರ್ಥವಿವರಣೆ ಇತ್ಯಾದಿ. | 771 |
| ೬೭. | **ತ್ಯಾನ್ನು ಕ್ಷತ್ರಿಯಾನ್** ಎಂಬ ಅರವತ್ತೇಳನೆಯ ಸೂಕ್ತವು— | 776 |
| | **ಅಭಿಧೇತನ** ಎಂಬ ಶಬ್ದದ ನಿರ್ವಚನ ಮತ್ತು ಅರ್ಥವಿವರಣೆ. | 781 |


**ವಿಷಯಾನುಕ್ರಮಣಿಕೆ ಸಮಾಪ್ತವು.**



## ಸಂಕೇತಾಕ್ಷರಗಳ ವಿವರಣೆಯು



ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬ ಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬ ಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ. ಉಣಾದಿ ಸೂತ್ರ
ಋ. ಸಂ. ಋಗ್ವೇದಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ. ಬ್ರಾ.—ಐತರೇಯಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ. ಸೂ.—ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾ ವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್‌ಸೂತ್ರ
ಬ್ರ. ಸೂ.—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ
ಬೃ. ದೇ.—ಬೃಹದ್ದೇವತಾ





॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

(ಕರ್ನಾಟಕ ಭಾಷಾರ್ಥಾನುವಾದ ವಿವರಣೆ ಸಹಿತವಾಗಿ)

ಭಾಗ ೨೪

## ॥ ಷಷ್ಠಾಷ್ಟಕೇ ದ್ವಿತೀಯೋಽಧ್ಯಾಯಃ ॥

ಆರನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು

## ಎಂಟನೆಯ ಮಂಡಲದಲ್ಲಿ ಇಪ್ಪತ್ತೊಂದನೆಯ ಸೂಕ್ತವು.

### ಪೀಠಿಕೆ.

। ಸಾಯಣಭಾಷ್ಯಂ ।

**ಚತುರ್ಥೇಽನುವಾಕೇ ದಶ ಸೂಕ್ತಾನಿ । ತತ್ರ ವಯಮು ತ್ವಾಮಿತ್ಯಷ್ಟಾದಶರ್ಚಂ ಪ್ರಥಮಂ ಸೂಕ್ತಂ । ಅತ್ರಾನುಕ್ರಮಣಿಕಾ । ವಯಮು ದ್ವ್ಯೂನಾಂತ್ಯೇ ದ್ವೃಚೇ ಚಿತ್ರಸ್ಯ ದಾನಸ್ತುತಿರಿತಿ । ಋಷಿಶ್ಚಾಸ್ಯಸ್ಮಾದಿತಿ ಪರಿಭಾಷಯಾ ಕಾಣ್ವಃ ಸೋಭರಿರ್ಋಷಿಃ । ಕಾಕುಭಂ ಪ್ರಾಗಾಥಂ ಹೇತ್ಯುಕ್ತತ್ವಾ-ದಸ್ಯಾಪಿ ಸೂಕ್ತಸ್ಯಾಯುಜಃ ಕಕುಭೋ ಯುಜಃ ಸತೋಬೃಹತ್ಯಃ । ಅಂತ್ಯೇ ದ್ವೃಚೇ ಚಿತ್ರಸ್ಯ ದಾನಂ**

**ದೇವತಾ । ಶಿಷ್ಟಾ ಐಂದ್ರ್ಯಃ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಉಕ್ಥ್ಯೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ವಯಮು ತ್ವಾಮಿತಿ ಪ್ರಗಾಥಃ ಸ್ತೋತ್ರಿಯಃ । ಸೂತ್ರಿತಂ ಚ । ವಯಮು ತ್ವಾಮಪೂರ್ವ್ಯ ಯೋ ನ ಇದಮಿದಂ ಪುರೇತಿ ಪ್ರಗಾಥೌ । ಆ. ೬-೧ । ಇತಿ ॥ ಅಭಿಪ್ಲವಿಕೇಷೂಕ್ಥ್ಯೇಷ್ವಪಿ ತೃತೀಯಸವನೇ ಬ್ರಾಹ್ಮಣಾಚ್ಛಂಸಿನೋ ವೈಕಲ್ಪಿಕೋಽಯಂ ಸ್ತೋತ್ರಿಯಃ ಪ್ರಗಾಥಃ । ಸೂತ್ರಮುಕ್ತಂ ॥ ಅಸ್ಮಿನ್ನೇವ ಶಸ್ತ್ರೇ ತ್ವಂ ನ ಇಂದ್ರಾ ಭರೇತಿ ಪ್ರಗಾಥೋ ಯದಾ ಸ್ತೋತ್ರಿಯಃ ತದಾ ವಯಮು ತ್ವೇತ್ಯನುರೂಪತೃಚಸ್ಯಾದ್ಯಾ । ಸೂತ್ರಿತಂ ಚ । ವಯಮು ತ್ವಾಮಪೂರ್ವ್ಯ ಯೋ ನ ಇದಮಿದಂ ಪುರಾ ಯಾಹೀಮ ಇಂದವ ಇತಿ ಸಮಾಹಾರ್ಯೋಽನುರೂಪಃ । ಆ. ೭-೮ । ಇತಿ ॥**

ಎಂಟನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಹತ್ತು ಸೂಕ್ತಗಳಿರುವವು. ಅವುಗಳಲ್ಲಿ **ವಯಮು ತ್ವಾಂ** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಹದಿನೆಂಟು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ವಯಮು ದ್ವ್ಯೂನಾಂತ್ಯೇ ದ್ವ್ಯೃಚೇ ಚಿತ್ರಸ್ಯ ದಾನಸ್ತುತಿಃ** ಎಂದು ಹೇಳಿರುವುದು. ಈ ಸೂಕ್ತಕ್ಕೆ **ಸೋಭರಿಃ ಕಾಣ್ವಃ** ಎಂಬುವನು ಋಷಿಯು ; ಈ ಸೂಕ್ತಕ್ಕೂ ಹಿಂದಿನಂತೆ ಅಸಮಸಂಖ್ಯೆಯ ಋಕ್ಕುಗಳು ಕಕುಪ್‌ಛಂದಸ್ಕವು; ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು ಈ ಸೂಕ್ತದ ಕೊನೆಯ ಎರಡು ಋಕ್ಕುಗಳಿಗೆ ಚಿತ್ರನ ದಾನಸ್ತುತಿಯೇ ದೇವತೆಯು; ಉಳಿದ ಋಕ್ಕುಗಳು ಇಂದ್ರದೇವತಾಕವು. ಸೂಕ್ತವಿನಿಯೋಗವು ಲೈಂಗಿಕವು. ಉಕ್ಥ್ಯಯಾಗದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ **ವಯಮು ತ್ವಾಂ** ಎಂಬ ಮಂತ್ರವನ್ನು ಪ್ರಗಾಥಸ್ತೋತ್ರಿಯಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವಯಮು ತ್ವಾಮಪೂರ್ವ್ಯ ಯೋ ನ ಇದಮಿದಂ ಪುರೇತಿ ಪ್ರಗಾಥೌ** ಎಂಬ ಸೂತ್ರದಿಂದ (ಆ. ೬-೧) ವಿವೃತವಾಗಿರುವುದು. ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿಯೂ ತೃತೀಯಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಮೇಲೆ ಹೇಳಿದ ಋಕ್ಕನ್ನು ವೈಕಲ್ಪಿಕಸ್ತೋತ್ರಿಯಪ್ರಗಾಥವನ್ನಾಗಿ ಪಠಿಸಬೇಕೆಂದು ನಿರ್ದಿಷ್ಟವಾಗಿರುವ ಸೂತ್ರವನ್ನು ಹಿಂದೆಯೇ ಹೇಳಿದೆ. ಮೇಲಿನ ಶಸ್ತ್ರಮಂತ್ರಗಳಲ್ಲಿ **ತ್ವಂ ನ ಇಂದ್ರಾ ಭರ** (ಋ. ಸಂ. ೮-೯೮-೧೦) ಎಂಬ ಪ್ರಗಾಥ ಮಂತ್ರವನ್ನು ಸ್ತೋತ್ರೀಯಮಂತ್ರವನ್ನಾಗಿ ಪಠಿಸುವಾಗ **ವಯಮು ತ್ವಾ** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಅನುರೂಪತೃಚದ ಮೊದಲನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವಯಮು ತ್ವಾಮಪೂರ್ವ್ಯ ಯೋ ನ ಇದಮಿದಂ ಪುರಾ ಯಾಹೀಮ ಇಂದವ ಇತಿ ಸಮಾಹಾರ್ಯೋಽನುರೂಪಃ** ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

## ಸೂಕ್ತ—೨೧

ಮಂಡಲ—೮ ॥ ಅನುವಾಕ—೪ ॥ ಸೂಕ್ತ—೨೧ ॥
ಅಷ್ಟಕ—೬ ॥ ಅಧ್ಯಾಯ - ೨ ॥ ವರ್ಗ— ೧, ೨, ೩, ೪ ॥

**॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥**
**॥ ಋಷಿಃ—ಸೋಭರಿಃ ಕಾಣ್ವಃ ॥**
**॥ ದೇವತಾ—೧-೧೬. ಇಂದ್ರಃ ॥ ೧೭-೧೮. ಚಿತ್ರಸ್ಯ ದಾನಸ್ತುತಿಃ ॥**
**॥ ಛಂದಃ— ಪ್ರಾಗಾಥಂ ಕಾಕುಭಂ (ಅಯುಜಃ ಕಕುಭಃ ಯುಜಃ ಸತೋಬೃಹತ್ಯಃ)**

॥ ಸಂಹಿತಾಪಾಠಃ ॥

ವಯಮು ತ್ವಾಮಪೂರ್ವ್ಯ ಸ್ಥೂರಂ ನ ಕಚ್ಚಿದ್ಭರಂತೋಽವಸ್ಯವಃ ।
ವಾಜೇ ಚಿತ್ರಂ ಹವಾಮಹೇ ॥ ೧ ॥

॥ ಪದಪಾಠಃ ॥

ವಯಂ । ಊಂ ಇತಿ । ತ್ವಾಂ । ಅಪೂರ್ವ್ಯ । ಸ್ಥೂರಂ । ನ । ಕತ್ । ಚಿತ್ । ಭರಂತಃ । ಅವಸ್ಯವಃ ।
ವಾಜೇ । ಚಿತ್ರಂ । ಹವಾಮಹೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಪೂರ್ವ್ಯ ತ್ರಿಷು ಸವನೇಷು ಪ್ರಾದುರ್ಭೂತತ್ವಾದಭಿನವೇಂದ್ರ ಭರಂತಃ ಸೋಮಲಕ್ಷಣೈರನ್ನೈಸ್ತ್ವಾಂ ಪೋಷಯಂತೋ ವಯಂ ವಾಜೇ । ವಾಜಂತಿ ಗಚ್ಛಂತಿ ಯೋದ್ಧಾರೋಽತ್ರೇತಿ ವಾಜಯಂತ್ಯಾಯುಧಾನ್ಯತ್ರೇತಿ ವಾ ವಾಜಃ ಸಂಗ್ರಾಮಃ । ತಸ್ಮಿಂಶ್ಚಿತ್ರಂ ಚಾಯನೀಯಂ ವಿವಿಧರೂಪಂ ತ್ವಾಮು ತ್ವಾಮೇವಾವಸ್ಯವೋ ರಕ್ಷಣಮಾತ್ಮನ ಇಚ್ಛಂತಃ ಸಂತೋ ಹವಾಮಹೇ । ತ್ವಾಮಾಹ್ವಯಾಮಃ। ತತ್ರ ದೃಷ್ಟಾಂತಃ । ಸ್ಥೂರಂ ನ ಯಥಾ ಭರಂತೋ ವ್ರೀಹ್ಯಾದಿಭಿರ್ಗೃಹಂ ಪೂರಯಂತೋ ಜನಾ ವಾಜೇಽನ್ನವಿಷಯೇ ಸ್ಥೂರಂ ಸ್ಥೂಲಂ ಗುಣಾಧಿಕಂ ಕಚ್ಚಿತ್ ಕಂಚಿನ್ಮಾನವಂ ಯಥಾಹ್ವಯಂತಿ ತದ್ವತ್॥

॥ ಪ್ರತಿಪದಾರ್ಥ ॥

**ಅಪೂರ್ವ್ಯ**—ಪ್ರತಿ ಯಾಗದಲ್ಲಿಯೂ ನೂತನವಾಗಿ ಉತ್ಪನ್ನನಾಗತಕ್ಕ ಎಲೈ ಇಂದ್ರನೇ । **ಸ್ಥೂರಂ ನ ಕಚ್ಚಿತ್**—ಭಾರವನ್ನು ಹೊರಲು ಸಮರ್ಥನಾದ ಸ್ಥೂಲಪುರುಷನನ್ನು ಸಹಾಯಕ್ಕೆ ಕರೆಯುವಂತೆ । **ಭರಂತಃ**—ಸೋಮರಸದಿಂದ ನಿನ್ನನ್ನು ಪೋಷಿಸುವ । **ವಯಂ**—ನಾವು । **ವಾಜೇ**—ಸಂಗ್ರಾಮದಲ್ಲಿ । **ಚಿತ್ರಂ**—ಆಕರ್ಷಕವಾದ ರೂಪವುಳ್ಳ । **ತ್ವಾಂ ಉ**—ನಿನ್ನನ್ನೇ । **ಅವಸ್ಯವಃ**—ರಕ್ಷಣಾರ್ಥಿಗಳಾಗಿ । **ಹವಾಮಹೇ**—ಕರೆಯುತ್ತೇವೆ.

॥ ಭಾವಾರ್ಥ ॥

ಪ್ರತಿ ಯಾಗದಲ್ಲಿಯೂ ನೂತನವಾಗಿ ಉತ್ಪನ್ನನಾಗತಕ್ಕ ಎಲೈ ಇಂದ್ರನೇ, ಭಾರವನ್ನು ಹೊರಲು ಸಮರ್ಥನಾದ ಸ್ಥೂಲಪುರುಷನನ್ನು ಸಹಾಯಕ್ಕಾಗಿ ಕರೆಯುವಂತೆ ಸೋಮರಸದಿಂದ ನಿನ್ನನ್ನು ಪೋಷಿಸುವ ನಾವು ಸಂಗ್ರಾಮದಲ್ಲಿ ರಕ್ಷಣಾರ್ಥವಾಗಿ ಆಕರ್ಷಕವಾದ ರೂಪವುಳ್ಳ ನಿನ್ನನ್ನೇ ಕರೆಯುತ್ತೇವೆ

## English Translation.

Unpreceded Indra, cherishing you (with sacrificial food), desirous of your protection, we invoke you who are manifold in battle, as (men call upon) some stout (person for help).

॥ ಸಂಹಿತಾಪಾಠಃ ॥

ಉಪ ತ್ವಾ ಕರ್ಮನ್ನೂತಯೇ ಸ ನೋ ಯುವೋಗ್ರಶ್ಚಕ್ರಾಮ ಯೋ ಧೃಷತ್ ।
ತ್ವಾಮಿದ್ಧ್ಯವಿತಾರಂ ವವೃಮಹೇ ಸಖಾಯ ಇಂದ್ರ ಸಾನಸಿಂ ॥ ೨ ॥

॥ ಪದಪಾಠಃ ॥

ಉಪ । ತ್ವಾ । ಕರ್ಮನ್ । ಊತಯೇ । ಸಃ । ನಃ । ಯುವಾ । ಉಗ್ರಃ । ಚಕ್ರಾಮ । ಯಃ । ಧೃಷತ್ ।
ತ್ವಾಂ । ಇತ್ । ಹಿ । ಅವಿತಾರಂ । ವವೃಮಹೇ । ಸಖಾಯಃ । ಇಂದ್ರ । ಸಾನಸಿಂ ॥ ೨ ॥

॥ ಸಾಯಣಭಾಷ್ಯಂ ॥

ಪ್ರಥಮಪಾದಃ ಪ್ರತ್ಯಕ್ಷಕೃತಃ । ಹೇ ಇಂದ್ರ ಕರ್ಮನ್ನಗ್ನಿಷ್ಟೋಮಾದಿಕರ್ಮಣ್ಯೂತಯೇ ರಕ್ಷಣಾಯ ತ್ವಾ ತ್ವಾಮುಪಗಚ್ಛಾಮಃ । ದ್ವಿತೀಯಃ ಪಾದಃ ಪರೋಕ್ಷಕೃತಃ । ಯ ಇಂದ್ರೋ ಧೃಷತ್ ಧೃಷ್ಣೋತಿ ಶತ್ರೂನಭಿಭವತಿ ॥ ಞಿಧೃಷಾ ಪ್ರಾಗಲ್ಭ್ಯೇ । ಬಹುಲಂ ಛಂದಸೀತಿ ಶಪ್ರತ್ಯಯಃ ॥ ಯುವಾ ತರುಣ ಉಗ್ರ ಉದ್ಗೂರ್ಣಃ ಸ ಇಂದ್ರೋ ನೋಽಸ್ಮಾನ್ ಪ್ರತಿ ಚಕ್ರಾಮ । ಆಗಚ್ಛತು । ಯದ್ವಾ ಚಕ್ರಾಮ । ಅಸ್ಮಾನುತ್ಸಾಹಯುಕ್ತಾನ್ ಕರೋತು ॥ ಕ್ರಮತೇಃ ಸರ್ಗಾರ್ಥೇ ವ್ಯತ್ಯಯೇನ ಪರಸ್ಮೈಪದಂ । ಪಾ. ೧-೩-೩೮ ॥ ಪರೋಽರ್ಧರ್ಚಃ ಪ್ರತ್ಯಕ್ಷಕೃತಃ । ಸಖಾಯಃ ಸಮಾನಖ್ಯಾನಾ ಬಂಧುಭೂತಾ ವಾ ವಯಂ ಸಾನಸಿಂ ॥ ವನ ಷಣ ಸಂಭಕ್ತೌ ॥ ಸಂಭಜನೀಯಮವಿತಾರಂ ಸರ್ವಸ್ಯ ರಕ್ಷಿತಾರಂ ತ್ವಾಮಿತ್ತ್ವಾಮೇವ ವವೃಮಹೇ । ವೃಣೀಮಹೇ । ಸಂಭಜಾಮಹೇ । ಹಿಃ ಪ್ರಸಿದ್ಧೌ ॥ ಹಿಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಕರ್ಮನ್**—ಅಗ್ನಿಷ್ಟೋಮಾದಿಕರ್ಮಗಳಲ್ಲಿ । **ಊತಯೇ**—ರಕ್ಷಣಾರ್ಥವಾಗಿ । **ತ್ವಾ**—ನಿನ್ನನ್ನೇ । **ಉಪ**—ಸಮೀಪಿಸುತ್ತೇವೆ । **ಯಃ**—ಯಾವ ಇಂದ್ರನು । **ಧೃಷತ್**—ಶತ್ರುಗಳನ್ನು ಸೋಲಿಸುವನೋ ಅಂತಹ । **ಯುವಾ**—ನಿತ್ಯತರುಣನೂ । **ಉಗ್ರಃ**—ಅಧಿಕವಾದ ಬಲವುಳ್ಳವನೂ ಆದ । **ಸಃ**—ಅದೇ ಇಂದ್ರನು । **ನಃ**—ನಮ್ಮನ್ನು ಲಕ್ಷಿಸಿ । **ಚಕ್ರಾಮ**—ಬರಲಿ । **ಇಂದ್ರ**—ಎಲೈ ಇಂದ್ರನೇ । **ಸಖಾಯಃ**—ನಿನ್ನ ಮಿತ್ರರಾದ ನಾವು । **ಸಾನಸಿಂ**—ಪೂಜ್ಯನೂ । **ಅವಿತಾರಂ**—ಸಂರಕ್ಷಕನೂ ಆದ । **ತ್ವಾಂ ಇತ್**—ನಿನ್ನನ್ನೇ । **ವವೃಮಹೇ ಹಿ**—ಆರಾಧಿಸುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಅಗ್ನಿಷ್ಟೋಮಾದಿಕರ್ಮಗಳಲ್ಲಿ ರಕ್ಷಣಾರ್ಥವಾಗಿ ನಿನ್ನನ್ನೇ ಸಮೀಪಿಸುತ್ತೇವೆ. ಯಾವ ಇಂದ್ರನು ಶತ್ರುಗಳನ್ನು ಸೋಲಿಸುವನೋ ಅಂತಹ ನಿತ್ಯತರುಣನೂ, ಅಧಿಕವಾದ ಬಲವುಳ್ಳವನೂ ಆದ ಅದೇ

ಇಂದ್ರನು ನಮಗಭಿಮುಖನಾಗಿ ಬರಲಿ. ಎಲೈ ಇಂದ್ರನೇ, ನಿನ್ನ ಮಿತ್ರರಾದ ನಾವು ಪೂಜ್ಯನೂ, ಸಂರಕ್ಷಕನೂ ಆದ ನಿನ್ನನ್ನೇ ಆರಾಧಿಸುತ್ತೇವೆ.

## English Translation.

We have recourse, Indra, to you for protection at sacred rites: may he who is ever young, fierce, resolute, come to us! We, your friends, Indra, rely upon you as our protector and benefactor.

॥ ಸಂಹಿತಾಪಾಠಃ ॥

ಆ ಯಾಹೀಮ ಇಂದವೋಽಶ್ವಪತೇ ಗೋಪತ ಉರ್ವರಾಪತೇ ।

ಸೋಮಂ ಸೋಮಪತೇ ಪಿಬ ॥ ೩ ॥

॥ ಪದಪಾಠಃ ॥

ಆ । ಯಾಹಿ । ಇಮೇ । ಇಂದವಃ । ಅಶ್ವಽಪತೇ । ಗೋಽಪತೇ । ಉರ್ವರಾಽಪತೇ ।

ಸೋಮಂ । ಸೋಮಽಪತೇ । ಪಿಬ ॥ ೩ ॥

॥ ಸಾಯಣಭಾಷ್ಯಂ ॥

**ಅಶ್ವಪತೇಽಶ್ವಾನಾಂ ಸ್ವಾಮಿನ್ ಗೋಪತೇ ಗವಾಂ ಪಾಲಯಿತರುರ್ವರಾಪತೇ । ಸರ್ವಸಸ್ಯಾಢ್ಯಾ ಭೂಮಿರುರ್ವರಾ । ತಸ್ಯಾಃ ಪತೇ ಹೇ ಇಂದ್ರ ಇಂದವಃ ಸೋಮಾ ಇಮೇ ಭವದೀಯಾಃ । ತ್ವದರ್ಥಮಭಿಷುತಾ ಇತ್ಯರ್ಥಃ । ತಸ್ಮಾದಾ ಯಾಹಿ । ಆಗಚ್ಛ । ಆಗತ್ಯ ಸೋಮಪತೇ ಹೇ ಇಂದ್ರ ಸೋಮಂ ಪಿಬ ॥**

॥ ಪ್ರತಿಪದಾರ್ಥ ॥

**ಅಶ್ವಪತೇ**—ಅಶ್ವಪಾಲಕನೂ । **ಗೋಪತೇ**—ಗೋಪಾಲಕನೂ । **ಉರ್ವರಾಪತೇ**—ಸಸ್ಯಗಳಿಗೆ ಪಾಲಕನೂ ಆದ ಎಲೈ ಇಂದ್ರನೇ । **ಇಮೇ ಇಂದವಃ**—ಈ ಸೋಮರಸಗಳು ನಿನಗಾಗಿ ಸಿದ್ಧವಾಗಿವೆ । **ಆ ಯಾಹಿ**—ದಯಮಾಡು । **ಸೋಮಪತೇ**—ಸೋಮಪಾಲಕನಾದ ಎಲೈ ಇಂದ್ರನೇ । **ಸೋಮಂ**—ಸೋಮವನ್ನು । ಪಿಬ—ಪಾನಮಾಡು.

॥ ಭಾವಾರ್ಥ ॥

ಅಶ್ವಪಾಲಕನೂ, ಗೋಪಾಲಕನೂ, ಸಸ್ಯಗಳಿಗೆ ಪಾಲಕನೂ ಆದ ಎಲೈ ಇಂದ್ರನೇ, ಈ ಸೋಮರಸಗಳು ನಿನಗಾಗಿ ಸಿದ್ಧವಾಗಿವೆ. ದಯಮಾಡು, ಸೋಮಪಾಲಕನಾದ ಎಲೈ ಇಂದ್ರನೇ, ಸೋಮವನ್ನು ಪಾನಮಾಡು

## English Translation.

Lord of horses, of cattle, of corn-land, these libations (are for you); come, lord of the Soma, drink the effused Soma juice.

|| ಸಂಹಿತಾಪಾಠಃ ||

ವಯಂ ಹಿ ತ್ವಾ ಬಂಧುಮಂತಮಬಂಧವೋ ವಿಪ್ರಾಸ ಇಂದ್ರ ಯೇಮಿಮ ।
ಯಾ ತೇ ಧಾಮಾನಿ ವೃಷಭ ತೇಭಿರಾ ಗಹಿ ವಿಶ್ವೇಭಿಃ ಸೋಮಪೀತಯೇ ॥

|| ಪದಪಾಠಃ ||

ವಯಂ । ಹಿ । ತ್ವಾ । ಬಂಧುಽಮಂತಂ । ಅಬಂಧವಃ । ವಿಪ್ರಾಸಃ । ಇಂದ್ರ । ಯೇಮಿಮ ।
ಯಾ । ತೇ । ಧಾಮಾನಿ । ವೃಷಭ । ತೇಭಿಃ । ಆ । ಗಹಿ । ವಿಶ್ವೇಭಿಃ । ಸೋಮಪೀತಯೇ ॥ ೪ ॥

|| ಸಾಯಣಭಾಷ್ಯಂ ||

ಹೇ ಇಂದ್ರ ಅಬಂಧವೋ ಬಂಧುರಹಿತಾ ವಿಪ್ರಾಸೋ ಮೇಧಾವಿನೋ ವಯಂ ಬಂಧುಮಂತಂ ಬಂಧುಭಿರ್ದೇವೈರಂಗಿರೋಭಿರ್ವಾ ತದ್ವಂತಂ ತ್ವಾ ತ್ವಾಂ । ಹಿರವಧಾರಣೇ । ತ್ವಾಮೇವ ಯೇಮಿಮ । ಬಂಧುತ್ವೇನ ನಿಯಚ್ಛಾಮ ॥ ಯಚ್ಛತೇರ್ಲಿಟಿ ರೂಪಂ ॥ ತಥಾ ಸತಿ ಹೇ ವೃಷಭ ಕಾಮಾನಾಂ ವರ್ಷಿತ-ರಿಂದ್ರ ತೇ ತವ ಯಾ ಯಾನಿ ಧಾಮಾನಿ ಶರೀರಾಣಿ ತೇಜಾಂಸಿ ವಾ ವಿದ್ಯಂತೇ ತೇಭಿಸ್ತೈರ್ವಿಶ್ವೇಭಿಃ ಸರ್ವೈರ್ಧಾಮಭಿಃ ಸಹ ಸೋಮಪೀತಯೇ ಸೋಮಪಾನಾರ್ಥಮಾ ಗಹಿ । ಆಗಚ್ಛ ॥

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಅಬಂಧವಃ**—ಬಂಧುರಹಿತರೂ । **ವಿಪ್ರಾಸಃ**—ಮೇಧಾವಿಗಳೂ ಆದ । **ವಯಂ**—ನಾವು । **ಬಂಧುಮಂತಂ**—ದೇವಾದಿ ಬಂಧುಗಳೊಡಗೂಡಿರುವ । **ತ್ವಾ ಹಿ**—ನಿನ್ನನ್ನೇ । **ಯೇಮಿಮ**—ಬಂಧುವನ್ನಾಗಿ ಆರಿಸುವೆವು । **ವೃಷಭ**—ಕಾಮವರ್ಷಕನಾದ ಎಲೈ ಇಂದ್ರನೇ । **ತೇ**—ನಿನ್ನ । **ಯಾ**—ಯಾವ । **ಧಾಮಾನಿ**—ತೇಜಸ್ಸುಗಳಿವೆಯೋ । **ತೇಭಿಃ**—ಅಂತಹ । **ವಿಶ್ವೇಭಿಃ**—ಸಮಸ್ತ ತೇಜಸ್ಸುಗಳೊಡನೆಯೂ । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಆ ಗಹಿ**—ದಯಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ಬಂಧುರಹಿತರೂ, ಮೇಧಾವಿಗಳೂ ಆದ ನಾವು ದೇವಾದಿ ಬಂಧುಗಳೊಡಗೂಡಿದ ನಿನ್ನನ್ನೇ ಬಂಧುವನ್ನಾಗಿ ಆರಿಸುವೆವು. ಕಾಮವರ್ಷಕನಾದ ಎಲೈ ಇಂದ್ರನೇ, ನಿನ್ನ ಯಾವ ತೇಜಸ್ಸುಗಳಿವೆಯೋ ಅಂತಹ ಸಮಸ್ತ ತೇಜಸ್ಸುಗಳೊಡನೆಯೂ ಸಹ ಸೋಮಪಾನಾರ್ಥವಾಗಿ ದಯಮಾಡು.

## English Translation.

Intelligent, but destitute of kin, let us connect ourselves, Indra, with you, who abound with kinsmen: come, showerer (of benefits), with all your glories, to drink the Soma.

|| ಸಂಹಿತಾಪಾಠಃ ||

ಸೀದಂತಸ್ತೇ ವಯೋ ಯಥಾ ಗೋಶ್ರೀತೇ ಮಧೌ ಮದಿರೇ ವಿವಕ್ಷಣೇ ।
ಅಭಿ ತ್ವಾಮಿಂದ್ರ ನೋನುಮಃ || ೫ ||

| ಪದಪಾಠಃ ||

ಸೀದಂತಃ । ತೇ । ವಯಃ । ಯಥಾ । ಗೋऽಶ್ರೀತೇ । ಮಧೌ । ಮದಿರೇ । ವಿವಕ್ಷಣೇ ।
ಅಭಿ । ತ್ವಾಂ । ಇಂದ್ರ । ನೋನುಮಃ || ೫ |

|| ಸಾಯಣಭಾಷ್ಯಂ ||

ಹೇ ಇಂದ್ರ ಗೋಶ್ರೀತೇ || ಶ್ರೀಞ್ ಪಾಕೇ || ಗೋವಿಕಾರೇ ದಧಿಪಯಸೀ ಗೋಶಬ್ದೇನೋಚ್ಯತೇ । ದಧ್ನಾ ಪಯಸಾ ಚ ಶ್ರೀತೇನ ಕ್ರಯಣದ್ರವ್ಯೇಣ ಮಿಶ್ರಿತೇ ಮದಿರೇ ಮದಕರೇ ವಿವಕ್ಷಣೇ ಸ್ವರ್ಗಪ್ರಾಪಣಶೀಲೇ ತ್ವದೀಯೇ ಮಧೌ ಸೋಮೇ ಸೀದಂತೋ ನಿವಸಂತಃ । ಪದನೇ ದೃಷ್ಟಾಂತಃ । ವಯೋ ಯಥಾ ಪಕ್ಷಿಣೋ ಯಥೈಕತ್ರ ಸಂಘೀಭೂಯ ತಿಷ್ಠಂತಿ ತದ್ವತ್ ಸೀದಂತೋ ವಯಂ ತ್ವಾಮಭ್ಯಾಭಿಮುಖ್ಯೇನ ನೋನುಮಃ । ಪುನಃಪುನರ್ಭೃಶಂ ವಾ ಸ್ತುಮಃ ||

| ಪ್ರತಿಪದಾರ್ಥ |

ಇಂದ್ರ—ಎಲೈ ಇಂದ್ರನೇ । **ವಯೋ ಯಥಾ**—ಪಕ್ಷಿಗಳು ಎಲ್ಲವೂ ಸಂಘರೂಪದಲ್ಲಿ ಒಂದೇ ಕಡೆ ಸೇರಿರುವಂತೆ । **ಗೋಶ್ರೀತೇ**—ದಧ್ಯಾದಿಗಳಿಂದ ಮಿಶ್ರಿತವಾದುದೂ । **ತೇ ಮದಿರೇ**—ನಿನಗೆ ಮದಕಾರಕವಾದುದೂ । **ವಿವಕ್ಷಣೇ**—ಸ್ವರ್ಗಪ್ರಾಪಕವಾದುದೂ ಆದ । **ಮಧೌ**—ಸೋಮುದೆದುರಿಗೆ । **ಸೀದಂತಃ**—ಸುತ್ತಿ ಕುಳಿತಿರುವ ನಾವು । **ತ್ವಾಂ ಅಭಿ**—ನಿನ್ನನ್ನೇ ಲಕ್ಷಿಸಿ । **ನೋನುಮಃ**—ಪದೇಪದೇ ಸ್ತುತಿಸುತ್ತೇವೆ.

| ಭಾವಾರ್ಥ |

ಎಲೈ ಇಂದ್ರನೇ, ಪಕ್ಷಿಗಳೆಲ್ಲವೂ ಸಂಘರೂಪದಲ್ಲಿ ಒಂದೇ ಕಡೆ ಸೇರಿರುವಂತೆ ದಧ್ಯಾದಿಗಳಿಂದ ಮಿಶ್ರಿತವಾದುದೂ ನಿನಗೆ ಮದಕಾರಕವಾದುದೂ, ಸ್ವರ್ಗಪ್ರಾಪಕವಾದುದೂ ಆದ ಸೋಮುದೆದುರಿಗೆ ಸುತ್ತಿ ಕುಳಿತಿರುವ ನಾವು ನಿನ್ನನ್ನೇ ಉದ್ದೇಶಿಸಿ ಪದೇಪದೇ ಸ್ತುತಿಸುತ್ತೇವೆ.

## English Translation.

Gathering like (a flock of) birds round your exhilarating heaven-bestowing Soma beverage mixed with curds, we repeatedly glorify you, Indra.

॥ ಸಂಹಿತಾಪಾಠಃ ॥

ಅಚ್ಛಾ ಚ ತ್ವೈನಾ ನಮಸಾ ವದಾಮಸಿ ಕಿಂ ಮುಹುಶ್ಚಿದ್ವಿ ದೀಧಯಃ ।
ಸಂತಿ ಕಾಮಾಸೋ ಹರಿವೋ ದದಿಷ್ಟ್ವಂ ಸ್ಮೋ ವಯಂ ಸಂತಿ ನೋ
ಧಿಯಃ ॥ ೬ ॥

॥ ಪದಪಾಠಃ ॥

ಅಚ್ಛ । ಚ । ತ್ವಾ । ಏನಾ । ನಮಸಾ । ವದಾಮಸಿ । ಕಿಂ । ಮುಹುಃ । ಚಿತ್ । ವಿ । ದೀಧಯಃ ।
ಸಂತಿ । ಕಾಮಾಸಃ । ಹರಿಽವಃ । ದದಿಃ । ತ್ವಂ । ಸ್ಮಃ । ವಯಂ । ಸಂತಿ । ನಃ । ಧಿಯಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಅಚ್ಛ ಚಾಪಿ ಚಾಭಿಮುಖ್ಯೇನ ಏನೈನೇನ ನಮಸಾ ಸ್ತೋತ್ರೇಣ ಹವಿರ್ಲಕ್ಷಣೇನಾನ್ನೇನ ವಾ ಸಹ ತ್ವಾ ತ್ವಾಂ ವದಾಮಸಿ । ಅಭಿವದಾಮಃ ॥ ಚವಾಯೋಗೇ ಪ್ರಥಮೇತಿ ನ ನಿಘಾತಃ ॥ ತ್ವಂ ತು ಮುಹುಶ್ಚಿನ್ಮುಹುರ್ಮುಹುಃ ಕಿಂ ಕಸ್ಮಾದ್ಧೇತೋರ್ವಿ ದೀಧಯಃ । ವಿಪೂರ್ವೋ ದೀಧಿತಿಶ್ಚಿಂತನೇ । ವಿಚಿಂತಯಸಿ ॥ ದೀಧೀಙ್ ದೀಪ್ತಿದೇವನಯೋಃ । ವ್ಯತ್ಯಯೇನ ಪರಸ್ಮೈಪದಂ ಲುಗಭಾವಶ್ಚ ॥ ಕಿಮರ್ಥಂ ಯೂಯಂ ವದಥೇತಿ ಚೇತ್ ಹರಿವೋ ಹರಿತಾಶ್ವವನ್ ಹೇ ಇಂದ್ರ ಅಸ್ಮಾಕಂ ಕಾಮಾಸಃ ಪುತ್ರಪಶ್ವಾದಿವಿಷಯಾಃ ಕಾಮಾಃ ಸಂತಿ । ಕಾಮಾಃ ಸಂತು । ಅಹಂ ನ ಪ್ರಯಚ್ಛಾಮೀತಿ ಚೇತ್ । ತ್ವಂ ತು ದದಿರ್ಧನಾದಿದಾತಾ ಖಲು । ತಸ್ಮಾದ್ವಯಂ ತ್ವತ್ಸನ್ನಿಧೌ ಸ್ಮಃ । ಭವಾಮಃ । ಕಿಂಚ ನೋಽಸ್ಮಾಕಂ ಧಿಯಃ ಕರ್ಮಾಣಿ ಚ ತವ ಸಮೀಪೇ ಸಂತಿ । ತಿಷ್ಠಂತಿ । ತತೋ ಧನಾದಿಲಾಭಾರ್ಥಂ ತ್ವಾಂ ವದಾಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಅಚ್ಛ ಚ**—ನಿನಗಭಿಮುಖವಾಗಿ । **ಏನಾ ನಮಸಾ**—ಈ ಸ್ತುತಿಯಿಂದ । **ತ್ವಾ**—ನಿನ್ನನ್ನು । **ವದಾಮಸಿ**—ಪ್ರಶಂಸಿಸುತ್ತೇವೆ । **ಮುಹುಶ್ಚಿತ್**—ಪದೇಪದೇ । **ಕಿಂ**—ಏತಕ್ಕಾಗಿ । **ವಿ ದೀಧಯಃ**—ಯೋಚನಾಪರನಾಗಿರುತ್ತೀಯೆ ? । **ಹರಿವಃ**—ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ । **ಕಾಮಾಸಃ**—ನಮ್ಮ ಇಷ್ಟಾರ್ಥಗಳು । **ಸಂತಿ**—ನೆರವೇರಲಿ । **ತ್ವಂ**—ನೀನು । **ದದಿಃ**—ಧನದಾತನಾಗಿರುತ್ತೀಯೆ । **ವಯಂ**—ನಾವು । **ಸ್ಮಃ**—ನಿನ್ನ ಸನ್ನಿಧಿಯಲ್ಲಿಯೇ ಇರುತ್ತೇವೆ । **ನಃ**—ನಮ್ಮ । **ಧಿಯಃ**—ಕರ್ಮಗಳು । **ಸಂತಿ**—ನಿನ್ನ ಪೂಜೆಗಾಗಿಯೇ ಇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗಭಿಮುಖವಾಗಿ ಈ ಸ್ತುತಿಯಿಂದ ನಿನ್ನನ್ನು ಪ್ರಶಂಸಿಸುತ್ತೇವೆ. **ಪದೇಪದೇ ಏತಕ್ಕಾಗಿ ಯೋಚನಾಪರನಾಗಿರುತ್ತೀಯೆ?** ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ನಮ್ಮ **ಇಷ್ಟಾರ್ಥಗಳು**

ನೆರವೇರಲಿ. ನೀನು ಧನದಾತನಾಗಿರುತ್ತೀಯೆ. ನಾವು ಯಾವಾಗಲೂ ನಿನ್ನ ಸನ್ನಿಧಿಯಲ್ಲಿಯೇ ಇರುತ್ತೇವೆ. ನಮ್ಮ ಕರ್ಮಗಳು ನಿನ್ನ ಪೂಜೆಗಾಗಿಯೇ ಇರುತ್ತವೆ.

## English Translation.

We salute you with this adoration: why do you so often meditate (upon our requests)? master of bay steeds, let our desires be granted. You are their bestower, we are your (suppliants), and our sacred rites are (addressed to you).

। ಸಂಹಿತಾಪಾಠಃ ।

ನೂತ್ನಾ ಇದಿಂದ್ರ ತೇ ವಯಮೂತೀ ಅಭೂಮ ನಹಿ ನೂ ತೇ ಅದ್ರಿವಃ ।
ವಿದ್ಮಾ ಪುರಾ ಪರೀಣಸಃ ॥ ೭ ॥

। ಪದಪಾಠಃ ।

ನೂತ್ನಾಃ । ಇತ್ । ಇಂದ್ರ । ತೇ । ವಯಂ । ಊತೀ । ಅಭೂಮ । ನಹಿ । ನು । ತೇ । ಅದ್ರಿsವಃ ।
ವಿದ್ಮ । ಪುರಾ । ಪರೀಣಸಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವೋತ್ಯೋತ್ಯಾ ರಕ್ಷಣೇ ವಯಂ ನೂತ್ನಾ ಇನ್ನೂತನಾ ಏವ ಭವಾಮಃ । ಅದ್ರಿವೋ ವಜ್ರಿನ್ ಹೇ ಇಂದ್ರ ಪುರಾ ಪೂರ್ವಂ ತ್ವಾಂ ಪರೀಣಸಃ ॥ ಸುಬ್ವ್ಯತ್ಯಯಃ ॥ ಪರೀಣಸಂ ಪರಿತೋ ವ್ಯಾಪ್ತಂ ಮಹಾಂತಂ ವೇತಿ ನಹಿ ವಿದ್ಮ । ನ ಜಾನೀಮಃ । ನು ಸಂಪ್ರತಿ ತು ತೇ ತ್ವಾಂ ಮಹಾಂತಮಿತಿ ಜಾನಂತೋ ವಯಂ ಭವತಾ ರಕ್ಷ್ಯಾ ಇತಿ ॥

॥ ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಊತೀ—ರಕ್ಷಣೆಯಲ್ಲಿ । ವಯಂ—ನಾವು । ನೂತ್ನಾ ಇತ್—ನೂತನರಾಗಿಯೇ । ಅಭೂಮ—ಆಗಿದ್ದೇವೆ । ಅದ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ಪುರಾ—ನಿನಗಿಂತಲೂ ಪೂರ್ವಭಾವಿಯಾಗಿ । ಪರೀಣಸಃ—ನಿನ್ನಂತಹ ಮಹತ್ತುಗಳುಳ್ಳವರನ್ನು । ನಹಿ ವಿದ್ಮ—ನಾವು ಅರಿಯೆವು । ನು—ಪ್ರಕೃತದಲ್ಲಿ । ತೇ—ನಿನ್ನನ್ನೇ ಆಶ್ರಯಿಸಿರುವೆವು

। ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ರಕ್ಷಣೆಯಲ್ಲಿ ನಾವು ನೂತನರಾಗಿಯೇ ಇದ್ದೇವೆ. ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನಿನಗಿಂತಲೂ ಪೂರ್ವಭಾವಿಯಾಗಿ ನಿನ್ನಂತಹ ಮಹತ್ತುಳ್ಳವರನ್ನು ನಾವು ಎಲ್ಲಿಯೂ ಕಂಡರಿಯೆವು. ಪ್ರಕೃತದಲ್ಲಿ ನಿನ್ನನ್ನೇ ಆಶ್ರಯಿಸಿರುವೆವು.

## English Translation.

We verily are the most recent (objects) of your protection, Indra, wielder of the thunderbolt; we have not known of old one greater than you.

॥ ಸಂಹಿತಾಪಾಠಃ ॥

ವಿದ್ಮಾ ಸಖಿತ್ವಮುತ ಶೂರ ಭೋಜ್ಯꣳಮಾ ತೇ ತಾ ವಜ್ರಿನ್ನೀಮಹೇ ।
ಉತೋ ಸಮಸ್ಮಿನ್ನಾ ಶಿಶೀಹಿ ನೋ ವಸೋ ವಾಜೇ ಸುಶಿಪ್ರ ಗೋಮತಿ ॥

॥ ಪದಪಾಠಃ ॥

ವಿದ್ಮ । ಸಖಿಽತ್ವಂ । ಉತ । ಶೂರ । ಭೋಜ್ಯಂ । ಆ । ತೇ । ತಾ । ವಜ್ರಿನ್ । ಈಮಹೇ ।
ಉತೋ ಇತಿ । ಸಮಸ್ಮಿನ್ । ಆ । ಶಿಶೀಹಿ । ನಃ । ವಸೋ ಇತಿ । ವಾಜೇ । ಸುಽಶಿಪ್ರ । ಗೋಽಮತಿ ॥೮॥

॥ ಸಾಯಣಭಾಷ್ಯಂ ॥

ಶೂರ ಶತ್ರೂಣಾಂ ಶಾತಯಿತರ್ಬಲವನ್ ಹೇ ಇಂದ್ರ ಸಖಿತ್ವಂ ತವ ಸಖಿಭಾವಂ ವಯಂ ವಿದ್ಮ। ಜಾನೀಮಃ। ಉತಾಪಿ ಚ ಭೋಜ್ಯಮಭ್ಯವಹಾರಾರ್ಥಂ ಧನಂ ಚ ವಿದ್ಮ। ವಜ್ರಿನ್ ಹೇ ಇಂದ್ರ ತೇ ತ್ವದೀಯೇ ತಾ ತೇ ಸಖ್ಯಧನೇ ಆ ಅಭಿಮುಖ್ಯೇನೇಮಹೇ। ವಯಂ ಯಾಚಾಮಹೇ। ಉತೋ ಅಪಿ ಚ ವಸೋ ಸರ್ವಸ್ಯ ವಾಸಯಿತಃ ಸುಶಿಪ್ರ ಶೋಭನಹನೋ ಯದ್ವಾ ಶೋಭನಶಿರಸ್ತ್ರಾಣ ಹೇ ಇಂದ್ರ ಗೋಮತಿ ಗವಾದಿಯುಕ್ತೇ ಸಮಸ್ಮಿನ್ ಸರ್ವಸ್ಮಿನ್ ವಾಜೇಽನ್ನೇ ನೋಽಸ್ಮಾನಾ ಶಿಶೀಹಿ। ತೀಕ್ಷ್ಣೀಕುರು। ಉಪಲಕ್ಷಣಂ। ಪ್ರದಾನೇನಾಸ್ಮಾನ್ ಪ್ರಸಿದ್ಧಾನ್ ಕುರ್ವಿತ್ಯರ್ಥಃ ॥ ಶಿಞ್ ನಿಶಾನ ಇತ್ಯಸ್ಯ ಛಾಂದಸಃ ಶ್ಲುಃ ॥

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ। **ಸಖಿತ್ವಂ**—ನಿನ್ನ ಮಿತ್ರತ್ವವನ್ನು। **ವಿದ್ಮ**—ನಾವು ಅರಿತಿದ್ದೇವೆ। **ಉತ**—ಮತ್ತು। **ಭೋಜ್ಯಂ**—ಭೋಗಸಾಧನವಾದ ಧನವನ್ನು ಅರಿತಿದ್ದೇವೆ। **ವಜ್ರಿನ್**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ। **ತೇ**—ನಿನ್ನಿಂದ। **ತಾ**—ಆ ಸಖಿತ್ವವನ್ನೂ ಮತ್ತು ಧನವನ್ನೂ। **ಆ ಈ ಮಹೇ**—ಆದರದಿಂದ ಯಾಚಿಸುತ್ತೇವೆ। **ಉತೋ**—ಮತ್ತು। **ವಸೋ**—ವಸತಿದಾಯಕನೂ। **ಸುಶಿಪ್ರ**—ಶ್ರೇಷ್ಠವಾದ ಕೆನ್ನೆಯುಳ್ಳವನೂ ಆದ ಎಲೈ ಇಂದ್ರನೇ। **ನಃ**—ನಮ್ಮನ್ನು। **ಗೋಮತಿ**—ಗೋಯುಕ್ತವಾದುದೂ। **ಸಮಸ್ಮಿನ್**—ಸಮಸ್ತವಾದುದೂ ಆದ। **ವಾಜೇ**—ಅನ್ನದಲ್ಲಿ। **ಆ ಶಿಶೀಹಿ**—ಯುಕ್ತರಾಗಿರುವಂತೆ ಮಾಡು.

॥ ಭಾವಾರ್ಥ ॥

ಪರಾಕ್ರಮಿಯಾದ ಎಲೈ ಇಂದ್ರನೇ, ನಿನ್ನ ಮಿತ್ರತ್ವವನ್ನು ನಾವು ಅರಿತಿದ್ದೇವೆ. ಮತ್ತು ಭೋಗಸಾಧನವಾದ ನಿನ್ನಲ್ಲಿರುವ ಧನವನ್ನೂ ಅರಿತಿದ್ದೇವೆ. ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನಿನ್ನ ಆ ಸಖಿತ್ವವನ್ನೂ, ಧನವನ್ನೂ ಆದರದಿಂದ ಯಾಚಿಸುತ್ತೇವೆ. ವಸತಿದಾಯಕನೂ, ಶ್ರೇಷ್ಠವಾದ ಕೆನ್ನೆಯುಳ್ಳವನೂ ಆದ ಎಲೈ ಇಂದ್ರನೇ, ನಮ್ಮನ್ನು ಗೋಯುಕ್ತವಾದುದೂ, ಸಮಸ್ತವಾದುದೂ ಆದ ಅನ್ನದಿಂದ ತುಂಬಿರುವಂತೆ ಮಾಡು.

English Translation.

We acknowledge, hero, your friendship, (the wealth) to be enjoyed through you, and solicit both, thunderer, of you : giver of dwellings, Indra of the handsome jaws, sustain us in all abundance and in (store of) cattle.

॥ ವಿಶೇಷವಿಷಯಗಳು ॥

**ಸಮಸ್ಮಿನ್**— **ಸಮಸ್ಯ** ಎಂಬ ಶಬ್ದದ ನಿರ್ವಚನವನ್ನು ಹೇಳುತ್ತಾ ಯಾಸ್ಕರು **ಸಮಮಿತಿ ಪರಿಗ್ರಹಾರ್ಥೀಯಂ ಸರ್ವನಾಮಾನುದಾತ್ತಂ** ಎಂದು ಹೇಳಿದ್ದಾರೆ. ಎಂದರೆ, ಸಮಂ ಎಂಬ ಶಬ್ದವು ಸರ್ವನಾಮಪದವು **ಸಮ**ವೆಂದರೆ ಸರ್ವವು ಎಂದರ್ಥವು. ಈ ಶಬ್ದವು ಸಾಧಾರಣವಾಗಿ ಪರಿಗ್ರಹಾರ್ಥದಲ್ಲಿ ಉಪಯೋಗಿಸಲ್ಪಡುವುದು. ಮತ್ತು ಇದು ಸರ್ವಾನುದಾತ್ತಶಬ್ದವು. ಈ ಶಬ್ದವು ವಿವಿಧ ವಿಭಕ್ತಿವಚನಗಳಲ್ಲಿ ಉಪಯೋಗಿಸಲ್ಪಡುವುದೆಂದು ಹೇಳಿ ಅದನ್ನು ಸಮರ್ಥಿಸುವುದಕ್ಕಾಗಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ—

**ಮಾ ನಃ ಸಮಸ್ಯ ದೂಢ್ಯಃ೧ಪರಿದ್ವೇಷಸೋ ಅಂಹತಿಃ ।**

(ಋ. ಸಂ. ೮–೭೫–೯)

ಎಂಬ ಋಕ್ಕಿನಲ್ಲಿ ಈ ಶಬ್ದವನ್ನು ಷಷ್ಠೀವಿಭಕ್ತಿಯಲ್ಲಿ ಉಪಯೋಗಿಸಲಾಗಿದೆ. ಇಲ್ಲಿ **ಸಮಸ್ಯ** ಎಂದರೆ **ಸರ್ವಸ್ಯ** ಎಂದರ್ಥವು.

**ಉತೋ ಸಮಸ್ಮಿನ್ನಾಶಿಶೀಹಿ ನೋ ವಸೋ ।**

(ಋ. ಸಂ. ೮–೨೧–೮)

ಎಂಬ ಪ್ರಕೃತ ಋಕ್ಕಿನಲ್ಲಿ ಈ ಶಬ್ದದ ಸಪ್ತಮೀವಿಭಕ್ತಿಯ ಪ್ರಯೋಗವಿದೆ. ಈ ವಾಕ್ಯದಲ್ಲಿರುವ **ಶಿಶೀಹಿ** ಎಂಬ ಕ್ರಿಯಾಪದಕ್ಕೆ ಯಾಸ್ಕರು **ಶಿಶೀತಿರ್ದಾನಕರ್ಮಾ**— ದಾನಮಾಡುವುದು, ಕೊಡುವುದು ಎಂದರ್ಥವಿರುವುದು ಎಂದು ಹೇಳಿದ್ದಾರೆ.

**ಉರುಷ್ಯಾಣೋ ಅಘಾಯತಃ ಸಮಸ್ಮಾತ್ ।**

(ಋ. ಸಂ. ೫–೨೪–೩)

ಇಲ್ಲಿ ಪಂಚಮೀವಿಭಕ್ತಿಯ ಪ್ರಯೋಗವಿದೆ.

**ನಭಂತಾಮನ್ಯಕೇ ಸಮೇ ।** (ಋ. ಸಂ. ೮–೩೯–೧ ರಿಂದ ೧೦)

ಈ ಋಕ್ಕುಗಳಲ್ಲಿ ಈ ಶಬ್ದವು ಪ್ರಥಮಾವಿಭಕ್ತಿಯ ಬಹುವಚನದಲ್ಲಿ ಪ್ರಯೋಗಿಸಲ್ಪಟ್ಟಿರುವುದು.

॥ ಸಂಹಿತಾಪಾಠಃ ॥

ಯೋ ನ ಇದಮಿದಂ ಪುರಾ ಪ್ರ ವಸ್ಯ ಆನಿನಾಯ ತಮು ವಃ ಸ್ತುಷೇ ।
ಸಖಾಯ ಇಂದ್ರಮೂತಯೇ ॥ ೯ ॥

॥ ಪದಪಾಠಃ ॥

ಯಃ । ನಃ । ಇದಂಽಇದಂ । ಪುರಾ । ಪ್ರ । ವಸ್ಯಃ । ಆಽನಿನಾಯ । ತಂ । ಊಂ ಇತಿ । ವಃ । ಸ್ತುಷೇ । ಸಖಾಯಃ । ಇಂದ್ರಂ । ಊತಯೇ ॥ ೯ ॥

॥ ಸಾಯಣಭಾಷ್ಯಂ ॥

ಉಕ್ಥ್ಯೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ಯೋ ನ ಇದಮಿದಮಿತ್ಯಯಂ ಪ್ರಗಾಥೋಽನುರೂಪಃ । ಯೋ ನ ಇದಮಿದಂ ಪುರೇತಿ ಪ್ರಗಾಥೌ ಸರ್ವಾಃ ಕಕುಭಃ । ಆ. ೬-೧ । ಇತಿ ಸೂತ್ರಿತಂ ॥ ಅಭಿಪ್ಲವಿಕೇಷೂಕ್ಥ್ಯೇಷ್ವಪಿ ಬ್ರಾಹ್ಮಣಾಚ್ಛಂಸಿಶಸ್ತ್ರೇಽಯಂ ವೈಕಲ್ಪಿಕೋಽನುರೂಪಃ । ಆ. ೭-೮ ॥ ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ತ್ವಂ ನ ಇಂದ್ರಾ ಭರೇತಿ ಪ್ರಗಾಥೇ ಸ್ತೋತ್ರಿಯೇ ಸತ್ಯನುರೂಪತ್ವೃಚಃ ಸಮಾಹಾರ್ಯಃ । ತತ್ರೇಯಂ ಯೋ ನ ಇದಮಿದಮಿತಿ ದ್ವಿತೀಯಾ । ಸೂತ್ರಿತಂ ಚ । ಯೋ ನ ಇದಮಿದಂ ಪುರಾ ಯಾಹೀವ ಇಂದವ ಇತಿ ಸಮಾಹಾರ್ಯೋಽನುರೂಪಃ । ಆ. ೭-೮ । ಇತಿ ॥

ಸಖಾಯಃ ಸಮಾನಖ್ಯಾನಾ ಹೇ ಋತ್ವಿಗ್ಯಜಮಾನಾ ಯ ಇಂದ್ರಃ ಪುರಾ ಪೂರ್ವಮಿದಂ ದರ್ಶನೀಯತಯಾ ವಿದ್ಯಮಾನಂ ವಸ್ಯೋ ವಸೀಯಃ ॥ ವಸೋರೀಯಸುನೀಕಾರಲೋಪಶ್ಛಾಂದಸಃ ॥ ಪ್ರಶಸ್ತಂ ವಸು ನೋಽಸ್ಮಾನ್ ಪ್ರಾಣಿನಾಯ ಪ್ರಕರ್ಷೇಣಾನೀತವಾನ್ ತಮು ತಮೇವ ಧನಾನಾಮಾನೇತಾರಮಿಂದ್ರಂ ವೋ ಯುಷ್ಮಾಕಂ ಧನಲಾಭಾರ್ಥಮೂತಯೇ ರಕ್ಷಣಾಯ ಚ ಸ್ತುಷೇ । ಸೋಭರಿರಹಂ ಸ್ತೌಮಿ ॥

॥ ಪ್ರತಿಪದಾರ್ಥ ॥

ಸಖಾಯಃ—ಎಲೈ ಮಿತ್ರರೇ । ಯಃ—ಯಾವ ಇಂದ್ರನು । ಪುರಾ—ನಿಮ್ಮ ಮುಂದಿರುವುದೂ । ವಸ್ಯಃ—ಪ್ರಶಸ್ಯವಾದುದೂ ಆದ । ಇದಮಿದಂ—ಈ ಧನವನ್ನೆಲ್ಲಾ । ನಃ—ನಮಗೆ । ಪ್ರಾಣಿನಾಯ—ಒದಗಿಸಿರುವನೋ । ತಮು ಇಂದ್ರಂ—ಅದೇ ಇಂದ್ರನನ್ನು । ವಃ—ನಿಮ್ಮ । ಊತಯೇ—ರಕ್ಷಣಾರ್ಥವಾಗಿ । ಸ್ತುಷೇ—ಸ್ತುತಿಸುತ್ತೇನೆ.

। ಭಾವಾರ್ಥ ॥

ಎಲೈ ಮಿತ್ರರೇ, ಯಾವ ಇಂದ್ರನು ನಿಮ್ಮ ಮುಂದಿರುವುದೂ, ಪ್ರಶಸ್ಯವಾದುದೂ ಆದ ಈ ಧನವನ್ನೆಲ್ಲಾ ನಮಗೆ ಒದಗಿಸಿರುವನೋ ಅದೇ ಇಂದ್ರನನ್ನು ನಿಮ್ಮ ರಕ್ಷಣಾರ್ಥವಾಗಿ ಸ್ತುತಿಸುತ್ತೇನೆ.

## English Translation.

I glorify, friends, for your protection, that Indra who has brought to us of old this or that excellent (wealth).

|| ವಿಶೇಷವಿಷಯಗಳು ||

ಉಕ್ಥ್ಯಯಾಗದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಯೋ ನ ಇದಮಿದಂ** ಎಂಬ ಈ ತೃಚವನ್ನು ಪ್ರಗಾಥಾನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಯೋ ನ ಇದಮಿದಂ ಪುರೇತಿ ಪ್ರಗಾಥೌ ಸರ್ವಾಃ ಕಕುಭಃ** ಎಂಬ ಸೂತ್ರದಿಂದ (ಆ. ೬–೧) ವಿವೃತವಾಗಿರುವುದು. ಅಭಿಪ್ಲವ ಸಂಬಂಧವಾದ ಉಕ್ಥ್ಯಯಾಗಗಳಲ್ಲಿಯೂ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ತೃಚವನ್ನು ವೈಕಲ್ಪಿಕಾನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿ (ಆ. ೭–೮) ವಿವೃತವಾಗಿರುವುದು. ಮತ್ತು ಮೇಲೆ ಹೇಳಿದ ಉಕ್ಥ್ಯಯಾಗಗಳಲ್ಲಿ ತೃತೀಯ ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ತ್ವಂ ನ ಇಂದ್ರಾ ಭರ** ಎಂಬ ಪ್ರಗಾಥ ಸ್ತೋತ್ರಿಯ ತೃಚವನ್ನು ಪಠಿಸುವಾಗ **ಯೋ ನ ಇದಮಿದಂ** ಎಂಬ ಋಕ್ಕನ್ನು ತೃಚದ ಎರಡನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಯೋ ನ ಇದಮಿದಂ ಪುರಾ ಯೋಹೀಮ ಇಂದವ ಇತಿ ಸಮಾಹಾರ್ಯೋಽನುರೂಪಃ** ಎಂಬ ಸೂತ್ರದಿಂದ (ಆ. ೭–೮) ವಿವೃತವಾಗಿರುವುದು

॥ ಸಂಹಿತಾಪಾಠಃ ॥

ಹರ್ಯಶ್ವಂ ಸತ್ಪತಿಂ ಚರ್ಷಣೀಸಹಂ ಸ ಹಿ ಷ್ಮಾ ಯೋ ಅಮಂದತ ।
ಆ ತು ನಃ ಸ ವಯತಿ ಗವ್ಯಮಶ್ವ್ಯಂ ಸ್ತೋತೃಭ್ಯೋ ಮಘವಾ ಶತಂ ॥೧೦॥

॥ ಪದಪಾಠಃ ॥

ಹರಿಽಅಶ್ವಂ । ಸತ್ಽಪತಿಂ । ಚರ್ಷಣಿಽಸಹಂ । ಸಃ । ಹಿ । ಸ್ಮ । ಯಃ । ಅಮಂದತ ।
ಆ । ತು । ನಃ । ಸಃ । ವಯತಿ । ಗವ್ಯಂ । ಅಶ್ವ್ಯಂ । ಸ್ತೋತೃಽಭ್ಯಃ । ಮಘಽವಾ । ಶತಂ ॥ ೧೦ ॥

॥ ಸಾಯಣಭಾಷ್ಯಂ ॥

**ಹರ್ಯಶ್ವಂ ಹರಿತವರ್ಣಾಶ್ವೋಪೇತಂ ಸತ್ಪತಿಂ ಸ್ವಪ್ರಕಾಶಾಧಿಕ್ಯೇನ ಸತಾಂ ನಕ್ಷತ್ರಾಣಾಂ ಪತಿಂ ಸತಾಂ ಶ್ರೇಷ್ಠಾನಾಂ ಪತಿಂ ವಾ ಚರ್ಷಣೀಸಹಂ ಚರ್ಷಣೀನಾಂ ಶತ್ರುಭೂತಾನಾಂ ಮನುಷ್ಯಾಣಾಮಭಿಭವಿತಾರಂ ಸ ಹಿ ಷ್ಮ ಸ ಏವ ಜನಃ ಸ್ತೌತಿ । ಯೋ ಜನೋ ಅಮಂದತ ತತೋ ಲಬ್ಧಧನಃ ಸಂತೃಪ್ತೋ ಭವತಿ ಸ ಏನಂ ತುಷ್ಟೂಷತಿ । ಏವಂ ಸತಿ ಮಘವಾ ಧನವಾನ್ ಸ ಇಂದ್ರಃ ಶತಂ ಗವ್ಯಮಶ್ವ್ಯಮನೇಕಂ ಗವಾಶ್ವಸಂಘಂ ಸ್ತೋತೃಭ್ಯೋ ನೋಽಸ್ಮಭ್ಯಂ ತು ಕ್ಷಿಪ್ರಮಾ ವಯತಿ**

**ಅಪ್ರಾಪಯತು ॥ ಏೀ ಗತ್ಯಾದಿಷು । ಅಸ್ಮಾಲ್ಲೇಟ್ಯಡಾಗಮಃ ॥ ತತೋ ಲಬ್ಧಗವಾದಿಕಾ ವಯಂ ಚೈವಂ ಸ್ತುಮ ಇತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ಅಮಂದತ್**— ಇಂದ್ರನಿಂದ ದತ್ತವಾದ ಧನದಿಂದ ಸಂತೋಷ ಪಡುವನೋ । **ಸ ಹಿ ಷ್ಮ**—ಆ ಯಜಮಾನನೇ । **ಹರ್ಯಶ್ವಂ**—ಹರಿಸಂಜ್ಞಕವಾದ ಅಶ್ವೋಪೇತನೂ । **ಸತ್ಪತಿಂ**—ಸಜ್ಜನರ ಪಾಲಕನೂ । **ಚರ್ಷಣೀಸಹಂ**—ಶತ್ರುಜನರನ್ನು ಸೋಲಿಸುವವನೂ ಆದ ಇಂದ್ರನನ್ನು ಸ್ತುತಿಸುತ್ತಾನೆ। **ಮಘವಾ**—ಧನವಂತನಾದ । **ಸಃ**—ಅದೇ ಇಂದ್ರನು । **ಶತಂ**—ಶತಸಂಖ್ಯಾಕವಾದ । **ಗವ್ಯಮಶ್ವ್ಯಂ**—ಗೋಸಂಘವನ್ನೂ ಅಶ್ವಸಂಘವನ್ನೂ । **ಸ್ತೋತೃಭ್ಯಃ**—ಸ್ತುತಿಕರ್ತರಾದ । **ನಃ**—ನಮಗೆ । **ತು**—ಕ್ಷಿಪ್ರವಾಗಿ । **ಆ ವಯತಿ**—ಒದಗಿಸುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನು ಇಂದ್ರನಿಂದ ದತ್ತವಾದ ಧನದಿಂದ ಸಂತೋಷಪಡುವನೋ, ಆ ಯಜಮಾನನೇ ಹರಿಸಂಜ್ಞಕವಾದ ಅಶ್ವೋಪೇತನೂ, ಸಜ್ಜನರ ಪಾಲಕನೂ ಶತ್ರುಜನರನ್ನು ಸೋಲಿಸುವವನೂ ಆದ ಇಂದ್ರನನ್ನು ಸ್ತುತಿಸುತ್ತಾನೆ. ಅದೇ ಇಂದ್ರನು ಸ್ತುತಿಕರ್ತರಾದ ನಮಗೆ ಶತಸಂಖ್ಯಾಕವಾದ ಅಶ್ವಸಂಘಗಳನ್ನೂ, ಗೋಸಂಘಗಳನ್ನೂ ಕ್ಷಿಪ್ರವಾಗಿ ಒದಗಿಸುತ್ತಾನೆ.

English Translation.

That man glorifies Indra, the lord of bay steeds, the protector of the good, the overcomer of enemies, who rejoices (in the fulfilment of his wishes); may Maghavan bestow upon us, his worshippers, hundreds of cattle and horses.

॥ ಸಂಹಿತಾಪಾಠಃ ॥

ತ್ವಯಾ ಹ ಸ್ವಿದ್ಯುಜಾ ವಯಂ ಪ್ರತಿ ಶ್ವಸಂತಂ ವೃಷಭ ಬ್ರುವೀಮಹಿ ।
ಸಂಸ್ಥೇ ಜನಸ್ಯ ಗೋಮತಃ ॥ ೧೧ ॥

॥ ಪದಪಾಠಃ ॥

**ತ್ವಯಾ । ಹ । ಸ್ವಿತ್ । ಯುಜಾ । ವಯಂ । ಪ್ರತಿ । ಶ್ವಸಂತಂ । ವೃಷಭ । ಬ್ರುವೀಮಹಿ ।**
**ಸಂಽಸ್ಥೇ । ಜನಸ್ಯ । ಗೋಽಮತಃ ॥ ೧೧ ॥**

॥ ಸಾಯಣಭಾಷ್ಯಂ ॥

**ವೃಷಭ ವರ್ಷಿತರ್ಹೇ ಇಂದ್ರ ಗೋಮತೋ ಗವಾದಿಯುಕ್ತಸ್ಯ ಜನಸ್ಯ ಸಂಸ್ಥೇ ಸ್ಥಾನೇ ಯುದ್ಧೇ ಶ್ವಸಂತಮಸ್ಮಾನ್ಪ್ರತಿ ಕ್ರೋಧಾತಿಶಯೇನ ಶ್ವಾಸಕಾರಿಣಂ ಶತ್ರುಂ ಯುಜಾ ಸಹಾಯೇನ**

ತ್ವಯಾ ಹ ಸ್ವಿತ್ತ್ವಯೈವ ಖಲು ವಯಂ ಪ್ರತಿಬ್ರವೀಮಹಿ । ಪ್ರತಿವಚನಂ ಕುರ್ಮಃ । ನಿರಾಕರಿಷ್ಯಾಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವೃಷಭ**—ವೃಷ್ಟಿಕಾರಕನಾದ ಎಲೈ ಇಂದ್ರನೇ **ಗೋಮತಃ**—ಗೋಯುಕ್ತನಾದ । **ಜನಸ್ಯ**—ಮಿತ್ರಜನರ । **ಸಂಸ್ಥೇ**—ಯುದ್ಧಕಾಲದಲ್ಲಿ । **ತ್ವಸಂತಂ**—ಕೋಪದಿಂದ ಉರಿದುಬೀಳುವ ಶತ್ರುವನ್ನು । **ಯುಜಾ**—ನಮ್ಮೊಡನಿರುವ । **ತ್ವಯಾ ಹ ಸ್ವಿತ್**—ನಿನ್ನ ಪ್ರಭಾವದಿಂದಲೇ । **ವಯಂ**—ನಾವು । **ಪ್ರತಿ ಬ್ರುವೀಮಹಿ**—ತಿರಸ್ಕರಿಸಿ ಎದುರಿಸಬಲ್ಲೆವು.

॥ ಭಾವಾರ್ಥ ॥

ವೃಷ್ಟಿಕಾರಕನಾದ ಎಲೈ ಇಂದ್ರನೇ, ಗೋಯುಕ್ತನಾದ ಮಿತ್ರಜನರ ಯುದ್ಧಕಾಲದಲ್ಲಿ, ನಮ್ಮೊಡನಿರುವ ನಿನ್ನ ಪ್ರಭಾವದಿಂದಲೇ, ಕೋಪದಿಂದ ಉರಿದುಬೀಳುವ ಶತ್ರುವನ್ನು ನಾವು ತಿರಸ್ಕಾರಪೂರ್ವಕವಾಗಿ ಎದುರಿಸ ಬಲ್ಲೆವು.

## English Translation.

With you, showerer (of benefits), for our ally, we bid defiance to **one** assailing us in a contest (on behalf) of a man possessing herds of cattle.

॥ ಸಂಹಿತಾಪಾಠಃ ॥

ಜಯೇಮ ಕಾರೇ ಪುರುಹೂತ ಕಾರಿಣೋಽಭಿ ತಿಷ್ಠೇಮ ದೂಢ್ಯಃ ।
ನೃಭಿರ್ವೃತ್ರಂ ಹನ್ಯಾಮ ಶೂಶುಯಾಮ ಚಾವೇರಿಂದ್ರ ಪ್ರ ಣೋ ಧಿಯಃ ॥

॥ ಪದಪಾಠಃ ॥

ಜಯೇಮ । ಕಾರೇ । ಪುರುಽಹೂತ । ಕಾರಿಣಃ । ಅಭಿ । ತಿಷ್ಠೇಮ । ದುಃಽಧ್ಯಃ ।
ನೃಽಭಿಃ । ವೃತ್ರಂ । ಹನ್ಯಾಮ । ಶೂಶುಯಾಮ । ಚ । ಅವೇಃ । ಇಂದ್ರ । ಪ್ರ । ನಃ । ಧಿಯಃ ॥ ೧೨ ॥

॥ ಸಾಯಣಭಾಷ್ಯಂ ॥

ಪುರುಹೂತ ಬಹುಭಿರಾಹ್ವಾತವ್ಯ ಹೇ ಇಂದ್ರ ಅಸ್ಮಾಕಂ ವಿವಿಧಾಃ ಶತ್ರವ ಉಪದ್ರವಕಾರಿಣೋ ಬಾಧಾಂ ಮನಸಾ ಸ್ಮರಂತಶ್ಚೇತಿ । ತತ್ರ ಕಾರಿಣೋ ಹಿಂಸಾಂ ಕುರ್ವತಃ ಶತ್ರೂನ್ ಕಾರೇ । ಕೀರ್ಯಂತೇ ಆಯುಧಾನ್ಯತ್ರೇತಿ ಕಾರೋ ಯುದ್ಧಂ । ತಸ್ಮಿಂಸ್ತಾನ್ವಯಂ ಜಯೇಮ । ದೂಢ್ಯೋ ದುರ್ಧಿಯಃ ಪಾಪಬುದ್ಧೀನಪ್ಯಭಿ ತಿಷ್ಠೇಮ । ಅಭಿತಃ ಸ್ಥಾಸ್ಯಾಮಃ । ಕಿಂಚ ವೃತ್ರಂ ಗವಾಮಾವರಕಂ ಶತ್ರುಂ ನೃಭಿರಾಯುಧನೇತೃಭಿರ್ಮರುದ್ಭಿಃ ಸಹ ಹನ್ಯಾಮ । ಹಿಂಸ್ಯಾಮ । ಹತ್ವಾ ಶೂಶುಯಾಮ ಚ । ಶತ್ರು-

ಸಾಹಿತ್ಯೇನ ಪುತ್ರಪೌತ್ರೈರಗ್ನಿಷ್ಟೋಮಾದಿಕರ್ಮಭಿಶ್ಚ ವರ್ಧಯೇಮಹಿ । ಯದ್ವಾ । ತ್ವಯತಿರಸ್ಕಾಂತ- ರ್ಸೇತಣ್ಯರ್ಥಃ । ಶತ್ರುಭ್ಯೋ ಬಾಧಾಭಾವಾತ್ಸ್ವೋಮಲಕ್ಷಣೈರನ್ನೈಸ್ತ್ವಾಂ ವರ್ಧಯೇಮ । ತತಸ್ತ್ವಂ ನೋಽಸ್ಮಾಕಂ ಧಿಯಃ ಕರ್ಮಾಣಿ ಪ್ರಾವೇಃ । ಪ್ರಕರ್ಷೇಣ ರಕ್ಷ ॥

। ಪ್ರತಿಪದಾರ್ಥ ।

**ಪುರುಹೂತ**— ಅನೇಕರ ಆಹ್ವಾನಕ್ಕೆ ಪಾತ್ರನಾದ | **ಇಂದ್ರ**—ಎಲೈ ಇಂದ್ರನೇ | **ಕಾರಿಣಃ**—ನಮಗೆ ಹಿಂಸಾಕಾರಕರಾದ ಶತ್ರುಗಳನ್ನು | **ಕಾರೇ**—ಯುದ್ಧದಲ್ಲಿ | **ಜಯೇಮ**—ನಾವು ಜಯಿಸುವಂತಾಗಲಿ | **ದೂಢ್ಯಃ**—ದುಷ್ಟಬುದ್ಧಿಯುಳ್ಳ ಶತ್ರುಗಳನ್ನು | **ಅಭಿ ತಿಷ್ಠೇಮ**—ಸುತ್ತಲೂ ತಡೆದು ನಿಲ್ಲಿಸುವಂತಾಗಲಿ | **ವೃತ್ರಂ**—ಶತ್ರುವನ್ನು | **ನೃಭಿಃ**—ನೇತೃಗಳಾದ ಮರುತ್ತುಗಳೊಡಗೂಡಿ | **ಹನ್ಯಾಮ**—ಹಿಂಸಿಸುವಂತಾಗಲಿ | **ಶೂಶುಯಾಮ ಚ**—(ಶತ್ರುಗಳ ಅಭಾವದಿಂದ) ನಾವು ವೃದ್ಧಿಯನ್ನು ಹೊಂದುವಂತಾಗಲಿ | **ನಃ**—ನಮ್ಮ | **ಧಿಯಃ**—ಕರ್ಮಗಳನ್ನು | **ಪ್ರ ಅವೇಃ**—ಪೂರ್ಣವಾಗಿ ರಕ್ಷಿಸು.

। ಭಾವಾರ್ಥ ।

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ನಮಗೆ ಹಿಂಸಾಕಾರಕರಾದ ಶತ್ರುಗಳನ್ನು ಯುದ್ಧದಲ್ಲಿ ನಾವು ಜಯಿಸುವಂತಾಗಲಿ. ದುಷ್ಟಬುದ್ಧಿಯುಳ್ಳ ಶತ್ರುಗಳನ್ನು ಸುತ್ತಲೂ ತಡೆದು ನಿಲ್ಲಿಸುವಂತಾಗಲಿ. ಶತ್ರುವನ್ನು ನೇತೃಗಳಾದ ಮರುತ್ತುಗಳೊಡಗೂಡಿ ಹಿಂಸಿಸುವಂತಾಗಲಿ. ಶತ್ರುಗಳ ಅಭಾವದಿಂದ ನಾವು ವೃದ್ಧಿಯನ್ನೂ ಹೊಂದು ವಂತಾಗಲಿ. ಎಲೈ ಇಂದ್ರನೇ, ನಮ್ಮ ಕರ್ಮಗಳನ್ನು ಪೂರ್ಣವಾಗಿ ರಕ್ಷಿಸು.

English Translation.

Indra, invoked of many, may we conquer in battle those contending against us; may we resist the malignant; may we, aided by the leaders (of rites, the Maruts), slay Vritra; may we be prosperous, and do you protect our pious works.

॥ ಸಂಹಿತಾಪಾಠಃ ॥

ಅಭ್ರಾತೃವ್ಯೋ ಅನಾ ತ್ವಮನಾಪಿರಿಂದ್ರ ಜನುಷಾ ಸನಾದಸಿ ।
ಯುಧೇದಾಪಿತ್ವಮಿಚ್ಛಸೇ ॥ ೧೩ ॥

॥ ಪದಪಾಠಃ ॥

ಅಭ್ರಾತೃವ್ಯಃ । ಅನಾ । ತ್ವಂ । ಅನಾಪಿಃ । ಇಂದ್ರ । ಜನುಷಾ । ಸನಾತ್ । ಅಸಿ ।
ಯುಧಾ । ಇತ್ । ಆಪಿತ್ವಂ । ಇಚ್ಛಸೇ ॥ ೧೩ ॥

॥ ಸಾಯಣಭಾಷ್ಯಂ ॥

ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇಽಭ್ರಾತೃವ್ಯ ಇತ್ಯಾದಿಕೌ ದ್ವೌ ಪ್ರಗಾಥೌ ವೈಕಲ್ಪಿಕೌ ಸ್ತೋತ್ರಿಯಾನುರೂಪೌ । ಸೂತ್ರಿತಂ ಚ । **ಅಭ್ರಾತೃವ್ಯೋ ಅನಾ ತ್ವಂ ಮಾ ತೇ ಅಮಾಜುರೋ ಯಥಾ** । ಆ. ೭-೮ । ಇತಿ ॥

**ಹೇ ಇಂದ್ರ ತ್ವಂ ಜನುಷಾ ಜನ್ಮನೈವಾಭ್ರಾತೃವ್ಯಃ** ॥ ವ್ಯನ್ ಸಪತ್ನೇ । ಪಾ. ೪-೧-೧೪೫ । ಇತಿ ವ್ಯನ್ಪ್ರತ್ಯಯಃ ॥ ಅನಾನೇತೃಕಃ ॥ ಋತಶ್ಛಂದಸೀತಿ ಕಪಃ ಪ್ರತಿಷೇಧಃ ॥ ಅನಿಯಂತೃಕ ಇತ್ಯರ್ಥಃ । ಅನಾಪಿರ್ಬಂಧುವರ್ಜಿತಶ್ಚ ಸನಾದಸಿ । ಚಿರಾದೇವ ಭ್ರಾತೃವ್ಯಾದಿವರ್ಜಿತೋಽಸಿ । ಯಚ್ಚ ತ್ವಯಾಪಿತ್ವಂ ಬಾಂಧವಮಿಚ್ಛಸೇ ಇಚ್ಛಸಿ ತತ್ರ ಯುಧೇದ್ಯುದ್ಧೇನೈವ । ಯುದ್ಧಂ ಕುರ್ವನ್ನೇವ ಸ್ತೋತೄಣಾಂ ಸಖಾ ಭವಸೀತಿ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಜನುಷಾ**—ಜನ್ಮದಿಂದಲೇ । **ಅಭ್ರಾತೃವ್ಯಃ**—ಶತ್ರುರಹಿತನಾಗಿದ್ದೀಯೆ । **ಅನಾ**—ನಿಯಂತೃರಹಿತನು । **ಅನಾಪಿಃ**—ಬಂಧುರಹಿತನು । **ಸನಾದಸಿ**—ಚಿರಕಾಲದಿಂದಲೂ ಹೀಗೆಯೇ ಇದ್ದೀಯೆ । **ಯುಧೇತ್**—ಯುದ್ಧಮಾಡುವುದರಿಂದ ಮಾತ್ರ । **ಆಪಿತ್ವಂ**—ಬಂಧುತ್ವವನ್ನು । **ಇಚ್ಛಸೇ**—ಅಪೇಕ್ಷಿಸುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಜನ್ಮದಿಂದಲೇ ಶತ್ರುರಹಿತನಾಗಿ ಇದ್ದೀಯೆ. ನಿಯಂತೃರಹಿತನು, ಬಂಧುರಹಿತನು. ಚಿರಕಾಲದಿಂದಲೂ ಹೀಗೆಯೇ ಇದ್ದೀಯೆ. ಯುದ್ಧಮಾಡುವುದರಿಂದ ಮಾತ್ರ ಬಂಧುತ್ವವನ್ನು ಅಪೇಕ್ಷಿಸುತ್ತೀಯೆ.

## English Translation.

You, Indra, are by your birth brotherless (without enemy): from ever are you without a kinsman: the kindred you desire is (that of him) who engages in war.

॥ ವಿಶೇಷವಿಷಯಗಳು ॥

ಅಭಿಪ್ಲವಸಂಬಂಧವಾದ ಉಕ್ಥ್ಯಯಾಗಗಳಲ್ಲಿ ತೃತೀಯಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಅಭ್ರಾತೃವ್ಯಃ** ಎಂದು ಮೊದಲಾಗಿ ಎರಡು ಪ್ರಗಾಥಗಳನ್ನು (೧೩, ೧೪, ೧೫, ೧೬ನೆಯ ಋಕ್ಕುಗಳನ್ನು) ವೈಕಲ್ಪಿಕಪ್ರಗಾಥತೃಚದಲ್ಲಿ ಸ್ತೋತ್ರಿಯಾನುರೂಪಋಕ್ಕುಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಭ್ರಾತೃವ್ಯೋ ಅನಾ ತ್ವಂ ಮಾ ತೇ ಅಮಾಜುರೋ ಯಥಾ** ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ನಕೀಂ ರೇವಂತಂ ಸಖ್ಯಾಯ ವಿಂದಸೇ ಪೀಯಂತಿ ತೇ ಸುರಾಶ್ವಃ ।
ಯದಾ ಕೃಣೋಷಿ ನದನುಂ ಸಮೂಹಸ್ಯಾದಿತ್ಪಿತೇವ ಹೂಯಸೇ ॥ ೧೪ ॥

॥ ಪದಪಾಠಃ ॥

ನಕಿಃ । ರೇವಂತಂ । ಸಖ್ಯಾಯ । ವಿಂದಸೇ । ಪೀಯಂತಿ । ತೇ । ಸುರಾಶ್ವಃ ।
ಯದಾ । ಕೃಣೋಷಿ । ನದನುಂ । ಸಂ । ಊಹಸಿ । ಆತ್ । ಇತ್ । ಪಿತಾಽಇವ । ಹೂಯಸೇ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ರೇವಂತಂ ಧನವಂತಂ ಕೇವಲಧನವಂತಂ ದಾನಾದಿರಹಿತಮಯಷ್ಟಾರಮಾಢ್ಯಂ ಮಾನವಂ ಸಖ್ಯಾಯ ಸಖಿಭಾವಾಯ ನಕಿರ್ವಿಂದಸೇ । ನ ಭಜಸೇ । ನಾಶ್ರಯಸೀತ್ಯರ್ಥಃ । ಅಯಷ್ಟಾರೋ ಜನಾಃ ಕಿಂ ಕುರ್ವಂತೀತ್ಯತ ಆಹ । ಸುರಾಶ್ವಃ ॥ ಟು ಓ ಶ್ವಿ ಗತಿವೃದ್ಧ್ಯೋಃ ॥ ಸುರಯಾ ವೃದ್ಧಾಸ್ತದ್ವಶಾತ್ ಪ್ರಮತ್ತಾ ನಾಸ್ತಿಕಾಸ್ತೇ ತ್ವಾಂ ಪೀಯಂತಿ ॥ ಪೀಯತಿರ್ಹಿಂಸಾಕರ್ಮಾ । ಹಿಂಸಂತಿ । ತಾನ್ನಾಶ್ರಯಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ ನೀನು) **ರೇವಂತಂ**—ದಾನಾದಿರಹಿತನಾದ ಧನವಂತನನ್ನು । **ಸಖ್ಯಾಯ**—ಮಿತ್ರತ್ವಕ್ಕಾಗಿ । **ನಕಿಃ ವಿಂದಸೇ**—ಸಮೀಪಿಸುವುದಿಲ್ಲ । **ಸುರಾಶ್ವಃ**—ಸುರಾಪಾನದಿಂದ ಮತ್ತನಾದವರು (**ನಾಸ್ತಿಕರು**) । **ತೇ**—ನಿನ್ನನ್ನು । **ಪೀಯಂತಿ**—ಹಿಂಸಿಸುವರು । **ಯದಾ**—ಯಾವಾಗ । **ನದನುಂ**—ತೃಪ್ತಿಸೂಚಕವಾದ ಶಬ್ದವನ್ನು । **ಕೃಣೋಷಿ**—ಮಾಡುವೆಯೋ ಆಗ । **ಸಮೂಹಸಿ**—ಯಜಮಾನನಿಗೆ ಸಂಪತ್ತನ್ನು ತಂದು ತುಂಬುತ್ತೀಯೆ । **ಆದಿತ್**—ಆ ಒಡನೆಯೇ । **ಪಿತೇವ**—ತಂದೆಯಂತೆ । **ಹೂಯಸೇ**—ಕರೆಯಲ್ಪಡುತ್ತೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ದಾನಾದಿರಹಿತನಾದ ಧನವಂತನನ್ನು ನೀನು ಮಿತ್ರತ್ವಕ್ಕಾಗಿ ಸಮೀಪಿಸುವುದಿಲ್ಲ. ಸುರಾಪಾನದಿಂದ ಮತ್ತರಾದ ನಾಸ್ತಿಕರು ನಿನ್ನನ್ನು ಹಿಂಸಿಸುವರು. ಯಾವಾಗ ನೀನು ತೃಪ್ತಿಸೂಚಕವಾದ ಶಬ್ದವನ್ನು ಮಾಡುವೆಯೋ ಆಗ ಯಜಮಾನನಿಗೆ ಸಂಪತ್ತನ್ನು ತಂದು ತುಂಬುತ್ತೀಯೆ. ಆ ಒಡನೆಯೇ ರಕ್ಷಕನಾದ ತಂದೆಯಂತೆ ಪ್ರಾರ್ಥಿಸಿ ಕರೆಯಲ್ಪಡುತ್ತೀಯೆ.

## English Translation.

You acknowledge no friendship for the wealthy man (who makes no offerings); those who are puffed up with wine offend you; when you

institute (the sacrifice), you expel niggardliness, and you are invoked as a protector.

॥ ಸಂಹಿತಾಪಾಠಃ ॥

ಮಾ ತೇ ಅಮಾಜುರೋ ಯಥಾ ಮೂರಾಸ ಇಂದ್ರ ಸಖ್ಯೇ ತ್ವಾವತಃ ।

ನಿ ಷದಾಮ ಸಚಾ ಸುತೇ ॥ ೧೫ ॥

॥ ಪದಪಾಠಃ ॥

ಮಾ । ತೇ । ಅಮಾऽಜುರಃ । ಯಥಾ । ಮೂರಾಸಃ । ಇಂದ್ರ । ಸಖ್ಯೇ । ತ್ವಾऽವತಃ ।

ನಿ । ಸದಾಮ । ಸಚಾ । ಸುತೇ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತೇ ತವ ಸ್ವಭೂತಾ ವಯಂ ತಥಾ ಮಾ ಭೂಮ ಮಾ ಭವಾಮ ಯಥಾ ತ್ವಾವತಸ್ತ್ವತ್ಸದೃಶಸ್ತ್ವತ್ಸದೃಶಸ್ಯ ದೇವಸ್ಯ ಸಖ್ಯೇ ಮೂರಾಸೋ ಮೂರಾಃ । ಸೋಮಪ್ರದಾನಾದಿಂದ್ರೇಣ ಸಹ ಸಖ್ಯಂ ಕುರ್ಮ ಇತ್യೇತದಜಾನಂತೋ ಮೂಢಾ ಜನಾಃ । ಅಮಾಜುರಃ ಸೋಮಾಭಿಷವಮಕುರ್ವಂತಸ್ತೇ ಗೃಹೈಃ ಪುತ್ರೈಃ ಪೌತ್ರೈರ್ಧನಾದಿಭಿಶ್ಚ ಸಹ ಜೀರ್ಣಾ ಭವಂತಿ । ತಥಾ ವಯಮಮಾಜುರೋ ನ ಭವಾಮ। ಕಥಂ । ಸಚಾ ಋತ್ವಿಗ್ಭಿಃ ಸಹ ಸುತೇಽಭಿಷುತೇ ಸೋಮೇ ವಯಂ ತು ನಿ ಷದಾಮ । ನಿವಸಾಮ । ತಸ್ಮಾತ್ಸೋಮದಾನೇನ ತ್ವಯಾ ಸಹ ಸಖಿಭಾವಂ ಕುರ್ಮ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಇಂದ್ರ—**ಎಲೈ ಇಂದ್ರನೇ । **ಯಥಾ—**ಯಾವ ರೀತಿ । **ತ್ವಾವತಃ—**ನಿನ್ನಂತಹ ದೇವನ । **ಸಖ್ಯೇ—**ಸಖಿತ್ವವಿದ್ದರೂ । **ಮೂರಾಸಃ—**ಮೂಢರಾಗಿದ್ದುಕೊಂಡು । **ಅಮಾಜುರಃ—**ನಿನ್ನನ್ನು ಅಲಕ್ಷ್ಯಮಾಡುವುದರಿಂದ ಕ್ಷಯಿಸುವ ಸಂಪತ್ತುಳ್ಳವರಾಗಿ ಆಗಬಹುದೋ ಹಾಗೆ । **ತೇ—**ನಿನ್ನ ವಿಷಯದಲ್ಲಿ । **ಮಾ (ಭೂಮ)—**ಅಶ್ರದ್ಧೆಯಿಂದ ಇರಲಾರೆವು । **ಸಚಾ—**ಋತ್ವಿಕ್ಕುಗಳೊಡಗೂಡಿ । **ಸುತೇ—**ಸೋಮರಸವು ಹಿಂಡುವ ಕಾಲದಲ್ಲಿ । **ನಿ ಷದಾಮ—**ನಾವೆಲ್ಲರೂ ಒಟ್ಟಿಗೆ ಕುಳಿತುಕೊಳ್ಳುವೆವು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನಂತಹ ದೇವನ ಸ್ನೇಹವಿದ್ದರೂ ಮೂಢರಾದ ಜನರು ನಿನ್ನನ್ನು ಅಲಕ್ಷ್ಯಮಾಡುವುದರಿಂದ ಕ್ಷಯಿಸುವ ಸಂಪತ್ತುಳ್ಳವರಾಗಿ ಆಗಬಹುದೋ ಹಾಗೆ ನಿನ್ನ ವಿಷಯದಲ್ಲಿ ಅಶ್ರದ್ಧೆಯಿಂದ ಇರಲಾರೆವು. ನಾವು ಋತ್ವಿಕ್ಕುಗಳೊಡಗೂಡಿ ಸೋಮರಸವು ಹಿಂಡಲ್ಪಡುವ ಕಾಲದಲ್ಲಿ ನಾವೆಲ್ಲರೂ ಒಟ್ಟಿಗೆ ಕುಳಿತುಕೊಳ್ಳುವೆವು.

## English Translation.

Let us not, like fools, Indra, be regardless of the friendship of such as you are; let us assemble together when the libation is effused.

॥ ಸಂಹಿತಾಪಾಠಃ ॥

ಮಾ ತೇ ಗೋದತ್ರ ನಿರರಾಮ ರಾಧಸ ಇಂದ್ರ ಮಾ ತೇ ಗೃಹಾಮಹಿ ।
ದೃಳ್ಹಾ ಚಿದರ್ಯಃ ಪ್ರ ಮೃಶಾಭ್ಯಾ ಭರ ನ ತೇ ದಾಮಾನ ಆದಭೇ ॥೧೬॥

॥ ಪದಪಾಠಃ ॥

ಮಾ । ತೇ । ಗೋಽದತ್ರ । ನಿಃ । ಅರಾಮ । ರಾಧಸಃ । ಇಂದ್ರ । ಮಾ । ತೇ । ಗೃಹಾಮಹಿ ।
ದೃಳ್ಹಾ । ಚಿತ್ । ಅರ್ಯಃ । ಪ್ರ । ಮೃಶ । ಅಭಿ । ಆ । ಭರ । ನ । ತೇ । ದಾಮಾನಃ । ಆಽದಭೇ ॥೧೬॥

॥ ಸಾಯಣಭಾಷ್ಯಂ ॥

ಹೇ ಗೋದತ್ರ ಸ್ತೋತೃಭ್ಯೋ ಗವಾದಿದಾನಶೀಲ ಹೇ ಇಂದ್ರ ತೇ ತವ ಸ್ವಭೂತಾ ವಯಂ ರಾಧಸೋ ಧನಾನ್ಮಾ ನಿರರಾಮ । ಮಾ ನಿರ್ಗಮಾಮ ॥ ಅರ್ತೇರ್ಲುಙಿ ಸರ್ತಿಶಾಸ್ತ್ಯರ್ತಿಭ್ಯಶ್ಚೇತ್ಯಙಾದೇಶಃ । ಋದೃಶೋಽಙೀತಿ ಗುಣಃ ॥ ಸರ್ವದಾ ತ್ವತ್ತೋ ಧನಾಢ್ಯಾ ಭವಾಮ । ಕಿಂಚ ತೇ ತವ ಸ್ವಭೂತಾ ವಯಂ ಧನಂ ಪ್ರಯಚ್ಛಾಮ । ಕಸ್ಮಾಚ್ಚಿನ್ಮಾ ಗೃಹಾಮಹಿ । ತಸ್ಮಾದನ್ಯನ್ನ ಗೃಹ್ಣೀಮಃ । ಅಪಿ ತು ತ್ವತ್ತ ಏವ ಧನಂ ಗೃಹ್ಣೀಮ ಇತ್ಯರ್ಥಃ ॥ ಗೃಹೇರ್ಲುಙಿ ಬಹುಲಂ ಛಂದಸೀತಿ ಶಃ । ಙಿತ್ತ್ವಾತ್ಸಂಪ್ರಸಾರಣಂ ॥ ಅರ್ಯಃ ಸ್ವಾಮೀ ತ್ವಂ ದೃಳ್ಹಾ ಚಿದ್ದೃಢಾನ್ಯಪಿ ವಿನಶ್ವರಾಣಿ ಧನಾನಿ ಪ್ರ ಮೃಶ। ಪ್ರಕರ್ಷೇಣಾಸ್ಮಾಸು ಸ್ಥಾಪಯ । ಕಿಂಚಾಭ್ಯಾಭಿಮುಖ್ಯೇನಾ ಭರ । ಧನಾದಿಭಿಃ ಸಮಂತಾದಸ್ಮಾನ್ಪೋಷಯ । ತೇ ತವ ದಾಮಾನಸ್ತಾನಿ ದಾನಾನಿ ನಾದಭೇ ನ ಕೈಶ್ಚಿದಪ್ಯಾದಂಭಿತುಂ ಶಕ್ಯಂತೇ । ತಸ್ಮಾದ್ದಾನಾದಿಯುಕ್ತಾನಸ್ಮಾನ್ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಗೋದತ್ರ**—ಗವಾದಿಗಳನ್ನು ದಾನಮಾಡತಕ್ಕ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನಗೆ ಸೇರಿದ ನಾವು । **ರಾಧಸಃ**—ಆ ಧನವನ್ನು । **ಮಾ ನಿರರಾಮ**—ಕಳೆದುಕೊಳ್ಳಲಾರೆವು । **ತೇ**—ನಿನ್ನ ಭಕ್ತರಾದ ನಾವು । **ಮಾ ಗೃಹಾಮಹಿ**—(ಇತರರಿಂದ) ಖಂಡಿತ ಸ್ವೀಕರಿಸುವುದಿಲ್ಲ । **ಅರ್ಯಃ**—ಸ್ವಾಮಿಯಾದ ನೀನು । **ದೃಳ್ಹಾ ಚಿತ್**—ಅತ್ಯಂತ ಸ್ಥಿರವಾದ ಧನವನ್ನೂ । **ಪ್ರ ಮೃಶ**—ನಮ್ಮಲ್ಲಿ ಸ್ಥಾಪಿಸು । **ಅಭ್ಯಾ ಭರ**—ಧನಾದಿಗಳಿಂದ ನಮ್ಮನ್ನು ಪೋಷಿಸು । **ತೇ**—ನಿನ್ನ । **ದಾಮಾನಃ**—ಧನಾದಿದಾನಗಳು । **ನ ಆದಭೇ**—ಯಾರಿಂದಲೂ ತಡೆಯಲು ಸಾಧ್ಯವಿಲ್ಲ

|| ಭಾವಾರ್ಥ ||

ಗವಾದಿಗಳಗನ್ನು ದಾನಮಾಡತಕ್ಕ ಎಲೈ ಇಂದ್ರನೇ, ನಿನಗೆ ಸೇರಿದ ನಾವು ಆ ಗವಾದಿ ಧನಗಳನ್ನು ಕಳೆದು ಕೊಳ್ಳಲಾರೆವು. ನಿನ್ನ ಭಕ್ತರಾದ ನಾವು ಇತರರಿಂದ ಖಂಡಿತ ದಾನಗಳನ್ನು ಸ್ವೀಕರಿಸುವುದಿಲ್ಲ. ಸ್ವಾಮಿಯಾದ ನೀನು ಅತ್ಯಂತ ಸ್ಥಿರವಾದ ಧನವನ್ನೂ ನಮ್ಮಲ್ಲಿ ಸ್ಥಾಪಿಸು. ಧನಾದಿಗಳಿಂದ ನಮ್ಮನ್ನು ಪೋಷಿಸು ನಿನ್ನ ಧನಾದಿ ದಾನಗಳನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ

English Translation.

Let us never, Indra, giver of cattle, cease (to benefit) from your wealth; let us not accept it (from another than) you: do you, who are the lord, confirm to us permanent (riches), bestow them upon us; your benefactions cannot be arrested.

|| ಸಂಹಿತಾಪಾಠಃ ||

ಇಂದ್ರೋ ವಾ ಘೇದಿಯನ್ಮಘಂ ಸರಸ್ವತೀ ವಾ ಸುಭಗಾ ದದಿರ್ವಸು ।
ತ್ವಂ ವಾ ಚಿತ್ರ ದಾಶುಷೇ || ೧೭ ||

|| ಪದಪಾಠಃ ||

ಇಂದ್ರಃ । ವಾ । ಘ । ಇತ್ । ಇಯತ್ । ಮಘಂ । ಸರಸ್ವತೀ । ವಾ । ಸುऽಭಗಾ । ದದಿಃ । ವಸು ।
ತ್ವಂ । ವಾ । ಚಿತ್ರ । ದಾಶುಷೇ || ೧೭ ||

|| ಸಾಯಣಭಾಷ್ಯಂ ||

ಅತ್ರ ಚಿತ್ರಸ್ಯ ದಾನಂ ಸ್ತೌತಿ । ಚಿತ್ರೋ ನಾಮ ರಾಜಾ ಸರಸ್ವತೀತೀರ ಇಂದ್ರಾರ್ಥಂ ಯಾಗಮಕೃತ । ತತ್ರ ಮಂತ್ರದ್ರಷ್ಟರ್ಷಿರ್ಬಹುಧನಲಾಭಾನ್ಮಹ್ಯಮೇತಾವದ್ಧನಂ ಕೋ ವಾ ಪ್ರಾಯಚ್ಛದಿತಿ ವಿಕಲ್ಪಯತೇ । ದಾಶುಷ ಇಂದ್ರಾಯ ಹವೀಂಷಿ ದತ್ತವತೇ ಮಹ್ಯಮಿಂದ್ರೋ ವಾ ಘೇದಿಂದ್ರ ಏವ ಕಿಂ ಖಲ್ವೇತಾವನ್ಮಘಂ ಮಂಹನೀಯಂ ಧನಂ ದದಿಃ ಪ್ರಾಯಚ್ಛತ್ । ಯದ್ವಾ ಸುಭಗಾ ಶೋಭನಧನಾ ಸರಸ್ವತೀ ನದೀ ವಸು ಧನಂ ದದಿಃ ಕಿಂ ಪ್ರಾಯಚ್ಛತ್ । ಅಥವಾ ಚಿತ್ರ ಏತನ್ನಾಮಕ ಹೇ ರಾಜನ್ ತ್ವಂ ವೈತಾವದ್ಧನಂ ಮಹ್ಯಂ ಪ್ರಾದಾ ಇತಿ ||

|| ಪ್ರತಿಪದಾರ್ಥ ||

**ದಾಶುಷೇ**—ಇಂದ್ರನಿಗೆ ಹವಿಸ್ಸನ್ನು ಅರ್ಪಿಸಿದ ನನಗೆ । **ಇಯತ್ ಮಘಂ**—ಇಷ್ಟು ಪೂಜ್ಯವಾದ ಧನವನ್ನು । **ಇಂದ್ರೋ ವಾ**—ಇಂದ್ರನೇ । **ಘೇತ್**—ಖಂಡಿತವಾಗಿಯೂ । **ದದಿಃ**—ಕೊಟ್ಟನೇ । **ಸುಭಗಾ**—

ಉತ್ತಮವಾದ ಧನವುಳ್ಳ | **ಸರಸ್ವತೀ**--ಸರಸ್ವತೀ ನದಿಯು | **ವಸು**—ಇಷ್ಟು ಧನವನ್ನು ಕೊಟ್ಟಳೇ | **ಚಿತ್ರ**—ಎಲೈ ಚಿತ್ರನಾಮಕನಾದ ರಾಜನೇ | **ತ್ವಂ ವಾ**—ಅಥವಾ ಇಷ್ಟು ಧನವನ್ನು ಕೊಟ್ಟವನು ನೀನಿರಬಹುದೇ ?

|| ಭಾವಾರ್ಥ ||

ಇಂದ್ರನಿಗೆ ಹವಿಸ್ಸನ್ನು ಅರ್ಪಿಸಿದ ನನಗೆ ಇಷ್ಟು ಪ್ರಭೂತವಾದ ಧನವನ್ನು ಕೊಟ್ಟವರಾರು? ಇಷ್ಟು ಪೂಜ್ಯವೂ, ಪ್ರಭೂತವೂ ಆದ ಧನವನ್ನು ಕೊಡಬೇಕಾದರೆ, ಅವನು ಇಂದ್ರನಾಗಿರಬಹುದೇ ? ಅಥವಾ ಉತ್ತಮವಾದ ಧನವುಳ್ಳ ಸರಸ್ವತೀ ನದೀದೇವಿಯು ಇಷ್ಟು ಧನವನ್ನು ಕೊಟ್ಟಳೇ? ಎಲೈ ಚಿತ್ರನಾಮಕನಾದ ರಾಜನೇ, ಅಥವಾ ಇಷ್ಟು ಧನವನ್ನು ಕೊಟ್ಟವನು ನೀನಿರಬಹುದೇ ?

English Translation.

Is it Indra who has given to the donor (of the oblation) so much affluence ? is it the auspicious Saraswati (who has given) the treasure? or, Chitra, is it you ?

॥ ಸಂಹಿತಾಪಾಠಃ ॥

ಚಿತ್ರ ಇದ್ರಾಜಾ ರಾಜಕಾ ಇದನ್ಯಕೇ ಯಕೇ ಸರಸ್ವತೀಮನು |
ಪರ್ಜನ್ಯ ಇವ ತತನದ್ಧಿ ವೃಷ್ಟ್ಯಾ ಸಹಸ್ರಮಯುತಾ ದದತ್ || ೧೮ ||

|| ಪದಪಾಠಃ ||

ಚಿತ್ರಃ | ಇತ್ | ರಾಜಾ | ರಾಜಕಾಃ | ಇತ್ | ಅನ್ಯಕೇ | ಯಕೇ | ಸರಸ್ವತೀಂ | ಅನು |
ಪರ್ಜನ್ಯಃऽಇವ | ತತನತ್ | ಹಿ | ವೃಷ್ಟ್ಯಾ | ಸಹಸ್ರಂ | ಅಯುತಾ | ದದತ್ || ೧೮ ||

॥ ಸಾಯಣಭಾಷ್ಯಂ ॥

**ಅನಯಾ ಚಿತ್ರ ಏವ ಪ್ರಾದಾದಿತಿ ನಿಶ್ಚಯಮುಕ್ತಾರ್ಷೀತ್ | ಸಹಸ್ರಂ ಸಹಸ್ರಸಂಖ್ಯಾಕಂ ಧನಮಯುತಾಯುತಾನಿ ಚ ಧನಾನಿ ಚ ದದತ್ ಪ್ರಯಚ್ಛಂಶ್ಚಿತ್ರ ಇಚ್ಚಿತ್ರನಾಮ್ನೈವ ರಾಜಾ | ಅನ್ಯಕೇ ಯಕೇ || ಅಲ್ಪ ಇತ್ಯರ್ಥೇ ಕಃ || ಅಲ್ಪಾ ಯೇऽನ್ಯೇ ರಾಜಕಾ ಇದ್ರಾಜಾನ ಏವ ಸರಸ್ವತೀಮನು ಸರಸ್ವತ್ಯಾಸ್ತೀರೇ ವರ್ತಂತೇ | ತಾನ್ ಸರ್ವಾನ್ಯಾಚಮಾನಾನಯಮೇವ ಚಿತ್ರೋ ರಾಜಾ ತತನತ್ ಧನೈಸ್ತನೋತಿ || ತನೋತೇರ್ಲುಙಿ ಚಙಿ ರೂಪಂ | ಚಙ್ಯನ್ಯತರಸ್ಯಾಮಿತಿ ಸ್ವರಃ || ತತ್ರ ದೃಷ್ಟಾಂತಃ | ಪರ್ಜನ್ಯ ಇವ ಯಥಾ ಪರ್ಜನ್ಯಃ ಪೃಥಿವೀಂ ವೃಷ್ಟ್ಯಾ ತನೋತಿ ಪ್ರೀಣಯತಿ ತಥಾಯಂ ಚಿತ್ರಃ ಸರ್ವಾನ್ ಧನೈಃ ಪ್ರೀಣಯತೀತ್ಯರ್ಥಃ ||**

॥ ಪ್ರತಿಪದಾರ್ಥ ॥

**ಚಿತ್ರ ಇತ್ ರಾಜಾ**—ಚಿತ್ರನಾಮಕನಾದ ಈ ರಾಜನೇ । **ಸಹಸ್ರಂ**—ಸಹಸ್ರಸಂಖ್ಯಾಕವಾದುದೂ । **ಅಯುತಾ**—ದಶಸಹಸ್ರಸಂಖ್ಯಾಕವಾದುದೂ ಆದ ಧನಗಳನ್ನು । **ದದತ್**—ಕೊಡುತ್ತಾ । **ಅನ್ಯಕೇ ಯಕೇ**—ಅಲ್ಪರಾದ ಯಾವ ಇತರ । **ರಾಜಕಾ ಇತ್**—ದೊರೆಗಳೂ । **ಸರಸ್ವತೀಂ ಮನು**—ಸರಸ್ವತೀನದಿಯ ದಡದಲ್ಲಿರುವರೋ ಅವರೆಲ್ಲರಿಗಿಂತಲೂ ಹೆಚ್ಚಾಗಿ । **ಪರ್ಜನ್ಯಃ**—ಪರ್ಜನ್ಯನು । **ವೃಷ್ಟ್ಯಾ**—ವೃಷ್ಟಿಯಿಂದ ಪೃಥ್ವಿಯನ್ನೆಲ್ಲಾ ತೃಪ್ತಿಗೊಳಿಸುವಂತೆ । **ತತನತ್**—ಧನದಾನಗಳಿಂದ ತೃಪ್ತಿಗೊಳಿಸುತ್ತಾನೆ.

॥ ಭಾವಾರ್ಥ ॥

ಚಿತ್ರನಾಮಕನಾದ ರಾಜನ ಆಶ್ರಯದಲ್ಲಿ ಅನೇಕ ಅಲ್ಪರಾಜರು ಸರಸ್ವತೀನದಿಯ ದಡದಲ್ಲಿರುತ್ತಾರೆ ಅವರೆಲ್ಲರಿಗಿಂತಲೂ ಹೆಚ್ಚಾಗಿ ಚಿತ್ರನು ಸಹಸ್ರ ಸಂಖ್ಯಾಕವಾದುದೂ, ದಶಸಹಸ್ರಸಂಖ್ಯಾಕವಾದುದೂ ಆದ ಧನಗಳನ್ನು ಕೊಡುತ್ತಾ, ಪರ್ಜನ್ಯನು ವೃಷ್ಟಿಯಿಂದ ಪೃಥ್ವಿಯನ್ನೆಲ್ಲಾ ತೃಪ್ತಿಗೊಳಿಸುವಂತೆ ಧನದಾನಗಳಿಂದ ತೃಪ್ತಿಗೊಳಿಸುತ್ತಾನೆ. (ಆದುದರಿಂದ ನಮಗೆ ಧನದಾನವಮಾಡಿದವನೂ ಅವನೇ ಆಗಿರಬೇಕು)

## English Translation.

Verily the Raja Chitra, giving his thousands and tens of thousands, has overspread (with his bounty) those other petty princes, who rule along the Saraswati, as Parjanya (overspreads the earth) with rain.



# ಇಪ್ಪತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಓ ತ್ಯಮುಹ್ವ ಇತ್ಯಷ್ಟಾದಶರ್ಚಂ ದ್ವಿತೀಯಂ ಸೂಕ್ತಂ ಕಾಣ್ವಸ್ಯ ಸೋಭರೇರಾರ್ಷಂ। ಆದ್ಯಾತೃತೀಯಾಪಂಚಮ್ಯೋ ಬೃಹತ್ಯೋ ದ್ವಿತೀಯಾಚತುರ್ಥೀಷಷ್ಠ್ಯಃ ಸತೋಬೃಹತ್ಯಃ ಸಪ್ತಮೀ ಬೃಹತ್ಯಷ್ಟಮ್ಯನುಷ್ಟುಪ್ । ಕಾಕುಭಂ ಪ್ರಾಗಾಥಂ ಹೇತ್ವ್ಯಕ್ತಸ್ಯಾನುವೃತ್ತೇಃ ಶಿಷ್ಟಾಸ್ತ್ವ್ವಾರಃ ಕಾಕುಭಾಃ ಪ್ರಗಾಥಾಃ। ಅಶ್ವಿನೌ ದೇವತಾ। ತಥಾ ಚಾನುಕ್ರಾಂತಂ। ಓ ತ್ಯಮಾಶ್ವಿನಂ ತ್ರಿಪ್ರಗಾಥಾದಿ ಬೃಹತ್ಯನುಷ್ಟು-ಬೇಕಾದಶಾದ್ಯೇ ಕಕುಮ್ಮಧ್ಯೇಜ್ಯೋತಿಷೀ ಇತಿ ॥ ಪ್ರಾತರನುವಾಕ ಆಶ್ವಿನೇ ಕ್ರತೌ ಬಾರ್ಹತೇ ಛಂದಸ್ಯಾಶ್ವಿನಶಸ್ತ್ರೇ ಚಾದ್ಯಾಃ ಸಪ್ತರ್ಚಃ। ಸೂತ್ರಿತಂ ಚ। ಓ ತ್ಯಮುಹ್ವ ಆ ರಥಮಿತಿ ಸಪ್ತ। ಆ. ೪-೧೫ । ಇತಿ ॥**

ಅನುವಾದವು—ಓ **ತ್ಯಮುಹ್ವೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೆಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಸೋಭರಿಃ ಕಾಣ್ವಃ** ಎಂಬುವನು ಋಷಿಯು; **ಅಶ್ವಿನೀ**

ದೇವತೆಗಳು ದೇವತೆಯು; ಈ ಸೂಕ್ತದ ಒಂದು, ಮೂರು, ಐದನೆಯ ಋಕ್ಕುಗಳು ಬೃಹತೀಛಂದಸ್ಕವು; ಎರಡು, ನಾಲ್ಕು, ಆರನೆಯ ಋಕ್ಕುಗಳು ಸತೋಬೃಹತೀಛಂದಸ್ಕವು; ಏಳನೆಯದು ಬೃಹತೀಛಂದಸ್ಕವು; ಎಂಟನೆಯದು ಅನುಷ್ಟುಪ್‌ಛಂದಸ್ಕವು; ಉಳಿದ ನಾಲ್ಕು ಋಕ್ಕುಗಳು **ಪ್ರಾಗಾಥಂ ಕಾಕುಭಂ** ಎಂಬ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—ಓ **ತ್ಯಮಾಶ್ವಿನಂ ತ್ರಿಪ್ರಗಾಥಾದಿ ಬೃಹತ್ಯನುಷ್ಟುಬೇಕಾದಶ್ಯಾದ್ಯೇ ಕಕುಮ್ಮಧ್ಯೇಜ್ಯೋತಿಷೀ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ಮೊದಲಿನ ಏಳು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಓ **ತ್ಯಮುಹ್ವ ಆ ರಥಮಿತಿ ಸಪ್ತ** ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು.

## ಸೂಕ್ತ—೨೨

ಮಂಡಲ—೮ ॥ ಅನುವಾಕ—೪ ॥ ಸೂಕ್ತ—೨೨ ॥
ಅಷ್ಟಕ—೬ ॥ ಅಧ್ಯಾಯ—೨ ॥ ವರ್ಗ—೫, ೬, ೭, ೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥
॥ ಋಷಿಃ—ಸೋಭರಿಃ ಕಾಣ್ವಃ ॥
॥ ದೇವತಾ—ಅಶ್ವಿನೌ ॥
॥ ಛಂದಃ—೧-೬. ಪ್ರಾಗಾಥಂ (ಅಯುಜಃ ಬೃಹತ್ಯಃ ಯುಜಃ ಸತೋಬೃಹತ್ಯಃ) ।
೭. ಬೃಹತೀ । ೮. ಅನುಷ್ಟುಪ್ । ೯, ೧೦, ೧೪-೧೮. ಪ್ರಾಗಾಥಂ ಕಾಕುಭಂ
೧೧. ಕಕುಪ್ । ೧೨. ಮಧ್ಯೇಜ್ಯೋತಿಃ ॥

॥ ಸಂಹಿತಾಪಾಠಃ ॥

ಓ ತ್ಯಮುಹ್ವ ಆ ರಥಮದ್ಯಾ ದಂಸಿಷ್ಠಮೂತಯೇ ।
ಯಮಶ್ವಿನಾ ಸುಹವಾ ರುದ್ರವರ್ತನೀ ಆ ಸೂರ್ಯಾಯೈ ತಸ್ಥಥುಃ ॥ ೧ ॥

॥ ಪದಪಾಠಃ ॥

ಓ ಇತಿ । ತ್ಯಂ । ಅಹ್ವೇ । ಆ । ರಥಂ । ಅದ್ಯ । ದಂಸಿಷ್ಠಂ । ಊತಯೇ ।
ಯಂ । ಅಶ್ವಿನಾ । ಸುಽಹವಾ । ರುದ್ರವರ್ತನೀ ಇತಿ ರುದ್ರಽವರ್ತನೀ । ಆ । ಸೂರ್ಯಾಯೈ । ತಸ್ಥಥುಃ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ದಂಸಿಷ್ಠಮತ್ಯಂತದರ್ಶನೀಯಂ ಯದ್ವಾತಿಶಯೇನ ಶತ್ರೂಣಾಮುಪಕ್ಷಪಯಿತಾರಂ ತ್ಯಂ ತಂ ಯುವಯೋಃ ರಥಮೂತಯೇ ರಕ್ಷಣಾಯಾದ್ಯಾಸ್ಮಿನ್ಯಾಗದಿನೇಽಹ್ವೇ । ಸೋಭರಿರಹಮಾಹ್ವಯಾಮಿ । ಸುಹವಾ ಸ್ತೋತ್ರಶಸ್ತ್ರಾದಿಭಿಃ ಶೋಭನಾಹ್ವಾನೌ ರುದ್ರವರ್ತನೀ ಸಂಗ್ರಾಮೇ ರೋದನಶೀಲ-

ಮಾರ್ಗೌ ಯದ್ವಾ ಸ್ತೂಯಮಾನಮಾರ್ಗೌ ಹೇ ಅಶ್ವಿನೌ ಸೂರ್ಯಾಯೈ ಸೂರ್ಯಾಸ್ವಯಂವರೇ ವರಯಿತುಂ ಯಂ ರಥಂ ಯುವಾಮಾ ತಸ್ಥಥುಃ ಆಶ್ರಯಥಃ ತಂ ರಥಮಾಹ್ವಯಾಮೀತಿ ||

|| ಪ್ರತಿಪದಾರ್ಥ ||

**ಸುಹವಾ**—ಉತ್ತಮವಾದ ಆಹ್ವಾನಕ್ಕೆ ಪಾತ್ರರೂ | **ರುದ್ರವರ್ತನೀ ಅಶ್ವಿನಾ**—ಸಂಗ್ರಾಮದಲ್ಲಿ ರೋದನಮಾಡುವ ಮಾರ್ಗದಲ್ಲಿ ಸಂಚರಿಸುವವರೂ ಆದ ಎಲೈ ಅಶ್ವಿನೀ ದೇವತೆಗಳೇ | **ಸೂರ್ಯಾಯೈ**—ಸೂರ್ಯಾದೇವಿಯನ್ನು ವರಿಸಲು | **ಯಂ**—ಯಾವ ರಥವನ್ನು | **ಆ ತಸ್ಥಥುಃ**—ಹತ್ತಿ ಕುಳಿತುಕೊಳ್ಳುವಿರೋ ಅಂತಹ | **ದಂಸಿಷ್ಠಂ**—ದರ್ಶನೀಯವಾದುದೂ | **ತ್ಯಂ**—ಪ್ರಸಿದ್ಧವಾದುದೂ ಆದ | **ರಥಂ**—ನಿಮ್ಮ ರಥವನ್ನು | **ಊತಯೇ**—ರಕ್ಷಣಾರ್ಥವಾಗಿ | **ಅದ್ಯ**—ಈ ಯಾಗದಿನದಲ್ಲಿ | **ಅಹ್ವೇ**—ಪ್ರಾರ್ಥಿಸಿ ಕರೆಯುತ್ತೇನೆ.

|| ಭಾವಾರ್ಥ ||

ಉತ್ತಮವಾದ ಆಹ್ವಾನಕ್ಕೆ ಪಾತ್ರರೂ, ಸಂಗ್ರಾಮದಲ್ಲಿ ರೋದನಮಾಡುವ ಮಾರ್ಗದಲ್ಲಿ ಸಂಚರಿಸುವವರೂ ಆದ ಎಲೈ ಅಶ್ವಿನೀದೇವತೆಗಳೇ, ಸೂರ್ಯಾದೇವಿಯನ್ನು ವರಿಸಲು ಯಾವ ರಥವನ್ನು ಹತ್ತಿ ಕುಳಿತುಕೊಳ್ಳುವಿರೋ, ಅಂತಹ ದರ್ಶನೀಯವಾದುದೂ, ಪ್ರಸಿದ್ಧವಾದುದೂ ಆದ ನಿಮ್ಮ ರಥವನ್ನು ರಕ್ಷಣಾರ್ಥವಾಗಿ ಈ ಯಾಗದಿನದಲ್ಲಿ ಪ್ರಾರ್ಥಿಸಿ ಕರೆಯುತ್ತೇನೆ.

English Translation.

I invoke to-day for our protection that splendid chariot, which, adorable Aswins, advancing on the path to battle, you ascended (to go to the wedding) of Surya.

|| ಸಂಹಿತಾಪಾಠಃ ||

ಪೂರ್ವಾಪುಷಂ ಸುಹವಂ ಪುರುಸ್ಪೃಹಂ ಭುಜ್ಯುಂ ವಾಜೇಷು ಪೂರ್ವ್ಯಂ |
ಸಚನಾವಂತಂ ಸುಮತಿಭಿಃ ಸೋಭರೇ ವಿದ್ವೇಷಸಮನೇಹಸಂ || ೨ ||

|| ಪದಪಾಠಃ ||

ಪೂರ್ವಽಆಪುಷಂ | ಸುಽಹವಂ | ಪುರುಽಸ್ಪೃಹಂ | ಭುಜ್ಯುಂ | ವಾಜೇಷು | ಪೂರ್ವ್ಯಂ |
ಸಚನಾಽವಂತಂ | ಸುಮತಿಽಭಿಃ | ಸೋಭರೇ | ವಿಽದ್ವೇಷಸಂ | ಅನೇಹಸಂ || ೨ ||

|| ಸಾಯಣಭಾಷ್ಯಂ ||

ಹೇ ಸೋಭರೇ ಸುಮತಿಭಿಃ ಕಲ್ಯಾಣೀಭಿಃ ಸ್ತುತಿಭಿರಶ್ವಿನೋಃ ರಥಂ ಸ್ತುಹಿ | ಕಿಂವಿಶಿಷ್ಟಂ | ಪೂರ್ವಾಪುಷಂ ಪೂರ್ವೇಷಾಂ ಸ್ತೋತ್ರೄಣಾಂ ಧನಾದಿದಾನೇನ ಪೋಷಕಂ ಸುಹವಂ ಯುದ್ಧೇಷು

**ಶೋಭನಾಹ್ವಾನಂ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ಭುಜ್ಯುಂ ॥ ಭುಜ ಪಾಲನೇ ॥ ಸರ್ವಸ್ಯ ರಕ್ಷಕಂ ವಾಜೇಷು ಪೂರ್ವ್ಯಂ ಸಂಗ್ರಾಮೇಷ್ವಗ್ರತೋ ಗಂತಾರಂ ಸಚನಾವಂತಂ ಸರ್ವೈರ್ಭಜನವಂತಂ ವಿದ್ವೇಷಸಂ ಶತ್ರೂಣಾಂ ವಿಶೇಷೇಣ ದ್ವೇಷ್ಟಾರಮನೇಹಸಂ ಕೈಶ್ಚಿದಪ್ಯನುಪದ್ರವಂ ಪಾಪರಹಿತಂ ವಾ ರಥಂ ಸ್ತುಹೀತ್ಯನ್ವಯಃ ॥**

। ಪ್ರತಿಪದಾರ್ಥ ॥

**ಸೋಭರೇ**—ಎಲೈ ಸೋಭರಿಯೇ । **ಪೂರ್ವಾಪುಷಂ**—ಹಿಂದಿನ ಯಜಮಾನರನ್ನೆಲ್ಲಾ ಪೋಷಿಸಿದುದೂ । **ಸುಹವಂ**—ಉತ್ತಮವಾದ ಆಹ್ವಾನವುಳ್ಳದ್ದೂ । **ಪುರುಸ್ಪೃಹಂ**—ಅನೇಕರ ಆದರಕ್ಕೆ ಪಾತ್ರವಾದುದೂ । **ಭುಜ್ಯುಂ**—ಎಲ್ಲರನ್ನೂ ಪಾಲಿಸತಕ್ಕದ್ದೂ । **ವಾಜೇಷು**—ಸಂಗ್ರಾಮಗಳಲ್ಲಿ । **ಪೂರ್ವ್ಯಂ**—ಎಲ್ಲಕ್ಕಿಂತಲೂ ಮೊದಲು ಮುನ್ನುಗ್ಗತಕ್ಕದ್ದೂ । **ಸಚನಾವಂತಂ**—ಎಲ್ಲರಿಂದಲೂ ಆರಾಧಿಸಲ್ಪಡತಕ್ಕದ್ದೂ । **ವಿದ್ವೇಷಸಂ**—ಶತ್ರುಗಳನ್ನು ದ್ವೇಷಿಸತಕ್ಕದ್ದೂ । **ಅನೇಹಸಂ**—ಪಾಪರಹಿತವಾದುದೂ ಆದ ಅಶ್ವಿನೀದೇವತೆಗಳ ರಥವನ್ನು । **ಸುಮತಿಭಿಃ**—ಉತ್ತಮವಾದ ಸ್ತುತಿಗಳಿಂದ ಪ್ರಶಂಸಿಸು.

॥ ಭಾವಾರ್ಥ ॥

ಎಲೈ ಸೋಭರಿಯೇ, ಹಿಂದಿನ ಯಜಮಾನರನ್ನೆಲ್ಲಾ ಪೋಷಿಸಿದುದೂ, ಉತ್ತಮವಾದ ಆಹ್ವಾನವುಳ್ಳದ್ದೂ, ಅನೇಕರ ಆದರಕ್ಕೆ ಪಾತ್ರವಾದುದೂ, ಎಲ್ಲರನ್ನೂ ಪಾಲಿಸತಕ್ಕದ್ದೂ, ಸಂಗ್ರಾಮಗಳಲ್ಲಿ ಎಲ್ಲಕ್ಕಿಂತಲೂ ಮೊದಲು ಮುನ್ನುಗ್ಗತಕ್ಕದ್ದೂ, ಎಲ್ಲರಿಂದಲೂ ಆರಾಧಿಸಲ್ಪಡತಕ್ಕದ್ದೂ, ಶತ್ರುಗಳನ್ನು ದ್ವೇಷಿಸತಕ್ಕದ್ದೂ ಪಾಪರಹಿತವಾದುದೂ ಆದ ಅಶ್ವಿನೀದೇವತೆಗಳ ರಥವನ್ನು ಉತ್ತಮವಾದ ಸ್ತುತಿಗಳಿಂದ ಪ್ರಶಂಸಿಸು.

## English Translation.

Celebrate, Sobhari, with praises (that chariot), the benefactor of former (encomiasts), the worthily invoked, the desired of many, the preserver, the foremost in battles, the relied upon by all, the scatterer of enemies, the exempt from ill.

॥ ಸಂಹಿತಾಪಾಠಃ ॥

ಇಹ ತ್ವಾ ಪುರುಭೂತಮಾ ದೇವಾ ನಮೋಭಿರಶ್ವಿನಾ ।
ಅರ್ವಾಚೀನಾ ಸ್ವವಸೇ ಕರಾಮಹೇ ಗಂತಾರಾ ದಾಶುಷೋ ಗೃಹಂ ॥ ೩ ॥

॥ ಪದಪಾಠಃ ॥

**ಇಹ । ತ್ವಾ । ಪುರುಽಭೂತಮಾ । ದೇವಾ । ನಮಃಽಭಿಃ । ಅಶ್ವಿನಾ ।**
**ಅರ್ವಾಚೀನಾ । ಸು । ಅವಸೇ । ಕರಾಮಹೇ । ಗಂತಾರಾ । ದಾಶುಷಃ । ಗೃಹಂ ॥ ೩ ॥**

॥ ಸಾಯಣಭಾಷ್ಯಂ ॥

ಪುರುಭೂತಮಾತಿಶಯೇನ ಬಹೂನಾಂ ಶತ್ರೂಣಾಂ ಭಾವಯಿತಾರೌ ದೇವಾ ದೇವೌ ದ್ಯೋತನಶೀಲೌ ಸ್ತೋತವ್ಯೌ ವಾ ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ಗೃಹಂ ಪ್ರತಿ ಗಂತಾರೌ ಗಮನಶೀಲೌ ತ್ಯಾ ತಾವಶ್ವಿನಾಶ್ವಿನೌ ಯುವಾಮಿಹಾಸ್ಮಿನ್ಕರ್ಮಣ್ಯವಸೇ ರಕ್ಷಣಾಯ ನಮೋಭಿರ್ಹವಿರ್ಭಿಃ ಸ್ತೋತ್ರೈರ್ವಾರ್ವಾಚೀನಾವಭಿಮುಖಮಾಗಚ್ಛಂತೌ ಸು ಕರಾಮಹೇ । ವಯಂ ಸುಷ್ಠು ಕುರ್ಮಃ ॥

॥ ಪ್ರತಿಪದಾರ್ಥ ॥

**ಪುರುಭೂತಮಾ**—ಅಧಿಕವಾಗಿ ಶತ್ರುನಿಗ್ರಹವನ್ನು ಮಾಡುವವರೂ । **ದೇವಾ**—ದೇವತಾತ್ಮರೂ । **ದಾಶುಷಃ**—ಹವಿಸ್ಸನ್ನರ್ಪಿಸುವ ಯಜಮಾನನ । **ಗೃಹಂ ಗಂತಾರಾ**— ಗೃಹಕ್ಕೆ ಹೋಗುವವರೂ । **ತ್ಯಾ**—ಪ್ರಸಿದ್ಧರೂ ಆದ । **ಅಶ್ವಿನಾ**—ಅಶ್ವಿನೀದೇವತೆಗಳನ್ನು । **ಇಹ**—ಈ ಯಾಗಕರ್ಮದಲ್ಲಿ । **ಅವಸೇ**—ನಮ್ಮ ರಕ್ಷಣಾರ್ಥವಾಗಿ । **ನಮೋಭಿಃ**—ಸ್ತುತಿಪೂರ್ವಕವಾಗಿ ಹವಿಸ್ಸುಗಳಿಂದ । **ಅರ್ವಾಚೀನಾ**—ನಮಗಭಿಮುಖವಾಗಿ ಬರುವಂತೆ । **ಸು ಕರಾಮಹೇ**—ಉತ್ತಮವಾಗಿ ಆರಾಧಿಸಿ ಆಕರ್ಷಿಸುತ್ತೇವೆ.

॥ ಭಾವಾರ್ಥ ॥

ಅಧಿಕವಾಗಿ ಶತ್ರುನಿಗ್ರಹವನ್ನು ಮಾಡುವವರೂ, ದೇವತಾತ್ಮರೂ, ಹವಿಸ್ಸನ್ನರ್ಪಿಸುವ ಯಜಮಾನನ ಗೃಹಕ್ಕೆ ಹೋಗುವವರೂ, ಪ್ರಸಿದ್ಧರೂ ಆದ ಅಶ್ವಿನೀದೇವತೆಗಳನ್ನು ಈ ಯಾಗಕರ್ಮದಲ್ಲಿ ನಮ್ಮ ರಕ್ಷಣಾರ್ಥವಾಗಿ ಸ್ತುತಿಪೂರ್ವಕವಾಗಿ ಹವಿರಾದಿಗಳಿಂದ ನಮಗಭಿಮುಖವಾಗಿ ಬರುವಂತೆ ಉತ್ತಮವಾಗಿ ಆರಾಧಿಸಿ ಆಕರ್ಷಿಸುತ್ತೇವೆ.

English Translation.

We incite by our adorations on this occasion the two divine Aswins, the overcomers of foes, that they may come down for our protection and proceed to the dwelling of the donor (of the offering).

॥ ಸಂಹಿತಾಪಾಠಃ ॥

ಯುವೋ ರಥಸ್ಯ ಪರಿ ಚಕ್ರಮೀಯತ ಈರ್ಮಾನ್ಯದ್ವಾಮಿಷಣ್ಯತಿ ।
ಅಸ್ಮಾँ ಅಚ್ಛಾ ಸುಮತಿರ್ವಾಂ ಶುಭಸ್ಪತೀ ಆ ಧೇನುರಿವ ಧಾವತು ॥ ೪ ॥

॥ ಪದಪಾಠಃ ॥

ಯುವೋಃ । ರಥಸ್ಯ । ಪರಿ । ಚಕ್ರಂ । ಈಯತೇ । ಈರ್ಮಾ । ಅನ್ಯತ್ । ವಾಂ । ಇಷಣ್ಯತಿ ।
ಅಸ್ಮಾನ್ । ಅಚ್ಛ । ಸುऽಮತಿಃ । ವಾಂ । ಶುಭಃ । ಪತೀ ಇತಿ । ಆ । ಧೇನುಃऽಇವ । ಧಾವತು ॥ ೪ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಯುವೋರ್ಯುವಯೋಃ ರಥಸ್ಯೈಕಂ ಚಕ್ರಂ ಪರೀಯತೇ ದ್ಯಾಂ ಗಚ್ಛತಿ। ಅನ್ಯದವಸ್ಥಿತಂ ರಥಸ್ಯ ಚಕ್ರಮಿಷಾವರ್ಣೀವರ್ಗ ಸರ್ವಸ್ಯಾಂತರ್ಯಾಮಿತಯಾ ಪ್ರೇರಕೌ ಯದ್ವೋದಕಸ್ಯ ಪ್ರೇರಯಿತಾರೌ ವಾಂ ಯುವಾಮಿಷಣ್ಯತಿ। ಗಚ್ಛತಿ। ಉಕ್ತಾರ್ಥೇ ಮಂತ್ರಾಂತರಂ। ನ್ಯಘ್ನ್ಯಸ್ಯ ಮೂರ್ಧನಿ। ಋ. ೧-೩೦-೧೯। ಇತಿ। ಹೇ ಶುಭಸ್ಪತೀ ಉದಕಸ್ಯ ಪಾಲಯಿತಾರೌ ಹೇ ಅಶ್ವಿನೌ ವಾಂ ಯುವಯೋಃ ಸುಮತಿಃ ಕಲ್ಯಾಣೀ ಮತಿರಚ್ಛಾಭಿಮುಖ್ಯೇನಾಸ್ಮಾನಾ ಧಾವತು। ಆಗಚ್ಛತು। ತತ್ರ ದೃಷ್ಟಾಂತಃ। ಧೇನುರಿವ ಯಥಾ ನವಪ್ರಸೂತಾ ಗೌರ್ವತ್ಸಂ ಪ್ರತಿ ಪಯೋದಾನಾರ್ಥಮಾಗಚ್ಛತಿ ತದ್ವದ್ಯುವಯೋಃ ಸುಮತಿರಸ್ಮಾನ್ಪ್ರತಿ ಧನಾದಿಪ್ರದಾನಾರ್ಥಮಾಗಚ್ಛತು ॥**

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಯುವೋಃ**—ನಿಮ್ಮ। **ರಥಸ್ಯ**—ರಥದ। **ಚಕ್ರಂ**—ಒಂದು ಚಕ್ರವು। **ಪರಿ ಈಯತೇ**—ಸರ್ವತ್ರ ಸಂಚರಿಸುತ್ತದೆ। **ಅನ್ಯತ್**—ಇನ್ನೊಂದು ಚಕ್ರವು। **ಈರ್ಮಾ**—ಜಗತ್ಪ್ರೇರಕರಾದ। **ವಾಂ**—ನಿಮ್ಮನ್ನೇ। **ಇಷಣ್ಯತಿ**—ಹಿಂಬಾಲಿಸುತ್ತದೆ। **ಶುಭಸ್ಪತೀ**—ಉದಕಕ್ಕೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ। **ಧೇನುರಿವ**—ಧೇನುವು ವತ್ಸಕ್ಕಭಿಮುಖವಾಗಿ ಆದರದಿಂದ ಓಡುವಂತೆ। **ವಾಂ**—ನಿಮ್ಮ। **ಸುಮತಿಃ**—ಕಲ್ಯಾಣಾತ್ಮಕವಾದ ಬುದ್ಧಿಯು। **ಅಸ್ಮಾನ್ ಅಚ್ಛ**—ನಮಗಭಿಮುಖವಾಗಿ। **ಆ ಧಾವತು**—ಶೀಘ್ರವಾಗಿ ನಮ್ಮಲ್ಲಿಗೆ ಬಂದು ಸೇರಲಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥದ ಒಂದು ಚಕ್ರವು ಸರ್ವತ್ರ ಸಂಚರಿಸುತ್ತದೆ ಇನ್ನೊಂದು ಚಕ್ರವು ಜಗತ್ಪ್ರೇರಕರಾದ ನಿಮ್ಮನ್ನೇ ಹಿಂಬಾಲಿಸುತ್ತದೆ. ಉದಕಕ್ಕೆ ಪಾಲಕರಾದ ಎಲೈ ಅಶ್ವಿನೀದೇವತೆಗಳೇ, ಧೇನುವು ವತ್ಸಕ್ಕಭಿಮುಖವಾಗಿ ಆದರದಿಂದ ಓಡುವಂತೆ, ನಿಮ್ಮ ಕಲ್ಯಾಣಾತ್ಮಕವಾದ ಬುದ್ಧಿಯು ನಮಗಭಿಮುಖವಾಗಿ ಶೀಘ್ರವಾಗಿ ನಮ್ಮಲ್ಲಿಗೆ ಬರಲಿ.

## English Translation.

One of the wheels of your car moves in every direction ; the other, impellers of actions, remains with you : may your favour, lords of rain, hasten towards us as a cow (to her calf) !

॥ ಸಂಹಿತಾಪಾಠಃ ॥

**ರಥೋ ಯೋ ವಾಂ ತ್ರಿವಂಧುರೋ ಹಿರಣ್ಯಾಭೀಶುರಶ್ವಿನಾ ।**

**ಪರಿ ದ್ಯಾವಾಪೃಥಿವೀ ಭೂಷತಿ ಶ್ರುತಸ್ತೇನ ನಾಸತ್ಯಾ ಗತಂ ॥ ೫ ॥**

॥ ಸಂಹಿತಾಪಾಠಃ ॥

ಅತಿಥಿಂ ಮಾನುಷಾಣಾಂ ಸೂನುಂ ವನಸ್ಪತೀನಾಂ ।
ವಿಪ್ರಾ ಅಗ್ನಿಮವಸೇ ಪ್ರತ್ನಮೀಳತೇ ॥ ೨೫ ॥

॥ ಪದಪಾಠಃ ॥

ಅತಿಥಿಂ । ಮಾನುಷಾಣಾಂ । ಸೂನುಂ । ವನಸ್ಪತೀನಾಂ ।
ವಿಪ್ರಾಃ । ಅಗ್ನಿಂ । ಅವಸೇ । ಪ್ರತ್ನಂ । ಈಳತೇ ॥ ೨೫ ॥

॥ ಸಾಯಣಭಾಷ್ಯಂ ॥

**ವಿಪ್ರಾ** ಮೇಧಾವಿನೋ ಯಜಮಾನಾ ಮಾನುಷಾಣಾಂ ಮನುಷ್ಯಾಣಾಮತಿಥಿಮತಿಥಿವತ್ಪೂಜ್ಯಂ **ವನಸ್ಪತೀನಾಂ** ಸೂನುಂ ವನಸ್ಪತಿರೂಪಾಭಿರರಣೀಭಿರ್ಜಾಯಮಾನತ್ವೇನ ತೇಷಾಂ ಸೂನುಂ ಪ್ರತ್ನಂ **ಪುರಾತನಂ** ಏವಂವಿಧಮಗ್ನಿಮವಸೇ ಕರ್ಮರಕ್ಷಣಾಯೇಳತೇ । ಸ್ತುತಿಭಿಃ ಸ್ತುವಂತಿ ॥

॥ ಪ್ರತಿಪದಾರ್ಥ ॥

**ವಿಪ್ರಾಃ**—ಮೇಧಾವಿಗಳಾದ ಯಜಮಾನರು । **ಮಾನುಷಾಣಾಂ**—ಮನುಷ್ಯರಿಗೆ । **ಅತಿಥಿಂ**—ಅತಿಥಿಯಂತೆ ಪೂಜ್ಯನೂ । **ವನಸ್ಪತೀನಾಂ**—ವೃಕ್ಷಾದಿಗಳಿಗೆ । **ಸೂನುಂ**—ಪುತ್ರರೂಪನೂ । **ಪ್ರತ್ನಂ**—ಪುರಾತನನೂ ಆದ । **ಅಗ್ನಿಂ**—ಅಗ್ನಿಯನ್ನು । **ಅವಸೇ**—ರಕ್ಷಣಾರ್ಥವಾಗಿ । **ಈಳತೇ**—ಸ್ತುತಿಸುತ್ತಾರೆ

॥ ಭಾವಾರ್ಥ ॥

ಮೇಧಾವಿಗಳಾದ ಯಜಮಾನರು ಮನುಷ್ಯರಿಗೆ ಅತಿಥಿಯಂತೆ ಪೂಜ್ಯನೂ, ವೃಕ್ಷಾದಿಗಳಿಗೆ ಪುತ್ರರೂಪನೂ ಆದ ಅಗ್ನಿಯನ್ನು ರಕ್ಷಣಾರ್ಥವಾಗಿ ಸ್ತುತಿಸುತ್ತಾರೆ.

English Translation.

Pious men glorify the ancient Agni, the guest of of men, the son of the trees, for protection.

॥ ಸಂಹಿತಾಪಾಠಃ ॥

ಮಹೋ ವಿಶ್ವಾ ಅಭಿ ಷತೋ೩ಭಿ ಹವ್ಯಾನಿ ಮಾನುಷಾ ।
ಅಗ್ನೇ ನಿ ಷತ್ಸಿ ನಮಸಾಧಿ ಬರ್ಹಿಷಿ ॥ ೨೬ ॥

॥ ಪದಪಾಠಃ ॥

ಮಹಃ । ವಿಶ್ವಾನ್ । ಅಭಿ । ಸತಃ । ಅಭಿ । ಹವ್ಯಾನಿ । ಮಾನುಷಾ ।

ಅಗ್ನೇ । ನಿ । ಸತ್ಸಿ । ನಮಸಾ । ಅಧಿ । ಬರ್ಹಿಷಿ ॥ ೨೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಮಹಃ ಕರ್ಮಕರ್ತೃತ್ವೇನ ಮಹತೋ ವಿಶ್ವಾನ್ ಸರ್ವಾನ್ ಸತಃ ಸ್ತೋತ್ರಕರಣಾರ್ಥಂ ವರ್ತಮಾನಾನ್ ಸ್ತೋತೃನಭ್ಯಭಿತಸ್ತ್ವಂ ನಮಸಾ ಸ್ತುತ್ಯಾ ಯುಕ್ತೋ ಬರ್ಹಿಷ್ಯಧಿ ನಿ ಷತ್ಸಿ । ನಿಷೀದ । ತಥಾ ಮಾನುಷಾ ಮನುಷ್ಯಸಂಬಂಧೀನಿ ಹವ್ಯಾನಿ ಹವೀಂಷ್ಯಭ್ಯಭಿತಸ್ತಾನಿ ಸ್ವೀಕರ್ತುಂ ನಿಷೀದ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಮಹಃ—ಕರ್ಮಾಚರಣೆಯಿಂದ ಮಹತ್ಸ್ವರೂಪವನ್ನು ಹೊಂದಿದ । ವಿಶ್ವಾನ್ ಸತಃ—ಸಮಸ್ತ ಸ್ತೋತೃಗಳಿಗೂ । ಅಭಿ—ಎದುರುಗಡೆಯಿರುವುದೂ । ನಮಸಾ—ಸ್ತುತಿಯಿಂದ ಯುಕ್ತವಾಗಿರುವುದೂ ಆದ । ಬರ್ಹಿಷಿ ಅಧಿ—ದರ್ಭಾಸನದ ಮೇಲೆ । ಮಾನುಷಾ—ಮನುಷ್ಯ ಸಂಬಂಧಿಯಾದ । ಹವ್ಯಾನಿ—ಹವಿಸ್ಸುಗಳನ್ನು । ಅಭಿ—ಸುತ್ತಲೂ ಸ್ವೀಕರಿಸಲು । ನಿ ಷತ್ಸಿ—ಕುಳಿತುಕೊ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಕರ್ಮಾಚರಣೆಯಿಂದ ಮಹತ್ಸ್ವರೂಪವನ್ನು ಹೊಂದಿದ ಸಮಸ್ತ ಸ್ತೋತೃಗಳಿಗೂ ಎದುರುಗಡೆಯಿರುವುದೂ, ಸ್ತುತಿಯಿಂದ ಯುಕ್ತವಾಗಿರುವುದೂ ಆದ ದರ್ಭಾಸನದ ಮೇಲೆ ಮನುಷ್ಯ ಸಂಬಂಧಿಯಾದ ಹವಿಸ್ಸುಗಳನ್ನು ಸುತ್ತಲೂ ಸ್ವೀಕರಿಸಲು ಕುಳಿತುಕೊ.

English Translation.

Sit down, Agni, on the sacrcd grass, in the presence of all those worshippers diligent (in pious works, induced) by their veneration (to accept the oblations of men.

॥ ಸಂಹಿತಾಪಾಠಃ ॥

ವಂಸ್ವಾ ನೋ ವಾರ್ಯಾ ಪುರು ವಂಸ್ವ ರಾಯಃ ಪುರುಸ್ಪೃಹಃ ।
ಸುವೀರ್ಯಸ್ಯ ಪ್ರಜಾವತೋ ಯಶಸ್ವತಃ ॥ ೨೭ ॥

॥ ಪದಪಾಠಃ ॥

ವಂಸ್ವ । ನಃ । ವಾರ್ಯಾ । ಪುರು । ವಂಸ್ವ । ರಾಯಃ । ಪುರುಽಸ್ಪೃಹಃ ।

ಸುಽವೀರ್ಯಸ್ಯ । ಪ್ರಜಾಽವತಃ । ಯಶಸ್ವತಃ ॥ ೨೭ ॥

|| ಸಾಯಣಭಾಷ್ಯಂ ||

ಹೇ ಅಗ್ನೇ ವಾರ್ಯಾ ವಾರ್ಯಾಣಿ ವರಣೀಯಾನಿ ಪುರು ಪುರೂಣಿ ಬಹೂನಿ ಗವಾದೀನಿ ನೋಽಸ್ಮಭ್ಯಂ ವಂಸ್ವ । ಪ್ರಯಚ್ಛ । ತಥಾ ಪುರುಸ್ಪೃಹಃ ಪುರುಭಿರ್ಬಹುಭಿಃ ಸ್ಪೃಹಣೀಯಂ ರಾಯೋ ಧನಂ । ಕಿಂ ವಿಶಿಷ್ಟಂ । ಸುವೀರ್ಯಸ್ಯ ಶೋಭನವೀರ್ಯೋಪೇತಂ ಪ್ರಜಾವತಃ ಪುತ್ರಪೌತ್ರಾದಿಸಹಿತಂ ಯಶಸ್ವತಃ ಕೀರ್ತಿಮಚ್ಚ ಧನಂ ನೋಽಸ್ಮಭ್ಯಂ ವಂಸ್ವ । ಪ್ರಯಚ್ಛ ॥

|| ಪ್ರತಿಪದಾರ್ಥ ||

(ಎಲೈ ಅಗ್ನಿಯೇ) **ವಾರ್ಯಾ**—ಎಲ್ಲರ ಆದರಕ್ಕೂ ಪಾತ್ರವಾದುದೂ । **ಪುರು**—ಅಧಿಕವಾದುದೂ ಆದ ಗವಾದಿಧನವನ್ನು । **ನಃ**—ನಮಗೆ । **ವಂಸ್ವ**—ಕೊಡು । **ಪುರುಸ್ಪೃಹಃ**—ಅನೇಕರಿಂದ ಅಪೇಕ್ಷಿತವಾದುದೂ । **ಸುವೀರ್ಯಸ್ಯ**—ಶ್ರೇಷ್ಠವಾದ ಶಕ್ತಿಯುತವಾದುದೂ । **ಪ್ರಜಾವತಃ**— ಪುತ್ರಪೌತ್ರಾದಿಗಳಿಂದ ಕೂಡಿದುದೂ । **ಯಶಸ್ವತಃ**—ಕೀರ್ತಿಯುತವಾದುದೂ ಆದ । **ರಾಯಃ**—ಧನವನ್ನೂ । **ವಂಸ್ವ**—ಕೊಡು.

|| ಭಾವಾರ್ಥ ||

ಎಲೈ ಅಗ್ನಿಯೇ, ಎಲ್ಲರ ಆದರಕ್ಕೂ ಪಾತ್ರವಾದುದೂ, ಅಧಿಕವಾದುದೂ ಆದ ಗವಾದಿಧನವನ್ನೂ ಮತ್ತು ಅನೇಕರಿಂದ ಅಪೇಕ್ಷಿತವಾದುದೂ, ಶ್ರೇಷ್ಠವಾದ ಶಕ್ತಿಯುತವಾದುದೂ, ಪುತ್ರಪೌತ್ರಾದಿಗಳಿಂದ ಕೂಡಿದುದೂ, ಕೀರ್ತಿಯುತವಾದುದೂ ಆದ ಧನವನ್ನೂ ಕೊಡು.

English Translation.

Grant us (Agni) many desirable (things), grant us riches envied by **many,** (comprehending) vigour, offspring, fame.

|| ಸಂಹಿತಾಪಾಠಃ ||

ತ್ವಂ ವರೋ ಸುಷಾಮ್ಣೇಽಗ್ನೇ ಜನಾಯ ಚೋದಯ ।
ಸದಾ ವಸೋ ರಾತಿಂ ಯವಿಷ್ಠ ಶಶ್ವತೇ ॥ ೨೮ ॥

|| ಪದಪಾಠಃ ||

ತ್ವಂ । ವರೋ ಇತಿ । ಸುಽಸಾಮ್ನೇ । ಅಗ್ನೇ । ಜನಾಯ । ಚೋದಯ ।
ಸದಾ । ವಸೋ ಇತಿ । ರಾತಿಂ । ಯವಿಷ್ಠ । ಶಶ್ವತೇ ॥ ೨೮ ॥

। ಸಾಯಣಭಾಷ್ಯಂ ।

ವರೋ ಸರ್ವೈರ್ವರಣೀಯ ವಸೋ ಶತ್ರೂಣಾಂ ವಾಸಯಿತರ್ಯವಿಷ್ಠ ಪುನಃಪುನರ್ಜಾಯಮಾನತ್ವೇನ ಯುವತಮ ಹೇ ಅಗ್ನೇ ತ್ವಂ ಸುಷಾಮ್ಣೇ ಸುಸಾಮ್ನೇ ॥ ಸುಷಾಮಾದಿತ್ವಾತ್ ಷತ್ವಂ ॥

ತ್ವತ್ಪ್ರಸಾದಾಚ್ಛೋಭನಸಾಮವತೇ ಶಶ್ವತೇ ಬಹವೇ ಜನಾಯ ಪ್ರಾದುರ್ಭೂತಾಯ ಸ್ತೋತೄಣಾಂ ಸದಾ ಸರ್ವದಾ ರಾತಿಂ ಧನಾದಿಕಂ ಚೋದಯ । ಪ್ರೇರಯ ॥

॥ ಪ್ರತಿಪದಾರ್ಥ ॥

**ವರೋ**—ಸರ್ವರ ಆದರಕ್ಕೂ ಪಾತ್ರನಾದವನೂ । **ವಸೋ**—ಶತ್ರುವನ್ನು ಉರುಳಿಸುವವನೂ । **ಯವಿಷ್ಠ**—ಅತ್ಯಂತ ಯುವಕನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಸುಷಾಮ್ಣೇ**—(ನಿನ್ನ ಅನುಗ್ರಹದಿಂದ) ಉತ್ತಮವಾದ ಶಾಂತಿಯುತರಾದವರೂ । **ಶಶ್ವತೇ**—ಬಹುಸಂಖ್ಯಾಕರೂ ಆದ । **ಜನಾಯ**—ಯಜಮಾನರಿಗೆ । **ಸದಾ**—ಯಾವಾಗಲೂ । **ರಾತಿಂ**—ಧನಾದಿಗಳನ್ನು । **ಚೋದಯ**—ಒದಗಿಸು.

॥ ಭಾವಾರ್ಥ ॥

ಸರ್ವರ ಆದರಕ್ಕೂ ಪಾತ್ರನಾದವನೂ, ಶತ್ರುವನ್ನು ಉರುಳಿಸುವವನೂ, ಅತ್ಯಂತ ಯುವಕನೂ ಆದ ಎಲೈ ಅಗ್ನಿಯೇ, ನೀನು ನಿನ್ನ ಅನುಗ್ರಹದಿಂದ ಉತ್ತಮವಾದ ಶಾಂತಿಯುತರಾದವರೂ, ಬಹುಸಂಖ್ಯಾಕರೂ ಆದ ಯಜಮಾನರಿಗೆ ಯಾವಾಗಲೂ ಧನಾದಿಗಳನ್ನು ಒದಗಿಸು.

English Translation.

Agni, (you are) the desired of all, the humbler (of foes), the youngest (of the gods), ever bestow riches upon the tranquil and constant man.

॥ ಸಂಹಿತಾಪಾಠಃ ॥

ತ್ವಂ ಹಿ ಸುಪ್ರತೂರಸಿ ತ್ವಂ ನೋ ಗೋಮತೀರಿಷಃ ।
ಮಹೋ ರಾಯಃ ಸಾತಿಮಗ್ನೇ ಅಪಾ ವೃಧಿ ॥ ೨೯ ॥

॥ ಪದಪಾಠಃ ॥

ತ್ವಂ । ಹಿ । ಸುಽಪ್ರತೂಃ । ಅಸಿ । ತ್ವಂ । ನಃ । ಗೋಽಮತೀಃ । ಇಷಃ ।
ಮಹಃ । ರಾಯಃ । ಸಾತಿಂ । ಅಗ್ನೇ । ಅಪ । ವೃಧಿ ॥ ೨೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ । ಹಿರವಧಾರಣೇ । ತ್ವಮೇವ ಸುಪ್ರತೂಃ ಸ್ತೋತೄಣಾಂ ಧನಾದಿಕಂ ಸುಷ್ಠು ಪ್ರದಾತಾಸಿ । ಪ್ರಯಚ್ಛಸೀತ್ಯರ್ಥಃ । ಅತ ಏವ ಗೋಮತೀಃ ಗಶ್ವಾದಿಯುಕ್ತಾನೀಷೋಽನ್ನಾನಿ ಮಹೋ ಮಹತೋ ರಾಯೋ ಧನಸ್ಯ ಮಧ್ಯೇ ಸಾತಿಂ ದೇಯಂ ಧನಂ ಚ ನಃ ಸ್ತೋತೄಣಾಮಸ್ಮಾಕಮಪಾ ವೃಧಿ । ಅಪಾವೃಣು । ಪ್ರಯಚ್ಛೇತ್ಯರ್ಥಃ ॥

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ತ್ವಂ ಹಿ**—ನೀನೊಬ್ಬನೇ | **ಸುಪ್ರತೂಃ**—ಸ್ತೋತೃಗಳಿಗೆ ಧನಾದಿಗಳನ್ನು ಒದಗಿಸುವವನಾಗಿ | **ಅಸಿ**—ಆಗಿದ್ದೀಯೆ (ಆದುದರಿಂದಲೇ) | **ಗೋಮತೀಃ**—ಪಶ್ವಾದಿಗಳಿಂದ ಕೂಡಿದ | **ಇಷಃ**—ಅನ್ನಗಳನ್ನೂ | **ಮಹಃ**—ಮಹತ್ತಾದ | **ರಾಯಃ**—ಧನದ ಮಧ್ಯೇ | **ಸಾತಿಂ**—ಅತ್ಯುತ್ತಮವಾದ ಧನವನ್ನೂ | **ತ್ವಂ**—ನೀನೇ | **ನಃ**—ನಮಗೆ | **ಅಪಾವೃಧಿ**—ಒದಗಿಸಿಕೊಡಬೇಕು.

| ಭಾವಾರ್ಥ ||

ಎಲೈ ಅಗ್ನಿಯೇ, ನೀನೊಬ್ಬನೇ ಸ್ತೋತೃಗಳಿಗೆ ಧನಾದಿಗಳನ್ನು ಒದಗಿಸುವವನಾಗಿ ಆಗಿದ್ದೀಯೇ. ಆದುದರಿಂದಲೇ ಪಶ್ವಾದಿಗಳಿಂದ ಕೂಡಿದ ಅನ್ನಗಳನ್ನೂ ಮಹತ್ತಾದ ಧನಗಳ ನಡುವೆ ಅತ್ಯುತ್ತಮವಾದ ಧನವನ್ನೂ ನೀನೇ ನಮಗೆ ಒದಗಿಸಿಕೊಡು.

English Translation.

You verily are a liberal benefactor: bestow upon us, Agni, food, with cattle, and the gift of abundant riches.

|| ಸಂಹಿತಾಪಾಠಃ ||

ಅಗ್ನೇ ತ್ವಂ ಯಶಾ ಅಸ್ಯಾ ಮಿತ್ರಾವರುಣಾ ವಹ |
ಋತಾವಾನಾ ಸಮ್ರಾಜಾ ಪೂತದಕ್ಷಸಾ || ೩೦ ||

| ಪದಪಾಠಃ |

ಅಗ್ನೇ | ತ್ವಂ | ಯಶಾಃ | ಅಸಿ | ಆ | ಮಿತ್ರಾವರುಣಾ | ವಹ |
ಋತऽವಾನಾ | ಸಂऽರಾಜಾ | ಪೂತऽದಕ್ಷಸಾ || ೩೦ ||

| ಸಾಯಣಭಾಷ್ಯಂ |

**ಹೇ ಅಗ್ನೇ ತ್ವಂ ಯಶಾಃ || ಉಪ್ತಮತ್ವರ್ಥೀಯಃ || ದೇವಾನಾಂ ಮಧ್ಯೇ ಯಶಸ್ವ್ಯಸಿ | ಭವಸಿ | ಅತ ಏವ ತ್ವಮೃತಾವಾನಾ ಋತಾವಾನೌ ಸತ್ಯವಂತೌ ಯಜ್ಞವಂತೌ ವಾ ಸಮ್ರಾಜಾ ಸಮ್ರಾಜೌ ಸಮ್ಯಗ್ರಾಜಮಾನೌ ಪೂತದಕ್ಷಸಾ ಪೂತದಕ್ಷಸೌ | ದಕ್ಷ ಇತಿ ಬಲನಾಮ | ಶುದ್ಧಬಲೌ ಮಿತ್ರಾವರುಣಾವಸ್ಮಿನ್ಕರ್ಮಣ್ಯಾ ವಹ | ಆ ನಯ | ಪ್ರಾಯೇಣ ಕರ್ಮಣ್ಯಗ್ನೇರ್ಮಿತ್ರಾವರುಣಸಹಿತತ್ವಮಸ್ತೀತಿ ಸೂಚಯತಿ ||**

| ಪ್ರತಿಪದಾರ್ಥ |

**ಅಗ್ನೇ**—ಎಲೈ ಅಗ್ನಿಯೇ | **ತ್ವಂ**—ನೀನು | **ಯಶಾಃ**—ದೇವತೆಗಳ ನಡುವೆ ಅತ್ಯಂತ ಯಶಸ್ವಿಯಾಗಿ | **ಅಸಿ**—ಆಗಿದ್ದೀಯೆ (ಆದುದರಿಂದಲೇ) | **ಋತಾವಾನಾ**—ಸತ್ಯವಂತರೂ | **ಸಮ್ರಾಜಾ**—ಅತಿಶಯವಾಗಿ

ಪ್ರಕಾಶಿಸುವವರೂ । **ಪೂತದಕ್ಷಸಾ**—ಅತಿಶುದ್ಧವಾದ ಶಕ್ತಿಯುಳ್ಳವರೂ ಆದ । **ಮಿತ್ರಾವರುಣಾ**—ಮಿತ್ರಾವರುಣರನ್ನು । **ಆ ವಹ**—ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ದೇವತೆಗಳ ನಡುವೆ ಅತ್ಯಂತ ಯಶಸ್ವಿಯಾಗಿ ಆಗಿದ್ದೀಯೆ. ಆದುದರಿಂದಲೇ, ಸತ್ಯವಂತರೂ, ಅತಿಶಯವಾಗಿ ಪ್ರಕಾಶಿಸುವವರೂ, ಅತಿಶುದ್ಧವಾದ ಶಕ್ತಿಯುಳ್ಳವರೂ ಆದ ಮಿತ್ರಾವರುಣರನ್ನು ನಮ್ಮ ಯಜ್ಞಕ್ಕೆ ಕರೆದುಕೊಂಡು ಬಾ.

English Translation.

You, Agni, are renowned; bring hither the veracious, the purely vigourous, the resplendent deities Mitra and Varuna.



# ಇಪ್ಪತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸಖಾಯ ಆ ಶಿಷಾಮಹೀತಿ ತ್ರಿಂಶದೃಚಂ ಚತುರ್ಥಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಸಖಾಯಸ್ತ್ರ್ಯೃಚೋಽಂತ್ಯಃ ಸೌಷಾಮ್ಣಸ್ಯ ವರೋರ್ದಾನಸ್ತುತಿರಂತ್ಯಾನುಷ್ಟುಬಿತಿ । ವ್ಯಶ್ವಪುತ್ರೋ ವಿಶ್ವಮನಾ ಋಷಿಃ । ಔಷ್ಣಿಹಂ ಹೀತ್ಯುಕ್ತತ್ವಾದೇತದಾದೀನಿ ತ್ರೀಣಿ ಸೂಕ್ತಾನ್ಯುಷ್ಣಿಕ್ಛಂದಸ್ಕಾನಿ । ಅನುಕ್ತತ್ವಾದಿಂದ್ರೋ ದೇವತಾ । ಅಂತ್ಯಾಸು ತಿಸೃಸು ಸುಷಾಮಾಖ್ಯಸ್ಯ ರಾಜ್ಞಃ ಪುತ್ರಸ್ಯ ವರುನಾಮ್ನೋ ರಾಜ್ಞೋ ದಾನಂ ಸ್ತೂಯತೇ । ಅತಸ್ತಾಸ್ತದ್ದೇವತಾಕಾಃ ॥ ಮಹಾವ್ರತೇ ನಿಷ್ಕೇವಲ್ಯ ಔಷ್ಣಿಹತೃಚಾಶೀತಾವೇತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಶೌನಕೇನ ಸೂತ್ರ್ಯತೇ । ಸಖಾಯ ಆ ಶಿಷಾಮಹಿ ಯಏಕ ಇದ್ವಿದಯತೇ । ಐ. ಆ. ೫-೨-೫ । ಇತಿ ॥ ದಶಮೇಽಹನಿ ಮರುತ್ವತೀಯಶಸ್ತ್ರೇ ಸಖಾಯ ಇತಿ ತಿಸ್ರ ಋಚಃ । ಸೂತ್ರ್ಯತೇ ಚ । ಸಖಾಯ ಆ ಶಿಷಾಮಹೀತಿ ತಿಸ್ರ ಉಷ್ಣಿಹಃ । ಆ. ೮-೧೨ । ಇತಿ ॥**

ಅನುವಾದವು—**ಸಖಾಯ ಆ ಶಿಷಾಮಹಿ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಮೂವತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಸಖಾಯಸ್ತ್ರ್ಯೃಚೋಽನ್ತ್ಯಃ ಸೌಷಾಮ್ಣಸ್ಯ ವರೋರ್ದಾನಸ್ತುತಿರಂತ್ಯಾನುಷ್ಟುಪ್** ಎಂದು ಹೇಳಿರುವುದು. ಈ ಸೂಕ್ತಕ್ಕೆ ವ್ಯಶ್ವಋಷಿಯ ಪುತ್ರನಾದ ವಿಶ್ವಮನಾ ಎಂಬುವನು ಋಷಿಯು ; ಇಂದ್ರನು ದೇವತೆಯು ; ಈ ಸೂಕ್ತ ಮತ್ತು ಮುಂದಿನ **ಎರಡು** ಸೂಕ್ತಗಳೂ ಉಷ್ಣಿಕ್‌ಛಂದಸ್ಕವು. ಈ ಸೂಕ್ತದ ಕೊನೆಯ ಮೂರು ಋಕ್ಕುಗಳಲ್ಲಿ **ಸುಷಾಮಾ ಎಂಬ ಹೆಸರಿನ** ರಾಜನ ಪುತ್ರನಾದ ವರು ಎಂಬ ರಾಜನ ದಾನಪ್ರಶಂಸೆಯು ಉಕ್ತವಾಗಿರುವುದರಿಂದ ಆ ಋಕ್ಕುಗಳಿಗೆ **ಆ ರಾಜನ ದಾನಸ್ತುತಿಯೇ ದೇವತೆಯು.** ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ಉಷ್ಣಿಕ್‌ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಶೌನಕಮಹರ್ಷಿಯಿಂದ ಐತರೇಯಾರಣ್ಯಕದ **ಪಂಚ**

ಷಾರಣ್ಯಕದಲ್ಲಿ—ಸಖಾಯ ಆ ಶಿಷಾಮಹಿ ಯ ಏಕ ಇದ್ವಿದಯತೇ ಎಂಬ ವಾಕ್ಯದಿಂದ (ಐ. ಆ. ೫-೬-೫) ನಿರ್ದಿಷ್ಟವಾಗಿರುವುದು. ಮತ್ತು ಯಾಗದ ಹತ್ತನೆಯ ದಿವಸ ಮರುತ್ವತೀಯಶಸ್ತ್ರಮಂತ್ರಗಳನ್ನು ಪಠಿಸುವಾಗ ಸಖಾಯಃ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಸಖಾಯ ಆ ಶಿಷಾಮಹೀತಿ ತಿಸ್ರ ಉಷ್ಣಿಹಃ ಎಂಬ ಸೂತ್ರದಿಂದ (ಆ. ೮-೧೨) ವಿವೃತವಾಗಿರುವುದು.

## ಸೂಕ್ತ—೨೪

ಮಂಡಲ—೮ || ಅನುವಾಕ—೪ || ಸೂಕ್ತ—೨೪ ||
ಅಷ್ಟಕ—೬ || ಅಧ್ಯಾಯ—೨ || ವರ್ಗ—೧೫, ೧೬, ೧೭, ೧೮, ೧೯, ೨೦ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ||
|| ಋಷಿಃ—ವಿಶ್ವಮನಾ ವೈಯಶ್ವಃ ||
|| ದೇವತಾ—೧-೨೭. ಇಂದ್ರಃ । ೨೮-೩೦. ವರೋಃ ಸೌಷಾಮ್ಣಸ್ಯ ದಾನಸ್ತುತಿಃ ||
|| ಛಂದಃ—೧-೨೯. ಉಷ್ಣಿಕ್ । ೩೦. ಅನುಷ್ಟುಪ್ ||

|| ಸಂಹಿತಾಪಾಠಃ ||

ಸಖಾಯ ಆ ಶಿಷಾಮಹಿ ಬ್ರಹ್ಮೇಂದ್ರಾಯ ವಜ್ರಿಣೇ ।
ಸ್ತುಷ ಊ ಷು ವೋ ನೃತಮಾಯ ಧೃಷ್ಣವೇ || ೧ ||

|| ಪದಪಾಠಃ ||

ಸಖಾಯಃ । ಆ । ಶಿಷಾಮಹಿ । ಬ್ರಹ್ಮ । ಇಂದ್ರಾಯ । ವಜ್ರಿಣೇ ।
ಸ್ತುಷೇ । ಊಂ ಇತಿ । ಸು । ವಃ । ನೃಽತಮಾಯ । ಧೃಷ್ಣವೇ || ೧ ||

|| ಸಾಯಣಭಾಷ್ಯಂ ||

ಸಖಾಯೋ ಮಿತ್ರಭೂತಾ ಹೇ ಋತ್ವಿಜಃ ವಜ್ರಿಣೇ ವಜ್ರಹಸ್ತಾಯೇಂದ್ರಾಯ ಬ್ರಹ್ಮ ಕರ್ತವ್ಯಮೇತತ್ಸೂಕ್ತರೂಪಂ ಸ್ತೋತ್ರಮಾ ಶಿಷಾಮಹಿ । ವಯಮಾಶಾಸ್ಮಃ || ಶಾಸು ಅನುಶಿಷ್ಟೌ । ಲುಙಿ ಚ್ಲೇರಙಾದೇಶಃ । ಇತ್ತ್ವಮತ್ವೇ । ವ್ಯತ್ಯಯೇನಾತ್ಮನೇಪದಂ || ತತ್ರ ವಃ ಸರ್ವೇಷಾಮೇವ ಯುಷ್ಮಾಕಮರ್ಥಾಯ ನೃತಮಾಯ ಸರ್ವೇಷಾಂ ನೇತೃತಮಾಯ ಯದ್ವಾ ಸಂಗ್ರಾಮೇಷ್ವಾಯುಧಾದೀನಾಂ ನೇತೃತಮಾಯ ಧೃಷ್ಣವೇ ಶತ್ರೂಣಾಂ ಧರ್ಷಣಶೀಲಾಯ ತಸ್ಮಾ ಇಂದ್ರಾಯಾಹಮೇವ ಉ ಸುಷ್ಠು ಸ್ತುಷೇ । ಸ್ತೌಮಿ ||

| ಪ್ರತಿಪದಾರ್ಥ |

ಸಖಾಯಃ—ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ । ವಜ್ರಿಣೇ—ವಜ್ರಾಯುಧವನ್ನು ಹಿಡಿದಿರುವ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಬ್ರಹ್ಮ—ಸ್ತುತಿಯನ್ನು । ಆ ಶಿಷಾಮಹಿ—ನಾವು ಪ್ರೀತಿಯಿಂದ ಪಠಿಸು

ತ್ರೀವೆ (ಪಠಿಸೋಣ) | ವಃ—ನಿಮ್ಮೆಲ್ಲರ ಹಿತಕ್ಕಾಗಿ | ನೃತಮಾಯ—ನೇತೃಗಳಲ್ಲಿ ಶ್ರೇಷ್ಠನೂ | ಧೃಷ್ಣವೇ—ಶತ್ರುಧರ್ಷಕನೂ ಆದ ಇಂದ್ರನನ್ನು ಕುರಿತು | ಸು - ಅತಿಶಯವಾಗಿ | ಸ್ತುಷೇ—ಸ್ತುತಿಸುತ್ತೇನೆ.

॥ ಭಾವಾರ್ಥ ॥

ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ, ವಜ್ರಾಯುಧವನ್ನು ಹಸ್ತದಲ್ಲಿ ಹಿಡಿದಿರುವ ಇಂದ್ರನನ್ನುದ್ದೇಶಿಸಿ ನಾವು ಪ್ರೀತಿಯಿಂದ ಸ್ತುತಿಯನ್ನು ಪಠಿಸುತ್ತೇವೆ. ನಿಮ್ಮೆಲ್ಲರ ಹಿತಕ್ಕಾಗಿ ನೇತೃಗಳಲ್ಲಿ ಶ್ರೇಷ್ಠನೂ, ಶತ್ರುಧರ್ಷಕನೂ ಆದ ಇಂದ್ರನನ್ನು ಕುರಿತು ಅತಿಶಯವಾಗಿ ಸ್ತುತಿಸುತ್ತೇನೆ.

English Translation.

Let us earnestly, friends, address our prayer to Indra, the wielder of the thunderbolt; for you I praise the chief leader (in battles), the resolute (opposer of foes).

॥ ಸಂಹಿತಾಪಾಠಃ ॥

ಶವಸಾ ಹ್ಯಸಿ ಶ್ರುತೋ ವೃತ್ರಹತ್ಯೇನ ವೃತ್ರಹಾ ।
ಮಘೈರ್ಮಘೋನೋ ಅತಿ ಶೂರ ದಾಶಸಿ ॥ ೨ ॥

॥ ಪದಪಾಠಃ ॥

ಶವಸಾ । ಹಿ । ಅಸಿ । ಶ್ರುತಃ । ವೃತ್ರಽಹತ್ಯೇನ । ವೃತ್ರಽಹಾ ।
ಮಘೈಃ । ಮಘೋನಃ । ಅತಿ । ಶೂರ । ದಾಶಸಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಶವಸಾ ಬಲೇನ ಶ್ರುತಃ ಪ್ರಸಿದ್ಧೋಽಸಿ । ಭವಸಿ । ಹಿ ಪ್ರಸಿದ್ಧೌ । ತದೇವಾಹ । ವೃತ್ರಹತ್ಯೇನ ವೃತ್ರಾಸುರಹನನೇನ ವೃತ್ರಹಾ ವೃತ್ರಹೇತಿ ಪ್ರಸಿದ್ಧೋ ಭವಸಿ । ಶೂರ ಶೌರ್ಯವನ್ ಹೇ ಇಂದ್ರ ಮಘೋನೋ ಮಘವತೋ ಧನವತಃ ಪುರುಷಾನ್ಮಘೈಸ್ತ್ವದೀಯೈರ್ಧನೈರತ್ಯತಿಕ್ರಮ್ಯ ದಾಶಸಿ । ಸ್ತೋತೃಭ್ಯೋಽಸ್ಮಭ್ಯಂ ಪ್ರಯಚ್ಛಸಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಶವಸಾ—ಬಲದಿಂದ | ಶ್ರುತಃ—ಪ್ರಸಿದ್ಧನಾಗಿ | ಅಸಿ ಹಿ—ಆಗಿದ್ದೀಯೆ | ವೃತ್ರಹತ್ಯೇನ—ವೃತ್ರನನ್ನು ಕೊಂದದ್ದರಿಂದ । ವೃತ್ರಹಾ—(ವೃತ್ರನಾಶಕನು) ಎಂಬುದಾಗಿಯೂ ಪ್ರಸಿದ್ಧನಾಗಿದ್ದೀಯೆ | ಶೂರ—ಶೌರ್ಯೋಪೇತನಾದ ಎಲೈ ಇಂದ್ರನೇ | ಮಘೈಃ—ನಿನ್ನ ಧನಗಳಿಂದ | ಮಘೋನಃ—

ಧನವಂತರಾದ ಇತರ ಪುರುಷರಿಗಿಂತಲೂ | ಅತಿ—ಮೀರಿದ ಔದಾರ್ಯವುಳ್ಳವನಾಗಿ | ದಾಶಸಿ— ಸ್ತೋತೃಗಳಿಗೆ ಧನವನ್ನು ಕೊಡುತ್ತೀಯೆ.

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಬಲದಿಂದ ಪ್ರಸಿದ್ಧನಾಗಿದ್ದೀಯೆ ವೃತ್ರನನ್ನು ಕೊಂದದ್ದರಿಂದ ವೃತ್ರನಾಶಕನು ಎಂದೂ ಪ್ರಸಿದ್ಧನಾಗಿದ್ದೀಯೆ ಶೌರ್ಯೋಪೇತನಾದ ಎಲೈ ಇಂದ್ರನೇ, ನಿನ್ನ ಧನಗಳಿಂದ ಧನವಂತರಾದ ಇತರ ಪುರುಷರಿಗಿಂತಲೂ ಮೀರಿದ ಔದಾರ್ಯವುಳ್ಳವನಾಗಿ ಸ್ತೋತೃಗಳಿಗೆ ಧನವನ್ನು ಕೊಡುತ್ತೀಯೆ.

## English Translation.

You are renowned for strength ; from the slaying of Vritra, you are (famed as) Vritrahan : you surpass, hero, the opulent in the donation of your riches.

|| ಸಂಹಿತಾಪಾಠಃ ||

ಸ ನಃ ಸ್ತವಾನ ಆ ಭರ ರಯಿಂ ಚಿತ್ರಶ್ರವಸ್ತಮಂ |
ನಿರೇಕೇ ಚಿದ್ಯೋ ಹರಿವೋ ವಸುರ್ದದಿಃ || ೩ ||

|| ಪದಪಾಠಃ ||

ಸಃ | ನಃ | ಸ್ತವಾನಃ | ಆ | ಭರ | ರಯಿಂ | ಚಿತ್ರಶ್ರವಃऽತಮಂ |
ನಿರೇಕೇ | ಚಿತ್ | ಯಃ | ಹರಿऽವಃ | ವಸುಃ | ದದಿಃ || ೩ ||

|| ಸಾಯಣಭಾಷ್ಯಂ ||

ಹೇ ಇಂದ್ರ ಸ ತಥಾವಿಧಸ್ತ್ವಂ ಸ್ತವಾನೋऽಸ್ಮಾಭಿಃ ಸ್ತೂಯಮಾನಃ ಸಂಶ್ಚಿತ್ರಶ್ರವಸ್ತಮಮತಿಶಯೇನ ನಾನಾವಿಧಾನ್ನೋಪೇತಂ ರಯಿಂ ಪುತ್ರಂ ಧನಂ ವಾ ನೋऽಸ್ಮಭ್ಯಮಾ ಭರ | ಸಂಪಾದಯ | ದೇಹೀತ್ಯರ್ಥಃ | ಹರಿವಃ | ಹರೀ ಅಶ್ವೌ | ತದ್ವನ್ ಹೇ ಇಂದ್ರ ಯಸ್ತ್ವಂ ನಿರೇಕೇ ಚಿನ್ನಿರ್ಗಮನ ಏವ ವಸುಃ ಶತ್ರೂಣಾಂ ವಾಸಯಿತಾ ಭವಸಿ | ತವಾಯುಧನಿರ್ಗಮನಾದೇವ ಶತ್ರವಃ ಪಲಾಯಂತೇ ಖಲು | ಕಿಂಚ ತ್ವಂ ದದಿರ್ಧನಾನಾಂ ದಾತಾ ಭವಸಿ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ಸಃ—ಪ್ರಸಿದ್ಧನಾದ ನೀನು | ಸ್ತವಾನಃ— ನಮ್ಮಿಂದ ಸ್ತುತಿಸಲ್ಪಟ್ಟು | ಚಿತ್ರಶ್ರವಸ್ತಮಂ—ನಾನಾವಿಧಗಳಾದ | ರಯಿಂ—ಪುತ್ರಾದಿಧನವನ್ನು | ನಃ—ನಮಗೆ | ಆ ಭರ—ಸಂಪಾದಿಸಿ

**ಕೊಡು** | **ಹರಿವಃ**— ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ | **ಯಃ**— ಯಾವ ನೀನು | **ನಿರೇಕೇ ಚಿತ್**— ಬಾಣಪ್ರಯೋಗದಿಂದಲೇ | **ವಸುಃ**— ಶತ್ರುಗಳನ್ನು ಓಡಿಸುವೆಯೋ ಅಂತಹ ನೀನು | **ದದಿಃ**— ಧನ ಪ್ರದನಾಗಿದ್ದೀಯೆ.

|| ಭಾವಾರ್ಥ ||

ಎಲೈ ಇಂದ್ರನೇ, ಪ್ರಸಿದ್ಧನಾದ ನೀನು ನಮ್ಮಿಂದ ಸ್ತುತಿಸಲ್ಪಟ್ಟು ಅದಕ್ಕೆ ಪ್ರತಿಫಲವಾಗಿ ನಾನಾವಿಧಗಳಾದ ಪುತ್ರಾದಿಧನವನ್ನು ನಮಗೆ ಸಂಪಾದಿಸಿಕೊಡು ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ಯಾವ ನೀನು ಬಾಣಪ್ರಯೋಗದಿಂದಲೇ ಶತ್ರುಗಳನ್ನು ಓಡಿಸುವೆಯೋ ಅಂತಹ ನೀನು ಉದಾರವಾಗಿ ಧನಪ್ರದನಾಗಿದ್ದೀಯೆ.

English Translation.

Praised by us, betow upon us riches of wonderful variety; you the lord of steeds, who, at the issue (of your weapons) put your enemies to flight, are the donor (of treasures).

|| ಸಂಹಿತಾಪಾಠಃ ||

ಆ ನಿರೇಕಮುತ ಪ್ರಿಯಮಿಂದ್ರ ದರ್ಷಿ ಜನಾನಾಂ |
ಧೃಷತಾ ಧೃಷ್ಣೋ ಸ್ತವಮಾನ ಆ ಭರ || ೪ ||

|| ಪದಪಾಠಃ ||

ಆ | ನಿರೇಕಂ | ಉತ | ಪ್ರಿಯಂ | ಇಂದ್ರ | ದರ್ಷಿ | ಜನಾನಾಂ |
ಧೃಷತಾ | ಧೃಷ್ಣೋ ಇತಿ | ಸ್ತವಮಾನಃ | ಆ | ಭರ || ೪ ||

| ಸಾಯಣಭಾಷ್ಯಂ |

**ಹೇ ಇಂದ್ರ ಉತಾಪಿ ಚ ಪ್ರಿಯಂ ಪ್ರೀಣನಾತ್ ಪ್ರಿಯತಮಂ ನಿರೇಕಂ | ನಿರೇಕಂ ಧನಂ ಭವತಿ ನಿರೇಚನಾನ್ನಿರ್ಗಮನಾದ್ವೇತಿ | ತದ್ಧನಂ ಜನಾನಾಂ ಸ್ತೋತೄಣಾಮಸ್ಮಾಕಮಾ ದರ್ಷಿ | ಆವಿದಾರಯ | ವಿವೃತಂ ಕುರು || ದೄ ವಿದಾರಣೇ ಛಾಂದಸೋ ವಿಕರಣಸ್ಯ ಲುಕ್ || ವಿವೃತ್ಯ ಚ ಧೃಷ್ಣೋ ಧರ್ಷಣಶೀಲ ಹೇ ಇಂದ್ರ ಸ್ತವಮಾನಃ ಸ್ತೋತೃಭಿರಸ್ಮಾಭಿಃ ಸ್ತೂಯಮಾನಃ ಸನ್ ಧೃಷತಾ ಧೃಷ್ಟೇನ ಮನಸಾ ಸಹಾ ಭರ | ತದ್ಧನಮಸ್ಮಭ್ಯಂ ದೇಹಿ ||**

| ಪ್ರತಿಪದಾರ್ಥ |

**ಇಂದ್ರ**— ಎಲೈ ಇಂದ್ರನೇ | **ಉತ**— ಮತ್ತು | **ಪ್ರಿಯಂ**— ಪ್ರಿಯಕರವಾದ | **ನಿರೇಕಂ**— ಧನವನ್ನು | **ಜನಾನಾಂ**— ಸ್ತೋತೃಗಳಾದ ನಮ್ಮ ಮುಂದೆ | **ಆ ದರ್ಷಿ**— ಪ್ರಕಾಶಪಡಿಸು | **ಧೃಷ್ಣೋ**— ಶತ್ರುಧರ್ಷಕನಾದ

ಎಲೈ ಇಂದ್ರನೇ । **ಸ್ತವಮಾನಃ**— ನಮ್ಮಿಂದ ಸ್ತುತಿಸಲ್ಪಟ್ಟವನಾಗಿ । **ಧೃಷತಾ**— ದೃಢವಾದ ಮನಸ್ಸಿನಿಂದ । **ಆ ಭರ** – ಆ ಧನವನ್ನು ನಮಗೆ ತಂದೊದಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಪ್ರಿಯಕರವಾದ ಧನವನ್ನು ಸ್ತೋತೃಗಳಾದ ನಮ್ಮ ಮುಂದೆ ಪ್ರಕಾಶಪಡಿಸು. ಶತ್ರುಧರ್ಷಕನಾದ ಎಲೈ ಇಂದ್ರನೇ, ನಮ್ಮಿಂದ ಸ್ತುತಿಸಲ್ಪಟ್ಟವನಾಗಿ ದೃಢವಾದ ಮನಸ್ಸಿನಿಂದ ನಮಗೆ ಧನವನ್ನು ತಂದೊದಗಿಸು.

English Translation.

Burst open to your worshippers, Indra, the highly prized wealth: glorified by us, you who are endowed with resolution, bring (us wealth) with resolution, bring (us wealth) with a resolute (mind).

॥ ಸಂಹಿತಾಪಾಠಃ ॥

ನ ತೇ ಸವ್ಯಂ ನ ದಕ್ಷಿಣಂ ಹಸ್ತಂ ವರಂತ ಆಮುರಃ ।
ನ ಪರಿಬಾಧೋ ಹರಿವೋ ಗವಿಷ್ಟಿಷು ॥ ೫ ॥

॥ ಪದಪಾಠಃ ॥

ನ । ತೇ । ಸವ್ಯಂ । ನ । ದಕ್ಷಿಣಂ । ಹಸ್ತಂ । ವರಂತೇ । ಆऽಮುರಃ ।
ನ । ಪರಿऽಬಾಧಃ । ಹರಿऽವಃ । ಗೋಽಇಷ್ಟಿಷು ॥ ೫ ॥

॥ ಸಾಯಣಭಾಷ್ಯಂ ॥

ಹೇ ಹರಿವೋಽಶ್ವವನ್ನಿಂದ್ರ ಆಮುರಃ ಸಂಗ್ರಾಮ ಅಭಿಮುಖ್ಯೇನ ಶತ್ರೂಣಾಂ ಮಾರಕಾಃ ಪ್ರತಿಯೋದ್ಧಾರೋ ಗವಿಷ್ಟಿಷು ಪಣಿಭಿರಪಹೃತಾನಾಮಂಗಿರಸಾಂ ಗವಾಮನ್ವೇಷಣೇಷು ತೇ ತವ ಸವ್ಯಂ ಹಸ್ತಂ ನ ವರಂತೇ । ನ ನಿವಾರಯಂತಿ । ತೇಷಾಮಾಯುಧಾದಿಭಿರ್ನ ನಿವಾರ್ಯತೆ ಇತ್ಯರ್ಥಃ । ತಥಾ ದಕ್ಷಿಣಂ ಹಸ್ತಂ ಚ ನ ನಿವಾರಯಂತಿ । ಕಿಂಚ ಪರಿಬಾಧಃ ಪರಿತೋ ಬಾಧಮಾನಾ ವೃತ್ರಾದಯೋಽಸುರಾಶ್ಚ ತವ ಸವ್ಯದಕ್ಷಿಣಹಸ್ತೌ ನ ನಿವಾರಯಂತಿ । ಸಂಗ್ರಾಮೇಷು ತ್ವಯಾ ಸರ್ವೇ ಶತ್ರವಶ್ಛಿನ್ನಹಸ್ತಾಃ ಸರ್ವತೋ ಗಚ್ಛಂತು । ತ್ವಂ ತು ಶೈರಬಾಧಿತೋ ವರ್ತಸ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಹರಿವಃ**— ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ । **ಆ ಮುರಃ**— ಸಂಗ್ರಾಮದಲ್ಲಿ ನಿರತರಾದ ಯೋಧರು (ಶತ್ರುಗಳು) । **ಗವಿಷ್ಟಿಷು**— ನೀನು ಗೋವುಗಳನ್ನು ಹುಡುಕುವ ಕಾಲದಲ್ಲಿ । **ತೇ**— ನಿನ್ನ । **ಸವ್ಯಂ**

**ಹಸ್ತಂ**—ಎಡಭಾಗದ ಹಸ್ತವನ್ನು । **ನ ವರಂತೇ**—ನಿಷೇಧಿಸಲಾರರು । **ದಕ್ಷಿಣಂ**—ಬಲಭಾಗದ ಹಸ್ತವನ್ನೂ । **ನ**—ತಡೆಯಲಾರರು । **ಪರಿಬಾಧಃ**—ನಿನ್ನನ್ನು ಹಿಂಸಿಸಲು ಪ್ರಯತ್ನಿಸಿದ ಶತ್ರುಗಳಾರೂ । **ನ**—ನಿನ್ನನ್ನು ತಡೆಗಟ್ಟಲಾರರು.

॥ ಭಾವಾರ್ಥ ॥

ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ಸಂಗ್ರಾಮದಲ್ಲಿ ನಿರತರಾದ ನಿನ್ನ ಶತ್ರುಯೋಧರು, ನೀನು ಗೋವುಗಳನ್ನು ಹುಡುಕುವ ಕಾಲದಲ್ಲಿ ನಿನ್ನ ಎಡಭಾಗದ ಹಸ್ತವನ್ನು ನಿಷೇಧಿಸಲಾರರು. ಬಲಭಾಗದ ಹಸ್ತವನ್ನೂ ತಡೆಯಲಾರರು ನಿನ್ನನ್ನು ಹಿಂಸಿಸಲು ಪ್ರಯತ್ನಿಸಿದ ಶತ್ರುಗಳಾರೂ ನಿನ್ನನ್ನು ತಡೆಗಟ್ಟಲಾರರು.

English Translation.

Lord of steeds, in the recovery of the cattle the opponents resist not your left hand nor your right, your enemies (resist you) not.

॥ ಸಂಹಿತಾಪಾಠಃ ॥

ಆ ತ್ವಾ ಗೋಭಿರಿವ ವ್ರಜಂ ಗೀರ್ಭಿರ್ಋಣೋಮ್ಯದ್ರಿವಃ ।
ಆ ಸ್ಮಾ ಕಾಮಂ ಜರಿತುರಾ ಮನಃ ಪೃಣ ॥ ೬ ॥

॥ ಪದಪಾಠಃ ॥

ಆ । ತ್ವಾ । ಗೋಭಿಃऽಇವ । ವ್ರಜಂ । ಗೀಃऽಭಿಃ । ಋಣೋಮಿ । ಅದ್ರಿऽವಃ ।
ಆ । ಸ್ಮ । ಕಾಮಂ । ಜರಿತುಃ । ಆ । ಮನಃ । ಪೃಣ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಅದ್ರಿವೋ ವಜ್ರವನ್ನಿಂದ್ರ ಗೀರ್ಭಿಃ ಸ್ತುತಿಲಕ್ಷಣಾಭಿರ್ವಾಗ್ಭಿಸ್ತ್ವಾ ತ್ವಾಮಾ ಋಣೋಮಿ । ಪ್ರಾಪ್ನೋಮಿ ॥ ಋಣು ಗತೌ । ತನಾದಿಃ ॥ ತತ್ರ ದೃಷ್ಟಾಂತಃ । ಗೋಭಿರಿವ । ಯಥಾ ಗೋಪಾಲೋ ಗೋಭಿರ್ವ್ರಜಂ ಗೋಷ್ಠಂ ಗಚ್ಛತಿ ತದ್ವತ್ತ್ವಾಂ ಸ್ತುತಿಭಿಃ ಪ್ರಾಪ್ನೋಮೀತ್ಯರ್ಥಃ । ತತಸ್ತ್ವಂ ಜರಿತುಃ ಸ್ತೋತುರ್ಮಮ ಕಾಮಂ ಧನಾದಿವಿಷಯಮಾ ಪೃಣ । ಆಪೂರಯ । ತಥಾ ಮನೋ ಮದೀಯಂ ಮಾನಸಂ ಧನಾದಿಪ್ರದಾನೇನಾಪೂರಯ ॥**

॥ ಪ್ರತಿಪದಾರ್ಥ ॥

**ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಗೋಭಿಃ**—ಗೋವುಗಳೊಡಗೂಡಿದ ಗೋಪಾಲನು । **ವ್ರಜಂ ಇವ**—ಕೊಟ್ಟಿಗೆಯನ್ನು ಸೇರುವಂತೆ । **ಗೀರ್ಭಿಃ**—ಸ್ತುತಿರೂಪವಾದ ವಾಕ್ಕುಗಳಿಂದ ।

**ತ್ವಾ**—ನಿನ್ನನ್ನು । **ಆ ಚ್ಯುತೋಮಿ**—ಭಕ್ತಿಯಿಂದ ಸಮೀಪಿಸುತ್ತೇನೆ । **ಜರಿತುಃ**—ಸ್ತುತಿಕರ್ತನಾದ ನನ್ನ । **ಕಾಮಂ**—ಧನಾದಿವಿಷಯಕವಾದ ಇಚ್ಛೆಯನ್ನು । **ಆ ಪೃಣ**—ಪೂರೈಸು । **ಮನಃ ಆ**—ನನ್ನ ಮನಸ್ಸನ್ನೂ ಸಂತೋಷಗೊಳಿಸು.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಗೋವುಗಳಿಂದ ಕೂಡಿದ ಗೋಪಾಲನು ಕೊಟ್ಟಿಗೆಯನ್ನು ಸೇರುವಂತೆ ಸ್ತುತಿರೂಪವಾದ ವಾಕ್ಯುಗಳಿಂದ ನಿನ್ನನ್ನು ಭಕ್ತಿಯಿಂದ ಸಮೀಪಿಸುತ್ತೇನೆ. ಸ್ತುತಿಕರ್ತನಾದ ನನ್ನ ಧನಾದಿವಿಷಯಕವಾದ ಇಚ್ಛೆಯನ್ನು ಪೂರೈಸು. ನನ್ನ ಮನಸ್ಸನ್ನೂ ಸಂತೋಷಗೊಳಿಸು.

## English Translation.

I approach you, thunderer, with praises, as (a cowherd goes) with cattle to the pasture; gratify the desire, satisfy the mind of your adorer.

॥ ಸಂಹಿತಾಪಾಠಃ ॥

ವಿಶ್ವಾನಿ ವಿಶ್ವಮನಸೋ ಧಿಯಾ ನೋ ವೃತ್ರಹಂತಮ ।
ಉಗ್ರ ಪ್ರಣೇತರಧಿ ಷೂ ವಸೋ ಗಹಿ ॥ ೭ ॥

॥ ಪದಪಾಠಃ ॥

ವಿಶ್ವಾನಿ । ವಿಶ್ವಽಮನಸಃ । ಧಿಯಾ । ನಃ । ವೃತ್ರಹನ್ಽತಮ ।
ಉಗ್ರ । ಪ್ರಣೇತರಿತಿ ಪ್ರಽನೇತಃ । ಅಧಿ । ಸು । ವಸೋ ಇತಿ । ಗಹಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹಂತಮಾತಿಶಯೇನ ವೃತ್ರಾಸುರಸ್ಯೋಪದ್ರವಾಣಾಂ ವಾ ಹಂತಃ । ನಾದ್ಯಸ್ಯೇತಿ ತಮಪೋ ನುಡಾಗಮಃ ॥ ಕೀದೃಶ । ಉಗ್ರೋದ್ಗೂರ್ಣಬಲ ಪ್ರಣೇತಃ ಸ್ತೋತೄಣಾಂ ಪ್ರಕರ್ಷೇಣ ಧನಾದೇರ್ನೇತಃ ॥ ಆಮಂತ್ರಿತ ಇತ್ಯುಗ್ರೇತ್ಯಸ್ಯಾವಿದ್ಯಮಾನವದ್ಭಾವಪ್ರತಿಷೇಧಃ ॥ ತಥಾವಿಧ ವಸೋ ಶತ್ರೂಣಾಂ ವಾಸಯಿತರಿಂದ್ರ ನಃ । ಪೂಜಾಯಾಂ ಬಹುವಚನಂ । ವಿಶ್ವಮನಸ ಏತನ್ನಾಮ್ನೋ ಮಮ ವಿಶ್ವಾನಿ ಸರ್ವಾಣಿ ಸ್ತೋತ್ರಾಣಿ ಕರ್ಮಾಣಿ ವಾ ಧಿಯಾ ಮನಸಾ ಸು ಸುಷ್ಠ್ವಧಿ ಗಹಿ । ಅಧಿಗಚ್ಛ । ಸ್ತುತ್ಯತಯಾ ಯಷ್ಟವ್ಯತಯಾ ವಾ ಮನೋವೇಗೇನ ಗಚ್ಛೇತ್ಯರ್ಥಃ ॥ ಗಮೇರ್ಲೋಟಿ ಛಾಂದಸಃ ಶಪೋ ಲುಕ್ । ಹೇಜ್ವದ್ಭಾವಾದನುದಾತ್ತೋಪದೇಶೇತ್ಯನುನಾಸಿಕಲೋಪಃ ॥

॥ ಪ್ರತಿಪದಾರ್ಥ ॥

**ವೃತ್ರಹಂತಮ**—ಅತಿಶಯವಾಗಿ ವೃತ್ರನನ್ನು ಕೊಲ್ಲತಕ್ಕವನೂ। **ಉಗ್ರ**—ಅತ್ಯಧಿಕವಾದ ಬಲವುಳ್ಳವನೂ। **ಪ್ರಣೀಃ**—ಸ್ತುತಿಕರ್ತರಿಗೆ ಉತ್ತಮನಾದ ನೇತೃವೂ। **ವಸೋ**—ಶತ್ರುಗಳನ್ನು ಉರುಳಿಸುವವನೂ ಆದ ಎಲೈ ಇಂದ್ರನೇ। **ವಿಶ್ವಮನಸಃ**—ವಿಶ್ವಮನಸ್ಸೆಂಬ ಹೆಸರುಳ್ಳ। **ನಃ**—ನನ್ನ। **ವಿಶ್ವಾನಿ**—ಸಮಸ್ತವಾದ ಕರ್ಮಗಳಿಗೂ ಅಭಿಮುಖನಾಗಿ। **ಧಿಯಾ**—ಮನೋವೇಗದಿಂದ। **ಸು**—ಶೀಘ್ರವಾಗಿ। **ಅಧಿ ಗಹಿ**—ದಯಮಾಡು.

॥ ಭಾವಾರ್ಥ ॥

ಅತಿಶಯವಾಗಿ ಶತ್ರುಗಳನ್ನು ಕೊಲ್ಲತಕ್ಕವನೂ, ಅತ್ಯಧಿಕವಾದ ಬಲವುಳ್ಳವನೂ, ಸ್ತುತಿಕರ್ತರಿಗೆ ಉತ್ತಮವಾದ ನೇತೃವೂ ಶತ್ರುಗಳನ್ನು ಉರುಳಿಸುವವನೂ ಆದ ಎಲೈ ಇಂದ್ರನೇ, ವಿಶ್ವಮನಸ್ಸೆಂಬ ಹೆಸರುಳ್ಳ ನನ್ನ ಸಮಸ್ತವಾದ ಕರ್ಮಗಳಿಗೂ ಅಭಿಮುಖನಾಗಿ ಮನೋವೇಗದಿಂದ ಶೀಘ್ರವಾಗಿ ದಯಮಾಡು.

## English Translation.

Fierce destroyer of Vritra, bringer (of wealth to your worshippers), subduer of enemies, preside over all (the offerings) of us, Vishwamanas, with a (favourable) mind.

॥ ಸಂಹಿತಾಪಾಠಃ ॥

ವಯಂ ತೇ ಅಸ್ಯ ವೃತ್ರಹನ್ವಿದ್ಯಾಮ ಶೂರ ನವ್ಯಸಃ ।
ವಸೋಃ ಸ್ಪಾರ್ಹಸ್ಯ ಪುರುಹೂತ ರಾಧಸಃ ॥ ೮ ॥

॥ ಪದಪಾಠಃ ॥

ವಯಂ । ತೇ । ಅಸ್ಯ । ವೃತ್ರಽಹನ್ । ವಿದ್ಯಾಮ । ಶೂರ । ನವ್ಯಸಃ ।
ವಸೋಃ । ಸ್ಪಾರ್ಹಸ್ಯ । ಪುರುಽಹೂತ । ರಾಧಸಃ ॥ ೮ ॥

॥ ಸಾಯಣಭಾಷ್ಯಂ ॥

**ಹೇ ವೃತ್ರಹನ್ ವೃತ್ರಸ್ಯ ಹಂತಃ ಶೂರ ಬಲವನ್ ಪುರುಹೂತ ಪುರುಭಿರ್ಬಹುಭಿರಾಹ್ವಾತವ್ಯೇಂದ್ರ ನವ್ಯಸೋ ನವೀಯಸಃ ॥ ಈಯಸುನ ಈಕಾರಲೋಪಶ್ಛಾಂದಸಃ ॥ ನವತರಂ ಸ್ಪಾರ್ಹಸ್ಯ ಸ್ಪೃಹಣೀಯಂ ರಾಧಸಃ ॥ ರಾಧ ಸಾಧ ಸಂಸಿದ್ಧೌ ॥ ಕರ್ಮಾದೇಃ ಸಂಸಾಧಕಂ ತೇ ತ್ವದೀಯಮಸ್ಯ ವಸೋಃ ॥ ಕ್ರಿಯಾಗ್ರಹಣಂ ಕರ್ತವ್ಯಮಿತಿ ವಸೋಃ ಸಂಪ್ರದಾನಸಂಜ್ಞಾ । ಚತುರ್ಥ್ಯರ್ಥೇ ಬಹುಲಂ ಛಂದಸೀತಿ ವಸೋಃ ಷಷ್ಠೀ ॥ ತ್ವದೀಯಮಿದಂ ಪರಿದೃಶ್ಯಮಾನಂ ಧನಂ ವಯಂ ವಿದ್ಯಾಮ । ಲಭೇಮಹಿ ॥ ವಿದ್ಲೃ ಲಾಭೇ । ಅದಾದಿಕಃ । ಛಾಂದಸೋ ವಿಕರಣಸ್ಯ ಲುಕ್ ॥**

॥ ಪ್ರತಿಪದಾರ್ಥ ॥

**ವೃತ್ರಹನ್**—ಶತ್ರುನಾಶಕನೂ । **ಶೂರ**—ಶಕ್ತಿಯುತನೂ । **ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನೂ ಆದ ಎಲೈ ಇಂದ್ರನೇ । **ನವ್ಯಸಃ**—ನೂತನವಾದುದೂ । **ಸ್ಪಾರ್ಹಸ್ಯ**—ಆಕರ್ಷಕವಾದುದೂ । **ರಾಧಸಃ**—ಸುಖಸಾಧಕವಾದುದೂ ಆದ । **ತೇ**—ನಿನ್ನ । **ಅಸ್ಯ ವಸೋಃ**—ಈ ಧನವನ್ನು । **ವಯಂ**—ನಾವು । **ವಿದ್ಯಾಮ**—ಹೊಂದುವಂತಾಗಲಿ.

॥ ಭಾವಾರ್ಥ ॥

ಶತ್ರುನಾಶಕನೂ, ಶಕ್ತಿಯುತನೂ, ಅನೇಕರ ಆಹ್ವಾನಕ್ಕೆ ಪಾತ್ರನೂ ಆದ ಎಲೈ ಇಂದ್ರನೇ, ನೂತನವಾದುದೂ, ಆಕರ್ಷಕವಾದುದೂ, ಸುಖಸಾಧಕವಾದುದೂ ಆದ ನಿನ್ನ ಈ ಧನವನ್ನು ನಾವು ಹೊಂದುವಂತಾಗಲಿ.

## English Translation.

May we, hero, slayer of Vritra, invoked of many, become possessed of this your new, desirable, and happiness-producing wealth.

॥ ಸಂಹಿತಾಪಾಠಃ ॥

ಇಂದ್ರ ಯಥಾ ಹ್ಯಸ್ತಿ ತೇಽಪರೀತಂ ನೃತೋ ಶವಃ ।
ಅಮೃಕ್ತಾ ರಾತಿಃ ಪುರುಹೂತ ದಾಶುಷೇ ॥ ೯ ॥

॥ ಪದಪಾಠಃ ॥

ಇಂದ್ರ । ಯಥಾ । ಹಿ । ಅಸ್ತಿ । ತೇ । ಅಪರಿಽಇತಂ । ನೃತೋ ಇತಿ । ಶವಃ ।
ಅಮೃಕ್ತಾ । ರಾತಿಃ । ಪುರುಽಹೂತ । ದಾಶುಷೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ನೃತೋ ಸರ್ವಸ್ಯಾಂತರ್ಯಾಮಿತಯಾ ನರ್ತಯಿತರಿಂದ್ರ ತೇ ತ್ವದೀಯಂ ಶವೋ ಬಲಂ ಯಥಾಪರೀತಮಸ್ತಿ ಶತ್ರುಭಿರಪರಿಗತಮವ್ಯಾಪ್ತಂ ಭವತಿ । ಹಿ ಪ್ರಸಿದ್ಧೌ । ತಥಾ ಹೇ ಪುರುಹೂತ ಪುರುಭಿರ್ಬಹುಭಿರಾಹೂತೇಂದ್ರ ದಾಶುಷೇ ಹವಿರ್ದತ್ತವತೇ ಯಜಮಾನಾಯ ರಾತಿರ್ಧನಾದಿದಾನಮಮೃಕ್ತಾ ಶತ್ರುಭಿರಹಿಂಸಿತಂ ಭವತಿ । ತ್ವತ್ತೋ ಲಬ್ಧಂ ಯಜಮಾನಸ್ಯ ಧನಂ ಶತ್ರವೋ ನ ಹಿಂಸಂತಿ । ಯಥಾ ತ್ವದೀಯಬಲಸ್ಯ ರಕ್ಷಕ ಏವಂ ತಸ್ಯ ಧನಸ್ಯಾಪಿ ರಕ್ಷಕ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ನೃತೋ**—ಎಲ್ಲರಲ್ಲಿಯೂ ಅಂತರ್ಯಾಮಿಯಾಗಿದ್ದು ಎಲ್ಲರನ್ನೂ ಪ್ರೇರಿಸುವ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ಶವಃ**—ಬಲವು । **ಯಥಾ**—ಯಾವ ರೀತಿಯಲ್ಲಿ । **ಅಪರೀತಂ**—ಶತ್ರುಗಳಿಗೆ ಅಪ್ರತಿಹತವಾಗಿ ।

**ಅಸ್ತಿ ಹಿ**—ಇರುವುದೋ (ಅದೇ ರೀತಿಯಲ್ಲಿ) | **ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ | **ದಾತುಷೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ನೀನು ಕೊಡುವ | **ರಾತಿಃ**—ಧನವು | **ಅಮೃಕ್ತಾ**—ಶತ್ರುಗಳ ಹಿಂಸೆಗೆ ಸಿಕ್ಕುವುದಿಲ್ಲ.

|| ಭಾವಾರ್ಥ ||

ಎಲ್ಲರಲ್ಲಿಯೂ ಅಂತರ್ಯಾಮಿಯಾಗಿದ್ದು ಎಲ್ಲರನ್ನೂ ಪ್ರೇರಿಸುವ ಎಲೈ ಇಂದ್ರನೇ, ನಿನ್ನ ಬಲವು ಯಾವ್ಯ ರೀತಿಯಲ್ಲಿ ಶತ್ರುಗಳಿಗೆ ಅಪ್ರತಿಹತವಾಗಿರುವುದೋ ಅದೇ ರೀತಿಯಲ್ಲಿ, ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೆ ಇಂದ್ರನೇ, ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ನೀನು ಕೊಡುವ ಧನವು ಶತ್ರುಗಳ ಹಿಂಸೆಗೆ ಸಿಕ್ಕುವುದಿಲ್ಲ

English Translation.

As Indra, inspirer (of men), your strength is irresistible, (so) invoked of many, your munificence to the donor (of oblations) cannot be marred.

|| ಸಂಹಿತಾಪಾಠಃ ||

ಆ ವೃಷಸ್ವ ಮಹಾಮಹ ಮಹೇ ನೃತಮ ರಾಧಸೇ |
ದೃಳ್ಹಶ್ಚಿದ್ದೃಹ್ಯ ಮಘವನ್ಮಘತ್ತಯೇ || ೧೦ ||

|| ಪದಪಾಠಃ ||

ಆ | ವೃಷಸ್ವ | ಮಹಾಽಮಹ | ಮಹೇ | ನೃಽತಮ | ರಾಧಸೇ |
ದೃಳ್ಹಃ | ಚಿತ್ | ದೃಹ್ಯ | ಮಘಽವನ್ | ಮಘತ್ತಯೇ || ೧೦ ||

| ಸಾಯಣಭಾಷ್ಯಂ |

**ಹೇ ಮಹಾಮಹಾತಿಶಯೇನ ಸರ್ವೈಃ ಪೂಜನೀಯ ನೃತಮ ನೇತೃತಮೇಂದ್ರ ಮಹೇ ಮಹತೇ ರಾಧಸೇ ಶತ್ರುಧನಾನಾಂ ಸಂಸಾಧಕಾಯ ಬಲಾಯ ಬಲಾರ್ಥಮಾ ವೃಷಸ್ವ | ಸ್ತೋಽದರಮಾಸಿಂಚ | ಸೋಮಂ ಪಿಬೇತ್ಯರ್ಥಃ | ಹೇ ಮಘವನ್ ಧನವನ್ನಿಂದ್ರ ಸೋಮಪಾನೇನ ಮತ್ತಃ ಸನ್ ದೃಳ್ಹಶ್ಚಿದ್ದೃಢಾನಿ ಪರೈರಬಾಧಿತಾನ್ಯಪಿ ಶತ್ರುಪುರಾಣಿ ಮಘತ್ತಯೇ ಮಘಾನಾಂ ಧನಾನಾಂ ಲಾಭಾಯ ದೃಹ್ಯ | ಬಿಭಾಂಸ | ವಿದಾರಯೇತ್ಯರ್ಥಃ ||**

| ಪ್ರತಿಪದಾರ್ಥ |

**ಮಹಾಮಹ**—ಅತ್ಯತಿಶಯವಾದ ಪೂಜೆಗೆ ಯೋಗ್ಯನೂ | **ನೃತಮ**—ಶ್ರೇಷ್ಠವಾದ ನೇತೃವೂ ಆದ ಎಲೈ ಇಂದ್ರನೇ | **ಮಹೇ**—ಮಹತ್ತಾದ | **ರಾಧಸೇ**—ಶತ್ರುಧನವನ್ನು ಅಪಹರಿಸಲು (ಶಕ್ತಿಯನ್ನು ಕೊಡುವ

**ಸೋಮವನ್ನು** ಪಾನಮಾಡಲು) | **ಆ ವೃಷಸ್ವ**—ನಿನ್ನ ಉದರವನ್ನು ತೆರೆದು ಸೋಮವನ್ನು ಪಾನಮಾಡು | **ಮಘವನ್**—ಧನವಂತನಾದ ಎಲೈ ಇಂದ್ರನೇ | **ದೃಳ್ಹಾ ಚಿತ್**—ಅತಿದೃಢವಾದ ಶತ್ರುಪಟ್ಟಣಗಳನ್ನೂ | **ಮಘವತ್ತಯೇ**—ಶತ್ರುಧನದ ಅಪಹಾರಕ್ಕಾಗಿ | **ದೃಹ್ಯ**—ನಾಶಪಡಿಸು.

॥ ಭಾವಾರ್ಥ ॥

ಅತ್ಯತಿಶಯವಾದ ಪೂಜೆಗೆ ಯೋಗ್ಯನೂ, ಶ್ರೇಷ್ಠವಾದ ನೇತೃವೂ ಆದ ಎಲೈ ಇಂದ್ರನೇ, ಮಹತ್ತಾದ ಶತ್ರುಧನವನ್ನು ಅಪಹರಿಸಲು ಶಕ್ತಿದಾಯಕವಾದ ಸೋಮವನ್ನು ಪಾನಮಾಡಲು ನಿನ್ನ ಉದರವನ್ನು ತೆರೆ. ಸೋಮವನ್ನು ಪಾನಮಾಡು. ಧನವಂತನಾದ ಎಲೈ ಇಂದ್ರನೇ, ಅತಿ ದೃಢವಾದ ಶತ್ರುಪಟ್ಟಣಗಳನ್ನೂ ಶತ್ರುಧನದ ಅಪಹಾರಕ್ಕಾಗಿ ನಾಶಪಡಿಸು.

English Translation.

Most adorable, chief leader (of men), invigorate (yourself with the Soma) for (the conquest of) great wealth : consume, Magavan, the strong (cities of the Asuras) for the rich spoil.

॥ ಸಂಹಿತಾಪಾಠಃ ॥

ನೂ ಅನ್ಯತ್ರಾ ಚಿದದ್ರಿವಸ್ತ್ವನ್ನೋ ಜಗ್ಮುರಾಶಸಃ |
ಮಘವಞ್ಛಗ್ಧಿ ತವ ತನ್ನ ಊತಿಭಿಃ || ೧೧ ||

|| ಪದಪಾಠಃ ||

ನು | ಅನ್ಯತ್ರ | ಚಿತ್ | ಅದ್ರಿಽವಃ | ತ್ವತ್ | ನಃ | ಜಗ್ಮುಃ | ಆಽಶಸಃ |
ಮಘಽವನ್ | ಶಗ್ಧಿ | ತವ | ತತ್ | ನಃ | ಊತಿಽಭಿಃ || ೧೧ ||

|| ಸಾಯಣಭಾಷ್ಯಂ ||

**ಹೇ ಅದ್ರಿವೋ ವಜ್ರವನ್ನಿಂದ್ರ ತ್ವಂ ಧನವಾನ್ ದಾತಾ ಚೇತ್ಯಪರಿಜ್ಞಾಯ ನೋಽಸ್ಮದೀಯಾನ್ಯಾಶಸ ಆಶಂಸನಾನ್ಯಭಿಲಾಷಾಸ್ತ್ವತ್ತ್ವತ್ತೋಽನ್ಯತ್ರ ದೇವಾದೌ ನೂ ಚಿತ್ ಪುರಾ ಜಗ್ಮುಃ | ಅಗಚ್ಛನ್ | ತತ್ರ ಫಲಂ ನಾಲಭಂತ | ಇದಾನೀಂ ತ್ವಂ ಧನವಾನ್ ದಾನಶೀಲ ಇತ್ಯಸ್ಮಾಭಿರ್ಜ್ಞಾತಂ | ಅತ ಏವ ಹೇ ಮಘವನ್ ಧನವನ್ನಿಂದ್ರ ತವ ತ್ವದೀಯಂ ತಚ್ಛತ್ರುಪುರವಿದಾರಣಲಬ್ಧಂ ಧನಮೂತಿಭಿಸ್ತ್ವದ್ರಕ್ಷಣೈರ್ನೋಽಸ್ಮಭ್ಯಂ ಶಗ್ಧಿ | ದೇಹಿ || ಶಗ್ಧೀತಿ ದಾನಕರ್ಮಾ | ಶಕ್ನೋತೇರ್ಲೋಟಿ ಛಾಂದಸೋ ವಿಕರಣಸ್ಯ ಲುಕ್ ||**

॥ ಪ್ರತಿಪದಾರ್ಥ ॥

**ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ (ನೀನು ಧನದಾತೃವೆಂದು ತಿಳಿಯುವುದಕ್ಕೆ ಮೊದಲು) । **ನಃ**—ನಮ್ಮ । **ಆಶಸಃ**—ಅಭಿಲಾಷೆಗಳು । **ತ್ವತ್**—ನಿನಗಿಂತಲೂ । **ಅನ್ಯತ್ರ—ಬೇರೆ** ದೇವತೆಗಳಲ್ಲಿ । **ನೂ ಚಿತ್**—ಪೂರ್ವದಲ್ಲಿ । **ಜಗ್ಮುಃ**—ಹೋಗಿ ಸೇರಿದವು (ನೀನೇ ಧನಪ್ರದನೆಂದು ಈಗ ತಾನೇ ತಿಳಿಯಿತು ಆದುದರಿಂದ) । **ಮಘವನ್**—ಧನವಂತನಾದ ಎಲೈ ಇಂದ್ರನೇ । **ತವ**—ನಿನ್ನ । **ತತ್—**ಶತ್ರುಗಳಿಂದ ಲಬ್ಧವಾದ ಧನವನ್ನು । **ಊತಿಭಿಃ**—ನಿನ್ನ ರಕ್ಷಣೆಗಳೊಡನೆ । **ನಃ**—ನಮಗೆ । **ಶಗ್ಧಿ**—ಕೊಡು.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನೀನು ಧನಧಾತೃವೆಂದು ತಿಳಿಯುವುದಕ್ಕೆ ಮೊದಲು ನಮ್ಮ ಅಭಿಲಾಷೆಗಳು ನಿನಗಿಂತಲೂ ಬೇರೆ ದೇವತೆಗಳಲ್ಲಿ ಹೋಗಿ ಸೇರಿದವು. ನೀನೇ ಧನಪ್ರದನೆಂದು ಈಗ ತಾನೇ ತಿಳಿಯಿತು. ಆದುದರಿಂದ ಧನವಂತನಾದ ಎಲೈ ಇಂದ್ರನೇ, ಶತ್ರುಗಳಿಂದ ಲಬ್ಧವಾದ ಧನಗಳನ್ನು ನಿನ್ನ ರಕ್ಷಣೆಗಳೊಡನೆ ನಮಗೆ ಕೊಡು

English Translation.

Wielder of the thunderbolt, our solicitations have been formerly addressed to other gods than you : give us, Maghavan, of your (spoil, and guard it) for us with (your) protections.

॥ ಸಂಹಿತಾಪಾಠಃ ॥

ನಹ್ಯಂ೧ಗ ನೃತೋ ತ್ವದನ್ಯಂ ವಿಂದಾಮಿ ರಾಧಸೇ ।
ರಾಯೇ ದ್ಯುಮ್ನಾಯ ಶವಸೇ ಚ ಗಿರ್ವಣಃ ॥ ೧೨ ॥

॥ ಪದಪಾಠಃ ॥

ನಹಿ । ಅಂಗ । ನೃತೋ ಇತಿ । ತ್ವತ್ । ಅನ್ಯಂ । ವಿಂದಾಮಿ । ರಾಧಸೇ ।
ರಾಯೇ । ದ್ಯುಮ್ನಾಯ । ಶವಸೇ । ಚ । ಗಿರ್ವಣಃ ॥ ೧೨ ॥

॥ ಸಾಯಣಭಾಷ್ಯಂ ॥

**ಹೇ ನೃತೋ ನರ್ತಯಿತರ್ಗಿರ್ವಣೋ ಗೀರ್ಭಿಃ ಸ್ತುತಿಭಿರ್ವನನೀಯ ಸಂಭಜನೀಯೇಂದ್ರ ರಾಧಸೇ ಬಲಸಂಸಾಧಕಾಯಾನ್ನಾಯ ರಾಯೇ ಧನಾಯ ದ್ಯುಮ್ನಾಯ ದ್ಯೋತಮಾನಾಯ ಯಶಸೇ ಶವಸೇ ವರ್ಧಕಾಯ ಬಲಾಯ ಚ ತ್ವತ್ತ್ವತ್ತೋಽನ್ಯಂ ನಹಿ ವಿಂದಾಮಿ । ನ ಲಭೇ । ಅಂಗ ಪ್ರಸಿದ್ಧೌ ॥**

। ಪ್ರತಿಪದಾರ್ಥ ।

**ನೃತೋ**—ಸರ್ವಪ್ರೇರಕನೂ । **ಗಿರ್ವಣಃ**—ಸ್ತುತಿಗಳಿಂದ ಪೂಜಿತನೂ ಆದ ಎಲೈ ಇಂದ್ರನೇ । **ರಾಧಸೇ**—ಶಕ್ತಿಸಾಧಕವಾದ ಅನ್ನಕ್ಕೂ । **ರಾಯೇ**—ಧನಕ್ಕೂ । **ದ್ಯುಮ್ನಾಯ**—ಪ್ರಕಾಶಮಾನವಾದ ಯಶಸ್ಸಿಗೂ । **ಶವಸೇ ಚ**—ಶಕ್ತಿವೃದ್ಧಿಗಾಗಿಯೂ । **ತ್ವತ್**—ನಿನ್ನನ್ನು ಬಿಟ್ಟು । **ಅನ್ಯಂ**—ಬೇರೆ ದೇವತೆಯನ್ನು । **ನಹಿ ವಿಂದಾಮಿ**—ನಾನು ಸಮೀಪಿಸುವುದಿಲ್ಲ । **ಅಂಗ**—ಇದು ಖಂಡಿತವು.

॥ ಭಾವಾರ್ಥ ॥

ಸರ್ವಪ್ರೇರಕನೂ, ಸ್ತುತಿಗಳಿಂದ ಪೂಜಿತನೂ ಆದ ಎಲೈ ಇಂದ್ರನೇ, ಶಕ್ತಿಸಾಧಕವಾದ ಅನ್ನಕ್ಕೂ, ಧನಕ್ಕೂ ಪ್ರಕಾಶಮಾನವಾದ ಯಶಸ್ಸಿಗೂ ಮತ್ತು ಶಕ್ತಿವೃದ್ಧಿಗೂ ಸಹ ನಿನ್ನನ್ನು ಬಿಟ್ಟು ಬೇರೆ ಯಾವ ದೇವತೆಯನ್ನೂ ನಾನು ಸಮೀಪಿಸುವುದಿಲ್ಲ. ಇದು ಖಂಡಿತವು.

## English Translation.

Verily, impeller (of men), you are to be worshipped by praise; I apply to no other than you for sustenance, riches, reputation, and strength.

। ಸಂಹಿತಾಪಾಠಃ ।

ಏಂದುಮಿಂದ್ರಾಯ ಸಿಂಚತ ಪಿಬಾತಿ ಸೋಮ್ಯಂ ಮಧು ।
ಪ್ರ ರಾಧಸಾ ಚೋದಯಾತೇ ಮಹಿತ್ವನಾ ॥ ೧೩ ॥

॥ ಪದಪಾಠಃ ॥

ಆ । ಇಂದುಂ । ಇಂದ್ರಾಯ । ಸಿಂಚತ । ಪಿಬಾತಿ । ಸೋಮ್ಯಂ । ಮಧು ।
ಪ್ರ । ರಾಧಸಾ । ಚೋದಯಾತೇ । ಮಹಿಽತ್ವನಾ ॥ ೧೩ ॥

। ಸಾಯಣಭಾಷ್ಯಂ ।

ಹೇ ಋತ್ವಿಜಃ ಇಂದುಂ ಸ್ಯಂದನಶೀಲಂ ಸೋಮಮಿಂದ್ರಾರ್ಥಮಾ ಸಿಂಚತ । ಆತ್ರಯಣ-ದ್ರವ್ಯೇಣ ಸೇಚನಂ ಕುರುತ । ಅಭಿಷುತೇತ್ಯರ್ಥಃ । ತತಃ ಸೋಮ್ಯಂ ಸೋಮಮಯಂ ಮಧು ಮಧುಕರಂ ಸೋಮರಸಂ ಪಿಬಾತಿ । ಪಿಬತು । ಪೀತ್ವಾ ಚ ಸ ಇಂದ್ರೋ ಮಹಿತ್ವನಾ ಸ್ವಮಹತ್ತ್ವೇನೈವ ರಾಧಸಾನ್ನೇನ ಸಹ ಧನಾದಿಕಂ ಸ್ತೋತೃಭ್ಯಃ ಪ್ರ ಚೋದಯಾತೇ । ಪ್ರಕರ್ಷೇಣ ಚೋದಯತಿ । ಯದ್ವಾ । ಯಜಮಾನೋ ಮಹಿತ್ವನಾ । ಇಂದ್ರಾಯ ಪ್ರದೀಯಮಾನತ್ವಾದಸ್ಯ ಮಹತ್ತ್ವಂ । ಮಹ-ತ್ತ್ವಯುಕ್ತೇನ ರಾಧಸಾನ್ನೇನ ಸಹ ಸ್ತೋತೄನ್ ಪ್ರಚೋದಯತಿ । ಇಂದ್ರಾಯ ಹವಿರ್ದತ್ತೇತಿ ಸ್ತೋತೄನ್ಪ್ರೇರಯತೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಇಂದ್ರಾಯ**—ಇಂದ್ರನನ್ನುದ್ದೇಶಿಸಿ | **ಇಂದುಂ**—ಪ್ರವಹಿಸುವ **ಸೋಮವನ್ನು** | **ಆ ಸಿಂಚತ**—ಆಶ್ರಯಣ ದ್ರವ್ಯಗಳೊಡನೆ ಸೇಕಿಸಿರಿ | **ಸೋಮ್ಯಂ** – ಸೋಮಮಯವಾದುದೂ | **ಮಧು**—ಮಧುಕರವಾದುದೂ ಆದ ಸೋಮರಸವನ್ನು | **ಪಿಬಾತಿ**—ಇಂದ್ರನು ಪಾನಮಾಡಲಿ | **ಮಹಿತ್ವನಾ**—ಸ್ವಮಾಹಾತ್ಮ್ಯದೊಡನೆ ಕೂಡಿದ | **ರಾಧಸಾ**—ಅನ್ನದಿಂದ | **ಪ್ರ ಚೋದಯಾತೇ**—ಸ್ತುತಿಕರ್ತರಿಗೆ ಉತ್ತೇಜನವನ್ನು ಕೊಡುತ್ತಾನೆ.

॥ ಭಾವಾರ್ಥ ॥

–ಲೈ ಋತ್ವಿಕ್ಕುಗಳೇ, ಇಂದ್ರನನ್ನುದ್ದೇಶಿಸಿ ಪ್ರವಹಿಸುವ ಸೋಮವನ್ನು ಆಶ್ರಯಣದ್ರವ್ಯಗಳೊಡನೆ ಸೇಕಿಸಿರಿ. ಸೋಮಮಯವಾದುದೂ, ಮಧುಕರವಾದುದೂ ಆದ ಸೋಮರಸವನ್ನು ಇಂದ್ರನು ಪಾನಮಾಡಲಿ. ಸ್ವಮಾಹಾತ್ಮ್ಯದೊಡನೆ ಕೂಡಿದ ಅನ್ನದಿಂದ ಇಂದ್ರನು ಸ್ತುತಿಕರ್ತರಿಗೆ ಉತ್ತೇಜನವನ್ನು ಕೊಡುತ್ತಾನೆ.

English Translation.

Effuse the Soma juice for Indra, let him quaff the Soma beverage; he by his might rewards (the donor) with wealth.

॥ ವಿಶೇಷವಿಷಯಗಳು ॥

**ಯಜಮಾನೋ ಮಹಿತ್ವನಾ** ಎಂಬ ಅರ್ಥವೂ ಸಾಧ್ಯವೆಂದು ಭಾಷ್ಯಕಾರರು ತಿಳಿಸಿದ್ದಾರೆ. ಯಜಮಾನನು ತನ್ನ ಮಹತ್ವದೊಡನೆ ಕೂಡಿದ ಅನ್ನದಿಂದ ಸ್ತುತಿಕರ್ತರನ್ನು ಇಂದ್ರನ ಪೂಜೆಗಾಗಿ ಪ್ರೇರೇಪಿಸುತ್ತಾನೆಂದು ತಾತ್ಪರ್ಯ.

॥ ಸಂಹಿತಾಪಾಠಃ ॥

ಉಪೋ ಹರೀಣಾಂ ಪತಿಂ ದಕ್ಷಂ ಪೃಂಚಂತಮಬ್ರವಂ ।
ನೂನಂ ಶ್ರುಧಿ ಸ್ತುವತೋ ಅಶ್ವ್ಯಸ್ಯ ॥ ೧೪ ॥

॥ ಪದಪಾಠಃ ॥

ಉಪೋ ಇತಿ । ಹರೀಣಾಂ । ಪತಿಂ । ದಕ್ಷಂ । ಪೃಂಚಂತಂ । ಅಬ್ರವಂ ।
ನೂನಂ । ಶ್ರುಧಿ । ಸ್ತುವತಃ । ಅಶ್ವ್ಯಸ್ಯ ॥ ೧೪ ॥

॥ ಸಾಯಣಭಾಷ್ಯಂ ॥

ಹರೀಣಾಂ ಹರಿತವರ್ಣಾನಾಮಶ್ವಾನಾಂ ಪತಿಂ ಪಾಲಯಿತಾರಂ ದಕ್ಷಂ ವರ್ಧಕಂ ಸ್ವಬಲಂ ಪೃಂಚಂತಂ ॥ ಪೃಚೀ ಸಂಪರ್ಕೇ ॥ ಮರುತ್ಸು ಯೋಜಯಂತಂ । ಯದ್ವಾ । ಶತ್ರುಷು ಸ್ವಬಲಮಾ-

ಯುಧಾದಿಭಿಃ ಸಂಪರ್ಚಯಂತಂ । ಏತಾದೃಶಮಿಂದ್ರಂ ಶ್ವಾಮುಪೋ ಅಬ್ರವಂ । ವಿಶ್ವಮನಾ ಅಹಂ ಸ್ತೋತ್ರಂ ಕರವಾಣಿ । ಅಶ್ವ್ಯಸ್ಯ । ವ್ಯಶ್ವೋ ನಾಮರ್ಷಿರಶ್ವಶಬ್ದೇನೋಚ್ಯತೇ । ತಸ್ಯ ಪುತ್ರಸ್ಯ ಸ್ತುವತಃ ಸ್ತೋತ್ರಂ ಕುರ್ವತೋ ಮಮ ಸಂಬಂಧಿನೀಂ ತ್ವದ್ವಿಷಯಾಂ ಸ್ತುತಿಂ ನೂನಂ ಸಂಪ್ರತಿ ಶ್ರುಧಿ । ಶೃಣು ॥

॥ ಪ್ರತಿಪದಾರ್ಥ ॥

**ಹರೀಣಾಂ**—ಹರಿತವರ್ಣವುಳ್ಳ ಅಶ್ವಗಳಿಗೆ । **ಪತಿಂ**—ಪಾಲಕನೂ । **ದಕ್ಷಂ**—ಶಕ್ತಿವರ್ಧಕನೂ । **ಪೃಂಚಂತಂ**—ಮರುತ್ತುಗಳಲ್ಲಿ ತನ್ನ ಶಕ್ತಿಯನ್ನು ಸೇರಿಸುವವನೂ ಆದ ಇಂದ್ರನನ್ನು । **ಉಪೋ ಅಬ್ರವಂ**—ನಾನು ಸ್ತುತಿಸಿ ಪ್ರಶಂಸಿಸುತ್ತೇನೆ (ಎಲೈ ಇಂದ್ರನೇ) । **ಸ್ತುವತಃ**—ಸ್ತುತಿಕರ್ತನೂ । **ಅಶ್ವ್ಯಸ್ಯ**—ವ್ಯಶ್ವನ ಪುತ್ರನೂ ವಿಶ್ವಮನಸ್ಸೆಂಬ ಹೆಸರುಳ್ಳವನೂ ಆದ ನನ್ನ ಸ್ತುತಿಯನ್ನು । **ನೂನಂ**—ಈಗ । **ಶ್ರುಧಿ**—ಕೇಳು.

॥ ಭಾವಾರ್ಥ ॥

ಹರಿತವರ್ಣವುಳ್ಳ ಅಶ್ವಗಳಿಗೆ ಪಾಲಕನೂ, ಶಕ್ತಿವರ್ಧಕನೂ, ಮರುತ್ತುಗಳಲ್ಲಿ ತನ್ನ ಶಕ್ತಿಯನ್ನು ಸೇರಿಸುವವನೂ ಆದ ಇಂದ್ರನನ್ನು ನಾನು ಸ್ತುತಿಸಿ ಪ್ರಶಂಸಿಸುತ್ತೇನೆ. ಎಲೈ ಇಂದ್ರನೇ, ಸ್ತುತಿಕರ್ತನೂ ವ್ಯಶ್ವನ ಪುತ್ರನೂ ವಿಶ್ವಮನಾ ಎಂಬ ಹೆಸರುಳ್ಳವನೂ ಆದ ನನ್ನ ಸ್ತುತಿಯನ್ನು ಈ ಕಾಲದಲ್ಲಿ ಕೇಳು.

### English Translation

Let me address the lord of steeds, who associates his strength (with the Maruts): now hear the words of the son of Vyashwa praising you.

। ಸಂಹಿತಾಪಾಠಃ ।

ನಹ್ಯಂ೧ಗ ಪುರಾ ಚನ ಜಜ್ಞೇ ವೀರತರಸ್ತ್ವತ್ ।
ನಕೀ ರಾಯಾ ನೈವಥಾ ನ ಭಂದನಾ ॥ ೧೫ ॥

। ಪದಪಾಠಃ ।

ನಹಿ । ಅಂಗ । ಪುರಾ । ಚನ । ಜಜ್ಞೇ । ವೀರಽತರಃ । ತ್ವತ್ ।
ನಕಿಃ । ರಾಯಾ । ನ । ಏವಽಥಾ । ನ । ಭಂದನಾ ॥ ೧೫ ॥

। ಸಾಯಣಭಾಷ್ಯಂ ।

ಹೇ ಇಂದ್ರ ತ್ವತ್ತ್ವತ್ತಃ ಪುರಾ ಪೂರ್ವಂ ವೀರತರಃ ಸಾಮರ್ಥ್ಯವಾನ್ ಕಶ್ಚಿನ್ನಹಿ ಜಜ್ಞೇ । ಜಾತಃ ಖಲು । ಅಂಗ ಪ್ರಸಿದ್ಧೌ । ತ್ವಮೇವ ಸಾಮರ್ಥ್ಯವಾಞ್ಜಾತ ಇತ್ಯರ್ಥಃ । ಕಿಂಚ ತ್ವತ್ತೋಽಪಿ ರಾಯಾ ಧನೇನ ಸಮರ್ಥೋ ನಕಿರ್ನ ಕಶ್ಚಿದಸ್ತಿ । ತಥೈವಥಾ ಶತ್ರುಪುರಾಣಿ ಸಂಗ್ರಾಮಂ ವಾ ಪ್ರತಿ

ಗಮನೇನ ತ್ವತ್ತೋಽಧಿಕೋ ನ ಜಾತಃ । ಯದ್ವಾ । ಏವಥಾ ॥ ಅವ ರಕ್ಷಣಾದಿಷು । ಅಕಾರಸ್ಯೈಕಾರಶ್ಛಾಂದಸಃ । ಔಣಾದಿಕೋಽಥಪ್ರತ್ಯಯಃ ॥ ಶರಣಾಗತಾನಾಂ ಸ್ತೋತೄಣಾಂ ಚಾವನೇನ ತ್ವತ್ತೋಽಧಿಕೋ ನಾಸ್ತಿ । ಕಿಂಚ ಭಂಧನಾ । ಭಂದತಿಃ ಸ್ತುತಿಕರ್ಮಾ । ಸ್ತುತ್ಯಾ ಚ ತ್ವದಧಿಕೋ ನ ಜಾತಃ । ಧನವಾನ್ಪ್ರಕ್ಷಕಃ ಸ್ತುತ್ಯಶ್ಚ ತ್ವತ್ತೋಽನ್ಯೋ ನ ಜಜ್ಞ ಇತಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತ್ವತ್**—ನಿನಗಿಂತಲೂ । **ಪುರಾ ಚನ**—ಪೂರ್ವದಲ್ಲಿ । **ವೀರತರಃ**—ಅಧಿಕವಾದ ಸಾಮರ್ಥ್ಯವುಳ್ಳವನು । **ನ ಹಿ ಜಜ್ಞೇ**—ಹುಟ್ಟಲೇ ಇಲ್ಲ । **ಅಂಗ**—ಇದು ಖಂಡಿತ । **ರಾಯಾ**—ಧನದಿಂದ ನಿನಗೆ ಉತ್ಕೃಷ್ಟನೂ । **ನಕಿಃ**—ಖಂಡಿತವಾಗಿಯೂ ಯಾರೂ ಇಲ್ಲ । **ಏವಥಾ**—ಶತ್ರುಗಳೆದುರಿಗೆ ನುಗ್ಗುವವನೂ । **ನ**—ನಿನ್ನ ಸಮಾನನಾಗಿ ಯಾರೂ ಇಲ್ಲ । **ಭಂದನಾ**—ಸ್ತುತಿಗೆ ಯೋಗ್ಯನಾದವನೂ । **ನ**—ನಿನ್ನ ಸಮಾನನಾಗಿ ಯಾರೂ ಇಲ್ಲ

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗಿಂತಲೂ ಪೂರ್ವದಲ್ಲಿ ಅಧಿಕವಾದ ಸಾಮರ್ಥ್ಯವುಳ್ಳವನು ಹುಟ್ಟಲೇ ಇಲ್ಲ. ಇದು ಖಂಡಿತ. ಧನದಿಂದ ನಿನಗೆ ಉತ್ಕೃಷ್ಟನೂ ಖಂಡಿತವಾಗಿಯೂ ಯಾರೂ ಇಲ್ಲ. ಶತ್ರುಗಳೆದುರಿಗೆ ನುಗ್ಗುವವನೂ ನಿನ್ನಂತಹ ಪರಾಕ್ರಮಿಯೂ ಯಾರೂ ಇಲ್ಲ. ಸ್ತುತಿಗೆ ಯೋಗ್ಯನಾದವನೂ ಸಹ ನಿನ್ನ ಹಾಗೆ ಯಾರೂ ಇಲ್ಲ.

## English Translation.

No one, Indra, has ever been born more mighty than you ; no one (surpassing you) in riches ; no one (more powerful) in protection ; no one (more entitled) to praise.

॥ ವಿಶೇಷವಿಷಯಗಳು ॥

**ಏವಥಾ** ಎಂಬುದಕ್ಕೆ ಶರಣಾಗತರ ರಕ್ಷಣೆಯಲ್ಲಿ ನಿರತನು ಎಂಬರ್ಥವೂ ಸಾಧ್ಯ. ರಕ್ಷಣಾರ್ಥಕವಾದ **ಅವ** ಧಾತುವಿಗೆ ಛಾಂದಸವಾದ **ಏ** ಕಾರವು ಪ್ರಾಪ್ತವಾಗಿ **ಅವಥಾ** ಎಂಬುದಕ್ಕೆ ಬದಲಾಗಿ **ಏವಥಾ** ಎಂದಾಗಿದೆಯೆಂದು ಭಾಷ್ಯವು ವಿವರಿಸುತ್ತದೆ.

॥ ಸಂಹಿತಾಪಾಠಃ ॥

**ಏದು ಮಧ್ವೋ ಮದಿಂತರಂ ಸಿಂಚ ವಾಧ್ವರ್ಯೋ ಅಂಧಸಃ ।**

**ಏವಾ ಹಿ ವೀರಃ ಸ್ತವತೇ ಸದಾವೃಧಃ ॥ ೧೬ ॥**

। ಪದಪಾಠಃ ।

ಆ । ಇತ್ । ಊಂ ಇತಿ । ಮಧ್ವಃ । ಮದಿನ್ऽತರಂ । ಸಿಂಚ । ವಾ । ಅಧ್ವರ್ಯೋ ಇತಿ । ಅಂಧಸಃ ।

ಏವ । ಹಿ । ವೀರಃ । ಸ್ತವತೇ । ಸದಾऽವೃಧಃ ॥ ೧೬ ॥

॥ ಸಾಯಣಭಾಷ್ಯಂ ॥

ಏದು ಮಧ್ವ ಇತಿ ತೃಚಃ ಪೂರ್ವೋಕ್ತೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ವೈಕಲ್ಪಿಕೋಽನುರೂಪಃ । ಸೂತ್ರಿತಂ ಚ । ಏದು ಮಧ್ವೋ ಮದಿಂತರಮೇತೋ ನ್ವಿಂದ್ರಂ ಸ್ತವಾಮ ಸಖಾಯಃ । ಆ. ೭-೮ । ಇತಿ ॥

ಹೇ ಅಧ್ವರ್ಯೋ ಅಧ್ವರಸ್ಯ ನೇತರ್ಯರ್ತ್ವಿಕ್ ಸದಾವೃಧಃ ಸರ್ವದಾ ವೃದ್ಧಿಮತೋ ಮಧ್ವೋ ಮದಕರಸ್ಯಾಂಧಸಃ ಸೋಮಲಕ್ಷಣಸ್ಯಾನ್ನಸ್ಯ ಮದಿಂತರಮತ್ಯರ್ಥಂ ಮಾದಯಿತೃತಮಂ ಸೋಮರಸಮೇವಾ ಸಿಂಚೇಂದ್ರಾರ್ಥಂ । ಅಯಮೇವೇಂದ್ರಃ ಸ್ತವತೇ ಹಿ । ಸ್ತೋತ್ರಶಸ್ತ್ರಾದಿಭಿಃ ಸ್ತೂಯತೇ ಖಲು । ಸ್ತುತಾಯೇಂದ್ರಾಯ ಸೋಮೋ ದಾತವ್ಯಃ । ತಸ್ಮಾದಾ ಸಿಂಚೇತಿ ಸಮನ್ವಯಃ ॥

॥ ಪ್ರತಿಪದಾರ್ಥ ॥

ಅಧ್ವರ್ಯೋ—ಎಲೈ ಅಧ್ವರ್ಯುವೇ । ವೀರಃ—ಸಮರ್ಥನೂ । ಸದಾವೃಧಃ—ಹವಿಸ್ಸುಗಳಿಂದ ಸರ್ವದಾ ವೃದ್ಧಿಯನ್ನು ಹೊಂದುವವನೂ ಆದ । (ಅಯಂ) ಏವ ಹಿ—ಈ ಇಂದ್ರನೇ । ಸ್ತವತೇ—ಸ್ತುತಿಸಲ್ಪಡುತ್ತಾನೆ (ಆದುದರಿಂದ) । ಮಧ್ವಃ—ಮದಕಾರಕವಾದ । ಅಂಧಸಃ—ಸೋಮರೂಪದ । ಮದಿಂತರಂ—ಹರ್ಷಜನಕವಾದ ರಸವನ್ನು । ಆ ಸಿಂಚ—ಇಂದ್ರಾರ್ಥವಾಗಿ ಹಿಂಡು.

। ಭಾವಾರ್ಥ ॥

ಎಲೈ ಅಧ್ವರ್ಯುವೇ, ಸಮರ್ಥನೂ, ಹವಿಸ್ಸುಗಳಿಂದ ಸರ್ವದಾ ವೃದ್ಧಿಯನ್ನು ಹೊಂದುವವನೂ ಆದ ಈ ಇಂದ್ರನೇ ಎಲ್ಲರಿಂದಲೂ ಸ್ತುತಿಸಲ್ಪಡುತ್ತಾನೆ. ಆದುದರಿಂದ ಮದಕಾರಕವಾದ ಸೋಮದ ಹರ್ಷಜನಕವಾದ ರಸವನ್ನು ಇಂದ್ರಾರ್ಥವಾಗಿ ಹಿಂಡು

## English Translation.

Pour out, priest, the most exhilarating (draught) of the sweet (sacrificial) beverage, for he, the ever-mighty hero, alone is praised.

॥ ವಿಶೇಷವಿಷಯಗಳು ॥

ಏದು ಮಧ್ವಃ ಎಂಬ ಈ ಋಕ್ಕನ್ನು ಹಿಂದೆ ಹೇಳಿದ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ವೈಕಲ್ಪಿಕಾನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಏದು ಮಧ್ವೋ ಮದಿಂತರಮೇತೋನ್ವಿಂದ್ರಂ ಸ್ತವಾಮ ಸಖಾಯಃ ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

|| ಸಂಹಿತಾಪಾಠಃ ||

ಇಂದ್ರ ಸ್ಥಾತರ್ಹರೀಣಾಂ ನಕಿಷ್ಟೇ ಪೂರ್ವ್ಯಸ್ತುತಿಂ ।
ಉದಾನಂಶ ಶವಸಾ ನ ಭಂದನಾ ॥ ೧೭ ||

॥ ಪದಪಾಠಃ ॥

ಇಂದ್ರ । ಸ್ಥಾತಃ । ಹರೀಣಾಂ । ನಕಿಃ । ತೇ । ಪೂರ್ವ್ಯऽಸ್ತುತಿಂ ।
ಉತ್ । ಆನಂಶ । ಶವಸಾ । ನ । ಭಂದನಾ ॥ ೧೭ ॥

|| ಸಾಯಣಭಾಷ್ಯಂ ||

ಹೇ ಹರೀಣಾಂ ಸ್ಥಾತರಶ್ವಾನಾಮಧಿಷ್ಠಾತರಿಂದ್ರ ತೇ ತ್ವದೀಯಾಂ ಪೂರ್ವ್ಯಸ್ತುತಿಂ ಪೂರ್ವ್ಯೈರ್ಋಷಿಭಿಃ ಕೃತಾಂ ಸ್ತುತಿಂ । ಉಪಲಕ್ಷಣಂ । ಇದಾನೀಂತನೈಃ ಕ್ರಿಯಮಾಣಾಮಪಿ ಸ್ತುತಿಂ ನಕಿರ್ನ ಕಶ್ಚಿಚ್ಛವಸಾ ಬಲೇನೋದಾನಂಶ । ವ್ಯಾಪ್ನೋತಿ ॥ ಅಶೂ ವ್ಯಾಪ್ತೌ । ಲಿಟ್ಯಶ್ನೋತೇಶ್ಚೇತಿ ನುಟ್ । ಛಾಂದಸೋ ಮುಮ್ ॥ ಕಶ್ಚಿನ್ನಾತಿಕ್ರಾಮತೀತ್ಯರ್ಥಃ । ಕಿಂಚ ಭಂದನಾ ಸರ್ವೈಃ ಪ್ರಾರ್ಥನೀಯೇನ ಪೂಜನೀಯೇನ ಧನೇನ ಸ್ತುತ್ಯಾ ವಾ ತ್ವದೀಯಾಂ ಸ್ತುತಿಂ ನ ಕಶ್ಚಿದತಿಕ್ರಾಮತಿ । ತ್ವತ್ತೋ ಬಲವಾನ್ ಧನೀ ಸ್ತುತ್ಯೋ ವಾನ್ಯೋ ನಾಸ್ತೀತ್ಯರ್ಥಃ ॥

। ಪ್ರತಿಪದಾರ್ಥ ।

**ಹರೀಣಾಂ**—ಹರಿಸಂಜ್ಞಕವಾದ ಅಶ್ವಗಳಿಗೆ । **ಸ್ಥಾತಃ**—ಒಡೆಯನಾದ । **ಇಂದ್ರ**—ಎಲೈ ಇಂದ್ರನೇ **ತೇ**—ನಿನ್ನ । **ಪೂರ್ವ್ಯಸ್ತುತಿಂ**—ಹಿಂದಿನ ಋಷಿಗಳಿಂದ ಕೃತವಾದ ಸ್ತುತಿಯನ್ನೂ (ಹಾಗೆಯೇ ಆಧುನಿಕವಾದ ಸ್ತುತಿಯನ್ನೂ) । **ಶವಸಾ**—ಶಕ್ತಿಯಿಂದ । **ನಕಿಃ ಉದಾನಂಶ**—ಯಾರೂ ಮೀರಿಸಲಾರರು । **ಭಂದನಾ**—ಪೂಜ್ಯವಾದ ಧನದಿಂದಲಾಗಲಿ ಅಥವಾ ಸ್ತುತಿಯಿಂದಾಗಲಿ । **ನ**—ಯಾರೂ ಮೀರಿಸಲಾರರು.

। ಭಾವಾರ್ಥ ।

ಹರಿಸಂಜ್ಞಕವಾದ ಅಶ್ವಗಳಿಗೆ ಒಡೆಯನಾದ ಎಲೈ ಇಂದ್ರನೇ, ನಿನ್ನ ಹಿಂದಿನ ಋಷಿಗಳಿಂದ ಕೃತವಾದ ಸ್ತುತಿಯನ್ನೂ, ಹಾಗೆಯೇ ಆಧುನಿಕವಾದ ಸ್ತುತಿಯನ್ನೂ ಶಕ್ತಿಯಿಂದಾಗಲಿ, ಧನದಿಂದಾಗಲಿ ಅಥವಾ ಸ್ತುತಿಯಿಂದಾಗಲಿ ಯಾರೂ ಮೀರಿಸಲಾರರು.

English Translation.

Indra, ruler of horses, no one surpasses your ancient praise, either for force or for fame.

॥ ಸಂಹಿತಾಪಾಠಃ ॥

ತಂ ವೋ॒ ವಾಜಾ॑ನಾಂ॒ ಪತಿ॒ಮಹೂ॑ಮಹಿ ಶ್ರವ॒ಸ್ಯವಃ॑ ।
ಅಪ್ರಾ॑ಯುಭಿರ್ಯ॒ಜ್ಞೇಭಿ॑ರ್ವಾವೃ॒ಧೇನ್ಯಂ॑ ॥ ೧೮ ॥

॥ ಪದಪಾಠಃ ॥

ತಂ । ವಃ॒ । ವಾಜಾ॑ನಾಂ । ಪತಿಂ॑ । ಅಹೂ॑ಮಹಿ । ಶ್ರ॒ವ॒ಸ್ಯವಃ॑ ।
ಅಪ್ರಾ॑ಯುಽಭಿಃ । ಯ॒ಜ್ಞೇಭಿಃ॑ । ವ॒ವೃ॒ಧೇನ್ಯ॑ಂ ॥ ೧೮ ॥

॥ ಸಾಯಣಭಾಷ್ಯಂ ॥

ಅಪ್ರಾಯುಭಿಃ ಕರ್ಮಸ್ವಪ್ರಮಾದ್ಯನ್ಮನುಷ್ಯಯುಕ್ತೈಃ । ಅಥವಾ । ಅಪ್ರಮತ್ತಾ ಏಕತ್ರ ಸ್ಥಿತ್ವೈವ ಕರ್ಮ ಕುರ್ವಂತಿ । ಕರ್ಮ ಪ್ರಾರಭ್ಯ ನಾನ್ಯಂ ದೇಶಂ ಗಚ್ಛಂತೀತ್ಯರ್ಥಃ । ಏವಂವಿಧಮನುಷ್ಯಯುಕ್ತೈರ್ಯಜ್ಞೇಭಿರ್ಯಜ್ಞೈಃ । ಏತಾದೃಶಮನುಷ್ಯೈರ್ಯಜ್ಞೈರ್ವಾವೃಧೇನ್ಯಂ ವರ್ಧನೀಯಂ ವಾಜಾನಾಮನ್ನಾನಾಂ ಪತಿಂ ಸ್ವಾಮಿನಂ ವೋ ಯುಷ್ಮ್ಯಯುಷ್ಮತ್ಸಂಬಂಧೇನ ಯುಷ್ಮದೀಯಂ ತಂ ತಾದೃಶಮಿಂದ್ರಂ ಶ್ರವಸ್ಯವೋ ವಯಮನ್ನಕಾಮಾಃ ಸಂತೋಽಹೂಮಹಿ । ಆಹ್ವಯಾಮಃ ॥ ಹ್ವಯತೇರ್ಲುಙಿ ಬಹುಲಂ ಛಂದಸೀತಿ ಸಂಪ್ರಸಾರಣಂ ॥

॥ ಪ್ರತಿಪದಾರ್ಥ ॥

**ಅಪ್ರಾಯುಭಿಃ**— ಪ್ರಮಾದರಹಿತವಾದ ಅನನ್ಯಮನಸ್ಸಿನಿಂದ ಯುಕ್ತರಾದ ಯಜಮಾನರುಳ್ಳ । **ಯಜ್ಞೇಭಿಃ**— ಯಜ್ಞಗಳಿಂದ । **ವಾವೃಧೇನ್ಯಂ**— ವೃದ್ಧಿಯನ್ನು ಹೊಂದುವವನೂ । **ವಾಜಾನಾಂ**— ಅನ್ನಗಳಿಗೆ । **ಪತಿಂ**— ಒಡೆಯನೂ । **ವಃ**— ನಿಮಗೆಲ್ಲಾ ಸಂಬಂಧಿಸಿದವನೂ ಆದ । **ತಂ**— ಅದೇ ಇಂದ್ರನನ್ನು । **ಶ್ರವಸ್ಯವಃ**— ರಕ್ಷಣಾರ್ಥಿಗಳಾಗಿ । **ಅಹೂಮಹಿ**— ನಾವು ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಪ್ರಮಾದರಹಿತವಾದ ಅನನ್ಯಮನಸ್ಸಿನಿಂದ ಯುಕ್ತರಾದ ಯಜಮಾನರುಳ್ಳ ಯಜ್ಞಗಳಿಂದ ವೃದ್ಧಿಯನ್ನು ಹೊಂದುವವನೂ ಅನ್ನಗಳಿಗೆ ಒಡೆಯನೂ, ನಿಮಗೆಲ್ಲಾ ಸಂಬಂಧಿಸಿದವನೂ ಆದ ಅದೇ ಇಂದ್ರನನ್ನು ನಾವು ರಕ್ಷಣಾರ್ಥಿಗಳಾಗಿ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Desirous of food, we invoke your lord of viands, who is to be magnified by sacrifices (offered) by attentive (worshippers).

॥ ವಿಶೇಷವಿಷಯಗಳು ॥

**ಅಪ್ರಾಯುಭಿಃ**– ಕರ್ಮವನ್ನು ಪ್ರಾರಂಭಿಸಿ ಇತರ ಪ್ರದೇಶಗಳ ಗಮನವಿಲ್ಲದೇ, ಒಂದೇ ಕರ್ಮದಲ್ಲಿ ನೆಟ್ಟ ದೃಷ್ಟಿಯುಳ್ಳವರಾಗಿ ಕರ್ಮಮಾಡುವ ಯಜಮಾನರುಳ್ಳ ಎಂದು ತಾತ್ಪರ್ಯ.

॥ ಸಂಹಿತಾಪಾಠಃ ॥

ಏತೋ ನ್ವಿಂದ್ರಂ ಸ್ತವಾಮ ಸಖಾಯಃ ಸ್ತೋಮ್ಯಂ ನರಂ।
ಕೃಷ್ಟೀರ್ಯೋ ವಿಶ್ವಾ ಅಭ್ಯಸ್ತ್ಯೇಕ ಇತ್ ॥ ೧೯ ॥

॥ ಪದಪಾಠಃ ॥

ಏತೋ ಇತಿ । ನು । ಇಂದ್ರಂ । ಸ್ತವಾಮ । ಸಖಾಯಃ । ಸ್ತೋಮ್ಯಂ । ನರಂ ।
ಕೃಷ್ಟೀಃ । ಯಃ । ವಿಶ್ವಾಃ । ಅಭಿ । ಅಸ್ತಿ । ಏಕಃ । ಇತ್ ॥ ೧೯ ॥

॥ ಸಾಯಣಭಾಷ್ಯಂ ॥

**ಪೂರ್ವೋಕ್ತ ಏವ ಶಸ್ತ್ರ ಏತೋ ನ್ವಿಂದ್ರಮಿತ್ಯೇತೌ ತೃಚೌ ವೈಕಲ್ಪಿಕೌ ಸ್ತೋತ್ರಿಯಾನುರೂಪೌ। ಸೂತ್ರಿತಂ ಚ। ಏತೋ ನ್ವಿಂದ್ರಂ ಸ್ತವಾಮ ಸಖಾಯಃ ಸ್ತುಹೀಂದ್ರಂ ವ್ಯಶ್ವವತ್। ಆ. ೭-೮। ಇತಿ॥**

**ಹೇ ಸಖಾಯಃ ಸಮಾನಖ್ಯಾನಾ ಮಿತ್ರಭೂತಾ ವಾ ಹೇ ಋತ್ವಿಜಃ ನು ಕ್ಷಿಪ್ರಮೇತೋ। ಆಗಚ್ಛತೈವ। ಕಿಮರ್ಥಂ ತದಾಹ। ಸ್ತೋಮ್ಯಂ ಸ್ತೋಮಾರ್ಹಂ ನರಂ ಸರ್ವಸ್ಯ ನೇತಾರಂ ತಮಿಂದ್ರಂ ಸ್ತವಾಮ। ಸ್ತೋತ್ರಂ ಕರವಾಮ। ಯ ಇಂದ್ರ ಏಕ ಇದೇಕೋಽಸಹಾಯ ಏವ ಸನ್ ವಿಶ್ವಾಃ ಸರ್ವಾಃ ಕೃಷ್ಟೀಃ ಶತ್ರುಸೇನಾ ಅಭ್ಯಸ್ತಿ ಅಭಿಭವತಿ। ತಂ ಸ್ತವಾಮೇತಿ ಶೇಷಃ॥**

॥ ಪ್ರತಿಪದಾರ್ಥ ॥

**ಸಖಾಯಃ**—ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ। **ಯಃ**—ಯಾವ ಇಂದ್ರನು। **ಏಕ ಇತ್**—ಅದ್ವಿತೀಯನಾಗಿ। **ವಿಶ್ವಾಃ**—ಸಮಸ್ತವಾದ। **ಕೃಷ್ಟೀಃ**—ಶತ್ರುಸೇನೆಗಳನ್ನು। **ಅಭ್ಯಸ್ತಿ**—ಉರುಳಿಸಿ ಸೋಲಿಸುವನೋ ಅಂತಹ। **ಸ್ತೋಮ್ಯಂ**—ಪೂಜಾರ್ಹನೂ। **ನರಂ**—ನೇತೃವೂ ಆದ। **ಇಂದ್ರಂ**—ಇಂದ್ರನನ್ನು। **ಸ್ತವಾಮ**—ಸ್ತುತಿಸೋಣ। **ನು**—ಕ್ಷಿಪ್ರವಾಗಿ। **ಏತೋ**—ದಯಮಾಡಿರಿ.

॥ ಭಾವಾರ್ಥ ॥

ಮಿತ್ರಭೂತರಾದ ಎಲೈ ಋತ್ವಿಕ್ಕುಗಳೇ, ಯಾವ ಇಂದ್ರನು ಅದ್ವಿತೀಯನಾಗಿ ಸಮಸ್ತ ಶತ್ರುಸೇನೆಗಳನ್ನು ಉರುಳಿಸಿ ಸೋಲಿಸುವನೋ ಅಂತಹ ಪೂಜಾರ್ಹನೂ ನೇತೃವೂ ಆದ ಇಂದ್ರನನ್ನು ಸ್ತುತಿಸೋಣ. ಕ್ಷಿಪ್ರವಾಗಿ ದಯಮಾಡಿರಿ.

## English Translation.

Come, friends, let us glorify Indra, the leader, who is entitled to praise, who, single, overcomes all hostile hosts.

॥ ವಿಶೇಷವಿಷಯಗಳು ॥

ಹಿಂದೆ ಹೇಳಿದ ಶಸ್ತ್ರಮಂತ್ರಗಳಲ್ಲಿ ಏತೋ ನ್ವಿಂದ್ರಂ ಎಂದು ಪ್ರಾರಂಭವಾಗುವ ಈ ಎರಡು ತೃಚಗಳನ್ನು (ಆರು ಋಕ್ಕುಗಳನ್ನು) ವೈಕಲ್ಪಿಕಸ್ತೋತ್ರಿಯ ಮತ್ತು ಅನುರೂಪತೃಚಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ಏತೋ ನ್ವಿಂದ್ರಂ ಸ್ತವಾಮ ಸಖಾಯಃ ಸ್ತುಹೀಂದ್ರಂ ವ್ಯಶ್ವವತ್** ಎಂಬ ಸೂತ್ರದಿಂದ (ಆ. ೭-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಅಗೋರುಧಾಯ ಗವಿಷೇ ದ್ಯುಕ್ಷಾಯ ದಸ್ಮ್ಯಂ ವಚಃ ।
ಘೃತಾತ್ಸ್ವಾದೀಯೋ ಮಧುನಶ್ಚ ವೋಚತ ॥ ೨೦ ॥

॥ ಪದಪಾಠಃ ॥

ಅಗೋಽರುಧಾಯ । ಗೋಽಇಷೇ । ದ್ಯುಕ್ಷಾಯ । ದಸ್ಮ್ಯಂ । ವಚಃ ।
ಘೃತಾತ್ । ಸ್ವಾದೀಯಃ । ಮಧುನಃ । ಚ । ವೋಚತ ॥ ೨೦ ॥

॥ ಸಾಯಣಭಾಷ್ಯಂ ॥

**ಹೇ ಋತ್ವಿಜಃ ಅಗೋರುಧಾಯ । ಗಾಃ ಸ್ತುತೀಃ ರುಣದ್ಧೀತಿ ಗೋರುಧಃ । ನ ಗೋರುಧೋಽಗೋರುಧಃ । ತಾ ನ ವಿನಾಶಯತ್ಯಾದರೇಣ ಶೃಣೋತೀತ್ಯರ್ಥಃ । ತಾದೃಶಾಯ ಅತ ಏವ ಗವಿಷೇ ಸ್ತೋತ್ರಾಣೀಚ್ಛತೇ ದ್ಯುಕ್ಷಾಯ ದೀಪ್ಯಮಾನಾಯೇಂದ್ರಾಯ ದಸ್ಮ್ಯಂ ದರ್ಶನೀಯಂ ಘೃತಾತ್ಸ್ವಾದುತರಾದಾಜ್ಯಾನ್ಮಧುನಶ್ಚ ಸ್ವಾದೀಯೋಽತಿಶಯೇನ ಸ್ವಾದುಭೂತಂ ವಚಃ ಸ್ತೋತ್ರರೂಪಂ ವಾಕ್ಯಂ ಪ್ರೋಚತ । ಬ್ರೂತ ॥ ಋತ್ವಿಗ್ಭಿಃ ಕೃತಂ ಕರ್ಮ ಯಜಮಾನೋಽಪಿ ಕೃತವಾನ್ಭವತೀತಿ ಯದಿದಮಿಂದ್ರವಿಷಯಂ ವಚೋ ಘೃತಾನ್ಮಧುನಶ್ಚ ಸ್ವಾದುತರಂ ಭವತ್ವಿತ್ಯಾಶಾಸ್ತೇ । ತದಾಹ ಭಗವಾನಾಶ್ವಲಾಯನಃ । ವಚ ಏವ ಮ ಇದಂ ಘೃತಾನ್ಮಧುನಶ್ಚ ಸ್ವಾದೀಯೋಽಸ್ತು ಪ್ರೀತಿಃ ಸ್ವಾದೀಯೋಽಸ್ತ್ವಿತ್ಯೇವ ತದಾಹ । ಆ. ಗೃ. ೧-೧ ೫ । ಇತಿ ॥**

। ಪ್ರತಿಪದಾರ್ಥ ।

(ಎಲೈ ಋತ್ವಿಕ್ಕುಗಳೇ) **ಅಗೋರುಧಾಯ**—ಸ್ತುತಿಗಳನ್ನು ತಿರಸ್ಕರಿಸದವನೂ । **ಗವಿಷೇ**—ಸ್ತುತಿಯನ್ನೇ ಅಪೇಕ್ಷಿಸುವವನೂ । **ದ್ಯುಕ್ಷಾಯ**—ಪ್ರಕಾಶಮಾನನೂ ಆದ ಇಂದ್ರನನ್ನುದ್ದೇಶಿಸಿ । **ದಸ್ಮ್ಯಂ**—

ಆಕರ್ಷಕವಾದುದೂ | **ಘೃತಾತ್**—ಘೃತಕ್ಕಿಂತಲೂ | **ಮಧುನಶ್ಚ**—ಮಧುವಿಗಿಂತಲೂ | **ಸ್ವಾದೀಯಃ**—ಅಧಿಕವಾದ ರುಚಿಯಿಂದ ತೃಪ್ತಿಜನಕವಾಗುವ | **ವಾಚಃ**—ಸ್ತುತಿವಾಕ್ಯವನ್ನು | **ವೋಚತ**—ಪಠಿಸಿರಿ.

|| ಭಾವಾರ್ಥ ||

ಎಲೈ ಋತ್ವಿಕ್ಕುಗಳೇ, ಸ್ತುತಿಗಳನ್ನು ತಿರಸ್ಕರಿಸದೇ ಅವುಗಳನ್ನೇ ಅಪೇಕ್ಷಿಸುವವನೂ, ಪ್ರಕಾಶಮಾನನೂ ಆದ ಇಂದ್ರನನ್ನುದ್ದೇಶಿಸಿ ಆಕರ್ಷಕವಾದುದೂ, ಘೃತಕ್ಕಿಂತಲೂ ಮತ್ತು ಮಧುವಿಗಿಂತಲೂ ಅಧಿಕವಾದ ರುಚಿಯಿಂದ ಕೂಡಿ ತೃಪ್ತಿಜನಕವಾಗುವ ಸ್ತುತಿವಾಕ್ಯವನ್ನು ಪಠಿಸಿರಿ.

English Translation.

Recite agreeable words, sweeter than clarified butter, or than Soma, to the illustrious (Indra), who is gratified by eulogy, who rejects not praise.

| ಸಂಹಿತಾಪಾಠಃ |

ಯಸ್ಯಾಮಿತಾನಿ ವೀರ್ಯಾ೩ ನ ರಾಧಃ ಪರ್ಯೇತವೇ |
ಜ್ಯೋತಿರ್ನ ವಿಶ್ವಮಭ್ಯಸ್ತಿ ದಕ್ಷಿಣಾ || ೨೧ ||

| ಪದಪಾಠಃ ||

ಯಸ್ಯ | ಅಮಿತಾನಿ | ವೀರ್ಯಾ | ನ | ರಾಧಃ | ಪರಿಽಏತವೇ |
ಜ್ಯೋತಿಃ | ನ | ವಿಶ್ವಂ | ಅಭಿ | ಅಸ್ತಿ | ದಕ್ಷಿಣಾ || ೨೧ ||

|| ಸಾಯಣಭಾಷ್ಯಂ ||

ಯಸ್ಯೇಂದ್ರಸ್ಯ ವೀರ್ಯಾ ವೀರ್ಯಾಣಿ ವೃತ್ರಹನನಾದಿಲಕ್ಷಣಾನಿ ಸಾಮರ್ಥ್ಯಾನ್ಯಮಿತಾನಿ ಅಸ್ಯೇಯಂತಿ ಸಾಮಾರ್ಥ್ಯಾನಿ ನಾನ್ಯಾನೀತಿ ಪರಿಮಿತಾನಿ ನ ಭವಂತಿ | ಯದ್ವಾ || ಮೀಞ್ ಹಿಂಸಾಯಾಂ | ಛಾಂದಸೋ ಹ್ರಸ್ವಃ || ಶತ್ರುಭಿರಹಿಂಸಿತಾನಿ ಭವಂತಿ | ತಥಾ ಯಸ್ಯೇಂದ್ರಸ್ಯ ರಾಧೋ ಧನಂ ಪರ್ಯೇತವೇ ಶತ್ರುಭಿಃ ಪರಿಗಂತುಂ ಪ್ರಾಪ್ತುಂ ಶಕ್ಯಂ ನ ಭವತಿ | ಅತ ಏವ ಯಸ್ಯ ದಕ್ಷಿಣಾ ಧನಂ ದಾನಂ ವಿಶ್ವಮಭ್ಯಸ್ತಿ ಸರ್ವಂ ಸ್ತೋತೃಜನಮಭಿಭವತಿ | ತತ್ರ ದೃಷ್ಟಾಂತಃ | ಜ್ಯೋತಿರ್ನ | ಜ್ಯೋತಿಷಾಮಯನಸ್ಥಾಜ್ಜ್ಯೋತಿರಂತರಿಕ್ಷಂ | ಯಥಾಂತರಿಕ್ಷಂ ಸರ್ವಲೋಕಂ ಪಿಧಾಯ ತಿಷ್ಠತಿ ತದ್ವತ್ಸ್ತೋತೃಜನಂ ಧನದಾನೇನ ಪಿಧತ್ತ ಇತ್ಯರ್ಥಃ ||

| ಪ್ರತಿಪದಾರ್ಥ ||

**ಯಸ್ಯ**—ಯಾವ ಇಂದ್ರನ | **ವೀರ್ಯಾ**—ವೃತ್ರಹನನಾದಿ ಪರಾಕ್ರಮಕಾರ್ಯಗಳು | **ಅಮಿತಾನಿ**—ಅಪರಿಮಿತವಾಗಿವೆಯೋ (ಅಪ್ರತಿಹತವಾಗಿವೆಯೋ) | **ರಾಧಃ**—ಯಾವ ಇಂದ್ರನ ಧನವು | **ಪರ್ಯೇತವೇ**—

ಶತ್ರುಗಳಿಂದ ಅಪಹರಿಸಲು | **ನ**—ಸಾಧ್ಯವಿಲ್ಲವೋ | **ದಕ್ಷಿಣಾ**—ಯಾವ ಇಂದ್ರನ ಧನದಾನವು | **ಜ್యೋತಿರ್ನ**—ಅಂತರಿಕ್ಷದಂತೆ | **ವಿಶ್ವಂ**—ಸಮಸ್ತವನ್ನೂ | **ಅಭ್ಯಸ್ತಿ**—ವ್ಯಾಪಿಸಿರುವುದೋ ಆ ಇಂದ್ರನನ್ನು ಸ್ತುತಿಸು.

|| ಭಾವಾರ್ಥ ||

ಯಾವ ಇಂದ್ರನ ವೃತ್ರಹನನಾದಿಕಾರ್ಯಗಳು ಅಪರಿಮಿತವೂ, ಅಪ್ರತಿಹತವೂ ಆಗಿರುವುದೋ, ಯಾವ ಇಂದ್ರನ ಧನವು ಶತ್ರುಗಳಿಂದ ಅಪಹರಿಸಲು ಸಾಧ್ಯವಿಲ್ಲವೋ, ಯಾವ ಇಂದ್ರನ ಧನದಾನವು ಅಂತರಿಕ್ಷದಂತೆ ಸಮಸ್ತವನ್ನೂ ವ್ಯಾಪಿಸಿರುವುದೋ ಆ ಇಂದ್ರನನ್ನು ಸ್ತುತಿಸು.

## English Translation.

Whose energies are unbounded ; whose wealth cannot be carried away ; whose bounty extends like the firmament over all.

| ಸಂಹಿತಾಪಾಠಃ ||

ಸ್ತುಹೀಂದ್ರಂ ವ್ಯಶ್ವವದನೂರ್ಮಿಂ ವಾಜಿನಂ ಯಮಂ |
ಅರ್ಯೋ ಗಯಂ ಮಂಹಮಾನಂ ವಿ ದಾಶುಷೇ || ೨೨ ||

|| ಪದಪಾಠಃ ||

ಸ್ತುಹಿ | ಇಂದ್ರಂ | ವ್ಯಶ್ವವತ್ | ಅನೂರ್ಮಿಂ | ವಾಜಿನಂ | ಯಮಂ |
ಅರ್ಯಃ | ಗಯಂ | ಮಂಹಮಾನಂ | ವಿ | ದಾಶುಷೇ || ೨೨ ||

|| ಸಾಯಣಭಾಷ್ಯಂ ||

ಹೇ ವಿಶ್ವಮನಃ ಅನೂರ್ಮಿಂ | ಊರ್ಮಿರ್ಹಿಂಸಾಕರ್ಮಾ | ಕೈಶ್ಚಿದಪ್ಯಹಿಂಸ್ಯಂ | ಅಥವಾ ಶತ್ರುಭಿರಗಂತವ್ಯಂ | ಅತ ಏವ ವಾಜಿನಂ ಬಲವಂತಂ ಯಮಂ ಸ್ತೋತೃಭಿಃ ಸುನಿಯತಮೇತಾದೃಶಮಿಂದ್ರಂ ಸ್ತುಹಿ | ಸ್ತೋತ್ರೇ ದೃಷ್ಟಾಂತಃ | ವ್ಯಶ್ವವತ್ | ಯಥಾ ವ್ಯಶ್ವೋ ವಿಶ್ವಮನಸಃ ಪಿತೇಂದ್ರಮಸ್ತೌತ್ತದ್ವತ್ಸ್ತುಹೀತ್ಯರ್ಥಃ | ಸ್ತುತಶ್ಚೇತ್ ಅರ್ಯಃ ಸ್ವಾಮೀಂದ್ರೋ ದಾಶುಷೇ ಹವಿರ್ದತ್ತವತೇ ಯಜಮಾನಾಯ ಮಂಹಮಾನಂ ಪೂಜ್ಯಮಾನಂ ಗಯಂ ಧನಂ | ಯದ್ವಾ | ದೇವಾನಾಂ ಪೂಜಾಯೈ ಗಯಂ ಗೃಹಂ | ಗೃಹಮಸ್ತಿ ಚೇತ್ ದೇವಾ ಹವಿರ್ಭಿಃ ಪೂಜ್ಯಂತೇ | ತಾದೃಶಂ ಗೃಹಂ ವಿತರತಿ | ತಸ್ಮಾತ್ತ್ವಂ ಧನಗೃಹಲಾಭಾಯ ಸ್ತುಹೀತ್ಯರ್ಥಃ ||

| ಪ್ರತಿಪದಾರ್ಥ |

(ಎಲೈ ವಿಶ್ವಮನಾ ಎಂಬ ಋಷಿಯೇ) **ಅನೂರ್ಮಿಂ**—ಯಾರಿಂದಲೂ ಅಹಿಂಸಿತನೂ | **ವಾಜಿನಂ**—ಶಕ್ತಿಯುತನೂ | **ಯಮಂ**—ಸ್ತೋತೃಗಳ ನಿಯಮನಕ್ಕೆ ಹೇತುವೂ (ಅಥವಾ ಸ್ತೋತೃಗಳ ಸ್ತುತಿಯಿಂದ ನಿಯ

ಋತನೂ) ಆದ । **ಇಂದ್ರಂ**—ಇಂದ್ರನನ್ನು । **ವ್ಯಶ್ವವತ್**—ನಿಮ್ಮ ಪಿತೃವಾದ ವ್ಯಶ್ವನು ಸ್ತುತಿಸಿದಂತೆ । **ಸ್ತುಹಿ**—ಸ್ತುತಿಸು । **ಅರ್ಯಃ**—ಪೂಜ್ಯನಾದ ಇಂದ್ರನು । **ದಾಶುಷೇ**—ಹವಿಸ್ಸನ್ನರ್ಪಿಸುವ ಯಜಮಾನನಿಗೆ । **ಮಂಹಮಾನಂ**—ಪೂಜ್ಯವಾದ । **ಗಯಂ**—ಧನವನ್ನು ಅಥವಾ ಗೃಹವನ್ನು । **ವಿ**—ಅಧಿಕವಾಗಿ ಕೊಡುತ್ತಾನೆ.

॥ ಭಾವಾರ್ಥ ॥

ಎಲೈ ವಿಶ್ವಮನಾ ಎಂಬ ಋಷಿಯೇ, ಯಾರಿಂದಲೂ ಅಹಿಂಸಿತನೂ, ಶಕ್ತಿಯುತನೂ, ಸ್ತೋತೃಗಳ ನಿಯಮನಕ್ಕೆ ಹೇತುವೂ ಅಥವಾ ಸ್ತೋತೃಗಳ ಸ್ತುತಿಗಳಿಂದ ನಿಯಂತ್ರಿತನೂ ಆದ ಇಂದ್ರನನ್ನು ನಿಮ್ಮ ಪಿತೃವಾದ ವ್ಯಶ್ವನು ಸ್ತುತಿಸಿದಂತೆ ನೀನೂ ಸ್ತುತಿಸು. ಪೂಜ್ಯನಾದ ಇಂದ್ರನು ಹವಿಸ್ಸನ್ನರ್ಪಿಸುವ ಯಜಮಾನನಿಗೆ ಅತಿಯಾಗಿ ಬೆಲೆ ಬಾಳುವ ಧನವನ್ನು ಅಥವಾ ಗೃಹವನ್ನು ಅಧಿಕವಾಗಿ ಕೊಡುತ್ತಾನೆ.

English Translation.

Glorify Indra, the unassailable, the powerful, the regulator (of men) as was done by Vyashwa ; he, the lord, gives a spacious dwelling to the donor (of the oblation).

॥ ಸಂಹಿತಾಪಾಠಃ ॥

ಏವಾ ನೂನಮುಪ ಸ್ತುಹಿ ವೈಯಶ್ವ ದಶಮಂ ನವಂ ।
ಸುವಿದ್ವಾಂಸಂ ಚರ್ಕೃತ್ಯಂ ಚರಣೀನಾಂ ॥ ೨೩ ॥

॥ ಪದಪಾಠಃ ॥

ಏವ । ನೂನಂ । ಉಪ । ಸ್ತುಹಿ । ವೈಯಶ್ವ । ದಶಮಂ । ನವಂ ।
ಸುऽವಿದ್ವಾಂಸಂ । ಚರ್ಕೃತ್ಯಂ । ಚರಣೀನಾಂ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ವೈಯಶ್ವ ವ್ಯಶ್ವಸ್ಯ ಪುತ್ರ ವಿಶ್ವಮನಃ ಚರಣೀನಾಂ ಮನುಷ್ಯಾಣಾಂ ದೇಹೇ ಸ್ಥಿತಾನಾಂ ನವಾನಾಂ ಪ್ರಾಣಾನಾಂ ದಶಮಂ ದಶಸಂಖ್ಯಾಪೂರಕಂ । ತತ್ರ ಮಂತ್ರಃ । ನವ ವೈ ಪುರುಷೇ ಪ್ರಾಣಾ ಮನುಷ್ಯೇಷು ವರ್ತಮಾನಾ ಇಂದ್ರಸ್ತೇಷಾಂ ದಶಧಾ ಭವತೀಂದ್ರಸ್ಯಾತ್ಮಾನಂ ದಶಧಾ ಚರಂತಮಿತಿ । ಏತಾದೃಶಂ ಅತ ಏವ ನವಂ ಸ್ತುತ್ಯಂ ಸುವಿದ್ವಾಂಸಮಂತರ್ಯಾಮಿತ್ವಾತ್ ಸುಷ್ಠು ಸರ್ವಂ ಜಾನಂತಂ ಚರ್ಕೃತ್ಯಂ ಭೂಯೋ ಭೂಯಃ ಕಾರ್ಯೇಷು ಸರ್ವೈರ್ನಮಸ್ಕರ್ತವ್ಯಂ ಏವಂವಿಧಮಿಂದ್ರಮೇವ ನೂನಮಿದಾನೀಮುಪ ಸ್ತುಹಿ । ಸಮೀಪೇ ಸ್ತುಹಿ ॥

॥ ಪ್ರತಿಪದಾರ್ಥ ॥

**ವೈಯಶ್ವ**—ವ್ಯಶ್ವಪುತ್ರನಾದ ಎಲೈ ವಿಶ್ವಮನಾ ಎಂಬ ಋಷಿಯೇ। **ಚರಣೀನಾಂ**—ಮಾನವರ ದೇಹದೊಳಗಿರುವ ನವಪ್ರಾಣಗಳೊಡನೆ ಪೂರಕವಾದ। **ದಶಮಂ**—ಹತ್ತನೆಯ ಪ್ರಾಣರೂಪನೂ। **ನವಂ**—ಸ್ತುತ್ಯನೂ **ಸುವಿದ್ವಾಂಸಂ**—ಅಂತರ್ಯಾಮಿಯಾಗಿ ಸಕಲವನ್ನೂ ತಿಳಿದವನೂ। **ಚರ್ಕೃತ್ಯಂ ಏವ**—ಪದೇ ಪದೇ ಎಲ್ಲರಿಂದಲೂ ನಮಸ್ಕರಿಸಲ್ಪಡುವವನೂ ಆದ ಇಂದ್ರನನ್ನೇ। **ನೂನಂ**—ಈಗ। **ಉಪ ಸ್ತುಹಿ**—ಸ್ತುತಿಸು

॥ ಭಾವಾರ್ಥ ॥

ವ್ಯಶ್ವಪುತ್ರನಾದ ಎಲೈ ವಿಶ್ವಮನಾ ಎಂಬ ಋಷಿಯೇ, ಮಾನವರ ದೇಹದೊಳಗಿರುವ ನವಪ್ರಾಣಗಳೊಡನೆ ಪೂರಕವಾದ ಹತ್ತನೆಯ ಪ್ರಾಣರೂಪನೂ, ಸ್ತುತ್ಯನೂ, ಅಂತರ್ಯಾಮಿಯಾಗಿ ಸಕಲವನ್ನೂ ತಿಳಿದವನೂ, ಪದೇ ಪದೇ ಎಲ್ಲರಿಂದಲೂ ನಮಸ್ಕರಿಸಲ್ಪಡುವವನೂ ಆದ ಇಂದ್ರನನ್ನೇ ಈಗ ಸ್ತುತಿಸು.

## English Translation.

Praise verily at present, son of Vyshwa, praise (Indra), who is the tenth of the pervading (vital principles), the adorable, the all-wise, to be honoured repeatedly (by sacred rites).

॥ ಸಂಹಿತಾಪಾಠಃ ॥

ವೇತ್ಥಾ ಹಿ ನಿರ್ಋತೀನಾಂ ವಜ್ರಹಸ್ತ ಪರಿವೃಜಂ।
ಅಹರಹಃ ಶುಂಧ್ಯುಃ ಪರಿಪದಾಮಿವ ॥ ೨೪ ॥

॥ ಪದಪಾಠಃ ॥

ವೇತ್ಥ। ಹಿ। ನಿಃಽಋತೀನಾಂ। ವಜ್ರಽಹಸ್ತ। ಪರಿಽವೃಜಂ।
ಅಹಃಽಅಹಃ। ಶುಂಧ್ಯುಃ। ಪರಿಪದಾಂಽಇವ ॥ ೨೪ ॥

॥ ಸಾಯಣಭಾಷ್ಯಂ ॥

ಇದಾನೀಮೃಷಿರಿಂದ್ರಂ ಸಂಬೋಧ್ಯಾಹ। ಹೇ ವಜ್ರಹಸ್ತ ವಜ್ರಯುಕ್ತಹಸ್ತೇಂದ್ರ ನಿರ್ಋತೀನಾಮುಪದ್ರವಕಾರಿಣಾಂ ರಕ್ಷಸಾಂ ಪರಿವೃಜಂ ಪರಿವರ್ಜನಂ। ಹಿರವಧಾರಣೇ। ತ್ವಮೇವ ವೇತ್ಥ। ಜಾನೀಷೇ। ತತ್ರ ದೃಷ್ಟಾಂತಃ। ಅಹರಹಃ ಶುಂಧ್ಯುಃ। ಅಸ್ಮಿನ್ನುದಿತೇ ಸತಿ ಬ್ರಾಹ್ಮಣಾ ಆಹ್ನಿಕಂ ಕರ್ಮ ಕೃತ್ವಾ ಶುದ್ಧಾ ಭವಂತೀತಿ ಶೋಧನಹೇತುತ್ವಾತ್ ಶುಂಧ್ಯುರಾದಿತ್ಯಃ। ಪರಿಪದಾಮಿವ ಪರಿತೋ ಯಜಮಾನಾನಾಮಿವ। ಯದ್ವಾ। ಪರಿಪದಾಂ ಸಮಾನಾಧಿಕರಣಃ। ಪರಿತಃ ಪತತಾಂ ಪಕ್ಷಿಣಾಂ ವರ್ಜನಂ

ಸ್ವಸ್ಥಾನತ್ಯಾಗಮಹರಹಃ ಪ್ರತಿದಿವಸಂ ಯಥಾ ವೇತ್ತಿ । ಉದಿತೇ ಸೂರ್ಯೇ ಪಕ್ಷಿಣಃ ಸ್ವಸ್ಥಾನಂ ಪರಿತ್ಯಜ್ಯ ಸರ್ವತೋ ಗಚ್ಛಂತಿ ಖಲು । ಏವಂ ತ್ವಯೀಂದ್ರೇ ಸ್ವಬಲೇನ ಪ್ರಕಾಶಮಾನೇ ಸತಿ ಶತ್ರವಃ ಸ್ವಪುರಾದಿ ತ್ಯಕ್ತ್ವಾ ಪಲಾಯಂತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಜ್ರಹಸ್ತ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಅಹರಹಃ**—ಪ್ರತಿನಿತ್ಯವೂ । **ಶುಂಧ್ಯುಃ**—ಆದಿತ್ಯನು । **ಪರಿಪದಾಂ ಇವ**—ನಾನಾದಿಕ್ಕುಗಳಿಗೆ ಓಡುವ ಪಕ್ಷಿಗಳ ಚಲನವನ್ನು ತಿಳಿಯುವಂತೆ । **ನಿರ್ಋತೀನಾಂ**—ಪ್ರಜೆಗಳಿಗೆ ಉಪದ್ರವಕಾರಿಗಳಾದ ಅಸುರರು । **ಪರಿವೃಜಂ**—ನಿನ್ನ ಬೆದರಿಕೆಯಿಂದ ಅವರವರ ಪಟ್ಟಣಗಳನ್ನು ತ್ಯಜಿಸಿ ಓಡುವುದನ್ನೂ । **ವೇತ್ಥ ಹಿ**—ಅರಿಯುತ್ತೀಯಲ್ಲವೇ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಪ್ರತಿದಿನವೂ ಬೆಳಗೆದ್ದು ನಾನಾದಿಕ್ಕುಗಳಿಗೆ ಓಡುವ ಪಕ್ಷಿಗಳ ಚಲನವನ್ನು ಆದಿತ್ಯನು ತಿಳಿಯುವಂತೆ ಪ್ರಜೆಗಳಿಗೆ ಉಪದ್ರವಕಾರಿಗಳಾದ ಅಸುರರು ನಿನ್ನ ಬೆದರಿಕೆಯಿಂದ ಅವರವರ ಪಟ್ಟಣಗಳನ್ನು ತ್ಯಜಿಸಿ ಓಡುವುದನ್ನು ಅರಿಯುತ್ತೀಯಲ್ಲವೇ.

English Translation.

You are cognizant, wielder of the thunderbolt, of the departure of evil beings, as the purifying sun day by day (is of that) of the (birds) flying in all directions (from their roost).

॥ ವಿಶೇಷವಿಷಯಗಳು ॥

**ಪರಿಪದಾಂ ಇವ**—ಎಂಬುದಕ್ಕೆ ಯಜಮಾನರ ಎಂದೂ ಅರ್ಥಮಾಡಿದೆ. ಪ್ರತಿದಿನವೂ ಬೆಳಗೆದ್ದು ಅವರವರ ಕರ್ಮನಿರತರಾಗಿ ನಾನಾಕಡೆಗಳಿಗೆ ಓಡಾಡುವ ಯಜಮಾನರು ಎಂದರ್ಥ.

॥ ಸಂಹಿತಾಪಾಠಃ ॥

ತದಿಂದ್ರಾವ ಆ ಭರ ಯೇನಾ ದಂಸಿಷ್ಠ ಕೃತ್ವನೇ ।
ದ್ವಿತಾ ಕುತ್ಸಾಯ ಶಿಶ್ನಥೋ ನಿ ಚೋದಯ ॥ ೨೫ ॥

॥ ಪದಪಾಠಃ ॥

ತತ್ । ಇಂದ್ರ । ಅವಃ । ಆ । ಭರ । ಯೇನ । ದಂಸಿಷ್ಠ । ಕೃತ್ವನೇ ।
ದ್ವಿತಾ । ಕುತ್ಸಾಯ । ಶಿಶ್ನಥಃ । ನಿ । ಚೋದಯ ॥ ೨೫ ॥

|| ಸಾಯಣಭಾಷ್ಯಂ ||

ಹೇ ಇಂದ್ರ ತದವಸ್ತದ್ರಕ್ಷಣಮಸ್ಮಭ್ಯಮಾ ಭರ । ಹೇ ದಂಸಿಷ್ಠಾತ್ಯಂತಂ ದರ್ಶನೀಯ ಯದ್ವಾ ಶತ್ರೂಣಾಮುಪಕ್ಷಪಯಿತರಿಂದ್ರ ಕೃತ್ವನೇ ಕರ್ಮ ಕುರ್ವತೇ ಯಜಮಾನಾಯ ತದರ್ಥಂ ಯೇನ ಪಾಲನಮಕೃಥಾಃ ತದ್ರಕ್ಷಣಮಾ ಭರೇತಿ ಸಮನ್ವಯಃ । ಕಿಂಚ ಕುತ್ಸಾಯ ಕುತ್ಸನಾಮಕಾಯ ರಾಜರ್ಷಯೇ ದ್ವಿತಾ ದ್ವಿಧಾ ದ್ವಿಪ್ರಕಾರೇಣ ಶಿಶ್ನಥಃ ತ್ವಂ ಶತ್ರೂನವಧೀಃ । ತಸ್ಯೈ ದ್ವೈಧಂ ಪಾಲನಮ ಕಾರ್ಷೀರಿತ್ಯರ್ಥಃ । ತದ್ರಕ್ಷಣಮಸ್ಮಭ್ಯಂ ನಿ ಚೋದಯ । ನಿತರಾಮಸ್ಮದರ್ಥಂ ಪ್ರೇರಯ । ಯದ್ವಾ । ಕೃತ್ವನ ಇತಿ ಸಾಮಾನ್ಯೇನೋಕ್ತ್ವಾ ನಿಃಶ್ಯೇಷೇಣ ತದೇವಾಹ ಕುತ್ಸಾಯೇತ್ಯಾದಿ । ಶೇಷಂ ಪೂರ್ವವತ್ ||

| ಪ್ರತಿಪದಾರ್ಥ ||

ದಂಸಿಷ್ಠ—ದರ್ಶನೀಯವಾದ ರೂಪವುಳ್ಳ । ಇಂದ್ರ—ಎಲೈ ಇಂದ್ರನೇ । ಯೇನ—ಯಾವ ಪಾಲನ ಕೃತ್ಯದಿಂದ । ಕುತ್ಸಾಯ—ಕುತ್ಸನ ರಕ್ಷಣಾರ್ಥವಾಗಿ । ದ್ವಿತಾ—ಎರಡು ವಿಧವಾಗಿ । ಶಿಶ್ನಥಃ—ಶತ್ರುವನ್ನು ಕೊಂದೆಯೋ । ತತ್ ಅವಃ—ಅದೇ ರಕ್ಷಣವನ್ನು । ಕೃತ್ವನೇ—ಕರ್ಮಕರ್ತನಾದ ಯಜಮಾನನಿಗೂ । ಆ ಭರ—ಒದಗಿಸು । ನಿ ಚೋದಯ (ನಮ್ಮ ಕಡೆಗೂ) ಅದನ್ನು ಪ್ರೇರಿಸು.

| ಭಾವಾರ್ಥ |

ದರ್ಶನೀಯವಾದ ರೂಪವುಳ್ಳ ಎಲೈ ಇಂದ್ರನೇ, ಯಾವ ಪಾಲನಕೃತ್ಯದಿಂದ ಕುತ್ಸನ ರಕ್ಷಣಾರ್ಥವಾಗಿ ಎರಡು ವಿಧವಾಗಿ ನೀನು ಶತ್ರುವನ್ನು ಕೊಂದೆಯೋ ಅದೇ ರಕ್ಷಣವನ್ನು ಕರ್ಮಕರ್ತನಾದ ಯಜಮಾನನಿಗೂ ಒದಗಿಸು. ನಮ್ಮ ಕಡೆಗೂ ಅದನ್ನು ಪ್ರೇರಿಸು.

English Translation.

Indra, of goodly aspect, bring to the offerer (of the oblation) that (protection) wherewith to defend him you have twice slain (the foe) for Kutsa ; show the same (care of us).

|| ಸಂಹಿತಾಪಾಠಃ ||

ತಮು ತ್ವಾ ನೂನಮೀಮಹೇ ನವ್ಯಂ ದಂಸಿಷ್ಠ ಸನ್ಯಸೇ ।
ಸ ತ್ವಂ ನೋ ವಿಶ್ವಾ ಅಭಿಮಾತೀಃ ಸಕ್ಷಣಿಃ || ೨೬ ||

| ಪದಪಾಠಃ |

ತಂ । ಊಂ ಇತಿ । ತ್ವಾ । ನೂನಂ । ಈಮಹೇ । ನವ್ಯಂ । ದಂಸಿಷ್ಠ । ಸನ್ಯಸೇ ।
ಸಃ । ತ್ವಂ । ನಃ । ವಿಶ್ವಾಃ । ಅಭಿಽಮಾತೀಃ । ಸಕ್ಷಣಿಃ || ೨೬ ||

॥ ಸಾಯಣಭಾಷ್ಯಂ ॥

ಹೇ ದಂಸಿಷ್ಠಾತಿಶಯೇನ ದರ್ಶನೀಯೇಂದ್ರ ನವ್ಯಂ ಸ್ತೋತೃಭಿಃ ಸ್ತೋತವ್ಯಂ ತಮು ತಾದೃಶ-ಮೇವ ತ್ವಾ ತ್ವಾಂ ನೂನಮಿದಾನೀಮೀಮಹೇ । ವಯಂ ಯಾಚಾಮಹೇ । ಕಿಮರ್ಥಂ । ಸಂನ್ಯಸೇ ॥ ಅಸು ಕ್ಷೇಪಣೇ । ಭಾವೇ ಕ್ವಿಪ್ ॥ ಸಂನ್ಯಾಸಾರ್ಥಂ ಯಾಚಾಮಹ ಇತಿ ಶೇಷಃ । ಸ ತಾದೃಶಸ್ತ್ವಂ ನೋಽಸ್ಮಾಕಂ ವಿಶ್ವಾಃ ಸರ್ವಾ ಅಭಿಮಾತೀಃ ಶತ್ರುಸೇನಾಃ ಸಕ್ಷಣಿಃ ॥ ಸಹೇಃ ಸನಿಪ್ರತ್ಯಯಃ ॥ ಸಹನಶೀಲೋಽಭಿಭವನಶೀಲೋ ಭವಸಿ ॥

॥ ಪ್ರತಿಪದಾರ್ಥ ॥

**ದಂಸಿಷ್ಠ**—ಅತ್ಯಂತ ದರ್ಶನೀಯವಾದ ರೂಪವುಳ್ಳ ಎಲೈ ಇಂದ್ರನೇ । **ನವ್ಯಂ**—ಸ್ತೋತೃಗಳ ಸ್ತುತಿಗೆ ಪಾತ್ರನಾದವನೂ । **ತಮು**—ಪ್ರಸಿದ್ಧನೂ ಆದ । **ತ್ವಾ**—ನಿನ್ನನ್ನೇ । **ನೂನಂ**—ಈಗ । **ಸಂನ್ಯಸೇ**—ನಮ್ಮ ಸುಸ್ಥಿತಿಗಾಗಿ । **ಈಮಹೇ**—ಯಾಚಿಸುತ್ತೇವೆ । **ಸಃ**—ಅಂತಹ ಪ್ರಸಿದ್ಧನಾದ । **ತ್ವಂ**—ನೀನು । **ನಃ**—ನಮ್ಮ । **ವಿಶ್ವಾಃ**—ಸಮಸ್ತವಾದ । **ಅಭಿಮಾತೀಃ**—ಶತ್ರುಸೇನೆಗಳನ್ನು । **ಸಕ್ಷಣಿಃ**—ಸೋಲಿಸುವವನಾಗುತ್ತೀಯೆ.

॥ ಭಾವಾರ್ಥ ॥

ಅತ್ಯಂತ ದರ್ಶನೀಯವಾದ ರೂಪವುಳ್ಳ ಎಲೈ ಇಂದ್ರನೇ, ಸ್ತೋತೃಗಳ ಸ್ತುತಿಗೆ ಪಾತ್ರನೂ, ಪ್ರಸಿದ್ಧನೂ ಆದ ನಿನ್ನನ್ನೇ ಈಗ ನಮ್ಮ ಸುಸ್ಥಿತಿಗಾಗಿ ಯಾಚಿಸುತ್ತೇವೆ. ಅಂತಹ ಪ್ರಸಿದ್ಧನಾದ ನೀನು ನಮ್ಮ ಸಮಸ್ತವಾದ ಶತ್ರುಸೇನೆಗಳನ್ನು ಸೋಲಿಸುವವನಾಗುತ್ತೀಯೇ.

## English Translation.

(Indra) of goodly aspect, we implore you who are entitled to praise, for (our) preservation ; for you are the overcomer of all our adversaries.

॥ ಸಂಹಿತಾಪಾಠಃ ॥

ಯ ಋಕ್ಷಾದಂಹಸೋ ಮುಚದ್ಯೋ ವಾರ್ಯಾತ್ಸಪ್ತ ಸಿಂಧುಷು ।
ವಧರ್ದಾಸಸ್ಯ ತುವಿನೃಮ್ಣ ನೀನಮಃ ॥ ೨೭ ॥

॥ ಪದಪಾಠಃ ॥

ಯಃ । ಋಕ್ಷಾತ್ । ಅಂಹಸಃ । ಮುಚತ್ । ಯಃ । ವಾ । ಆರ್ಯಾತ್ । ಸಪ್ತ । ಸಿಂಧುಷು ।
ವಧಃ । ದಾಸಸ್ಯ । ತುವಿಽನೃಮ್ಣ । ನೀನಮಃ ॥ ೨೭ ॥

॥ ಸಾಯಣಭಾಷ್ಯಂ ॥

ಪೂರ್ವೋಽರ್ಧರ್ಚಃ ಪರೋಕ್ಷಕೃತಃ । ಯ ಇಂದ್ರ ಋಕ್ಷಾತ್ ॥ ಋಜೂನ್ ಮನುಷ್ಯಾನ್ ಕ್ಷಣೋತಿ । ಕ್ಷಣೋತೇರೌಣಾದಿಕೋ ಡಪ್ರತ್ಯಯಃ ॥ ತಸ್ಮಾದ್ರಕ್ಷಸೋ ಜಾತಾದಂಹಸಃ ಪಾಪರೂಪಾದುಪದ್ರವಾನ್ಮುಚತ್ ಮುಂಚತಿ । ರಾಕ್ಷಸ ಏನಂ ನ ಬಾಧತೇ ಕಿಂ ಪುನಸ್ತ್ವಂ ಹಂತೀತ್ಯರ್ಥಃ । ಅಪಿ ಚ ಯ ಇಂದ್ರಃ ಸಪ್ತ ಸಿಂಧುಷು ಗಂಗಾದ್ಯಾಸು ನದೀಷು । ಯದ್ವಾ । ಸಪ್ತ ಸರ್ಪಣಶೀಲಾಸು ಸಿಂಧುಷು । ತತ್ಕೂಲೇಷ್ವಿತ್ಯರ್ಥಃ । ಗಂಗಾಯಾಂ ಘೋಷ ಇತಿವತ್ । ಪಾ. ೧-೪-೪೨ । ತೇಷು ವರ್ತಮಾನಾನಾಂ ಸ್ತೋತೄಣಾಮರ್ಯಃ ಧನಾದಿಕಂ ಪ್ರೇರಯೇತ್ ॥ ಋ ಗತಿಪ್ರಾಪಣಯೋಃ । ಅರ್ತಿಲಿರ್ಜ್ಞಾ ಗುಣೋಽರ್ತಿಸಂಯೋಗಾದ್ಯೋಃ । ಪಾ. ೭-೪-೨೯ । ಇತಿ ಗುಣಃ । ಬಹುಲಂ ಛಂದಸೀತಿ ಲಿಜ್ಯಾಡಾಗಮಃ ॥ ಅಥ ಪ್ರತ್ಯಕ್ಷಃ । ಹೇ ತುವಿನೃಮ್ಣ ಬಹುಧನೇಂದ್ರ ದಾಸಸ್ಯೋಪಕ್ಷಪಯಿತುರಸುರಸ್ಯ ವಧರ್ಹನನಸಾಧಕಮಾಯುಧಂ ನೀನಮಃ । ನಮಯ ॥

। ಪ್ರತಿಪದಾರ್ಥ ।

**ಯಃ**—ಯಾರು । **ಋಕ್ಷಾತ್**—ಮಾನವರ ಹಿಂಸಾಕಾರಕರಾದ ರಾಕ್ಷಸರಿಂದ ಉತ್ಪನ್ನವಾದ । **ಅಂಹಸಃ**—ಪಾಪದಿಂದ । **ಮುಚತ್**—ಯಜಮಾನರನ್ನು ಬಿಡಿಸುವನೋ । **ಯಃ ವಾ**— ಯಾರು । **ಸಪ್ತ**—ಸಪ್ತಸಂಖ್ಯಾಕವಾದ । **ಸಿಂಧುಷು**—ಗಂಗಾದಿ ನದಿಗಳಲ್ಲಿ । **ಆರ್ಯಃ**—ಅನೇಕ ವಿಧವಾದ ಸಂಪತ್ತುಗಳನ್ನು ಪ್ರೇರಿಸುವನೋ (ಅವನು ಇಂದ್ರನೇ ಆಗಿದ್ದಾನೆ) । **ತುವಿನೃಮ್ಣ**—ಅನೇಕವಿಧವಾದ ಧನವುಳ್ಳ ಎಲೈ ಇಂದ್ರನೇ । **ದಾಸಸ್ಯ**—ಹಿಂಸಾಕಾರಕನಾದ ಅಸುರನ । **ವಧಃ**—ವಧಸಾಧನವಾದ ಆಯುಧವನ್ನು । **ನೀನಮಃ**—ಪ್ರಯೋಗಿಸು.

॥ ಭಾವಾರ್ಥ ॥

ಯಾರು ಮಾನವರ ಹಿಂಸಾಕಾರಕರಾದ ರಾಕ್ಷಸರಿಂದ ಉತ್ಪನ್ನವಾದ ಪಾಪದಿಂದ ಯಜಮಾನರನ್ನು ಬಿಡಿಸುವನೋ, ಯಾರು ಸಪ್ತಸಂಖ್ಯಾಕವಾದ ಗಂಗಾದಿ ನದಿಗಳಲ್ಲಿ ಅನೇಕ ವಿಧವಾದ ಸಂಪತ್ತುಗಳನ್ನು ಪ್ರೇರಿಸುವನೋ ಅವನು ಇಂದ್ರನೇ ಆಗಿದ್ದಾನೆ. ಅನೇಕ ವಿಧವಾದ ಧನವುಳ್ಳ ಎಲೈ ಇಂದ್ರನೇ, ಹಿಂಸಾಕಾರಕನಾದ ಅಸುರನ ವಧಸಾಧನವಾದ ಆಯುಧವನ್ನು ಅವನ ಮೇಲೆ ಪ್ರಯೋಗಿಸು.

## English Translation.

(He it is) who rescues men from the wickedness of evil beings, who enriches (the dwellers) on the seven rivers: now hurl, you who abound in wealth, your weapon at the Dasa.

। ಸಂಹಿತಾಪಾಠಃ ।

ಯಥಾ ವರೋ ಸುಷಾಮ್ಣೇ ಸನಿಭ್ಯ ಆ ವಹೋ ರಯಿಂ ।

ವೈಶ್ವೇಭ್ಯಃ ಸುಭಗೇ ವಾಜಿನೀವತಿ ॥ ೨೮ ॥

॥ ಪದಪಾಠಃ ॥

ಯಥಾ । ವರೋ ಇತಿ । ಸುಽಸಾಮ್ನೇ । ಸನಿಽಭ್ಯಃ । ಆ । ಅವಹಃ । ರಯಿಂ ।

ವಿಽಅಶ್ವೇಭ್ಯಃ । ಸುಽಭಗೇ । ವಾಜಿನೀಽವತಿ ॥ ೨೮ ॥

॥ ಸಾಯಣಭಾಷ್ಯಂ ॥

ಅನೇನ ತೃಚೇನ ವರೋರ್ದಾನಂ ಸ್ತೂಯತೇ । ಹೇ ವರೋ ವರುನಾಮಕ ರಾಜನ್ ಸುಷಾಮ್ಣೇ ಸುಸಾಮ್ನೇ ಸುಷಮಾಖ್ಯಂ ರಾಜಾನಂ ಸ್ವಪಿತರಮುದ್ದಿಶ್ಯ ತಸ್ಯೋತ್ತಮಲೋಕಪ್ರಾಪ್ತ್ಯರ್ಥಂ ಸನಿಭ್ಯೋ ಭಿಕ್ಷಮಾಣೇಭ್ಯ ಆ ಕೋಶಾದಾಹೃತ್ಯ ರಯಿಂ ಧನಂ ಯಥಾ ಪುರಾವಹಃ ಪ್ರಾಪಿತವಾನಸಿ ಅತ ಏವಮಿದಾನೀಂ ವ್ಯಶ್ವೇಭ್ಯೋ ವ್ಯಶ್ವಪುತ್ರೇಭ್ಯೋಽಸ್ಮಭ್ಯಂ ಧನಮಾವಹ । ವಾಜಿನೀವತೀತಿ ಪದಲಿಂಗಾದಿಯಮುಷಸ್ಯಾ । ಅಯಂ ತೃಚೋಽಪ್ಯುಷಸ್ಯ ಇತಿ ಶೌನಕೇನೋಕ್ತಂ । ಯಥಾ ವರೋ ಸುಷಾಮ್ಣ ಇತ್ಯುತ್ತಮಸ್ತ್ವೌಷಸಸ್ತೃಚ ಇತಿ । ಹೇ ಸುಭಗೇ ಶೋಭನಧನಯುಕ್ತೇ ವಾಜನೀವತ್ಯನ್ನವತಿ ॥ ಮತುಬನುವಾದಾರ್ಥಃ ॥ ಯದ್ವಾ । ವಾಜೋ ವಾಜನಂ ಗಮನಮಸ್ಯಾಸ್ತೀತಿ ವಾಜಿನ್ಯನ್ನಂ । ತದ್ವತಿ ಹೇ ಉಷಃ ತ್ವಂ ಚಾಸ್ಮಭ್ಯಂ ಧನಂ ಪ್ರಯಚ್ಛ । ವರೋರ್ಬಹುಧನದಾನಾತ್ತಸ್ಯ ದಾನಸ್ತುತಿಃ । ಯದ್ವಾ । ವಿಶ್ವಮನಾ ಋಷಿರ್ವರುಂ ಸಂಬೋಧ್ಯಾಹ । ಹೇ ಸುಭಗೇ ಶೋಭನಧನೇ ವಾಜಿನೀವತ್ಯನ್ನವತಿ ಹೇ ಉಷಃ ಯಥಾ ತ್ವಂ ಸುಷಾಮ್ಣೇ ಸುಷಾಮನಾಮ್ನೇ ಮಮ ಪಿತ್ರೇ ಧನಂ ದತ್ವಾ ತೇನೈವ ಸುಷಾಮ್ಣಾ ಸನಿಭ್ಯೋ ಯಾಚಮಾನೇಭ್ಯೋ ಧನಂ ಯಥಾ ಪ್ರಾಪಿತವತ್ಯಸಿ ತೇನ ಯಥಾ ದಾನಮಕಾರಯಃ ಏವಂ ಮಹ್ಯಮಪಿ ಧನಂ ದತ್ವಾ ವ್ಯಶ್ವೇಭ್ಯಃ ॥ ಪೂಜಾಯಾಂ ಬಹುವಚನಂ ॥ ವ್ಯಶ್ವಪುತ್ರಾಯ ವಿಶ್ವಮನಸೇ ಧನಂ ಪ್ರಾಪಯೇತಿ ಮಯಾಪಿ ದಾನಂ ಕರೋಷಿ । ಹೇ ವರೋ ಉಷಸಮೇವಂ ವದೇತ್ಯೃಷಿರಾಹ ॥

॥ ಪ್ರತಿಪದಾರ್ಥ ॥

**ವರೋ**—ವರುನಾಮಕನಾದ ಎಲೈ ರಾಜನೇ । **ಸುಷಾಮ್ಣೇ**—ಸುಷಾಮನೆಂಬ ನಿನ್ನ ಪಿತೃವಿಗೆ ಉತ್ತಮ ಲೋಕದ ಪ್ರಾಪ್ತಿಗಾಗಿ । **ಸನಿಭ್ಯಃ**—ಯಾಚಕರಿಗೆ । **ಆ**—ನಿನ್ನ ಕೋಶದಿಂದ ತೆಗೆದು । **ರಯಿಂ**—ಧನವನ್ನು । **ಯಥಾ**—(ಹಿಂದೆ) ಯಾವ ಪ್ರಕಾರವಾಗಿ । **ಅವಹಃ**—ಕೊಟ್ಟಿಯೋ (ಹಾಗೆಯೇ) । **ವ್ಯಶ್ವೇಭ್ಯಃ**—ವ್ಯಶ್ವಪುತ್ರರಾದ ನಮಗೂ ಈಗ ದಾನಮಾಡು । **ಸುಭಗೇ**—ಉತ್ತಮವಾದ ಸಂಪದ್ಯುಕ್ತಳೂ । **ವಾಜಿನೀವತಿ**—ಅನ್ನಯುಕ್ತಳೂ ಆದ ಎಲೈ ಉಷಸ್ಸೇ (ನೀನೂ ಧನವನ್ನು ನಮಗೆ ದಾನಮಾಡು).

॥ ಭಾವಾರ್ಥ ॥

ವರುನಾಮಕನಾದ ಎಲೈ ರಾಜನೇ, ಸುಷಾಮನೆಂಬ ನಿನ್ನ ಪಿತೃವಿಗೆ ಉತ್ತಮ ಲೋಕದ ಪ್ರಾಪ್ತಿಗಾಗಿ ಯಾಚಕರಿಗೆ ನಿನ್ನ ಕೋಶದಿಂದ ತೆಗೆದು ಧನವನ್ನು ಹಿಂದೆ ಯಾವ ಪ್ರಕಾರವಾಗಿ ಕೊಟ್ಟಿಯೋ ಹಾಗೆಯೇ, ವ್ಯಶ್ವಪುತ್ರನಾದ ನಮಗೂ ಈಗ ದಾನಮಾಡು. ಉತ್ತಮವಾದ ಸಂಪದ್ಯುಕ್ತಳೂ, ಅನ್ನಯುಕ್ತಳೂ ಆದ ಎಲೈ ಉಷಸ್ಸೇ ನೀನೂ ನಮಗೆ ಧನವನ್ನು ದಾನಮಾಡು.

## English Translation.

As you, Varu, have distributed vast wealth to those who have solicited (riches) on behalf of Sushaman, (so do you now distribute) to the descendants of Vyshwa: (and so too you), auspicious food-bestowing (Ushas).

|| ವಿಶೇಷವಿಷಯಗಳು ||

**ವರೋ** ಎಂದು **ವರು**ವೆಂಬ ರಾಜನನ್ನು ಸಂಬೋಧಿಸಿ, "ಎಲೈ ವರುವೇ ನೀನು ಉಷಸ್ಸನ್ನು ಪ್ರಾರ್ಥಿಸು. ಹಿಂದೆ ಉಷಸ್ಸು ಸುಷಾಮನಿಗೆ ಧನವನ್ನು ಒದಗಿಸಿ ಅವನಿಂದ ಯಾಚಕರಿಗೆಲ್ಲಾ ಧನವನ್ನು ಕೊಡಿಸಿದಂತೆ ಈಗಲೂ ನನಗೆ ಕೊಡಿಸು ಎಂದು ನಮಗಾಗಿ ಪ್ರಾರ್ಥಿಸು" ಎಂಬ ಇನ್ನೊಂದರ್ಥವೂ ಸಾಧ್ಯವೆಂದು ಭಾಷ್ಯಕಾರರು ತಿಳಿಸುತ್ತಾರೆ.

|| ಸಂಹಿತಾಪಾಠಃ ||

ಆ ನಾರ್ಯಸ್ಯ ದಕ್ಷಿಣಾ ವ್ಯಶ್ವಾಁ ಏತು ಸೋಮಿನಃ ।
ಸ್ಥೂರಂ ಚ ರಾಧಃ ಶತವತ್ಸಹಸ್ರವತ್ ॥ ೨೯ ॥

|| ಪದಪಾಠಃ ||

ಆ । ನಾರ್ಯಸ್ಯ । ದಕ್ಷಿಣಾ । ವಿಽಅಶ್ವಾನ್ । ಏತು । ಸೋಮಿನಃ ।
ಸ್ಥೂರಂ । ಚ । ರಾಧಃ । ಶತಽವತ್ । ಸಹಸ್ರಽವತ್ ॥ ೨೯ ॥

। ಸಾಯಣಭಾಷ್ಯಂ ।

ಅನಯಾ ಧನಮೃಷಿರಾದತ್ತವಾನಿತ್ಯಾಹ । ನಾರ್ಯಸ್ಯ । ನರಹಿತೋ ನರ್ಯಃ । ತಸ್ಯಾಪತ್ಯಂ ನಾರ್ಯಃ ॥ ತಸ್ಯಾತ್ಸಂಬಂಧಮಾತ್ರೇ ತಸ್ಯೇದಮಿತ್ಯಣ್ ॥ ತಸ್ಯ ಸೋಮಿನಃ ಸೋಮವತೋ ಯಜಮಾನಸ್ಯ । ಯದ್ವಾ । ವ್ಯಶ್ವಾನಾಂ ವಿಶೇಷಣಂ । ತಾದೃಶಸ್ಯ ವರೋರ್ದಕ್ಷಿಣಾ ದಾನಂ ಸೋಮವತೋ ವ್ಯಶ್ವಾನ್ ವ್ಯಶ್ವಪುತ್ರಾನಸ್ಮಾನ್ಯೈತು । ಆಗಚ್ಛತು । ಕಿಂಚ ಸ್ಥೂರಂ ಸ್ಥೂಲಂ ಶತವತ್ಸಹಸ್ರವಚ್ಛತಸಹಸ್ರಧನಯುಕ್ತಂ ರಾಧೋಽನ್ನಂ ಚಾಸ್ಮಾನಾಗಚ್ಛತು ॥

|| ಪ್ರತಿಪದಾರ್ಥ ||

**ನಾರ್ಯಸ್ಯ**—ಮಾನವರಿಗೆ ಹಿತಕಾರಿಯಾದ ನರ್ಯನ ಪುತ್ರನಾದ ವರುವಿನ । **ದಕ್ಷಿಣಾ**—ದಾನವು । **ಸೋಮಿನಃ**—ಸೋಮವನ್ನು ಅರ್ಪಿಸುವ ಯಜಮಾನರಾದ । **ವ್ಯಶ್ವಾನ್**-ವ್ಯಶ್ವಪುತ್ರನಾದ ನಮ್ಮನ್ನು । **ಆ ಏತು**-ಬಂದು ಸೇರಲಿ । **ಸ್ಥೂರಂ**—ಪ್ರಭೂತವಾದುದೂ । **ಶತವತ್**—ಶತಸಂಖ್ಯಾಕವಾದುದೂ । **ಸಹಸ್ರವತ್**—ಸಹಸ್ರಸಂಖ್ಯಾಕವಾದುದೂ ಆದ । **ರಾಧಃ ಚ**—ಅನ್ನಸಂಪತ್ತುಗಳೂ ಕೂಡ ನಮಗೆ ಬಂದು ಸೇರಲಿ.

। ಭಾವಾರ್ಥ ।

ಮಾನವರಿಗೆ ಹಿತಕಾರಿಯಾದ ನರ್ಯನ ಪುತ್ರನಾದ ವರುವಿನಿಂದ ಕೊಡಲ್ಪಡುವ ದಾನವು **ಸೋಮವನ್ನ** ಹಿಸುವ ಯಜ್ಞಕರ್ತರೂ, ವೃಶ್ವಪುತ್ರರೂ ಆದ ನಮ್ಮನ್ನು ಬಂದು ಸೇರಲಿ. ಪ್ರಭೂತವಾದುದೂ, **ಶತಸಂಖ್ಯಾಕ** ವಾದುದೂ ಸಹಸ್ರಸಂಖ್ಯಾಕವಾದುದೂ ಆದ ಅನ್ನಸಂಪತ್ತುಗಳೂ ಕೂಡ ನಮಗೆ ಬಂದು ಸೇರಲಿ.

English Translation.

May the gifts of a humane (prince), when offering the soma libation extend to the Vyshwas, and substantial wealth by hundreds and thousand.

। ವಿಶೇಷವಿಷಯಗಳು ।

**ಸೋಮಿನಃ** ಎಂಬುದು **ವರುವಿಗೆ** ವಿಶೇಷಣವಾಗಿ ಯಜಮಾನನಾದ ವರುವಿನ (ದಕ್ಷಿಣೆಯು) **ಎಂದೂ** ಅನ್ವಯವನ್ನು ಮಾಡಬಹುದು.

॥ ಸಂಹಿತಾಪಾಠಃ ॥

ಯತ್ತ್ವಾ ಪೃಚ್ಛಾದೀಜಾನಃ ಕುಹಯಾ ಕುಹಯಾಕೃತೇ ।
ಏಷೋ ಅಪಶ್ರಿತೋ ವಲೋ ಗೋಮತೀಮವ ತಿಷ್ಠತಿ ॥ ೩೦ ॥

॥ ಪದಪಾಠಃ ॥

ಯತ್ । ತ್ವಾ । ಪೃಚ್ಛಾತ್ । ಈಜಾನಃ । ಕುಹಯಾ । ಕುಹಯಾಽಕೃತೇ ।
ಏಷಃ । ಅಪಽಶ್ರಿತಃ । ವಲಃ । ಗೋಽಮತೀಂ । ಅವ । ತಿಷ್ಠತಿ ॥ ೩೦ ॥

। ಸಾಯಣಭಾಷ್ಯಂ ॥

ಇದಾನೀಮುಷಸಂ ಸಂಬೋಧ್ಯಾಭಿಧೀಯತೇ । ಹೇ ಕುಹಯಾಕೃತೇ ಸ ವರುಃ ಕುಹ ಕುತ್ರ ತಿಷ್ಠತೀತ್ಯೇತದಿಚ್ಛಯಾಭಿಲಕ್ಷಣಪ್ರವೃತ್ತ್ಯೈರ್ಜಿಜ್ಞಾಸುಭಿಃ ಪುರಸ್ಕೃತೇ ॥ ಕುಹಶಬ್ದಾತ್ಕೃಚ್ ॥ ಏತಾದೃಶೇ ಹೇ ಉಷಃ ತ್ವಾ ತ್ವಾಂ ಯದ್ಯದಾ ಕಶ್ಚಿತ್ಪೃಚ್ಛಾತ್ ಪೃಚ್ಛತಿ ಈಜಾನ ಇಷ್ಟವಾನ್ ವರುಃ ಕುಹಯಾ ಕ್ವ ತಿಷ್ಠತೀತಿ ಯದಾ ಪೃಚ್ಛತಿ ತದಾನೀಮಪಶ್ರಿತಃ ಸರ್ವೈರಾಶ್ರಿತಃ । ಯದ್ವಾ । ವಿವೃತದ್ವಾರಃ । ಯದಾ ಯಾಚಮಾನಾ ಆಗಚ್ಛಂತಿ ತದಾ ದೌವಾರಿಕಾ ನ ಪ್ರತಿಬಧ್ನಂತೀತ್ಯರ್ಥಃ । ತಾದೃಶೋ ಬಲೋ ವರಃ ಸ್ವಬಲೇನಾವಾರಕಃ ಶತ್ರೂಣಾಂ । ಯದ್ವಾ । ಭಿಕ್ಷೂಣಾಂ ಧನಾದಿಪ್ರದಾನೇನಾವರಿತಾ। ಏಷೋ ಏಷ ವರುರ್ಗೋಮತೀಮೇತನ್ನಾಮಿಕಾಂ ನದೀಂ ॥ ಕಾಲಾಧ್ವನೋರಿತಿ ದ್ವಿತೀಯಾ ॥ ತಸ್ಯಾಸ್ತೀರೇಽವ ತಿಷ್ಠತೀತಿ ತದಾನೀಂ ತ್ವಂ ಕಥಯಸಿ ॥

|| ಪ್ರತಿಪದಾರ್ಥ ||

**ಕುಹಯೋಕ್ಸೈಕೇ**—ವರುವಿನ ವಿಷಯದಲ್ಲಿ ಅವನೆಲ್ಲಿದ್ದಾನೆಂದು ಪ್ರಶ್ನಿಸಲ್ಪಡುವ ಎಲೈ ಉಷಸ್ಸೇ | **ಈಜಾನಃ**—ಯಜ್ಞಕರ್ತನಾದ ವರುವು | **ಕುಹಯಾ**—ಎಲ್ಲಿದ್ದಾನೆ ಎಂದು | **ಯತ್**—ಯಾವಾಗ | **ತ್ವಾ**—ನಿನ್ನನ್ನು | **ಪೃಚ್ಛಾತ್**—ಕೇಳುವನೋ ಆಗ | **ಅಪಶ್ರಿತಃ**—ಎಲ್ಲರಿಗೂ ಆಶ್ರಯನೂ | **ವಲಃ**—ಶತ್ರುಗಳನ್ನು ಎದುರಿಸುವವನೂ ಆದ | **ವಿಷಃ**—ವರುವು | **ಗೋಮತೀಂ**—ಗೋಮತೀನದಿಯ ದಡದ ಮೇಲೆ | **ಅವ ತಿಷ್ಠತಿ**—ತಂಗಿದ್ದಾನೆ (ಎಂದು ಹೇಳು).

|| ಭಾವಾರ್ಥ ||

ವರುವಿನ ವಿಷಯದಲ್ಲಿ ಅವನೆಲ್ಲಿದ್ದಾನೆಂದು ಪ್ರಶ್ನಿಸಲ್ಪಡುವ ಎಲೈ ಉಷಸ್ಸೇ, "ಯಜ್ಞಕರ್ತನಾದ ವರುವು ಎಲ್ಲಿದ್ದಾನೆ" ಎಂದು ಯಾರಾದರೂ ನಿನ್ನನ್ನು ಕೇಳಿದರೆ, ಆಗ, "ಎಲ್ಲರಿಗೂ ಆಶ್ರಯನಾದ ವರುವು ಗೋಮತೀ ನದಿಯ ದಡದ ಮೇಲಿದ್ದಾನೆ" ಎಂದು ತಿಳಿಸು.

English Translation.

If any ask of you, (Ushas), when anywhere present, where the sacrificer (Varu dwells), (reply) the powerfull (prince), the refuge of all, abides on (the banks of) the Gomathi river.



# ಇಪ್ಪತ್ತೈದನೆಯ ಸೂಕ್ತವು

| ಸಾಯಣಭಾಷ್ಯಂ |

**ತಾ ವಾಮಿತಿ ಚತುರ್ವಿಂಶತ್ಯೃಚಂ ಪಂಚಮಂ ಸೂಕ್ತಂ | ಅತ್ರೇಯಮನುಕ್ರಮಣಿಕಾ | ತಾ ವಾಂ ಚತುರ್ವಿಂಶತಿರ್ಮೈತ್ರಾವರುಣಂ ದಶಮ್ಯಾದ್ಯಾಸ್ತಿಸ್ರೋ ವೈಶ್ವದೇವ್ಯ ಉಪಾಂತ್ಯೋಷ್ಣಿಗ್ಗರ್ಭೇತಿ | ವೈಶ್ವಪುತ್ರೋ ವಿಶ್ವಮನಾ ಋಷಿಃ | ಉಷ್ಣಿಕ್ ಛಂದಃ | ಉಪಾಂತ್ಯೋಷ್ಣಿಗ್ಗರ್ಭಾ ಷಟ್‌ಸಪ್ತೈಕಾದಶಾ ಉಷ್ಣಿಗ್ಗರ್ಭಾ | ಅನು. ೪-೩ | ಇತಿ ತಲ್ಲಕ್ಷಣೋಪೇತತ್ವಾತ್ | ದಶಮ್ಯೇಕಾದಶೀದ್ವಾದಶ್ಯೋ ವೈಶ್ವದೇವ್ಯೋऽವಶಿಷ್ಟಾನಾಂ ಮಿತ್ರಾವರುಣೌ ದೇವತಾ || ಸೂಕ್ತವಿನಿಯೋಗೋ ಲೈಂಗಿಕಃ ||**

ಅನುವಾದವು—**ತಾ ವಾಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ತಾ ವಾಂ ಚತುರ್ವಿಂಶತಿರ್ಮೈತ್ರಾವರುಣಂ ದಶಮ್ಯಾದ್ಯಾಸ್ತಿಸ್ರೋವೈಶ್ವದೇವ್ಯ ಉಪಾಂತ್ಯೋಷ್ಣಿಗ್ಗರ್ಭಾ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವೃಶ್ವಪುತ್ರನಾದ **ವಿಶಮನಾಃ** ಎಂಬವನು ಋಷಿಯು. ಈ ಸೂಕ್ತದ ಹತ್ತು, ಹನ್ನೊಂದು, ಹನ್ನೆರಡನೆಯ ಋಕ್ಕುಗಳಿಗೆ ವಿಶ್ವೇದೇವತೆಗಳು ದೇವತೆಯು; ಉಳಿದ ಋಕ್ಕುಗಳಿಗೆ ಮಿತ್ರಾವರುಣರು ದೇವತೆಯು; ಉಷ್ಣಿಕ್‌ಛಂದಸ್ಸು.

ಕೊನೆಯ ಋಕ್ಕಿನ ಹಿಂದಿನ ಋಕ್ಕು ಎಂದರೆ ೨೩ನೆಯ ಋಕ್ಕು ಉಷ್ಣಿಗ್ಗರ್ಭಾ ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಮೊದಲನೆಯ ಪಾದದಲ್ಲಿ ಆರು ಅಕ್ಷರಗಳೂ, ಎರಡನೆಯ ಪಾದದಲ್ಲಿ ಏಳು ಅಕ್ಷರಗಳೂ, ಮೂರನೆಯ ಪಾದದಲ್ಲಿ ಹನ್ನೊಂದಕ್ಷರಗಳೂ ಇದ್ದರೆ ಆ ಋಕ್ಕು ಉಷ್ಣಿಗ್ಗರ್ಭಾ ಎಂಬ ಛಂದಸ್ಸೆನಿಸುವುದು-ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೨೫

ಮಂಡಲ—೮ ॥ ಅನುವಾಕ—೪ ॥ ಸೂಕ್ತ—೨೫ ॥
ಅಷ್ಟಕ—೬ ॥ ಅಧ್ಯಾಯ—೨ ॥ ವರ್ಗ—೨೧, ೨೨, ೨೩, ೨೪, ೨೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥
॥ ಋಷಿಃ—ವಿಶ್ವಮನಾ ವೈಯಶ್ವಃ ॥
॥ ದೇವತಾ—೧-೯, ೧೩-೨೪. ಮಿತ್ರಾವರುಣೌ । ೧೦-೧೨. ವಿಶ್ವೇದೇವಾಃ ॥
॥ ಛಂದಃ—೧-೨೨, ೨೪. ಉಷ್ಣಿಕ್ । ೨೩. ಉಷ್ಣಿಗ್ಗರ್ಭಾ ॥

॥ ಸಂಹಿತಾಪಾಠಃ ॥

ತಾ ವಾಂ ವಿಶ್ವಸ್ಯ ಗೋಪಾ ದೇವಾ ದೇವೇಷು ಯಜ್ಞಿಯಾ ।
ಋತಾವಾನಾ ಯಜಸೇ ಪೂತದಕ್ಷಸಾ ॥ ೧ ॥

॥ ಪದಪಾಠಃ ॥

ತಾ । ವಾಂ । ವಿಶ್ವಸ್ಯ । ಗೋಪಾ । ದೇವಾ । ದೇವೇಷು । ಯಜ್ಞಿಯಾ ।
ಋತಽವಾನಾ । ಯಜಸೇ । ಪೂತಽದಕ್ಷಸಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮಿತ್ರಾವರುಣೌ ವಿಶ್ವಸ್ಯ ಸರ್ವಸ್ಯ ಲೋಕಸ್ಯ ಗೋಪಾ ಗೋಪಾಯಿತಾರೌ ದೇವಾ ದೇವೌ ದ್ಯೋತನಶೀಲೌ ದೇವೇಷು ಮಧ್ಯೇ ಯಜ್ಞಿಯಾ ಯಜ್ಞಾರ್ಹೌ ತಾ ತೌ ತಾದೃಶೌ ವಾಂ ಯುವಾಂ ಹವಿಷ್ಪ್ರದಾನಾರ್ಥಂ ಯಜಮಾನಂ ಭಜಥಃ । ಅತ ಏವ ಹೇ ವಿಶ್ವಮನಃ ಋತಾವಾನಶಾವಾನೌ ಸತ್ಯವಂತೌ ಯಜ್ಞವಂತೌ ವಾ ಪೂತದಕ್ಷಸೌ ಶುದ್ಧಬಲೌ । ಅವಾಂ ಬಲವಂತಾವಿತಿ ವಚನಮಾತ್ರೇಣ ಬಲವಂತೌ ನ ಭವತಃ ಕಿಂತು ಯಥಾರ್ಥತ್ವೇನ ಸಾಮರ್ಥ್ಯವಂತೌ । ಮಿತ್ರಾವರುಣೌ ಯಜಸೇ । ಹವಿರ್ಭಿಃ ಪೂಜಯಸಿ ॥

॥ ಪ್ರತಿಪದಾರ್ಥ ॥

ದೇವಾ—ಪ್ರಕಾಶಮಾನರೂ । ದೇವೇಷು—ದೇವತೆಗಳ ನಡುವೆ । ಯಜ್ಞಿಯಾ—ಪೂಜಾರ್ಹರೂ । ತಾ—ಪ್ರಸಿದ್ಧರೂ ಆದ ಎಲೈ ಮಿತ್ರಾವರುಣರೇ । ವಾಂ—ನೀವಿಬ್ಬರೇ । ವಿಶ್ವಸ್ಯ—ಸಕಲ ಲೋಕಗಳಿಗೂ ।

**ಗೋಪಾ**—ರಕ್ಷಕರಾಗಿದ್ದೀರಿ । (ಎಲೈ ವಿಶ್ವಮನಾ ಎಂಬ ಋಷಿಯೇ) **ಋತಾವಾನಾ**—ಸತ್ಯವಂತರೂ । **ಪೂತದಕ್ಷಸಾ**—ಶುದ್ಧವಾದ ಬಲವುಳ್ಳವರೂ ಆದ ಮಿತ್ರಾವರುಣರನ್ನೇ ಉದ್ದೇಶಿಸಿ । **ಯಜಸೇ**—ಆರಾಧಿಸು.

। ಭಾವಾರ್ಥ ।

ಪ್ರಕಾಶಮಾನರೂ, ದೇವತೆಗಳ ನಡುವೆ ಪೂಜಾರ್ಹರೂ, ಪ್ರಸಿದ್ಧರೂ ಆದ ಎಲೈ ಮಿತ್ರಾವರುಣರೇ, ನೀವಿಬ್ಬರೇ ಸಕಲ ಲೋಕಗಳಿಗೂ ರಕ್ಷಕರಾಗಿದ್ದೀರಿ. ಎಲೈ ವಿಶ್ವಮನಾ ಎಂಬ ಋಷಿಯೇ, ಸತ್ಯವಂತರೂ, ಶುದ್ಧವಾದ ಬಲವುಳ್ಳವರೂ ಆದ ಮಿತ್ರಾವರುಣರನ್ನೇ ಉದ್ದೇಶಿಸಿ ಆರಾಧಿಸು.

English Translation.

You two are the protectors of the universe, divine, and to be adored among the gods; therefore, (Vyshwamanas), you sacrifice to the pair who are observent of truth and endowed with real power.

॥ ಸಂಹಿತಾಪಾಠಃ ॥

ಮಿತ್ರಾ ತನಾ ನ ರಥ್ಯಾ೩ ವರುಣೋ ಯಶ್ಚ ಸುಕ್ರತುಃ ।
ಸನಾತ್ಸುಜಾತಾ ತನಯಾ ಧೃತವ್ರತಾ ॥ ೨ ॥

॥ ಪದಪಾಠಃ ॥

ಮಿತ್ರಾ । ತನಾ । ನ । ರಥ್ಯಾ । ವರುಣಃ । ಯಃ । ಚ । ಸುಽಕ್ರತುಃ ।
ಸನಾತ್ । ಸುಽಜಾತಾ । ತನಯಾ । ಧೃತಽವ್ರತಾ ॥ ೨ ॥

॥ ಸಾಯಣಭಾಷ್ಯಂ ॥

ಸುಕ್ರತುಃ ಶೋಭನಕರ್ಮಾ ಯೋ ವರುಣಃ ಸುಕರ್ಮಾ ಮಿತ್ರಾ ಚ ಮಿತ್ರಾವರುಣೌ । ತೀದೃಶೌ । ತನಾ । ತನ್ವಂತಿ ಮುಕುಟಕಟಕಾದಿನೇತಿ ತನಾನಿ ಧನಾನಿ । ನಶ್ಚಾರ್ಥೇ । ಧನಾನಿ ಚ ರಥ್ಯಾ ರಥ್ಯಾ ನೇತಾರೌ । ಯದ್ವಾ । ಧನಾನಿ ಕರ್ಮಣಃ ಕರ್ತ್ರಪೇಕ್ಷತ್ವಾತ್ ಪ್ರಯಚ್ಛಂತಾವಿತಿ ಸಂಬಧ್ಯತೇ । ತಾದೃಶೌ ರಥ್ಯೌ ರಥವಂತೌ ಸನಾಚ್ಚಿರಾದೇವ ಸುಜಾತಾ ಸುಜಾತೌ ಶೋಭನಜನ್ಮಾನೌ । ತದೇವಾಹ । ತನಯಾ ತನಯೌ ಅದಿತೇಃ ಪುತ್ರೌ ಧೃತವ್ರತಾ ಧೃತವ್ರತೌ ಧೃತಕರ್ಮಾಣೌ ತಾ ಯಜಸ ಇತಿ ಪೂರ್ವೇಣ ಸಮನ್ವಯಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ । **ವರುಣಃ**—ವರುಣನು । **ಸುಕ್ರತುಃ**—ಶ್ರೇಷ್ಠವಾದ ಕರ್ಮವುಳ್ಳವನೋ । **ಪ—ಮಿತ್ರ**! **ಮಿತ್ರಾ ಚ**—ಅದೇ ಗುಣವುಳ್ಳ ಯಾವ ಮಿತ್ರನಿರುವನೋ ಈ ಮಿತ್ರಾವರುಣರಿಬ್ಬರೂ । **ತನಾ**—

**ಧನಪ್ರದರೂ** | **ರಥ್ಯಾ**—ಕರ್ಮನೇತೃಗಳೂ | **ಸನಾತ್**—ಆದಿಯಿಂದಲೇ | **ಸುಜಾತಾ**—ಉತ್ತಮವಾದ ಜನ್ಮವುಳ್ಳವರೂ | **ತನಯಾ**—ಅದಿತಿಪುತ್ರರೂ | **ಧೃತವ್ರತಾ**—ನಿಯಮದಿಂದ ವ್ರತವನ್ನು ಪಾಲಿಸುವಂತೆ ಪ್ರೇರಿಸುವವರೂ ಆಗಿದ್ದಾರೆ (ಇಂತಹ ಮಿತ್ರಾವರುಣರನ್ನೇ ಆರಾಧಿಸು).

॥ ಭಾವಾರ್ಥ ॥

ಯಾವ ವರುಣನು ಶ್ರೇಷ್ಠವಾದ ಕರ್ಮವುಳ್ಳವನೋ, ಅದೇ ಗುಣವುಳ್ಳ ಯಾವ ಮಿತ್ರನಿರುವನೋ, ಈ ಮಿತ್ರಾವರುಣರಿಬ್ಬರೂ ಧನಪ್ರದರೂ, ಕರ್ಮನೇತೃಗಳೂ, ಆದಿಯಿಂದಲೇ ಉತ್ತಮವಾದ ಜನ್ಮವುಳ್ಳವರೂ, ಅದಿತಿಪುತ್ರರೂ, ನಿಯಮದಿಂದ ವ್ರತನಿಯಾಮಕರೂ ಆಗಿದ್ದಾರೆ ಇಂತಹ ಮಿತ್ರಾವರುಣರನ್ನೇ ಆರಾಧಿಸು.

## English Translation.

Mitra and Varuna, doers of good deeds, (diffusers of) riches, who are the charioteers (of men), well born of old, the sons (of Aditi) observant of vows, (you are worshipped by me).

॥ ಸಂಹಿತಾಪಾಠಃ ॥

ತಾ ಮಾತಾ ವಿಶ್ವವೇದಸಾಸುರ್ಯಾಯ ಪ್ರಮಹಸಾ ।
ಮಹೀ ಜಜಾನಾದಿತಿರ್ಋತಾವರೀ ॥ ೩ ॥

॥ ಪದಪಾಠಃ ॥

ತಾ । ಮಾತಾ । ವಿಶ್ವऽವೇದಸಾ । ಅಸುರ್ಯಾಯ । ಪ್ರऽಮಹಸಾ ।
ಮಹೀ । ಜಜಾನ । ಅದಿತಿಃ । ಋತऽವರೀ ॥ ೩ ॥

॥ ಸಾಯಣಭಾಷ್ಯಂ ॥

**ಅದಿತೇಸ್ತನಯತ್ವಮೇವ ಸ್ಫುಟಯತಿ । ವಿಶ್ವವೇದಸಾ ವಿಶ್ವವೇದಸೌ ಸರ್ವಧನೌ । ಯದ್ವಾ । ವಿಶ್ವಾನಿ ಸ್ಥಾವರಜಂಗಮಾತ್ಮಕಾನಿ ಸರ್ವಾಣಿ ವಿದತುರ್ಜಾನೀತ ಇತಿ ವಿಶ್ವವೇದಸೌ । ಪ್ರಮಹಸಾ ಪ್ರಮಹಸೌ ಪ್ರಕೃಷ್ಟತೇಜಸ್ಕೌ ತಾ ತೌ ತಾದೃಶೌ ಮಿತ್ರಾವರುಣೌ ಮಹೀ ಮಹತ್ಯೃತಾವರೀ ಸತ್ಯವತೀ ಮಾತಾ ದೇವಮಾತಾದಿತಿರ್ಜಜಾನ । ಜನಯಾಮಾಸ । ಕಿಮರ್ಥಂ । ಅಸುರ್ಯಾಯಾಸುರಾಣಾಂ ಹಂತ್ರೇ ಬಲಾಯ । ಅಸುರಾನ್ ಹಂತುಮುತ್ಪಾದಿತವತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವಿಶ್ವವೇದಸಾ**—ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತನ್ನೂ ತಿಳಿದವರೂ | **ಪ್ರಮಹಸಾ**—ಅತ್ಯುತ್ತಮವಾದ ತೇಜಸ್ಸುಳ್ಳವರೂ | **ತಾ**—ಪ್ರಸಿದ್ಧರೂ ಆದ ಮಿತ್ರಾವರುಣರನ್ನು | **ಮಹೀ**—ಮಹತ್ಸ್ವರೂಪ

ವುಳ್ಳವಳೂ | **ಋತಾವರೀ**—ಸತ್ಯಸ್ವರೂಪಳೂ | **ಮಾತಾ**—ದೇವಮಾತೆಯೂ ಆದ | **ಅದಿತಿಃ**—ಅದಿತಿಯು | **ಅಸುರ್ಯಾಯ**— ಅಸುರರನ್ನು ನಾಶಮಾಡಲು | **ಜಜಾನ**—ಹಡೆದಳು.

|| ಭಾವಾರ್ಥ ||

ಸ್ಥಾವರಜಂಗಮಾತ್ಮಕವಾದ ಸಕಲ ಜಗತ್ತನ್ನೂ ತಿಳಿದವರೂ ಅತ್ಯುತ್ತಮವಾದ ತೇಜಸ್ಸುಳ್ಳವರೂ, ಪ್ರಸಿದ್ಧರೂ ಆದ ಮಿತ್ರಾವರುಣರನ್ನು ಮಹತ್ಸ್ವರೂಪವುಳ್ಳವಳೂ, ಸತ್ಯಸ್ವರೂಪಳೂ ದೇವಮಾತೆಯೂ ಆದ ಅದಿತಿಯು ಅಸುರರನ್ನು ನಾಶಮಾಡಲು ಹಡೆದಳು.

## English Translation.

The great and veracious Aditi, the mother (of the gods), gave birth to those two who are possesscd of all affluence, and shinnig with great splendour, for the (destrucation of the) Asuras.

| ಸಂಹಿತಾಪಾಠಃ |

ಮಹಾಂತಾ ಮಿತ್ರಾವರುಣಾ ಸಮ್ರಾಜಾ ದೇವಾವಸುರಾ |
ಋತಾವಾನಾವೃತಮಾ ಘೋಷತೋ ಬೃಹತ್ || ೪ ||

| ಪದಪಾಠಃ |

ಮಹಾಂತಾ | ಮಿತ್ರಾವರುಣಾ | ಸಂsರಾಜಾ | ದೇವೌ | ಅಸುರಾ |
ಋತsವಾನಾ | ಋತಂ | ಆ | ಘೋಷತಃ | ಬೃಹತ್ || ೪ ||

|| ಸಾಯಣಭಾಷ್ಯಂ ||

ಮಹಾಂತಾ ಗುಣಾಧಿಕ್ಯೇನ ಮಹಾಂತೌ ಸಮ್ರಾಜಾ ಸಮ್ರಾಜೌ ಸಮ್ಯಗ್ದೀಪ್ಯಮಾನಾವಸುರಾ-ವಸುರೌ ಬಲವಂತೌ | ಯದ್ವಾ | ಸರ್ವಾಂತರ್ಯಾಮಿತಯಾ ಪ್ರೇರಕೌ | ಋತಾವಾನಾ ಸತ್ಯವಂತೌ ಮಿತ್ರಾವರುಣೌ ದೇವೌ ಬೃಹತ್ ಸ್ತೋತ್ರಶಸ್ತ್ರಾದಿನಾ ಮಹಾಂತಮೃತಂ ಯಜ್ಞಮಾ ಘೋಷತಃ | ಸ್ವದೀಪ್ತ್ಯಾ ಪ್ರಕಾಶಯತಃ || ಘುಷೇರ್ಲಟಿ ರೂಪಂ ||

|| ಪ್ರತಿಪದಾರ್ಥ ||

**ಮಹಾಂತಾ**— ಅತ್ಯಧಿಕವಾದ ಗುಣಗಳುಳ್ಳವರೂ | **ಸಮ್ರಾಜಾ**—ಅತಿಶಯವಾಗಿ ಪ್ರಕಾಶಿಸುವವರೂ | **ಅಸುರಾ**—ಶಕ್ತಿಯುತರೂ | **ದೇವೌ**—ದೇವತಾತ್ಮರೂ ಆದ | **ಮಿತ್ರಾವರುಣಾ**—ಮಿತ್ರಾವರುಣರು |

**ಬೃಹತ್**—ಸ್ತೋತ್ರಶಸ್ತ್ರಾದಿಗಳಿಂದ ಮಹತ್ಸ್ವರೂಪವನ್ನು ಪಡೆದ । **ಋತಂ**—ಯಜ್ಞವನ್ನು । **ಆ ಘೋಷತಃ**—ಪ್ರಕಾಶಗೊಳಿಸುತ್ತಾರೆ.

॥ ಭಾವಾರ್ಥ ॥

ಅತ್ಯಧಿಕವಾದ ಗುಣಗಳುಳ್ಳವರೂ, ಅತಿಶಯವಾಗಿ ಪ್ರಕಾಶಿಸುವವರೂ, ಶಕ್ತಿಯುತರೂ, ದೇವತಾತ್ಮರೂ ಆದ ಮಿತ್ರಾವರುಣರು ಸ್ತೋತ್ರಶಸ್ತ್ರಾದಿಗಳಿಂದ ಮಹತ್ಸ್ವರೂಪವನ್ನು ಪಡೆದ ಯಜ್ಞವನ್ನು ಪ್ರಕಾಶಗೊಳಿಸುತ್ತಾರೆ.

English Translation.

The great Mitra and Varuna, the two sovereign and powerful deities, the observers of truth, illume our solemn rite.

॥ ಸಂಹಿತಾಪಾಠಃ ॥

ನಪಾತಾ ಶವಸೋ ಮಹಃ ಸೂನೂ ದಕ್ಷಸ್ಯ ಸುಕ್ರತೂ ।
ಸೃಪ್ರದಾನೂ ಇಷೋ ವಾಸ್ತ್ವಧಿ ಕ್ಷಿತಃ ॥ ೫ ॥

॥ ಪದಪಾಠಃ ॥

ನಪಾತಾ । ಶವಸಃ । ಮಹಃ । ಸೂನೂ ಇತಿ । ದಕ್ಷಸ್ಯ । ಸುಕ್ರತೂ ಇತಿ ಸುऽಕ್ರತೂ ।
ಸೃಪ್ರದಾನೂ ಇತಿ ಸೃಪ್ರऽದಾನೂ । ಇಷಃ । ವಾಸ್ತು । ಅಧಿ । ಕ್ಷಿತಃ ॥ ೫ ॥

॥ ಸಾಯಣಭಾಷ್ಯಂ ॥

ಮಹೋ ಮಹತಃ ಶವಸೋ ಬಲಸ್ಯ ನಪಾತಾ ನಪಾತೌ ಪೌತ್ರೌ । ಬಲತ ಉತ್ಪಾದಿತಾವಿತಿ ಬಲಸ್ಯ ಪೌತ್ರೌ । ತಾದೃಶೌ ದಕ್ಷಸ್ಯ । ದಕ್ಷ ವೃದ್ಧೌ ಶೀಘ್ರಾರ್ಥೇ ಚೇತಿ ದಕ್ಷೋ ವೇಗಃ । ತಸ್ಯ ಸೂನೂ ಪುತ್ರೌ । ಬಲಾದ್ವೇಗ ಇತಿ ತಯೋಃ ಪುತ್ರತ್ವಂ । ತೌ ಸುಕ್ರತೂ ಶೋಭನಕರ್ಮಾಣೌ ಸೃಪ್ರದಾನೂ ಪ್ರಸೃತಧನಾದಿದಾನೌ ಮಿತ್ರಾವರುಣಾವಿಷೋಽನ್ನಸ್ಯ ವಾಸ್ತು ನಿವಾಸಸ್ಥಾನೇಽಧಿ ಕ್ಷಿತಃ । ಅಧಿವಸತಃ ॥ ಅಧಿಶೀಙಾತಿ ವಾಸ್ತುನಃ ಕರ್ಮಸಂಜ್ಞಾ । ಕ್ಷಯತೇರ್ಲಟಿ ಛಾಂದಸೋ ವಿಕರಣಸ್ಯ ಲುಕ್ ॥

॥ ಪ್ರತಿಪದಾರ್ಥ ॥

**ಮಹಃ**—ಮಹತ್ತಾದ । **ಶವಸಃ**—ಬಲಕ್ಕೆ । **ನಪಾತಾ**—ಪೌತ್ರರೂ । **ದಕ್ಷಸ್ಯ**—ವೇಗಕ್ಕೆ । **ಸೂನೂ**—ಪುತ್ರರೂ । **ಸುಕ್ರತೂ**—ಉತ್ತಮವಾದ ಕರ್ಮವುಳ್ಳವರೂ । **ಸುಪ್ರದಾನೂ**—ವಿಸ್ತೃತವಾಗಿ ದಾನ ಮಾಡುವವರೂ ಆದ ಮಿತ್ರಾವರುಣರು । **ಇಷಃ** - ಅನ್ನಕ್ಕೆ । **ವಾಸ್ತು**—ನಿವಾಸಸ್ಥಾನದಲ್ಲಿ । **ಅಧಿ ಕ್ಷಿತಃ**—ವಸಿಸುತ್ತಾರೆ. (ಒಡೆಯರಾಗಿದ್ದಾರೆ)

|| ಭಾವಾರ್ಥ ||

ಮಹತ್ತಾದ ಬಲಕ್ಕೆ ಪೌತ್ರರೂ, ವೇಗಕ್ಕೆ ಪುತ್ರರೂ, ಉತ್ತಮವಾದ ಕರ್ಮವುಳ್ಳವರೂ, ವಿಸ್ತೃತವಾಗಿ ದಾನಮಾಡುವವರೂ ಆದ ಮಿತ್ರಾವರುಣರು ಅನ್ನಕ್ಕೆ ಒಡೆಯರಾಗಿ ಅದರ ನಿವಾಸಸ್ಥಾನದಲ್ಲಿ ವಾಸಿಸುತ್ತಾರೆ.

English Translation.

Grandsons of mighty strength, sons of energy, doers of good deeds liberal benefactors, they preside over the habitation of food.

|| ಸಂಹಿತಾಪಾಠಃ ||

ಸಂ ಯಾ ದಾನೂನಿ ಯೇಮಥುರ್ದಿವ್ಯಾಃ ಪಾರ್ಥಿವೀರಿಷಃ ।
ನಭಸ್ವತೀರಾ ವಾಂ ಚರಂತು ವೃಷ್ಟಯಃ || ೬ ||

|| ಪದಪಾಠಃ ||

ಸಂ । ಯಾ । ದಾನೂನಿ । ಯೇಮಥುಃ । ದಿವ್ಯಾಃ । ಪಾರ್ಥಿವೀಃ । ಇಷಃ ।
ನಭಸ್ವತೀಃ । ಆ । ವಾಂ । ಚರಂತು । ವೃಷ್ಟಯಃ || ೬ ||

। ಸಾಯಣಭಾಷ್ಯಂ ।

ಹೇ ಮಿತ್ರಾವರುಣೌ ಯೌ ಯುವಾಂ ದಾನೂನಿ ದೇಯಾನಿ ಧನಾನಿ **ಸಂ ಯೇಮಥುಃ** ಅಸ್ಮಾಸು ಸಂಯಚ್ಛತಂ ತಥಾ ದಿವ್ಯಾ ದಿವ್ಯಾನಿ ದಿವಿ ಭವಾನಿ ಪಾರ್ಥಿವೀಃ ಪೃಥಿವ್ಯಾಮುತ್ಪನ್ನಾನೀಷೋಽನ್ನಾನಿ ಸಂಯಚ್ಛತಂ । ವೃಷ್ಟ್ಯಭಾವೇ ಕಥಮನ್ನಂ ಲಭ್ಯತ ಇತಿ ಚೇತ್ ತದುಚ್ಯತೇ । ನಭಸ್ವತೀರುದಕವತ್ಯೋ ವೃಷ್ಟಯಸ್ತಾದೃಶೌ ವಾಂ ಯುವಾಮಾ ಚರಂತು । ಉಪತಿಷ್ಠಂತು । ಯದಾ ವೃಷ್ಟ್ಯವೇಲಾ ತದಾ ವರ್ಷತಮಿತ್ಯರ್ಥಃ ||

। ಪ್ರತಿಪದಾರ್ಥ ।

(ಎಲೈ ಮಿತ್ರಾ ವರುಣರೇ) **ಯಾ ದಾನೂನಿ**—ನಮಗೆ ಕೊಡಬೇಕಾದ ಧನಗಳನ್ನು । **ಸಂ ಯೇಮಥುಃ**—ನಮಗೆ ಒದಗಿಸಿರಿ । **ದಿವ್ಯಾಃ**—ದ್ಯುಲೋಕೋತ್ಪನ್ನವಾದವೂ । **ಪಾರ್ಥಿವೀಃ**—ಪೃಥಿವಿಯಲ್ಲಿ ಉತ್ಪನ್ನವಾದವೂ ಆದ । **ಇಷಃ**—ಅನ್ನಗಳನ್ನೂ ನಮಗೆ ಒದಗಿಸಿರಿ । **ನಭಸ್ವತೀಃ**—ಉದಕಪೂರ್ಣವಾದ । **ವೃಷ್ಟಯಃ**—ವೃಷ್ಟಿಗಳು । **ವಾಂ**—ನಿಮ್ಮನ್ನು । **ಆ ಚರಂತು**—ಸೇವಿಸಲಿ.

|| ಭಾವಾರ್ಥ ।

ಎಲೈ ಮಿತ್ರಾವರುಣರೇ, ನಮಗೆ ಕೊಡಬೇಕಾದ ಧನಗಳನ್ನು ನಮಗೆ ಒದಗಿಸಿರಿ. ದ್ಯುಲೋಕೋತ್ಪನ್ನವಾದವೂ, ಪೃಥಿವಿಯಲ್ಲಿ ಉತ್ಪನ್ನವಾದವೂ ಆದ ಅನ್ನಗಳನ್ನೂ ನಮಗೆ ಒದಗಿಸಿರಿ. ಉದಕಪೂರ್ಣವಾದ ವೃಷ್ಟಿಗಳು ನಿಮ್ಮನ್ನು ಸೇವಿಸಲಿ.

## English Translation.

Bestow (upon us) good gifts, viands, whether of heaven or earth: may the water-shedding rains atten upon you.

॥ ಸಂಹಿತಾಪಾಠಃ ॥

ಅಧಿ ಯಾ ಬೃಹತೋ ದಿವೋಽಭಿ ಯೂಥೇವ ಪಶ್ಯತಃ ।
ಋತಾವಾನಾ ಸಮ್ರಾಜಾ ನಮಸೇ ಹಿತಾ ॥ ೭ ॥

॥ ಪದಪಾಠಃ ॥

ಅಧಿ । ಯಾ । ಬೃಹತಃ । ದಿವಃ । ಅಭಿ । ಯೂಥಾಽಇವ । ಪಶ್ಯತಃ ।
ಋತಽವಾನಾ । ಸಮ್ಽರಾಜಾ । ನಮಸೇ । ಹಿತಾ ॥ ೭ ॥

॥ ಸಾಯಣಭಾಷ್ಯಂ ॥

**ಯಾ ಯೌ ಮಿತ್ರಾವರುಣೌ ಬೃಹತೋ ದಿವೋ ದ್ಯೋತಮಾನಾನ್ದೇವಾನಧಿ ಪಶ್ಯತಃ । ತತ್ರ ದೃಷ್ಟಾಂತಃ । ಯೂಥೇವ ಯಥಾ ವೃಷಭೋ ಗೋಯೂಥಾನಿ ರಂತುಮಭ್ಯಭಿಮುಖಂ ಪಶ್ಯತಿ ತದ್ವದೇತೌ ಸ್ವವೀರ್ಯೇಣಾಸುರಾನ್ಹತ್ವಾ ದೇವಾನ್ಮೋದಯಿತುಂ ಪಶ್ಯತ ಇತ್ಯರ್ಥಃ । ಕೀದೃಶೌ । ಋತಾವಾನಾ ಸತ್ಯವಂತೌ ಸಮ್ರಾಜಾ ಸಮ್ರಾಜೌ ಸಮ್ಯಗ್ದೀಪ್ಯಮಾನೌ ನಮಸೇ ಹವಿಷೇ ಹಿತಾ ಹಿತೌ ಪ್ರಿಯೌ ಪಶ್ಯತ ಇತಿ ॥**

॥ ಪ್ರತಿಪದಾರ್ಥ ॥

**ಋತಾವಾನಾ**—ಸತ್ಯವಂತರೂ । **ಸಮ್ರಾಜಾ**—ಅಧಿಕವಾಗಿ ಪ್ರಕಾಶಿಸುವವರೂ । **ನಮಸೇ**—ಹವಿಸ್ಸಿಗೆ । **ಹಿತಾ**—ಪ್ರಿಯರೂ ಆದ । **ಯಾ**—ಯಾವ ಮಿತ್ರಾವರುಣರಿರುವರೋ ಅವರು । **ಯೂಥೇವ ಅಧಿ**—ವೃಷಭವು ಗೋಸಮೂಹವನ್ನು ದೃಷ್ಟಿಸಿ ನೋಡುವಂತೆ । **ಬೃಹತಃ**—ಮಹತ್ಸ್ವರೂಪವುಳ್ಳವರೂ । **ದಿವಃ**—ಪ್ರಕಾಶಮಾನರೂ ಆದ ದೇವತೆಗಳನ್ನು । **ಅಧಿ ಪಶ್ಯತಃ**—ದೃಷ್ಟಿಸಿ ನೋಡುತ್ತಿದ್ದಾರೆ.

॥ ಭಾವಾರ್ಥ ॥

ಸತ್ಯವಂತರೂ, ಅಧಿಕವಾಗಿ ಪ್ರಕಾಶಿಸುವವರೂ ಹವಿಸ್ಸಿಗೆ ಪ್ರಿಯರೂ ಆದ ಯಾವ ಮಿತ್ರಾವರುಣರಿರುವರೋ ಅವರು ವೃಷಭವು ಗೋಸಮೂಹವನ್ನು ದೃಷ್ಟಿಸಿ ನೋಡುವಂತೆ ಮಹತ್ಸ್ವರೂಪವುಳ್ಳವರೂ ಪ್ರಕಾಶಮಾನರೂ ಆದ ದೇವತೆಗಳನ್ನು ದೃಷ್ಟಿಸಿ ನೋಡುತ್ತಿದ್ದಾರೆ.

## English Translation.

(These are they) who look upon the great deities as (a bull contemplates) the herd, sovereigns observant of truth and propitious to adoration.

। ಸಂಹಿತಾಪಾಠಃ ।

ಋತಾವಾನಾ ನಿ ಷೇದತುಃ ಸಾಮ್ರಾಜ್ಯಾಯ ಸುಕ್ರತೂ ।
ಧೃತವ್ರತಾ ಕ್ಷತ್ರಿಯಾ ಕ್ಷತ್ರಮಾಶತುಃ ॥ ೮ ॥

। ಪದಪಾಠಃ ।

ಋತಽವಾನಾ । ನಿ । ಸೇದತುಃ । ಸಾಂಽರಾಜ್ಯಾಯ । ಸುಕ್ರತೂ ಇತಿ ಸುಽಕ್ರತೂ ।
ಧೃತಽವ್ರತಾ । ಕ್ಷತ್ರಿಯಾ । ಕ್ಷತ್ರಂ । ಆಶತುಃ ॥ ೮ ॥

। ಸಾಯಣಭಾಷ್ಯಂ ।

ಋತಾವಾನರ್ತಾವಾನೌ ಸತ್ಯವಂತೌ ಸುಕ್ರತೂ ಶೋಭನಕರ್ಮಾಣೌ ಸುಪ್ರಜ್ಞೌ ವಾ ಮಿತ್ರಾವರುಣೌ ಸಾಮ್ರಾಜ್ಯಾಯ ಸಾಮ್ರಾಜ್ಯಾರ್ಥಂ ನಿ ಷೇದತುಃ । ನ್ಯಸೀದತಾಂ । ತಥಾ ಮಂತ್ರಃ । ನಿ ಷಸಾದ ಧೃತವ್ರತೋ ವರುಣಃ ಪಸ್ತ್ಯಾಸ್ವಾ ಸಾಮ್ರಾಜ್ಯಾಯ ಸುಕ್ರತುಃ । ಋ. ೧-೨೫-೧೦ । ಇತಿ । ಧೃತವ್ರತಾ ಧೃತವ್ರತೌ ಧೃತಕರ್ಮಾಣೌ ಕ್ಷತ್ರಿಯಾ ಕ್ಷತ್ರಿಯೌ ಬಲವಂತೌ ಕ್ಷತ್ರಂ ಬಲಮಾಶತುಃ । ಅಶನೋತೇಃ । ವ್ಯಾಪ್ನುತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಋತಾವಾನಾ**—ಸತ್ಯವಂತರೂ । **ಸುಕ್ರತೂ** – ಉತ್ತಮವಾದ ಕರ್ಮವುಳ್ಳವರೂ ಆದ ಮಿತ್ರಾವರುಣರು । **ಸಾಮ್ರಾಜ್ಯಾಯ**—ತಮ್ಮ ಸಾರ್ವಭೌಮತ್ವವನ್ನು ಪ್ರಕಟಿಸಲು । **ನಿ ಷೇದತುಃ**—ಕುಳಿತುಕೊಳ್ಳುತ್ತಾರೆ । **ಧೃತವ್ರತಾ**—ವ್ರತರೂಪವಾದ ಕರ್ಮಧಾರಕರೂ (ಕರ್ಮನಿಯಾಮಕರೂ) । **ಕ್ಷತ್ರಿಯಾ**—ಶಕ್ತಿಯುತರೂ ಆದ ಅವರು । **ಕ್ಷತ್ರಂ**—ಬಲವನ್ನು । **ಆಶತುಃ**—ಹೊಂದುತ್ತಾರೆ.

। ಭಾವಾರ್ಥ ।

ಸತ್ಯವಂತರೂ, ಉತ್ತಮವಾದ ಕರ್ಮವುಳ್ಳವರೂ ಆದ ಮಿತ್ರಾವರುಣರು ತಮ್ಮ ಸಾರ್ವಭೌಮತ್ವವನ್ನು ಪ್ರಕಟಿಸಲು ಕುಳಿತುಕೊಳ್ಳುತ್ತಾರೆ. ವ್ರತರೂಪವಾದ ಕರ್ಮಧಾರಕರೂ, (ಕರ್ಮನಿಯಾಮಕರೂ) ಶಕ್ತಿಯುತರೂ ಆದ ಅವರು ಬಲವನ್ನೂ ಹೊಂದುತ್ತಾರೆ.

## English Translation.

Observers of truth, doers of good deeds, they sit down for the office of sovereignty ; observant of obligations endowed with strength they acquire vigour.

॥ ಸಂಹಿತಾಪಾಠಃ ॥

ಅಕ್ಷ್ಣಶ್ಚಿದ್ಗಾತುವಿತ್ತರಾನುಲ್ಬಣೇನ ಚಕ್ಷಸಾ ।
ನಿ ಚಿನ್ಮಿಷಂತಾ ನಿಚಿರಾ ನಿ ಚಿಕ್ಯತುಃ ॥ ೯ ॥

॥ ಪದಪಾಠಃ ॥

ಅಕ್ಷ್ಣಃ । ಚಿತ್ । ಗಾತುವಿತ್ಽತರಾ । ಅನುಲ್ಬಣೇನ । ಚಕ್ಷಸಾ ।
ನಿ । ಚಿತ್ । ಮಿಷಂತಾ । ನಿಽಚಿರಾ । ನಿ । ಚಿಕ್ಯತುಃ ॥ ೯ ॥

॥ ಸಾಯಣಭಾಷ್ಯಂ ॥

ಅಕ್ಷ್ಣಶ್ಚಿಚ್ಚಕ್ಷುಷೋಽಪಿ ಪೂರ್ವಂ ಗಾತುವಿತ್ತರಾ।ಗಾತುವಿತ್ತರಾವತಿಶಯೇನ ಮಾರ್ಗವೇತ್ತಾರೌ । ಯದ್ವಾ । ಗಾತುವಿತ್ತರೌ ಗಾತು ಗಮನಶೀಲಂ ಪ್ರಾಣಿಜಾತಂ ಚಕ್ಷುಷೋಽಪಿ ಪೂರ್ವಂ ವೇತ್ತಾರೌ ಮಿತ್ರಾವರುಣೌ । ಕೀದೃಶೌ । ನಿ ಮಿಷಂತಾ ನಿಮಿಷಂತೌ ಸರ್ವಮುನ್ಮೇಷಯಂತೌ ಸ್ವಸ್ವಕರ್ಮಣಿ ನಿಚಿರಾ ನಿತರಾಂ ಚಿರಂತನೌ ತಾವನುಲ್ಬಣೇನ । ಉಲ್ಬಣಮಿತಿ ದುಃಸಹಮಗ್ನೇಸ್ತೇಜಃ । ತದ್ವದದುಃಸಹೇನ ಚಕ್ಷಸಾಹೋರಾತ್ರಯೋರ್ವ್ಯಾಪ್ತೇನ ತೇಜಸೈವ ನಿ ಚಿಕ್ಯತುಃ । ಪೂಜಿತೌ ಬಭೂವತುಃ । ಚಿದವಧಾರಣೇ ॥

॥ ಪ್ರತಿಪದಾರ್ಥ ॥

**ಅಕ್ಷ್ಣಶ್ಚಿತ್**—ಚಕ್ಷುರಿಂದ್ರಿಯಕ್ಕಿಂತಲೂ ಪೂರ್ವಭಾವಿಯಾಗಿಯೇ । **ಗಾತುವಿತ್ತರಾ**—ಗಮನಮಾರ್ಗಗಳನ್ನು ತಿಳಿಯತಕ್ಕವರೂ । **ನಿ ಮಿಷಂತಾ**—ಸಕಲ ಪ್ರಾಣಿಗಳ ಚಕ್ಷುಸ್ಸನ್ನೂ:ತೆರೆಯುವಂತೆ ಮಾಡುವವರೂ । **ನಿಚಿರಾ**—ಅತ್ಯಂತ ಪುರಾತನರೂ ಆದ ಮಿತ್ರಾವರುಣರು । **ಅನುಲ್ಬಣೇನ**—ಅಧಿಕವಾದ ತೀಕ್ಷ್ಣತೆಯಿಲ್ಲದ । **ಚಕ್ಷಸಾ**—ತೇಜಸ್ಸಿನೊಡಗೂಡಿ । **ನಿ ಚಿಕ್ಯತುಃ**—ಪೂಜಿತರಾಗಿದ್ದಾರೆ

॥ ಭಾವಾರ್ಥ ॥

ಚಕ್ಷುರಿಂದ್ರಿಯಕ್ಕಿಂತಲೂ ಪೂರ್ವಭಾವಿಯಾಗಿಯೇ (ರೆಪ್ಪೆಹೊಡೆಯುವಷ್ಟರಲ್ಲಿಯೇ) ಗಮನಮಾರ್ಗವನ್ನು ತಿಳಿಯತಕ್ಕವರೂ, ಸಕಲ ಪ್ರಾಣಿಗಳ ಚಕ್ಷುಸ್ಸನ್ನೂ ತೆರೆಯುವಂತೆ ಮಾಡುವವರೂ ಅತ್ಯಂತ ಪುರಾತನರೂ ಆದ ಮಿತ್ರಾವರುಣರು ಅಧಿಕವಾದ:ತೀಕ್ಷ್ಣತೆಯಿಲ್ಲದ ತೇಜಸ್ಸಿನೊಡಗೂಡಿ ಪೂಜಿತರಾಗಿದ್ದಾರೆ.

## English Translation.

Thorough knowers of the path, even before the eye (can see), causing (all beings) to open their eyelids, existing from of old, and shining with a mild radiance, verily they have been worshipped.

॥ ವಿಶೇಷವಿಷಯಗಳು ॥

**ಗಾತುವಿತ್ತರಾ** ಎಂಬುದಕ್ಕೆ ಗಮನಶೀಲವುಳ್ಳ ಪ್ರಾಣಿಗಳ ವ್ಯವಹಾರಗಳನ್ನೆಲ್ಲಾ ತಿಳಿಯತಕ್ಕವರು **ಎಂಬರ್ಥವನ್ನು** ಹೇಳಬಹುದು.

॥ ಸಂಹಿತಾಪಾಠಃ ॥

ಉತ ನೋ ದೇವ್ಯದಿತಿರುರುಷ್ಯತಾಂ ನಾಸತ್ಯಾ ।
ಉರುಷ್ಯಂತು ಮರುತೋ ವೃದ್ಧಶವಸಃ ॥ ೧೦ ॥

॥ ಪದಪಾಠಃ ॥

**ಉತ** । ನಃ । ದೇವೀ । ಅದಿತಿಃ । ಉರುಷ್ಯತಾಂ । ನಾಸತ್ಯಾ ।
**ಉರುಷ್ಯಂತು** । ಮರುತಃ । ವೃದ್ಧ಼ಶವಸಃ ॥ ೧೦ ॥

॥ ಸಾಯಣಭಾಷ್ಯಂ ॥

**ಉತಾಪಿ ಚ ದೇವೀ ದ್ಯೋತನಶೀಲಾದಿತಿರ್ಮಿತ್ರಾವರುಣಯೋರ್ಮಾತಾ ನೋಽಸ್ಮಾನ್ರಕ್ಷತು । ನಾಸತ್ಯಾ ನಾಸತ್ಯೌ । ಅಸತ್ಯಮನಯೋರ್ನಾಸ್ತೀತಿ ನಾಸತ್ಯೌ । ಅಶ್ವಿನೌ ಚೋರುಷ್ಯತಾಂ । ರಕ್ಷತಾಂ ॥ ಉರುಷ್ಯತಿಃ ಕಣ್ಡ್ವಾದಿಃ ॥ ವೃದ್ಧಶ್ರವಸೋ ವೃದ್ಧವೇಗಾಃ । ಅತಿಶಯೇನ ವೇಗವಂತ ಇತ್ಯರ್ಥಃ । ಯದ್ವಾ ವರ್ಧನಶೀಲಹವಿರ್ಲಕ್ಷಣಾನ್ನೋಪೇತಾ ಮರುತ ಉರುಷ್ಯಂತು । ಅಸ್ಮಾನ್ಪಾಲಯಂತು ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ದೇವೀ**—ದಿವ್ಯಪ್ರಕಾಶವುಳ್ಳ । **ಅದಿತಿಃ**—ಅದಿತಿಯು । **ನಃ**—ನಮ್ಮನ್ನು ರಕ್ಷಿಸಲಿ । **ನಾಸತ್ಯಾ**—ಅಶ್ವಿನೀದೇವತೆಗಳು । **ಉರುಷ್ಯತಾಂ**—ರಕ್ಷಿಸಲಿ । **ವೃದ್ಧಶ್ರವಸಃ**—ಅತಿಶಯವಾದ ವೇಗವುಳ್ಳ । **ಮರುತಃ**—ಮರುತ್ತುಗಳು । **ಉರುಷ್ಯಂತು**—ರಕ್ಷಿಸಲಿ.

॥ ಭಾವಾರ್ಥ ॥

ದಿವ್ಯಪ್ರಕಾಶವುಳ್ಳ ಅದಿತಿಯು ನಮ್ಮನ್ನು ರಕ್ಷಿಸಲಿ. ಅಶ್ವಿನೀದೇವತೆಗಳು ರಕ್ಷಿಸಲಿ. ಅತಿಶಯವಾದ ವೇಗವುಳ್ಳ ಮರುತ್ತುಗಳು ರಕ್ಷಿಸಲಿ.

**English Translation.**

May the divine Aditi, may the Nasatyas also protect us; may the rapid Maruts defend us.

॥ ಸಂಹಿತಾಪಾಠಃ ॥

ತೇ ನೋ ನಾವಮುರುಷ್ಯತ ದಿವಾ ನಕ್ತಂ ಸುದಾನವಃ ।

ಅರಿಷ್ಯಂತೋ ನಿ ಪಾಯುಭಿಃ ಸಚೇಮಹಿ ॥ ೧೧ ॥

॥ ಪದಪಾಠಃ ॥

ತೇ । ನಃ । ನಾವಂ । ಉರುಷ್ಯತ । ದಿವಾ । ನಕ್ತಂ । ಸುऽದಾನವಃ ।

ಅರಿಷ್ಯಂತಃ । ನಿ । ಪಾಯುऽಭಿಃ । ಸಚೇಮಹಿ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಸುದಾನವಃ ಶೋಭನದಾನಾ ಮರುತೋಽರಿಷ್ಯಂತಃ ಕೇನಾಪ್ಯಹಿಂಸಿತಾಃ ತೇ ತಾದೃಶಾ ಯೂಯಂ ನೋಽಸ್ಮದೀಯಾಂ ನಾವಂ ಯಜ್ಞಿಯಾಂ ನಾವಂ ದಿವಾ ನಕ್ತಂ ಚೋರುಷ್ಯತ। ಪಾಲಯತ। ತತೋ ವಯಂ ಪಾಯುಭಿರ್ಯುಷ್ಮದೀಯೈಃ ಪಾಲನೈರ್ನಿ ಸಚೇಮಹಿ । ನಿತರಾಂ ಸಮವೇತಾ ಭವೇಮ ॥**

॥ ಪ್ರತಿಪದಾರ್ಥ ॥

**ಸುದಾನವಃ**—ಉತ್ತಮವಾದ ದಾನಿಗಳಾದ ಎಲೈ ಮರುತ್ತುಗಳೇ । **ಅರಿಷ್ಯಂತಃ**—ಯಾರ ಹಿಂಸೆಗೂ ಸಿಲುಕದವರಾದ । **ತೇ**—ನೀವು । **ನಃ**—ನಮ್ಮ । **ನಾವಂ**—ಯಜ್ಞರೂಪವಾದ ನೌಕೆಯನ್ನು । **ದಿವಾ**—ಹಗಲಿನಲ್ಲಿಯೂ । **ನಕ್ತಂ**—ರಾತ್ರಿಯಲ್ಲಿಯೂ । **ಉರುಷ್ಯತ**—ರಕ್ಷಿಸಿರಿ (ಅನಂತರ) । **ಪಾಯುಭಿಃ**—ನಿಮ್ಮ ರಕ್ಷಣೆಗಳೊಡನೆ । **ನಿ ಸಚೇಮಹಿ**—ನಾವು ಕೂಡಿಕೊಂಡಿರುವಂತಾಗಲಿ.

॥ ಭಾವಾರ್ಥ ॥

ಉತ್ತಮವಾದ ದಾನಿಗಳಾದ ಎಲೈ ಮರುತ್ತುಗಳೇ, ಯಾರ ಹಿಂಸೆಗೂ ಸಿಲುಕದವರಾದ ನೀವು ನಮ್ಮ ಯಜ್ಞರೂಪವಾದ ನೌಕೆಯನ್ನು ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ರಕ್ಷಿಸಿರಿ. ಅನಂತರ ನಿಮ್ಮ ರಕ್ಷಣೆಗಳೊಡನೆ ನಾವು ಕೂಡಿಕೊಂಡಿರುವಂತಾಗಲಿ.

English Translation.

Munificent and irresistible (Maruts), guard our vessel by day and night, so that we may be secure through your protection.

॥ ಸಂಹಿತಾಪಾಠಃ ॥

ಅಘ್ನತೇ ವಿಷ್ಣವೇ ವಯಮರಿಷ್ಯಂತಃ ಸುದಾನವೇ ।

ಶ್ರುಧಿ ಸ್ವಯಾವನ್ತ್ಸಿಂಧೋ ಪೂರ್ವಚಿತ್ತಯೇ ॥ ೧೨ ॥

॥ ಪದಪಾಠಃ ॥

ಅಘ್ನತೇ । ವಿಷ್ಣವೇ । ವಯಂ । ಅರಿಷ್ಯಂತಃ । ಸುಽದಾನವೇ ।

ಶ್ರುಧಿ । ಸ್ವಽಯಾವನ್ । ಸಿಂಧೋ ಇತಿ । ಪೂರ್ವಽಚಿತ್ತಯೇ ॥ ೧೨ ॥

॥ ಸಾಯಣಭಾಷ್ಯಂ ॥

ಪೂರ್ವೋಽರ್ಧರ್ಚಃ ಪರೋಕ್ಷಕೃತಃ । ಅರಿಷ್ಯಂತಃ ಪಾಲನವತ್ತ್ವಾತ್ ಕೇನಾಪ್ಯಬಾಧಿತಾ ವಯಮಘ್ನತೇ ಸ್ತೋತೄಣಾಂ ಯಷ್ಟೄಣಾಂ ಚಾಹಿಂಸಕಾಯ ಸುದಾನವೇ ಶೋಭನದಾನಾಯ ವಿಷ್ಣವೇ ಸ್ವಮಹತ್ತ್ವೇನ ಸರ್ವವ್ಯಾಪಕಾಯೈತನ್ನಾಮಕಾಯ ದೇವಾಯ ಸ್ತುತಿಂ ಕುರ್ಮಃ । ಅಥ ಪ್ರತ್ಯಕ್ಷಃ । ಹೇ ಸ್ವಯಾವನ್ । ಸ್ವಯಮೇವಾಸಹಾಯಃ ಸನ್ ದಿವಿ ಸಂಗ್ರಾಮೇ ವಾ ಯಾತೀತಿ ಸ್ವಯಾವಾನ್ । ಸಿಂಧೋ ಸ್ತೋತೄನ್ ಪ್ರತಿ ಧನಾನಾಂ ಸ್ಯಂದನಶೀಲ ವಿಷ್ಣೋ ಪೂರ್ವಚಿತ್ತಯೇ । ಚಿತ್ತಿಃ ಕರ್ಮ । ಮಂತ್ರಾಂತರೇಽಪಿ ತಥಾ ಶ್ರವಣಾತ್ । ಸಾ ಚಿತ್ತಿಭಿರ್ನಿ ಹಿ ಚಕಾರ ಮರ್ತ್ಯಂ । ಋ. ೧-೧೬೪-೨೯ । ಇತಿ । ಪೂರ್ವಂ ಪ್ರಾರಬ್ಧಕರ್ಮಣೇ ಯಜಮಾನಾಯ ತದರ್ಥಂ ಶ್ರುಧಿ । ಅಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ತ್ವಂ ಶೃಣು ॥

॥ ಪ್ರತಿಪದಾರ್ಥ ॥

**ಅರಿಷ್ಯಂತಃ**—(ವಿಷ್ಣುವಿನಿಂದ ರಕ್ಷಿತರಾದುದರಿಂದ) ಯಾರ ಹಿಂಸೆಗೂ ಸಿಕ್ಕದ । **ವಯಂ** - ನಾವು । **ಅಘ್ನತೇ**—ಸ್ತುತಿಕರ್ತರಿಗೆ ಹಿಂಸಕನಲ್ಲದವನೂ । **ಸುದಾನವೇ**— ಉತ್ತಮವಾದ ದಾನಿಯೂ ಆದ । **ವಿಷ್ಣವೇ**—ವಿಷ್ಣುವಿಗೆ ಸ್ತುತಿಯನ್ನರ್ಪಿಸುತ್ತೇವೆ । **ಸ್ವಯಾವನ್**— ಸಂಗ್ರಾಮದಲ್ಲಿ ಅಸಹಾಯಕನಾಗಿ ನುಗ್ಗುವವನೂ । **ಸಿಂಧೋ**—ಧನವನ್ನು ನದಿಯಂತೆ ಪ್ರವಹಿಸುವ ಹಾಗೆ ಮಾಡುವವನೂ ಆದ ಎಲೈ ವಿಷ್ಣುವೇ । **ಪೂರ್ವಚಿತ್ತಯೇ**-ಕರ್ಮವನ್ನು ಆರಂಭಿಸಿದ ಯಜಮಾನನಿಗಾಗಿ । **ಶ್ರುಧಿ**—ನಮ್ಮ ಪ್ರಶಂಸೆಗಳನ್ನು ಕೇಳು.

॥ ಭಾವಾರ್ಥ ॥

ವಿಷ್ಣುವಿನಿಂದ ರಕ್ಷಿತರಾದುದರಿಂದ ಯಾರ ಹಿಂಸೆಗೂ ಸಿಕ್ಕದ ನಾವು ಸ್ತುತಿಕರ್ತರಿಗೆ ಹಿಂಸಕನಲ್ಲದವನೂ, ಉತ್ತಮವಾದ ದಾನಿಯೂ ಆದ ವಿಷ್ಣುವಿಗೆ ಸ್ತುತಿಯನ್ನರ್ಪಿಸುತ್ತೇವೆ. ಸಂಗ್ರಾಮದಲ್ಲಿ ಅಸಹಾಯಕನಾಗಿ ಮುನ್ನುಗ್ಗುವವನೂ, ಧನವನ್ನು ನದಿಯಂತೆ ಪ್ರವಹಿಸುವ ಹಾಗೆ ಮಾಡುವವನೂ ಆದ ಎಲೈ ವಿಷ್ಣುವೇ, ಕರ್ಮವನ್ನು ಆರಂಭಿಸಿದ ಯಜಮಾನನ ಪರವಾಗಿ ನಮ್ಮ ಪ್ರಶಂಸೆಯನ್ನು ಕೇಳು.

## English Translation.

We, uninjured (through his protection, offer praise) to the libera Vishnu, who harms not (his adorers): do you who go by yourself alone (to combat), and cause wealth to flow (to the worshipper), hear (our prayer) in behalf of him who has commenced the sacrifice.

|| ಸಂಹಿತಾಪಾಠಃ ||

ತದ್ವಾರ್ಯಂ ವೃಣೀಮಹೇ ವರಿಷ್ಠಂ ಗೋಪಯತ್ಯಂ।
ಮಿತ್ರೋ ಯತ್ಪಾಂತಿ ವರುಣೋ ಯದರ್ಯಮಾ || ೧೩ ||

|| ಪದಪಾಠಃ ||

**ತತ್ । ವಾರ್ಯಂ । ವೃಣೀಮಹೇ । ವರಿಷ್ಠಂ । ಗೋಪಯತ್ಯಂ ।**
**ಮಿತ್ರಃ । ಯತ್ । ಪಾಂತಿ । ವರುಣಃ । ಯತ್ । ಅರ್ಯಮಾ || ೧೩ ||**

|| ಸಾಯಣಭಾಷ್ಯಂ ||

**ವರಿಷ್ಠಮುರುತರಂ ಗೋಪಯತ್ಯಂ ಸರ್ವೇಷಾಂ ರಕ್ಷಕಂ ಯತ್ನೈಃ ಪಾಲನೀಯಂ ವಾ ವಾರ್ಯಂ ಸರ್ವೈರ್ವರಣೀಯಂ ತದ್ಧನಂ ವೃಣೀಮಹೇ । ವಯಂ ಸಂಭಜಾಮಹೇ । ಯದ್ಧನಂ ಮಿತ್ರಃ ಸರ್ವೇಷಾಂ ಮಿತ್ರಭೂತೋ ವರುಣಃ ಶತ್ರೂಣಾಂ ವಾರಯಿತಾರ್ಯಮಾ ಸರ್ವದಾ ಗಚ್ಛನ್ ಏತನ್ನಾಮಕಾಸ್ತ್ರಯೋ ದೇವಾಃ ಪಾಂತಿ ಪಾಲಯಂತಿ । ತದ್ಧನಂ ವೃಣೀಮಹೇ । ಅಸ್ಮದೀಯಸ್ಯ ಧನಸ್ಯ ರಕ್ಷಕಾ ಭವಂತೀತ್ಯರ್ಥಃ ||**

|| ಪ್ರತಿಪದಾರ್ಥ ||

**ಯತ್**—ಯಾವ ಧನವನ್ನು । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಅರ್ಯಮಾ**—ಅರ್ಯಮನೂ । **ಪಾಂತಿ**—ರಕ್ಷಿಸುವರೋ । **ತತ್**—ಅಂತಹ । **ವರಿಷ್ಠಂ**—ಅತ್ಯಂತ ಶ್ರೇಷ್ಠ**ವಾದುದೂ** । **ಗೋಪಯತ್ಯಂ**—ಸರ್ವರಿಗೂ ರಕ್ಷಕವಾದುದೂ । **ವಾರ್ಯಂ**—ಸರ್ವರಿಂದಲೂ ಅಪೇಕ್ಷಿತವಾದುದೂ **ಆದ** ಧನವನ್ನು । **ವೃಣೀಮಹೇ**—ನಾವು ಹೊಂದುವಂತಾಗಲಿ.

|| ಭಾವಾರ್ಥ ||

ಯಾವ ಧನವನ್ನು ಮಿತ್ರನೂ, ವರುಣನೂ, ಅರ್ಯಮನೂ ರಕ್ಷಿಸುವರೋ, ಅಂತಹ **ಅತ್ಯಂತ ಶ್ರೇಷ್ಠ**ವಾದುದೂ, ಸರ್ವರಿಗೂ ರಕ್ಷಕವಾದುದೂ ಸರ್ವರಿಂದಲೂ ಅಪೇಕ್ಷಿತವಾದುದೂ ಆದ **ಧನವನ್ನು ನಾವು** ಹೊಂದುವಂತಾಗಲಿ.

## English Translation.

We solicit that ample, all-desired, all-guarding (**wealth) which** Mitra, Varuna, and Aryaman hold under their protection.

|| ವಿಶೇಷವಿಷಯಗಳು ||

**ವಾರ್ಯಂ**—ಈ ಶಬ್ದಕ್ಕೆ ಅರ್ಥವಿವರಣೆಯನ್ನು ಮಾಡುವುದಕ್ಕಾಗಿ ಯಾಸ್ಕರು ಈ ಋಕ್ಕಿನ **ಪೂರ್ವಾರ್ಧಕ್ಕೆ** ನಿರ್ವಚನವನ್ನು ಹೇಳಿದ್ದಾರೆ—

ವಾರ್ಯಂ । ವಾರ್ಯಂ ವೃಣೋತೇರಥಾಪಿ ವರತಮಂ । ತದ್ವಾರ್ಯಂ ವೃಣೀಮಹೇ ವರಿಷ್ಠಂ ಗೋಪಯತ್ಯಂ (ಋ. ಸಂ. ೮-೨೫-೧೩) ತದ್ವಾರ್ಯಂ ವೃಣೀಮಹೇ ವರ್ಷಿಷ್ಠಂ ಗೋಪಾಯಿತವ್ಯಂ ಗೋಪಾಯಿತಾರೋ ಯೂಯಂ ಸ್ಥ ಯುಷ್ಮಭ್ಯಮಿತಿ ವಾ ॥

(ನಿ. ೫-೧)

**ವಾರ್ಯಂ** ಎಂಬ ಶಬ್ದವು ಆರಿಸಿಕೊಳ್ಳು ಎಂಬರ್ಥವುಳ್ಳ **ವೃ (ವೃಣೋತಿ)** ಧಾತುವಿನಿಂದ ನಿಷ್ಪನ್ನವಾಗಿದೆ **ವಾರ್ಯಂ** ಎಂದರೆ ಎಲ್ಲಿರಿಂದಲೂ ಅಪೇಕ್ಷಿಸಲ್ಪಡುವ ಅಥವಾ ಅತ್ಯಂತ ಶ್ರೇಷ್ಠವಾದ ಎಂದರ್ಥವು. ಪ್ರಕೃತ ಋಕ್ಕಿನಲ್ಲಿ—ಎಲೈ ಮಿತ್ರಾವರುಣರೇ, ನಿಮ್ಮಲ್ಲಿ ಎಲ್ಲರಿಂದಲೂ ಅಪೇಕ್ಷಿಸಲ್ಪಡುವ ಅನೇಕ ವಸ್ತುಗಳಿವೆ. ಅವುಗಳಲ್ಲಿ ನಿಮ್ಮಿಂದ ರಕ್ಷಣೆಯನ್ನು ನಾವು ಆರಿಸಿಕೊಳ್ಳುತ್ತೇವೆ ಅಥವಾ ಅಪೇಕ್ಷಿಸುತ್ತೇವೆ. ಏಕೆಂದರೆ ರಕ್ಷಣೆಯು ನಿಮ್ಮಲ್ಲಿ ಮಾತ್ರ ಇದೆ. ಅದು ನಿಮ್ಮಿಂದ ಮಾತ್ರ ಸಾಧ್ಯವು ಎಂದರೆ ನೀವು ರಕ್ಷಕರಾಗುತ್ತೀರಿ. ಆದ್ದರಿಂದ ನಿಮ್ಮಿಂದ ಮಾತ್ರ ಸಾಧ್ಯವಾದ ರಕ್ಷಣೆಯನ್ನು ಅಥವಾ ಶ್ರೇಷ್ಠವಾದ ರಕ್ಷಣೆಯನ್ನು ನಾವು ಅಪೇಕ್ಷಿಸುತ್ತೇವೆ ಎಂದರ್ಥವು ಅಡಕವಾಗಿರುವುದು.

॥ ಸಂಹಿತಾಪಾಠಃ ॥

ಉತ ನಃ ಸಿಂಧುರಪಾಂ ತನ್ಮರುತಸ್ತದಶ್ವಿನಾ ।
ಇಂದ್ರೋ ವಿಷ್ಣುರ್ಮೀಢ್ವಾಂಸಃ ಸಜೋಷಸಃ ॥ ೧೪ ॥

॥ ಪದಪಾಠಃ ॥

ಉತ । ನಃ । ಸಿಂಧುಃ । ಅಪಾಂ । ತತ್ । ಮರುತಃ । ತತ್ । ಅಶ್ವಿನಾ ।
ಇಂದ್ರಃ । ವಿಷ್ಣುಃ । ಮೀಢ್ವಾಂಸಃ । ಸಽಜೋಷಸಃ ॥ ೧೪ ॥

॥ ಸಾಯಣಭಾಷ್ಯಂ ॥

ಪುನರಪಿ ಧನರಕ್ಷಣಮೇವಾಶಾಸ್ತೇ । ಉತಾಪಿ ಚಾಪಾಮುದಕಾನಾಂ ಸಿಂಧುಃ ಸ್ಯಂದನಶೀಲಃ ಪರ್ಜನ್ಯೋ ನೋಽಸ್ಮದೀಯಂ ತದ್ಧನಂ ರಕ್ಷತು । ತದೇವ ಮರುತಶ್ಚ ಪಾಲಯಂತು । ಅಶ್ವಿನಾಶ್ವಿನೌ ದೇವೌ ತದ್ಧನಂ ಪಾಲಯತಾಂ । ತಥೇಂದ್ರೋ ವಿಷ್ಣುಶ್ಚ ಮೀಢ್ವಾಂಸಃ ಕಾಮಾನಾಂ ಸೇಕ್ತಾರ ಏತೇ ಸರ್ವೇ ದೇವಾಃ ಸಜೋಷಸಃ ಸಂಗತಾಃ ಸಂತೋಽಸ್ಮದೀಯಂ ಧನಂ ರಕ್ಷಂತು । ಏತೇ ದೇವಾ ಅಸ್ಮಭ್ಯಂ ಧನಂ ದತ್ವಾ ಪಾಲಯಂತ್ವಿತ್ಯರ್ಥಃ ॥

। ಪ್ರತಿಪದಾರ್ಥ ।

**ಉತ**—ಮತ್ತು । **ಅಪಾಂ**—ಉದಕಗಳಿಗೆ । **ಸಿಂಧುಃ**—ಪ್ರವಾಹಕಾರಕನಾದ ಪರ್ಜನ್ಯನು । **ನಃ**—ನಮ್ಮ । **ತತ್**—ಆ ಧನವನ್ನು ರಕ್ಷಿಸಲಿ । **ತತ್**—ಆ ಧನವನ್ನೇ । **ಮರುತಃ**—ಮರುತ್ತುಗಳೂ ರಕ್ಷಿಸಲಿ ।

**ಅಶ್ವಿನಾ**—ಅಶ್ವಿನೀದೇವತೆಗಳೂ ಆ ಧನವನ್ನು ರಕ್ಷಿಸಲಿ । **ಇಂದ್ರಃ**—ಇಂದ್ರನೂ । **ವಿಷ್ಣುಃ**—ವಿಷ್ಣುವೂ । **ವಿಶ್ವಾಂಸಃ**—ಕಾಮವರ್ಷಕರಾದ ಸಕಲ ದೇವತೆಗಳೂ । **ಸಜೋಷಸಃ**—ಒಟ್ಟಿಗೆ ಸೇರಿಕೊಂಡು ಆ ಧನವನ್ನು ರಕ್ಷಿಸಲಿ.

॥ ಭಾವಾರ್ಥ ॥

ಉದಕಗಳಿಗೆ ಪ್ರವಾಹಕಾರಕನಾದ ಪರ್ಜನ್ಯನು ನಮ್ಮ ಧನವನ್ನು ರಕ್ಷಿಸಲಿ. ಮರುತ್ತುಗಳೂ ಅದೇ ಧನವನ್ನು ರಕ್ಷಿಸಲಿ. ಅಶ್ವಿನೀದೇವತೆಗಳೂ ಆ ಧನವನ್ನೇ ರಕ್ಷಿಸಲಿ ಇಂದ್ರನೂ, ವಿಷ್ಣುವೂ, ಕಾಮವರ್ಷಕರಾದ ಸಕಲ ದೇವತೆಗಳೂ ಒಟ್ಟಿಗೆ ಸೇರಿಕೊಂಡು ಆ ಧನವನ್ನು ರಕ್ಷಿಸಲಿ.

## English Translation.

May he who causes the waters to flow (Parjanya), the **Maruts**, the Aswins, Indra, Vishnu, may all (these deities) together, the showerers, (of benefits, protect) that wealth for us.

॥ ಸಂಹಿತಾಪಾಠಃ ॥

ತೇ ಹಿ ಷ್ಮಾ ವನುಷೋ ನರೋಽಭಿಮಾತಿಂ ಕಯಸ್ಯ ಚಿತ್ ।
ತಿಗ್ಮಂ ನ ಕ್ಷೋದಃ ಪ್ರತಿಘ್ನಂತಿ ಭೂರ್ಣಯಃ ॥ ೧೫ ॥

॥ ಪದಪಾಠಃ ॥

ತೇ । ಹಿ । ಸ್ಮ । ವನುಷಃ । ನರಃ । ಅಭಿಽಮಾತಿಂ । ಕಯಸ್ಯ । ಚಿತ್ ।
ತಿಗ್ಮಂ । ನ । ಕ್ಷೋದಃ । ಪ್ರತಿಽಘ್ನಂತಿ । ಭೂರ್ಣಯಃ ॥ ೧೫ ॥

॥ ಸಾಯಣಭಾಷ್ಯಂ ॥

**ವನುಷೋ ವನನೀಯಾಃ ಸಂಭಜನೀಯಾ ನರೋ ನೇತಾರಸ್ತೇ ಹಿ ಷ್ಮಾ ತೇ ಖಲು ದೇವಾ ಭೂರ್ಣಯಃ ಕ್ಷಿಪ್ರಗಮನಾಃ ಸಂತಃ ಕಯಸ್ಯ ಚಿತ್ಕಸ್ಯಚಿಚ್ಛತ್ರೋರಭಿಮಾತಿಮಭಿಮಾನಂ ಪ್ರತಿಘ್ನಂತಿ । ಪ್ರತಿಕೂಲಂ ಯಥಾ ಭವತಿ ತಥಾ ಹಿಂಸಂತಿ । ತತ್ರ ದೃಷ್ಟಾಂತಃ । ತಿಗ್ಮಂ ನ ಯಥಾ ತಿಗ್ಮಂ ತೀಕ್ಷ್ಣಂ ಜವೇನ ಗಚ್ಛತ್ಕ್ಷೋದ ಉದಕಮಗ್ರತಃ ಸ್ಥಿತಂ ವೃಕ್ಷಮುನ್ಮೂಲಯತಿ ತದ್ವತ್ಶತ್ರೋರಭಿಮಾನಂ ಘ್ನಂತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವನುಷಃ**—ಪೂಜ್ಯರೂ । **ನರಃ**—ನೇತೃಗಳೂ ಆದ । **ತೇ ಹಿ ಷ್ಮಾ**—ಆ ದೇವತೆಗಳೇ । **ಭೂರ್ಣಯಃ**—ಶೀಘ್ರವಾದ ಗಮನವುಳ್ಳವರಾಗಿ । **ಕಯಸ್ಯ ಚಿತ್**—ಎಂತಹ ಶತ್ರುವಾದರೂ ಸರಿ ಅಂತಹವನ

**ಅಭಿಮಾತಿಂ**— ಪರಹಿಂಸಕವಾದ ಅಭಿಮಾನಬುದ್ಧಿಯನ್ನು (ಅಹಂಕಾರವನ್ನು) | **ತಿಗ್ಮಂ**—ವೇಗವಾಗಿ ಹರಿಯುವ | **ಕ್ಷೋದಃ ನ**—ಉದಕಪ್ರವಾಹವು ಎದುರಿಗಿರುವ ವೃಕ್ಷಾದಿಗಳನ್ನು ಕೆಡಹುವಂತೆ | **ಪ್ರತಿಘ್ನಂತಿ**-ಆ ಶತ್ರುವಿನ ಮೇಲೆ ಎದುರುಬಿದ್ದು ಅವನನ್ನು ನಾಶಮಾಡುತ್ತಾರೆ.

॥ ಭಾವಾರ್ಥ ॥

ಪೂಜ್ಯರೂ, ನೇತೃಗಳೂ ಆದ ಆ ದೇವತೆಗಳೇ, ಕ್ಷಿಪ್ರವಾದ ಗಮನವುಳ್ಳವರಾಗಿ, ಎಂತಹ ಶಕ್ತಿಯುತನಾದ ಶತ್ರುವಾದರೂ ಅಂತಹವನ ಪರಹಿಂಸಕವಾದ ಅಭಿಮಾನಬುದ್ಧಿಯನ್ನು ವೇಗವಾಗಿ ಹರಿಯುವ ಉದಕಪ್ರವಾಹವು ಎದುರಿಗಿರುವ ವೃಕ್ಷಾದಿಗಳನ್ನು ಕೆಡಹುವಂತೆ ಆ ಶತ್ರುವಿನ ಮೇಲೆ ಎದುರುಬಿದ್ದು ಅವನನ್ನು ನಾಶಮಾಡುತ್ತಾರೆ.

English Translation.

Those desirable leaders (of men), rapid in movement, break down the haughtiness of any (foe) whatever, as an impetuous current (sweeps away all obstacles).

॥ ಸಂಹಿತಾಪಾಠಃ ॥

ಅಯಮೇಕ ಇತ್ಥಾ ಪುರೂರು ಚಷ್ಟೇ ವಿ ವಿಶ್ಪತಿಃ ।
ತಸ್ಯ ವ್ರತಾನ್ಯನು ವಶ್ಚರಾಮಸಿ ॥ ೧೬ ॥

॥ ಪದಪಾಠಃ ॥

ಅಯಂ । ಏಕಃ । ಇತ್ಥಾ । ಪುರು । ಉರು । ಚಷ್ಟೇ । ವಿ । ವಿಶ್ಪತಿಃ ।
ತಸ್ಯ । ವ್ರತಾನಿ । ಅನು । ವಃ । ಚರಾಮಸಿ ॥ ೧೬ ॥

॥ ಸಾಯಣಭಾಷ್ಯಂ ॥

ಮಿತ್ರಸ್ಯ ಕರ್ಮಾಣ್ಯಾಹ । ವಿಶ್ಪತಿರ್ವಿಶಾಂ ಪಾಲಯಿತಾನಯೋರ್ಮಿತ್ರಾವರುಣಯೋರೇಕೋಽಯಂ ಮಿತ್ರಃ ಪುರು ಪುರೂಣಿ ಬಹೂನಿ ಚೋರೂರೂಣಿ ಚ ದ್ರವ್ಯಾಣೀತ್ಥೇತ್ಥಂ ವಿ ಚಷ್ಟೇ । ಸ್ವತೇಜಸಾ ಪಶ್ಯತಿ । ತಸ್ಯ ಮಿತ್ರಸ್ಯ ವ್ರತಾನಿ ಕರ್ಮಾಣಿ ವೋ ಯುಷ್ಮದರ್ಥಮನು ಚರಾಮಸಿ । ಅನುಚರಾಮಃ । ಕುರ್ಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಿಶ್ಪತಿಃ**—ಪ್ರಜೆಗಳ ಪಾಲಕನೂ | **ಏಕಃ**—ಅದ್ವಿತೀಯನೂ ಆದ | **ಅಯಂ**—ಈ ಮಿತ್ರನು | **ಪುರು**—ಅನೇಕವಾದವೂ | **ಉರು**—ವಿಸ್ತೃತವಾದವೂ ಆದ ಪದಾರ್ಥಗಳನ್ನೆಲ್ಲಾ | **ಇತ್ಥಾ**—ಈ ಪ್ರಕಾರವಾಗಿ | **ವಿ ಚಷ್ಟೇ**—ತನ್ನ ತೇಜೋರೂಪವಾದ ದೃಷ್ಟಿಯಿಂದ ಒಟ್ಟಿಗೆ ನೋಡುತ್ತಾನೆ | **ತಸ್ಯ**—ಆ ಮಿತ್ರನ | **ವ್ರತಾನಿ**—ಕರ್ಮಗಳನ್ನು | **ವಃ**—ನಿಮಗಾಗಿ | **ಅನುಚರಾಮಸಿ**—ನಾವು ಆಚರಿಸುವೆವು (ಅಥವಾ ಧರಿಸೋಣ).

|| ಭಾವಾರ್ಥ ||

ಪ್ರಜೆಗಳ ಪಾಲಕನೂ, ಅದ್ವಿತೀಯನೂ ಆದ ಈ ಮಿತ್ರನು ಅನೇಕವಾದವೂ, ವಿಸ್ತೃತವಾದವೂ ಆದ ಪದಾರ್ಥಗಳನ್ನೆಲ್ಲಾ ತನ್ನ ತೇಜೋರೂಪವಾದ ದೃಷ್ಟಿಯಿಂದ ಒಟ್ಟಿಗೆ ನೋಡುತ್ತಾನೆ. ಆ ಮಿತ್ರನ ಕರ್ಮಗಳನ್ನು ನಿಮಗಾಗಿ ನಾವು ಆಚರಿಸುವೆವು.

English Translation.

This one, the lord of men (Mitra), contemplates many vast things: we fallow his rites for you.

| ಸಂಹಿತಾಪಾಠಃ |

ಅನು ಪೂರ್ವಾಣ್ಯೋಕ್ಯಾ ಸಾಮ್ರಾಜ್ಯಸ್ಯ ಸಶ್ಚಿಮ |
ಮಿತ್ರಸ್ಯ ವ್ರತಾ ವರುಣಸ್ಯ ದೀರ್ಘಶ್ರುತ್ || ೧೭ ||

|| ಪದಪಾಠಃ ||

ಅನು | ಪೂರ್ವಾಣಿ | ಓಕ್ಯಾ | ಸಾಂऽರಾಜ್ಯಸ್ಯ | ಸಶ್ಚಿಮ |
ಮಿತ್ರಸ್ಯ | ವ್ರತಾ | ವರುಣಸ್ಯ | ದೀರ್ಘऽಶ್ರುತ್ || ೧೭ |

|| ಸಾಯಣಭಾಷ್ಯಂ ||

ಸಾಮ್ರಾಜ್ಯಸ್ಯ | ಸಮ್ರಾಜೋ ಭಾವಃ ಸಾಮ್ರಾಜ್ಯಂ | ಸಾಮ್ರಾಜ್ಯಮಸ್ಯಾಸ್ತೀತಿ ಸಾಮ್ರಾಜ್ಯಃ || ಅರ್ಶಆದಿಭ್ಯ ಇತ್ಯಚ್‌ಪ್ರತ್ಯಯಃ || ಸಾಮ್ರಾಜ್ಯವತೋ ವರುಣಸ್ಯ ಪೂರ್ವಾಣಿ ಪುರಾತನಾನ್ಯೋಕ್ಯಾ | ಓಕೋ ಗೃಹಂ | ತಸ್ಮೈ ಹಿತಾನಿ ಕರ್ಮಾಣಿ ವಯಂ ಸಶ್ಚಿಮ || ಸಶ್ಚತಿರ್ಗತಿಕರ್ಮಾ | ಲಿಟಿ ರೂಪಂ | ದ್ವಿರ್ವಚನಸ್ಯ ಛಂದಸಿ ವಿಕಲ್ಪಿತತ್ವಾದತ್ರ ದ್ವಿರ್ವಚನಾಭಾವಃ || ತದೇವಾಹ | ಮಿತ್ರಸ್ಯ ವ್ರತಾ ವ್ರತಾನಿ ಕರ್ಮಾಣಿ ಚ ದೀರ್ಘಶ್ರುತ್ || ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ || ದೀರ್ಘಶ್ರುತೋऽತಿಶಯೇನ ಪ್ರಸಿದ್ಧಸ್ಯ ವರುಣಸ್ಯ ವ್ರತಾನಿ ಚ ಸಶ್ಚಿಮೇತಿ ||

| ಪ್ರತಿಪದಾರ್ಥ |

ಸಾಮ್ರಾಜ್ಯಸ್ಯ—ಸಾರ್ವಭೌಮಪದವಿಯುಳ್ಳ ವರುಣನ | ಪೂರ್ವಾಣಿ—ಪುರಾತನವಾದವೂ | ಓಕ್ಯಾ—ನಮ್ಮ ಗೃಹಗಳಿಗೆ ಅನುಕೂಲವಾದವೂ ಆದ ಕರ್ಮಗಳನ್ನು | ಅನು ಸಶ್ಚಿಮ—ಆಚರಿಸುವೆವು | ಮಿತ್ರಸ್ಯ—ಮಿತ್ರನ | ವ್ರತಾ—ಕರ್ಮಗಳನ್ನು | ದೀರ್ಘಶ್ರುತ್—ಅತಿದೂರದಲ್ಲಿಯೂ ಪ್ರಸಿದ್ಧನಾದ | ವರುಣಸ್ಯ—ವರುಣನ ಕರ್ಮಗಳನ್ನೂ ಆಚರಿಸೋಣ.

|| ಭಾವಾರ್ಥ ||

ಸಾರ್ವಭೌಮ ಪದವಿಯುಳ್ಳ ವರುಣನ ಪುರಾತನವಾದವೂ, ನಮ್ಮ ಗೃಹಗಳಿಗೆ ಅನುಕೂಲವಾದವೂ ಆದ ಕರ್ಮಗಳನ್ನು ಆಚರಿಸುವೆವು. ಮಿತ್ರನ ಕರ್ಮಗಳನ್ನೂ ಅತಿದೂರದಿಂದಲೂ ಪ್ರಸಿದ್ಧನಾದ ವರುಣನ ಕರ್ಮಗಳನ್ನೂ ಆಚರಿಸೋಣ.

English Translation.

We observe the ancient rites of the imperial Varuna and the renowned Mitra, (rites) that are good for (our) dwelling.

|| ಸಂಹಿತಾಪಾಠಃ ||

ಪರಿ ಯೋ ರಶ್ಮಿನಾ ದಿವೋಽನ್ತಾನ್ಮಮೇ ಪೃಥಿವ್ಯಾಃ |
ಉಭೇ ಆ ಪಪ್ರೌ ರೋದಸೀ ಮಹಿತ್ವಾ || ೧೮ ||

|| ಪದಪಾಠಃ ||

ಪರಿ | ಯಃ | ರಶ್ಮಿನಾ | ದಿವಃ | ಅಂತಾನ್ | ಮಮೇ | ಪೃಥಿವ್ಯಾಃ |
ಉಭೇ ಇತಿ | ಆ | ಪಪ್ರೌ | ರೋದಸೀ ಇತಿ | ಮಹಿऽತ್ವಾ || ೧೮ ||

|| ಸಾಯಣಭಾಷ್ಯಂ ||

**ಯೋ ಮಿತ್ರೋ ದಿವಃ ಪೃಥಿವ್ಯಾ ದ್ಯಾವಾಪೃಥಿವ್ಯೋರಂತಾನ್ರಶ್ಮಿನಾ ಸ್ವತೇಜಸಾ ಪರಿ ಮಮೇ ಪರಿಮಿನೋತಿ | ತಯೋಃ ಪರ್ಯಂತಾನ್ ಸ್ವರಶ್ಮಿನಾ ಭಾಸಯತೀತ್ಯರ್ಥಃ | ಸ ಏವೋಭೇ ರೋದಸೀ ದ್ಯಾವಾಪೃಥಿವ್ಯೌ ಮಹಿತ್ವಾ ಸ್ವಮಹಿಮ್ನಾ ಪಪ್ರೌ | ಅಸಮಂತಾತ್ಪೂರಯತಿ ||**

| ಪ್ರತಿಪದಾರ್ಥ |

**ಯಃ**—ಯಾರು | **ದಿವಃ**—ದ್ಯುಲೋಕದ (ಮತ್ತು) | **ಪೃಥಿವ್ಯಾಃ**—ಪೃಥಿವಿಯ | **ಅಂತಾನ್**—ಕೊನೆಯ ಭಾಗಗಳನ್ನೆಲ್ಲಾ | **ರಶ್ಮಿನಾ**—ತನ್ನ ರಶ್ಮಿಯಿಂದ | **ಪರಿ ಮಮೇ**—ಅಳತೆ ಮಾಡಿದ್ದಾನೆಯೋ (ಎಲ್ಲಾ ಲೋಕಗಳನ್ನೂ ಬೆಳಗಿಸಿದ್ದಾನೆಯೋ) | (**ಸಃ**—ಅದೇ ಮಿತ್ರದೇವನೇ) | **ಮಹಿತ್ವಾ**—ತನ್ನ ಮಾಹಾತ್ಮ್ಯದಿಂದ | **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ | **ಆ ಪಪ್ರೌ**—ಪೂರ್ಣವಾಗಿ ವ್ಯಾಪಿಸಿದ್ದಾನೆ.

|| ಭಾವಾರ್ಥ ||

ಯಾವ ಮಿತ್ರನು ದ್ಯುಲೋಕದ ಮತ್ತು ಪೃಥ್ವಿಯ ಅಂತಪ್ರದೇಶಗಳನ್ನೆಲ್ಲಾ ತನ್ನ ತೇಜಸ್ಸಿನಿಂದ ಅಳೆಯುವಂತೆ ಬೆಳಗಿಸಿದ್ದಾನೆಯೋ ಅದೇ ಮಿತ್ರನೇ, ತನ್ನ ಮಾಹಾತ್ಮ್ಯದಿಂದ ದ್ಯಾವಾಪೃಥಿವಿಗಳೆರಡನ್ನೂ ಪೂರ್ಣವಾಗಿ ವ್ಯಾಪಿಸಿದ್ದಾನೆ.

## English Translation.

(Mitra is he) who has measured with his rays the limits of both heaven and earth; who has filled both heaven and earth with his greatness.

। ಸಂಹಿತಾಪಾಠಃ ।

ಉದು ಷ್ಯ ಶರಣೇ ದಿವೋ ಜ್ಯೋತಿರಯಂಸ್ತ ಸೂರ್ಯಃ ।
ಅಗ್ನಿರ್ನ ಶುಕ್ರಃ ಸಮಿಧಾನ ಆಹುತಃ ॥ ೧೯ ॥

॥ ಪದಪಾಠಃ ॥

ಉತ್ । ಊಂ ಇತಿ । ಸ್ಯಃ । ಶರಣೇ । ದಿವಃ । ಜ್ಯೋತಿಃ । ಅಯಂಸ್ತ । ಸೂರ್ಯಃ ।
ಅಗ್ನಿಃ । ನ । ಶುಕ್ರಃ । ಸಂಽಇಧಾನಃ । ಆಽಹುತಃ ॥ ೧೯ ॥

॥ ಸಾಯಣಭಾಷ್ಯಂ ॥

ಸೂರ್ಯಃ ಸುವೀರ್ಯಃ ಸುಷ್ಠು ಸರ್ವಸ್ಯ ಪ್ರೇರಕಃ ಸ್ಯ ಸ ಮಿತ್ರೋ ವರುಣಶ್ಚ ದಿವೋ ದ್ಯೋತಮಾನಸ್ಯಾದಿತ್ಯಸ್ಯ ಶರಣೇ ಸ್ಥಾನೇ ನಭಸಿ ಜ್ಯೋತಿರಾತ್ಮೀಯಂ ತೇಜ ಉದಯಂಸ್ತ । ಉದ್ಯಚ್ಛತಿ । ಊರ್ಧ್ವಂ ಗಮಯತಿ । ಸರ್ವತ್ರ ವಿಸ್ತಾರಯತೀತ್ಯರ್ಥಃ ॥ ಯಮೇರ್ಲುಙಿ ರೂಪಂ ॥ ತತಃ ಸೋಽಗ್ನಿರ್ನ ಶುಕ್ರೋಽಗ್ನಿರಿವ ದೀಪ್ಯಮಾನಃ ಸಮಿಧಾನೋ ಹವಿರ್ಭಿಃ ಸಮಿಧ್ಯಮಾನ ಆಹುತಃ ಸರ್ವೈರಾಹೂತಸ್ತಿಷ್ಠತಿ ॥

। ಪ್ರತಿಪದಾರ್ಥ ।

**ಸ್ಯಃ**—ಮಿತ್ರರೂಪದಲ್ಲಿ ಪ್ರಸಿದ್ಧನೂ । **ಸೂರ್ಯಃ**—ಸರ್ವಪ್ರೇರಕನೂ ಆದ ಸೂರ್ಯನು । (ಅದೇ ಮಿತ್ರನು) **ದಿವಃ**—ಪ್ರಕಾಶಮಾನನಾದ ಆದಿತ್ಯನ । **ಶರಣೇ**—ಸ್ಥಾನವಾದ ಅಂತರಿಕ್ಷದಲ್ಲಿ । **ಜ್ಯೋತಿಃ**—ತನ್ನ ಕಾಂತಿಯನ್ನು । **ಉದಯಂಸ್ತ**—ಸರ್ವತ್ರ ವಿಸ್ತರಿಸಿ ಹರಡುತ್ತಾನೆ । **ಆಹುತಃ**—ಸರ್ವರ ಆಹ್ವಾನಕ್ಕೂ ಪೂಜೆಗೂ ಪಾತ್ರನಾಗಿಯೂ । **ಸಮಿಧಾನಃ**—ಪ್ರಜ್ವಲಿತನಾಗಿಯೂ । **ಅಗ್ನಿರ್ನ**—ಅಗ್ನಿಯಂತೆ । **ಶುಕ್ರಃ**—ಪ್ರಭಾಯುತನಾಗಿಯೂ ಇರುತ್ತಾನೆ.

। ಭಾವಾರ್ಥ ।

ಸೂರ್ಯರೂಪದಲ್ಲಿ ಸರ್ವಪ್ರೇರಕನಾದ ಅದೇ ಮಿತ್ರನು ಪ್ರಕಾಶಮಾನನಾದ ಆದಿತ್ಯನ ಸ್ಥಾನವಾದ ಅಂತರಿಕ್ಷದಲ್ಲಿ ತನ್ನ ಕಾಂತಿಯನ್ನು ಸರ್ವತ್ರ ವಿಸ್ತರಿಸಿ ಹರಡುತ್ತಾನೆ. ಸರ್ವರ ಆಹ್ವಾನಕ್ಕೂ ಪೂಜೆಗೂ ಪಾತ್ರನಾಗಿಯೂ ಪ್ರಜ್ವಲಿತನಾಗಿಯೂ ಅಗ್ನಿಯಂತೆ ಪ್ರಭಾಯುತನಾಗುತ್ತಾನೆ.

## English Translation.

He, Surya, has uplifted his radiance in the region of the heaven; kindled and invoked with burnt-offerings, he is bright, like Agni.

|| ಸಂಹಿತಾಪಾಠಃ ||

ವಚೋ ದೀರ್ಘಪ್ರಸದ್ಮನೀಶೇ ವಾಜಸ್ಯ ಗೋಮತಃ ।
ಈಶೇ ಹಿ ಪಿತ್ವೋऽವಿಷಸ್ಯ ದಾವನೇ ॥ ೨೦ ॥

। ಪದಪಾಠಃ ।

ವಚಃ । ದೀರ್ಘऽಪ್ರಸದ್ಮನಿ । ಈಶೇ । ವಾಜಸ್ಯ । ಗೋऽಮತಃ ।
ಈಶೇ । ಹಿ । ಪಿತ್ವಃ । ಅವಿಷಸ್ಯ । ದಾವನೇ ॥ ೨೦ ॥

। ಸಾಯಣಭಾಷ್ಯಂ ।

ಹೇ ಸ್ತೋತಃ ದೀರ್ಘಪ್ರಸದ್ಮನಿ ದೀರ್ಘಂ ಪ್ರತತಂ ವಿಸ್ತೃತಂ ಸದ್ಮ ಸದನಂ ಯಸ್ಮಿನ್ಯಜ್ಞೇ ವಚಃ । ಮಿತ್ರಂ ವರುಣಂ ಚ ಸ್ತುಹಿ ॥ ವಕ್ತೇರ್ಲೇಟ್ಯಡಾಗಮಃ ॥ ಸ ವರುಣೋ ಗೋಮತಃ ಪಶುಮತೋ ವಾಜಸ್ಯಾನ್ನಸ್ಯೇಶೇ । ಈಷ್ಟೇ । ಸ್ವಾಮೀ ಭವತಿ । ಕೇವಲಂ ಸ್ವಾಮೀ ನ ಭವತಿ ಕಿಂತ್ವವಿಷಸ್ಯ ಮಹತಃ ಪ್ರೀತಿಕಾರಿಣಃ ಪಿತ್ವೋऽನ್ನಸ್ಯ ದಾವನೇ ದಾನಾಯ ಚೇಶೇ । ಸಮರ್ಥೋ ಭವತಿ । ಯೇ ಸ್ತೋತ್ರಂ ಕುರ್ವಂತಿ ತೇಭ್ಯೋऽನ್ನಂ ದದಾತೀತ್ಯರ್ಥಃ ॥

॥ಪ್ರತಿಪದಾರ್ಥ ॥

(ಎಲೈ ಸ್ತೋತೃವೇ) **ದೀರ್ಘಪ್ರಸದ್ಮನಿ**—ಅತಿ ದೀರ್ಘವಾದ ಯಜ್ಞಗೃಹದಲ್ಲಿ । **ವಚಃ**—ವರುಣ ಮತ್ತು ಮಿತ್ರರನ್ನು ಪ್ರಶಂಸಿಸುವ ಸ್ತುತಿವಾಕ್ಯವನ್ನು ಪಠಿಸು । (**ಸಃ**—ಅದೇ ವರುಣನು) । **ಗೋಮತಃ**—ಗೋವುಗಳಿಂದ ಕೂಡಿದ । **ವಾಜಸ್ಯ**—ಅನ್ನಕ್ಕೆ । **ಈಶೇ**—ಪ್ರಭುವಾಗಿರುತ್ತಾನೆ । **ಅವಿಷಸ್ಯ**—ಪ್ರೀತಿಕಾರಕವಾದ । **ಪಿತ್ವಃ**—ಅನ್ನದ । **ದಾವನೇ**—ದಾನಕ್ಕೂ । **ಈಶೇ ಹಿ**—ಅವನೇ ಒಡೆಯನಾಗಿದ್ದಾನೆ.

॥ ಭಾವಾರ್ಥ ॥

ಎಲೈ ಸ್ತೋತೃವೇ, ಅತಿ ದೀರ್ಘವಾದ ಯಜ್ಞಗೃಹದಲ್ಲಿ ವರುಣ ಮತ್ತು ಮಿತ್ರರನ್ನು ಪ್ರಶಂಸಿಸುವ ಸ್ತುತಿವಾಕ್ಯವನ್ನು ಪಠಿಸು. ಅದೇ ವರುಣನು ಗೋವುಗಳಿಂದ ಕೂಡಿದ ಅನ್ನಕ್ಕೆ ಪ್ರಭುವಾಗಿರುತ್ತಾನೆ. ಪ್ರೀತಿಕಾರಕವಾದ ಅನ್ನದಾನಕ್ಕೂ ಅವನೇ ಒಡೆಯನಾಗಿರುತ್ತಾನೆ.

## English Translation.

Raise your voice in the spacious hall of sacrifice (to him) who is lord over food derived from cattle, who is able to grant nutritious sustenance.

॥ ಸಂಹಿತಾಪಾಠಃ ॥

ತತ್ಸೂರ್ಯಂ ರೋದಸೀ ಉಭೇ ದೋಷಾ ವಸ್ತೋರುಪ ಬ್ರುವೇ ।
ಭೋಜೇಷ್ವಸ್ಮಾ ಅಭ್ಯುಚ್ಚರಾ ಸದಾ ॥ ೨೧ ॥

॥ ಪದಪಾಠಃ ॥

ತತ್ । ಸೂರ್ಯಂ । ರೋದಸೀ ಇತಿ । ಉಭೇ ಇತಿ । ದೋಷಾ । ವಸ್ತೋಃ । ಉಪ । ಬ್ರುವೇ ।
ಭೋಜೇಷು । ಅಸ್ಮಾನ್ । ಅಭಿ । ಉತ್ । ಚರ । ಸದಾ ॥ ೨೧ ॥

॥ ಸಾಯಣಭಾಷ್ಯಂ ॥

ಸೂರ್ಯಂ ಸುವೀರ್ಯಂ ತದ್ವಾರುಣಂ ಮೈತ್ರಂ ಚ ತೇಜ ಉಭೇ ರೋದಸೀ ಉಭೇ ದ್ಯಾವಾಪೃಥಿವ್ಯೌ ಚ ದೋಷಾ ॥ ಸುಪಾಂ ಸುಲುಗಿತಿ ದ್ವಿತೀಯಾಯಾ ಲುಕ್ । ಕಾಲಾಧ್ವನೋರಿತಿ ದ್ವಿತೀಯಾ ॥ ರಾತ್ರೌ ವಸ್ತೋರಹನಿ ಚಾಹಮುಪ ಬ್ರುವೇ । ಉಪಸ್ತೌಮಿ । ತ್ವಂ ಸ್ತೂಯಮಾನೋ ವರುಣೋ ಭೋಜೇಷು ದಾತೃಷ್ವಸ್ಮಾನ್ ಸದಾಭ್ಯುಚ್ಚರ । ಸರ್ವದಾಭಿಮುಖಂ ಪ್ರೇರಯ । ದಾತೃಷ್ವೇತೇಷಾಂ ದಾನೇಷ್ವಸ್ಮಾನ್ ಪುರೋಭಾವಿನಃ ಕುರ್ವಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಸೂರ್ಯಂ**—ಉತ್ತಮವಾದ ವೀರ್ಯವುಳ್ಳ । **ತತ್**—ಅದೇ ಮೈತ್ರಾವರುಣ ಸಂಬಂಧಿಯಾದ ತೇಜಸ್ಸನ್ನೂ । **ಉಭೇ ರೋದಸೀ**--ದ್ಯಾವಾಪೃಥಿವಿಗಳೆರಡನ್ನೂ । **ದೋಷಾ**—ರಾತ್ರಿಯಲ್ಲಿಯೂ । **ವಸ್ತೋಃ**—ಹಗಲಿನಲ್ಲಿಯೂ । **ಉಪ ಬ್ರುವೇ**—ಪ್ರಶಂಸಿಸುತ್ತೇನೆ (ಎಲೈ ವರುಣನೇ) । **ಭೋಜೇಷು**—ಉದಾರವಾದ ದಾತೃಗಳಿಗಭಿಮುಖವಾಗಿ । **ಅಸ್ಮಾನ್**—ನಮ್ಮನ್ನು । **ಸದಾ**—ಯಾವಾಗಲೂ । **ಅಭ್ಯುಚ್ಚರ**—ಕಳುಹಿಕೊಡು.

॥ ಭಾವಾರ್ಥ ॥

ಉತ್ತಮವಾದ ವೀರ್ಯವುಳ್ಳ ಅದೇ ಮೈತ್ರಾವರುಣಸಂಬಂಧಿಯಾದ ತೇಜಸ್ಸನ್ನೂ ದ್ಯಾವಾಪೃಥಿವಿಗಳನ್ನೂ ರಾತ್ರಿಯಲ್ಲಿಯೂ, ಹಗಲಿನಲ್ಲಿಯೂ ಪ್ರಶಂಸಿಸುತ್ತೇನೆ. ಎಲೈ ವರುಣನೇ, ಉದಾರವಾದ ದಾತೃಗಳಿಗಭಿಮುಖವಾಗಿ ನಮ್ಮನ್ನು ಯಾವಾಗಲೂ ಕಳುಹಿಸಿಕೊಡು.

## English Translation.

I glorify by night and day that sun (Mitra and Varuna), and both the heaven and earth ; do you (Varuna) ever bring us to the presence of the bountiful.

॥ ಸಂಹಿತಾಪಾಠಃ ॥

ಋಜ್ರಮುಕ್ಷಣ್ಯಾಯನೇ ರಜತಂ ಹರಯಾಣೇ ।
ರಥಂ ಯುಕ್ತಮಸನಾಮ ಸುಷಾಮಣಿ ॥ ೨೨ ॥

॥ ಪದಪಾಠಃ ॥

ಋಜ್ರಂ । ಉಕ್ಷಣ್ಯಾಯನೇ । ರಜತಂ । ಹರಯಾಣೇ ।
ರಥಂ । ಯುಕ್ತಂ । ಅಸನಾಮ । ಸುऽಸಾಮನಿ ॥ ೨೨ ॥

। ಸಾಯಣಭಾಷ್ಯಂ ।

ಸುಷಾಮ್ನಃ ಪುತ್ರೋ ವರುರ್ನಾಮ ರಾಜಾ । ಸ ಯದ್ದಾನಂ ಪ್ರಾದಾದ್ವಿಶ್ವಮನಸೇ ತದಸೌ ವಿಶ್ವಮನಾ ಋಷಿರನಯಾಚಷ್ಟೇ । ಉಕ್ಷಣ್ಯಾಯನೇ । ಉಕ್ಷನಾಮಾ ಕಶ್ಚಿದ್ವರೋಃ ಪೂರ್ವಜಃ ॥ ತಸ್ಯ ಗೋತ್ರಾಪತ್ಯ ಉಕ್ಷಣ್ಯಃ । ತದಂತಾತ್ಫಕ್ಪ್ರತ್ಯಯಃ । ಏತ್ವಂ ಛಾಂದಸಂ । ವೃದ್ಧಿಭಾವೋऽಪಿ ಸಂಜ್ಞಾಪೂರ್ವಕೋ ವಿಧಿರನಿತ್ಯ ಇತಿ ನ ಭವತಿ ॥ ತಸ್ಯ ಗೋತ್ರಾಪತ್ಯೇ ಹರಯಾಣೇ ಶತ್ರುಜೀವಿತೈಶ್ವರ್ಯಾದಿಹರಣಶೀಲಯಾನ ಏತಾದೃಶೇ ಸುಷಾಮಣಿ । ಬಹುವತ್ಪಿತೃಶಬ್ದೇನ ಪುತ್ರೋऽಭಿಧೀಯತೇ । ಸುಷಾಮ್ನಃ ಪುತ್ರೇ ವರೌ ರಾಜನಿ ದದತಿ ಸತಿ ಕಿಮಭೂತ್ । ಋಜ್ರಮೃಜುಗಾಮಿನಂ ರಜತಂ ರಜತಮಯಂ ರಜತಸದೃಶಂ ವಾ ಯುಕ್ತಮಶ್ವಾಭ್ಯಾಂ ಯುಕ್ತಂ ರಥಮಸನಾಮ । ಏತೇಷಾಂ ಮಿತ್ರಾದೀನಾಂ ಪ್ರಸಾದಾದ್ವಯಂ ಸಂಭಕ್ತವಂತೋ ಲಬ್ಧವಂತೋऽಭೂಮ ॥

। ಪ್ರತಿಪದಾರ್ಥ ।

**ಉಕ್ಷಣ್ಯಾಯನೇ**—ಉಕ್ಷವಂಶೋತ್ಪನ್ನನೂ । **ಹರಯಾಣೇ**— ಶತ್ರುಗಳ ಜೀವವನ್ನೂ ಧನವನ್ನೂ ಅಪಹರಿಸತಕ್ಕವನೂ । **ಸುಷಾಮಣಿ**—ಸುಷಾಮಪುತ್ರನೂ ಆದ ವರುವಿನಲ್ಲಿದ್ದ । **ಋಜ್ರಂ**—ಋಜುಗಾಮಿಯಾದುದೂ । **ರಜತಂ**—ರಜತ (ಬೆಳ್ಳಿ) ಮಯವಾದುದೂ । **ಯುಕ್ತಂ**—ಅಶ್ವಗಳೊಡನೆ ಯುಕ್ತವಾದುದೂ ಆದ । **ರಥಂ**—ರಥವನ್ನು । **ಅಸನಾಮ**—ನಾವು ಪಡೆದೆವು

। ಭಾವಾರ್ಥ ।

ಉಕ್ಷವಂಶೋತ್ಪನ್ನನೂ, ಶತ್ರುಗಳ ಜೀವವನ್ನೂ ಧನವನ್ನೂ ಅಪಹರಿಸತಕ್ಕವನೂ, ಸುಷಾಮಪುತ್ರನೂ ಆದ ವರುವಿನಲ್ಲಿದ್ದ ಋಜುಗಾಮಿಯಾದುದೂ, ರಜತಮಯವಾದುದೂ, ಅಶ್ವಯುಕ್ತವಾದುದೂ ಆದ ರಥವನ್ನು ನಾವು ಪಡೆದೆವು.

## English Translation.

We have received from the son of Sushaman, the descendant of Ukshan, the overcomer (of foes), a well-going chariot of silver, yoked (with a pair of horses).

|| ವಿಶೇಷವಿಷಯಗಳು ||

**ಹರಯಾಣೇ**— ಈ ಶಬ್ದಕ್ಕೆ ಭಾಷ್ಯಕಾರರು— **ಶತ್ರುಜೀವಿತೈಶ್ವರ್ಯಾದಿ ಹರಣಶೀಲಯಾನೇ|** ಯುದ್ಧ ಮಾಡಿ ಶತ್ರುಗಳ ಪ್ರಾಣ, ಐಶ್ವರ್ಯ ಮೊದಲಾದವುಗಳನ್ನು ಅಪಹರಿಸಿಕೊಂಡು ಹೋಗುವವನು ಎಂದರ್ಥಮಾಡಿದಾರೆ. ಆದರೆ ಯಾಸ್ಕರು—

**ಹರಯಾಣಃ | ಹರಯಾಣೋ ಹರಮಾಣಯಾನಃ | ರಜತಂ ಹರಯಾಣೇ ಇತ್ಯಪಿ ನಿಗಮೋ ಭವತಿ ||** (ನಿ. ೫-೧೫)

ಎಂದರ್ಥವಿವರಣೆಮಾಡಿ ಪ್ರಕೃತಋಕ್ಕನ್ನೇ ಉದಾಹರಣೆಯಾಗಿ ಕೊಟ್ಟಿದ್ದಾರೆ ಎಂದರೆ, **ನಿತ್ಯಕಾಲಮೇವಾಭಿಪ್ರಸ್ಥಿತಯಾನೇ** ಯಾವಾಗಲೂ ಪ್ರಯಾಣಮಾಡುತ್ತಲಿರುವವನು, ಗಮನಶೀಲನು ಎಂದರ್ಥವು. ಇಲ್ಲಿ ಈ ಶಬ್ದವು **ಸುಷಾಮಣಿ** (ಸುಷಾಮಾ ಎಂಬುವನ ಪುತ್ರನಾದ ವರು ಎಂಬ ರಾಜನು) ಎಂಬ ಶಬ್ದಕ್ಕೆ ವಿಶೇಷಣವಾಗಿದೆ. ಆದುದರಿಂದ ಯುದ್ಧಾಭಿಲಾಷೆಯಿಂದ ಯಾವಾಗಲೂ ಶತ್ರುಗಳ (ದಸ್ಯುಜನರ) ಮೇಲೆ ದಂಡೆತ್ತಿಹೋಗಿ ಅವರೊಡನೆ ಯುದ್ಧಮಾಡಿ ಜಯಿಸುವ **ವರು** ಎಂಬ ರಾಜನ ಜೈತ್ರಯಾತ್ರೆಯನ್ನು ಸೂಚಿಸುವುದಕ್ಕಾಗಿ ಋಷಿಯು ಈ ಶಬ ಪ್ರಯೋಗಮಾಡಿದಾನೆಂದು ಊಹಿಸಬಹುದು.

| ಸಂಹಿತಾಪಾಠಃ |

ತಾ ಮೇ ಅಶ್ವ್ಯಾನಾಂ ಹರೀಣಾಂ ನಿತೋಶನಾ |
ಉತೋ ನು ಕೃತ್ವ್ಯಾನಾಂ ನೃವಾಹಸಾ || ೨೩ ||

|| ಪದಪಾಠಃ ||

ತಾ | ಮೇ | ಅಶ್ವ್ಯಾನಾಂ | ಹರೀಣಾಂ | ನಿऽತೋಶನಾ |
ಉತೋ ಇತಿ | ನು | ಕೃತ್ವ್ಯಾನಾಂ | ನೃऽವಾಹಸಾ || ೨೩ ||

|| ಸಾಯಣಭಾಷ್ಯಂ ||

ಋಷಿಃ ಪ್ರತಿಗೃಹೀತಾವಶ್ವಾವಾಹ | ಹರೀಣಾಂ ಹರಿತವರ್ಣಾನಾಮಶ್ವ್ಯಾನಾಮಶ್ವಸಂಘಾನಾಂ ಮಧ್ಯೇ ನಿತೋಶನಾ ನಿತೋಶನೌ | ತೋಶತಿರ್ಹಿಂಸಾಕರ್ಮಾ | ಶತ್ರೂಣಾಮತ್ಯಂತಂ ಬಾಧಕೌ ತಾವುಭೋ ಅಪಿ ಚ ಕೃತ್ವ್ಯಾನಾಂ ಯುದ್ಧಕರ್ಮಣಿ ಕುಶಲಾನಾಂ ಚ ನು ಕುಶಲಮಿತಿ ಬಾಧಕೌ ನೃವಾಹಸಾ

**ನೃವಾಹಸಾವಾಯುಧನೇಕ್ಯಾಣಾಂ ಮನುಷ್ಯಾಣಾಂ ವೋಢಾರೌ ತಾ ತಾವಶ್ವೌ ಮೇ ಮಹ್ಯಂ ನು ಕ್ಷಿಪ್ರಂ ಸೌಷಾಮ್ಣೇನ ವರುಣಾ ದತ್ತೌ ಭವೇತಾಂ ॥**

|| ಪ್ರತಿಪದಾರ್ಥ ||

**ಮೇ**—ನನಗೆ | **ನು**—ಕ್ಷಿಪ್ರವಾಗಿ (ಸುಷಾಮಪುತ್ರನಾದ ವರುವಿನಿಂದ ಕೊಡಲ್ಪಟ್ಟ) | **ತಾ**—ಈ ಎರಡು ಅಶ್ವಗಳೂ | **ಹರಿಣಾಂ**—ಹರಿತವರ್ಣವುಳ್ಳ | **ಅಶ್ವಾನಾಂ**—ಅಶ್ವಗಳೆಲ್ಲಾ | **ನಿತೋಶನಾ**—ಶತ್ರುಗಳನ್ನು ಅಧಿಕವಾಗಿ ಹಿಂಸಿಸತಕ್ಕವೂ | **ಉತೋ**—ಮತ್ತು | **ಕುಲ್ಯಾನಾಂ**—ಯುದ್ಧಕರ್ಮಗಳಲ್ಲಿ ನಿರತವಾದ ಅಶ್ವಗಳಲ್ಲಿ ಉತ್ತಮವೂ | **ನೃವಾಹಸಾ**—ಮಾನವರನ್ನು ವಹಿಸುವುದರಲ್ಲಿ ಉತ್ತಮವಾದವೂ ಆಗಿವೆ

|| ಭಾವಾರ್ಥ ||

ಸುಷಾಮಪುತ್ರನಾದ ವರುವಿನಿಂದ ನನಗೆ ಕೊಡಲ್ಪಟ್ಟ ಈ ಎರಡು ಅಶ್ವಗಳೂ ಸಹ ಹರಿತವರ್ಣವುಳ್ಳ ಹಶ್ವಗಳಲ್ಲೆಲ್ಲಾ ಶತ್ರುಗಳನ್ನು ಅಧಿಕವಾಗಿ ಹಿಂಸಿಸತಕ್ಕವೂ ಮತ್ತು ಯುದ್ಧಕರ್ಮಗಳಲ್ಲಿ ನಿರತವಾದ ಅಶ್ವಗಳಲ್ಲಿ ಉತ್ತಮವೂ ಮಾನವರನ್ನು ವಹಿಸುವುದರಲ್ಲಿ ಉತ್ತಮವಾದವೂ ಆಗಿವೆ.

## English Translation.

Among bay horses these two are pre-eminently the destroyers (of foes), and of those eager in combat; the two strong bearers men.

॥ ಸಂಹಿತಾಪಾಠಃ ॥

ಸ್ಮದಭೀಶೂ ಕಶಾವಂತಾ ವಿಪ್ರಾ ನವಿಷ್ಠಯಾ ಮತೀ ।
ಮಹೋ ವಾಜಿನಾವರ್ವಂತಾ ಸಚಾಸನಂ ॥ ೨೪ ॥

॥ ಪದಪಾಠಃ ॥

ಸ್ಮದಭೀಶೂ ಇತಿ ಸ್ಮತ್ಽಅಭೀಶೂ । ಕಶಾಽವಂತಾ । ವಿಪ್ರಾ । ನವಿಷ್ಠಯಾ । ಮತೀ ।
ಮಹಃ । ವಾಜಿನೌ । ಅರ್ವಂತಾ । ಸಚಾ । ಅಸನಂ ॥ ೨೪ ॥

॥ ಸಾಯಣಭಾಷ್ಯಂ ॥

**ಋಷಿರಿದಾನೀಂ ತಾವಶ್ವಾವಗ್ರಹೀಷಮಿತ್ಯಾಹ । ಸ್ಮದಭೀಶೂ । ಸ್ಮತ್ಸುಮತ್ ॥ ಉಕಾರಲೋಪಶ್ಛಾಂದಸಃ ॥ ಶೋಭನರಜ್ಜುಯುಕ್ತೌ ಯದ್ವಾ ಶೋಭನಶರೀರಕಾಂತೀ ಕಶಾವಂತಾ ಕಶಾವಂತೌ ಕಶಾಯುಕ್ತೌ ವಿಪ್ರಾ ವಿಪ್ರೌ ಮೇಧಾವಿನಾಮುಚಿತೌ । ಮೇಧಾವೀ ಸ್ತೋತಾ ಯಥಾ ಸ್ತುತ್ಯಂ ದೇವಂ ಸ್ತುತಿಭಿಃ ಪ್ರೀಣಯತಿ ತದ್ವತ್ ಸಂತೋಷಕೌ । ಮಹೋ ಮಹತಃ ಸೌಷಾಮ್ಣಸ್ಯ ವರೋಃ ಸಂಬಂಧಿನೌ**

**ವಾಜಿನೌ ಶೀಘ್ರಗಮನವಂತಾವರ್ವಂತಾವರ್ವಂತೌ ದ್ವಾವಶ್ವೌ ಸಚಾ ಸಹ ಯುಗಪದೇವ ನವಿಷ್ಠಯಾ ನವತರಯಾ ಮತೀ ಮತ್ಯಾ ಸ್ತುತ್ಯಾ ಮಿತ್ರಾದೀನ್ ಸ್ತುವನ್ನಸನಂ। ವಿಶ್ವಮನಾ ಅಹಂ ಸಮಭಜಂ। ಪ್ರತ್ಯಗ್ರಹೀಷಮಿತ್ಯರ್ಥಃ ॥**

। ಪ್ರತಿಪದಾರ್ಥ ।

**ನವಿಷ್ಠಯಾ**—ಅತ್ಯಂತ ನೂತನವಾಗಿ ನಿರ್ಮಿತವಾದ। **ಮತೀ**—ಸ್ತುತಿಯ ಫಲವಾಗಿ (ಮಿತ್ರಾವರುಣರ ಅನುಗ್ರಹದಿಂದ)। **ಸ್ವಭೀಶೂ**—ಉತ್ತಮವಾದ ಕಡಿವಾಣವುಳ್ಳವೂ। **ಕಶಾವಂತಾ**—ಶ್ರೇಷ್ಠವಾದ ಚಾವುಟಿಗಳಿಂದ ಕೂಡಿದವೂ। **ವಿಪ್ರಾ**—ಮೇಧಾವಿಯಾದ ಸ್ತುತಿಕರ್ತನಿಗೆ ಯೋಗ್ಯವಾದವೂ। **ಮಹಃ**—ಮಾಹಾತ್ಮ್ಯವುಳ್ಳ ವರುವಿಗೆ ಸೇರಿದವೂ। **ವಾಜಿನೌ**—ಶೀಘ್ರಗಾಮಿಗಳೂ ಆದ। **ಅರ್ವಂತಾ**—ಎರಡು ಅಶ್ವಗಳನ್ನೂ। **ಸಚಾ**—ಒಟ್ಟಿಗೆ। **ಅಸನಂ**—ನಾನು ಹೊಂದಿದೆನು.

॥ ಭಾವಾರ್ಥ ॥

ಮಿತ್ರಾವರುಣರನ್ನು ಅತ್ಯಂತ ನೂತನವಾಗಿ ನಿರ್ಮಿಸಿದ ಸ್ತುತಿಯಿಂದ ಪ್ರಶಂಸಿಸಿದುದರ ಫಲವಾಗಿ ಅವರ ಅನುಗ್ರಹದಿಂದ ಉತ್ತಮವಾದ ಕಡಿವಾಣವುಳ್ಳವೂ, ಶ್ರೇಷ್ಠವಾದ ಚಾವುಟಿಗಳಿಂದ ಕೂಡಿದವೂ, ಮೇಧಾವಿಯಾದ ಸ್ತುತಿಕರ್ತನಿಗೆ ಯೋಗ್ಯವಾದವೂ, ಮಾಹಾತ್ಮ್ಯವುಳ್ಳ ವರುವಿಗೆ ಸೇರಿದವೂ, ಶೀಘ್ರಗಾಮಿಗಳೂ ಆದ ಎರಡು ಅಶ್ವಗಳನ್ನು ನಾನು ಒಟ್ಟಿಗೆ ಹೊಂದಿದೆನು.

English Translation.

Through this new praise (of mitra and Varuna) I have obtained at the same moment of the mighty prince, two fast-going sagacious, steeds, with whip and reins.



## ಇಪ್ಪತ್ತಾರನೆಯ ಸೂಕ್ತವು

। ಸಾಯಣಭಾಷ್ಯಂ ।

**ಯುವೋರು ಷ್ವಿತಿ ಪಂಚವಿಂಶತ್ಯೃಚಂ ಷಷ್ಠಂ ಸೂಕ್ತಂ। ಅತ್ರಾನುಕ್ರಮಣಿಕಾ। ಯುವೋಃ ಪಂಚಾಧಿಕಾ ವ್ಯಶ್ವೋ ವಾಂಗಿರಸ ಆಶ್ವಿನಂ ವಿಂಶ್ಯಾದ್ಯಾ ವಾಯವ್ಯಾಸ್ತತ್ಪೂರ್ವಾಃಷ್ಟತಸ್ರೋ ಗಾಯತ್ರ್ಯೋಽಂತ್ಯೈಕವಿಂಶ್ಯೌ ಚ ವಿಂಶ್ಯನುಷ್ಟುಬಿತಿ। ಅಂಗಿರಸೋ ವ್ಯಶ್ವೋ ವೈಯಶ್ವೋ ವಿಶ್ವಮನಾ ವಾ ಋಷಿಃ। ಷೋಡಶ್ಯಾದ್ಯಾಃಷ್ಟತಸ್ರೋ ಗಾಯತ್ರ್ಯೋ ವಿಂಶ್ಯನುಷ್ಟುಬೇಕವಿಂಶೀ ಪಂಚವಿಂಶೀ ಚ ಗಾಯತ್ರ್ಯೌ ಶಿಷ್ಟಾಃ ಪೂರ್ವವದುಷ್ಣಿಹಃ। ಅಶ್ವಿನೌ ದೇವತಾ। ವಿಂಶ್ಯಾದ್ಯಾಃ ಪಂಚರ್ಚೋ ವಾಯುದೇವತಾಕಾಃ॥ ಪ್ರಾತರನುವಾಕ ಆಶ್ವಿನೇ ಕ್ರತಾವೌಷ್ಣಿಹೇ ಛಂದಸ್ಯಾಶ್ವಿನಶಸ್ತ್ರೇ ಚಾದಿತಃ ಪಂಚರ್ಚಃ। ಸೂತ್ರಿತಂ ಚ। ಯುವೋರು ಷೂ ರಥಂ ಹುವ ಇತಿ ಪಂಚದಶೇತ್ಯೌಷ್ಣಿಹಂ। ಆ. ೪-೧೫। ಇತಿ॥**

ಅನುವಾದವು— **ಯುವೋರು ಷೂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಇಪ್ಪತ್ತೈದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ಯುವೋಃ ಪಂಚಾಧಿಕಾ ವ್ಯಶ್ವೋ ವಾಂಗಿರಸ ಆಶ್ವಿನಂ ವಿಂಶ್ಯಾದ್ಯಾ ವಾಯವ್ಯಾಸ್ತತ್ರೋಪಾಂತ್ಯಾಶ್ಚತಸ್ರೋ ಗಾಯತ್ರ್ಯೋಽನ್ತ್ಯೈಕವಿಂಶ್ಯೌ ಚ ವಿಂಶ್ಯನುಷ್ಟುಪ್** ಎಂದು ಹೇಳಿರುವುದು. ಈ ಸೂಕ್ತಕ್ಕೆ ಅಂಗಿರಾಋಷಿಯ ಪುತ್ರನಾದ ವ್ಯಶ್ವಋಷಿ ಅಥವಾ ವ್ಯಶ್ವಋಷಿಯ ಪುತ್ರನಾದ **ವಿಶ್ವಮನಾಃ** ಎಂಬುವನು ಋಷಿಯು. ಅಶ್ವಿನೀದೇವತೆಗಳು ದೇವತೆಯು. ಇಪ್ಪತ್ತರಿಂದ ಮುಂದಿನ ಐದು ಋಕ್ಕುಗಳು (೨೦–೨೫) ವಾಯುದೇವತಾಕವು. ಈ ಸೂಕ್ತದ ಹದಿನಾರನೆಯ ಋಕ್ಕಿನಿಂದ ನಾಲ್ಕು ಋಕ್ಕುಗಳೂ, ಇಪ್ಪತ್ತೊಂದು ಮತ್ತು ಇಪ್ಪತ್ತೈದನೆಯ ಋಕ್ಕುಗಳೂ ಗಾಯತ್ರೀಛಂದಸ್ಕವು. ಇಪ್ಪತ್ತನೆಯದು ಅನುಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಉಷ್ಣಿಕ್‌ಛಂದಸ್ಕವು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತು ಸಂಬಂಧವಾದ ಉಷ್ಣಿಕ್‌ಛಂದಸ್ಸಿನ ಋಕ್ಕುಗಳಿಗಾಗಿಯೂ ಉಕ್ಥಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ಮೊದಲಿನ ಹದಿನೈದು ಋಕ್ಕುಗಳ (೧–೧೫ ಋಕ್ಕುಗಳು) ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ - **ಯುವೋರು ಷೂ ರಥಂ ಹುವ ಇತಿ ಪಂಚದಶೇತ್ಯೌಷ್ಣಿಹಂ** ಎಂಬ ಸೂತ್ರದಿಂದ (ಆ ೪-೧೫) ವಿವೃತವಾಗಿರುವುದು.

## ಸೂಕ್ತ—೨೬

ಮಂಡಲ—೮ ॥ ಅನುವಾಕ—೪ ॥ ಸೂಕ್ತ—೨೬ ॥
ಅಷ್ಟಕ—೬ ॥ ಅಧ್ಯಾಯ—೨ ॥ ವರ್ಗ—೨೬, ೨೭, ೨೮, ೨೯, ೩೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೫ ॥
॥ ಋಷಿಃ—ವಿಶ್ವಮನಾ ವೈಯಶ್ವೋ ವ್ಯಶ್ವೋ ವಾಂಗಿರಸಃ ॥
॥ ದೇವತಾ—೧–೧೯. ಅಶ್ವಿನೌ । ೨೦–೨೫. ವಾಯುಃ ॥
॥ ಛಂದಃ—೧–೧೫, ೨೨–೨೪. ಉಷ್ಣಿಕ್ । ೧೬–೧೯, ೨೧, ೨೫. ಗಾಯತ್ರೀ । ೨೦. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಯುವೋರು ಷೂ ರಥಂ ಹುವೇ ಸಧಸ್ತುತ್ಯಾಯ ಸೂರಿಷು ।
ಅತೂರ್ತದಕ್ಷಾ ವೃಷಣಾ ವೃಷಣ್ವಸೂ ॥ ೧ ॥

॥ ಪದಪಾಠಃ ॥

ಯುವೋಃ । ಊಂ ಇತಿ । ಸು । ರಥಂ । ಹುವೇ । ಸಧಽಸ್ತುತ್ಯಾಯ । ಸೂರಿಷು ।
ಅತೂರ್ತಽದಕ್ಷಾ । ವೃಷಣಾ । ವೃಷಣ್ವಸೂ ಇತಿ ವೃಷಣ್ಽವಸೂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅತೂರ್ತದಕ್ಷಾ ॥ ತೄ ಪ್ಲವನತರಣಯೋರಿತ್ಯಸ್ಯ ನಿಷ್ಠಾಯಾಂ ನಸತ್ತೇತಿ ಸೂತ್ರೇಣ ನಿಪಾತಿತಃ ॥ ಪರೈರಹಿಂಸಿತಬಲೌ ವೃಷಣಾ ವೃಷಣೌ ಕಾಮಾನಾಂ ಸೇಕ್ತಾರೌ ಅತ ಏವ ವೃಷಣ್ವಸೂ

ವರ್ಷಣಶೀಲಧನವಂತಾವಶ್ವಿನೌ ಯುವೋರ್ಯುವಯೋರರ್ಥಂ ಸು ಹುವೇ । ಸುಷ್ಠು ಸ್ತೋತ್ರಾದಿಭಿ-ರಾಹ್ವಯಾಮಿ । ಕಿಮರ್ಥಂ । ಸೂರಿಷು ಪ್ರಾಜ್ಞೇಷು ಸ್ತೋತೃಷು ಮಧ್ಯೇ ಸಧಸ್ತುತ್ಯಾಯ ॥ ಸ್ತೌತೇರ್ಭಾವೇ ಕ್ಯಪ್ ॥ ಸಹ ಭವಂತೌ ಸ್ತೋತುಂ । ತಸ್ಮಾದ್ಯುವಯೋಃ ಶೀಘ್ರಗತ್ಯೈ ಯುಷ್ಮದ್ಗ-ಮನಸಾಧನರಥಮೇವಾಹ್ವಯಾಮಿ ॥

। ಪ್ರತಿಪದಾರ್ಥ ।

**ಅತೂರ್ತದಕ್ಷಾ**—ಅಪ್ರತಿಹತವಾದ ಶಕ್ತಿಯುಳ್ಳವರೂ । **ವೃಷಣಾ**—ಕಾಮವರ್ಷಕರೂ । **ವೃಷ-ಣ್ವಸೂ**—ವೃಷ್ಟಿರೂಪವಾದ ಧನವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ । **ಸೂರಿಷು**—ಪ್ರಾಜ್ಞರ ನಡುವೆ । **ಸಧಸ್ತುತ್ಯಾಯ**—ಒಟ್ಟಿಗಿರತಕ್ಕ ನಿಮ್ಮನ್ನು ಸ್ತುತಿಸಲು । **ಯುವೋಃ ರಥಂ**—ನಿಮ್ಮಿಬ್ಬರ ರಥವನ್ನು । **ಸುಹುವೇ**—ಅತ್ಯುತ್ತಮವಾದ ಸ್ತುತಿಯಿಂದ ಕರೆಯುತ್ತೇನೆ

॥ ಭಾವಾರ್ಥ ॥

ಅಪ್ರತಿಹತವಾದ ಶಕ್ತಿಯುಳ್ಳವರೂ, ಕಾಮವರ್ಷಕರೂ, ವೃಷ್ಟಿರೂಪವಾದ ಧನವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ಪ್ರಾಜ್ಞರ ನಡುವೆ ಒಟ್ಟಿಗಿರತಕ್ಕ ನಿಮ್ಮನ್ನು ಸ್ತುತಿಸಲು ನಿಮ್ಮಿಬ್ಬರ। ರಥವನ್ನು ಅತ್ಯುತ್ತಮವಾದ ಸ್ತುತಿಪೂರ್ವಕವಾಗಿ ಕರೆಯುತ್ತೇನೆ.

English Translation.

(Aswins) of irresistible strength, affluent showerers (of benefits), I invoke your chariot amidst the pious, who are assembled to celeberate your presence.

। ಸಂಹಿತಾಪಾಠಃ ॥

ಯುವಂ ವರೋ ಸುಷಾಮ್ಣೇ ಮಹೇ ತನೇ ನಾಸತ್ಯಾ ।
ಅವೋಭಿರ್ಯಾಥೋ ವೃಷಣಾ ವೃಷಣ್ವಸೂ ॥ ೨ ॥

॥ ಪದಪಾಠಃ ॥

ಯುವಂ । ವರೋ ಇತಿ । ಸುऽಸಾಮ್ನೇ । ಮಹೇ । ತನೇ । ನಾಸತ್ಯಾ ।
ಅವಃऽಭಿಃ । ಯಾಥಃ । ವೃಷಣಾ । ವೃಷಣ್ವಸೂ ಇತಿ ವೃಷತ್ऽವಸೂ ॥ ೨ ॥

। ಸಾಯಣಭಾಷ್ಯಂ ।

ಋಷಿರ್ವರುಂ ರಾಜಾನಂ ಸಂಬೋಧ್ಯಾಹ । ಹೇ ನಾಸತ್ಯಾ ನಾಸತ್ಯೌ । ನ ವಿದ್ಯತೇಽಸತ್ಯಮು-ಭಯೋರಿತಿ ನಾಸತ್ಯೌ । ವೃಷಣಾ ಕಾಮಾನಾಂ ವರ್ಷಿತಾರೌ ವೃಷಣ್ವಸೂ ವರ್ಷಣಶೀಲವಸುಮಂತಾ-

**ವಕ್ಷಿನೌ ಯುವಂ ಯುವಾಂ ಸುಷಾಮ್ಣೇ ಸುಷಾಮನಾಮ್ನೇ ರಾಜ್ಞೇ ಮಮ ಪಿತ್ರೇಽಸ್ಯೈ ಮಹೇ ಮಹತೇ ತನೇ । ತನೋತೀತಿ ತನಂ ಧನಂ । ಧನಾಯ ।। ಕ್ರಿಯಾರ್ಥೋಪಪದಸ್ಯೇತಿ ಚತುರ್ಥೀ ।। ತಸ್ಮೈ ಧನಂ ದಾತುಂ ಪುರಾ ಯಥಾಗಚ್ಛತಂ ತದ್ವನ್ಮಹ್ಯಮಪಿ ಧನಂ ದಾತುಮವೋಭಿಃ ಪಾಲನೈಃ ಸಹ ಯಾಥಃ ಯುವಾಮಾಯಾತಮಿತಿ ಹೇ ವರೋ ವರುನಾಮಕ ರಾಜನ್ನೇವಂ ಬ್ರೂಹೀತ್ಯೃಷಿರ್ವದತಿ ।।**

॥ ಪ್ರತಿಪದಾರ್ಥ ॥

**ನಾಸತ್ಯಾ**—ಎಲೈ ಅಶ್ವಿನೀದೇವತೆಗಳೇ । **ವೃಷಣಾ**—ಕಾಮವರ್ಷಕರೂ । **ವೃಷಣ್ವಸೂ**—ವೃಷ್ಟಿರೂಪವಾದ ಧನವುಳ್ಳವರೂ ಆದ । **ಯುವಂ**—ನೀವು । **ಸುಷಾಮ್ಣೇ**—ನನ್ನ ಪಿತೃವಾದ ಸುಷಾಮನಿಗೆ । **ಮಹೇ**—ಮಹತ್ತಾದ । **ತನೇ**—ಧನದಾನಕ್ಕಾಗಿ (ಹಿಂದೆ ಯಾವ ರೀತಿ ಬಂದಿರೋ ಅದೇ ರೀತಿ ನನಗೂ ಧನದಾನಮಾಡಲು) । **ಅವೋಭಿಃ**—ನಿಮ್ಮ ರಕ್ಷಣೆಗಳೊಡನೆ । **ಯಾಥಃ**—ಬನ್ನಿರಿ ಎಂಬುದಾಗಿ । **ವರೋ**—ಎಲೈ ವರುನಾಮಕನಾದ ರಾಜನೇ (ನೀನು ಅವರನ್ನು ಪ್ರಾರ್ಥಿಸು).

॥ ಭಾವಾರ್ಥ ॥

ಎಲೈ ವರುನಾಮಕನಾದ ರಾಜನೇ, ನೀನು ಅಶ್ವಿನೀದೇವತೆಗಳನ್ನು ಕುರಿತು "ಎಲೈ ಅಶ್ವಿನೀದೇವತೆಗಳೇ, ಕಾಮವರ್ಷಕರೂ, ವೃಷ್ಟಿರೂಪವಾದ ಧನವುಳ್ಳವರೂ ಆದ ನೀವು ನನ್ನ ಪಿತೃವಾದ ಸುಷಾಮನಿಗೆ ಮಹತ್ತಾದ ಧನವನ್ನು ದಾನಮಾಡಲು ಯಾವ ರೀತಿ ಹಿಂದೆ ಬಂದಿರೋ ಅದೇ ರೀತಿ ಈಗಲೂ ನನಗೂ ಸಹಾಯಮಾಡಲು ನಿಮ್ಮ ರಕ್ಷಣೆಗಳೊಡನೆ ಬನ್ನಿರಿ" ಎಂಬುದಾಗಿ ಅವರನ್ನು ಪ್ರಾರ್ಥಿಸು.

English Translation.

(Say), Varu (you), Nasatyas, senders of rain, affluent showerers (of benefits), as you came to Sushaman with your protections to (grant him) great riches, (so come to me).

। ಸಂಹಿತಾಪಾಠಃ ।

ತಾ ವಾಮದ್ಯ ಹವಾಮಹೇ ಹವ್ಯೇಭಿರ್ವಾಜನೀವಸೂ ।
ಪೂರ್ವೀರಿಷ ಇಷಯಂತಾವತಿ ಕ್ಷಪಃ ।। ೩ ।।

। ಪದಪಾಠಃ ।

ತಾ । ವಾಂ । ಅದ್ಯ । ಹವಾಮಹೇ । ಹವ್ಯೇಭಿಃ । ವಾಜಿನೀವಸೂ ಇತಿ ವಾಜಿನೀಽವಸೂ ।
ಪೂರ್ವೀಃ । ಇಷಃ । ಇಷಯಂತಾ । ಅತಿ । ಕ್ಷಪಃ ।। ೩ ।।

|| ಸಾಯಣಭಾಷ್ಯಂ ||

ಹೇ ವಾಜಿನೀವಸೂ ಅನ್ನಯುಕ್ತಧನವಂತಾವಶ್ವಿನೌ ಪೂರ್ವೀರ್ಬಹೂನೀಷೋऽನ್ನಾನೀಷಯಂತಾ || ಇಷು ಇಚ್ಛಾಯಾಂ || ಇಚ್ಛಂತೌ ತಾ ತೌ ಪ್ರಸಿದ್ಧೌ ವಾಂ ಯುವಾಮದ್ಯಾಸ್ಮಿನ್ಯಾಗದಿನೇऽತಿ ಕ್ಷಪಃ ಕ್ಷಪಾಯಾ ಅತಿಕ್ರಮೇ | ಉಷಃಕಾಲ ಇತ್ಯರ್ಥಃ | ತಸ್ಮಿನ್ನುಷಃಕಾಲೇ ಹವ್ಯೇಭಿರ್ಹವಿರ್ಲಕ್ಷಣೈರನ್ನೈಃ ಸಹ ವಯಂ ಹವಾಮಹೇ | ಆಹ್ವಯಾಮಃ | ಆಶ್ವಿನಶಸ್ತ್ರಸ್ಯ ತತ್ರ ಶಸ್ಯಮಾನತ್ವಾದುಷಃಕಾಲ ಏವಾಹು | ಯಾಗ ಇತ್ಯರ್ಥಃ ||

|| ಪ್ರತಿಪದಾರ್ಥ ||

**ವಾಜಿನೀವಸೂ**—ಅನ್ನರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ | **ಪೂರ್ವೀಃ**—ಪ್ರಭೂತಗಳಾದ | **ಇಷಃ**—ಅನ್ನಗಳನ್ನು | **ಇಷಯಂತಾ**—ಅಪೇಕ್ಷಿಸುವವರೂ | **ತಾ**- ಪ್ರಸಿದ್ಧರೂ ಆದ | **ವಾಂ**—ನಿಮ್ಮನ್ನು | **ಅದ್ಯ**—ಈ ಯಾಗಕಾಲದಲ್ಲಿ | **ಅತಿ ಕ್ಷಪಃ**—ರಾತ್ರಿಯು ಅತಿಕ್ರಮಿಸಿದ ಈ ಉಷಃಕಾಲದಲ್ಲಿ | **ಹವ್ಯೇಭಿಃ**—ಹವಿಸ್ಸಿನ ರೂಪದ ಅನ್ನಗಳೊಡನೆ (ಕೂಡಿದ ನಾವು) | **ಹವಾಮಹೇ**—ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ಅನ್ನರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ, ಪ್ರಭೂತಗಳಾದ ಅನ್ನಗಳನ್ನು ಅಪೇಕ್ಷಿಸುವವರೂ, ಪ್ರಸಿದ್ಧರೂ ಆದ ನಿಮ್ಮನ್ನು ಈ ಯಾಗಕಾಲದಲ್ಲಿ ರಾತ್ರಿಯು ಅತಿಕ್ರಮಿಸಿದ ಈ ಉಷಃಕಾಲದಲ್ಲಿ ಹವಿಸ್ಸಿನ ರೂಪದ ಅನ್ನಗಳೊಡನೆ ಕೂಡಿದ ನಾವು ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Affluent in nourishment, we invoke you, who are desirous of (sacrificial) food, on this occasion at dawn with oblations.

|| ಸಂಹಿತಾಪಾಠಃ ||

ಆ ವಾಂ ವಾಹಿಷ್ಠೋ ಅಶ್ವಿನಾ ರಥೋ ಯಾತು ಶ್ರುತೋ ನರಾ |
ಉಪ ಸ್ತೋಮಾನ್ತುರಸ್ಯ ದರ್ಶಥಃ ಶ್ರಿಯೇ || ೪ ||

| ಪದಪಾಠಃ |

ಆ | ವಾಂ | ವಾಹಿಷ್ಠಃ | ಅಶ್ವಿನಾ | ರಥಃ | ಯಾತು | ಶ್ರುತಃ | ನರಾ |
ಉಪ | ಸ್ತೋಮಾನ್ | ತುರಸ್ಯ | ದರ್ಶಥಃ | ಶ್ರಿಯೇ || ೪ ||

॥ ಸಾಯಣಭಾಷ್ಯಂ ॥

ಹೇ ನರಾ ಸರ್ವಸ್ಯ ನೇತಾರಾವಶ್ವಿನಾಶ್ವಿನೌ ವಾಂ ಯುವಯೋರ್ವಾಹಿಷ್ಠೋ ವೋಢೃತಮಃ ಶ್ರುತೋ ವಿಶ್ರುತಃ ಸರ್ವತ್ರ ಪ್ರಸಿದ್ಧೋ ರಥ ಆ ಯಾತು । ಅಸ್ಮದೀಯಂ ಯಜ್ಞಂ ಪ್ರತ್ಯಾಗಚ್ಛತು । ತೇನ ರಥೇನ ಯುವಾಮಾಗತ್ಯ ತುರಸ್ಯ ಕ್ಷಿಪ್ರಂ ಸ್ತೋತ್ರಂ ಕುರ್ವತಸ್ತಸ್ಯ ಸ್ತೋಮಾಂಸ್ತ್ರಿವೃತ್ಪಂಚದಶಾದಿಸ್ತೋಮಾಞ್ಛ್ರಿಯೇ ತಸ್ಯೈಶ್ವರ್ಯಪ್ರದಾನಾಯೋಪ ದರ್ಶಥಃ । ಪಶ್ಯತಿರ್ಜ್ಞಾನಕರ್ಮಾ । ಜಾನೀತಂ ॥ ದೃಶೇರ್ಲಟಿ ವ್ಯತ್ಯಯೇನಾಜಾದೇಶಃ ॥

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನು । **ವಾಹಿಷ್ಠಃ**—ಅತ್ಯುತ್ತಮವಾಗಿ ವಹಿಸುವುದೂ । **ಶ್ರುತಃ**—ಪ್ರಸಿದ್ಧವಾದುದೂ ಆದ । **ರಥಃ**—ರಥವು । **ಆ ಯಾತು**—ನಮ್ಮ ಯಜ್ಞಕ್ಕೆ ಬರಲಿ । **ತುರಸ್ಯ**—ಆಸಕ್ತಿಯಿಂದ ನಿಮ್ಮನ್ನು ಸ್ತುತಿಸುವ ಯಜಮಾನನ । **ಸ್ತೋಮಾನ್**—ತ್ರಿವೃದಾದಿ ಸ್ತೋಮಗಳನ್ನು । **ಶ್ರಿಯೇ**—ಅವನಿಗೆ ಐಶ್ವರ್ಯವನ್ನು ತುಂಬಲು । **ಉಪ ದರ್ಶಥಃ**—ಅರ್ಥಮಾಡಿಕೊಂಡು ಹರ್ಷಿತರಾಗಿರಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ಅತ್ಯುತ್ತಮವಾಗಿ ವಹಿಸುವುದೂ, ಪ್ರಸಿದ್ಧವಾದುದೂ ಆದ ರಥವು ನಮ್ಮ ಯಜ್ಞಕ್ಕೆ ಬರಲಿ. ಆಸಕ್ತಿಯಿಂದ ನಿಮ್ಮನ್ನು ಸ್ತುತಿಸುವ ಯಜಮಾನನ ತ್ರಿವೃದಾದಿ ಸ್ತೋಮಗಳನ್ನು ಅವನಿಗೆ ಐಶ್ವರ್ಯವನ್ನು ತುಂಬಲು ಅರ್ಥಮಾಡಿಕೊಂಡು ಹರ್ಷಿತರಾಗಿರಿ.

## English Translation.

Leaders (of rites), let your renowned all-conveying chariot come to us, and (do you) recognize the praises of the zealous (worshipper) for his prosperity.

॥ ಸಂಹಿತಾಪಾಠಃ ॥

ಜುಹುರಾಣಾ ಚಿದಶ್ವಿನಾ ಮನ್ಯೇಥಾಂ ವೃಷಣ್ವಸೂ ।
ಯುವಂ ಹಿ ರುದ್ರಾ ಪರ್ಷಥೋ ಅತಿ ದ್ವಿಷಃ ॥ ೫ ॥

॥ ಪದಪಾಠಃ ॥

ಜುಹುರಾಣಾ । ಚಿತ್ । ಅಶ್ವಿನಾ । ಆ । ಮನ್ಯೇಥಾಂ । ವೃಷಣ್ವಸೂ ಇತಿ ವೃಷಣ್ऽವಸೂ ।
ಯುವಂ । ಹಿ । ರುದ್ರಾ । ಪರ್ಷಥಃ । ಅತಿ । ದ್ವಿಷಃ ॥ ೫ ॥

|| ಸಾಯಣಭಾಷ್ಯಂ ||

ಹೇ ವೃಷಣ್ವಸೂ ವರ್ಷಣಶೀಲಧನವಂತಾವಶ್ವಿನಾಶ್ವಿನೌ **ಜುಹುರಾಣಾ ಚಿತ್** || **ಹುರ್ಛಾ** ಕೌಟಿಲ್ಯೇ | ಹುರ್ಛೇಃ ಸನೋ ಲುಕ್ ಛಲೋಃಪಶ್ಚ || ಉ. ೨-೯೨ | ಇತ್ಯಾನಚ್‌ಪ್ರತ್ಯಯಃ || ಕುಟಿಲಾನ್ಕರ್ಮವಿಘ್ನಕಾರಿಣೋ ಮಾಯಾವಿನೋಽಪಿ ಶತ್ರೂನಾ ಅಭಿಮುಖ್ಯೇನ **ಮನ್ಯೇಥಾಂ** | ಜಾನೀತಂ | ತತೋ ಹೇ ರುದ್ರಾ ಸಂಗ್ರಾಮೇ ರೋದನಶೀಲೌ ರುವಂತೌ ವಾಶ್ವಿನೌ **ಯುವಂ** | ಹಿರವಧಾರಣೇ | ಯುವಾಮೇವ ದ್ವಿಷೋ ದ್ವೇಷಕಾರಿಣಸ್ತಾನ್ಶತ್ರೂನತಿ ಪರ್ಷಥಃ | **ಅತೀತ್ಯ** ಸಂಕ್ಲೇಶಯತಂ | ಹತಮಿತ್ಯರ್ಥಃ || ಪೃಷು ಹಿಂಸಾಸಂಕ್ಲೇಶನಯೋರಿತಿ ಭೌವಾದಿಕಃ ||

|| ಪ್ರತಿಪದಾರ್ಥ ||

**ವೃಷಣ್ವಸೂ**—ವೃಷ್ಟಿರೂಪವಾದ ಧನವುಳ್ಳ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಜುಹುರಾಣಾ ಚಿತ್**—ಎದುರಿಗೆ ಕಾಣಿಸಿಕೊಳ್ಳದೆ ವಂಚಕತನದಿಂದ ಕರ್ಮಕ್ಕೆ ತಡೆಮಾಡುವ ಶತ್ರುಗಳನ್ನೂ | **ಆ ಮನ್ಯೇಥಾಂ**—ಅವರಾರೆಂದು ಹುಡುಕಿ ತಿಳಿಯಿರಿ | **ರುದ್ರಾ**—ಸಂಗ್ರಾಮದಲ್ಲಿ ಗರ್ಜಿಸುವ ಎಲೈ ಅಶ್ವಿನೀದೇವತೆಗಳೇ | **ಯುವಂ**—ನೀವು | **ದ್ವಿಷಃ**—ದ್ವೇಷವನ್ನು ಕಾರುವ ಆ ಶತ್ರುಗಳನ್ನು | **ಅತಿ ಪರ್ಷಥಃ**—ಪೂರ್ಣವಾಗಿ ಹಿಂಸಿಸಿರಿ.

|| ಭಾವಾರ್ಥ ||

ವೃಷ್ಟಿರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ, ಎದುರಿಗೆ ಕಾಣಿಸಿಕೊಳ್ಳದೆ ವಂಚಕತನದಿಂದ ಕರ್ಮಕ್ಕೆ ತಡೆಮಾಡುವ ಶತ್ರುಗಳನ್ನೂ ಸಹ ಹುಡುಕಿ ಕಂಡುಹಿಡಿಯಿರಿ. ಸಂಗ್ರಾಮದಲ್ಲಿ ಗರ್ಜಿಸುವ ಎಲೈ ಅಶ್ವಿನೀ ದೇವತೆಗಳೇ, ದ್ವೇಷವನ್ನು ಕಾರುವ ಆ ಶತ್ರುಗಳನ್ನು ಪೂರ್ಣವಾಗಿ ಹಿಂಸಿಸಿರಿ.

English Translation.

Aswins, affluent showerers (of benefits), detect the guileful ; verily, Rudras, vex your adversaries.

|| ಸಂಹಿತಾಪಾಠಃ ||

ದಸ್ರಾ ಹಿ ವಿಶ್ವಮಾನುಷಙ್ಮಕ್ಷೂಭಿಃ ಪರಿದೀಯಥಃ |
ಧಿಯಂಜಿನ್ವಾ ಮಧುವರ್ಣಾ ಶುಭಸ್ಪತೀ || ೬ ||

|| ಪದಪಾಠಃ ||

ದಸ್ರಾ | ಹಿ | ವಿಶ್ವಂ | ಆನುಷಕ್ | ಮಕ್ಷುಽಭಿಃ | ಪರಿಽದೀಯಥಃ |
ಧಿಯಂಽಜಿನ್ವಾ | ಮಧುಽವರ್ಣಾ | ಶುಭಃ | ಪತೀ ಇತಿ || ೬ ||

॥ ಸಾಯಣಭಾಷ್ಯಂ ॥

ದಸ್ರಾ ದಸ್ರೌ ಸರ್ವೈರ್ದರ್ಶನೀಯೌ । ಯದ್ವಾ ॥ ದಸು ಉಪಕ್ಷಯೇ ॥ ಶತ್ರೂಣಾಮುಪಕ್ಷಪಯಿತಾರಾವಶ್ವಿನೌ । ಕೀದೃಶೌ । ಧಿಯಂಜಿನ್ವಾ ಧಿಯಂಜಿನ್ವೌ । ಜಿವಿಃ ಪ್ರೀಣನಾರ್ಥಃ । ಕರ್ಮಾಣಿ ಪ್ರೀಣಯಂತೌ ಮಧುವರ್ಣಾ ಮಧುವರ್ಣೌ ಸರ್ವೇಷಾಂ ಮಾದನಶೀಲಶರೀರಕಾಂತೀ । ಯೇ ಯುವಯೋ ರೂಪಂ ಪಶ್ಯಂತಿ ತೇ ತತ್ರೈವ ಹೃಷ್ಟಾ ಭವಂತೀತ್ಯರ್ಥಃ । ತಾದೃಶೌ ಶುಭಸ್ಪತೀ ಉದಕಸ್ಯ ಪಾಲಯಿತಾರೌ ತಾದೃಶೌ ಯುವಾಂ ಸುಕ್ಷುಭಿಃ ಶೀಘ್ರಗಮನೈರಶ್ವೈರಾನುಷಗನುಷಕ್ತಂ ಯಥಾ ಭವತಿ ತಥಾ ವಿಶ್ವಮೃತ್ವಿಗ್ಭಿರ್ವಿಭಿರ್ವ್ಯಾಪ್ತಂ । ಹಿರವಧಾರಣೇ । ಅಸ್ಮದೀಯಂ ಯಜ್ಞಮೇವ ಪ್ರತಿ ಪರಿದೀಯಥಃ । ದೀಯತಿರ್ಗತಿಕರ್ಮಾ । ಪರಿತ ಆಗಚ್ಛತಂ ॥

॥ ಪ್ರತಿಪದಾರ್ಥ ॥

**ದಸ್ರಾ**—ಶತ್ರುಗಳಿಗೆ ಹಿಂಸಾಕಾರಕರೂ । **ಧಿಯಂಜಿನ್ವಾ**—ಕರ್ಮಗಳಿಂದ ತೃಪ್ತಿಯನ್ನು ಪಡೆಯುವವರೂ । **ಮಧುವರ್ಣಾ**—ಆಕರ್ಷಕವಾದ ವರ್ಣವುಳ್ಳವರೂ । **ಶುಭಸ್ಪತೀ**—ಉದಕಕ್ಕೆ ಪಾಲಕರೂ ಆದ ಎಲೈ ಅಶ್ವಿನೀದೇವತೆಗಳೇ । **ಸುಕ್ಷುಭಿಃ**—ಶೀಘ್ರಗಾಮಿಗಳಾದ ಅಶ್ವಗಳೊಡನೆ । **ಅನುಷಕ್**—ಶೀಘ್ರವಾಗಿ । **ವಿಶ್ವಂ**—ನಮ್ಮ ಯಜ್ಞಭೂಮಿಯ ಸುತ್ತಲೂ । **ಪರದೀಯಥಃ**—ಬಂದು ಸೇರಿರಿ.

॥ ಭಾವಾರ್ಥ ॥

ಶತ್ರುಗಳಿಗೆ ಹಿಂಸಾಕಾರಕರೂ, ಕರ್ಮಗಳಿಂದ ತೃಪ್ತಿಯನ್ನು ಪಡೆಯುವವರೂ, ಆಕರ್ಷಕವಾದ ವರ್ಣವುಳ್ಳವರೂ ಉದಕಕ್ಕೆ ಪಾಲಕರೂ ಆದ ಎಲೈ ಅಶ್ವಿನೀದೇವತೆಗಳೇ, ಶೀಘ್ರಗಾಮಿಗಳಾದ ಅಶ್ವಗಳೊಡನೆ ಶೀಘ್ರವಾಗಿ ನಮ್ಮ ಯಜ್ಞಭೂಮಿಯ ಸುತ್ತಲೂ ಬಂದು ಸೇರಿರಿ.

## English Translation.

Dasras, who are gratified by sacred rites, of fascinating complexion lords of rain, pass with your fleet (horses) completely round our entire (sacrifice).

॥ ಸಂಹಿತಾಪಾಠಃ ॥

ಉಪ ನೋ ಯಾತಮಶ್ವಿನಾ ರಾಯಾ ವಿಶ್ವಪುಷಾ ಸಹ ।
ಮಘವಾನಾ ಸುವೀರಾವನಪಚ್ಯುತಾ ॥ ೭ ॥

॥ ಪದಪಾಠಃ ॥

ಉಪ । ನಃ । ಯಾತಂ । ಅಶ್ವಿನಾ । ರಾಯಾ । ವಿಶ್ವಽಪುಷಾ । ಸಹ ।
ಮಘಽವಾನಾ । ಸುಽವೀರೌ । ಅನಪಽಚ್ಯುತಾ ॥ ೭ ॥

|| ಸಾಯಣಭಾಷ್ಯಂ ||

ಹೇ ಅಶ್ವಿನಾಶ್ವಿನೌ ವಿಶ್ವಪುಷಾ ವಿಶ್ವಸ್ಯ ಸರ್ವಸ್ಯ ಪೋಷಕೇಣ ರಾಯಾ ಧನೇನ ಸಹ ನೋಽಸ್ಮದೀಯಂ ಯಜ್ಞಮುಪ ಯಾತಂ । ಉಪಾಗಚ್ಛತಂ । ಯಜ್ಞಮಾಗತ್ಯ ಧನಮಸ್ಮಭ್ಯಂ ಪ್ರಯಚ್ಛತಮಿತಿ ಭಾವಃ । ಕಿಮನಯೋರ್ಧನಮಸ್ತೀತ್ಯತ ಆಹ । ಮಘವಾನಾ ಮಘವಾನೌ ಮಂಹನೀಯಧನವಂತೌ ಸುವೀರೌ ಶೋಭನಸಾಮರ್ಥ್ಯೋಪೇತೌ । ಯದ್ವಾ । ವೀರಾಃ ಸಮರ್ಥಾಃ ಶತ್ರವಃ । ತದ್ವಂತೌ । ತಥಾಪ್ಯನಪಚ್ಯುತಾ ತೈರಪಚ್ಯಾವನೀಯೌ ನ ಭವತಃ । ತೌ ಯಜ್ಞಂ ಪ್ರತ್ಯಾಗಚ್ಛತಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಮಘವಾನಾ**—ಧನವಂತರೂ । **ಸುವೀರೌ**—ಉತ್ತಮವಾದ ವೀರ್ಯವುಳ್ಳವರೂ । **ಅನಪಚ್ಯುತಾ**—ಶತ್ರುಗಳಿಂದ ಅಪ್ರತಿಹತರೂ ಆದ ನೀವು । **ವಿಶ್ವಪುಷಾ**—ಸರ್ವ ಪೋಷಕವಾದ । **ರಾಯಾ ಸಹ**—ಧನದೊಡನೆ । **ನಃ**—ನಮ್ಮ ಯಜ್ಞಕ್ಕೆ । **ಉಪ ಯಾತಂ**—ಬನ್ನಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಧನವಂತರೂ, ಉತ್ತಮವಾದ ವೀರ್ಯವುಳ್ಳವರೂ, ಶತ್ರುಗಳಿಂದ ಅಪ್ರತಿಹತರೂ ಆದ ನೀವು ಸರ್ವಪೋಷಕವಾದ ಧನದೊಡನೆ ನಮ್ಮ ಯಜ್ಞಕ್ಕೆ ಬನ್ನಿರಿ.

English Translation.

Come to us, As^ins, with all-supporting riches for you are opulent, heroic, overthrown of none.

|| ಸಂಹಿತಾಪಾಠಃ ||

ಆ ನೋ ಅಸ್ಯ ಪ್ರತೀವ್ಯ ೧ ಮಿಂದ್ರನಾಸತ್ಯಾ ಗತಂ ।
ದೇವಾ ದೇವೇಭಿರದ್ಯ ಸಚನಸ್ತಮಾ || ೮ ||

|| ಪದಪಾಠಃ ||

ಆ । ನಃ । ಅಸ್ಯ । ಪ್ರತೀವ್ಯಂ । ಇಂದ್ರನಾಸತ್ಯಾ । ಗತಂ ।
ದೇವಾ । ದೇವೇಭಿಃ । ಅದ್ಯ । ಸಚನಃಽತಮಾ || ೮ ||

|| ಸಾಯಣಭಾಷ್ಯಂ ||

ಹೇ ಇಂದ್ರನಾಸತ್ಯೇಂದ್ರಾಶ್ವಿನೌ ಸಚನಸ್ತಮಾ ॥ ಷಚ ಸಮವಾಯೇ । ಕೃತ್ಯಲ್ಯುಟ ಇತಿ ಕರ್ಮಣಿ ಲ್ಯುಟ್ ॥ ಅತಿಶಯೇನ ಸರ್ವೈಃ ಸಮವೇತವ್ಯೌ ಸೇವ್ಯಮಾನೌ ಯುವಾಂ ಪ್ರತೀವ್ಯಂ ॥ ವೀ ಗತ್ಯಾದಿಷು । ಅಧಿಕರಣ ಔಣಾದಿಕಃ ಕ್ವಿಪ್ ॥ ಪ್ರತಿಶಬ್ದಸ್ಯ ವೀಪ್ಸಾರ್ಥೋಽಸ್ತಿ । ಪುನಃಪುನರ್ವಿಯಂತಿ

**ಭಕ್ಷಯಂತಿ ಹವೀಂಷಿ ದೇವಾ ಅತ್ರೇತಿ ಪ್ರತೀವೀರ್ಯಜ್ಞಃ । ತಮಸ್ಯ ಪುರೋವರ್ತಿನೋ ಮೇ ಮಮ ಸಂಬಂಧಿನಂ ಯಜ್ಞಮದ್ಯಾಸ್ಮಿನ್ನಿನೇ ದೇವೇಭಿರ್ದೇವೈಃ ಸಾರ್ಧಮಾ ಗತಂ । ಆಗಚ್ಛತಂ । ಯದ್ವಾ । ಮೇ ಮಮಾಸ್ಯ ಕ್ರಿಯಮಾಣಸ್ಯ ಸ್ತೋತ್ರಸ್ಯ ಪ್ರತೀವ್ಯಂ ಪ್ರತಿಗತಂ ಯಥಾ ಭವತಿ ತಥಾಭಿಮುಖ್ಯೇನಾಯಾತಂ ॥**

॥ ಪ್ರತಿಪದಾರ್ಥ ॥

**ದೇವಾ**—ದೇವತಾತ್ಮರೂ । **ಸಜೋಷಸ್ತ್ವಮಾ**—ಎಲ್ಲರ ಸೇವೆಗೂ ಅರ್ಹರೂ ಆದ । **ಇಂದ್ರನಾಸತ್ಯಾ**—ಎಲೈ ಇಂದ್ರ ಮತ್ತು ಅಶ್ವಿನೀದೇವತೆಗಳೇ । **ಅಸ್ಯ**—ನಿಮ್ಮನ್ನು ಪೂಜಿಸುತ್ತಿರುವ । **ಮೇ**—ನನ್ನ । **ಪ್ರತೀವ್ಯಂ**—ಯಜ್ಞಕ್ಕೆ ಅಭಿಮುಖವಾಗಿ । **ಅದ್ಯ**—ಇಂದು । **ದೇವೇಭಿಃ**—ದೇವತೆಗಳೊಡನೆ । **ಆ ಗತಂ**—ಬನ್ನಿರಿ.

॥ ಭಾವಾರ್ಥ ॥

ದೇವತಾತ್ಮರೂ, ಎಲ್ಲರ ಸೇವೆಗೂ ಅರ್ಹರೂ ಆದ ಎಲೈ ಇಂದ್ರ ಮತ್ತು ಅಶ್ವಿನೀದೇವತೆಗಳೇ, ನಿಮ್ಮನ್ನು ಪೂಜಿಸುತ್ತಿರುವ ನನ್ನ ಯಜ್ಞಕ್ಕೆ ಅಭಿಮುಖವಾಗಿ ಇಂದು ದೇವತೆಗಳೊಡನೆ ಬನ್ನಿರಿ.

## English Translation.

Indra and Nasatyas, who are most accessible, come to this my sacrifice : come, gods, to-day, with (other) divinities.

॥ ವಿಶೇಷವಿಷಯಗಳು ॥

**ಪ್ರತೀವ್ಯಂ** ಎಂಬುದಕ್ಕೆ ನನ್ನ ಸ್ತುತಿಗಭಿಮುಖವಾಗಿ ಬನ್ನಿರಿ ಎಂದೂ ಹೇಳಬಹುದು.

॥ ಸಂಹಿತಾಪಾಠಃ ॥

ವಯಂ ಹಿ ವಾಂ ಹವಾಮಹ ಉಕ್ಷಣ್ಯಂತೋ ವ್ಯಶ್ವವತ್ ।
ಸುಮತಿಭಿರುಪ ವಿಪ್ರಾವಿಹಾ ಗತಂ ॥ ೯ ॥

॥ ಪದಪಾಠಃ ॥

ವಯಂ । ಹಿ । ವಾಂ । ಹವಾಮಹೇ । ಉಕ್ಷಣ್ಯಂತಃ । ವ್ಯಶ್ವವತ್ ।
ಸುಮತಿಭಿಃ । ಉಪ । ವಿಪ್ರಾ । ಇಹ । ಆ । ಗತಂ ॥ ೯ ॥

॥ ಸಾಯಣಭಾಷ್ಯಂ ॥

**ಉಕ್ಷಣ್ಯಂತೋ ಧನಾದಿಸೇಕ್ತಾರಾವಾತ್ಮನ ಇಚ್ಛಂತೋ ವಯಂ ವಾಂ ಹಿ ಧನಾದೀನಾಂ ಪ್ರೇಕ್ತಾರೌ ಯುವಾಮೇವ ಹವಾಮಹೇ। ತಲ್ಲಾಭಾರ್ಥಮಾಹ್ವಯಾಮಃ । ತತ್ರ ದೃಷ್ಟಾಂತಃ । ವ್ಯಶ್ವವತ್।**

ಯಥಾಸ್ಮಾಕಂ ಪಿತಾ ಯುವಾಮೇವ ಸ್ತುತ್ವಾ ಧನಮಲಭತ ತದ್ವತ್ । ಹೇ ವಿಪ್ರಾ ಮೇಧಾವಿನಾವಶ್ವಿನಾ ಸುಮತಿಭಿರಸ್ಮಾಭಿಃ ಕ್ರಿಯಮಾಣೈಃ ಕಲ್ಯಾಣೈಃ ಸ್ತೋತ್ರೈಃ ಸಹ । ಯದ್ವಾ । ಸುಮತಿಭಿಃ ಶೋಭನಾಭಿರನುಗ್ರಹಬುದ್ಧಿಭಿಃ ಸಹ । ಇಹಾಸ್ಮಿನ್ಯಾಗದಿನ ಉಪಾ ಗತಂ । ಉಪಾಗಚ್ಛತಂ ॥

॥ ಪ್ರತಿಪದಾರ್ಥ ॥

ವಿಪ್ರಾ—ಮೇಧಾವಿಗಳಾದ ಎಲೈ ಅಶ್ವಿನೀದೇವತೆಗಳೇ । **ಉಕ್ಷಣ್ಯಂತಃ**—ಧನಪ್ರದರಾದ ನಿಮ್ಮನ್ನು ಅಪೇಕ್ಷಿಸುವ । **ವಯಂ**—ನಾವು । **ವಾಂ ಹಿ**—ನಿಮ್ಮನ್ನೇ । **ವ್ಯಶ್ವವತ್**—ಹಿಂದೆ ವ್ಯಶ್ವನು ಪ್ರಾರ್ಥಿಸಿ ಕರೆದಂತೆ । **ಹವಾಮಹೇ**—ಕರೆಯುತ್ತೇವೆ । **ಸುಮತಿಭಿಃ**—ನಿಮ್ಮ ಅನುಗ್ರಹಬುದ್ಧಿಗಳೊಡನೆ । **ಇಹ**—ಈ ಯಜ್ಞಕ್ಕೆ । **ಉಪ ಆ ಗತಂ**—ಬನ್ನಿರಿ.

॥ ಭಾವಾರ್ಥ ॥

ಮೇಧಾವಿಗಳಾದ ಎಲೈ ಅಶ್ವಿನೀದೇವತೆಗಳೇ, ಧನಪ್ರದರಾದ ನಿಮ್ಮನ್ನು ಅಪೇಕ್ಷಿಸುವ ನಾವು ಹಿಂದೆ ವ್ಯಶ್ವನು ಪ್ರಾರ್ಥಿಸಿದಂತೆ ನಿಮ್ಮನ್ನು ಪ್ರಾರ್ಥಿಸುತ್ತೇವೆ. ನಿಮ್ಮ ಅನುಗ್ರಹ ಬುದ್ಧಿಗಳೊಡನೆ ಈ ಯಜ್ಞಕ್ಕೆ ಬನ್ನಿರಿ.

## English Translation.

Desirous of you who are bestowers of wealth, we invoke you, as did (our father) Vyashwa : come, sagacious Aswins, hither with favourable intentions.

॥ ಸಂಹಿತಾಪಾಠಃ ॥

ಅಶ್ವಿನಾ ಸ್ವೃಷೇ ಸ್ತುಹಿ ಕುವಿತ್ತೇ ಶ್ರವತೋ ಹವಂ ।
ನೇದೀಯಸಃ ಕೂಳಯಾತಃ ಪಣೀಁರುತ ॥ ೧೦ ॥

॥ ಪದಪಾಠಃ ॥

ಅಶ್ವಿನಾ । ಸು । ಋಷೇ । ಸ್ತುಹಿ । ಕುವಿತ್ । ತೇ । ಶ್ರವತಃ । ಹವಂ ।
ನೇದೀಯಸಃ । ಕೂಳಯಾತಃ । ಪಣೀನ್ । ಉತ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಋಷೇ ವಿಶ್ವಮನಃ ಅಶ್ವಿನಾಶ್ವಿನೌ ದೇವೌ ಸು ಷ್ಟುಹಿ । ಶೋಭನಂ ಸ್ತುಹಿ । ತತಸ್ತಾವಶ್ವಿನೌ ತೇ ಸ್ತೋತುಸ್ತವ ಹವಮಾಹ್ವಾನಂ ಕುವಿತ್ । ಕುವಿದಿತಿ ಬಹುನಾಮ । ಬಹುವಾರಂ ಶ್ರವತಃ । ಶೃಣುತಾಂ ॥ ಶ್ರು ಶ್ರವಣೇ । ಲೇಟ್ಯಡಾಗಮಃ ॥ ಏವಂ ತ್ವಯಾ ಸ್ತುತಾವಶ್ವಿನೌ ನೇದೀಯ-

ಸೋಽನ್ತಿತಮಾಞ್ಛತ್ರೂನ್ ಜೂಳಯಾತಃ । ಹಿಂಸ್ತಾಂ । ಉತಾಪಿ ಚ ಪಣೀನ್ ನೇತನ್ನಾಮಕಾನಂಗಿರೋಗವಾಮಪನೇತ್ರ್ಯೃನಸುರಾನಪಿ ಹಿಂಸ್ತಾಂ ॥ ಜುದಿ ದಾಹೇ । ಣ್ಯಂತಸ್ಯ ಲೇಟ್ಯಡಾಗಮಃ ॥

॥ ಪ್ರತಿಪದಾರ್ಥ ॥

**ಋಷೇ**—ವಿಶ್ವಮನಾನಾಮಕನಾದ ಎಲೈ ಋಷಿಯೇ । **ಅಶ್ವಿನಾ**—ಅಶ್ವಿನೀದೇವತೆಗಳನ್ನೇ । **ಸು ಷ್ಟುಹಿ**—ಅತಿಶಯವಾಗಿ ಸ್ತುತಿಸು (ಆ ಅಶ್ವಿನೀದೇವತೆಗಳು) । **ತೇ**—ಸ್ತುತಿಕರ್ತನಾದ ನಿನ್ನ । **ಹವಂ**—ಆಹ್ವಾನವನ್ನು । **ಶುವಿತ್**—ಅನೇಕವೇಳೆ । **ಶ್ರವತಃ**—ಕೇಳುತ್ತಾರೆ (ಅನಂತರ) । **ನೇದೀಯಸಃ**—ಅತ್ಯಂತ ಸಮೀಪದಲ್ಲಿರುವ ಶತ್ರುಗಳನ್ನು । **ಉತ**—ಮತ್ತು । **ಪಣೀನ್**—ಗೋವುಗಳನ್ನು ಅಪಹರಿಸುವ ಪಣಿಗಳನ್ನೂ । **ಜೂಳಯಾತಃ**—ಹಿಂಸಿಸುತ್ತಾರೆ.

॥ ಭಾವಾರ್ಥ ॥

ವಿಶ್ವಮನಾನಾಮಕನಾದ ಎಲೈ ಋಷಿಯೇ, ಅಶ್ವಿನೀದೇವತೆಗಳನ್ನೇ ಅತಿಶಯವಾಗಿ ಸ್ತುತಿಸು. ಆ ಅಶ್ವಿನೀದೇವತೆಗಳು ಸ್ತುತಿಕರ್ತನಾದ ನಿನ್ನ ಆಹ್ವಾನವನ್ನು ಅನೇಕವೇಳೆ ಕೇಳುತ್ತಾರೆ. ಅನಂತರ ಅತ್ಯಂತ ಸಮೀಪದಲ್ಲಿರುವ ಶತ್ರುಗಳನ್ನೂ ಮತ್ತು ಗೋವುಗಳನ್ನು ಅಪಹರಿಸುವ ಪಣಿಗಳನ್ನೂ ಹಿಂಸಿಸುತ್ತಾರೆ.

## English Translation.

Praise the Aswins devoutly, Rishi, that they may repeatedly hear your Invocation, and destroy the nearest (approaching enemies) and the Panis.

॥ ಸಂಹಿತಾಪಾಠಃ ॥

ವೈಯಶ್ವಸ್ಯ ಶ್ರುತಂ ನರೋತೋ ಮೇ ಅಸ್ಯ ವೇದಥಃ ।
ಸಜೋಷಸಾ ವರುಣೋ ಮಿತ್ರೋ ಅರ್ಯಮಾ ॥ ೧೧ ॥

॥ ಪದಪಾಠಃ ॥

ವೈಯಶ್ವಸ್ಯ । ಶ್ರುತಂ । ನರಾ । ಉತೋ ಇತಿ । ಮೇ । ಅಸ್ಯ । ವೇದಥಃ ।
ಸಽಜೋಷಸಾ । ವರುಣಃ । ಮಿತ್ರಃ । ಅರ್ಯಮಾ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ನರಾ ನೇತಾರಾವಶ್ವಿನೌ ವೈಯಶ್ವಸ್ಯ ವ್ಯಶ್ವಪುತ್ರಸ್ಯ ವಿಶ್ವಮನಸೋ ಮಮಾಹ್ವಾನಂ ಶ್ರುತಂ। ಶೃಣುತಂ । ಉತಾಪಿ ಚ ಮೇ ಮದೀಯಮಸ್ಯ ತದಾಹ್ವಾನಂ ವೇದಥಃ । ಅಸ್ಮಾಯತ್ತತಯಾ ಜಾನೀಥಃ । ಅಥ ವರುಣೋ ಮಿತ್ರೋ ಮಿತ್ರಾವರುಣೌ ಚ ಸಜೋಷಸಾ ಸಂಗತಾವರ್ಯಮೈತನ್ನಾಮಕೋ ದೇವಶ್ಚ ಮದೀಯಮಾಹ್ವಾನಂ ಶ್ರುತ್ವಾ ಮಹ್ಯಂ ಧನಾದಿಕಂ ಪ್ರಯಚ್ಛಂತು ॥

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾದ ಎಲೈ ಅಶ್ವಿನೀದೇವತೆಗಳೇ । **ವೈಯಶ್ವಸ್ಯ**—ವ್ಯಶ್ವಪುತ್ರನಾದ ನನ್ನ ಸ್ತುತಿಯನ್ನು । **ಶ್ರುತಂ**—ಕೇಳಿರಿ । **ಉತ**—ಮತ್ತು । **ಮೇ**—ನನ್ನ । **ಅಸ್ಯ**—ಈ ಆಹ್ವಾನವನ್ನು । **ವೇದಥಃ**—ಅರ್ಥ ಮಾಡಿಕೊಳ್ಳಿರಿ (ನಿಮ್ಮ ಸ್ತುತಿಯೆಂದು ತಿಳಿಯಿರಿ) । **ಸಜೋಷಸಃ**—ಒಟ್ಟಿಗೆ ಕೂಡಿರುವ । **ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ ನನ್ನ ಸ್ತುತಿಯನ್ನು ಕೇಳಿ ಅದರ ಫಲವಾಗಿ ನನಗೆ ಧನವನ್ನು ಕೊಡಲಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ವ್ಯಶ್ವಪುತ್ರನಾದ ನನ್ನ ಸ್ತುತಿಯನ್ನು ಕೇಳಿರಿ. ಮತ್ತು ನನ್ನ ಈ ಆಹ್ವಾನವನ್ನು ನಿಮ್ಮ ಸ್ತುತಿಯೆಂದು ತಿಳಿದು ಧನದಾನಮಾಡಿರಿ ಒಟ್ಟಿಗೆ ಕೂಡಿರುವ ವರುಣನೂ, ಮಿತ್ರನೂ ಮತ್ತು ಅರ್ಯಮನೂ ನನ್ನ ಸ್ತುತಿಯನ್ನು ಕೇಳಿ ನನಗೆ ಧನದಾನಮಾಡಲಿ.

English Translation.

Hear, leaders (of rites), (the invocation) of me the son of Vyashwa, and understand its (purport); and may Varuna, Mitra, and Aryaman concurrently (grant me wealth).

॥ ಸಂಹಿತಾಪಾಠಃ ॥

ಯುವಾದತ್ತಸ್ಯ ಧಿಷ್ಣ್ಯಾ ಯುವಾನೀತಸ್ಯ ಸೂರಿಭಿಃ ।
ಅಹರಹರ್ವೃಷಣಾ ಮಹ್ಯಂ ಶಿಕ್ಷತಂ ॥ ೧೨ ॥

॥ ಪದಪಾಠಃ ॥

ಯುವಾಽದತ್ತಸ್ಯ । ಧಿಷ್ಣ್ಯಾ । ಯುವಾಽನೀತಸ್ಯ । ಸೂರಿಽಭಿಃ ।
ಅಹಃಽಅಹಃ । ವೃಷಣಾ । ಮಹ್ಯಂ । ಶಿಕ್ಷತಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಧಿಷ್ಣ್ಯಾ ಧಿಷ್ಣ್ಯೌ ಧಿಷಣಾರ್ಹೌ ಸ್ತುತ್ಯೌ ವೃಷಣೌ ಕಾಮಾನಾಂ ಸೇಕ್ತಾರಾವಶ್ವಿನೌ ಸೂರಿಭಿಃ । ಸುಪಾಂ ಸುಲುಗಿತಿ ಭವಂತೀತಿ ಚತುರ್ಥ್ಯಾಸ್ತೃತೀಯಾ ॥ ಸೂರಿಭ್ಯಃ ಸ್ತೋತೃಭ್ಯೋ ಯುವಾದತ್ತಸ್ಯ ಯುವಾಭ್ಯಾಂ ಯತ್ಸ್ತೋತೃಭ್ಯೋ ದೀಯತೇ ತತ್ ತಥಾ ಯುವಾನೀತಸ್ಯ ಯುವಾಭ್ಯಾಂ ಯತ್ಸ್ತೋತೃಭ್ಯೋ ನೀಯತೇ ತಚ್ಚ ಧನಾದಿಕಮಹರಹರಹನ್ಯಹನಿ ಮಹ್ಯಂ ವಿಶ್ವಮನಸೇ ಸ್ತೋತ್ರಂ ಕುರ್ವಾಣಾಯ ಯುವಾಂ ಶಿಕ್ಷತಂ । ಪ್ರಯಚ್ಛತಂ ॥

|| ಪ್ರತಿಪದಾರ್ಥ ||

**ವೃಷಣಾ**—ಇಷ್ಟಾರ್ಥಪ್ರದರೂ | **ಧಿಷ್ಣ್ಯಾ**—ಸ್ತುತಿಗೆ ಪಾತ್ರರೂ ಆದ ಎಲೈ ಅಶ್ವಿನೀದೇವತೆಗಳೇ | **ಸೂರಿಭಿಃ**—ಸ್ತುತಿಕರ್ತರಿಗೆಲ್ಲಾ | **ಯುವಾದತ್ತಸ್ಯ**—ನಿಮ್ಮಿಂದ ಕೊಡಲ್ಪಡತಕ್ಕದ್ದೂ | **ಯುವಾನೀತಸ್ಯ**—ಅವರಿಗಾಗಿ ನಿಮ್ಮಿಂದ ತರಲ್ಪಡುವುದೂ ಆದ ಧನಾದಿಗಳನ್ನು | **ಅಹರಹಃ**—ಪ್ರತಿದಿನವೂ | **ಮಹ್ಯಂ**—ವಿಶ್ವನಾಮಕನಾದ ನನಗೆ | **ಶಿಕ್ಷತಂ**—ಕೊಡಿರಿ

|| ಭಾವಾರ್ಥ ||

ಇಷ್ಟಾರ್ಥಪ್ರದರೂ, ಸ್ತುತಿಗೆ ಪಾತ್ರರೂ ಆದ ಎಲೈ ಅಶ್ವಿನೀದೇವತೆಗಳೇ, ಸ್ತುತಿಕರ್ತರಿಗೆಲ್ಲಾ ನಿಮ್ಮಿಂದ ಕೊಡಲ್ಪಡತಕ್ಕದ್ದೂ, ಅವರಿಗಾಗಿ ನಿಮ್ಮಿಂದ ತರಲ್ಪಡುವುದೂ ಆದ ಧನಾದಿಗಳನ್ನು ಪ್ರತಿದಿನವೂ ವಿಶ್ವಮನಾನಾಮಕನಾದ ನನಗೆ ಕೊಡಿರಿ.

English Translation.

Adorable showerers (of benefits), bestow daily upon me (some) of that (wealth) which is given by you, which is brought by you for the worshippers.

|| ಸಂಹಿತಾಪಾಠಃ ||

ಯೋ ವಾಂ ಯಜ್ಞೇಭಿರಾವೃತೋಽಧಿವಸ್ತ್ರಾ ವಧೂರಿವ |
ಸಪರ್ಯಂತಾ ಶುಭೇ ಚಕ್ರಾತೇ ಅಶ್ವಿನಾ || ೧೩ ||

|| ಪದಪಾಠಃ ||

ಯಃ | ವಾಂ | ಯಜ್ಞೇಭಿಃ | ಆಽವೃತಃ | ಅಧಿಽವಸ್ತ್ರಾ | ವಧೂಃಽಇವ |
ಸಪರ್ಯಂತಾ | ಶುಭೇ | ಚಕ್ರಾತೇ ಇತಿ | ಅಶ್ವಿನಾ || ೧೪ ||

| ಸಾಯಣಭಾಷ್ಯಂ |

ಅಥ ಪೂರ್ವೋಽರ್ಧರ್ಚಃ ಪರೋಕ್ಷಕೃತಃ | ಯೋ ಮನುಷ್ಯೋ ವಾಂ ಯುವಯೋರ್ಯಜ್ಞೇಭಿರ್ಯಜನೈಃ ಪೂಜನೈಃ ಯದ್ವಾ ಯುಷ್ಮದ್ವಿಷಯೈರ್ಯಾಗೈರಾವೃತಃ ಪರಿವೃತೋ ಭವತಿ | ತತ್ರ ದೃಷ್ಟಾಂತಃ | ಅಧಿವಸ್ತ್ರೋಪರಿನಿಹಿತವಸ್ತ್ರಾ ವಧೂರನ್ಯೇನ ವಸ್ತ್ರೇಣ ಯಥಾಚ್ಛಾದಿತಾ ಭವತಿ ತಥಾವೃತೋ ಯದಾ ಭವತಿ ತದಾ ಸಪರ್ಯಂತಾಭೀಷ್ಟಪ್ರದಾನೇನ ತಂ ಪರಿಚರಂತಾವಶ್ವಿನಾಶ್ವಿನೌ ಭವಂತೌ ತಂ ಮನುಷ್ಯಂ ಶುಭೇ ಚಕ್ರಾತೇ | ಮಂಗಲೇ ಧನೇ ಕೃತವಂತೌ | ತಂ ಧನಾದಿಯುಕ್ತಮು-

**ಕಾಷ್ಟಾರ್ಮಿತ್ಯರ್ಥಃ । ಯೋ ಯುವಾಭ್ಯಾಂ ಹವೀಂಷಿ ಪ್ರಯಚ್ಛತಿ ತಂ ಧನಾದಿಯುಕ್ತಂ ಕುರುತ-ಮಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಅಧಿವಸ್ತ್ರಾ**—ವಸ್ತ್ರವನ್ನು ಮೊದಲೇ ಧರಿಸಿರುವ । **ವಧೂಃ ಇವ**—ಕನ್ಯೆಯು (ಸ್ತ್ರೀಯು) ಅದರ ಮೇಲೆ ಬೇರೆ ವಸ್ತ್ರವನ್ನು ಹೊದಿಸಿಕೊಳ್ಳುವಂತೆ । **ಯಃ**—ಯಾವ ಮಾನವನು । **ವಾಃ**—ನಿಮ್ಮಿಬ್ಬರನ್ನುದ್ದೇಶಿಸಿದ । **ಯಜ್ಞೇಭಿಃ**—ಯಜ್ಞಗಳಿಂದ । **ಆವೃತಃ**—ಪರಿವೃತನಾಗುವನೋ ಆಗ । **ಸಪರ್ಯಂತಾ**—ಅವನ ಇಷ್ಟಾರ್ಥಪ್ರದಾನದಿಂದ ಅವನನ್ನು ಸೇವಿಸುವ ನೀವು (ಆ ಪುರುಷನನ್ನು) । **ಶುಭೇ**—ಮಂಗಳಕರವಾದ ಧನಾದಿಗಳೊಡನೆ । **ಚಕ್ರಾತೇ** – ಯೋಜಿಸುತ್ತೀರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ವಸ್ತ್ರವನ್ನು ಮೊದಲೇ ಧರಿಸಿರುವ ಕನ್ಯೆಯು ಅದರ ಮೇಲೆ ಬೇರೆ ವಸ್ತ್ರವನ್ನು ಹೊದಿಸಿಕೊಳ್ಳುವಂತೆ ಯಾವ ಮಾನವನು ನಿಮ್ಮಿಬ್ಬರನ್ನುದ್ದೇಶಿಸಿದ ಯಜ್ಞಗಳಿಂದ ಪರಿವೃತನಾಗುವನೋ ಆಗ ಅವನ ಇಷ್ಟಾರ್ಥಪ್ರದಾನದಿಂದ ಅವನನ್ನು ಸೇವಿಸುವ ನೀವು ಆ ಪುರುಷನನ್ನು ಮಂಗಳಕರವಾದ ಧನಾದಿಗಳೊಡನೆ ಸೇರಿಸುತ್ತೀರಿ

English Translation.

The man who is enveloped in sacrifices (offered) to you, like a woman with additional raiment, rewarding him, Aswins, you place him in prosperity.

॥ ಸಂಹಿತಾಪಾಠಃ ॥

ಯೋ ವಾಮುರುವ್ಯಚಸ್ತಮಂ ಚಿಕೇತತಿ ನೃಪಾಯ್ಯಂ ।
ವರ್ತಿರಶ್ವಿನಾ ಪರಿ ಯಾತಮಸ್ಮಯೂ ॥ ೧೪ ॥

॥ ಪದಪಾಠಃ ॥

ಯಃ । ವಾಂ । ಉರುವ್ಯಚಃऽತಮಂ । ಚಿಕೇತತಿ । ನೃऽಪಾಯ್ಯಂ ।
ವರ್ತಿಃ । ಅಶ್ವಿನಾ । ಪರಿ । ಯಾತಂ । ಅಸ್ಮಯೂ ಇತ್ಯಸ್ಮಯೂ ॥ ೧೪ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಉರುವ್ಯಚಸ್ತಮಮತಿಶಯೇನ ಗೃಹೇಷು ಭೂತಂ ವ್ಯಾಪ್ತಂ ನೃಪಾಯ್ಯಂ ನೇತೃಭ್ಯಾಂ ಯುವಾಭ್ಯಾಂ ಪಾತವ್ಯಂ ಸೋಮಂ ಯೋ ಮನುಷ್ಯೋ ವಾಂ ಯುವಾಭ್ಯಾಂ ತಂ ಸೋಮಂ**

**ದಾತುಂ ಚಿಕೇತತಿ ಭೃಶಂ ಜಾನಾತಿ ತಸ್ಯ ವರ್ತಿಃ । ವರ್ತಿಶ್ಛತ್ರೀತಿ ವರ್ತಿಗೃಹಂ । ಅಸ್ಮಯುಃ ಅಸ್ಮಾನ್ । ಪೂಜಾರ್ಥಂ ಬಹುವಚನಂ । ವಿಶ್ವಮನಸಂ ಮಾಂ ಕಾಮಯಮಾನೌ ಯುವಾಂ ಪರಿ ಯಾತಂ । ಸೋಮಪಾನಾರ್ಥಂ ತಸ್ಯ ಗೃಹಂ ಪ್ರತ್ಯಾಯಾತಂ ॥ ಚಿಕೇತತಿ । ಕಿತ ಜ್ಞಾನ ಇತ್ಯಸ್ಯ ಯಜ್‌ಲುಗಂತಸ್ಯ ಲೇಟ್ಯಡಾಗಮಃ ॥**

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ಉರುವ್ಯಚಸ್ತಮಂ**— ಯಜ್ಞಗೃಹದಲ್ಲಿ ತುಂಬಿರುವುದೂ । **ನೃಪಾಯ್ಯಂ**— ನೇತೃಗಳಾದ ನಿಮ್ಮಿಂದ ಪಾನಮಾಡಲ್ಪಡುವುದೂ ಆದ ಸೋಮವನ್ನು । **ಯಃ**— ಯಾವ ಮನುಷ್ಯನು । **ವಾಂ**— ನಿಮ್ಮನ್ನುದ್ದೇಶಿಸಿ ಅರ್ಪಿಸುವ ಕ್ರಮವನ್ನು । **ಚಿಕೇತತಿ**— ಅರಿಯುತ್ತಾನೆಯೋ ಅವನ । **ವರ್ತಿಃ**— ಗೃಹಕ್ಕೆ । **ಅಸ್ಮಯೂ**— ವಿಶ್ವಮನಾ ಎಂಬ ನನ್ನ ಸಂಗವನ್ನಪೇಕ್ಷಿಸಿ । **ಪರಿಯಾತಂ**— ದಯಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಜ್ಞಗೃಹದಲ್ಲಿ ತುಂಬಿರುವುದೂ, ನೇತೃಗಳಾದ ನಿಮ್ಮಿಂದ ಪಾನಮಾಡಲ್ಪಡುವುದೂ ಆದ ಸೋಮವನ್ನು ಯಾವ ಮನುಷ್ಯನು ನಿಮ್ಮನ್ನುದ್ದೇಶಿಸಿ ಅರ್ಪಿಸುವ ಕ್ರಮವನ್ನು ಅರಿಯುತ್ತಾನೆಯೋ ಅವನ ಗೃಹಕ್ಕೆ ವಿಶ್ವಮನಾ ಎಂಬ ನನ್ನ ಸಂಗವನ್ನಪೇಕ್ಷಿಸಿ ಬನ್ನಿರಿ.

English Translation.

Favourably disposed towards me, come, Ahwins, to the dwelling of him who knows (how to prepare for you) the most copiously effused (libation) to be drunk by the leaders (of rites).

॥ ಸಂಹಿತಾಪಾಠಃ ॥

ಅಸ್ಮಭ್ಯಂ ಸು ವೃಷಣ್ವಸೂ ಯಾತಂ ವರ್ತಿರ್ನೃಪಾಯ್ಯಂ ।
ವಿಷುದ್ರುಹೇವ ಯಜ್ಞಮೂಹಥುರ್ಗಿರಾ ॥ ೧೫ ॥

॥ ಪದಪಾಠಃ ॥

ಅಸ್ಮಭ್ಯಂ । ಸು । ವೃಷಣ್ವಸೂ ಇತಿ ವೃಷಣ್ऽವಸೂ । ಯಾತಂ । ವರ್ತಿಃ । ನೃऽಪಾಯ್ಯಂ ।
ವಿಷುದ್ರುಹಾऽಇವ । ಯಜ್ಞಂ । ಊಹಥುಃ । ಗಿರಾ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ವೃಷಣ್ವಸೂ ವರ್ಷಣಶೀಲಧನವಂತಾವಶ್ವಿನೌ ಅಸ್ಮಭ್ಯಮಸ್ಮದರ್ಥಂ ನೃಪಾಯ್ಯಂ ನೇತೃಭ್ಯಾಂ ಪಾತವ್ಯಂ ಸೋಮಂ ಪ್ರತಿ ವರ್ತಿರಸ್ಮದೀಯಂ ಗೃಹಂ ಪ್ರತಿ ಸು ಯಾತಂ । ಯುವಾಂ**

**ಸುಷ್ಠ್ವಾಯಾತಂ । ಗಿರಾ ಸ್ತುತಿಲಕ್ಷಣಯಾ ವಾಚಾ ಯುವಾಂ ಯಜ್ಞಮೂಹಥುಃ । ಮನುಷ್ಯೇಷು ಯಜ್ಞಸಮಾಪ್ತಿಂ ಪ್ರಾಪಯಥಃ । ತತ್ರ ದೃಷ್ಟಾಂತಃ । ವಿಷುದ್ರುಹೇವ ॥ ದ್ರುಹ ಜಿಘಾಂಸಾಯಾಂ ॥ ವಿಶ್ವಾನ್ನಿನಸ್ತಿ ಶತ್ರೂನಿತಿ ವಿಷುದ್ರುಹಃ ಶರಃ । ತೇನ ಯಥಾ ವ್ಯಾಧೋ ಮೃಗಮಭಿಲಷಿತಂ ದೇಶಂ ಪ್ರಾಪಯತಿ ತದ್ವತ್ ಸ್ತುತ್ಯಾ ಯಜ್ಞಮನ್ಯೈಕಲ್ಯೇನ ಸಮಾಪ್ತಿಂ ಪ್ರಾಪಯಥ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವೃಷಣ್ವಸೂ**—ವೃಷ್ಟಿರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ । **ಅಸ್ಮಭ್ಯಂ**—ನಮ್ಮನ್ನು ಅನುಗ್ರಹಿಸಲು । **ನೃಪಾಯ್ಯಂ**—ನೇತೃಗಳಾದ ನಿಮ್ಮಿಂದ ಪಾನಮಾಡಲು ಯೋಗ್ಯವಾದ ಸೋಮವನ್ನು ಪಾನಮಾಡಲು । **ವರ್ತಿಃ**—ನಮ್ಮ ಯಜ್ಞಗೃಹಕ್ಕೆ । **ಸು ಯಾತಂ**—ಉತ್ತಮವಾದ ರೀತಿಯಲ್ಲಿ ಬನ್ನಿರಿ । **ವಿಷುದ್ರುಹೇವ**—ವಿಷಾತ್ಮಕವಾದ ಶರದಿಂದ ಮೃಗವನ್ನು ಕೊನೆಗಾಣಿಸುವಂತೆ । **ಗಿರಾ**—ನಮ್ಮ ಸ್ತುತಿಯಿಂದ । **ಯಜ್ಞಂ**—ನಮ್ಮ ಯಜ್ಞವನ್ನು । **ಊಹಥುಃ**—ಸಮಾಪ್ತಿಗೊಳಿಸಿರಿ.

॥ ಭಾವಾರ್ಥ ॥

ವೃಷ್ಟಿರೂಪವಾದ ಧನವುಳ್ಳ ಎಲೈ ಅಶ್ವಿನೀದೇವತೆಗಳೇ, ನಮ್ಮನ್ನು ಅನುಗ್ರಹಿಸಲು ನೇತೃಗಳಾದ ನಿಮ್ಮಿಂದ ಪಾನಮಾಡಲು ಯೋಗ್ಯವಾದ ಸೋಮಪಾನಕ್ಕಾಗಿ ನಮ್ಮ ಯಜ್ಞಗೃಹಕ್ಕೆ ಉತ್ತಮವಾದ ರೀತಿಯಲ್ಲಿ ಬನ್ನಿರಿ. ವಿಷಾತ್ಮಕವಾದ ಶರದಿಂದ ಮೃಗವನ್ನು ಕೊನೆಗಾಣಿಸುವಂತೆ ನಮ್ಮ ಸ್ತುತಿಯಿಂದ ನಮ್ಮ ಯಜ್ಞವನ್ನು ಸಮಾಪ್ತಿಗೊಳಿಸಿರಿ.

## English Translation.

Affluent showerers (of benefits), come to our dwelling for (the libation) to be drunk by the leaders (of rites), for you bring the sacrifice to completion by praise, as the fatal shaft (slays the deer).

॥ ಸಂಹಿತಾಪಾಠಃ ॥

ವಾಹಿಷ್ಠೋ ವಾಂ ಹವಾನಾಂ ಸ್ತೋಮೋ ದೂತೋ ಹುವನ್ನರಾ ।
ಯುವಾಭ್ಯಾಂ ಭೂತ್ವಶ್ವಿನಾ ॥ ೧೬ ॥

॥ ಪದಪಾಠಃ ॥

ವಾಹಿಷ್ಠಃ । ವಾಂ । ಹವಾನಾಂ । ಸ್ತೋಮಃ । ದೂತಃ । ಹುವತ್ । ನರಾ ।
ಯುವಾಭ್ಯಾಂ । ಭೂತು । ಅಶ್ವಿನಾ ॥ ೧೬ ॥

॥ ಸಾಯಣಭಾಷ್ಯಂ ॥

**ಪ್ರಾತರನುವಾಕ ಆಶ್ವಿನೇ ಕ್ರತೌ ಗಾಯತ್ರೇ ಛಂದಸಿ ವಾಹಿಷ್ಠೋ ವಾಂ ಹವಾನಾಮಿತಿ ಚತಸ್ರಃ । ಸೂತ್ರಿತಂ ಚ ।** ವಾಹಿಷ್ಠೋ ವಾಂ ಹವಾನಾಮಿತಿ ಚತಸ್ರ ಉದೀರಾಥಾಮಾ ಮೇ ಹವಮಿತಿ ಗಾಯತ್ರಂ। **ಆ. ೪-೧೫ । ಇತಿ ॥**

**ಹೇ ನರಾ ನರೌ ಸರ್ವಸ್ಯ ನೇತಾರಾವಶ್ವಿನೌ ಹವಾನಾಂ ಸ್ತೋತ್ರಾಣಾಂ ಸ್ತೋತ್ರಾಣಾಂ ಮಧ್ಯೇ ಸ್ತೋಮೋ ವಾಹಿಷ್ಠೋ ಯುವಾಮತಿಶಯೇನ ವ್ಯಾಪ್ನುವನ್ ಮದೀಯಃ ಸ್ತೋಮೋ ದೂತೋ ದೂತಭೂತಃ ಸನ್ ಹುವತ್ । ಆಹ್ವಯತು । ಸೋಽಯಂ ಮದೀಯಃ ಸ್ತೋಮೋ ಯುವಾಭ್ಯಾಂ ಪ್ರಿಯತರೋ ಭೂತು । ಭವತು ॥**

॥ ಪ್ರತಿಪದಾರ್ಥ ॥

**ನರಾ**—ನೇತೃಗಳಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಹವಾನಾಂ**—ಸ್ತುತಿಗಳ ಮಧ್ಯ ದಲ್ಲೆಲ್ಲಾ । **ಸ್ತೋಮಃ**—ನನ್ನ ಈ ಸ್ತೋತ್ರವೇ । **ವಾಹಿಷ್ಠಃ**—ನಿಮ್ಮನ್ನು ಶ್ರೇಷ್ಠವಾಗಿ ವ್ಯಾಪಿಸಿ । **ವಾಂ**—ನಿಮ್ಮನ್ನು । **ದೂತಃ**—ನಿಮ್ಮ ದೂತನಂತೆ । **ಹುವತ್**—ಕರೆಯಲಿ । **ಯುವಾಭ್ಯಾಂ**—ನಿಮ್ಮಿಬ್ಬರಿಗೂ ಪ್ರೀತಿಕಾರಕವಾಗಿ । **ಭೂತು**—ಆಗಿರಲಿ.

॥ ಭಾವಾರ್ಥ ॥

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಸ್ತುತಿಗಳ ಮಧ್ಯದಲ್ಲೆಲ್ಲಾ ನನ್ನ ಈ ಸ್ತೋತ್ರವೇ ನಿಮ್ಮನ್ನು ಶ್ರೇಷ್ಠವಾಗಿ ವ್ಯಾಪಿಸಿ ನಿಮ್ಮನ್ನು ನಿಮ್ಮ ದೂತನಂತೆ ಕರೆಯಲಿ. ನಿಮ್ಮಿಬ್ಬರಿಗೂ ಪ್ರೀತಿಕಾರಕವಾಗಿ ಆಗಲಿ.

## English Translation.

Aswins, leaders (of rites), among (all) invocations may my most earnest praise invoke you as a messenger, may it be (acceptabl) to you.

॥ ವಿಶೇಷವಿಷಯಗಳು ॥

**ವಾಹಿಷ್ಠೋ ವಾಂ ಹವಾನಾಂ** ಎಂದು ಮೊದಲಾಗುವ ನಾಲ್ಕು ಋಕ್ಕುಗಳನ್ನು ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿ ವಿನಿಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವಾಹಿಷ್ಠೋ ವಾಂ ಹವಾನಾಮಿತಿ ಚತಸ್ರ ಉದೀರಥಾಮಾ ಹೇ ಹವಮಿತಿ ಗಾಯತ್ರಂ** ಎಂಬ ಸೂತ್ರದಿಂದ (ಆ. ೪-೧೫) ವಿವೃತವಾಗಿರುವುದು.

**ವಾಹಿಷ್ಠಃ—ಈ** ಶಬ್ದದ ಅರ್ಥವಿಷಯದಲ್ಲಿ ಭಾಷ್ಯಕಾರರು ಮಾಡಿರುವ ಅರ್ಥಕ್ಕೂ ಯಾಸ್ಕರ ನಿರ್ವಚನಕ್ಕೂ ಸ್ವಲ್ಪ ವ್ಯತ್ಯಾಸವಿದೆ. **ಭಾಷ್ಯಕಾರರು ವಾಹಿಷ್ಠಃ ಯುವಾಮತಿಶಯೇನ ವ್ಯಾಪ್ನುವನ್ ।** ನಿಮ್ಮನ್ನು ಅತಿಶಯವಾಗಿ ವ್ಯಾಪಿಸಿರುವ (ಸ್ತೋತ್ರ) ಎಂದರ್ಥಮಾಡಿದಾರೆ. ಆದರೆ ಯಾಸ್ಕರು **ವಾಹಿಷ್ಠಃ** ಎಂದರೆ ವಹಿಸುವ ಸ್ವಭಾವವುಳ್ಳ, ನನ್ನ ಪ್ರಾರ್ಥನೆಯನ್ನು ನಿಮ್ಮ ಬಳಿಗೆ ವಹಿಸುವ ಸ್ತೋತ್ರವೆಂದು ಅರ್ಥಮಾಡಿದ್ದಾರೆ.

**ವಾಹಿಷ್ಠಃ । ದೂತಃ । ವಾಹಿಷ್ಠೋ ವಾಂ ಹವಾನಾಂ ಸ್ತೋಮೋ ದೂತೋ ಹುವನ್ನರಾ । ವೋಢೃತಮೋ ಹ್ವಾನಾನಾಂ ಸ್ತೋಮೋ ದೂತೋ ಹುವನ್ನರೌ । ನರಾ ಮನುಷ್ಯಾ ನೃತ್ಯಂತಿ ಕರ್ಮಸು । ದೂತೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ । ದೂತೋ ದೇವಾನಾಮಸಿ ಮರ್ತ್ಯಾನಾಮಿತ್ಯಪಿ ನಿಗಮೋ ಭವತಿ ॥** (ನಿ. ೫-೧)

**ವಾಹಿಷ್ಠಃ** ಎಂದರೆ ವಹಿಸುವ, ತಲಪಿಸುವ ಸ್ವಭಾವವುಳ್ಳ ಎಂದರ್ಥವು. ಈ ಅರ್ಥವು ದೂತನಿಗೂ ದೇವತೆಯನ್ನು ದ್ದೇಶಿಸಿ ಅರ್ಪಿಸುವ ಸ್ತೋತ್ರಕ್ಕೂ ಅನ್ವಯಿಸಬಹುದು. ನಮ್ಮ ಪ್ರಾರ್ಥನೆಗಳನ್ನೊಳಗೊಂಡ ಸ್ತೋತ್ರವು ನಮ್ಮಿಂದ ಹೊರಟು (ಪರಿಸಲ್ಪಟ್ಟು) ದೇವತೆಗಳ ಬಳಿಗೆ ಹೋಗುವುದಾದ್ದರಿಂದ ನಮ್ಮ ಪ್ರಾರ್ಥನೆಯನ್ನು ವಹಿಸಿಕೊಂಡು ಹೋಗುವ ಸ್ತೋತ್ರಕ್ಕೆ **ವಾಹಿಷ್ಠಃ** ಎಂಬ ಪದಪ್ರಯೋಗವು ಉಚಿತವಾಗಿದೆ. ಈ ವಿಧವಾದ ಅರ್ಥವು ದೂತಶಬ್ದಕ್ಕೂ ಸಾಮಾನ್ಯವಾಗಿದೆ. ಏಕೆಂದರೆ, ದೂತನು ಸಹ ನಮ್ಮ ಪ್ರಾರ್ಥನೆಯನ್ನು ಅಥವಾ ಇಷ್ಟಗಳನ್ನು ದೇವತೆಗಳಿಗೆ ನಿವೇದಿಸುವನು. **ನರಾಃ** ಎಂದರೆ ಮನುಷ್ಯರು. ಈ ಶಬ್ದವು ನೃತ್ಯತಿಧಾತುವಿನಿಂದ ನಿಷ್ಪನ್ನವಾಗಬಹುದು. ಕೆಲಸ ಮಾಡುವಾಗ ವಿಶೇಷವಾಗಿ ಚಲಿಸುವುದರಿಂದ ಅಥವಾ ಓಡಾಡುವುದರಿಂದ **ನರಾಃ** ಎಂದರೆ ಮನುಷ್ಯರು ಎಂದರ್ಥವು. **ದೂತ** ಶಬ್ದವು ವೇಗವನ್ನು ಸೂಚಿಸುವ ಜವತಿಧಾತುವಿನಿಂದಾಗಲಿ, ಶೀಘ್ರವಾಗಿ ಓಡು ಎಂಬರ್ಥವನ್ನು ಸೂಚಿಸುವ ದ್ರವತಿಧಾತುವಿನಿಂದಾಗಲಿ, (ತೊಂದರೆಗಳನ್ನು) ನಿವಾರಿಸು ಎಂಬರ್ಥವುಳ್ಳ **ವಾರಯತಿ** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ದೂತನಾದವನು ಒಬ್ಬರಿಂದ ಮತ್ತೊಬ್ಬರಿಗೆ ವಿಷಯವನ್ನು ತಿಳಿಸುವುದಕ್ಕಾಗಿ ವೇಗವಾಗಿ ಓಡಿಹೋಗಿ ತಿಳಿಸುವನು ಅಥವಾ ದಾರಿಯಲ್ಲಿ ಸಂಭವಿಸಬಹುದಾದ ತೊಂದರೆಗಳನ್ನು ತಪ್ಪಿಸಿಕೊಂಡು ನಿರ್ದಿಷ್ಟಸ್ಥಳಕ್ಕೆ ಹೋಗಿ ಸೇರುವನು. ಆದುದರಿಂದ ದೂತಶಬ್ದವು ಮೇಲೆ ಹೇಳಿದ ಯಾವುದಾದರೂ ಒಂದು ಧಾತುವಿನಿಂದ ನಿಷ್ಪನ್ನವಾಗಿದೆಯೆಂದೂ ಈ ವಿಷಯದಲ್ಲಿ **ದೂತೋ ದೇವಾನಾಮಸಿ ಮರ್ತ್ಯಾನಾಂ** ಎಂಬ ಶ್ರುತಿವಾಕ್ಯವೇ ಉದಾಹರಣೆಯಾಗಿದೆಯೆಂದೂ ಯಾಸ್ಕರು ಹೇಳಿದ್ದಾರೆ.

**। ಸಂಹಿತಾಪಾಠಃ ।**

ಯದದೋ ದಿವೋ ಅರ್ಣವ ಇಷೋ ವಾ ಮದಥೋ ಗೃಹೇ ।
ಶ್ರುತಮಿನ್ಮೇ ಅಮರ್ತ್ಯಾ ॥ ೧೭ ॥

**॥ ಪದಪಾಠಃ ॥**

**ಯತ್ । ಅದಃ । ದಿವಃ । ಅರ್ಣವೇ । ಇಷಃ । ವಾ । ಮದಥಃ । ಗೃಹೇ ।**
**ಶ್ರುತಂ । ಇತ್ । ಮೇ । ಅಮರ್ತ್ಯಾ ॥ ೧೭ ॥**

**। ಸಾಯಣಭಾಷ್ಯಂ ।**

**ಹೇ ಅಶ್ವಿನಾ ದಿವೋ ದ್ಯುಲೋಕಸ್ಯಾದಃ ॥ ಸುಪಾಂ ಸುಲುಗಿತಿ ಷಷ್ಠ್ಯಾಃ ಸಃ ॥ ಅಮುಷ್ಮಿ-ನ್ನರ್ಣವೇಽಪಾಂ ಸ್ಥಾನೇ ಯದ್ಯದಿ ಮದಥಃ ಮಾದ್ಯಥಃ । ವಾಪಿ ಇಷೋ ಯೋ ವಾಮಿಚ್ಛತೋ**

**ಯಜಮಾನಸ್ಯ ಗೃಹೇ ಯದಿ ಮಾದ್ಯಥಃ । ಏವಂ ಚೇತ್ ಹೇ ಅಮರ್ತ್ಯಾ ಮರಣಧರ್ಮರಹಿತಾವಮುಷ್ಯಾ ವಾಶ್ವಿನೌ ಮೇ ಮದೀಯಂ ಸ್ತೋತ್ರಂ ಶ್ರುತಮಿತ್ । ಯುವಾಂ ಶೃಣುತಮೇವ । ಮನ್ಯೇವ ಸ್ತೋತ್ರಂ ಶ್ರುತ್ವಾ ಯುವಾಂ ಮಾದ್ಯತಮಿತ್ಯರ್ಥಃ । ಯದ್ವಾ । ಅದಃ ಸ್ತೋತ್ರಮಿತಿ ಸಂಬಧ್ಯತೇ ॥**

॥ ಪ್ರತಿಪದಾರ್ಥ ॥

**ಅಮರ್ತ್ಯಾ**— ಮರಣಧರ್ಮರಹಿತರಾದ ಎಲೈ ಅಶ್ವಿನೀದೇವತೆಗಳೇ । **ಅದಃ**— ಮೇಲುಭಾಗದ । **ದಿವಃ**— ದ್ಯುಲೋಕದ । **ಅರ್ಣವೇ**— ಉದಕದ ಸ್ಥಾನದಲ್ಲಿ । **ಯತ್**— ಒಂದು ವೇಳೆ । **ಮದಥಃ**— ಹರ್ಷಿಸುತ್ತಿದ್ದರೂ । **ವಾ**— ಅಥವಾ । **ಇಷಃ**— ನಿಮ್ಮನ್ನಿಚ್ಛಿಸುವ ಯಜಮಾನನ । **ಗೃಹೇ**— ಯಜ್ಞಗೃಹದಲ್ಲಿ ಹರ್ಷಿಸುತ್ತಿದ್ದರೂ । **ಮೇ**— ನನ್ನ ಸ್ತುತಿಯನ್ನು । **ಶ್ರುತಮಿತ್**— ಕೇಳಿರಿ.

॥ ಭಾವಾರ್ಥ ॥

ಮರಣಧರ್ಮರಹಿತರಾದ ಎಲೈ ಅಶ್ವಿನೀದೇವತೆಗಳೇ, ಮೇಲುಭಾಗದ ದ್ಯುಲೋಕದ ಉದಕಸ್ಥಾನದಲ್ಲಿ ಒಂದು ವೇಳೆ ನೀವು ಹರ್ಷಿಸುತ್ತಿದ್ದರೂ, ಅಥವಾ ನಿಮ್ಮನ್ನಿಚ್ಛಿಸುವ ಯಜಮಾನನ ಯಜ್ಞಗೃಹದಲ್ಲಿ ಹರ್ಷಿಸುತ್ತಿದ್ದರೂ ನನ್ನ ಈ ಸ್ತುತಿಯನ್ನು ಕೇಳಿರಿ.

English Translation.

Whether, immortal (Ahwins), you rejoice in the water of the firmament, or in the dwelling of the worshipper, hear this my (invocation).

। ಸಂಹಿತಾಪಾಠಃ ।

ಉತ ಸ್ಯಾ ಶ್ವೇತಯಾವರೀ ವಾಹಿಷ್ಠಾ ವಾಂ ನದೀನಾಂ ।
ಸಿಂಧುರ್ಹಿರಣ್ಯವರ್ತನಿಃ ॥ ೧೮ ॥

॥ ಪದಪಾಠಃ ॥

ಉತ । ಸ್ಯಾ । ಶ್ವೇತ್ಽಯಾವರೀ । ವಾಹಿಷ್ಠಾ । ವಾಂ । ನದೀನಾಂ ।
ಸಿಂಧುಃ । ಹಿರಣ್ಯಽವರ್ತನಿಃ ॥ ೧೮ ॥

॥ ಸಾಯಣಭಾಷ್ಯಂ ॥

**ವಿಶ್ವಮನಾ ಋಷಿಃ ಶ್ವೇತಯಾವರೀನಾಮ್ನ್ಯಾ ನದ್ಯಾಸ್ತೀರೇಽಶ್ವಿನಾವಸ್ತೌತ್ । ಅನಯಾ ನದ್ಯಾಪಿ ಸ್ತುತವತೀತ್ಯಾಹ । ಉತಾಪಿ ಚ ಶ್ವೇತಯಾವರೀ । ಶ್ವೇತಜಲಾ ಯಾತೀತಿ ಶ್ವೇತಯಾವರೀ । ಶೀಘ್ರಗಾಮಿನೀ । ಸಿಂಧುಃ ಸ್ಯಂದಮಾನಾ ಹಿರಣ್ಯವರ್ತನಿರ್ಹಿರಣ್ಮಯಸ್ತೀಯಮಾರ್ಗಾ ಹಿರಣ್ಮಯೋಭಯಕೂಲಾ । ಸ್ಯೈಷಾ ಶ್ವೇತಯಾವರೀನಾಮಿಕಾ ನದೀನಾಮನ್ಯಾಸಾಂ ನದೀನಾಂ ಮಧ್ಯೇ ವಾಂ ಯುವಾಂ**

ವಾಹಿಷ್ಠಾ ಸ್ತುತ್ಯಾತಿಶಯೇನಾಗಂತ್ರೀ ಭವತಿ । ಏಷಾಪಿ ಯುವಾಂ ಸ್ತೌತೀತ್ಯರ್ಥಃ । ಯದ್ವಾ । ಏಷಾ ನದೀ ಯುವಯೋ ರಥಸ್ಯ ವಾಹಿಷ್ಠಾ ವೋಢೃತಮಾ ಸತೀ ಪ್ರಿಯಂಕರೀ ಭವತಿ । ಯಸ್ಮಾದಹಮಸ್ಯಾಸ್ತೀರೇ ಯುವಾಮಸ್ತುವಮಿತಿ ॥

॥ ಪ್ರತಿಪದಾರ್ಥ ॥

(ಎಲೈ ಅಶ್ವಿನೀದೇವತೆಗಳೇ) **ಉತ**—ಮತ್ತು । **ಸಿಂಧುಃ**—ಪ್ರವಹಿಸತಕ್ಕದ್ದೂ । **ಹಿರಣ್ಯವರ್ತನಿಃ**—ಸುವರ್ಣಮಯವಾದ ಮಾರ್ಗವುಳ್ಳದ್ದೂ । **ಸ್ಯಾ**—ಪ್ರಸಿದ್ಧವಾದುದೂ ಆದ । **ಶ್ವೇತಯಾವರೀ**—ಶ್ವೇತಯಾವರೀ ಎಂಬ ಈ ನದಿಯು । **ನದೀನಾಂ**—ಎಲ್ಲಾ ನದಿಗಳ ನಡುವೆಯೂ । **ವಾಂ**—ನಿಮ್ಮ ರಥವನ್ನು । **ವಾಹಿಷ್ಠಾ**—ಅತಿ ಸುಖವಾಗಿ ವಹಿಸಬಲ್ಲದು.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಉತ್ತಮವಾಗಿ ಪ್ರವಹಿಸತಕ್ಕದ್ದೂ, ಸುವರ್ಣಮಯವಾದ ಮಾರ್ಗವುಳ್ಳದ್ದೂ, ಪ್ರಸಿದ್ಧವಾದುದೂ ಆದ ಶ್ವೇತಯಾವರೀ ಎಂಬ ಈ ನದಿಯು ಎಲ್ಲಾ ನದಿಗಳ ನಡುವೆಯೂ ನಿಮ್ಮ ರಥವನ್ನು ಅತಿ ಸುಖವಾಗಿ ವಹಿಸಬಲ್ಲದು.

## English Translation.

Verily this Shwetayavari, the golden-pathed river, is of all rivers the especial bearer of your (praises).

॥ ಸಂಹಿತಾಪಾಠಃ ॥

ಸ್ಮದೇತಯಾ ಸುಕೀರ್ತ್ಯಾಶ್ವಿನಾ ಶ್ವೇತಯಾ ಧಿಯಾ ।
ವಹೇಥೇ ಶುಭ್ರಯಾವಾನಾ ॥ ೧೯ ॥

॥ ಪದಪಾಠಃ ॥

ಸ್ಮತ್ । ಏತಯಾ । ಸುಽಕೀರ್ತ್ಯಾ । ಅಶ್ವಿನಾ । ಶ್ವೇತಯಾ । ಧಿಯಾ ।
ವಹೇಥೇ ಇತಿ । ಶುಭ್ರಽಯಾವಾನಾ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಶುಭ್ರಯಾವಾನಾ ಶೋಭನಶೀಲಗಮನವಂತೌ ಹೇ ಅಶ್ವಿನಾಶ್ವಿನೌ ಸುಕೀರ್ತ್ಯಾ ಶೋಭನಸ್ತುತ್ಯಾ ಶ್ವೇತಯಾ ಶ್ವೇತಜಲಯಾ ಧಿಯಾ ಧಾರಯಿತ್ರ್ಯಾ ಹಿರಣ್ಮಯಕೂಲವತ್ತ್ವೋಭಯಕೂಲಸ್ಥಿತಾನಾಂ ಪ್ರಾಣಿನಾಂ ಧನದಾನೇನ ಪೋಷಯಿತ್ರ್ಯೈತಯಾ ನದ್ಯಾ ಸ್ಮತ್ಸುಮತ್ಶೋಭನಂ ವಹೇಥೇ । ಯುವಾಂ ಸ್ತುತಿಂ ಪ್ರಾಪ್ನುಥಃ । ಏಷಾ ಯುವಾಮಸ್ತೌದಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಶುಭ್ರಯಾವಾನಾ**-ಮಂಗಳಕರವಾದ ಗಮನವುಳ್ಳ। **ಅಶ್ವಿನಾ**-ಎಲೈ ಅಶ್ವಿನೀದೇವತೆಗಳೇ। **ಸುಕೀರ್ತ್ಯಾ**-ಉತ್ತಮವಾದ ಸ್ತುತಿಯುಕ್ತವಾದುದೂ। **ಶ್ವೇತಯಾ**—ಶ್ವೇತವರ್ಣವುಳ್ಳ ಜಲದಿಂದ ಕೂಡಿದುದೂ। **ಧಿಯಾ**—ದಡದಲ್ಲಿರುವ ಪ್ರಾಣಿಗಳನ್ನೆಲ್ಲಾ ಧರಿಸಿ ಪೋಷಿಸತಕ್ಕದ್ದೂ ಆದ। **ಏತಯಾ**—ಈ ಶ್ವೇತಯಾವರೀ ಎಂಬ ನದಿಯಿಂದ। **ಸ್ವೃತ್**—ಮಂಗಳಕರವಾದ ರೀತಿಯಲ್ಲಿ। **ವಹೇಥೇ**—ನಿಮ್ಮ ಸ್ತುತಿಯನ್ನು ಹೊಂದುತ್ತೀರಿ.

॥ ಭಾವಾರ್ಥ ॥

ಮಂಗಳಕರವಾದ ಗಮನವುಳ್ಳ ಎಲೈ ಅಶ್ವಿನೀದೇವತೆಗಳೇ, ಉತ್ತಮವಾದ ಸ್ತುತಿಯುಕ್ತವಾದುದೂ, ಶ್ವೇತವರ್ಣವುಳ್ಳ ಜಲದಿಂದ ಕೂಡಿದುದೂ, ದಡದಲ್ಲಿರುವ ಪ್ರಾಣಿಗಳನ್ನೆಲ್ಲಾ ಧರಿಸಿ ಪೋಷಿಸತಕ್ಕದ್ದೂ ಆದ ಈ ಶ್ವೇತಯಾವರೀ ಎಂಬ ನದಿಯಿಂದ ಮಂಗಳಕರವಾದ ರೀತಿಯಲ್ಲಿ ನಿಮ್ಮ ಸ್ತುತಿಯನ್ನು ಹೊಂದುತ್ತೀರಿ.

## English Translation.

Aswins, following a brilliant course, you acquire celebrity by the white river worthily praising you, the enricher (of the people on its banks).

|| ಸಂಹಿತಾಪಾಠಃ ||

ಯುಂಕ್ಷ್ವಾ ಹಿ ತ್ವಂ ರಥಾಸಹಾ ಯುವಸ್ವ ಪೋಷ್ಯಾ ವಸೋ ।
ಆನ್ನೋ ವಾಯೋ ಮಧು ಪಿಬಾಸ್ಮಾಕಂ ಸವನಾ ಗಹಿ || ೧೦ ||

॥ ಪದಪಾಠಃ ।

ಯುಂಕ್ಷ್ವ । ಹಿ । ತ್ವಂ । ರಥಽಸಹಾ । ಯುವಸ್ವ । ಪೋಷ್ಯಾ । ವಸೋ ಇತಿ ।
ಆ । ನಃ । ವಾಯೋ ಇತಿ । ಮಧು । ಪಿಬ । ಅಸ್ಮಾಕಂ । ಸವನಾ । ಆ । ಗಹಿ ॥ ೧೦ ॥

। ಸಾಯಣಭಾಷ್ಯಂ ॥

**ಏತದಾದ್ಯಾ ವಾಯವ್ಯಃ। ಹೇ ವಾಯೋ ರಥಸಹಾ ರಥಸಹೌ ರಥವಹನಸಮರ್ಥಾವಶ್ವೌ। ಹಿರವಧಾರಣೇ। ತ್ವಮೇವ ಯುಂಕ್ಷ್ವ। ಸಂಯೋಜಯ। ಹೇ ವಸೋ ವಾಸಯಿತಃ ಶತ್ರೂಣಾಂ ಪೋಷ್ಯಾ ಪೋಷ್ಯೌ ಕಂಠೇಷು ಕರತಲಾಸ್ಫಾಲನೈರಶ್ವಾಸ್ಯ ಪೋಷಣೀಯೌ ತಾವಶ್ವೌ ಯುವಸ್ವ। ಸಂಗ್ರಾಮೇಷು ಶತ್ರುವಧಾರ್ಥಂ ಮಿಶ್ರಯ। ಯದ್ವಾ ಅಸ್ಮದ್ಯಜ್ಞೇಷು ಸಂಮಿಶ್ರಯ। ತಾಭ್ಯಾಂ ಯುಕ್ತಃ ಸನ್ ಯಜ್ಞಂ ಪ್ರತ್ಯಾಗಚ್ಛೇತ್ಯರ್ಥಃ। ಹೇ ವಾಯೋ ಆದನಂತರಂ ನೋಽಸ್ಮದೀಯಂ ಮಧು ಮದಕರಂ ಸೋಮಂ ತ್ವಂ ಪಿಬ। ಅತ ಏವಾಸ್ಮಾಕಂ ಯಜ್ಞೇಷು ಸವನಾ ತ್ರಿಷು ಸವನೇಷ್ವಾ ಗಹಿ। ಸೋಮಪಾನಾರ್ಥಮಾಗಚ್ಛ ॥**

॥ ಪ್ರತಿಪದಾರ್ಥ ॥

**ವಾಯೋ**—ಎಲೈ ವಾಯುವೇ । **ರಥಸಹಾ**—ನಿನ್ನ ರಥವನ್ನು ವಹಿಸಲು ಯೋಗ್ಯವಾದ ಅಶ್ವಗಳನ್ನು । **ತ್ವಂ**—ನೀನು । **ಯುಂಕ್ಷ್ವ**—ರಥಕ್ಕೆ ಯೋಜಿಸು । **ವಸೋ**—ಶತ್ರುಧರ್ಷಕನಾದ ಎಲೈ ವಾಯುವೇ । **ಪೋಷ್ಯಾ**—ನಿನ್ನ ಪೋಷಣೆಗೆ ಅರ್ಹವಾದ ಅಶ್ವಗಳನ್ನು । **ಯುವಸ್ವ**—ನಮ್ಮ ಯಜ್ಞಗೃಹಗಳಲ್ಲಿ ಸೇರಿಸು । **ಅತ್**—ಅನಂತರ । **ನಃ**—ನಮ್ಮಿಂದ ಅರ್ಪಿತವಾದ । **ಮಧು**—ಮಧುಕರವಾದ ಸೋಮವನ್ನು । **ಪಿಬ**—ಪಾನಮಾಡು । **ಅಸ್ಮಾಕಂ**—ನಮ್ಮ ಯಜ್ಞಗಳಲ್ಲಿ । **ಸವನಾ**—ಮೂರು ಯಜ್ಞಕಾಲಗಳಲ್ಲಿಯೂ । **ಆ ಗಹಿ**—ಸೋಮಪಾನಾರ್ಥವಾಗಿ ದಯಮಾಡು.

॥ ಭಾವಾರ್ಥ ॥

ಎಲೈ ವಾಯುವೇ, ನಿನ್ನ ರಥವನ್ನು ವಹಿಸಲು ಯೋಗ್ಯವಾದ ಅಶ್ವಗಳನ್ನು ನೀನು ರಥಕ್ಕೆ ಯೋಜಿಸು. ಶತ್ರುಧರ್ಷಕನಾದ ಎಲೈ ವಾಯುವೇ, ನಿನ್ನ ಪೋಷಣೆಗೆ ಅರ್ಹವಾದ ಅಶ್ವಗಳನ್ನು ನಮ್ಮ ಯಜ್ಞಗೃಹಗಳಲ್ಲಿ ಸೇರಿಸು. ಅನಂತರ ನಮ್ಮಿಂದ ಅರ್ಪಿತವಾದುದೂ, ಮಧುಕರವಾದುದೂ ಆದ ಈ ಸೋಮವನ್ನು ಪಾನಮಾಡು. ನಮ್ಮ ಯಜ್ಞಗಳಲ್ಲಿ ಮೂರು ಯಜ್ಞಕಾಲಗಳಲ್ಲಿಯೂ ಸೋಮಪಾನಾರ್ಥವಾಗಿ ದಯಮಾಡು.

English Translation.

Yoke your chariot-drawing horses, Vayu; bring them, Vasu, encouraged (to the sacrifice); then drink our Soma; come to our daily libations.

॥ ಸಂಹಿತಾಪಾಠಃ ॥

ತವ ವಾಯವೃತಸ್ಪತೇ ತ್ವಷ್ಟುರ್ಜಾಮಾತರದ್ಭುತ ।
ಅವಾಂಸ್ಯಾ ವೃಣೀಮಹೇ ॥ ೨೧ ॥

॥ ಪದಪಾಠಃ ॥

ತವ । ವಾಯೋ ಇತಿ । ಋತಃऽಪತೇ । ತ್ವಷ್ಟುಃ । ಜಾಮಾತಃ । ಅದ್ಭುತ ।
ಅವಾಂಸಿ । ಆ । ವೃಣೀಮಹೇ ॥ ೨೧ ॥

॥ ಸಾಯಣಭಾಷ್ಯಂ ॥

**ವಾಯವ್ಯೇ ಪಶೌ ವಪಾಯಾಸ್ತವ ವಾಯವಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಪ್ರ ವಾಯುಮಚ್ಛಾ ಬೃಹತೀ ಮನೀಷಾ ತವ ವಾಯವೃತಸ್ಪತೇ । ಆ. ೩-೮ । ಇತಿ ॥**

ಹೇ ಋತಸ್ಪತೇ ಋತಪತೇ ಯಜ್ಞಾನಾಂ ಪತೇ || ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಂ ಸುಕ್ | ಕಾ. ೭-೧-೩೯-೪ | ಇತಿ ಸುಗಾಗಮಃ || ತ್ವಷ್ಟುರ್ಜಾಮಾತರ್ಬ್ರಹ್ಮಣೋ ಜಾಮಾತಃ | ವಿಷಾ ಕಥೇತಿಹಾಸಾದಿಭಿರವಗಂತವ್ಯಾ | ತಾದೃಶಾದ್ಭುತ ಮಹನ್ ವಿಚಿತ್ರಕರ್ಮನ್ ಹೇ ವಾಯೋ ತವ ತ್ವದೀಯಾನ್ಯವಾಂಸಿ ಪಾಲನಾನ್ಯಾ ವೃಣೀಮಹೇ | ವಯಮಸ್ಮಿನ್ಪಶುಯಾಗೇ ಸಂಭಜಾಮಹೇ ||

|| ಪ್ರತಿಪದಾರ್ಥ ||

**ಋತಸ್ಪತೇ**—ಯಜ್ಞಪಾಲಕನೂ | **ತ್ವಷ್ಟುಃ**—ತ್ವಷ್ಟೃವಿಗೆ | **ಜಾಮಾತಃ**—ಅಳಿಯನೂ | **ಅದ್ಭುತ**—ಅದ್ಭುತವಾದ ಪರಾಕ್ರಮವುಳ್ಳವನೂ ಆದ | **ವಾಯೋ**—ಎಲೈ ವಾಯುವೇ | **ತವ**—ನಿನ್ನ | **ಅವಾಂಸಿ**—ರಕ್ಷಣೆಗಳನ್ನು | **ಆ ವೃಣೀಮಹೇ**—ಬೇಡುತ್ತೇವೆ.

|| ಭಾವಾರ್ಥ ||

ಯಜ್ಞಪಾಲಕನೂ, ತ್ವಷ್ಟೃವಿಗೆ ಅಳಿಯನೂ, ಅದ್ಭುತವಾದ ಪರಾಕ್ರಮವುಳ್ಳವನೂ ಆದ ಎಲೈ ವಾಯುವೇ ನಿನ್ನ ರಕ್ಷಣೆಗಳನ್ನು ನಾವು ಬೇಡುತ್ತೇವೆ.

English Translation.

We solicit your protection, Vayu, lord of sacrifice, wonderful son-in-law of Twashtri.

|| ವಿಶೇಷವಿಷಯಗಳು ||

ವಾಯುದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದ ವಪಾಹೋಮದಲ್ಲಿ **ತವ ವಯೋ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ವಾಯುಮಚ್ಛಾ ಬೃಹತೀ ಮನೀಷಾ ತವ ವಾಯವೃತಸ್ಪತೇ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

| ಸಂಹಿತಾಪಾಠಃ |

ತ್ವಷ್ಟುರ್ಜಾಮಾತರಂ ವಯಮೀಶಾನಂ ರಾಯ ಈಮಹೇ |
ಸುತಾವಂತೋ ವಾಯುಂ ದ್ಯುಮ್ನಾ ಜನಾಸಃ || ೨೨ ||

| ಪದಪಾಠಃ |

ತ್ವಷ್ಟುಃ | ಜಾಮಾತರಂ | ವಯಂ | ಈಶಾನಂ | ರಾಯಃ | ಈಮಹೇ |
ಸುತಽವಂತಃ | ವಾಯುಂ | ದ್ಯುಮ್ನಾ | ಜನಾಸಃ || ೨೨ ||

॥ ಸಾಯಣಭಾಷ್ಯಂ ॥

ಇಮೇ ಜನಾಸೋ ಜನಾ ವಯಂ ತ್ವಷ್ಟುರ್ಬ್ರಹ್ಮಣೋ ಜಾಮಾತರಮೀಶಾನಂ ಸರ್ವಸ್ಯೇಶ್ವರಂ ಚೈತಾದೃಶಂ ವಾಯುಂ ಸುತವಂತೋಽಭಿಷುತಸೋಮಾ ರಾಯೋ ಧನಮೀಮಹೇ। ಯಾಚಾಮಹೇ। ತೇನ ದತ್ತೇನ ವಯಂ ದ್ಯುಮ್ನಾ ಧನವಂತಃ ಸ್ಯಾಮೇತಿ ಶೇಷಃ ॥

॥ ಪ್ರತಿಪದಾರ್ಥ ॥

ಸುತವಂತಃ—ಹಿಂಡಿ ಅರ್ಪಿಸುವ ಸೋಮವುಳ್ಳವರಾದ | ಜನಾಸಃ ವಯಂ—ಯಜ್ಞಕರ್ತರಾದ ನಾವು | ತ್ವಷ್ಟುಃ—ಬ್ರಹ್ಮನಿಗೆ | ಜಾಮಾತರಂ—ಅಳಿಯನೂ | ಈಶಾನಂ—ಸರ್ವರಿಗೂ ಒಡೆಯನೂ ಆದ | ವಾಯುಂ—ವಾಯುದೇವನಿಂದ | ರಾಯಃ—ಧನವನ್ನು | ಈ ಮಹೇ—ಯಾಚಿಸುತ್ತೇವೆ | ದ್ಯುಮ್ನಾ—ಪ್ರಕಾಶಮಾನವಾದ ಧನವನ್ನು ನಾವು ಹೊಂದುವಂತಾಗಲಿ.

॥ ಭಾವಾರ್ಥ ॥

ಹಿಂಡಿ ಅರ್ಪಿಸಲು ಸಿದ್ಧವಾಗಿರುವ ಸೋಮವನ್ನು ಹೊಂದಿರುವವರೂ, ಯಜ್ಞಕರ್ತರೂ ಆದ ನಾವು ಬ್ರಹ್ಮನಿಗೆ ಅಳಿಯನೂ, ಸರ್ವರಿಗೂ ಒಡೆಯನೂ ಆದ ವಾಯುದೇವನಿಂದ ಧನವನ್ನು ಯಾಚಿಸುತ್ತೇವೆ. ನಾವು ಪ್ರಕಾಶಮಾನವಾದ ಧನವನ್ನು ಹೊಂದುವಂತಾಗಲಿ.

English Translation.

We, the offerers of Soma, solicit riches from the sovereign, the son-in-law of Twashtri ; (may we become) wealthy.

॥ ಸಂಹಿತಾಪಾಠಃ ॥

ವಾಯೋ ಯಾಹಿ ಶಿವಾ ದಿವೋ ವಹಸ್ವಾ ಸು ಸ್ವಶ್ವ್ಯಂ ।
ವಹಸ್ವ ಮಹಃ ಪೃಥುಪಕ್ಷಸಾ ರಥೇ ॥ ೨೩ ॥

॥ ಪದಪಾಠಃ ॥

ವಾಯೋ ಇತಿ । ಯಾಹಿ । ಶಿವ । ಆ । ದಿವಃ । ವಹಸ್ವ । ಸು । ಸುಽಅಶ್ವ್ಯಂ ।
ವಹಸ್ವ । ಮಹಃ । ಪೃಥುಽಪಕ್ಷಸಾ । ರಥೇ ॥ ೨೩ ॥

॥ ಸಾಯಣಭಾಷ್ಯಂ ॥

ವಾಯವ್ಯತೃಚೇ ವಾಯೋ ಯಾಹಿ ಶಿವಾ ದಿವ ಇತ್ಯಾದಿಕೇ ದ್ವೇ ಋಚೌ ದ್ವಿತೀಯಾತೃತೀಯೇ। ಸೂತ್ರಿತಂ ಚ । ವಾಯೋ ಯಾಹಿ ಶಿವಾ ದಿವ ಇತಿ ದ್ವೇ । ಆ. ೭-೧೦ । ಇತಿ ॥

ಹೇ ವಾಯೋ ದಿವೋ ದ್ಯುಲೋಕಸ್ಯ ಶಿವ ॥ ಸುಪಾಂ ಸುಲುಗಿತಿ ದ್ವಿತೀಯಾಯಾ ಲುಕ್ ॥ ಶಿವಂ ಕಲ್ಯಾಣಮಾ ಯಾಹಿ। ಆಪ್ರಾಪಯ। ಸರ್ವಜ್ಯೋತಿಷಾಂ ತ್ವದಾಧಾರತ್ವಾತ್ತೇಷಾಮಾಧಾರೋ ಭೂತ್ವಾ ದ್ಯುಲೋಕೇ ತಾನಿ ಸ್ಥಾಪಯೇತಿ ಪ್ರಾರ್ಥಯತೇ। ತತಸ್ತ್ವಂ ಸ್ವಶ್ವ್ಯಂ। ಅಶ್ವಾನಾಂ ಸಂಘೋಽಶ್ವ್ಯಃ। ಶೋಭನಾಶ್ವಸಂಘಂ ರಥಂ ಸು ಸುಷ್ಠು ವಹಸ್ವ। ಸರ್ವತೋ ದಿಕ್ಷು ಪ್ರಾಪಯ। ಇದಾನೀಂ ತೇಭ್ಯೋಽಪಿ ಸಮರ್ಥಾನಶ್ವಾನಾವಹ। ಮಹೋ ಮಹಾಂಸ್ತ್ವಂ ಪೃಥುಪಕ್ಷಸಾ ಪೃಥು-ಪಾರ್ಶ್ವದ್ವಯಯುಕ್ತಾವಶ್ವೌ ರಥೇ ಸ್ವಕೀಯೇ ವಹಸ್ವ। ಶತ್ರುಹನನಾರ್ಥಂ ಸಂಯೋಜಯ ॥

॥ ಪ್ರತಿಪದಾರ್ಥ ॥

**ವಾಯೋಃ**—ಎಲೈ ವಾಯುವೇ। **ದಿವಃ**—ದ್ಯುಲೋಕದಲ್ಲಿ। **ಶಿವ**—ಕಲ್ಯಾಣವನ್ನು। **ಆ ಯಾಹಿ**—ಸ್ಥಾಪಿಸು। **ಸ್ವಶ್ವ್ಯಂ**—ನಿನ್ನ ಉತ್ತಮವಾದ ಅಶ್ವವನ್ನು। **ಸು**—ಅತಿಶಯವಾಗಿ। **ವಹಸ್ವ**—ದಿಕ್ಕುಗಳಲ್ಲೆಲ್ಲಾ ಸಂಚರಿಸುವಂತೆ ಮಾಡು। **ಮಹಃ**—ಮಹತ್ವವುಳ್ಳ ನೀನು। **ಪೃಥು**—ವಿಸ್ತೃತವಾದ ಪಕ್ಷಗಳುಳ್ಳ ನಿನ್ನ ಅಶ್ವಗಳನ್ನು। **ರಥೇ**—ನಿನ್ನ ರಥಕ್ಕೆ। **ವಹಸ್ವ**—ಯೋಜಿಸು.

॥ ಭಾವಾರ್ಥ ॥

ಎಲೈ ವಾಯುವೇ, ದ್ಯುಲೋಕದಲ್ಲಿ ಕಲ್ಯಾಣವನ್ನು ಸ್ಥಾಪಿಸು. ನಿನ್ನ ಉತ್ತಮವಾದ ಅಶ್ವವನ್ನು ಅತಿಶಯವಾಗಿ ದಿಕ್ಕುಗಳಲ್ಲೆಲ್ಲಾ ಸಂಚರಿಸುವಂತೆ ಮಾಡು. ಮಹತ್ವವುಳ್ಳ ನೀನು ವಿಸ್ತೃತವಾದ ಪಕ್ಷಗಳುಳ್ಳ ನಿನ್ನ ಅಶ್ವಗಳನ್ನು ನಿನ್ನ ರಥಕ್ಕೆ ಯೋಜಿಸು.

## English Translation.

Establish, Vayu, happiness in heaven ; bear quickly your well-horsed (chariot) ; do you, who are mighty, yoke the broad-flanked (horses) to the car.

॥ ವಿಶೇಷವಿಷಯಗಳು ॥

**ವಾಯೋ ಯಾಹಿ ಶಿವಾ ದಿವಃ** ಎಂಬ ಈ ಋಕ್ಕನ್ನೂ, ಇದರ ಮುಂದಿನ ಋಕ್ಕನ್ನೂ ವಾಯವ್ಯತೃಚದಲ್ಲಿ (ವಾಯುದೇವತಾಕವಾದ ಮೂರು ಋಕ್ಕುಗಳಲ್ಲಿ) ಎರಡನೆಯ ಮತ್ತು ಮೂರನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ [**ವಾಯೋ ಯಾಹಿ ಶಿವಾ ದಿವ ಇತಿ ದ್ವೇ** ಎಂಬ ಸೂತ್ರದಿಂದ (ಆ. ೭-೧೦) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ತ್ವಾಂ ಹಿ ಸುಪ್ಸರಸ್ತಮಂ ನೃಷದನೇಷು ಹೂಮಹೇ।
ಗ್ರಾವಾಣಂ ನಾಶ್ವಪೃಷ್ಠಂ ಮಂಹನಾ ॥ ೨೪ ॥

॥ ಪದಪಾಠಃ ॥

ತ್ವಾಂ । ಹಿ । ಸುಪ್ಸರಃಽತಮಂ । ನೃಽಸದನೇಷು । ಹೂಮಹೇ ।

ಗ್ರಾವಾಣಂ । ನ । ಅಶ್ವಽಪೃಷ್ಠಂ । ಮಂಹನಾ ॥ ೨೪ ॥

॥ ಸಾಯಣಭಾಷ್ಯಂ ॥

ವಾಯವ್ಯೇ ಪಶೌ ಪುರೋಡಾಶಹವಿಷೋಸ್ತ್ವಾಂ ಹಿ ಸುಪ್ಸರಸ್ತಮಮಿತಿ ದ್ವೇ ಅನುವಾಕ್ಯೇ । ಸೂತ್ರಿತಂ ಚ । ತ್ವಾಂ ಹಿ ಸುಪ್ಸರಸ್ತಮಮಿತಿ ದ್ವೇ ಕುವಿದಂಗ ನಮಸಾ ಯೇ ವೃಧಾಸಃ । ಆ. ೩-೮। ಇತಿ॥

ಹೇ ವಾಯೋ ಸುಪ್ಸರಸ್ತಮಂ । ಸುಪ್ಸ ಇತಿ ರೂಪನಾಮ ॥ ರೋ ಮತ್ವರ್ಥೀಯಃ ॥ ಅತಿಶಯೇನ ಶೋಭನರೂಪವಂತಂ ಮಂಹನಾ ಸ್ವಕೀಯೇನ ಮಹತ್ತ್ವೇನಾಶ್ವಪೃಷ್ಠಂ ಸರ್ವತೋ ವ್ಯಾಪ್ತಪೃಷ್ಠಂ । ಪೃಷ್ಠಶಬ್ದಃ ಸರ್ವಾಂಗಂ ಲಕ್ಷಯತಿ । ವ್ಯಾಪ್ತಕೃತ್ಸ್ನಾಂಗಮಿತ್ಯರ್ಥಃ । ತ್ವಾಂ । ಹಿರವಧಾರಣೇ । ತ್ವಾಮೇವ ನೃಷದನೇಷು ನೃಸದನೇಷು । ನರೋಽಧ್ವರಸ್ಯ ನೇತಾರ ಋತ್ವಿಜೋಽತ್ರ ಸೀದಂತೀತಿ ನೃಷದನಾ ಯಜ್ಞಾಃ । ತೇಷು ಹೂಮಹೇ । ವಯಮಾಹ್ವಯಾಮಃ । ಕಥಮಿವ । ಗ್ರಾವಾಣಂ ನ । ಯಥಾ ಸೋಮಾಭಿಷವಾರ್ಥಂ ಗ್ರಾವಾಣಂ ಸ್ತುತಿಭಿರಾಹ್ವಯಂತಿ ತದ್ವತ್ತ್ವಾಂ ಸ್ತುತಿಭಿರಾಹ್ವಯಾಮಃ ॥

॥ ಪ್ರತಿಪದಾರ್ಥ ॥

(ಎಲೈ ವಾಯುವೇ) **ಸುಪ್ಸರಸ್ತಮಂ**—ಅತ್ಯಂತ ಮನೋಹರವಾದ ರೂಪವುಳ್ಳವನೂ । **ಮಂಹನಾ**—ಸ್ವಮಾಹಾತ್ಮ್ಯದಿಂದ । **ಅಶ್ವಪೃಷ್ಠಂ**—ಸರ್ವತ್ರ ವ್ಯಾಪಿಸಿರುವ ಅವಯವಗಳುಳ್ಳವನೂ ಆದ । **ತ್ವಾ ಹಿ**—ನಿನ್ನನ್ನೇ । **ನೃಷದನೇಷು**—ಯಜ್ಞಗೃಹಗಳಲ್ಲಿ । **ಗ್ರಾವಾಣಂ ನ**—ಸೋಮವನ್ನು ಹಿಂಡುವ ಕಲ್ಲುಗಳನ್ನು ಪ್ರಾರ್ಥಿಸಿ ಕರೆಯುವಂತೆ । **ಹೂಮಹೇ**—ನಾವು ಸ್ತುತಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ವಾಯುವೇ, ಅತ್ಯಂತ ಮನೋಹರವಾದ ರೂಪವುಳ್ಳವನೂ, ಸ್ವಮಾಹಾತ್ಮ್ಯದಿಂದ ಸರ್ವತ್ರ ವ್ಯಾಪಿಸಿರುವ ಅವಯವಗಳುಳ್ಳವನೂ ಆದ ನಿನ್ನನ್ನೇ ಯಜ್ಞಗೃಹಗಳಲ್ಲಿ ಸೋಮವನ್ನು ಹಿಂಡುವ ಕಲ್ಲುಗಳನ್ನು ಪ್ರಾರ್ಥಿಸಿ ಕರೆಯುವಂತೆ ನಾವು ಸ್ತುತಿಸಿ ಕರೆಯುತ್ತೇವೆ.

## English Translation.

We invoke you who are of graceful form, extending through your magnitude your limbs in all directions, to our religious rites, like the stone (for bruising the Soma.)

॥ ವಿಶೇಷವಿಷಯಗಳು ॥

**ತ್ವಾಂ ಹಿ ಸುಪ್ಸರಸ್ತಮಂ** ಎಂಬ ಈ ಋಕ್ಕನ್ನೂ ಇದರ ಮುಂದಿನ ಋಕ್ಕನ್ನೂ ವಾಯುದೇವತಾಕವಾದ ಪಶುಯಾಗದಲ್ಲಿ ಪುರೋಡಾಶ ಮತ್ತು ಹವಿಸ್ಸನ್ನು ಹೋಮ ಮಾಡುವಾಗ ಕ್ರಮವಾಗಿ ಅನುವಾಕ್ಯಾಮಂತ್ರಗಳನ್ನಾಗಿ

ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ವಾಂ ಹಿ ಸುಪ್ಸರಸ್ತಮಮಿತಿ ದ್ವೇ ಕುವಿದಂಗ ನಮಸಾ ಯೇ ವೃಧಾಸಃ** ಎಂಬ ಸೂತ್ರದಿಂದ ಆ. ೩-೮) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಸ ತ್ವಂ ನೋ ದೇವ ಮನಸಾ ವಾಯೋ ಮಂದಾನೋ ಅಗ್ರಿಯಃ ।
ಕೃಧಿ ವಾಜಾಁ ಅಪೋ ಧಿಯಃ ॥ ೨೫ ॥

॥ ಪದಪಾಠಃ ॥

ಸಃ । ತ್ವಂ । ನಃ । ದೇವ । ಮನಸಾ । ವಾಯೋ ಇತಿ । ಮಂದಾನಃ । ಅಗ್ರಿಯಃ ।
ಕೃಧಿ । ವಾಜಾನ್ । ಅಪಃ । ಧಿಯಃ ॥ ೨೫ ॥

॥ ಸಾಯಣಭಾಷ್ಯಂ ॥

**ಶುನಾಸೀರೀಯೇ ಸ ತ್ವಂ ನೋ ದೇವೇತ್ಯೇಷಾ ವಾಯೋರನುವಾಕ್ಯಾ । ಸೂತ್ರಿತಂ ಚ । ಸ ತ್ವಂ ನೋ ದೇವ ಮನಸೇಶಾನಾಯ ಪ್ರಹುತಿಂ ಯಸ್ತ ಆನಟ್ । ಆ. ೨-೨೦ । ಇತಿ ॥**

**ಹೇ ದೇವ ದ್ಯೋತಮಾನ ಯದ್ವಾ ಸ್ತೋತವ್ಯ ವಾಯೋ ಅಗ್ರಿಯೋ ದೇವಾನಾಂ ಮಧ್ಯೇ ಮುಖ್ಯೋಽಗ್ರತೋ ಗಂತಾಸಿ । ತಾದೃಶಸ್ತ್ವಂ ಮನಸಾ ಮಂದಾನೋ ಮಂದಮಾನಃ ಸ್ವಯಮೇವ ಮೋದಮಾನಃ ಸನ್ನೋಽಸ್ಮಾಕಂ ವಾಜಾನನ್ನಾನ್ಯಪೋ ಮೇಘಭೇದನೇನೋದಕಾನಿ ಚ ಉಭಯಸ್ಮಿಂಸ್ತ್ವಯಾ ಪ್ರದತ್ತೇ ಸತಿ ಧಿಯೋಽಗ್ನಿಹೋತ್ರಾದಿಕರ್ಮಾಣಿ ಚ ಕೃಧಿ । ಕುರು । ಕಾರಯೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ದೇವ**—ಪ್ರಕಾಶಮಾನನಾದ । **ವಾಯೋ**—ಎಲೈ ವಾಯುವೇ । **ಅಗ್ರಿಯಃ**—ದೇವತೆಗಳಲ್ಲೆಲ್ಲಾ ಮುಖ್ಯನಾದ । **ಸಃ ತ್ವಂ**—ಪ್ರಸಿದ್ಧನಾದ ನೀನು । **ಮನಸಾ**—ನಿನ್ನ ಮನಸ್ಸಿನಲ್ಲಿಯೇ । **ಮಂದಾನಃ**—ಹರ್ಷವನ್ನನುಭವಿಸುತ್ತಾ । **ನಃ**—ನಮಗೆ । **ವಾಜಾನ್**—ಅನ್ನಗಳನ್ನೂ । **ಅಪಃ**—ವೃಷ್ಟ್ಯುದಕಗಳನ್ನೂ ಕೊಡುತ್ತಾ । **ಧಿಯಃ**—ನಮ್ಮ ಯಜ್ಞಕರ್ಮಗಳನ್ನು । **ಕೃಧಿ**—ಸಾರ್ಥಕವಾಗುವಂತೆ ಮಾಡು.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ವಾಯುವೇ, ದೇವತೆಗಳಲ್ಲೆಲ್ಲಾ ಪ್ರಸಿದ್ಧನೂ ಮುಖ್ಯನೂ ಆದ ನೀನು ನಿನ್ನ ಮನಸ್ಸಿನಲ್ಲಿಯೇ ಹರ್ಷವನ್ನನುಭವಿಸುತ್ತಾ ನಮಗೆ ಅನ್ನಗಳನ್ನೂ ವೃಷ್ಟ್ಯುದಕಗಳನ್ನೂ ಕೊಡುತ್ತಾ ನಮ್ಮ ಯಜ್ಞಕರ್ಮಗಳು ಸಫಲವಾಗುವಂತೆ ಮಾಡು.

## English Translation.

Divine Vayu, foremost (of the gods), exulting in your own mind, cause our rites to be productive of food and water.

|| ವಿಶೇಷವಿಷಯಗಳು ||

**ಶುನಾಸೀರೀಯ**ವೆಂಬ ಇಷ್ಟಿಯಲ್ಲಿ **ಸ ತ್ವಂ ನೋ ದೇವ** ಎಂಬ ಈ ಋಕ್ಕನ್ನು ವಾಯುದೇವತಾಕವಾದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಸ ತ್ವಂ ದೇವ ಮನಸೇಶಾನಾಯ ಪ್ರಹುತಿಂ ಯಸ್ತ ಆನಟ್** ಎಂಬ ಸೂತ್ರದಿಂದ (ಆ ೨-೨೦) ವಿವೃತವಾಗಿರುವುದು.

# ಇಪ್ಪತ್ತೇಳನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅಗ್ನಿರುಕ್ಥೇ ಇತಿ ದ್ವಾವಿಂಶತ್ಯೃಚಂ ಸಪ್ತಮಂ ಸೂಕ್ತಂ । ಅತ್ರಾನುಕ್ರಮಣಿಕಾ । ಅಗ್ನಿರುಕ್ಥೇ ದ್ವ್ಯಧಿಕಾ ಮನುರ್ವೈವಸ್ವತೋ ವೈಶ್ವದೇವಂ ಹ ಪ್ರಾಗಾಥಮಿತಿ । ವಿವಸ್ವತಃ ಪುತ್ರೋ ಮನುರ್ಋಷಿಃ । ಪ್ರಥಮಾತೃತೀಯಾದ್ಯಯುಜೋ ಬೃಹತ್ಯೋ ದ್ವಿತೀಯಾಚತುರ್ಥ್ಯಾದಿಯುಜಃ ಸತೋಬೃಹತ್ಯಃ । ಇದಮಾದೀನಾಂ ಚತುರ್ಣಾಂ ಸೂಕ್ತಾನಾಂ ವಿಶ್ವೇ ದೇವಾ ದೇವತಾ ।। ಸೂಕ್ತವಿನಿಯೋಗೋ ಲೈಂಗಿಕಃ ।।**

ಅನುವಾದವು—**ಅಗ್ನಿರುಕ್ಥೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಅಗ್ನಿರುಕ್ಥೇ ದ್ವ್ಯಧಿಕಾ ಮನುರ್ವೈವಸ್ವತೋ ವೈಶ್ವದೇವಂ** ಹ **ಪ್ರಾಗಾಥಂ** ಎಂದು ಹೇಳಿರುವುದು. ಈ ಸೂಕ್ತಕ್ಕೆ ವಿವಸ್ವಾನ್ ಎಂಬ ಋಷಿಯ ಪುತ್ರನಾದ ಮನುವು ಋಷಿಯು; ಈ ಸೂಕ್ತಕ್ಕೂ ಮುಂದಿನ ಮೂರು ಸೂಕ್ತಗಳಿಗೂ ವಿಶ್ವೇದೇವತೆಗಳು ದೇವತೆಯು; ಈ ಸೂಕ್ತದಲ್ಲಿ ಒಂದು, ಮೂರು ಮೊದಲಾದ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು; ಎರಡು, ನಾಲ್ಕು ಮೊದಲಾದ ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೨೭

ಮಂಡಲ—೮ || ಅನುವಾಕ—೪ || ಸೂಕ್ತ—೨೭ ||
ಅಷ್ಟಕ—೬ || ಅಧ್ಯಾಯ—೨ || ವರ್ಗ—೩೧, ೩೨, ೩೩, ೩೪ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ||
|| ಋಷಿಃ—ಮನುರ್ವೈವಸ್ವತಃ ||
|| ದೇವತಾ—ವಿಶ್ವೇ ದೇವಾಃ ||
|| ಛಂದಃ—ಪ್ರಾಗಾಥಂ (ಯುಜಃ ಬೃಹತ್ಯಃ ಅಯುಜಃ ಸತೋಬೃಹತ್ಯಃ ||

|| ಸಂಹಿತಾಪಾಠಃ ||

ಅಗ್ನಿರುಕ್ಥೇ ಪುರೋಹಿತೋ ಗ್ರಾವಾಣೋ ಬರ್ಹಿರಧ್ವರೇ ।
ಋಚಾ ಯಾಮಿ ಮರುತೋ ಬ್ರಹ್ಮಣಸ್ಪತಿಂ ದೇವಾँ ಅವೋ ವರೇಣ್ಯಂ ||

॥ ಪದಪಾಠಃ ॥

ಅಗ್ನಿಃ । ಉಕ್ಥೇ । ಪುರಃऽಹಿತಃ । ಗ್ರಾವಾಣಃ । ಬರ್ಹಿಃ । ಅಧ್ವರೇ ।

ಋಚಾ । ಯಾಮಿ । ಮರುತಃ । ಬ್ರಹ್ಮಣಃ । ಪತಿಂ । ದೇವಾನ್ । ಅವಃ । ವರೇಣ್ಯಂ ॥ ೧ ॥

॥ ಸಾಯಣಭಾಷ್ಯಂ ॥

ಮನುಃ ಪ್ರಾರ್ಥಯತೇ । ಉಕ್ಥ್ಯೇ ಸ್ತೋತ್ರಶಸ್ತ್ರಾತ್ಮಕೇಽಧ್ವರೇ ಹಿಂಸಾರಹಿತೇಽಸ್ಮಿನ್ಯಜ್ಞೇಽಗ್ನಿಃ ಪುರೋಹಿತೋ ಯಜ್ಞಾರ್ಥಂ ಪುರತ ಉತ್ತರವೇದ್ಯಾಮೃತ್ವಿಗ್ಭಿರ್ನಿಹಿತೋಽಭೂತ್ । ತಥಾ ಗ್ರಾವಾಣಶ್ಚ ಸೋಮಾಭಿಷವಾರ್ಥಂ ಪುರತೋ ನಿಹಿತಾಃ । ಬರ್ಹಿಶ್ಚ ಪುರತೋ ನಿಹಿತಮಾಸಾದಿತಂ । ಏವಂ ಸಾಮಗ್ರ್ಯಂ ಸತ್ಯಾಂ ಮರುತ ಏಕೋನಪಂಚಾಶನ್ಮರುದ್ಗಣಾನ್ ಬ್ರಹ್ಮಣಸ್ಪತಿಂ ಸ್ತೋತ್ರಸ್ಯ ಪಾಲಯಿತಾರಮೇತನ್ನಾಮಕಂ ದೇವಂ ದೇವಾನಿಂದ್ರಾದೀಂಶ್ಚ ಏತಾನ್ ಸರ್ವಾನ್ದೇವಾನ್ವರೇಣ್ಯಂ ವರಣೀಯಂ ಭಜನೀಯಮವೋ ರಕ್ಷಣಮೃಚಾ ಸೂಕ್ತರೂಪಯಾ ಸ್ತುತ್ಯಾ ಯಾಮಿ । ಮನುರಹಂ ಯಾಚಾಮಿ ॥ ಯಾಚತೇರ್ಲಟಿ ರೂಪಂ । ವರ್ಣಲೋಪಶ್ಛಾಂದಸಃ ॥

॥ ಪ್ರತಿಪದಾರ್ಥ ॥

**ಉಕ್ಥೇ**—ಸ್ತೋತ್ರ ಮತ್ತು ಶಸ್ತ್ರಮಂತ್ರಗಳಿಂದ ಕೂಡಿದ । **ಅಧ್ವರೇ**—ಯಜ್ಞದಲ್ಲಿ । **ಅಗ್ನಿಃ**—ಅಗ್ನಿಯು । **ಪುರೋಹಿತಃ**—ಪುರೋಹಿತನಾಗಿದ್ದಾನೆ । **ಗ್ರಾವಾಣಃ**—ಹಿಂಡುವ ಕಲ್ಲುಗಳೂ । **ಬರ್ಹಿಃ**—ದರ್ಭಾಸನವೂ ಕರ್ಮಕ್ಕೆ ಸಿದ್ಧವಾಗಿವೆ (ಈ ಸಾಮಗ್ರಿಗಳು ಸಿದ್ಧವಾಗಿರುವಾಗ) । **ಮರುತಃ**—ಮರುತ್ತುಗಳನ್ನೂ । **ಬ್ರಹ್ಮಣಸ್ಪತಿಂ**—ಬ್ರಹ್ಮಣಸ್ಪತಿಯನ್ನೂ । **ದೇವಾನ್**—ಇಂದ್ರಾದಿದೇವತೆಗಳನ್ನೂ । **ಋಚಾ**—ಸೂಕ್ತರೂಪವಾದ ಸ್ತುತಿಯಿಂದ ಪ್ರಾರ್ಥಿಸಿ । **ವರೇಣ್ಯಂ**—ಅತಿಶ್ರೇಷ್ಠವಾದ । **ಅವಃ**—ರಕ್ಷಣವನ್ನು । **ಯಾಮಿ**—ಪ್ರಾರ್ಥಿಸುತ್ತೇನೆ.

॥ ಭಾವಾರ್ಥ ॥

ಸ್ತೋತ್ರ ಮತ್ತು ಶಸ್ತ್ರಮಂತ್ರಗಳಿಂದ ಕೂಡಿದ ಯಜ್ಞದಲ್ಲಿ ಅಗ್ನಿಯು ಪುರೋಹಿತನಾಗಿದ್ದಾನೆ. ಸೋಮವನ್ನು ಹಿಂಡುವ ಕಲ್ಲುಗಳೂ ದರ್ಭಾಸನವೂ ಕರ್ಮಕ್ಕೆ ಸಿದ್ಧವಾಗಿವೆ. ಈ ಸಾಮಗ್ರಿಗಳು ಸಿದ್ಧವಾಗಿರುವಾಗ ಮರುತ್ತುಗಳನ್ನೂ, ಬ್ರಹ್ಮಣಸ್ಪತಿಯನ್ನೂ, ಇಂದ್ರಾದಿದೇವತೆಗಳನ್ನೂ ಸೂಕ್ತರೂಪವಾದ ಸ್ತುತಿಯಿಂದ ಪ್ರಾರ್ಥಿಸಿ ಅತಿಶ್ರೇಷ್ಠವಾದ ರಕ್ಷಣೆಯನ್ನು ಬೇಡುತ್ತೇನೆ.

## English Translation.

Agni is the Purohita at the sacaifice : the stones, the sacred grass (are prepared) for the ceremony. I invoke with the holy verse the Maruts, Brahmanaspati, and all the gods, for their desirable protection.

॥ ಸಂಹಿತಾಪಾಠಃ ॥

ಆ ಪಶುಂ ಗಾಸಿ ಪೃಥಿವೀಂ ವನಸ್ಪತೀನುಷಾಸಾ ನಕ್ತಮೋಷಧೀಃ ।

ವಿಶ್ವೇ ಚ ನೋ ವಸವೋ ವಿಶ್ವವೇದಸೋ ಧೀನಾಂ ಭೂತ ಪ್ರಾವಿತಾರಃ ॥

॥ ಪದಪಾಠಃ ॥

ಆ । ಪಶುಂ । ಗಾಸಿ । ಪೃಥಿವೀಂ । ವನಸ್ಪತೀನ್ । ಉಷಸಾ । ನಕ್ತಂ । ಓಷಧೀಃ ।

ವಿಶ್ವೇ । ಚ । ನಃ । ವಸವಃ । ವಿಶ್ವಽವೇದಸಃ । ಧೀನಾಂ । ಭೂತ । ಪ್ರಽಅವಿತಾರಃ ॥ ೨ ॥

॥ ಸಾಯಣಭಾಷ್ಯಂ ॥

ಪೂರ್ವಾರ್ಧರ್ಚೇಽಗ್ನಿಃ ಸಂಬೋಧ್ಯತೇ ಪಶ್ವಾದಿಶಬ್ದಸದ್ಭಾವಾತ್ । ಹೇ ಅಗ್ನೇ ನೋಽಸ್ಮದೀಯೋ ಯಜ್ಞೇ ಪಶುಮಗ್ನೀಷೋಮೀಯಂ ಪಶುಂ ಪ್ರತ್ಯಾ ಗಾಸಿ। ಆಗಚ್ಛಸಿ॥ ಗಾಙ್ ಗತೌ। ವ್ಯತ್ಯಯೇನ ಪರಸ್ಮೈಪದಂ॥ ತಥಾ ಪೃಥಿವೀಮಿದಂ ದೇವಸದನಂ ಪ್ರತಿ ಕಿಂಚ ವನಸ್ಪತೀನ್ ಮಥನಸಾಧನಾನರಣಿರೂಪಾನ್ವನಸ್ಪತೀನ್ಪ್ರತಿ ತಥೋಷಸಾ ಹೋತವ್ಯತ್ವೇನೋಷಃಕಾಲಂ ತಥಾ ನಕ್ತಂ ಯಷ್ಟವ್ಯತಯಾ ರಾತ್ರಿಂ ಚ ಪ್ರತಿ ಕಿಂಚೌಷಧೀಃ॥ ಉಷ ದಾಹೇಽತ್ರ ಮಾದನಕರ್ಮಾ॥ ಓಷಂತಿ ಮಾದ್ಯಂತ್ಯನೇನೇತ್ಯೋಷಃ ಸೋಮಃ। ಸ ಧೀಯತೇ ನಿಧೀಯತೇ ಯೇಷ್ವಿತ್ಯೋಷಧಯೋ ಗ್ರಾವಾಣಃ। ತಾನ್ಪ್ರತ್ಯಾಗಚ್ಛಸಿ। ಯದ್ವಾ। ಓಷಧಯಃ ಫಲಪಾಕಾಂತಾ ಲತಾಃ। ತಾಃ ಪ್ರತ್ಯಾಯಾಹಿ। ಅಥವಾ ಹೇ ಸ್ತೋತಃ ಪಶ್ವಾದೀ ನಾ ಗಾಸಿ। ಸಮಂತಾತ್ಸ್ತುಹಿ॥ ಕೈ ಗೈ ಶಬ್ದ ಇತಿ ಧಾತುಃ॥ ತತೋ ಹೇ ವಸವೋ ವಾಸಯಿತಾರೋ ವಿಶ್ವವೇದಸಃ ಸರ್ವಧನಾಃ ಸರ್ವಜ್ಞಾನಾ ವಾ ಹೇ ವಿಶ್ವೇ ಸರ್ವೇಽಪಿ ದೇವಾಃ ನೋಽಸ್ಮದೀಯಾನಾಂ ಕರ್ಮಣಾಂ ಪ್ರಾವಿತಾರೋ ಭೂತ। ಅನೇನಾಗ್ನಿನಾ ಸಹ ಯೂಯಂ ಪ್ರಕರ್ಷೇಣ ರಕ್ಷಕಾ ಭವತ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಪಶುಂ**—ಅಗ್ನೀಷೋಮೀಯವಾದ ಪಶುವಿಗಭಿಮುಖವಾಗಿ। **ಆ ಗಾಸಿ**—ದಯ ಮಾಡು। **ಪೃಥಿವೀಂ**—ಈ ಯಜ್ಞಭೂಮಿಗೂ। **ವನಸ್ಪತೀನ್**—ಅರಣಿರೂಪವಾದ ವನಸ್ಪತಿಗೂ। **ಓಷಧೀಃ**—ಸೋಮಕ್ಕೂ ಅಭಿಮುಖವಾಗಿ। **ಉಷಾಸಾ**—ಪ್ರಾತಃಕಾಲದಲ್ಲಿಯೂ। **ನಕ್ತಂ**—ರಾತ್ರಿಕಾಲದಲ್ಲಿಯೂ (ದಯ ಮಾಡು)। **ವಸವಃ**—ಧನದಾತರೂ। **ವಿಶ್ವವೇದಸಃ**—ಸರ್ವಜ್ಞರೂ ಆದ। **ವಿಶ್ವೇ ಚ**—ಎಲೈ ವಿಶ್ವೇದೇವತೆಗಳೇ। **ನಃ**—ನಮ್ಮ। **ಧೀನಾಂ**—ಕರ್ಮಗಳಿಗೆ। **ಪ್ರಾವಿತಾರಃ**—ಉತ್ತಮವಾದ ರಕ್ಷಕರಾಗಿ। **ಭೂತ**—ಆಗಿರಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಅಗ್ನಿಷೋಮೀಯವಾದ ಪಶುವಿಗಭಿಮುಖವಾಗಿಯೂ, ಈ ಯಜ್ಞಭೂಮಿಗೂ ಅರಣಿರೂಪವಾದ ವನಸ್ಪತಿಗೂ ಸೋಮಕ್ಕೂ ಅಭಿಮುಖವಾಗಿಯೂ, ಪ್ರಾತಃಕಾಲದಲ್ಲಿಯೂ, ರಾತ್ರಿಕಾಲದಲ್ಲಿಯೂ ದಯ ಮಾಡು. ಧನದಾತರೂ ಸರ್ವಜ್ಞರೂ ಆದ ಎಲೈ ವಿಶ್ವೇದೇವತೆಗಳೇ, ನಮ್ಮ ಕರ್ಮಗಳಿಗೆ ಉತ್ತಮವಾದ ರಕ್ಷಕರಾಗಿರಿ.

## English Translation.

You come (Agni), to the dwelling (of the worshipper), to the touch-wood, to the Soma, at dawn and the night: Universal deities, givers of wealth, knowing all things, be the defenders of our pious acts.

॥ ಸಂಹಿತಾಪಾಠಃ ॥

ಪ್ರ ಸೂ ನ ಏತಧ್ವರೋ೭ಗ್ನಾ ದೇವೇಷು ಪೂರ್ವ್ಯಃ ।
ಆದಿತ್ಯೇಷು ಪ್ರ ವರುಣೇ ಧೃತವ್ರತೇ ಮರುತ್ಸು ವಿಶ್ವಭಾನುಷು ॥ ೩ ॥

॥ ಪದಪಾಠಃ ॥

ಪ್ರ । ಸು । ನಃ । ಏತು । ಅಧ್ವರಃ । ಅಗ್ನಾ । ದೇವೇಷು । ಪೂರ್ವ್ಯಃ ।
ಆದಿತ್ಯೇಷು । ಪ್ರ । ವರುಣೇ । ಧೃತಽವ್ರತೇ । ಮರುತ್ಽಸು । ವಿಶ್ವಽಭಾನುಷು ॥ ೩ ॥

॥ ಸಾಯಣಭಾಷ್ಯಂ ॥

ಪೂರ್ವ್ಯಃ ಪುರಾತನಃ । ಪೂರ್ವಾನ್ ಪುರಾತನಾನಿಂದ್ರಾದೀನ್ ದೇವಾನ್ಪ್ರತಿ ಕ್ರಿಯಮಾಣತ್ವಾದ್ಯಜ್ಞೋ೭ಪಿ ಪೂರ್ವ್ಯ ಇತ್ಯುಚ್ಯತೇ । ತಾದೃಶೋ ಮುಖ್ಯೋ ನೋ೭ಸ್ಮದೀಯೋ೭ಧ್ವರೋ ಯಜ್ಞೋ೭ಗ್ನಾ ॥ ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ ॥ ಅಗ್ನೌ । ಅಗ್ನಿರ್ದೇವಾನಾಂ ಮುಖ್ಯತ್ವಾತ್ಪೃಥಮುಮಭಿಹಿತಃ । ತಸ್ಮಿನ್ನಗ್ನೌ ಸರ್ವೇಷ್ವನ್ಯೇಷು ದೇವೇಷು ಚ ಸು ಸುಷ್ಠು ಪ್ರೈತು । ಪ್ರಕರ್ಷೇಣ ಗಚ್ಛತು । ದೇವಾನ್ ವಿಶಿನಷ್ಟಿ । ಆದಿತ್ಯೇಷ್ವದಿತೇಃ ಪುತ್ರೇಷ್ವಿಂದ್ರಾದಿಷು ಧೃತವ್ರತೇ ಧೃತಕರ್ಮಣಿ ವರುಣೇ ಚ ವಿಶ್ವಭಾನುಷು ಸರ್ವತೋ ವ್ಯಾಪ್ತತೇಜಸ್ಕೇಷು ಮರುತ್ಸು ಚ ಪ್ರೈತು ॥

॥ ಪ್ರತಿಪದಾರ್ಥ ॥

ನಃ—ನಮ್ಮ । **ಪೂರ್ವ್ಯಃ**—ಪುರಾತನವೂ ಮುಖ್ಯವೂ ಆದ । **ಅಧ್ವರಃ**—ಯಜ್ಞವು । **ಅಗ್ನಾ**—ಅಗ್ನಿಗಭಿಮುಖವಾಗಿ । **ಸು**—ಉತ್ತಮರೀತಿಯಿಂದ । **ಪ್ರ ಏತು**—ಹೋಗಿ ಸೇರಲಿ । **ದೇವೇಷು**—ಉಳಿದ ದೇವತೆಗಳಲ್ಲಿಯೂ । (ಎಂದರೆ) **ಆದಿತ್ಯೇಷು**—ಆದಿತ್ಯರಲ್ಲಿಯೂ । **ಧೃತವತೇ**—ಕರ್ಮನಿಯಾಮಕನಾದ ವರುಣನಲ್ಲಿಯೂ । **ವರುಣೇ**—ವರುಣನಲ್ಲಿಯೂ । **ವಿಶ್ವಭಾನುಷು**—ಸರ್ವತ್ರ ಪ್ರಸರಿಸಿದ ತೇಜಸ್ಸುಳ್ಳ । **ಮರುತ್ಸು**—ಮರುತ್ತುಗಳಲ್ಲಿಯೂ । **ಪ್ರ**—ಹೋಗಿ ಸೇರಲಿ.

॥ ಭಾವಾರ್ಥ ॥

ನಮ್ಮ ಪುರಾತನವೂ, ಮುಖ್ಯವೂ ಆದ ಯಜ್ಞವು ಅಗ್ನಿಗಭಿಮುಖವಾಗಿ ಉತ್ತಮರೀತಿಯಿಂದ ಹೋಗಿ ಸೇರಲಿ. ಉಳಿದ ದೇವತೆಗಳಲ್ಲಿಯೂ ಎಂದರೆ, ಆದಿತ್ಯರಲ್ಲಿಯೂ ಕರ್ಮನಿಯಾಮಕನಾದ ವರುಣನಲ್ಲಿಯೂ ಸರ್ವತ್ರ ಪ್ರಸರಿಸಿದ ತೇಜಸ್ಸುಳ್ಳ ಮರುತ್ತುಗಳಲ್ಲಿಯೂ ಹೋಗಿ ಸೇರಲಿ.

## English Translation.

Let the ancient sacrifice proceed first to Agni, then to the gods,—to the Adityas, to Varuna, observant of obligations, to the all-resplendent Maruts.

॥ ಸಂಹಿತಾಪಾಠಃ ॥

ವಿಶ್ವೇ ಹಿ ಷ್ಮಾ ಮನವೇ ವಿಶ್ವವೇದಸೋ ಭುವನ್ವೃಧೇ ರಿಶಾದಸಃ ।
ಅರಿಷ್ಟೇಭಿಃ ಪಾಯುಭಿರ್ವಿಶ್ವವೇದಸೋ ಯಂತಾ ನೋಽವೃಕಂ ಛರ್ದಿಃ ॥೪॥

॥ ಪದಪಾಠಃ ॥

ವಿಶ್ವೇ । ಹಿ । ಸ್ಮ । ಮನವೇ । ವಿಶ್ವಽವೇದಸಃ । ಭುವನ್ । ವೃಧೇ । ರಿಶಾದಸಃ ।
ಅರಿಷ್ಟೇಭಿಃ । ಪಾಯುಽಭಿಃ । ವಿಶ್ವಽವೇದಸಃ । ಯಂತ । ನಃ । ಅವೃಕಂ । ಛರ್ದಿಃ ॥ ೪ ॥

॥ ಸಾಯಣಭಾಷ್ಯಂ ॥

ವಿಶ್ವವೇದಸಃ ಸರ್ವಜ್ಞೋ ವ್ಯಾಪ್ತಧನಾಃ । ಬಹುಧನಾ ಇತ್ಯರ್ಥಃ । ತಾದೃಶಾ ರಿಶಾದಸೋ ರಿಶತಾಂ ಹಿಂಸಕಾನಾಂ ಶತ್ರೂಣಾಮಸಿತಾರ ಉಪಕ್ಷಪಯಿತಾರೋ ವಾ ವಿಶ್ವೇ ಹಿ ಷ್ಮ ಸರ್ವೇ ಖಲು ದೇವಾ ಮನವೇ । ಷಷ್ಠ್ಯರ್ಥೇ ಚತುರ್ಥೀ । ಮನೋರ್ವೃಧೇ ವರ್ಧನಾಯ ಭುವನ್ । ಭವಂತು । ಸ್ತೋತ್ರೇ ಮನುಷ್ಯಾಯ ಧನಂ ದತ್ವಾ ತಂ ವರ್ಧಯಂತ್ವಿತ್ಯಾಶಾಸ್ತೇ । ತತೋ ಹೇ ವಿಶ್ವವೇದಸಃ ಸರ್ವಧನಾಃ ಸರ್ವಜ್ಞಾ ವಾ ದೇವಾಃ ಅರಿಷ್ಟೇಭಿಃ ಪರೈರಹಿಂಸಿತೈಃ ಪಾಯುಭಿಃ ಪಾಲನೈಃ ಸಹಾವೃಕಂ । ವೃಕಃ ಸ್ತೇನಃ । ತದ್ರಹಿತಂ । ಬಾಧಾರಹಿತಮಿತ್ಯರ್ಥಃ । ತಾದೃಶಂ ಛರ್ದಿರ್ಗೃಹಂ ನೋಽಸ್ಮಭ್ಯಂ ಯಂತ । ಪ್ರಯಚ್ಛತ । ಶತ್ರೂನ್ಹತ್ವಾ ಗೃಹೇಷ್ವಸ್ಮಾಭಿಃ ಕರ್ಮಾಣಿ ಕಾರಯತೇತ್ಯರ್ಥಃ ॥ ಯಂತೇತಿ ಯಮೋ-ಲೋಟಿ ಛಾಂದಸೋ ವಿಕರಣಸ್ಯ ಲುಕ್ । ತಸ್ಯ ತಬಾದೇಶಃ । ತೇನಾನುನಾಸಿಕಲೋಪಾಭಾವಃ ॥

॥ ಪ್ರತಿಪದಾರ್ಥ ॥

**ವಿಶ್ವವೇದಸಃ**—ಸಮಸ್ತಧನವನ್ನೂ ಹೊಂದಿರುವವರೂ । **ರಿಶಾದಸಃ**—ಶತ್ರುಹಿಂಸಕರೂ ಆದ । **ವಿಶ್ವೇ ಹಿ ಷ್ಮ**—ಸಕಲದೇವತೆಗಳೂ । **ಮನವೇ**—ಮನುವಿನ । **ವೃಧೇ**—ಅಭಿವೃದ್ಧಿಗಾಗಿ । **ಭುವನ್**—ಅವನ ಸಮೀಪದಲ್ಲಿಯೇ ಇರಲಿ । **ವಿಶ್ವವೇದಸಃ**—ಸರ್ವಜ್ಞರಾದ ಎಲೈ ದೇವತೆಗಳೇ । **ಅರಿಷ್ಟೇಭಿಃ**—ಇತರರಿಂದ ಅಹಿಂಸಿತವಾದ । **ಪಾಯುಭಿಃ**—ರಕ್ಷಣೆಗಳೊಡನೆ । **ಅವೃಕಂ**—ಹಿಂಸಾರಹಿತವಾದ । **ಛರ್ದಿಃ**—ಗೃಹವನ್ನು । **ನಃ**—ನಮಗೆ । **ಯಂತ**—ಕೊಡಿರಿ.

॥ ಭಾವಾರ್ಥ ॥

ಸಮಸ್ತ ಧನವನ್ನೂ ಹೊಂದಿರುವವರೂ, ಶತ್ರುಹಿಂಸಕರೂ ಆದ ಸಕಲದೇವತೆಗಳೂ ಮನುವಿನ ಅಭಿವೃದ್ಧಿಗಾಗಿ ಅವನ ಸಮೀಪದಲ್ಲಿಯೇ ಇರಲಿ ಸರ್ವಜ್ಞರಾದ ಎಲೈ ದೇವತೆಗಳೇ, ಇತರರಿಂದ ಅಹಿಂಸಿತವಾದ ರಕ್ಷಣೆಗಳೊಡನೆ ಹಿಂಸಾರಹಿತವಾದ ಗೃಹವನ್ನು ನಮಗೆ ಕೊಡಿರಿ.

## English Translation.

May the universal deities possessors of all opulence, destroyers of foes, be (nigh) to Manu for his prosperity : do you, who know all things,

secure to us an abode safe from robbers through your unassailable protections.

॥ ಸಂಹಿತಾಪಾಠಃ ॥

ಆ ನೋ ಅದ್ಯ ಸಮನಸೋ ಗಂತಾ ವಿಶ್ವೇ ಸಜೋಷಸಃ ।
ಋಚಾ ಗಿರಾ ಮರುತೋ ದೇವ್ಯದಿತೇ ಸದನೇ ಪಸ್ತ್ಯೇ ಮಹಿ ॥ ೫ ॥

॥ ಪದಪಾಠಃ ॥

ಆ । ನಃ । ಅದ್ಯ । ಸಽಮನಸಃ । ಗಂತ । ವಿಶ್ವೇ । ಸಽಜೋಷಸಃ ।
ಋಚಾ । ಗಿರಾ । ಮರುತಃ । ದೇವಿ । ಅದಿತೇ । ಸದನೇ । ಪಸ್ತ್ಯೇ । ಮಹಿ ॥ ೫ ॥

॥ ಸಾಯಣಭಾಷ್ಯಂ ॥

ಸಮನಸಃ ಸರ್ವೇಷು ಸ್ತೋತ್ರೇಷು ಸಮಾನಮನಸ್ಕಾ ವಿಶ್ವೇ ಸರ್ವೇ ದೇವಾ ಯೂಯಂ ಸಜೋಷಸಃ ಪರಸ್ಪರಂ ಸಂಗತಾಃ ಸಂತೋ ಗಿರಾ । ಶುಶ್ರೂಷುತಯಾ 'ಪ್ರಾಪ್ತವ್ಯಯೇತ್ಯರ್ಥಃ । ತಯರ್ಚಾ ಸಹಾದ್ಯಾಸ್ಮಿನ್ಯಾಗದಿನೇ ನೋ ಯುಷ್ಮಾನಸ್ಮಾನಾ ಗಂತ । ಆಗಚ್ಛತ । ಅನಂತರಂ ಹೇ ಮರುತೋ ದೇವಿ ದ್ಯೋತಮಾನೇ ಮಹಿ ಮಹತಿ ದೇವಾನಾಂ ಮಾತೃತ್ವಾನ್ಮಹತ್ತ್ವಯುಕ್ತೇ ಹೇ ಅದಿತೇಽದೀನ ಏತನ್ನಾಮಿಕೇ ದೇವಿ ಸದನೇ ಸ್ಥಾನೇ ಪಸ್ತ್ಯೇಽಸ್ಮದೀಯೇ ಗೃಹೇ ಸ್ತೋತವ್ಯತಯೋಪವಿಶತ ॥ ಮರುತ ಇತ್ಯಾದೇರ್ವಾಕ್ಯಭೇದಾದನಿಘಾತಃ । ಉತ್ತರತ್ರ ಪೂರ್ವಸ್ಯಾಮಂತ್ರಿತಸ್ಯಾವಿದ್ಯಮಾನವತ್ತ್ವೇನ ವಾಕ್ಯಾದಿತ್ವಾದನಿಘಾತಃ ॥

॥ ಪ್ರತಿಪದಾರ್ಥ ॥

**ಸಮನಸಃ**—ಸ್ತೋತೃವಿನ ವಿಷಯದಲ್ಲಿ ಒಂದೇ ಮನಸ್ಸುಳ್ಳ । **ವಿಶ್ವೇ**—ಎಲೈ ವಿಶ್ವೇದೇವತೆಗಳೇ । **ಸಜೋಷಸಃ**—ನೀವು ಒಟ್ಟುಗೂಡಿದವರಾಗಿ । **ಗಿರಾ**—ಸ್ತುತಿರೂಪವಾದ । **ಋಚಾ**— ಋಕ್ಕಿನೊಡನೆ । **ಅದ್ಯ**—ಈ ಯಾಗಕಾಲದಲ್ಲಿ । **ನಃ**—ನಮ್ಮಲ್ಲಿಗೆ । **ಆ ಗಂತ**—ದಯಮಾಡಿರಿ । **ಮರುತಃ**—ಎಲೈ ಮರುತ್ತುಗಳೇ । **ದೇವಿ**—ದೇವತಾತ್ಮಳೂ । **ಮಹಿ**— ಮಹತ್ಸ್ವರೂಪವುಳ್ಳವಳೂ ಆದ । **ಅದಿತೇ**—ಎಲೈ ಅದಿತಿದೇವಿಯೇ । **ಸದನೇ**—ಯಜ್ಞಸ್ಥಾನವಾದ । **ಪಸ್ತ್ಯೇ**—ನಮ್ಮ ಗೃಹದಲ್ಲಿ ಸ್ಥಿತರಾಗಿರಿ.

॥ ಭಾವಾರ್ಥ ॥

ಸ್ತೋತೃವಿನ ವಿಷಯದಲ್ಲಿ ಒಂದೇ ಮನಸ್ಸುಳ್ಳ ಎಲೈ ವಿಶ್ವೇದೇವತೆಗಳೇ, ನೀವು ಒಟ್ಟುಗೂಡಿದವರಾಗಿ ಸ್ತುತಿ ರೂಪವಾದ ಋಕ್ಕಿನೊಡನೆ ಈ ಯಾಗಕಾಲದಲ್ಲಿ ನಮ್ಮಲ್ಲಿಗೆ ದಯಮಾಡಿರಿ. ಎಲೈ ಮರುತ್ತುಗಳೇ, ಮತ್ತು ದೇವ ತಾತ್ಮಳೂ, ಮಹತ್ಸ್ವರೂಪವುಳ್ಳವಳೂ ಆದ ಎಲೈ ಅದಿತಿದೇವಿಯೇ, ಯಜ್ಞಸ್ಥಾನವಾದ ನಮ್ಮ ಗೃಹದಲ್ಲಿ ಸ್ಥಿತರಾಗಿರಿ.

## English Translation.

Universal deities, united together and of one mind, come this day to us, (attracted) by the sacred praise addressed to you ; and do you, Maruts, and the mighty goddess Aditi, (come) to the dwelling, (our) abode

|| ಸಂಹಿತಾಪಾಠಃ ||

ಅಭಿ ಪ್ರಿಯಾ ಮರುತೋ ಯಾ ವೋ ಅಶ್ವ್ಯಾ ಹವ್ಯಾ ಮಿತ್ರ ಪ್ರಯಾಥನ ।
ಆ ಬರ್ಹಿರಿಂದ್ರೋ ವರುಣಸ್ತುರಾ ನರ ಆದಿತ್ಯಾಸಃ ಸದಂತು ನಃ ॥ ೬ ॥

॥ ಪದಪಾಠಃ ॥

ಅಭಿ । ಪ್ರಿಯಾ । ಮರುತಃ । ಯಾ । ವಃ । ಅಶ್ವ್ಯಾ । ಹವ್ಯಾ । ಮಿತ್ರ । ಪ್ರऽಯಾಥನ ।
ಆ । ಬರ್ಹಿಃ । ಇಂದ್ರಃ । ವರುಣಃ । ತುರಾಃ । ನರಃ । ಆದಿತ್ಯಾಸಃ । ಸದಂತು । ನಃ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಮರುತಃ ಪ್ರಿಯಾ ಪ್ರಿಯಾಣಿ ಯಾ ಯಾನಿ ವೋ ಯುಷ್ಮಾಕಮಶ್ವ್ಯಾಶ್ವ್ಯಾನಿ ಪ್ರಿಯಾನಶ್ವಸಂಘಾನಭಿ ಪ್ರಯಾಥನ । ಅಸ್ಮದ್ಯಜ್ಞಂ ಪ್ರತಿ ಪ್ರಾಪಯತ । ಯೂಯಮಶ್ವೈರ್ಯುಕ್ತಾಃ ಸಂತ ಆಗಚ್ಛತೇತ್ಯರ್ಥಃ । ಅಥ ಹೇ ಮಿತ್ರ । ಮಿತ್ರಶಬ್ದೇನಾನ್ಯೇ ವರುಣಾದಯೋऽಪ್ಯುಚ್ಯಂತೇ । ಹೇ ಮಿತ್ರಾದಯೋ ದೇವಾಃ ಹವ್ಯಾ ಹವ್ಯಾನಿ ಹವನಯೋಗ್ಯಾನಿ ಹವೀಂಷಿ ಸ್ವೀಕರ್ತುಮಾಗಚ್ಛತೇತ್ಯರ್ಥಃ। ಸ್ತೂಯಮಾನಾ ಆಗಚ್ಛತ ॥ ಪ್ರಪೂರ್ವಾದ್ಯಾತೇರ್ಲೋಟಿ ತಪ್ತನಪ್ತನಥನಾಶ್ಚೇತಿ ಥನಾದೇಶಃ ॥ ಆಗತ್ಯ ಚೇಂದ್ರೋ ವರುಣ ಇಂದ್ರಾವರುಣೌ ತುರಾಃ ಸಂಗ್ರಾಮೇ ಶತ್ರುವಧಾರ್ಥಂ ತ್ವರಮಾಣಾ ನರೋ ನೇತಾರ ಆದಿತ್ಯಾಸೋऽದಿತೇಃ ಪುತ್ರಾ ಮರುದಾದಯೋ ದೇವಾಶ್ಚ ನೋऽಸ್ಮದೀಯೇ ಯಜ್ಞೇ ಬರ್ಹಿರ್ಬರ್ಹಿಷ್ಯಾಸಾದಿತ ಆ ಸದಂತು । ಆಸೀದಂತು । ಪ್ರವಿಶಂತು ॥ ಸದೇಃ ಸೀದಾದೇಶಾಭಾವಶ್ಛಾಂದಸಃ ॥**

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುತ್ತುಗಳೇ । **ಯಾ**—ಯಾವ ಅಶ್ವಗಳು । **ವಃ**—ನಿಮಗೆ । **ಪ್ರಿಯಾ**—ಪ್ರೀತಿಪಾತ್ರವಾಗಿವೆಯೋ ಅಂತಹ । **ಅಶ್ವ್ಯಾ**—ಅಶ್ವಗಳನ್ನು । **ಅಭಿ ಪ್ರಯಾಥನ**—ನಮ್ಮ ಯಜ್ಞಕ್ಕೆ ಪ್ರೇರಿಸಿರಿ । **ಮಿತ್ರ**—ಎಲೈ ಮಿತ್ರನೇ । **ಹವ್ಯಾ**—ನಮ್ಮ ಹವಿಸ್ಸುಗಳನ್ನು ಸ್ವೀಕರಿಸಲು ದಯಮಾಡು । **ಇಂದ್ರಃ**—ಇಂದ್ರನೂ । **ವರುಣಃ**—ವರುಣನೂ । **ತುರಾಃ**—ಸಂಗ್ರಾಮದಲ್ಲಿ ಕುಶಲತೆಯುಳ್ಳವರೂ । **ನರಃ**—ನೇತೃಗಳೂ ಆದ । **ಆದಿತ್ಯಾಸಃ**—ಆದಿತ್ಯರೂ । **ನಃ**—ನಮ್ಮ ಈ ಯಜ್ಞದಲ್ಲಿ । **ಬರ್ಹಿಃ**—ದರ್ಭಾಸನದ ಮೇಲೆ । **ಆ ಸದಂತು**—ಕುಳಿತುಕೊಳ್ಳಲಿ.

। ಭಾವಾರ್ಥ ।

ಎಲೈ ಮರುತ್ತುಗಳೇ, ಯಾವ ಅಶ್ವಗಳು ನಿಮಗೆ ಪ್ರೀತಿಪಾತ್ರವಾಗಿವೆಯೋ ಅಂತಹ ಅಶ್ವಗಳನ್ನು ನಮ್ಮ ಯಜ್ಞಕ್ಕೆ ಬರುವಂತೆ ಪ್ರೇರಿಸಿರಿ ಎಲೈ ಮಿತ್ರನೇ, ನಮ್ಮ ಹವಿಸ್ಸುಗಳನ್ನು ಸ್ವೀಕರಿಸಲು ದಯಮಾಡು. ಇಂದ್ರನೂ ವರುಣನೂ, ಮತ್ತು ಸಂಗ್ರಾಮದಲ್ಲಿ ಕುಶಲತೆಯುಳ್ಳವರೂ, ನೇತೃಗಳೂ ಆದ ಆದಿತ್ಯರೂ ನಮ್ಮ ಈ ಯಜ್ಞದಲ್ಲಿ ದರ್ಭಾಸನದ ಮೇಲೆ ಕುಳಿತುಕೊಳ್ಳಲಿ.

English Translation.

Direct, Maruts, your beloved horses (to our rite): Mitra, (come to our) oblations; and may Indra, and Varuna and the swift leaders, the the Adityas, sit down on our sacred grass.

॥ ಸಂಹಿತಾಪಾಠಃ ॥

ವಯಂ ವೋ ವೃಕ್ತಬರ್ಹಿಷೋ ಹಿತಪ್ರಯಸ ಆನುಷಕ್ ।
ಸುತಸೋಮಾಸೋ ವರುಣ ಹವಾಮಹೇ ಮನುಷ್ವದಿದ್ಧಾಗ್ನಯಃ ॥ ೭ ॥

। ಪದಪಾಠಃ ॥

ವಯಂ । ವಃ । ವೃಕ್ತಽಬರ್ಹಿಷಃ । ಹಿತಽಪ್ರಯಸಃ । ಆನುಷಕ್ ।
ಸುತಽಸೋಮಾಸಃ । ವರುಣ । ಹವಾಮಹೇ । ಮನುಷ್ವತ್ । ಇದ್ಧಽಅಗ್ನಯಃ ॥ ೭ ॥

। ಸಾಯಣಭಾಷ್ಯಂ ।

ಹೇ ವರುಣ ವರುಣಾದಯೋ ಹೇ ದೇವಾಃ ವೃಕ್ತಬರ್ಹಿಷ ಋತ್ವಿಜೋ ವಯಮಾನುಷಕ್ ಸ್ರಗಾದಿಷ್ವನುಷಕ್ತಂ ಯಥಾ ಭವತಿ ತಥಾ ಹಿತಪ್ರಯಸಃ । ಪ್ರೀಣಾತೀತಿ ಪ್ರಯೋಽನ್ನಂ । ತೇಷು ನಿಹಿತಹವಿಷ್ಕಾಃ ಸಂತೋ ವೋ ಯುಷ್ಮಾನ್ ಹವಾಮಹೇ । ಏತಾನಿ ಹವೀಂಷ್ಯಾದಾತುಮಾಹ್ವಯಾಮಃ। ಕೀದೃಶಾಃ । ಸುತಸೋಮಾಸೋಽಭಿಷುತಸೋಮಾ ಇದ್ಧಾಗ್ನಯ ಆಹುತಿಭಿಃ ಸಮಿದ್ಧಾಗ್ನಯೋ ವಯಮಾಹ್ವಯಾಮಃ । ತತ್ರ ದೃಷ್ಟಾಂತಃ । ಮನುಷ್ವತ್ । ಮನುರ್ಯಥಾ ಯಜ್ಞೇ ಯುಷ್ಮಾನಾಜುಹಾವ ತದ್ವತ್ ॥

। ಪ್ರತಿಪದಾರ್ಥ ॥

ವರುಣ—ಎಲೈ ವರುಣಾದಿದೇವತೆಗಳೇ । ವೃಕ್ತಬರ್ಹಿಷಃ—ದರ್ಭಾಸನವನ್ನು ಸಂಸ್ಕರಿಸಿ ಸಿದ್ಧಪಡಿಸುವವರೂ । ಆನುಷಕ್—ಯಥಾಕ್ರಮವಾಗಿ । ಹಿತಪ್ರಯಸಃ—ಅರ್ಪಿತವಾಗುವ ಹವಿಸ್ಸುಳ್ಳವರೂ । ಸುತಸೋಮಾಸಃ—ಸೋಮವನ್ನು ಹಿಂಡಿ ಸಿದ್ಧಪಡಿಸಿರುವವರೂ । ಇದ್ಧಾಗ್ನಯಃ—ಆಹುತಿಗಳಿಂದ ಅಗ್ನಿಯನ್ನು

ಪ್ರಜ್ವಲಿಸುವಂತೆ ಮಾಡಿರುವವರೂ ಆದ । **ವಯಂ**—ನಾವು (ಋತ್ವಿಕ್ಕುಗಳು) । **ವಃ**—ನಿಮ್ಮನ್ನು । **ಮನುಷ್ವತ್**—ಹಿಂದೆ ಮನುವು ನಿಮ್ಮನ್ನು ಪ್ರಾರ್ಥಿಸಿ ಕರೆದಂತೆ । **ಹವಾಮಹೇ**—ನಾವೂ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ವರುಣಾದಿ ದೇವತೆಗಳೇ, ದರ್ಭಾಸನವನ್ನು ಸಂಸ್ಕರಿಸಿ ಸಿದ್ಧಪಡಿಸಿರುವವರೂ, ಯಥಾಕ್ರಮವಾಗಿ ನಿಮಗೆ ಅರ್ಪಿಸಲು ಹವಿಸ್ಸನ್ನು ಹೊಂದಿರುವವರೂ, ಸೋಮವನ್ನು ಹಿಂಡಿ ಸಿದ್ಧಪಡಿಸಿರುವವರೂ ಆಹುತಿಗಳಿಂದ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿರುವವರೂ ಆದ ನಾವು (ಋತ್ವಿಕ್ಕುಗಳು) ಹಿಂದೆ ಮನುವು ಸ್ತುತಿಸಿ ಕರೆದಂತೆ ನಿಮ್ಮನ್ನು ನಮ್ಮ ಯಜ್ಞಕ್ಕೆ ಕರೆಯುತ್ತೇವೆ.

## English Translation.

Bearing the clipped sacred grass, offering in due order the (sacrificial) food, presenting the effused Soma, and having the fires kindled, we invoke you, Varuna, (and the rest), as did Manu.

॥ ಸಂಹಿತಾಪಾಠಃ ॥

ಆ ಪ್ರ ಯಾತ ಮರುತೋ ವಿಷ್ಣೋ ಅಶ್ವಿನಾ ಪೂಷನ್ಮಾಕೀನಯಾ ಧಿಯಾ ।
ಇಂದ್ರ ಆ ಯಾತು ಪ್ರಥಮಃ ಸನಿಷ್ಯುಭಿರ್ವೃಷಾ ಯೋ ವೃತ್ರಹಾ ಗೃಣೇ ॥

॥ ಪದಪಾಠಃ ॥

ಆ । ಪ್ರ । ಯಾತ । ಮರುತಃ । ವಿಷ್ಣೋ ಇತಿ । ಅಶ್ವಿನಾ । ಪೂಷನ್ । ಮಾಕೀನಯಾ । ಧಿಯಾ ।
ಇಂದ್ರಃ । ಆ । ಯಾತು । ಪ್ರಥಮಃ । ಸನಿಷ್ಯುಽಭಿಃ । ವೃಷಾ । ಯಃ । ವೃತ್ರಽಹಾ । ಗೃಣೇ ॥ ೮ ॥

॥ ಸಾಯಣಭಾಷ್ಯಂ ॥

ಹೇ ವಿಶ್ವೇ ದೇವಾಃ ಪ್ರ ಯಾತ । ಪ್ರಕರ್ಷೇಣಾಸ್ಮದೀಯಂ ಕರ್ಮಾಭ್ಯಾಗಚ್ಛತ । ಹೇ ಮರುತೋ ಹೇ ವಿಷ್ಣೋ ಸ್ವಬಲೇನ ಸರ್ವತೋ ವ್ಯಾಪ್ತ್ಯೈತನ್ನಾಮಕ ದೇವ ಹೇ ಅಶ್ವಿನಾಶ್ವಿನೌ ಪೂಷನ್ । ಸ್ತೋತೄನ್ಧನಾದಿನಾ ಪೋಷಯತೀತಿ ಪೂಷಾ । ಏತನ್ನಾಮಕ ದೇವ ಮರುದಾದಯೋ ದೇವಾಃ ಮಾಕೀನಯಾ ॥ ಅಸ್ಮಚ್ಛಬ್ದಾದ್ಯುಷ್ಮದಸ್ಮದೋಃ । ಪಾ. ೪-೩-೧ । ಇತಿ ಖಞ್ ಶೈಷಿಕಃ । ಏಕವಚನೇ ತವಕಮಮಕಾವಿತಿ ಮಮಕಾದೇಶಃ । ವರ್ಣಲೋಪಶ್ಛಾಂದಸಃ ॥ ಮಯಾ ಕ್ರಿಯಮಾಣಯಾ ಧಿಯಾ ಸ್ತುತ್ಯಾ ಸಹಾಸ್ಮದ್ಯಜ್ಞಂ ಪ್ರತ್ಯಾಗಚ್ಛತ ॥ ಮರುದಾದೇರಾಮಂತ್ರಿತಸ್ಯ ವಾಕ್ಯಭೇದಾದನಿಘಾತಃ ॥ ಕಿಂಚ ಪ್ರಥಮೋ ದೇವಾನಾಂ ಮುಖ್ಯಃ ಸ ಇಂದ್ರಶ್ಚಾ ಯಾತು । ವೃಷಾ ಕಾಮಾನಾಂ ಸೇಕ್ತಾ ಯ ಇಂದ್ರಃ ಸನಿಷ್ಯುಭಿಃ । ಸನಿಃ ಸಂಭಜನಂ । ತದಾತ್ಮನ ಇಚ್ಛದ್ಭಿಃ ಸ್ತೋತೃಭಿರ್ವೃತ್ರಹಾಪಾಮಾವರಕಸ್ಯ ವೃತ್ರಾಸುರಸ್ಯ ಹಂತೇತಿ ಗೃಣೇ ಸ್ತೂಯತೇ ॥ ಗೄ ಶಬ್ದೇ ಇತ್ಯಸ್ಯ ಕರ್ಮಣಿ ಲಿಟ ಛಾಂದಸೋ ವಿಕರಣಃ ॥

|| ಪ್ರತಿಪದಾರ್ಥ ||

**ಮರುತಃ**—ಎಲೈ ಮರುತ್ತುಗಳೇ | **ವಿಷ್ಣೋ** ಎಲೈ ವಿಷ್ಣುವೇ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಪೂಷನ್**—ಎಲೈ ಪೂಷದೇವನೇ | **ಮಾಕೀನಯಾ**—ನನ್ನಿಂದ ಪಠಿತವಾದ | **ಧಿಯಾ**—ಸ್ತುತಿಯಿಂದ ಪ್ರೀತರಾಗಿ | **ಆ ಪ್ರಯಾತ**–ನೀವೆಲ್ಲರೂ ಬನ್ನಿರಿ | **ವೃಷಾ**—ಕಾಮವರ್ಷಕನಾದ | **ಯಃ**—ಯಾರು | **ಸನಿಷ್ಯುಭಿಃ**—ತನ್ನ ಆರಾಧಕರಿಂದ | **ವೃತ್ರಹಾ**—ವೃತ್ರಹಾ ಎಂದು (ವೃತ್ರಹಂತಕನೆಂದು) | **ಗೃಣೇ**—ಸ್ತುತಿಸಲ್ಪಡುವನೋ ಅಂತಹ | **ಪ್ರಥಮಃ**—ದೇವತೆಗಳಲ್ಲಿ ಮುಖ್ಯನಾದ | **ಇಂದ್ರಃ**—ಇಂದ್ರನು | **ಆ ಯಾತು**—ನಮ್ಮಲ್ಲಿಗೆ ಬರಲಿ.

|| ಭಾವಾರ್ಥ ||

ಎಲೈ ಮರುತ್ತುಗಳೇ, ಎಲೈ ವಿಷ್ಣುವೇ, ಎಲೈ ಅಶ್ವಿನೀದೇವತೆಗಳೇ, ಎಲೈ ಪೂಷದೇವನೇ, ನನ್ನಿಂದ ಪಠಿತವಾದ ಸ್ತುತಿಯಿಂದ ಪ್ರೀತರಾಗಿ ನೀವೆಲ್ಲರೂ ಬನ್ನಿರಿ. ಕಾಮವರ್ಷಕನಾದ ಯಾರು ತನ್ನ ಆರಾಧಕರಿಂದ **'ವೃತ್ರಹಾ'** ಎಂದು ಪ್ರಶಂಸಿಸಲ್ಪಡುವನೋ, ದೇವತೆಗಳಲ್ಲಿ ಮುಖ್ಯನಾದ ಅಂತಹ ಇಂದ್ರನೂ ನಮ್ಮಲ್ಲಿಗೆ ಬರಲಿ.

## English Translation.

Maruts, Aswins, Pushan, come hither (induced) by my praise : may Indra, the first (of the gods), also come, the showerer (of benefits), he who is praised by (his) worshippers as the slayer of Vritra.

|| ಸಂಹಿತಾಪಾಠಃ ||

ವಿ ನೋ ದೇವಾಸೋ ಅದ್ರುಹೋಽಚ್ಛಿದ್ರಂ ಶರ್ಮ ಯಚ್ಛತ |
ನ ಯದ್ದೂರಾದ್ವಸವೋ ನೂ ಚಿದಂತಿತೋ ವರೂಥಮಾದಧರ್ಷತಿ || ೯ ||

|| ಪದಪಾಠಃ ||

**ವಿ | ನಃ | ದೇವಾಸಃ | ಅದ್ರುಹಃ | ಅಚ್ಛಿದ್ರಂ | ಶರ್ಮ | ಯಚ್ಛತ |**
**ನ | ಯತ್ | ದೂರಾತ್ | ವಸವಃ | ನು | ಚಿತ್ | ಅಂತಿತಃ | ವರೂಥಂ | ಆಽದಧರ್ಷತಿ || ೯ ||**

|| ಸಾಯಣಭಾಷ್ಯಂ ||

**ಹೇ ಅದ್ರುಹಃ ಸ್ತೋತೄಣಾಮದ್ರೋಗ್ಧಾರಃ | ಯದ್ವಾ || ದ್ರುಹೇರೌಣಾದಿಕಃ ಕರ್ಮಣಿ ಕ್ವಿಪ್ || ಶತ್ರುಭಿರಹಿಂಸ್ಯಾಃ | ಹೇ ದೇವಾಸೋ ಮರುದಾದಯೋ ದೇವಾಃ ಅಚ್ಛಿದ್ರಂ ಬಾಧಕರಹಿತಂ ಸಾಧೀಯೋ ವಾ ಶರ್ಮ | ಶೃಣಾತಿ ದುಃಖಾದಿಕಮಿತಿ ಶರ್ಮ ಗೃಹಂ | ತನ್ನೋಽಸ್ಮಭ್ಯಂ ವಿ ಯಚ್ಛತ |**

ಹೇ ವಸವಃ ಶತ್ರೂಣಾಂ ನಾಶಯಿತಾರೋ ಮರುದಾದಯಃ ದೂರಾದ್ದೂರದೇಶಾದಂತಿಕೋಽಂತಿಕದೇಶಾದ್ವಾ ಕಶ್ಚಿದಾಗತ್ಯ ನೂ ಚಿತ್ಕದಾಚಿದಪಿ ವರೂಥಂ ವರಣೀಯಂ ಸಂಭಜನೀಯಂ ಯದ್ಗೃಹಂ ನಾದಧರ್ಷತಿ ಆಧರ್ಷಣಂ ಹಿಂಸನಂ ನ ಕರೋತಿ ತದ್ಗೃಹಂ ಪ್ರಯಚ್ಛತೇತಿ ಸಮನ್ವಯಃ ॥ ಧೃಷ ಪ್ರಸಹನ ಇತ್ಯಸ್ಯ ವಿಭಾಷಿತಣಿಚ್'ತ್ವಾತ್ ಯದಾ ಣಿಚ್ ನಾಸ್ತಿ ತದಾ ರೂಪಂ ॥

॥ ಪ್ರತಿಪದಾರ್ಥ ॥

**ಅದ್ರುಹಃ**—ಹಿಂಸಾರಹಿತರಾದ । **ದೇವಾಸಃ**—ಎಲೈ ಮರುದಾದಿದೇವತೆಗಳೇ । **ಅಚ್ಛಿದ್ರಂ**—ದೋಷರಹಿತವಾದ । **ಶರ್ಮ**—ಗೃಹವನ್ನು । **ನಃ**—ನಮಗೆ । **ವಿ ಯಚ್ಛತ**—ಕೊಡಿರಿ । **ವಸವಃ**—ಶತ್ರುಗಳನ್ನು ಉರುಳಿಸುವ ಎಲೈ ಮರುದಾದಿಗಳೇ । **ಯತ್**—ಯಾವ ಗೃಹವನ್ನು । **ದೂರಾತ್**—ದೂರದಿಂದಲೂ । **ಅಂತಿತಃ**—ಸಮೀಪ ಪ್ರದೇಶದಿಂದಲೂ । **ನೂ ಚಿತ್**—ಯಾವಾಗಲೂ (ಯಾರೂ ಸಹ) । **ನ ಆದಧರ್ಷತ್**—ಹಿಂಸಿಸಲಾಗುವುದಿಲ್ಲವೋ ಅಂತಹ । **ವರೂಥಂ**—ಶ್ರೇಷ್ಠವಾದ ಗೃಹವನ್ನು ಕೊಡಿರಿ.

॥ ಭಾವಾರ್ಥ ॥

ಹಿಂಸಾರಹಿತರಾದ ಎಲೈ ಮರುದಾದಿದೇವತೆಗಳೇ, ನಮಗೆ ದೋಷರಹಿತವಾದ ಗೃಹವನ್ನು ಕೊಡಿರಿ. ಶತ್ರುಧರ್ಷಕರಾದ ಎಲೈ ಮರುದಾದಿಗಳೇ, ಯಾವ ಗೃಹವನ್ನು ದೂರದಿಂದಾಗಲಿ ಅಥವಾ ಸಮೀಪದಿಂದಾಗಲಿ ಯಾರೂ ಮುತ್ತಿ ಹಿಂಸಿಸಲಾಗುವುದಿಲ್ಲವೋ ಅಂತಹ ಶ್ರೇಷ್ಠವಾದ ಗೃಹವನ್ನು ಕೊಡಿರಿ.

## English Translation.

Unoppressive deities, bestow upon us a mansion without defect, so that, subduers (of foes), no one may injure our defences, whether from afar or nigh.

॥ ಸಂಹಿತಾಪಾಠಃ ॥

ಅಸ್ತಿ ಹಿ ವಃ ಸಜಾತ್ಯಂ ರಿಶಾದಸೋ ದೇವಾಸೋ ಅಸ್ತ್ಯಾಪ್ಯಂ ।
ಪ್ರ ಣಃ ಪೂರ್ವಸ್ಮೈ ಸುವಿತಾಯ ವೋಚತ ಮಕ್ಷೂ ಸುಮ್ನಾಯ ನವ್ಯಸೇ ॥

॥ ಪದಪಾಠಃ ॥

ಅಸ್ತಿ । ಹಿ । ವಃ । ಸಽಜಾತ್ಯಂ । ರಿಶಾದಸಃ । ದೇವಾಸಃ । ಅಸ್ತಿ । ಆಪ್ಯಂ ।
ಪ್ರ । ನಃ । ಪೂರ್ವಸ್ಮೈ । ಸುವಿತಾಯ । ವೋಚತ । ಮಕ್ಷು । ಸುಮ್ನಾಯ । ನವ್ಯಸೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ರಿಶಾದಸೋ ರಿಶತಾಂ ಹಿಂಸಕಾನಾಮತ್ತಾರೋ ದೇವಾಸೋ ದೇವಾ ದ್ಯೋತಮಾನಾ ಮರುದಾದಯಃ ವೋ ಯುಷ್ಮಾಕಂ ಸಜಾತ್ಯಮಸ್ತಿ । ಪರಸ್ಪರಂ ಸಮಾನಜಾತಿಭಾವೋಽಸ್ತಿ ಖಲು । ಕಿಂಚಾಪ್ಯಂ । ಆಪಿರ್ಬಂಧುಃ । ತಸ್ಯ ಭಾವ ಆಪ್ಯಂ । ಸ್ತೋತೃಷು ಸ್ತುತ್ಯಲಕ್ಷಣೇನ ಸಂಬಂಧಾದ್ವ್ಯವಸ್ಥಿತೇನ ಮನಸಾ ಮಯಾ ಸ್ತೋತ್ರಾ ಸಹ ಯುಷ್ಮಾಕಂ ಬಂಧುಭಾವೋಽಸ್ತಿ ಖಲು । ತತಃ ಪೂರ್ವಸ್ಮೈ ಪ್ರಥಮಭಾವಿನೇ ಸುವಿತಾಯ । ಸುಷ್ಠ್ವೇಯತೇ ಸರ್ವೈರಾಗಮ್ಯತ ಇತಿ ಸುವಿತೋಽಭ್ಯುದಯಃ । ತಸ್ಮೈ ನವ್ಯಸೇ ನವೀಯಸೇ ನವತರಾಯ ಸುಮ್ನಾಯ ಚ ಉಭಯಂ ಮಕ್ಷು ಶೀಘ್ರಂ ನೋಽಸ್ಮಾಕಂ ಪ್ರ ವೋಚತ । ಪ್ರಕರ್ಷೇಣ ಬ್ರೂತ । ಅಭ್ಯುದಯಧನಾನಿ ಪ್ರಯಚ್ಛತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ರಿಶಾದಸಃ**—ಶತ್ರು ಹಿಂಸಕರಾದ । **ದೇವಾಸಃ**—ಎಲೈ ದೇವತೆಗಳೇ । **ವಃ**—ನಿಮ್ಮಲ್ಲಿ । **ಸಜಾತ್ಯಂ**—ಒಂದೇ ಗುಂಪಿಗೆ ಸೇರಿದ ಸಂಬಂಧವು । **ಅಸ್ತಿ ಹಿ**—ಇದೆಯಲ್ಲವೇ । **ಆಪ್ಯಂ**—ನಿಮ್ಮ ಸ್ತೋತೃಗಳೊಡನೆ ನಿಮ್ಮ ಬಂಧುತ್ವವು । **ಅಸ್ತಿ**—ಇದೆ । **ಪೂರ್ವಸ್ಮೈ**—ಹಿಂದಿನಿಂದ ಬಂದ । **ಸುವಿತಾಯ**—ಅಭ್ಯುದಯಕ್ಕಾಗಿಯೂ । **ನವ್ಯಸೇ**—ನೂತನವಾದ । **ಸುಮ್ನಾಯ**—ಸುಖಕ್ಕಾಗಿಯೂ । **ಮಕ್ಷು**—ಶೀಘ್ರವಾಗಿ । **ನಃ**—ನಮಗೆ । **ಪ್ರ ವೋಚತ**—ಸ್ವಸ್ತಿವಾಚನವನ್ನು ಪಠಿಸಿರಿ.

॥ ಭಾವಾರ್ಥ ॥

ಶತ್ರುಹಿಂಸಕರಾದ ಎಲೈ ದೇವತೆಗಳೇ, ನಿಮ್ಮಲ್ಲಿ ಒಂದೇ ಗುಂಪಿಗೆ ಸೇರಿದ ಸಂಬಂಧವು ಇದ್ದೇ ಇದೆ. ನಿಮ್ಮ ಸ್ತೋತೃಗಳೊಡನೆ ನಿಮ್ಮ ಸಂಬಂಧವೂ ಪ್ರಸಿದ್ಧವಾಗಿಯೇ ಇದೆ ಹಿಂದಿನಿಂದ ಬಂದ ಅಭ್ಯುದಯಕ್ಕಾಗಿಯೂ, ನೂತನವಾದ ಸುಖಕ್ಕಾಗಿಯೂ ನಮಗೆ ಶೀಘ್ರವಾಗಿ ಸ್ವಸ್ತಿವಾಚನವನ್ನು ಪಠಿಸಿರಿ.

## English Translation

There is identity of race among you, deities, destroyers of foes ; there is kindred (with me your worshipper) ; therefore utter at once the command for our former prosperity and for new happiness.

॥ ವಿಶೇಷವಿಷಯಗಳು ॥

**ರಿಶಾದಸಃ—ರಿಶತಾಂ ಹಿಂಸಕಾನಾಮತ್ತಾರಃ** । ಹಿಂಸೆಮಾಡತಕ್ಕ ಶತ್ರುಜನರನ್ನು ತಿರಸ್ಕರಿಸುವವರು, ಹಿಂಸಿಸುವವರು. ಎಂದರೆ ಶತ್ರುಗಳನ್ನು ಹಿಂಸಿಸಿ ಕೊಲ್ಲುವವರು, ಶತ್ರುನಾಶಕರು ಎಂದರ್ಥವು. ಯಾಸ್ಕರು ಈ ಶಬ್ದಕ್ಕೆ—

**ರಿಶಾದಸಃ । ಅಸ್ತಿ ಹಿ ವಃ ಸಜಾತ್ಯಂ ರಿಶಾದಸೋ ದೇವಾಸೋ ಅಸ್ತ್ಯಾಪ್ಯಂ । ಅಸ್ತಿ ಹಿ ವಃ ಸಮಾನಜಾತಿತಾ ರೇಶಯದಾರಿಣೋ ದೇವಾಃ । ಅಸ್ತ್ಯಾಪ್ಯಂ । ಆಪ್ಯಮಾಪ್ನೋತೇಃ ॥**

(ನಿ. ೬–೧೪

ದೇವತೆಗಳು ಇತರರನ್ನು ನಿಷ್ಕಾರಣವಾಗಿ ಹಿಂಸೆಮಾಡುವ ಶತ್ರುಜನರನ್ನು ಹಿಂಸಿಸಿಕೊಳ್ಳುವರು. ಈ ವಿಷಯದಲ್ಲಿ ಈ ಗುಣವು ಎಲ್ಲಾ ದೇವತೆಗಳಲ್ಲಿಯೂ ಕಂಡುಬರುವುದರಿಂದ ದೇವತೆಗಳಲ್ಲಿ ಒಂದುವಿಧವಾದ ಬಂಧುತ್ವವಿರುವುದೆಂದು ಹೇಳಲಾಗಿದೆ. ಆಪ್ಯಂ ಎಂಬ ಶಬ್ದವು ಹೊಂದು ಎಂಬರ್ಥವುಳ್ಳ ಆಪ್ಲೃ ವ್ಯಾಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಇಲ್ಲಿ ಬಂಧುತ್ವವೆಂಬರ್ಥವನ್ನು ಸೂಚಿಸುವುದು ಎಂದು ನಿರ್ವಚನವನ್ನು ಹೇಳಿದಾರೆ.

॥ ಸಂಹಿತಾಪಾಠಃ ॥

ಇದಾ ಹಿ ವ ಉಪಸ್ತುತಿಮಿದಾ ವಾಮಸ್ಯ ಭಕ್ತಯೇ ।
ಉಪ ವೋ ವಿಶ್ವವೇದಸೋ ನಮಸ್ಯುರಾँ ಅಸೃಕ್ಷ್ಯನ್ಯಾಮಿವ ॥ ೧೧ ॥

॥ ಪದಪಾಠಃ ॥

ಇದಾ । ಹಿ । ವಃ । ಉಪಽಸ್ತುತಿಂ । ಇದಾ । ವಾಮಸ್ಯ । ಭಕ್ತಯೇ ।
ಉಪ । ವಃ । ವಿಶ್ವಽವೇದಸಃ । ನಮಸ್ಯುಃ । ಆ । ಅಸೃಕ್ಷಿ । ಅನ್ಯಾಂಽಇವ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ವಿಶ್ವವೇದಸಃ ಸರ್ವಧನಾ ಹೇ ದೇವಾಃ ನಮಸ್ಯುರನ್ನಮಿಚ್ಛನ್ ಮನುರಹಂ ವೋ ಯುಷ್ಮದ್ವಿಷಯಾಮುಪಸ್ತುತಿಮನ್ಯಾಮಿವಾದೃಷ್ಟಪೂರ್ವಾಮಿವ ಸ್ಥಿತಾಂ । ಕೈಶ್ಚಿದಪ್ಯಕೃತಾಮಿತ್ಯರ್ಥಃ । ತಾದೃಶೀಮುಪಸ್ತುತಿಮಿದಾ ಹಿ । ಹಿರವಧಾರಣೇ । ಇದಾನೀಮೇವೋಪಾಸೃಕ್ಷಿ । ಉಪಾಸೃಜಾಮಿ । ಕರೋಮೀತ್ಯರ್ಥಃ । ಕಿಮರ್ಥಂ । ವೋ ಯುಷ್ಮತ್ಸಂಬಂಧಿನೋ ವಾಮಸ್ಯ ವನನೀಯಸ್ಯೇದೇದಾನೀ- ಮೇವ ಭಕ್ತಯೇ ಸಂಭಜನಾಯ । ಲಾಭಾಯೇತ್ಯರ್ಥಃ ॥ ಅಸೃಕ್ಷೀತಿ ಸೃಜೇರ್ಲುಙಿ ರೂಪಂ । ಪಾದಾದಿತ್ವಾದನಿಘಾತಃ ॥

॥ ಪ್ರತಿಪದಾರ್ಥ ॥

ವಿಶ್ವವೇದಸಃ—ಸಮಸ್ತ ಧನವನ್ನೂ ಹೊಂದಿರುವ ಎಲ್ಲೈ ದೇವತೆಗಳೇ । ನಮಸ್ಯುಃ—ಅನ್ನೇಚ್ಛುವಾದ ನಾನು । ವಃ—ನಿಮಗೆ ಸೇರಿದುದೂ । ವಾಮಸ್ಯ—ಆಕರ್ಷಕವಾದುದೂ ಆದ ಧನಾದಿಗಳನ್ನು । ಇದಾ—ಈಗಲೇ । ಭಕ್ತಯೇ—ಹೊಂದುವುದಕ್ಕಾಗಿ । ವಃ—ನಿಮ್ಮನ್ನು ಪ್ರಶಂಸಿಸುವ । ಉಪಸ್ತುತಿಂ—ಸ್ತೋತ್ರವನ್ನು । ಅನ್ಯಾಂ ಇವ—ಇತರರಿಂದ ಪಠಿತವಾಗದೇ ನೂತನವಾಗಿ ನಿರ್ಮಿತವಾಗಿರುವಂತೆ । ಇದಾ ಹಿ—ಈಗಲೇ । ಉಪ ಆ ಅಸೃಕ್ಷಿ—ನಿರ್ಮಿಸಿ (ಪಠಿಸುತ್ತೇನೆ).

॥ ಭಾವಾರ್ಥ ॥

ಸಮಸ್ತ ಧನವನ್ನೂ ಹೊಂದಿರುವ ಎಲ್ಲೈ ದೇವತೆಗಳೇ, ಅನ್ನೇಚ್ಛುವಾದ ನಾನು ನಿಮಗೆ ಸೇರಿದುದೂ, ಆಕರ್ಷಕವಾದುದೂ ಆದ ಧನಾದಿಗಳನ್ನು ಈಗಲೇ ಹೊಂದುವುದಕ್ಕಾಗಿ ನಿಮ್ಮನ್ನು ಪ್ರಶಂಸಿಸುವ ಸ್ತೋತ್ರವನ್ನು ಇತರರಿಂದ ನಿರ್ಮಿತವೂ ಪಠಿತವೂ ಆಗದೇ ನೂತನವಾಗಿ ನಿರ್ಮಿತವಾಗಿರುವಂತೆ ನಿರ್ಮಿಸಿ ಈಗಲೇ ಪಠಿಸುತ್ತೇನೆ.

## English Translation.

Deities, possessed of all wealth, I, desirous of offering worship, address to you verily unprecedented praise, for the sake of obtaining desired affluence.

॥ ಸಂಹಿತಾಪಾಠಃ ॥

ಉದು ಷ್ಯ ವಃ ಸವಿತಾ ಸುಪ್ರಣೀತಯೋಽಸ್ಥಾದೂರ್ಧ್ವೋ ವರೇಣ್ಯಃ ।
ನಿ ದ್ವಿಪಾದಶ್ಚತುಷ್ಪಾದೋ ಅರ್ಥಿನೋಽವಿಶ್ರನ್ಪತಯಿಷ್ಣವಃ ॥ ೧೨ ॥

॥ ಪದಪಾಠಃ ॥

ಉತ್ । ಊಂ ಇತಿ । ಸ್ಯಃ । ವಃ । ಸವಿತಾ । ಸುಽಪ್ರನೀತಯಃ । ಅಸ್ಥಾತ್ । ಊರ್ಧ್ವಃ । ವರೇಣ್ಯಃ ।
ನಿ । ದ್ವಿಽಪಾದಃ । ಚತುಃಽಪಾದಃ । ಅರ್ಥಿನಃ । ಅವಿಶ್ರನ್ । ಪತಯಿಷ್ಣವಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಸುಪ್ರಣೀತಯಃ। ಶೋಭನಪ್ರಣೀತಿಃ ಸ್ತುತಿಃ। ಶೋಭನಪ್ರಣಯನಾಃ ಶೋಭನಸ್ತುತಯೋ ಮರುತಃ ವೋ ಯುಷ್ಮಾಕಂ ಮಧ್ಯ ಊರ್ಧ್ವ ಊರ್ಧ್ವಂ ಗಂತಾ ವರೇಣ್ಯಃ ಸರ್ವೈರ್ವರಣೀಯಃ ಸಂಭಜನೀಯಃ ಸ ಸವಿತಾ ಸರ್ವಸ್ಯ ಸ್ವಕರ್ಮಣಿ ಪ್ರೇರಕ ಏತನ್ನಾಮಕಃ ಸ ದೇವೋ ಯದೋದಸ್ಥಾತ್ ಸ್ವತೇಜಸೋದ್ಗತೋಽಭೂತ್ ತದಾರ್ಥಿನೋ ದ್ವಿಪಾದೋ ಪಾದದ್ವಯಯುಕ್ತಾಃ ಪುರುಷಾಶ್ಚತುಷ್ಪಾದಃ ಪಾದಚತುಷ್ಟಯಯುಕ್ತಾ ಅಶ್ವಾದಯಃ ಪತಯಿಷ್ಣವಃ ಪತನಶೀಲಾಃ ಪಕ್ಷಿಣಶ್ಚ ನ್ಯವಿಶ್ರನ್ । ಸ್ವಸ್ವಕಾರ್ಯೇಷು ನಿವಿಶಂತೇ । ಸೂರ್ಯ ಉದಿತೇ ಕೇಚನ ಪುರುಷಾ ಅಗ್ನಿಹೋತ್ರಾದಿಕಂ ಕುರ್ವಂತಿ ಕೇಚನ ದೇವತಾವಿಷಯಂ ಸ್ತೋತ್ರಂ ಕುರ್ವಂತಿ । ಪಶ್ವಾದಯಸ್ತೃಣಾದಿಭಕ್ಷಣಾರ್ಥಂ ಸರ್ವತ್ರ ಸಂಚರಂತಿ ॥ ನ್ಯವಿಶ್ರನ್ । ನಿಪೂರ್ವಾದ್ವಿಶತೇರ್ಲಙಿ ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ರುಡಾಗಮಃ ॥

॥ ಪ್ರತಿಪದಾರ್ಥ ॥

**ಸುಪ್ರಣೀತಯಃ**—ಉತ್ತಮವಾದ ಸ್ತುತಿಗೆ ಪಾತ್ರರಾದ ಎಲೈ ಮರುತ್ತುಗಳೇ । (ಯದಾ—ಯಾವಾಗ) । **ವಃ**—ನಿಮ್ಮ ಮಧ್ಯದಲ್ಲಿ । **ಊರ್ಧ್ವಃ**—ಊರ್ಧ್ವಮುಖನಾಗಿ ಸಂಚರಿಸುವವನೂ । **ವರೇಣ್ಯಃ**—ಎಲ್ಲರಿಗೂ ಪೂಜ್ಯನೂ । **ಸ್ಯಃ ಸವಿತಾ**—ಜಗತ್ಪ್ರೇರಕನೂ ಆದ ಸವಿತೃವು । **ಉದಸ್ಥಾತ್**—ತನ್ನ ತೇಜಸ್ಸುಗಳೊಡನೆ ಆವಿರ್ಭವಿಸುವನೋ (ಆಗ) । **ಅರ್ಥಿನಃ**—ತಮ್ಮ ತಮ್ಮ ಇಷ್ಟಾರ್ಥಗಳನ್ನು ಸಾಧಿಸಲು ಪ್ರಯತ್ನಿಸುವ । **ದ್ವಿಪಾದಃ**—ಪಾದದ್ವಯವುಳ್ಳ ಮಾನವರೂ । **ಚತುಷ್ಪಾದಃ**—ನಾಲ್ಕು ಪಾದಗಳುಳ್ಳ ಅಶ್ವಾದಿಗಳೂ । **ಪತಯಿಷ್ಣವಃ**—ಹಾರತಕ್ಕ ಪಕ್ಷಿಗಳೂ । **ನಿ ಅವಿಶ್ರನ್**—ತಮ್ಮ ತಮ್ಮ ಕಾರ್ಯಗಳಲ್ಲಿ ಉದ್ಯುಕ್ತವಾಗುತ್ತವೆ-

॥ ಭಾವಾರ್ಥ ॥

ಉತ್ತಮವಾದ ಸ್ತುತಿಗೆ ಪಾತ್ರರಾದ ಎಲೈ ಮರುತ್ತುಗಳೇ, ಯಾವಾಗ ನಿಮ್ಮ ಮಧ್ಯದಲ್ಲಿ ಊರ್ಧ್ವಮುಖನಾಗಿ ಸಂಚರಿಸುವವನೂ, ಎಲ್ಲರಿಗೂ ಪೂಜ್ಯನೂ, ಜಗತ್ಪ್ರೇರಕನೂ, ಪ್ರಸಿದ್ಧನೂ ಆದ ಸವಿತೃವು ತನ್ನ ತೇಜಸ್ಸುಗಳೊಡನೆ ಆವಿರ್ಭವಿಸುವನೋ ಆಗ ತಮ್ಮ ತಮ್ಮ ಇಷ್ಟಾರ್ಥಗಳನ್ನು ಸಾಧಿಸಲು ಪ್ರಯತ್ನಿಸುವ ಪಾದದ್ವಯವುಳ್ಳ ಮಾನವರೂ, ನಾಲ್ಕು ಪಾದಗಳುಳ್ಳ ಅಶ್ವಾದಿಗಳೂ ಹಾರಾಡತಕ್ಕ ಪಕ್ಷಿಗಳೂ ತಮ್ಮ ತಮ್ಮ ಕಾರ್ಯಗಳಲ್ಲಿ ಉದ್ಯುಕ್ತವಾಗುತ್ತವೆ.

English Translation.

Devoutly praised (Maruts), when the adorable Savitri has risen above you, then bipeds and quadrupeds, and the flying birds seeking (their objects), enter (upon their fuuctions).

॥ ಸಂಹಿತಾಪಾಠಃ ॥

ದೇವಂದೇವಂ ವೋಽವಸೇ ದೇವಂದೇವಮಭಿಷ್ಟಯೇ ।
ದೇವಂದೇವಂ ಹುವೇಮ ವಾಜಸಾತಯೇ ಗೃಣಂತೋ ದೇವ್ಯಾ ಧಿಯಾ ॥

॥ ಪದಪಾಠಃ ॥

ದೇವಂಽದೇವಂ । ವಃ । ಅವಸೇ । ದೇವಂಽದೇವಂ । ಅಭಿಷ್ಟಯೇ ।
ದೇವಂಽದೇವಂ । ಹುವೇಮ । ವಾಜಽಸಾತಯೇ । ಗೃಣಂತಃ । ದೇವ್ಯಾ । ಧಿಯಾ ॥ ೧೩ ॥

॥ ಸಾಯಣಭಾಷ್ಯಂ ॥

ಪಂಚಮೇಽಹನಿ ಪ್ರಉಗಶಸ್ತ್ರೇ ದೇವಂದೇವಮಿತಿ ವೈಶ್ವದೇವಸ್ತೃಚಃ । ಸೂತ್ರಿತಂ ಚ । ದೇವಂದೇವಂ ಬೃಹದು ಗಾಯಿಷೇ ವಚಃ । ಆ. ೭-೧೨ । ಇತಿ ॥

ವಯಂ ದೇವ್ಯಾ ದ್ಯೋತಮಾನಯಾ ಧಿಯಾ ಸ್ತುತ್ಯಾ ಗೃಣಂತಃ ಸ್ತುವಂತಃ ಸಂತೋ ವೋ ಯುಷ್ಮಾಕಂ ಮಧ್ಯೇ ದೇವಂ ದೇವಂ ದೀಪ್ಯಮಾನಂ ದೇವಮವಸೇ ಕರ್ಮರಕ್ಷಣಾಯಾಹ್ವಯಾಮ । ಅನುಕ್ರಮೇಣಾಹ । ಅಭಿಷ್ಟಯೇಽಭಿಲಷಿತಪ್ರಾಪ್ತ್ಯರ್ಥಂ ಚ ದೇವಂ ದೇವಂ ವಯಮಾಹ್ವಯಾಮ । ತತೋ ವಾಜಸಾತಯೇಽನ್ನಲಾಭಾಯ ಹುವೇಮ । ಹ್ವಯಾಮ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ದೇವ್ಯಾ**—ಪ್ರಕಾಶಮಾನವಾದ । **ಧಿಯಾ**—ಸ್ತುತಿಯಿಂದ । **ಗೃಣಂತಃ**—ಸ್ತುತಿಸತಕ್ಕ ನಾವು । **ವಃ**—ನಿಮ್ಮಗಳ ನಡುವೆಯಿರುವ । **ದೇವಂದೇವಂ**—ಪ್ರತಿಯೊಬ್ಬ ದೇವತೆಯನ್ನೂ ।

**ಅವಸೇ**—ನಮ್ಮ ರಕ್ಷಣಾರ್ಥವಾಗಿ ಕರೆಯುತ್ತೇವೆ । **ದೇವಂದೇವಂ**—ಪ್ರತಿದೇವತೆಯನ್ನೂ । **ಅಭಿಷ್ಟಯೇ**—ನಮ್ಮ ಇಷ್ಟಾರ್ಥಸಾಧನೆಗಾಗಿಯೂ ಕರೆಯುತ್ತೇವೆ । **ವಾಜಸಾತಯೇ**—ಅನ್ನಲಾಭಕ್ಕಾಗಿಯೂ । **ದೇವಂದೇವಂ**—ಪ್ರತಿಯೊಬ್ಬ ದೇವನನ್ನೂ । **ಹುವೇಮ**—ಕರೆಯುತ್ತೇವೆ.

॥ ಭಾವಾರ್ಥ ॥

ಎಲ್ಲೈ ದೇವತೆಗಳೇ ಪ್ರಕಾಶಮಾನವಾದ ಸ್ತುತಿಯಿಂದ ಸ್ತುತಿಸತಕ್ಕ ನಾವು ನಿಮ್ಮಗಳ ನಡುವೆ ಇರುವ ಪ್ರತಿಯೊಬ್ಬ ದೇವತೆಯನ್ನೂ ನಮ್ಮ ರಕ್ಷಣಾರ್ಥವಾಗಿ ಕರೆಯುತ್ತೇವೆ. ಪ್ರತಿದೇವತೆಯನ್ನೂ ನಮ್ಮ ಇಷ್ಟಾರ್ಥ ಸಾಧನೆಗಾಗಿಯೂ ಕರೆಯುತ್ತೇವೆ. ಪ್ರತಿಯೊಬ್ಬ ದೇವತೆಯನ್ನೂ ಅನ್ನಲಾಭಕ್ಕಾಗಿಯೂ ಕರೆಯುತ್ತೇವೆ.

## English Translation.

We would invoke each deity among you (gods) for protection, each deity for the attianment of our desires, each deity for the acquisition of food, glorifying you with divine praise.

॥ ವಿಶೇಷವಿಷಯಗಳು ॥

ಯಾಗದ ಐದನೆಯ ದಿವಸದಲ್ಲಿ ಪ್ರಉಗಶಸ್ತ್ರಮಂತ್ರಪಠನಕಾಲದಲ್ಲಿ **ದೇವಂದೇವಂ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಶ್ವದೇವತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ದೇವಂದೇವಂ ಬೃಹದು ಗಾಯಿಷೇ ವಚಃ** ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ದೇವಾಸೋ ಹಿ ಷ್ಮಾ ಮನವೇ ಸಮನ್ಯವೋ ವಿಶ್ವೇ ಸಾಕಂ ಸರಾತಯಃ ।
ತೇ ನೋ ಅದ್ಯ ತೇ ಅಪರಂ ತುಚೇ ತು ನೋ ಭವಂತು ವರಿವೋವಿದಃ ॥

॥ ಪದಪಾಠಃ ॥

ದೇವಾಸಃ । ಹಿ । ಸ್ಮ । ಮನವೇ । ಸಽಮನ್ಯವಃ । ವಿಶ್ವೇ । ಸಾಕಂ । ಸಽರಾತಯಃ ।
ತೇ । ನಃ । ಅದ್ಯ । ತೇ । ಅಪರಂ । ತುಚೇ । ತು । ನಃ । ಭವಂತು । ವರಿವಃಽವಿದಃ ॥ ೧೪ ॥

॥ ಸಾಯಣಭಾಷ್ಯಂ ॥

**ಸಮನ್ಯವಃ ಸಮಾನಮನಸಃ ಯದ್ವಾ ಸಂಗ್ರಾಮೇಷು ಶತ್ರುಹನನಾರ್ಥಂ ಸಮಾನಕ್ರೋಧಯುಕ್ತಾ ವಿಶ್ವೇ ಸರ್ವ ಏವ ದೇವಾಸೋ ಹಿ ಷ್ಮ ಮರುದಾದಯೋ ದೇವಾಃ ಖಲು ಮನವ ಏತನ್ನಾಮಕಾಯರ್ಷಯೇ ಮಹ್ಯಂ ಸಾಕಂ ಸಹ ಯುಗಪದೇವ ಸರಾತಯೋ ಧನಾದಿದಾನೇನ ಸಹಿತಾ ಭವಂತು ।**

ಪುನರಪಿ ಪ್ರಾರ್ಥಯತೇ। ತೇ ದೇವಾ ನೋಽಸ್ಮಾಕಮದ್ಯಾಸ್ಮಿನ್ದಿನೇಽಪರಂ ಚ ಕಿಂ ಬಹುನಾ ಸರ್ವೇಷು ದಿವಸೇಷು ಧನದಾತಾರೋ ಭವಂತು। ನ ಕೇವಲಮಸ್ಮಾಕಮೇವ ಕಿಂತು ತುಚೇ। ತುಗಿತ್ಯಪತ್ಯನಾಮ॥ ತುಜಿ ಪಿಜಿ ಹಿಂಸಾದಾನನಿಕೇತನೇಷು॥ ತೋಜಯತಿ ಹಿನಸ್ತಿ ಪಿತುರ್ದುಃಖಾದಿಕಮಿತಿ ತುಕ್ ಪುತ್ರಃ। ತಸ್ಮೈ ನೋಽಸ್ಮಾಕಂ ಪುತ್ರಾಯ ವರಿವೋವಿದೋ ವರಣೀಯಸ್ಯ ಧನಸ್ಯ ಲಂಭಯಿತಾರೋ ಭವಂತು॥

॥ ಪ್ರತಿಪದಾರ್ಥ ॥

**ಸಮನ್ಯವಃ**—ಏಕಮನಸ್ಸಿನಿಂದ ಕೂಡಿದ। **ವಿಶ್ವೇ**—ಸಮಸ್ತರಾದ। **ದೇವಾಸೋ ಹಿ ಷ್ಮ**—ದೇವತೆಗಳೂ ಸಹ। **ಸಾಕಂ**-ಒಟ್ಟಿಗೆ ಕೂಡಿಕೊಂಡು। **ಮನವೇ**-ಮನುನಾಮಕನಾದ ನನಗೆ। **ಸರಾತಯಃ**—ಧನದಾತರಾಗಿರಲಿ। **ತೇ**—ಅದೇ ದೇವತೆಗಳು। **ಅದ್ಯ**—ಈ ದಿನವೂ। **ಅಪರಂ**—ಉಳಿದ ದಿನಗಳೂ। **ನಃ**—ನಮಗೂ। **ನಃ**—ನಮ್ಮ। **ತುಚೇ**—ಪುತ್ರಾದಿಗಳಿಗೂ। **ವರಿವೋವಿದಃ**—ಅಧಿಕವಾದ ಧನದಾತರಾಗಿ। **ಭವಂತು**—ಆಗಿರಲಿ.

॥ ಭಾವಾರ್ಥ ॥

ಏಕಮನಸ್ಸಿನಿಂದ ಕೂಡಿದ ಸಮಸ್ತ ದೇವತೆಗಳೂ ಸಹ ಒಟ್ಟಿಗೆ ಕೂಡಿಕೊಂಡು ಮನುನಾಮಕನಾದ ನನಗೆ ಧನದಾತರಾಗಿರಲಿ. ಅದೇ ದೇವತೆಗಳು ಈ ದಿನವೂ, ಉಳಿದ ದಿನಗಳೂ ನಮಗೂ ನಮ್ಮ ಪುತ್ರಾದಿಗಳಿಗೂ ಅಧಿಕ ವಾದ ಧನದಾತರಾಗಿರಲಿ.

## English Translation.

May the universal gods with one consent be together the givers (of riches) to Manu ; may they, both to-day and hearafter, be the bestowers of wealth upon us and upon our posterity.

॥ ಸಂಹಿತಾಪಾಠಃ ॥

ಪ್ರ ವಃ ಶಂಸಾಮ್ಯದ್ರುಹಃ ಸಂಸ್ಥ ಉಪಸ್ತುತೀನಾಂ।
ನ ತಂ ಧೂರ್ತಿರ್ವರುಣ ಮಿತ್ರ ಮರ್ತ್ಯಂ ಯೋ ವೋ ಧಾಮಭ್ಯೋಽವಿಧತ್॥

॥ ಪದಪಾಠಃ ॥

ಪ್ರ। ವಃ। ಶಂಸಾಮಿ। ಅದ್ರುಹಃ। ಸಂಽಸ್ಥೇ। ಉಪಽಸ್ತುತೀನಾಂ।
ನ। ತಂ। ಧೂರ್ತಿಃ। ವರುಣ। ಮಿತ್ರ। ಮರ್ತ್ಯಂ। ಯಃ। ವಃ। ಧಾಮಽಭ್ಯಃ। ಅವಿಧತ್॥ ೧೫॥

|| ಸಾಯಣಭಾಷ್ಯಂ ||

ಹೇ ಅದ್ರುಹೋಽದ್ರೋಗ್ಧಾರೋಽಹಿಂಸ್ಯಾ ವಾ ಮರುದಾದಯಃ ಉಪಸ್ತುತೀನಾಮುಪ-ಸ್ತೋತ್ರಾಣಾಂ ಸಂಸ್ಥೇ ತಾಸಾಂ ಯಜ್ಞೇ ಕ್ರಿಯಮಾಣತ್ವಾದಸ್ತುತ್ಸಂಸ್ಥಾನಭೂತೇಽಸ್ಮಿನ್ಯಜ್ಞೇ ವೋ ಯುಷ್ಮಾನ್ ಪ್ರ ಶಂಸಾಮಿ । ಪ್ರಕರ್ಷೇಣ ಸ್ತೌಮಿ । ಹೇ ವರುಣ ಮಿತ್ರ ಮಿತ್ರಾವರುಣೌ ತಂ ಮರ್ತ್ಯಂ ಮನುಷ್ಯಂ ಧೂರ್ತಿಃ || ಧುರ್ವೀ ಹಿಂಸಾರ್ಥಃ || ಶತ್ರುಭ್ಯೋ ಹಿಂಸಾ. ತಂ ನ ಬಾಧತೇ ಯೋ ಮನುಷ್ಯೋ ವೋ ಯುಷ್ಮಾಕಂ ಧಾಮಭ್ಯಸ್ತೇಜೋಭ್ಯಃ । ಧೀಯತೇಽಸ್ಮಿನ್ನಿತಿ ಧಾಮ ಶರೀರಂ ವಾ । ತೇಭ್ಯೋಽವಿಧತ್ || ವಿಧ ವಿಧಾನೇ || ಹವೀಂಷಿ ವಿದಧಾತಿ ಪ್ರಯಚ್ಛತಿ । ಏತೇನ ತೇಜಸಾಮಪಿ ಹವಿರ್ಭಕ್ಷಣಮಸ್ತೀತಿ ಜ್ಞಾಯತೇ ||

|| ಪ್ರತಿಪದಾರ್ಥ ||

**ಅದ್ರುಹಃ**— ಹಿಂಸಾರಹಿತರಾದ ಎಲೈ ಮರುದಾದಿಗಳೇ । **ಉಪಸ್ತುತೀನಾಂ**— ಸ್ತೋತ್ರಗಳೊಡನೆ ಕೂಡಿರುವ । **ಸಂಸ್ಥೇ**— ಯಜ್ಞದಲ್ಲಿ । **ವಃ**— ನಿಮ್ಮನ್ನು । **ಪ್ರ ಶಂಸಾಮಿ**— ಪ್ರಶಂಸಿಸುತ್ತೇನೆ । **ವರುಣ**— ಎಲೈ ವರುಣನೇ । **ಮಿತ್ರ**— ಎಲೈ ಮಿತ್ರನೇ । **ಯಃ**— ಯಾವ ಮನುಷ್ಯನು । **ವಃ**— ನಿಮ್ಮ । **ಧಾಮಭ್ಯಃ**— ತೇಜಸ್ಸುಗಳಿಗೆ । **ಅವಿಧತ್**— ಪೂಜೆಯನ್ನರ್ಪಿಸುವನೋ । **ತಂ ಮರ್ತ್ಯಂ**— ಆ ಮಾನವನನ್ನು । **ಧೂರ್ತಿಃ**— ಶತ್ರುವಿನ ಉಪದ್ರವವು । **ನ**— ಹಿಂಸಿಸುವುದಿಲ್ಲ.

|| ಭಾವಾರ್ಥ ||

ಹಿಂಸಾರಹಿತರಾದ ಎಲೈ ಮರುದಾದಿಗಳೇ, ಸ್ತೋತ್ರಗಳೊಡನೆ ಕೂಡಿರುವ ಈ ಯಜ್ಞದಲ್ಲಿ ನಿಮ್ಮನ್ನು ಪ್ರಶಂಸಿಸುತ್ತೇನೆ. ಎಲೈ ವರುಣನೇ, ಎಲೈ ಮಿತ್ರನೇ, ಯಾವ ಮನುಷ್ಯನು ನಿಮ್ಮ ತೇಜಸ್ಸುಗಳಿಗೆ ಪೂಜೆಯನ್ನರ್ಪಿಸುವನೋ ಆ ಮಾನವನನ್ನು ಶತ್ರುವಿನ ಉಪದ್ರವವು ಹಿಂಸಿಸುವುದಿಲ್ಲ.

English Translation.

I glorify you, innoxious deities, in the place of praises : no harm befalls the man who, Mitra and Varuna, offers (oblations) to your glories.

|| ಸಂಹಿತಾಪಾಠಃ ||

ಪ್ರ ಸ ಕ್ಷಯಂ ತಿರತೇ ವಿ ಮಹೀರಿಷೋ ಯೋ ವೋ ವರಾಯ ದಾಶತಿ ।

ಪ್ರ ಪ್ರಜಾಭಿರ್ಜಾಯತೇ ಧರ್ಮಣಸ್ಪರ್ಯರಿಷ್ಟಃ ಸರ್ವ ಏಧತೇ || ೧೬ ||

|| ಪದಪಾಠಃ ||

ಪ್ರ । ಸಃ । ಕ್ಷಯಂ । ತಿರತೇ । ವಿ । ಮಹೀಃ । ಇಷಃ । ಯಃ । ವಃ । ವರಾಯ । ದಾಶತಿ ।

ಪ್ರ । ಪ್ರಜಾಭಿಃ । ಜಾಯತೇ । ಧರ್ಮಣಃ । ಪರಿ । ಅರಿಷ್ಟಃ । ಸರ್ವಃ । ಏಧತೇ || ೧೬ ||

॥ ಸಾಯಣಭಾಷ್ಯಂ ॥

ಹೇ ಮರುದಾದಯಃ ಸ ಮನುಷ್ಯಃ ಕ್ಷಯಂ । ಕ್ಷಿಯಂತಿ ನಿವಸಂತ್ಯತ್ರೇತಿ ಕ್ಷಯೋ ಗೃಹಂ । ತತ್ಸ ಮನುಷ್ಯಃ ಪ್ರ ತಿರತೇ । ಪ್ರಕರ್ಷೇಣ ವರ್ಧಯತಿ । ತಿರತಿರ್ವೃದ್ಧಿಕರ್ಮಾ । ಸ ಏವ ಮಹೀರ್ಮಹಾಂತೀರಿಷೋಽನ್ನಾನಿ ಚ ವಿ ವರ್ಧಯತಿ ಯೋ ಮನುಷ್ಯೋ ವರಾಯ ವರಣೀಯಾಯ ಧನಾಯ ತದರ್ಥಂ ವೋ ಯುಷ್ಮಭ್ಯಂ ದಾಶತಿ ಹವೀಂಷಿ ಪ್ರಯಚ್ಛತಿ । ಧನಾದಿಭಿರ್ವರ್ಧಯತೀತ್ಯನ್ವಯಃ । ಕಿಂಚ ಧರ್ಮಣಃ । ಧ್ರಿಯತ ಉತ್ಸ್ಯಿಗ್ಭಿರಿತಿ ಧರ್ಮ ಕರ್ಮ । ಯುಷ್ಮದ್ವಿಷಯಾತ್ಕರ್ಮಣಃ ಸಕಾಶಾತ್ಸ ಮನುಷ್ಯಃ ಪ್ರಜಾಭಿಃ ಪುತ್ರಪೌತ್ರಾದಿಭಿಃ ಪರಿ ಪರಿತಃ ಸರ್ವತಃ ಪ್ರ ಜಾಯತೇ । ಪ್ರಕರ್ಷೇಣಾವಿರ್ಭವತಿ । ಆತ್ಮಾ ವೈ ಪುತ್ರನಾಮಾಸಿ । ಶತ. ೧೪-೯-೪-೨೬ । ಇತಿ ಶ್ರುತೇಃ । ತತೋಽರಿಷ್ಟೋಽನ್ಯೈರಹಿಂಸಿತಃ ಸರ್ವೋ ಯುಷ್ಮಾಕಂ ಹವಿಷ್ಪ್ರದಾನಾತ್ಸಕಲೋ ಜನ ಏಧತೇ । ಧನಾದಿಭಿರ್ವರ್ಧತೇ ॥

॥ ಪ್ರತಿಪದಾರ್ಥ ॥

(ಎಲೈ ಮರುದಾದಿದೇವತೆಗಳೇ) **ಯಃ**—ಯಾವ ಪುರುಷನು । **ವರಾಯ**—ಉತ್ತಮವಾದ ಧನಾರ್ಥಿಯಾಗಿ । **ವಃ**—ನಿಮಗೆ । **ದಾಶತಿ**—ಹವಿಸ್ಸುಗಳನ್ನರ್ಪಿಸುವನೋ । **ಸಃ**—ಆ ಮಾನವನು । **ಕ್ಷಯಂ**—ಗೃಹವನ್ನು । **ಪ್ರ ತಿರತೇ**—ವೃದ್ಧಿಪಡಿಸುತ್ತಾನೆ । (**ಸಃ**—ಅವನೇ) । **ಮಹೀಃ**—ಪ್ರಭೂತವಾದ । **ಇಷಃ**—ಅನ್ನಗಳನ್ನೂ । **ವಿ (ವರ್ಧಯತಿ)**—ಅಧಿಕವಾಗಿ ವೃದ್ಧಿಪಡಿಸಿಕೊಳ್ಳುತ್ತಾನೆ । **ಧರ್ಮಣಃ**—ತನ್ನ ಕರ್ಮದ ಫಲವಾಗಿ । **ಪ್ರಜಾಭಿಃ**—ಪುತ್ರಪೌತ್ರಾದಿಗಳೊಡನೆ । **ಪರಿ**—ಆವೃತವಾಗಿ । **ಪ್ರಜಾಯತೇ**—ಅಭ್ಯುದಯವನ್ನು ಹೊಂದುತ್ತಾನೆ । **ಸರ್ವಃ**—ನಿಮ್ಮ ಪೂಜಕರಾದ ಸಕಲ ಜನವೂ । **ಅರಿಷ್ಟಃ**—ಶತ್ರುಗಳ ಹಿಂಸೆಗೆ ಸಿಕ್ಕದೇ । **ಏಧತೇ**—ವೃದ್ಧಿಯನ್ನು ಹೊಂದುತ್ತಾರೆ.

॥ ಭಾವಾರ್ಥ ॥

ಎಲೈ ಮರುದಾದಿದೇವತೆಗಳೇ, ಯಾವ ಪುರುಷನು ಉತ್ತಮವಾದ ಧನಾರ್ಥಿಯಾಗಿ ನಿಮಗೆ ಹವಿಸ್ಸುಗಳನ್ನರ್ಪಿಸುವನೋ ಆ ಮಾನವನು ತನ್ನ ಗೃಹವನ್ನು ವೃದ್ಧಿಪಡಿಸುತ್ತಾನೆ. ಅವನೇ ಪ್ರಭೂತವಾದ ಅನ್ನಗಳನ್ನೂ ವೃದ್ಧಿಪಡಿಸಿಕೊಳ್ಳುತ್ತಾನೆ. ತನ್ನ ಯಜ್ಞಾದಿಕರ್ಮಗಳ ಫಲವಾಗಿ ಪುತ್ರಪೌತ್ರಾದಿಗಳೊಡನೆ ಆವೃತನಾಗಿ ಅಭ್ಯುದಯವನ್ನು ಹೊಂದುತ್ತಾನೆ.

## English Translation.

He enlarges his dwelling, he has abundant food who offers you (oblations) to obtain a blessing : through his pious acts he is born on every side in his children ; all prosper (through your favour) unharmed (by enemies).

॥ ಸಂಹಿತಾಪಾಠಃ ॥

ಋತೇ ಸ ವಿಂದತೇ ಯುಧಃ ಸುಗೇಭಿರ್ಯಾತ್ಯಧ್ವನಃ ।
ಅರ್ಯಮಾ ಮಿತ್ರೋ ವರುಣಃ ಸರಾತಯೋ ಯಂ ತ್ರಾಯಂತೇ ಸಜೋಷಸಃ ॥ ೧೭ ॥

॥ ಪದಪಾಠಃ ॥

ಋತೇ । ಸಃ । ವಿಂದತೇ । ಯುಧಃ । ಸುऽಗೇಭಿಃ । ಯಾತಿ । ಅಧ್ವನಃ ।
ಅರ್ಯಮಾ । ಮಿತ್ರಃ । ವರುಣಃ । ಸऽರಾತಯಃ । ಯಂ । ತ್ರಾಯಂತೇ । ಸऽಜೋಷಸಃ ॥ ೧೭ ॥

॥ ಸಾಯಣಭಾಷ್ಯಂ ॥

ಸೋऽರ್ಯಮಾದೀನಾಂ ಹವಿರ್ದಾತಾ ಮನುಷ್ಯೋ ಯುಧಃ ॥ ಯುಧ ಸಂಪ್ರಹಾರೇ । ಭಾವೇ ಕ್ವಿಪ್ ॥ ಯುದ್ಧಾದೃತೇ ವಿನಾಪಿ ವಿಂದತೇ । ಧನಾನಿ ಲಭತೇ । ಕಿಂಚ ಸುಗೇಭಿಃ ಶೋಭನಗಮನೈಃ ಸುಷ್ಠು ಗಂತೃಭಿರ್ವಾಶ್ವೈಃ ಸಹಾಧ್ವನೋ ಮಾರ್ಗಾನ್ । ಗಂತವ್ಯಾನ್ದೇಶಾನಿತ್ಯರ್ಥಃ । ತಾನ್ ಯಾತಿ । ಗಚ್ಛತಿ । ಯಂ ಜನಮರ್ಯಮಾ ಸತತಂ ಗಚ್ಛನ್ ಮಿತ್ರಃ ಸ್ತೋತೄಣಾಂ ಯಷ್ಟೄಣಾಂ ಚ ಧನಪ್ರದಾನೇನ ಮಿತ್ರಭೂತೋ ವರುಣೋ ನಿವಾರಯಿತಾ ಶತ್ರೂಣಾಂ ಯದ್ವಾ ವರಣೀಯಃ ಸಂಭಜನೀಯ ಏತನ್ನಾಮಕಾಃ ಸರಾತಯಃ ಸಮಾನದಾನಾಸ್ತ್ರಯೋ ದೇವಾಃ ಸಜೋಷಸಃ ಪರಸ್ಪರಂ ಸಂಗತಾಃ ಸಂತೋ ಯಂ ಹವ್ಯಪ್ರದಾತಾರಂ ತ್ರಾಯಂತೇ ಸ್ವರಕ್ಷಣೈಃ ಪಾಲಯಂತಿ ಸ ಧನಾದೀನಿ ವಿಂದತೀತ್ಯನ್ವಯಃ ॥

॥ ಪ್ರತಿಪದಾರ್ಥ ॥

**ಯಂ**—ಯಾವ ಮಾನವನನ್ನು । **ಅರ್ಯಮಾ**—ಅರ್ಯಮನೂ । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಸರಾತಯಃ**—ಒಂದೇ ಸಮನೆ ದಾನಮಾಡುವವರಾಗಿಯೂ । **ಸಜೋಷಸಃ**—ಒಟ್ಟಿಗೆ ಕೂಡಿದವರಾಗಿಯೂ । **ತ್ರಾಯಂತೇ**—ರಕ್ಷಿಸುವರೋ । **ಸಃ**—ಆ ಮಾನವನು । **ಯುಧಃ ಋತೇ**—ಯುದ್ಧವಿಲ್ಲದೇ । **ವಿಂದತೇ**—ಧನಾದಿಗಳನ್ನು ಹೊಂದುತ್ತಾನೆ । **ಸುಗೇಭಿಃ**—ಉತ್ತಮವಾಗಿ ಓಡುವ ಅಶ್ವಗಳೊಡನೆ । **ಅಧ್ವನಃ**—ಮಾರ್ಗಗಳನ್ನು । **ಯಾತಿ**—ಸಂಚರಿಸುತ್ತಾನೆ

॥ ಭಾವಾರ್ಥ ॥

ಯಾವ ಮಾನವನನ್ನು ಅರ್ಯಮನೂ, ಮಿತ್ರನೂ, ವರುಣನೂ ಒಂದೇ ಸಮನೆ ದಾನಮಾಡುವವರಾಗಿಯೂ, ಒಟ್ಟಿಗೆ ಕೂಡಿದವರಾಗಿಯೂ ರಕ್ಷಿಸುವರೋ ಆ ಮಾನವನು ಯುದ್ಧವಿಲ್ಲದೇ ಧನಾದಿಗಳನ್ನು ಹೊಂದುತ್ತಾನೆ. ಉತ್ತಮವಾಗಿ ಓಡುವ ಅಶ್ವಗಳೊಡನೆ ಮಾರ್ಗಗಳಲ್ಲಿ ಸಂಚರಿಸುತ್ತಾನೆ.

## English Translation.

He gains (wealth) without war, he travels along the roads with quick (horses), whom Aryaman, Mitra and Varuna, alike munificent, and acting in concert, protect.

॥ ಸಂಹಿತಾಪಾಠಃ ॥

ಅಜ್ರೇ ಚಿದಸ್ಮೈ ಕೃಣುಥಾ ನ್ಯಂಚನಂ ದುರ್ಗೇ ಚಿದಾ ಸುಸರಣಂ ।

ಏಷಾ ಚಿದಸ್ಮಾದಶನಿಃ ಪರೋ ನು ಸಾಸ್ರೇಧಂತೀ ವಿ ನಶ್ಯತು ॥ ೧೮ ॥

॥ ಪದಪಾಠಃ ॥

ಅಜ್ರೇ । ಚಿತ್ । ಅಸ್ಮೈ । ಕೃಣುಥ । ನಿऽಅಂಚನಂ । ದುಃऽಗೇ । ಚಿತ್ । ಆ । ಸುऽಸರಣಂ ।

ಏಷಾ । ಚಿತ್ । ಅಸ್ಮಾತ್ । ಅಶನಿಃ । ಪರಃ । ನು । ಸಾ । ಅಸ್ರೇಧಂತೀ । ವಿ । ನಶ್ಯತು ॥ ೧೮ ॥

॥ ಸಾಯಣಭಾಷ್ಯಂ ॥

ಹೇ ದೇವಾಃ ಅಜ್ರೇ ಚಿತ್ ॥ ಜ್ರಿ ಅಭಿಭವೇ ॥ ಪರೈರನಭಿಭವನೀಯೇऽಪಿ ಪರಪುರೇ ನ್ಯಂಚನಂ ನಿತರಾಂ ಗಮನಮಸ್ಮೈ ಮನವೇ ಕೃಣುಥ । ಯೂಯಂ ಕುರುತ । ಯದ್ವಾ । ಅಜ್ರ ಋಜುಗಮನೇ ಪ್ರಸ್ಥೇ ಗಮನಂ ಕುರುತ । ತಥಾ ದುರ್ಗೇ ಚಿದಗಂತವ್ಯೇऽಪಿ ಸ್ಥಲೇ ಸುಸರಣಂ ॥ ಸೃ ಗತೌ ॥ ಶೋಭನಗಮನಮಾ ಸಮಂತಾತ್ಕುರುತ । ಏವಂ ಸತಿ ಸೈಷಾಶನಿಃ ಶತ್ರೂಣಾಂ ತದೀತದಾಯುಧಮಸ್ಮಾತ್ಸರ್ವತೋ ಗಂತುರ್ಮನೋರ್ನು ಕ್ಷಿಪ್ರಂ ಪರಃ ಪರಸ್ತಾದ್ಭವೇತ್ । ಪಶ್ಚಾತ್ಸಾಶನಿರಸ್ರೇಧಂತೀ ಕಾಂಶ್ಚಿದಪ್ಯಹಿಂಸತೀ ವಿ ನಶ್ಯತು । ವಿನಷ್ಟಾ ಭವೇತ್ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ಅಸ್ಮೈ**—ಈ ಮನುವಿಗೆ । **ಅಜ್ರೇ ಚಿತ್**—ನೇರವಾದ ಮಾರ್ಗದಲ್ಲಿಯೂ । **ನ್ಯಂಚನಂ**—ಉತ್ತಮವಾದ ಸಂಚಾರವಿರುವಂತೆ । **ಕೃಣುಥ**—ಸಹಾಯಮಾಡುತ್ತೀರಿ । **ದುರ್ಗೇ ಚಿತ್**—ಕಠಿನವಾದ ಮಾರ್ಗದಲ್ಲಿಯೂ । **ಸುಸರಣಂ**—ಸುಲಭವಾದ ಸಂಚಾರವಿರುವಂತೆ । **ಆ (ಕುರುತ)**—ಮಾಡುತ್ತೀರಿ । **ಏಷಾ ಅಶನಿಃ**—ಶತ್ರುವಿನಿಂದ ಪ್ರಯುಕ್ತವಾದ ಈ ಆಯುಧವು । **ನು**—ಕ್ಷಿಪ್ರವಾಗಿ । **ಅಸ್ಮಾತ್**—ಈ ಮನುವಿಗಿಂತ । **ಪರಃ**—ದೂರಸರಿದು ಹೋಗಲಿ । **ಸಾ**—ಅದೇ ಆಯುಧವು । **ಅಸ್ರೇಧಂತೀ**—ಕೊಂಚವೂ ಹಿಂಸಿಸದೆ । **ವಿ ನಶ್ಯತು**—ಪೂರ್ಣವಾಗಿ ನಾಶವಾಗಲಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ಈ ಮನುವಿಗೆ ನೇರವಾದ ಮಾರ್ಗದಲ್ಲಿಯೂ ಉತ್ತಮವಾದ ಸಂಚಾರವಿರುವಂತೆ ಸಹಾಯಮಾಡುತ್ತೀರಿ. ಕಠಿನವಾದ ಮಾರ್ಗದಲ್ಲಿಯೂ ಸುಲಭವಾದ ಸಂಚಾರವಿರುವಂತೆ ಮಾಡುತ್ತೀರಿ.

ಶತ್ರುವಿನಿಂದ ಪ್ರಯುಕ್ತವಾದ ಈ ಆಯುಧವು ಕ್ಷಿಪ್ರವಾಗಿ ಈ ಮನುವಿನಿಂದ ದೂರಸರಿದುಹೋಗಲಿ. ಅದೇ ಆಯುಧವು ಅವನನ್ನು ಕೊಂಚವೂ ಹಿಂಸಿಸದೇ ಪೂರ್ಣವಾಗಿ ನಾಶವಾಗಲಿ.

English Translation.

You enable him (Manu) to proceed by an unobstructed road ; you grant him easy access to difficult passes : may the weapon (of the foe) be far from him, and, inflicting no injury, perish.

|| ಸಂಹಿತಾಪಾಠಃ ||

ಯದದ್ಯ ಸೂರ್ಯ ಉದ್ಯತಿ ಪ್ರಿಯಕ್ಷತ್ರಾ ಋತಂ ದಧ ।
ಯನ್ನಿಮ್ರುಚಿ ಪ್ರಬುಧಿ ವಿಶ್ವವೇದಸೋ ಯದ್ವಾ ಮಧ್ಯಂದಿನೇ ದಿವಃ ॥೧೯॥

॥ ಪದಪಾಠಃ ॥

ಯತ್ । ಅದ್ಯ । ಸೂರ್ಯೇ । ಉತ್ऽಯತಿ । ಪ್ರಿಯಕ್ಷತ್ರಾಃ । ಋತಂ । ದಧ ।
ಯತ್ । ನಿऽಮ್ರುಚಿ । ಪ್ರऽಬುಧಿ । ವಿಶ್ವऽವೇದಸಃ । ಯತ್ । ವಾ । ಮಧ್ಯಂದಿನೇ । ದಿವಃ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಪ್ರಿಯಕ್ಷತ್ರಾಃ ಪ್ರೀಣಯಿತೃಬಲಾ ದೇವಾಃ ಸೂರ್ಯೇ ಸರ್ವಸ್ಯ ಸ್ವಸ್ವಕರ್ಮಣಿ ಪ್ರೇರಕೇ ಸವಿತರ್ಯುದ್ಯತ್ಯುದ್ಗಚ್ಛತಿ ಸತ್ಯದ್ಯಾಸ್ಮಿನ್ದಿನೇ ಯದ್ಯದಾ ಋತಂ ಕಲ್ಯಾಣಭೂತಂ ಗೃಹಂ ದಧ ಧಾರಯಥ ॥ ದಧಾತೇರ್ಲಿಟಿ ಮಧ್ಯಮಬಹುವಚನೇ ರೂಪಂ ॥ ಯದ್ಯದಾ ಹೇ ವಿಶ್ವವೇದಸಃ ಸರ್ವಧನಾ ದೇವಾಃ ನಿಮ್ರುಚಿ । ಮ್ರುಚಿರ್ಗತ್ಯರ್ಥಃ । ಸೂರ್ಯಸ್ಯ ನಿಮ್ರೋಚನೇ ನಿತರಾಂ ಗಮನೇ । ಸಾಯಮಿತ್ಯರ್ಥಃ । ತಸ್ಮಿನ್ ಧಾರಯಥ । ಯದ್ವಾ ಪ್ರಬುಧಿ ತಸ್ಯ ಪ್ರಬೋಧನೇ ಪ್ರಾತಃಕಾಲೇ । ಯದ್ವಾ ದಿವಃ ಸೂರ್ಯತೇಜಸಾ ದೀಪ್ಯಮಾನಸ್ಯಾಹ್ನೋ ಮಧ್ಯಂದಿನೇ ಮಧ್ಯೇ ಧನಂ ಮನವೇ ಧತ್ತೇತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

ವಿಶ್ವವೇದಸಃ—ಸಮಸ್ತವಾದ ಧನವುಳ್ಳವರೂ । ಪ್ರಿಯಕ್ಷತ್ರಾಃ—ಜಗತ್ತಿಗೆ ಪ್ರಿಯಕರವಾದ ಶಕ್ತಿಯುಳ್ಳವರೂ ಆದ ಎಲೈ ದೇವತೆಗಳೇ । ಸೂರ್ಯೇ—ಸೂರ್ಯನು । ಉದ್ಯತಿ—ಉದಯಿಸುವ । ಅದ್ಯ—ಈ ಕಾಲದಲ್ಲಿ । ಯತ್—ಯಾವಾಗ । ಋತಂ—ಕಲ್ಯಾಣಭೂತವಾದ ಯಜ್ಞಗೃಹವನ್ನು । ದಧ—ಧರಿಸಿರುವಿರೋ । ಯತ್—ಯಾವಾಗ । ನಿಮ್ರುಚಿ—ಸೂರ್ಯಾಸ್ತಮಯ ಕಾಲದಲ್ಲೂ (ಅಥವಾ) । ಪ್ರಬುಧಿ—

ಪ್ರಾತಃಕಾಲದಲ್ಲಿಯೂ | **ಯದ್ವಾ**— ಅಥವಾ | **ದಿವಃ**— ಪ್ರಕಾಶಮಾನವಾದ ಅಹಸ್ಸಿನ | **ಮಧ್ಯಂದಿನೇ**— ಮಧ್ಯಾಹ್ನಕಾಲದಲ್ಲೂ ಯಾವಾಗ ಈ ಯಜ್ಞಗೃಹವನ್ನು ಧರಿಸುವಿರೋ ಆಗ ಮನುವಿಗೆ ಧನವನ್ನು ಕೊಡುತ್ತೀರಿ.

॥ ಭಾವಾರ್ಥ ॥

ಸಮಸ್ತವಾದ ಧನವುಳ್ಳವರೂ, ಜಗತ್ತಿಗೆ ಪ್ರಿಯಕರವಾದ ಶಕ್ತಿಯುಳ್ಳವರೂ ಆದ ಎಲ್ಲೈ ದೇವತೆಗಳೇ, ಸೂರ್ಯನು ಉದಯಿಸುವ ಈ ಕಾಲದಲ್ಲಿಯಾಗಲಿ, ಸೂರ್ಯಾಸ್ತಮಯ ಕಾಲದಲ್ಲಿಯಾಗಲಿ, ಪ್ರಾತಃಕಾಲದಲ್ಲಿ ಯಾಗಲಿ ಅಥವಾ ಪ್ರಕಾಶಮಾನವಾದ ಅಹಸ್ಸಿನ ಮಧ್ಯಕಾಲದಲ್ಲಿಯಾಗಲಿ ನೀವು ಯಾವಾಗ ಈ ಯಜ್ಞಗೃಹವನ್ನು ಧರಿಸುವಿರೋ ಆಗ ಮನುವಿಗೆ ಧನವನ್ನು ಕೊಡುತ್ತೀರಿ.

English Translation.

Divinities of benevolent vigour, since you preside over the rite to-day, at the rising of the sun, since, possessors of all wealth, (you are present) at his setting, or at his waking, or at the meridian of the day ;

॥ ಸಂಹಿತಾಪಾಠಃ ॥

ಯದ್ವಾಭಿಪಿತ್ವೇ ಅಸುರಾ ಋತಂ ಯತೇ ಛರ್ದಿರ್ಯೇಮ ವಿ ದಾಶುಷೇ ।
ವಯಂ ತದ್ವೋ ವಸವೋ ವಿಶ್ವವೇದಸ ಉಪ ಸ್ಥೇಯಾಮ ಮಧ್ಯ ಆ ॥೨೦॥

॥ ಪದಪಾಠಃ ॥

**ಯತ್ । ವಾ । ಅಭಿಽಪಿತ್ವೇ । ಅಸುರಾಃ । ಋತಂ । ಯತೇ । ಛರ್ದಿಃ । ಯೇಮ । ವಿ । ದಾಶುಷೇ ।**

**ವಯಂ । ತತ್ । ವಃ । ವಸವಃ । ವಿಶ್ವಽವೇದಸಃ । ಉಪ । ಸ್ಥೇಯಾಮ । ಮಧ್ಯೇ । ಆ ॥ ೨೦ ॥**

॥ ಸಾಯಣಭಾಷ್ಯಂ ॥

**ಹೇ ಅಸುರಾಃ ಪ್ರಾಜ್ಞಾಃ ಸಂಗ್ರಾಮ ಆಪ್ತಾನಾಂ ಕ್ಷೇಪ್ತಾರೋ ವಾ ದೇವಾಃ ಯದ್ವಾಭಿಪಿತ್ವೇಽಸ್ಮದ್ಯಜ್ಞಂ ಪ್ರತಿ ಯುಷ್ಮಾಕಮಭಿಪ್ರಾಪ್ತಾವೃತಂ ಸತ್ಯಭೂತಂ ಯಜ್ಞಂ ಯತೇ ॥ ಇಣಃ ಶತರಿ ರೂಪಂ ॥ ಗಚ್ಛತೇ ದಾಶುಷೇ ಹವೀಂಷಿ ದತ್ತವತೇ ಯಜಮಾನಾಯ ಛರ್ದಿಃ ॥ ಛರ್ದಿರ್ದೀಪ್ತಿದೇವನಯೋಃ ॥ ದೀಪ್ಯತೇಽನೇನೇತಿ ಛರ್ದಿಸ್ತೇಜಃ । ಯದ್ವಾ । ಛರ್ದಂತಿ ದೀವ್ಯಂತೇಽತ್ರೇತಿ ಛರ್ದಿರ್ಗೃಹಂ ! ತದ್ಗೃಹಂ ತೇಜೋ ವಾ ವಿ ಯೇಮ ಪ್ರಯಚ್ಛಥ । ಯದ್ಯೇವಂ ಯೂಯಂ ಕುರುಥ ತರ್ಹಿ ವಯಂ ಹೇ ವಸವಃ ಸ್ತೋತೄಣಾಂ ಧನಾದಿಭಿರಾಚ್ಛಾದಯಿತಾರಃ ಯದ್ವಾ ಶತ್ರೂಣಾಂ ವಿವಾಸಯಿತಾರೋ ವಿಶ್ವವೇದಸಃ ಸರ್ವಧನಾಃ ಸರ್ವಜ್ಞಾನಾ ವಾ ಹೇ ದೇವಾಃ ವೋ ಯುಷ್ಮತ್ಸಂಬಂಧಿ ತತ್ಕಲ್ಯಾಣಂ ಗೃಹಂ।**

ಷಷ್ಠ್ಯರ್ಥೇ ದ್ವಿತೀಯಾ । ಛರ್ದಿಷಃ ಪ್ರಶಸ್ತಸ್ಯ ಗೃಹಸ್ಯ ಮಧ್ಯ ಉಪ ಸ್ಥೇಯಾಮ । ಉಪತಿಷ್ಠೇಮ । ಯುಷ್ಮಾನ್ಹವಿರ್ಭಿಃ ಪೂಜಯೇಮ ॥ ತಿಷ್ಠತೇರಾಶೀರ್ಲಿಙಿ ಲಿಙ್ಯಾಶಿಷ್ಯಙಿತ್ಯಙ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಅಸುರಾಃ** - ಪ್ರಾಜ್ಞರಾದ ಎಲೈ ದೇವತೆಗಳೇ । **ಯದ್ವಾ** - ಅಥವಾ । **ಅಭಿಪಿತ್ವೇ**— ಯಜ್ಞಗೃಹಕ್ಕೆ ನೀವು ಬಂದಕಾಲದಲ್ಲಿ । **ಯತೇ**—ಅಲ್ಲಿಗೆ ಹೋಗತಕ್ಕ । **ದಾಶುಷೇ**—ಯಜಮಾನನಿಗೆ । **ಛರ್ದಿಃ**—ಗೃಹವನ್ನು । **ವಿ ಯೇಮ**—ಯಾವಾಗ ಕೊಡುವಿರೋ ಆಗ । **ವಸವಃ**- ಶತ್ರುಧರ್ಷಕರೂ । **ವಿಶ್ವವೇದಸಃ**— ಸಕಲ ಧನವುಳ್ಳವರೂ ಆದ ಎಲೈ ದೇವತೆಗಳೇ । **ವಯಂ**—ನಾವೂ ಸಹ । **ವಃ**—ನಿಮಗೆ ಸೇರಿದ । **ತತ್**— ಅದೇ ಕಲ್ಯಾಣಗೃಹದ । **ಮಧ್ಯೇ**—ಮಧ್ಯಭಾಗದಲ್ಲಿ । **ಉಪಸ್ಥೇಯಾಮ**—ನಿಮ್ಮ ಪೂಜೆಗಾಗಿ ಬಂದು ಸೇರುವೆವು.

॥ ಭಾವಾರ್ಥ ॥

ಪ್ರಾಜ್ಞರಾದ ಎಲೈ ದೇವತೆಗಳೇ, ಯಜ್ಞಗೃಹಕ್ಕೆ ನೀವು ಬಂದ ಕಾಲದಲ್ಲಿ ಅಲ್ಲಿಗೆ ಪೂಜೆಗಾಗಿ ಹೋಗತಕ್ಕ ಯಜಮಾನನಿಗೆ ಗೃಹವನ್ನು ಯಾವಾಗ ಕೊಡುವಿರೋ ಆಗ ಸಕಲ ಧನವುಳ್ಳವರೂ ಶತ್ರುಧರ್ಷಕರೂ ಆದ ಎಲೈ ದೇವತೆಗಳೇ, ನಿಮಗೆ ಸೇರಿದ ಅದೇ ಕಲ್ಯಾಣಗೃಹದ ಮಧ್ಯಭಾಗದಲ್ಲಿ ನಿಮ್ಮ ಪೂಜೆಗಾಗಿ ಬಂದು ಸೇರುವೆವು

English Translation.

Or since all-wise deities, you accept the sacrifice, bestowing on the zealous donor (of the oblation) a dwelling (such as we may worship in), then, possessors of all wealth, distributors of riches, may we worship you in the midst (of that dwelling).

॥ ಸಂಹಿತಾಪಾಠಃ ॥

ಯದದ್ಯ ಸೂರ ಉದಿತೇ ಯನ್ಮಧ್ಯಂದಿನ ಆತುಚಿ ।
ವಾಮಂ ಧತ್ಥ ಮನವೇ ವಿಶ್ವವೇದಸೋ ಜುಹ್ವಾನಾಯ ಪ್ರಚೇತಸೇ ॥ ೧೦ ॥

॥ ಪದಪಾಠಃ ॥

ಯತ್ । ಅದ್ಯ । ಸೂರೇ । ಉತ್ಽಇತೇ । ಯತ್ । ಮಧ್ಯಂದಿನೇ । ಆಽತುಚಿ ।
ವಾಮಂ । ಧತ್ಥ । ಮನವೇ । ವಿಶ್ವಽವೇದಸಃ । ಜುಹ್ವಾನಾಯ । ಪ್ರಽಚೇತಸೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ವಿಶ್ವವೇದಸಃ ಸರ್ವತೋ ವ್ಯಾಪ್ತಧನಾ ಹೇ ದೇವಾಃ ಯದ್ಯದಾದ್ಯೇದಾನೀಂ । ಯದ್ವಾ ಸೂರ್ಯೇ ಉದಿತೇ ಸತಿ । ಯದ್ಯದಾ ಮಧ್ಯಂದಿನೇ ದಿವಸಸ್ಯ ಮಧ್ಯೇ । ಯದ್ವಾತುಚಿ । ಆತುಚಿರ್ಗಮ-

ನಾರ್ಥಃ । ಸೂರ್ಯಸ್ಯ ನಿಮ್ರೋಚನೇ । ಸಾಯಮಿತ್ಯರ್ಥಃ । ಜುಹ್ವಾನಾಯಾಗ್ನೌ ಹವೀಂಷಿ ಜುಹ್ವತೇ ಅತ ಏವ ಪ್ರಚೇತಸೇ ಪ್ರಕೃಷ್ಟಜ್ಞಾನಾಯ ಮನವ ಏತನ್ನಾಮಕಾಯರ್ಷಯೇ ಮಹ್ಯಂ ವಾಮಂ ವನನೀಯಂ ಧನಂ ಧತ್ಥ ದತ್ಥ ತದ್ವೃಣೀಮಹ ಇತ್ಯುತ್ತರತ್ರ ಸಂಬಂಧಃ ॥

। ಪ್ರತಿಪದಾರ್ಥ ॥

**ವಿಶ್ವವೇದಸಃ**—ಸರ್ವತ್ರ ವ್ಯಾಪ್ತವಾದ ಧನವುಳ್ಳ ಎಲ್ಲೈ ದೇವತೆಗಳೇ । **ಯತ್**—ಯಾವಾಗ । **ಅದ್ಯ**—ಈ ಯಾಗ ಕಾಲದಲ್ಲಿ । **ಉದಿತೇ**-ಸೂರ್ಯೋದಯವಾದಾಗಲೂ । **ಯತ್**-ಯಾವಾಗ । **ಮಧ್ಯಂದಿನೇ**—ಮಾಧ್ಯಂದಿನಕಾಲದಲ್ಲೂ । **ಆತುಚಿ**—ಸಾಯಂಕಾಲದಲ್ಲೂ । **ಜುಹ್ವಾನಾಯ**—ನಿಮಗೆ ಆಹುತಿಯನ್ನರ್ಪಿಸುವವನೂ । **ಪ್ರಚೇತಸೇ**—ಉತ್ತಮನಾದ ಜ್ಞಾನವುಳ್ಳವನೂ ಆದ । **ಮನವೇ**—ಮನುನಾಮಕನಾದ ನನಗೆ । **ವಾಮಂ**—ಆಕರ್ಷಕವಾದ ಧನವನ್ನು । **ಧತ್ಥ**—ಕೊಡುವಿರೋ (ಆಗ ನಿಮ್ಮನ್ನು ಸ್ತುತಿಸುವೆವು).

॥ ಭಾವಾರ್ಥ ॥

ಸರ್ವತ್ರ ವ್ಯಾಪ್ತವಾದ ಧನವುಳ್ಳ ಎಲ್ಲೈ ದೇವತೆಗಳೇ, ಯಾವಾಗ ಈ ಸೂರ್ಯೋದಯ ಕಾಲದಲ್ಲೂ ಮಾಧ್ಯಂದಿನಕಾಲದಲ್ಲೂ ಮತ್ತು ಸಾಯಂಕಾಲದಲ್ಲೂ ನಿಮಗೆ ಆಹುತಿಯನ್ನರ್ಪಿಸುವವನೂ ಉತ್ತಮವಾದ ಜ್ಞಾನವುಳ್ಳವನೂ ಆದ ಮನುನಾಮಕನಾದ ನನಗೆ ಆಕರ್ಷಕವಾದ ಧನವನ್ನು ಕೊಡುವಿರೋ, ಆಗ ನಿಮ್ಮನ್ನು ಸ್ತುತಿಸುವೆವು.

English Translation.

(Gods), who are possessed of all wealth, bestow the desired (opulence) upon the intelligent Manu, offering oblations to you at sunrise, mid-day and sunset.

॥ ಸಂಹಿತಾಪಾಠಃ ॥

ವಯಂ ತದ್ವಃ ಸಮ್ರಾಜ ಆ ವೃಣೀಮಹೇ ಪುತ್ರೋ ನ ಬಹುಪಾಯ್ಯಂ ।
ಅಶ್ಯಾಮ ತದಾದಿತ್ಯಾ ಜುಹ್ವತೋ ಹವಿರ್ಯೇನ ವಸ್ಯೋಽನಶಾಮಹೈ ॥೨೨॥

॥ ಪದಪಾಠಃ ॥

ವಯಂ । ತತ್ । ವಃ । ಸಂಽರಾಜಃ । ಆ । ವೃಣೀಮಹೇ । ಪುತ್ರಃ । ನ । ಬಹುಽಪಾಯ್ಯಂ ।
ಅಶ್ಯಾಮ । ತತ್ । ಆದಿತ್ಯಾಃ । ಜುಹ್ವತಃ । ಹವಿಃ । ಯೇನ । ವಸ್ಯಃ । ಅನಶಾಮಹೈ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ಸಮ್ರಾಜಃ ಸಮ್ಯಗ್ದೀಪ್ಯಮಾನಾ ದೇವಾಃ ಪುತ್ರೋ ನ ॥ ಏಕವಚನಂ ಛಾಂದಸಂ ॥ ಯುಷ್ಮಾಕಂ ಪುತ್ರಾ ಇವ ಸ್ಥಿತಾಃ ಪುತ್ರಾ ಯಥಾ ಪಿತೃಭಿಃ ಪೋಷ್ಯಾಃ ತದ್ವದ್ಯುಷ್ಮಾಭಿಃ ಪೋಷ್ಯಾ

**ವಯಂ** । ಬಹುಪಾಯ್ಯಂ ಬಹುಭಿರ್ಭೋಗ್ಯಂ ವೋ ಯುಷ್ಮತ್ಸಂಬಂಧಿ ತದ್ಧನಮುಶ್ಯಾಮ । ಪ್ರಾಪ್ನುಯಾಮ । ಯೇನ ಧನೇನ ವಸ್ಯೋ ವಸೀಯೋಽತಿಶಯೇನ ವಸುಮತ್ತ್ವಮನಶಾಮಹೈ ಅಶ್ನವಾಮಹೈ ಪ್ರಾಪ್ನುಮಃ ॥ ಅಶ್ನೋತೇರ್ಲೋಟಿ ವ್ಯತ್ಯಯೇನ ಶ್ನಪ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಹೇ ಸಮ್ರಾಜಃ**—ಅತ್ಯಂತ ಪ್ರಕಾಶಮಾನರಾದ ಎಲೈ ದೇವತೆಗಳೇ । **ಪುತ್ರೋ ನ**—ನಿಮ್ಮ ಪುತ್ರರಂತೆ ಪೋಷಿಸಲ್ಪಡಬೇಕಾದ । **ವಯಂ**—ನಾವು । **ಬಹುಪಾಯ್ಯಂ**—ಅನೇಕರಿಂದ ಅನುಭವಿಸಲ್ಪಡುವ । **ವಃ**—ನಿಮ್ಮ ಸಂಬಂಧಿಯಾದ । **ತತ್**—ಆ ಧನವನ್ನು । **ಆ ವೃಣೀಮಹೇ**—ಅಪೇಕ್ಷಿಸುತ್ತೇವೆ । **ಹೇ ಆದಿತ್ಯಾಃ**—ಅದಿತಿಪುತ್ರರಾದ ಎಲೈ ದೇವತೆಗಳೇ । **ತತ್**—ನೀವು ಕೊಡುವ ಆ ಧನವನ್ನು । **ಅಶ್ಯಾಮ**—ನಾವು ಅನುಭವಿಸುವಂತಾಗಲಿ । **ಯೇನ**—ಯಾವ ಧನದ ಸಹಾಯದಿಂದ । **ಹವಿಃ**—ನಿಮ್ಮನ್ನುದ್ದೇಶಿಸಿ ಹವಿರಾದಿಗಳನ್ನು । **ಜುಹ್ವತಃ**—ಹೋಮಮಾಡುವವರಾಗಿ । **ವಸ್ಯಃ**—ಅತ್ಯಂತ ಧನವಂತರಾಗಿ । **ಅನಶಾಮಹೈ**—ಆಗುವಂತಾಗಲಿ

॥ ಭಾವಾರ್ಥ ॥

ಅತ್ಯಂತ ಪ್ರಕಾಶಮಾನರಾದ ಎಲೈ ದೇವತೆಗಳೇ, ನಿಮ್ಮ ಪುತ್ರರಂತೆ ಪೋಷಣೆಗೆ ಅರ್ಹರಾದ ನಾವು ಅನೇಕರಿಂದ ಅನುಭವಿಸಲ್ಪಡುವ ನಿಮ್ಮ ಬಳಿಯಿರುವ ಧನವನ್ನು ಅಪೇಕ್ಷಿಸುತ್ತೇವೆ. ಅದಿತಿಪುತ್ರರಾದ ಎಲೈ ದೇವತೆಗಳೇ, ನೀವು ನಮಗೆ ಕೊಡುವ ಆ ಧನವನ್ನು ನಾವು ಅನುಭವಿಸುವಂತಾಗಲಿ ಮತ್ತು ಆ ಧನದ ಸಹಾಯದಿಂದ ನಿಮ್ಮನ್ನುದ್ದೇಶಿಸಿ ಹವಿರಾದಿಗಳನ್ನು ಅರ್ಪಿಸಿ ಅತ್ಯಂತ ಧನವಂತರಾಗುವಂತೆಯೂ ಆಗಲಿ.

English Translation.

We solicit of you, resplendent deities, as a son (of a father), that which is to to be enjoyed by many; offering oblations, may we obtain that (wealth), Adityas, by which we may possess abundance.



## ಇಪ್ಪತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಯೇ ತ್ರಿಂಶತೀತಿ ಪಂಚರ್ಚಮಷ್ಟಮಂ ಸೂಕ್ತಂ । ಅತ್ರಾನುಕ್ರಾಂತಂ । ಯೇ ತ್ರಿಂಶತಿ ಪಂಚೋಪಾಂತ್ಯಾ ಪುರ ಉಷ್ಣಿಗಿತಿ । ಮನುರ್ಋಷಿಃ । ಪ್ರಾಗ್ವತ್ಸಪ್ರೀಯಪರಿಭಾಷಯಾ ಗಾಯತ್ರೀ ಛಂದಃ । ಉಪಾಂತ್ಯಾ ಪುರಉಷ್ಣಿಕ್ । ಪೂರ್ವವದ್ವಿಶ್ವೇ ದೇವಾ ದೇವತಾ ॥ ತೃತೀಯೇ ಛಂದೋಮೇ ವೈಶ್ವದೇವಶಸ್ತ್ರೇ ಯೇ ತ್ರಿಂಶತೀತ್ಯೇತತ್ಸೂಕ್ತಂ ವೈಶ್ವದೇವನಿವಿದ್ಧಾನಂ । ಸೂತ್ರಿತಂ ಚ । ಯೇ ತ್ರಿಂಶತೀತಿ ವೈಶ್ವದೇವಂ । ಆ. ೮-೧೧ । ಇತಿ ॥**

ಅನುವಾದವು—**ಯೇ ತ್ರಿಂಶತಿ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎಂಟನೆಯ **ಸೂಕ್ತವು.** ಇದರಲ್ಲಿ ಐದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಯೇ ತ್ರಿಂಶತಿ ಪಂಚೋಪಾಂತ್ಯಾ ಪುರಉಷ್ಣಿಕ್** ಎಂದು ಹೇಳಿರುವುದು. ಈ ಸೂಕ್ತಕ್ಕೆ ಮನುವು ಋಷಿಯು; ಹಿಂದಿನ ಸೂಕ್ತದಂತೆ ವಿಶ್ವೇದೇವತೆಗಳೇ **ದೇವತೆಯು;** ಗಾಯತ್ರೀಛಂದಸ್ಸು. ಆದರೆ ಕೊನೆಯ ಋಕ್ಕಿನ ಹಿಂದಿನ ಋಕ್ಕು (೪ನೆಯ ಋಕ್ಕು) ಪುರಉಷ್ಣಿಕ್ ಎಂಬ ಛಂದಸ್ಸಿನದು. ತೃತೀಯ ಛಂದೋಮದಲ್ಲಿ ವೈಶ್ವದೇವಶಸ್ತ್ರಮಂತ್ರಗಳನ್ನು ಪಠಿಸುವಾಗ **ಯೇ ತ್ರಿಂಶತಿ** ಎಂಬ ಈ ಸೂಕ್ತವನ್ನು ವಿಶ್ವೇದೇವತಾಕವಾದ ನಿವಿದ್ಧಾನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯೇ ತ್ರಿಂಶತೀತಿ ವೈಶ್ವದೇವಂ** ಎಂಬ ಸೂತ್ರದಿಂದ (ಆ. ೮-೧೧) ವಿವೃತವಾಗಿರುವುದು.

## ಸೂಕ್ತ—೨೮

ಮಂಡಲ—೮ ‖ ಅನುವಾಕ—೪ ‖ ಸೂಕ್ತ—೨೮ ‖
ಅಷ್ಟಕ—೬ ‖ ಅಧ್ಯಾಯ—೨ ‖ ವರ್ಗ—೩೫ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ‖
‖ ಋಷಿಃ—ಮನುರ್ವೈವಸ್ವತಃ ‖
‖ ದೇವತಾ—ವಿಶ್ವೇ ದೇವಾಃ ‖
‖ ಛಂದಃ—೧-೩, ೫. ಗಾಯತ್ರೀ । ೪. ಪುರಉಷ್ಣಿಕ್ ‖

‖ ಸಂಹಿತಾಪಾಠಃ ‖

ಯೇ ತ್ರಿಂಶತಿ ತ್ರಯಸ್ಪರೋ ದೇವಾಸೋ ಬರ್ಹಿರಾಸದನ್ ।
ವಿದನ್ನಹ ದ್ವಿತಾಸನನ್ ‖ ೧ ‖

‖ ಪದಪಾಠಃ ‖

ಯೇ । ತ್ರಿಂಶತಿ । ತ್ರಯಃ । ಪರಃ । ದೇವಾಸಃ । ಬರ್ಹಿಃ । ಆ । ಅಸದನ್ ।
ವಿದನ್ । ಅಹ । ದ್ವಿತಾ । ಅಸನನ್ ‖ ೧ ‖

‖ ಸಾಯಣಭಾಷ್ಯಂ ‖

ಮನುರಾಹ । ತ್ರಿಂಶತಿ ತ್ರಿಂಶತ್ಸಂಖ್ಯಾಯಾಃ ಪರಃ ಪರಸ್ತಾತ್ತ್ರಯಃ । ತ್ರಯಸ್ತ್ರಿಂಶದ್ದೇವತಾ ಇತ್ಯರ್ಥಃ । ಯೇ ದೇವಾಸೋ ದೇವಾ ಬರ್ಹಿರಸ್ಮದೀಯೇಯಜ್ಞಸಂಬಂಧಿನಿ ಬರ್ಹಿಷಿ ಹವಿಃಸ್ವೀಕರಣಾರ್ಥಮಾಸದನ್ ಆಸೀದಂತು ಅಥಾನಂತರಂ ವಿದನ್ ತೇ ದೇವಾ ಅಸ್ಮಾನ್ಹವಿಷಾಂ ಪ್ರದಾತೄನಿತಿ ಜಾನಂತು । ತತೋ ದ್ವಿತಾ ದ್ವಿಧಾ ದ್ವಿಪ್ರಕಾರಮಸನನ್ । ಅಸ್ಮಭ್ಯಂ ಧನಂ ಪಶ್ವಾದಿಕಂ ಚ ಪ್ರಯಚ್ಛಂತು । ಯದ್ವಾ । ದ್ವಿತಾ ದ್ವೈಧಂ । ಅನೇನ ಪೌನಃಪುನ್ಯಂ ಲಕ್ಷ್ಯತೇ । ಪುನಃಪುನರಸ್ಮಭ್ಯಂ ಧನಾದಿಕಂ ದದತ್ವಿತ್ಯರ್ಥಃ ‖

॥ ಪ್ರತಿಪದಾರ್ಥ ॥

**ತ್ರಿಂಶತಿ**—ಮೂವತ್ತಕ್ಕಿಂತಲೂ । **ಪರಃ**—ಮೀರಿದ । **ತ್ರಯಃ**—ಮೂರು ಸಂಖ್ಯೆಯುಳ್ಳ (ಮೂವತ್ತ ಮೂರು ಸಂಖ್ಯೆಯುಳ್ಳ) । **ಯೇ**—ಯಾವ । **ದೇವಾಸಃ**—ದೇವತೆಗಳಿರುವರೋ ಅವರು । **ಬರ್ಹಿಃ**—ದರ್ಭಾಸನದ ಮೇಲೆ । **ಆಸದನ್**—ಕುಳಿತುಕೊಳ್ಳಲಿ । **ವಿದನ್**—ಯಜಮಾನರ ಭಕ್ತಿಯನ್ನು ತಿಳಿಯಲಿ । **ದ್ವಿತಾ**—ಎರಡು ವಿಧವಾದ ಧನಗಳನ್ನು (ಅತ್ಯಧಿಕವಾದ ಸಂಪತ್ತುಗಳನ್ನು) । **ಅಸನನ್**—ನಮಗೆ ಕೊಡಲಿ.

॥ ಭಾವಾರ್ಥ ॥

ಮೂವತ್ತುಮೂರು ಸಂಖ್ಯೆಗಳಿಂದ ಪ್ರಸಿದ್ಧರಾದ ಸಕಲ ದೇವತೆಗಳೂ ಬಂದು ನಮ್ಮ ದರ್ಭಾಸಗದ ಮೇಲೆ ಕುಳಿತುಕೊಳ್ಳಲಿ. ಮತ್ತು ಯಜಮಾನರ ಭಕ್ತ್ಯತಿಶಯವನ್ನು ತಿಳಿದು ಅದರ ಫಲವಾಗಿ ಅತ್ಯಧಿಕವಾದ ಸಂಪತ್ತುಗಳನ್ನು ನಮಗೆ ಕೊಡಲಿ.

## English Translation.

May the three-and-thirty divinities sit down upon the sacred grass; may they accept (our offerings), and bestow upon us both (sorts of wealth).

॥ ಸಂಹಿತಾಪಾಠಃ ॥

ವರುಣೋ ಮಿತ್ರೋ ಅರ್ಯಮಾ ಸ್ಮದ್ರಾತಿಷಾಚೋ ಅಗ್ನಯಃ ।
ಪತ್ನೀವಂತೋ ವಷಟ್ಕೃತಾಃ ॥ ೨ ॥

॥ ಪದಪಾಠಃ ॥

ವರುಣಃ । ಮಿತ್ರಃ । ಅರ್ಯಮಾ । ಸ್ಮದ್ರಾತಿಽಸಾಚಃ । ಅಗ್ನಯಃ ।
ಪತ್ನೀಽವಂತಃ । ವಷಟ್ಽಕೃತಾಃ ॥ ೨ ॥

॥ ಸಾಯಣಭಾಷ್ಯಂ ॥

**ವರುಣೋ ವರಣೀಯಃ ಸಂಭಜನೀಯೋ ಮಿತ್ರಃ ಸ್ತೋತೄಣಾಂ ಯಷ್ಟೄಣಾಂ ಚ ಧನಾದಿದಾನೇನ ಮಿತ್ರಭೂತೋಽರ್ಯಮಾ ಸ್ತೋತ್ರಕಾರಿಣೇ ಧನಂ ಪ್ರಾಪಯನ್ ಯದ್ವಾ ಸತತಂ ಗಚ್ಛನ್ ಏತನ್ನಾಮಕಾಸ್ತ್ರಯೋ ದೇವಾಃ ಸ್ಮದ್ರಾತಿಷಾಚಃ । ಸ್ಮತ್ ಸುಮಚ್ಛೋಭನಾ ರಾತಿರ್ಹವಿಷ್ಪ್ರದಾನಂ ಯೇಷಾಮಸ್ತೀತಿ ಸ್ಮದ್ರಾತಯೋ ಯಜಮಾನಾಃ । ತಾನ್ ಸಚಂತೇ ಧನಾದಿಪ್ರದಾನೇನ ಸೇವಂತ ಇತಿ ತಥೋಕ್ತಾಃ । ಯದ್ವಾ । ಕಲ್ಯಾಣಂ ಯಥಾ ಭವತಿ ತಥಾ ಹವಿಷಾಂ ದಾತೄನ್ ಸಚಂತ ಇತಿ । ತೇ ತಾದೃಶಾಃ ಪತ್ನೀವಂತೋ ದೇವಪತ್ನೀಸಹಿತಾ ಅಗ್ನಯೋಽಂಗನಶೀಲಾ ನಾನಾವಿಧಾ ಅಗ್ನಯೋ ವಷಟ್ಕೃತಾಃ । ಮಯಾ ಸೋಮಸ್ಯಾಗ್ನೇ ವೀಹಿ ವೌಷಡಿತ್ಯಾದಿನಾ ಸ್ವಾಹಾಕೃತಾಃ । ಸುಹುತಾ ಇತ್ಯರ್ಥಃ ॥**

|| ಪ್ರತಿಪದಾರ್ಥ ||

**ವರುಣಃ**—ವರುಣನೂ । **ಮಿತ್ರಃ**—ಮಿತ್ರನೂ । **ಅರ್ಯಮಾ**—ಅರ್ಯಮನೂ । **ಅಗ್ನಯಃ**—ಗಾರ್ಹಪತ್ಯಾದ್ಯಗ್ನಿಗಳೂ । **ಪತ್ನೀವಂತಃ**—ದೇವಪತ್ನಿಯವರಿಂದೊಡಗೂಡಿದವರಾಗಿಯೂ । **ವಷಟ್ಕೃತಾಃ**—ವಷಟ್ಕಾರಪೂರ್ವಕವಾಗಿ ಪೂಜಿಸಲ್ಪಟ್ಟವರಾಗಿಯೂ । **ಸ್ವದ್ರಾತಿಷಾಚಃ**—ಉದಾರವಾಗಿ ಹವಿಸ್ಸನ್ನು ದಾನ ಮಾಡುವ ಯಜಮಾರನ್ನನುಗ್ರಹಿಸುತ್ತಾರೆ.

॥ ಭಾವಾರ್ಥ ॥

ವರುಣನೂ, ಮಿತ್ರನೂ, ಅರ್ಯಮನೂ, ಗಾರ್ಹಪತ್ಯಾದ್ಯಗ್ನಿಗಳೂ ದೇವಪತ್ನಿಯರಿಂದೊಡಗೂಡಿದವರಾಗಿಯೂ, ವಷಟ್ಕಾರಪೂರ್ವಕವಾಗಿ ಪೂಜಿಸಲ್ಪಟ್ಟವರಾಗಿಯೂ ಉದಾರವಾಗಿ ದಾನಮಾಡುವ ಯಜಮಾನರನ್ನು ಅನುಗ್ರಹಿಸುತ್ತಾರೆ.

English Translation.

May Varuna, Mitra, Aryaman and the Agnis, with their wives, honouring the donors (of the oblation), and addressed with the sacrificial exclamation.

॥ ಸಂಹಿತಾಪಾಠಃ ॥

ತೇ ನೋ ಗೋಪಾ ಅಪಾಚ್ಯಾಸ್ತ ಉದಕ್ತ ಇತ್ಥಾ ನ್ಯಕ್ ।
ಪುರಸ್ತಾತ್ಸರ್ವಯಾ ವಿಶಾ ॥ ೩ ॥

॥ ಪದಪಾಠಃ ॥

ತೇ । ನಃ । ಗೋಪಾಃ । ಅಪಾಚ್ಯಾಃ । ತೇ । ಉದಕ್ । ತೇ । ಇತ್ಥಾ । ನ್ಯಕ್ ।
ಪುರಸ್ತಾತ್ । ಸರ್ವಯಾ । ವಿಶಾ ॥ ೩ ॥

॥ ಸಾಯಣಭಾಷ್ಯಂ ॥

**ತೇ ವರುಣಾದಯೋ ದೇವಾಃ ಸರ್ವಯಾ ಸರ್ವೇಣ ವಿಶಾನುಚರವರ್ಗೇಣ ಸಹಾಪಾಚ್ಯಾಃ । ಅಪಾಚೀ ಪ್ರತೀಚೀ । ತತೋ ನೋಽಸ್ಮಾಕಂ ಗೋಪಾ ಗೋಪಾಯಿತಾರೋ ಭವಂತು । ತ ಏವ ಉದಗುದೀಚ್ಯಾಃ ॥ ಅಂಚೇರ್ಲುಗಿತಿ ಪಂಚಮ್ಯರ್ಥೇ ವಿಹಿತಸ್ಯಾಸ್ತಾತೇರ್ಲುಕ್ ॥ ತತೋಽಪ್ಯಸ್ಮಾಕಂ ರಕ್ಷಕಾ ಭವಂತು । ಇತ್ಥೇತಿ ಶಬ್ದೇನೋರ್ಧ್ವಾಂ ದಿಶಂ ದಕ್ಷಿಣಾಂ ಚ ನಿದಿಶತಿ । ಇತ್ಥಮನೇನ ಪೂರ್ವೋಕ್ತೇನ ಪ್ರಕಾರೇಣೋರ್ಧ್ವಾಯಾ ದಕ್ಷಿಣಸ್ಯಾಶ್ಚ ದಿಶಸ್ತೇ ದೇವಾ ಅಸ್ಮಾಕಂ ಪಾಲಯಿತಾರೋ ಭವಂತು । ತಥಾ ನ್ಯಗ್ನೀಚ್ಯಾ ದಿಶಃ ॥ ಅತ್ರಾಪಿ ಪೂರ್ವವದಸ್ತಾತೇರ್ಲುಕ್ ॥ ಅಧಸ್ತಾದೇವಾಪ್ಯಸ್ಮಾಕಂ ತ್ರಾತಾರೋ ಭವಂತು । ಕಿಂಚ ಪುರಸ್ತಾತ್ಪ್ರಾಚ್ಯಾ ದಿಶಶ್ಚ ತೇ ದೇವಾ ಅಸ್ಮಾಕಂ ಗೋಪಾಯಿತಾರೋ ಭವಂತು ॥**

॥ ಪ್ರತಿಪದಾರ್ಥ ॥

**ತೇ**—ಅದೇ ವರುಣಾದಿದೇವತೆಗಳು | **ಸರ್ವಯಾ**—ಸಕಲವಾದ | **ವಿಶಾ**—ಅನುಚರರೊಡನೆಯೂ ಕೂಡಿ | **ಅಪಾಚ್ಯಾಃ**—ಪಶ್ಚಿಮದಿಕ್ಕಿನಿಂದಲೂ | **ನಃ**—ನಮಗೆ | **ಗೋಪಾಃ**—ರಕ್ಷಕರಾಗಿರಲಿ | **ತೇ**—ಅವರೇ | **ಉದಕ್**—ಉತ್ತರದಿಕ್ಕಿನಿಂದಲೂ ನಮ್ಮ ರಕ್ಷಕರಾಗಿರಲಿ | **ಇತ್ಥಾ**—ಊರ್ಧ್ವ ಮತ್ತು ದಕ್ಷಿಣ ದಿಕ್ಕಿನಿಂದಲೂ ನಮ್ಮ ರಕ್ಷಕರಾಗಿರಲಿ | **ತೇ**—ಅವರೇ | **ನ್ಯಕ್**—ಅಧೋದಿಕ್ಕಿನಿಂದಲೂ | **ಪುರಸ್ತಾತ್**—ಪ್ರಾಗ್ದಿಕ್ಕಿನಿಂದಲೂ ನಮ್ಮ ರಕ್ಷಕರಾಗಿರಲಿ

॥ ಭಾವಾರ್ಥ ॥

ಅದೇ ವರುಣಾದಿದೇವತೆಗಳು ಸಕಲವಾದ ಅನುಚರರೊಡನೆ ಕೂಡಿ ಪಶ್ಚಿಮದಿಕ್ಕಿನಿಂದಲೂ ನಮಗೆ ರಕ್ಷಕರಾಗಿರಲಿ. ಅವರೇ ಉತ್ತರದಿಕ್ಕಿನಿಂದಲೂ ನಮಗೆ ರಕ್ಷಕರಾಗಿರಲಿ. ಊರ್ಧ್ವ ಮತ್ತು ದಕ್ಷಿಣದಿಕ್ಕಿನಿಂದಲೂ ನಮ್ಮ ರಕ್ಷಕರಾಗಿರಲಿ. ಅಧೋಭಾಗದಿಂದಲೂ ಪೂರ್ವ ದಿಕ್ಕಿನಿಂದಲೂ ನಮ್ಮನ್ನು ರಕ್ಷಿಸಲಿ.

English Translation.

Be our protectors, whether coming with all their attendants from the west, from the north, from the south, from the east.

॥ ಸಂಹಿತಾಪಾಠಃ ॥

ಯಥಾ ವಶಂತಿ ದೇವಾಸ್ತಥೇದಸತ್ತದೇಷಾಂ ನಕಿರಾ ಮಿನತ್ |
ಅರಾವಾ ಚನ ಮರ್ತ್ಯಃ ॥ ೪ ॥

॥ ಪದಪಾಠಃ ॥

ಯಥಾ | ವಶಂತಿ | ದೇವಾಃ | ತಥಾ | ಇತ್ | ಅಸತ್ | ತತ್ | ಏಷಾಂ | ನಕಿಃ | ಆ | ಮಿನತ್ |
ಅರಾವಾ | ಚನ | ಮರ್ತ್ಯಃ ॥ ೪ ॥

॥ ಸಾಯಣಭಾಷ್ಯಂ ॥

ದೇವಾ ದ್ಯೋತಮಾನಾಃ ಸರ್ವೇ ದೇವಾ ಯಥಾ ವಶಂತಿ ಯಥಾ ಕಾಮಯಂತೇ ॥ ವಶ ಕಾಂತೌ | ಸಂಪ್ರಸಾರಣಾಚ್ಚೇತಿ ಪೂರ್ವರೂಪಸ್ಯ ಛಂದಸಿ ವಿಕಲ್ಪಿತತ್ವಾದ್ಯಣಾದೇಶಃ ॥ ತಥೇದ್ಯಥೋಶಂತಿ ತಥೈವಾಸತ್ | ತದ್ಭವತ್ಯೇವ | ತದೇವಾಹ | ಏಷಾಂ ದೇವಾನಾಂ ತತ್ಕಾಮನಂ ನಕಿರ್ನ ಕಶ್ಚಿದಪಿ ಮಿನತ್ | ಹಿನಸ್ತಿ ॥ ಮೀಞ್ ಹಿಂಸಾಯಾಂ | ಲೇಟಿ ರೂಪಂ | ಮೀನಾತೇರ್ನಿಗಮ ಇತಿ ಹ್ರಸ್ವತ್ವಂ ॥ ಕಥಂ ದೇವಾನಾಮಭಿಲಷಿತಂ ತಥಾ ಭವತೀತಿ ಚೇತ್ ತದಾಹ | ಅರಾವಾ | ಯದಿ ದೇವಾಃ ಕಸ್ಯಚಿದಪ್ಯದಾತಾರಂ ಮನುಷ್ಯಂ ಕಾಮಯೇರನ್ ತದಾರಾವಾದಾತಾ | ಚನೇತ್ಯಪ್ಯರ್ಥೇ | ಅದಾತಾಪಿ

ಮರ್ತ್ಯೋ ಮನುಷ್ಯ ಉಶದ್ಭ್ಯೋ ದೇವೇಭ್ಯೋ ಹವೀಂಷಿ ಪ್ರಯಚ್ಛತಿ । ತಸ್ಮಾತ್ತೇಷಾಂ ಯತ್ಕಾಮನಂ ತತ್ತಥಾ ಭವತ್ಯೇವೇತ್ಯರ್ಥಃ ॥

। ಪ್ರತಿಪದಾರ್ಥ ।

**ದೇವಾಃ**—ಪ್ರಕಾಶಮಾನರಾದ ಸಕಲದೇವತೆಗಳೂ । **ಯಥಾ**—ಯಾವ ಪ್ರಕಾರವಾಗಿ । **ವಶಂತಿ** ಇಚ್ಛಿಸುವರೋ । **ತಥೇತ್**—ಆ ಇಚ್ಛೆಯಿಂತೆಯೇ । **ಅಸತ್**—ಎಲ್ಲವೂ ಒದಗುವುವು । **ಏಷಾಂ**—ಈ ದೇವತೆಗಳ । **ತತ್**—ಅದೇ ಇಚ್ಛೆಯನ್ನು । **ನಕಿಃ**—ಯಾರೂ ಕೂಡ । **ಮಿನತ್**—ತಡೆಗಟ್ಟಲಾರರು । **ಅರಾವಾ ಚನ ಮರ್ತ್ಯಃ**—ಕಡುಲೋಭಿಯಾಗಿದ್ದ ಮಾನವನಾದರೂ ಸಹ ದೇವತೆಗಳು ಇಚ್ಛಿಸಿದರೆ ಅವನು ಖಂಡಿತ ಹವಿಸ್ಸನ್ನರ್ಪಿಸುವನು.

॥ ಭಾವಾರ್ಥ ॥

ಪ್ರಕಾಶಮಾನರಾದ ಸಕಲ ದೇವತೆಗಳೂ ಯಾವ ರೀತಿಯಲ್ಲಿ ಇಚ್ಛಿಸುವಿರೋ ಸಮಸ್ತವೂ ಅದರಂತೆಯೇ ಒದಗುವುವು. (ನಡೆಯುವವು) ಯಾರೂ ಕೂಡ ಈ ದೇವತೆಗಳ ಇಚ್ಛೆಯನ್ನು ತಡೆಗಟ್ಟಲಾರರು. ಕಡುಲೋಭಿಯಾಗಿದ್ದ ಮಾನವನೂ ಸಹ ದೇವತೆಗಳು ಇಚ್ಛಿಸಿದರೆ ಖಂಡಿತ ಹವಿಸ್ಸನ್ನರ್ಪಿಸುತ್ತಾನೆ.

English Translation.

Whatever the the gods desire, that assuredly comes to pass : no one can resist their (will), no mortal witholds (their) offerings.

॥ ಸಂಹಿತಾಪಾಠಃ ॥

ಸಪ್ತಾನಾಂ ಸಪ್ತ ಋಷ್ಟಯಃ ಸಪ್ತ ದ್ಯುಮ್ನಾನ್ಯೇಷಾಂ ।
ಸಪ್ತೋ ಅಧಿ ಶ್ರಿಯೋ ಧಿರೇ ॥ ೫ ॥

॥ ಪದಪಾಠಃ ॥

ಸಪ್ತಾನಾಂ । ಸಪ್ತ । ಋಷ್ಟಯಃ । ಸಪ್ತ । ದ್ಯುಮ್ನಾನಿ । ಏಷಾಂ ।
ಸಪ್ತೋ ಇತಿ । ಅಧಿ । ಶ್ರಿಯಃ । ಧಿರೇ ॥ ೫ ॥

॥ ಸಾಯಣಭಾಷ್ಯಂ ॥

ಅತ್ರ ಪುರಾತನೀ ಕಥಾ । ಇಂದ್ರಸಮಾನಂ ಪುತ್ರಮಿಚ್ಛಂತ್ಯಾ ಅದಿತೇರ್ಗರ್ಭಸ್ಯ ಕೇನಚಿತ್ಕಾರಣೇನೇಂದ್ರೇಣ ಸಪ್ತಧಾ ಭಿನ್ನತ್ವಾತ್ಸಗರ್ಭಃ ಸಪ್ತಗಣಾತ್ಮಕೋಽಭವತ್ । ತತೋ ಮರುತಃ ಸಂಪನ್ನಾಃ । ಸಪ್ತಗಣಾ ವೈ ಮರುತಃ । ತೈ. ಸಂ. ೨-೨-೧೧-೧ । ಇತಿ ಶ್ರುತೇಃ । ಏಷಾ ಕಥೇದಂ ಪಿತ್ರೇ ಮರುತಾಮುಚ್ಯತೇ ವಚಃ । ಋ. ೧-೧೧೪-೬ । ಇತ್ಯೆಸ್ಮಿನ್ಸರ್ಗೇ ಸಪ್ರಪಂಚೇನಾಭ್ಯಧಾಯಿ । ತಥಾ ಚಾಸ್ಯಾ ಋಚೋಽಯಮರ್ಥಃ । ಸಪ್ತಾನಾಂ ಮರುತಾಂ ಗಣಾನಾಂ ಸಪ್ತ ಸಪ್ತಸಂಖ್ಯಾಕಾ ಋಷ್ಟಯೋ

**ಆಯುಧವಿಶೇಷಾ ವಿಭಿನ್ನಾಃ ಸಂತಿ । ತಥಾ ಸಪ್ತ ಸಪ್ತಸಂಖ್ಯಾಕಾನಿ ದ್ಯುಮ್ನಾನಿ ದ್ಯೋತಮಾನಾನಿ ಕುಂಡಲಾದೀನ್ಯಾಭರಣಾನಿ । ದ್ಯುಮ್ನಾನ್ಯನ್ನಾನಿ ವಾ । ಏಷಾಂ ಗಣಾನಾಂ ವಿಭಿನ್ನಾನಿ ಸಂತಿ । ತತಃ ಸಪ್ತ ಮರುತಾಂ ಗಣಾಃ ಸಪ್ತೋ ಸಪ್ತೈವ ಸಪ್ತವಿಧಾಃ ಶ್ರಿಯಃ ಸಕಲಾ ದೀಪ್ತೀರಧಿ ಧಿರೇ । ಪರಸ್ಪರ-ಮಧಿಕಂ ದಧಿರೇ ॥**

॥ ಪ್ರತಿಪದಾರ್ಥ ॥

**ಸಪ್ತಾನಾಂ**—ಸಪ್ತಸಂಖ್ಯೆಯುಳ್ಳ ಮರುದ್ಗಣಗಳ । **ಋಷ್ಟಯಃ**—ಆಯುಧವಿಶೇಷಗಳು । **ಸಪ್ತ**—ಏಳು ಪ್ರಕಾರವಾಗಿವೆ । **ದ್ಯುಮ್ನಾನಿ**—ಪ್ರಕಾಶಮಾನವಾದ ಅವರ ಆಭರಣಗಳೂ । **ಸಪ್ತ**—ಏಳು ವಿಧವಾಗಿ । **ಏಷಾಂ**—ಈ ಮರುದ್ಗಣಗಳಿಗಿವೆ । **ಸಪ್ತೋ**—ಏಳು ವಿಧಗಳಾದ । **ಶ್ರಿಯಃ**—ಕಾಂತಿಗಳನ್ನೂ । **ಅಧಿ ಧಿರೇ**—ಈ ಮರುತ್ತುಗಳು ಧರಿಸಿದ್ದಾರೆ.

॥ ಭಾವಾರ್ಥ ॥

ಸಪ್ತಸಂಖ್ಯೆಯುಳ್ಳ ಮರುದ್ಗಣಗಳ ಆಯುಧವಿಶೇಷಗಳು ಏಳು ಪ್ರಕಾರವಾಗಿವೆ. ಪ್ರಕಾಶಮಾನವಾದ ಅವರ ಆಭರಣಗಳೂ ಏಳು ವಿಧವಾಗಿವೆ. ಈ ಮರುತ್ತುಗಳು ಏಳು ವಿಧವಾದ ಕಾಂತಿಗಳನ್ನೂ ಧರಿಸಿದ್ದಾರೆ.

## English Translation.

Seven are the lances of the seven (troops of the Maruts), seven are their ornaments, they wear seven surpassing glories.

॥ ವಿಶೇಷವಿಷಯಗಳು ॥

ಮರುದ್ದೇವತೆಗಳಲ್ಲಿ ಏಳು ಗಣಗಳಿರುವುವೆಂದು (ಗಣವೆಂದರೆ ಗುಂಪು) ಈ ಏಳು ಗಣಗಳು ಹೇಗಾದವೆಂಬ ವಿಷಯದಲ್ಲಿ ಹಿಂದೆ ಎಂದರೆ ಋ. ಸಂ. ೧-೧೧೪-೬ ಎಂಬ ಋಕ್ಕಿನ ಭಾಷ್ಯದಲ್ಲಿ ಮರುತ್ತುಗಳ ಜನ್ಮವಿಚಾರವನ್ನು ವಿಸ್ತಾರವಾಗಿ ವಿವರಿಸಲಾಗಿದೆಯೆಂದೂ ಈ ವಿಷಯದಲ್ಲಿ **ಸಪ್ತಗಣಾ ವೈ ಮರುತಃ** ಎಂಬ ತೈತ್ತಿರೀಯಶ್ರುತಿ ಪ್ರಮಾಣವೂ (ತೈ. ಸಂ. ೨-೨-೧೧-೨) ಇರುವುದೆಂದೂ ಭಾಷ್ಯಕಾರರು ಇಲ್ಲಿ ಸೂಚಿಸಿದ್ದಾರೆ. ನಾವೂ ಈ ವಿಷಯದಲ್ಲಿ ವಿಸ್ತಾರವಾದ ವಿವರಣೆಯನ್ನು ಋ. ಸಂ. ಭಾಗ ೯, ಪುಟ 126ರಲ್ಲಿ ಮಾಡಿದ್ದೇವೆ.

# ಇಪ್ಪತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಬಭ್ರುರೇಕ ಇತಿ ದಶರ್ಚಂ ನವಮಂ ಸೂಕ್ತಂ । ಮರೀಚಿಪುತ್ರಃ ಕಶ್ಯಪೋ ವೈವಸ್ವತೋ ಮನುರ್ವಾ ಋಷಿಃ । ತಥಾ ಚಾನುಕ್ರಮ್ಯತೇ । ಬಭ್ರುರ್ದಶ ಕಶ್ಯಪೋ ವಾ ಮಾರೀಚೋ ದ್ವೈಪದಮಿತಿ ।**

**ಏಶಾಪಿ ದ್ವಿಪದಾ ವಿಂಶತ್ಯಕ್ಷರಾ ವಿರಾಜಃ । ಪೂರ್ವವದ್ವಿಶ್ವೇ ದೇವಾ ದೇವತಾ ॥ ತೃತೀಯೇ ಛಂದೋಮೇ ವೈಶ್ವದೇವಸೂಕ್ತಾತ್ಪೂರ್ವಮೇವ ದ್ವೈಪದಂ ಸೂಕ್ತಂ ಶಂಸನೀಯಂ । ಸೂತ್ರ್ಯತೇ ಹಿ । ಬಭ್ರುರೇಕ ಇತಿ ದ್ವಿಪದಾಸೂಕ್ತಾನಿ ಪುರಸ್ತಾದ್ವೈಶ್ವದೇವಸೂಕ್ತಾನಾಂ । ಆ. ೮-೭ । ಇತಿ ॥**

ಅನುವಾದವು—**ಬಭ್ರುರೇಕಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮರೀಚಿಪುತ್ರನಾದ ಕಶ್ಯಪ ಅಥವಾ ವಿವಸ್ವಂತನ ಪುತ್ರನಾದ ಮನುವು ಋಷಿಯು; ಅನುಕ್ರಮಣಿಕೆಯಲ್ಲಿ—**ಬಭ್ರುರ್ದಶ ಕಶ್ಯಪೋ ವಾ ಮಾರೀಚೋ ದ್ವೈಪದಂ** ಎಂದು ಹೇಳಿರುವುದು. ಈ ಸೂಕ್ತದ ಹತ್ತು ಋಕ್ಕುಗಳೂ ಸಹ ಇಪ್ಪತ್ತಕ್ಷರಗಳುಳ್ಳ ದ್ವಿಪದಾ ವಿರಾಟ್ ಎಂಬ ಛಂದಸ್ಸಿನವು. ಹಿಂದಿನ ಸೂಕ್ತದಂತೆ ಈ ಸೂಕ್ತಕ್ಕೂ ವಿಶ್ವೇದೇವತೆಗಳೇ ದೇವತೆಯು; ತೃತೀಯ ಛಂದೋಮದಲ್ಲಿ ವೈಶ್ವದೇವಶಸ್ತ್ರಮಂತ್ರ ಪಠನಕಾಲದಲ್ಲಿ ವಿಶ್ವೇದೇವತೆಗಳನ್ನುದ್ದೇಶಿಸಿ ಪಠಿಸುವ ವೈಶ್ವದೇವಸೂಕ್ತಕ್ಕಿಂತ ಪೂರ್ವಭಾವಿಯಾಗಿ ದ್ವಿಪದಾವಿರಾಟ್ ಛಂದಸ್ಸಿನ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಬಭ್ರುರೇಕ ಇತಿ ದ್ವಿಪದಾಸೂಕ್ತಾನಿ ಪುರಸ್ತಾದ್ವೈಶ್ವದೇವಸೂಕ್ತಾನಾಂ** ಎಂಬ ಸೂತ್ರದಿಂದ (ಆ. ೮-೭) ವಿವೃತವಾಗಿರುವುದು.

## ಸೂಕ್ತ—೨೯

ಮಂಡಲ—೮ ॥ ಅನುವಾಕ—೪ ॥ ಸೂಕ್ತ—೨೯ ॥
ಅಷ್ಟಕ—೬ ॥ ಅಧ್ಯಾಯ—೨ ॥ ವರ್ಗ—೩೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಮನುರ್ವೈವಸ್ವತಃ ಕಶ್ಯಪೋ ವಾ ಮಾರೀಚಃ ॥
॥ ದೇವತಾ—ವಿಶ್ವೇ ದೇವಾಃ ॥
॥ ಛಂದಃ—ದ್ವಿಪದಾ ॥

॥ ಸಂಹಿತಾಪಾಠಃ ॥

ಬಭ್ರುರೇಕೋ ವಿಷುಣಃ ಸೂನರೋ ಯುವಾಞ್ಜ್ಯಂಕ್ತೇಹಿರಣ್ಯಯಂ ॥೧॥

॥ ಪದಪಾಠಃ ॥

ಬಭ್ರುಃ । ಏಕಃ । ವಿಷುಣಃ । ಸೂನರಃ । ಯುವಾ । ಅಂಜಿ । ಅಂಕ್ತೇ । ಹಿರಣ್ಯಯಂ ॥ ೧ ॥

॥ ಸಾಯಣಭಾಷ್ಯಂ ॥

**ಅತ್ರ ದಶಾನಾಮೃಚಾಂ ಕಿಂಚಿತ್ಪದಂ ಲಿಂಗಾತ್ಪೃಥಗ್ದೇವತಂ । ಅತ್ರ ಪ್ರಥಮಾಯಾಂ ಬಭ್ರುರಿತ್ಯನೇನ ಸೋಮೋಽಭಿಧೀಯತೇ । ಸೌಮ್ಯಂ ಬಭ್ರುಮಾ ಲಭೇತ । ತೈ. ಸ. ೨-೧-೩-೩ । ಇತ್ಯಾದಿಷು ದೃಷ್ಟತ್ವಾತ್ । ಬಭ್ರುರ್ಬಭ್ರುವರ್ಣಃ ಶಬಲತಾದಿಷು ಪರಿಪಕ್ವಃ । ಯದ್ವಾ ॥ ಡುಭೃಞ್ ಧಾರಣಪೋಷಣಯೋಃ । ಕುರ್ಭ್ರಶ್ಚ । ಉ. ೧-೨೩ । ಇತಿ ಕುಪ್ರತ್ಯಯಃ ॥ ಸರ್ವಸ್ಯ ಸುಧಾಮಯೈಃ ಕಿರಣೈಸ್ತಾವದುದ್ಗತೇ ಚಂದ್ರಮಸಿ ದುಃಖೋಪಶಮನಾನಿ ಪುಷ್ಪಾನಿ ಖಲು । ತಾದೃಶೋ ವಿಷುಣೋ ವಿಶ್ವಗಂಚನಃ**

ಸೂನರಃ ಸುಷ್ಠು ರಾತ್ರೀಣಾಂ ನೇತಾ । ರಾತ್ರಯಶ್ಚಂದ್ರನೇತೃಕಾಃ ಖಲು । ಏತಾದೃಶೋ ಯುವಾ ಪ್ರತಿದಿವಸಮಾವಿರ್ಭೂತತ್ವಾತ್ತರುಣ ಏಕೋ ದೇವಃ ಸೋಮೋ ಹಿರಣ್ಯಯಂ ಹಿರಣ್ಮಯಮಂಜಿ । ಅಭಿವ್ಯಜ್ಯತೇ ಪ್ರಕಾಶ್ಯತೇಽನೇನೇತ್ಯಂಜ್ಯಾಭರಣಂ । ಅಭಿವ್ಯಕ್ತಿಸಾಧನಂ ಕುಂಡಲಮುಕುಟಾದಿಕಂ ಸ್ವಶರೀರಮಂಕ್ತೇ । ಅಭಿವ್ಯಂಜಯತಿ ॥

॥ ಪ್ರತಿಪದಾರ್ಥ ॥

ಬಭ್ರುಃ—ಹೊಂಬಣ್ಣವುಳ್ಳವನೂ । ವಿಷುಣಃ—ಸರ್ವವ್ಯಾಪಿಯೂ । ಸೂನರಃ-ರಾತ್ರಿಯ ನೇತೃವೂ । ಯುವಾ—ನಿತ್ಯತರುಣನೂ ಆದ । ಏಕಃ—ಸೋಮದೇವನು । ಹಿರಣ್ಯಯಂ—ಸುವರ್ಣಮಯವಾದ । ಅಂಜಿ—ಆಭರಣಗಳನ್ನು । ಅಂಕ್ತೇ—ಧರಿಸಿಕೊಳ್ಳುತ್ತಾನೆ.

॥ ಭಾವಾರ್ಥ ॥

ಹೊಂಬಣ್ಣವುಳ್ಳವನೂ, ಸರ್ವವ್ಯಾಪಿಯೂ, ರಾತ್ರಿಯ ನೇತೃವೂ ನಿತ್ಯತರುಣನೂ ಆದ ಸೋಮದೇವನು ಸುವರ್ಣಮಯವಾದ ಆಭರಣಗಳನ್ನು ಧರಿಸಿಕೊಳ್ಳುತ್ತಾನೆ.

## English Translation.

One (Soma) brown of hue, all-pervading, leader of the nights, ever young, decorates (himself) with golden ornaments.

। ಸಂಹಿತಾಪಾಠಃ ।

ಯೋನಿಮೇಕ ಆ ಸಸಾದ ದ್ಯೋತನೋಽನ್ತರ್ದೇವೇಷು ಮೇಧಿರಃ ॥ ೨ ॥

। ಪದಪಾಠಃ ।

ಯೋನಿಂ । ಏಕಃ । ಆ । ಸಸಾದ । ದ್ಯೋತನಃ । ಅಂತಃ । ದೇವೇಷು । ಮೇಧಿರಃ ॥ ೨ ॥

॥ ಸಾಯಣಭಾಷ್ಯಂ ॥

ಅತ್ರ ಯೋನಿರಿತಿ ಲಿಂಗಾದಗ್ನಿರುಚ್ಯತೇ । ಅಗ್ನಯೇ ಗೃಹಪತಯ ಇತ್ಯಾದಿಷು ದೃಷ್ಟತ್ವಾತ್ । ದೇವೇಷು ದೇವಾನಾಮಂತರ್ಮಧ್ಯೇ ದ್ಯೋತನಃ ಸ್ವತೇಜಸಾ ದೀಪ್ಯಮಾನೋ ಮೇಧಿರೋ ಮೇಧಾವೀ। ಅಥವಾ ಮೇಧಾಕಾಂಕ್ಷಿಣಾಂ ಸ್ತೋತೄಣಾಂ ಮೇಧಾದಾತೃತ್ವೇನ ಮೇಧಾಯುಕ್ತಃ । ಏವಂವಿಧ ಏಕೋಽಗ್ನಿರ್ಯೋನಿಂ ಸ್ಥಾನಭೂತಮಾಹವನೀಯಾದಿಕಮಾ ಸಸಾದ । ಹವಿಃಸ್ವೀಕರಣಾರ್ಥಮಾಸೀದತಿ ॥

। ಪ್ರತಿಪದಾರ್ಥ ।

ದೇವೇಷು ಅಂತಃ—ದೇವತೆಗಳ ಮಧ್ಯದಲ್ಲಿ । ದ್ಯೋತನಃ—ಪ್ರಕಾಶಿಸುತ್ತಲೂ । ಮೇಧಿರಃ—ಮೇಧಾವಿಯಾಗಿಯೂ ಇರುವ । ಏಕಃ—ಅಗ್ನಿಯೊಬ್ಬನೇ । ಯೋನಿಂ—ಆ ಹವನೀಯಾದಿ ಸ್ಥಾನವನ್ನು । ಆ ಸಸಾದ—ಆಶ್ರಯಿಸಿ ಕುಳಿತಿದ್ದಾನೆ.

॥ ಭಾವಾರ್ಥ ॥

ದೇವತೆಗಳ ನಡುವೆ ಪ್ರಕಾಶಿಸುತ್ತಲೂ, ಮೇಧಾವಿಯೂ ಆದ ಅಗ್ನಿಯೊಬ್ಬನೇ ಆಹವನೀಯಾದಿ ಸ್ಥಾನವನ್ನು ಆಶ್ರಯಿಸಿ ಕುಳಿತಿದ್ದಾನೆ.

English Translation.

One (Agni) intelligent, resplendent among the gods, is seated in his place (the altar).

॥ ಸಂಹಿತಾಪಾಠಃ ॥

ವಾಶೀಮೇಕೋ ಬಿಭರ್ತಿ ಹಸ್ತ ಆಯಸೀಮಂತರ್ದೇವೇಷು ನಿಧ್ರುವಿಃ ॥೩॥

॥ ಪದಪಾಠಃ ॥

ವಾಶೀಂ । ಏಕಃ । ಬಿಭರ್ತಿ । ಹಸ್ತೇ । ಆಯಸೀಂ । ಅಂತಃ । ದೇವೇಷು । ನಿऽಧ್ರುವಿಃ ॥ ೩ ॥

॥ ಸಾಯಣಭಾಷ್ಯಂ ॥

ದೇವೇಷ್ವಂತರ್ದೇವಾನಾಂ ಮಧ್ಯೇ ದ್ಯೋತಮಾನೋ ನಿಧ್ರುವಿರ್ನಿಶ್ಚಲೇ ಸ್ಥಾನೇ ವರ್ತಮಾನಃ । ಯದ್ವಾ । ನಿತರಾಂ ಗಮನಮಸ್ಯಾಸ್ತೀತಿ ನಿಧ್ರುವಿಃ ಸರ್ವದಾ ಗಚ್ಛನ್ । ಅಥವಾ ಸಂಗ್ರಾಮೇಷು ಶತ್ರೂಣಾಂ ಪುರತೋऽತಿಶಯೇನ ಸ್ಥೈರ್ಯವಾನ್ । ಏತಾದೃಶ ಏಕಸ್ತ್ವಷ್ಟೃನಾಮಕೋ ದೇವ ಆಯಸೀಮಯೋಮಯಧಾರಾಂ ವಾಶೀಂ ॥ ವಾಶೃ ಶಬ್ದೇ ॥ ಶಬ್ದಯತ್ಯಾಕ್ರಂದಯತಿ ಶತ್ರೂನನಯೇತಿ ವಾಶೀ ತಕ್ಷಣಸಾಧನಂ ಕುಠಾರಃ । ತಂ ಸ್ವಕೀಯೇ ಹಸ್ತೇ ಬಿಭರ್ತಿ । ಧಾರಯತಿ ॥

॥ ಪ್ರತಿಪದಾರ್ಥ ॥

ದೇವೇಷು ಅಂತಃ—ದೇವತೆಗಳ ಮಧ್ಯದಲ್ಲಿ । ನಿಧ್ರುವಿಃ—ನಿಶ್ಚಲನಾಗಿ ಕುಳಿತಿರುವ । ಏಕಃ—ತ್ವಷ್ಟೃವು । ಆಯಸೀಂ—ಅಯೋಮಯವಾದ ಧಾರೆಯುಳ್ಳ (ಅಲಗುಳ್ಳ) । ವಾಶೀಂ—ಕುಠಾರರೂಪವಾದ ಆಯುಧವನ್ನು । ಹಸ್ತೇ—ಕೈಯಿನಲ್ಲಿ । ಬಿಭರ್ತಿ—ಧರಿಸಿದ್ದಾನೆ.

॥ ಭಾವಾರ್ಥ ॥

ದೇವತೆಗಳ ಮಧ್ಯದಲ್ಲಿ ನಿಶ್ಚಲನಾಗಿ ಕುಳಿತಿರುವ ತ್ವಷ್ಟೃವು ಉಕ್ಕಿನಿಂದ ನಿರ್ಮಿತವಾದುದೂ, ಪ್ರಕಾಶಮಾನವಾದ ಅಲಗುಳ್ಳದ್ದೂ, ಕುಠಾರ (ಕೊಡಲಿ) ರೂಪವುಳ್ಳದ್ದೂ ಆದ ತನ್ನ ಆಯುಧವನ್ನು ಕೈಯಿನಲ್ಲಿ ಧರಿಸಿದ್ದಾನೆ.

English Translation.

One (Twashtri) immoveably stationed among the gods, holds his iron axe in his hand.

॥ ಸಂಹಿತಾಪಾಠಃ ॥

ವಜ್ರಮೇಕೋ ಬಿಭರ್ತಿ ಹಸ್ತ ಆಹಿತಂ ತೇನ ವೃತ್ರಾಣಿ ಜಿಘ್ನತೇ ॥ ೪ ॥

॥ ಪದಪಾಠಃ ॥

ವಜ್ರಂ । ಏಕಃ । ಬಿಭರ್ತಿ । ಹಸ್ತೇ । ಆऽಹಿತಂ । ತೇನ । ವೃತ್ರಾಣಿ । ಜಿಘ್ನತೇ ॥ ೪ ॥

॥ ಸಾಯಣಭಾಷ್ಯಂ ॥

ಅತ್ರ ವಜ್ರಲಿಂಗಾದಿಂದ್ರೋ ದೇವತಾ । ಏಕ ಇಂದ್ರ ಆಹಿತಂ ಸ್ವಕೀಯೆಹಸ್ತೇ ನಿಹಿತಂ ವಜ್ರಮೇತನ್ನಾಮಕಮಾಯುಧಂ ಬಿಭರ್ತಿ । ಧತ್ತೇ । ಸ ಏವೇಂದ್ರಸ್ತೇನ ನಿಹಿತೇನ ವಜ್ರೇಣ ವೃತ್ರಾಣ್ಯಾವರಕಾಣಿ ರಕ್ಷಾಂಸಿ ಪಾಪಾನಿ ವಾ ಜಿಘ್ನತೇ । ಭೃಶಂ ಹಂತಿ ॥

॥ ಪ್ರತಿಪದಾರ್ಥ ॥

ಏಕಃ—ಅದ್ವಿತೀಯನಾದ ಒಬ್ಬನೇ ಇಂದ್ರನು । ಹಸ್ತೇ—ತನ್ನ ಕೈಯಲ್ಲಿ । ಆಹಿತಂ—ಇಡಲ್ಪಟ್ಟಿರುವ । ವಜ್ರಂ—ವಜ್ರಾಯುಧವನ್ನು । ಬಿಭರ್ತಿ—ಧರಿಸಿದ್ದಾನೆ । ತೇನ—ಆ ವಜ್ರಾಯುಧದಿಂದ । ವೃತ್ರಾಣಿ—ಶತ್ರುಗಳಾದ ರಾಕ್ಷಸಾದಿಗಳನ್ನು । ಜಿಘ್ನತೇ—ಕೊಲ್ಲುತ್ತಾನೆ.

॥ ಭಾವಾರ್ಥ ॥

ಅದ್ವಿತೀಯನಾದ ಒಬ್ಬನೇ ಇಂದ್ರನು ತನ್ನ ಕೈಯಲ್ಲಿ ವಜ್ರಾಯುಧವನ್ನು ಧರಿಸಿದ್ದಾನೆ. ಆ ವಜ್ರಾಯುಧದಿಂದ ಶತ್ರುಗಳಾದ ರಾಕ್ಷಸಾದಿಗಳನ್ನು ಕೊಲ್ಲುತ್ತಾನೆ

English Translation.

One (Indra) holds his thuuderbolt wielded in his hand, by which he slays the Vritras.

॥ ಸಂಹಿತಾಪಾಠಃ ॥

ತಿಗ್ಮಮೇಕೋ ಬಿಭರ್ತಿ ಹಸ್ತ ಆಯುಧಂ ಶುಚಿರುಗ್ರೋ ಜಲಾಷಭೇಷಜಃ ॥

॥ ಪದಪಾಠಃ ॥

ತಿಗ್ಮಂ । ಏಕಃ । ಬಿಭರ್ತಿ । ಹಸ್ತೇ । ಆಯುಧಂ । ಶುಚಿಃ । ಉಗ್ರಃ । ಜಲಾಷऽಭೇಷಜಃ ॥ ೫ ॥

॥ ಸಾಯಣಭಾಷ್ಯಂ ॥

ಅತ್ರ ಜಲಾಷಭೇಷಜ ಇತ್ಯನೇನ ರುದ್ರೋऽಭಿಧೀಯತೇ । ಶುಚಿಃ ॥ ಶುಚ ದೀಪ್ತೌ ॥ ಸರ್ವತಃ ಸ್ವತೇಜಸಾ ದೀಪ್ಯಮಾನಃ । ಯದ್ವಾ ॥ ಶುಚ ಶೋಕೇ ॥ ಶತ್ರೂಣಾಂ ಶೋಚಯಿತಾ ದುಃಖಯಿತಾ ।

**ಅತ ಏವೋಽಗ್ರ ಉದ್ಗೂರ್ಣಬಲೋ ಜಲಾಷಭೇಷಜೋ ರೋಗಾಪನಯನೇನ ಸುಖಕರಭೈಷಜ್ಯವಾನ್। ಯದ್ವಾ। ಸ್ತೋತೄಣಾಂ ದುಃಖರೂಪಸಂಸಾರೋಚ್ಛೇದೇನ ಸುಖಕಾರಿಭಿಷಗ್ರೂಪಃ। ಪ್ರಥಮೋ ದೈವ್ಯೋ ಭಿಷಗಿತ್ಯಾದಿಶ್ರುತಿಭಿರಸ್ಯ ಭಿಷಕ್ತ್ವಂ ಶ್ರೂಯತೇ। ತಾದೃಶ ಏಕೋ ರುದ್ರಸ್ತಿಗ್ಮಂ ತೀಕ್ಷ್ಣಧಾರವದಾಯುಧಂ। ಆಯುಧ್ಯತಿ ಸಂಪ್ರಹರತಿ ಶತ್ರೂನನೇನೇತ್ಯಾಯುಧಂ ಪಿನಾಕಃ। ತಂ ಸ್ವಕೀಯೇ ಹಸ್ತೇ ಬಿಭರ್ತಿ ॥**

॥ ಪ್ರತಿಪದಾರ್ಥ ॥

**ಶುಚಿಃ**—ಸ್ವತೇಜಸ್ಸಿನಿಂದ ಪ್ರಕಾಶಿಸುವವನೂ । **ಉಗ್ರಃ**—ಅತ್ಯಧಿಕವಾದ ಬಲವುಳ್ಳವನೂ । **ಜಲಾಷಭೇಷಜಃ**—ರೋಗವನ್ನು ನಾಶಮಾಡುವ ಔಷಧಗಳನ್ನು ಒದಗಿಸುವವನೂ ಆದ । **ಏಕಃ**—ರುದ್ರನು । **ತಿಗ್ಮಂ**—ಹರಿತವಾದ ಅಲಗುಳ್ಳ । **ಆಯುಧಂ**—ತನ್ನ ಪಿನಾಕವೆಂಬ ಆಯುಧವನ್ನು । **ಹಸ್ತೇ**—ತನ್ನ ಕೈಯಲ್ಲಿ । **ಬಿಭರ್ತಿ**—ಧರಿಸಿದ್ದಾನೆ.

॥ ಭಾವಾರ್ಥ ॥

ಸ್ವತೇಜಸ್ಸಿನಿಂದ ಪ್ರಕಾಶಿಸುವವನೂ, ಅತ್ಯಧಿಕವಾದ ಬಲವುಳ್ಳವನೂ, ರೋಗವನ್ನು ನಾಶಮಾಡುವ ಔಷಧಿಗಳನ್ನು ಒದಗಿಸುವವನೂ ಆದ ರುದ್ರನು ಹರಿತವಾದ ಅಲಗುಳ್ಳ ತನ್ನ ಪಿನಾಕವೆಂಬ ಆಯುಧವನ್ನು ತನ್ನ ಕೈಯಲ್ಲಿ ಧರಿಸಿದ್ದಾನೆ.

## English Translation.

One (Rudra) brilliant and fierce, (yet) the distributor of healing medicines, holds his sharp weapon in his hand.

॥ ಸಂಹಿತಾಪಾಠಃ ॥

ಪಥ ಏಕಃ ಪೀಪಾಯ ತಸ್ಕರೋ ಯಥಾ ಏಷ ವೇದ ನಿಧೀನಾಂ ॥ ೬ ॥

॥ ಪದಪಾಠಃ ॥

ಪಥಃ । ಏಕಃ । ಪೀಪಾಯ । ತಸ್ಕರಃ । ಯಥಾ । ಏಷಃ । ವೇದ । ನಿಽಧೀನಾಂ ॥ ೬ ॥

॥ ಸಾಯಣಭಾಷ್ಯಂ ॥

**ಪಥ ಇತಿ ಲಿಂಗೇನ ಪೂಷಾ ನಿಗದ್ಯತೇ । ಸಂ ಪೂಷನ್ನಧ್ವನಸ್ತಿರ । ಋ. ೧-೪೨-೧ । ಇತ್ಯಾದಿಷು ದೃಷ್ಟತ್ವಾತ್ । ಏಕಃ ಪೂಷನಾಮಕೋ ದೇವಃ ಪಥೋ ಮಾರ್ಗಾನ್ ಪೀಪಾಯ । ಪ್ಯಾಯತಿರ್ವರ್ಧನಕರ್ಮಾಪ್ಯತ್ರ ರಕ್ಷಣಾರ್ಥಃ । ಯೇಽಗ್ನಿಹೋತ್ರಾದಿ ಕರ್ಮ ಕುರ್ವಂತಿ ತೇಷಾಂ ಸ್ವರ್ಗಮಾರ್ಗಂ ಯೇ ದುಷ್ಕೃತಂ ಕರ್ಮ ಕುರ್ವಂತಿ ತೇಷಾಂ ಯಾತನಾಮಾರ್ಗಂ ಚ ರಕ್ಷತಿ । ಉಭಯೇಷಾಂ ಮಾರ್ಗವಿಪರ್ಯಯೋ ಯಥಾ ನ ಭವತಿ ತಥಾ ಪಾಲಯತೀತ್ಯರ್ಥಃ । ಏಷ ಸೋಽಯಂ ಪೂಷಾ ನಿಧೀನಾಂ ಪೃಥಿವ್ಯಾಂ ನಿಹಿತಾನಿ ಧನಾನಿ ವೇದ । ವೇತ್ತಿ । ಜ್ಞಾತ್ವಾ ಸ್ತೋತೄಣಾಂ ತಾನಿ ದದಾತೀತ್ಯರ್ಥಃ । ತತ್ರ**

ದೃಷ್ಟಾಂತಃ । ತಸ್ಕರೋ ಯಥಾ । ಯಥಾ ಚೋರಃ ಪಥಿ ಗಚ್ಛತಾಂ ಪುರುಷಾಣಾಂ ಧನಹರಣಾರ್ಥಂ ಮಾರ್ಗಂ ರಕ್ಷತಿ ತಥಾ ಚ ಸ ಚೋರೋ ಗೃಹೇ ನಿಹಿತಾನಿ ಜ್ಞಾತ್ವಾ ತದಾಹೃತ್ಯ ಸ್ವಸಹಾಯೇಭ್ಯೋ ಯಥಾ ತಾನಿ ದದಾತಿ ತದ್ವತ್ ॥

॥ ಪ್ರತಿಪದಾರ್ಥ ॥

ಏಕಃ—ಪೂಷನಾಮಕನಾದ ದೇವನು । ಪಥಃ—ಸನ್ಮಾರ್ಗಗಳನ್ನು । ಪೀಪಾಯ—(ಯಜಮಾನರಿಗಾಗಿ) ರಕ್ಷಿಸುತ್ತಾನೆ । ಏಷಃ—ಇದೇ ಪೂಷನು । ನಿಧೀನಾಂ—ಸಕಲ ಧನಗಳನ್ನೂ । ತಸ್ಕರೋ ಯಥಾ—ಕಳ್ಳನು ಎಂತಹ ಸಂಧಿಯಲ್ಲಿರುವ ಧನದ ಸ್ಥಳವನ್ನೂ ತಿಳಿಯುವಂತೆ । ವೇದ—ಅರಿತಿದ್ದಾನೆ.

॥ ಭಾವಾರ್ಥ ॥

ಪೂಷನಾಮಕನಾದ ದೇವನು ಯಜಮಾನರಿಗಾಗಿ ಸನ್ಮಾರ್ಗಗಳನ್ನೆಲ್ಲಾ ರಕ್ಷಿಸುತ್ತಾನೆ. ಕಳ್ಳನು ಸಂಧಿಯಲ್ಲಿ ಬಚ್ಚಿಟ್ಟಿರುವ ಧನಸ್ಥಳಗಳನ್ನೆಲ್ಲಾ ಅರಿಯುವಂತೆ ಈ ಪೂಷನೂ ದ್ಯಾವಾಪೃಥಿವಿಗಳ ಸಕಲ ಧನವನ್ನೂ ಅರಿಯುತ್ತಾನೆ.

## English Translation.

One (Pushan) watches the roads like a robber, and is cognizant of hidden treasures.

॥ ಸಂಹಿತಾಪಾಠಃ ॥

ತ್ರೀಣ್ಯೇಕ ಉರುಗಾಯೋ ವಿ ಚಕ್ರಮೇ ಯತ್ರ ದೇವಾಸೋ ಮದಂತಿ ॥೭॥

॥ ಪದಪಾಠಃ ॥

ತ್ರೀಣಿ । ಏಕಃ । ಉರುऽಗಾಯಃ । ವಿ । ಚಕ್ರಮೇ । ಯತ್ರ । ದೇವಾಸಃ । ಮದಂತಿ ॥ ೭ ॥

॥ ಸಾಯಣಭಾಷ್ಯಂ ॥

ಉರುಗಾಯೋ ವಿ ಚಕ್ರಮ ಇತಿ ಪದಲಿಂಗಾದ್ವಿಷ್ಣುರುಚ್ಯತೇ । ಉರುಗಾಯ ಉರುಭಿರ್ಬಹುಭಿರ್ಗಾತವ್ಯಃ । ಯದ್ವಾ । ಬಹುಷು ದೇಶೇಷು ಗಂತಾ ಬಹುಕೀರ್ತಿರ್ವಾ । ಸರ್ವಾನ್ಶತ್ರೂನ್ ಸ್ವಸಾಮರ್ಥ್ಯೇನ ಶಬ್ದಯತ್ಯಾಕ್ರಂದಯತೀತಿ ವೋರುಗಾಯಃ । ಏತಾದೃಶ ಏಕೋऽಸಹಾಯೋ ವಿಷ್ಣುಸ್ತ್ರೀಣಿ ಪದಾನಿ ಭುವನಾನಿ ವಿ ಚಕ್ರಮೇ । ಸಾಧು ಪಾದೇನ ವಿಕ್ರಾಂತವಾನ್ ॥ ವೇಃ ಪಾದವಿಹರಣೇ । ಪಾ. ೧-೩-೪೧ । ಇತಿ ಕ್ರಮತೇರಾತ್ಮನೇಪದಂ ॥ ಯತ್ರ ಯೇಷು ಲೋಕೇಷು ದೇವಾಸ ಇಂದ್ರಾದಯೋ ದೇವಾ ಮದಂತಿ ಯಜಮಾನದತ್ತೈರ್ಹವಿರ್ಭಿರ್ಮಾದ್ಯಂತಿ ತಾನಿ ವಿ ಚಕ್ರಮ ಇತ್ಯನ್ವಯಃ ॥

॥ ಪ್ರತಿಪದಾರ್ಥ ॥

ಉರುಗಾಯಃ—ಅನೇಕ ಸ್ತುತಿಗಳಿಂದ ಪ್ರಶಂಸಿಸಲ್ಪಡುವ । ಏಕಃ—ಅದ್ವಿತೀಯನಾದ ವಿಷ್ಣುವು । ಯತ್ರ—ಯಾವ ಲೋಕಗಳಲ್ಲಿ । ದೇವಾಸಃ—ಇಂದ್ರಾದಿದೇವತೆಗಳು । ಮದಂತಿ—ಹವಿಸ್ಸುಗಳಿಂದ ಹರ್ಷಿತ

ರಾಗುವರೋ ಅಂತಹ | ತ್ರೀಣಿ— ಮೂರು ಲೋಕಗಳನ್ನೂ | ವಿ ಚಕ್ರಮೇ—ವಿಶೇಷರೀತಿಯಿಂದ ವ್ಯಾಪಿಸಿ ನಿಂತಿದ್ದಾನೆ

|| ಭಾವಾರ್ಥ ||

ಅನೇಕರ ಸ್ತುತಿಗಳಿಂದ ಪ್ರಶಂಸಿಸಲ್ಪಡುವವನೂ ಅದ್ವಿತೀಯನೂ, ಆದ ವಿಷ್ಣುವು ಯಾವ ಲೋಕಗಳಲ್ಲಿ ಇಂದ್ರಾದಿದೇವತೆಗಳು ಹವಿಸ್ಸುಗಳಿಂದ ಹರ್ಷಿತರಾಗುವರೋ, ಅಂತಹ ಮೂರು ಲೋಕಗಳನ್ನೂ ವಿಶೇಷರೀತಿಯಿಂದ ವ್ಯಾಪಿಸಿ ನಿಂತಿದ್ದಾನೆ.

## English Translation

One (Vishnu) wide-stepping, has traversed the three worlds where the gods rejoice.

|| ಸಂಹಿತಾಪಾಠಃ ||

ವಿಭಿರ್ದ್ವಾ ಚರತ ಏಕಯಾ ಸಹ ಪ್ರ ಪ್ರವಾಸೇವ ವಸತಃ || ೮ ||

|| ಪದಪಾಠಃ ||

ವಿऽಭಿಃ | ದ್ವಾ | ಚರತಃ | ಏಕಯಾ | ಸಹ | ಪ್ರ | ಪ್ರವಾಸಾऽಇವ | ವಸತಃ || ೮ ||

|| ಸಾಯಣಭಾಷ್ಯಂ ||

ಏಕಯಾ ಸಹೇತಿ ಲಿಂಗಾದಶ್ವಿನಾವಭಿಧೀಯೇತೇ | ದ್ವಾ ದ್ವೌ ದ್ವಿತ್ವಸಂಖ್ಯೋಪೇತಾವಶ್ವಿನೌ ವಿಭಿಃ || ವೀ ಗತ್ಯಾದಿಷು | ಕ್ವಿಪ್ | ಛಾಂದಸೋ ಹ್ರಸ್ವಃ || ಗಮನಸಾಧನೈರಶ್ವೈಶ್ಚರತಃ | ಸಂಚರೇತೇ | ಕಿಂಚೇಮಾವಶ್ವಿನಾವೇಕಯಾ ಸೂರ್ಯಾಖ್ಯಯಾ ತಾಭ್ಯಾಂ ಸ್ವಯಂವೃತಯಾ ಸ್ತ್ರಿಯಾ ಸಹ ಪ್ರ ವಸತಃ | ಪ್ರವಾಸಂ ಸರ್ವತ್ರ ಗಮನಂ ಕುರುತಃ | ಪ್ರವಾಸೇ ದೃಷ್ಟಾಂತಃ | ಪ್ರವಾಸೇವ | ಯಥಾ ಪ್ರವಾಸಿನೌ ದ್ವೌ ಪುರುಷಾವೇಕಯಾ ಸ್ತ್ರಿಯಾ ಸಹ ಪ್ರವಸತಸ್ತದ್ವತ್ ||

|| ಪ್ರತಿಪದಾರ್ಥ ||

ದ್ವಾ—ಅಶ್ವಿನೀದೇವತೆಗಳಿಬ್ಬರೂ | ವಿಭಿಃ—ತಮ್ಮ ಅಶ್ವಗಳೊಡನೆ | ಚರತಃ—ಸಂಚರಿಸುತ್ತಾರೆ | ಪ್ರವಾಸೇವ—ಹೊರಸಂಚಾರಕಾಲದಲ್ಲಿ ಇಬ್ಬರು ಪುರುಷರು ಒಂದೇ ಸ್ತ್ರೀಯೊಡನೆ ಒಟ್ಟಿಗೆ ಸಂಚರಿಸುವಂತೆ | ದ್ವಾ—ಇವರಿಬ್ಬರೂ | ಏಕಯಾ ಸಹ--ಸೂರ್ಯಾ ಎಂಬ ತಮ್ಮ ಪತ್ನಿಯಾದ ಸ್ತ್ರೀಯೊಡನೆ | ಪ್ರ ವಸತಃ—ಒಟ್ಟಿಗೆಸಂಚರಿಸುತ್ತಾರೆ

| ಭಾವಾರ್ಥ |

ಅಶ್ವಿನೀದೇವತೆಗಳಿಬ್ಬರೂ ತಮ್ಮ ಅಶ್ವಗಳೊಡನೆ ಸರ್ವತ್ರ ಸಂಚರಿಸುತ್ತಾರೆ. ಹೊರಸಂಚಾರಕಾಲದಲ್ಲಿ ಇಬ್ಬರು ಪುರುಷರು ಒಂದೇ ಸ್ತ್ರೀಯೊಡನೆ ಒಟ್ಟಿಗೆ ಸಂಚರಿಸುವಂತೆ ಇವರಿಬ್ಬರೂ ಸೂರ್ಯಾ ಎಂಬ ಒಂದೇ ಸ್ತ್ರೀಯೊಡನೆ (ತಮ್ಮ ಪತ್ನಿಯೊಡನೆ) ಒಟ್ಟಿಗೆ ಸಂಚರಿಸುತ್ತಾರೆ.

English Translation.

Two (the Aswins) travel with swift (horses) along with one (bride Surya), lika travellers to foreign countries.

॥ ಸಂಹಿತಾಪಾಠಃ ॥

ಸದೋ ದ್ವಾ ಚಕ್ರಾತೇ ಉಪಮಾ ದಿವಿ ಸಮ್ರಾಜಾ ಸರ್ಪಿರಾಸುತೀ ॥ ೯ ॥

॥ ಪದಪಾಠಃ ॥

ಸದಃ । ದ್ವಾ । ಚಕ್ರಾತೇ ಇತಿ । ಉಪ್ಽಮಾ । ದಿವಿ । ಸಂಽರಾಜಾ । ಸರ್ಪಿರಾಸುತೀ ಇತಿ ಸರ್ಪಿಃಆಸುತೀ॥

॥ ಸಾಯಣಭಾಷ್ಯಂ ॥

ಸಮ್ರಾಜಾವಿತಿ ಲಿಂಗೇನ ಮಿತ್ರಾವರುಣಾವಭಿಧೀಯೇತೇ । ಉಪಮೋಪಮೌ ಪರಸ್ಪರಂ ಸ್ವಕಾಂತ್ಯೋಪಮಾನಭೂತೌ । ಯದ್ವಾ । ಉಪಮೀಯತ ಆಭ್ಯಾಂ ಸರ್ವಮಿತ್ಯುಪಮೌ ಸರ್ವಸ್ಯ । ಏತಾವೇವ ಸಮ್ರಾಜಾ ಸಮ್ರಾಜೌ ಸಮ್ಯಗ್ದೀಪ್ಯಮಾನೌ ಸರ್ಪಿರಾಸುತೀ । ಸರ್ಪಿರ್ಘೃತಮಾಭ್ಯಾಮಾ-ಸೂಯತ ಇತಿ ಸರ್ಪಿರಾಸುತೀ । ಘೃತಹವಿಷ್ಕೌ ದ್ವಾ ದ್ವೌ ಮಿತ್ರಾವರುಣೌ ದಿವಿ ದ್ಯುಲೋಕೇ ಸದಃ । ಸೀದಂತ್ಯತ್ರೇತಿ ಸದಃ ಸ್ಥಾನಂ । ತಚ್ಚಕ್ರಾತೇ । ಅಕಾರ್ಷ್ಟಾಂ ॥

॥ಪ್ರತಿಪದಾರ್ಥ ॥

**ಉಪಮಾ**—ಒಂದೇ ವಿಧವಾದ ರೂಪವುಳ್ಳವರೂ । **ಸಮ್ರಾಜಾ**—ಅತ್ಯಧಿಕವಾದ ಪ್ರಕಾಶವುಳ್ಳವರೂ । **ಸರ್ಪಿರಾಸುತೀ**—ಘೃತರೂಪವಾದ ಹವಿಸ್ಸನ್ನರ್ಪಿಸಲ್ಪಡುವವರೂ ಆದ । **ದ್ವಾ**—ಮಿತ್ರಾವರುಣರಿಬ್ಬರೂ । **ದಿವಿ**—ದ್ಯುಲೋಕದಲ್ಲಿ । **ಸದಃ**—ತಮ್ಮ ಸ್ಥಾನವನ್ನು । **ಚಕ್ರಾತೇ**—ಏರ್ಪಡಿಸಿಕೊಂಡಿದ್ದಾರೆ.

॥ ಭಾವಾರ್ಥ ॥

ಒಂದೇ ವಿಧವಾದ ರೂಪವುಳ್ಳವರೂ, ಅತ್ಯಧಿಕವಾದ ಪ್ರಕಾಶವುಳ್ಳವರೂ ಘೃತರೂಪವಾದ ಹವಿಸ್ಸನ್ನರ್ಪಿಸಲ್ಪಡುವವರೂ ಆದ ಮಿತ್ರಾವರುಣರಿಬ್ಬರೂ ದ್ಯುಲೋಕದಲ್ಲಿ ತಮ್ಮ ಸ್ಥಾನವನ್ನು ಏರ್ಪಡಿಸಿಕೊಂಡಿದ್ದಾರೆ.

English Translation.

Two of like beauty and of royal rank (Mitra and Varuna), worshipped with oblations of clarified butter, have taken their seat in heaven.

॥ ಸಂಹಿತಾಪಾಠಃ ॥

ಅರ್ಚಂತ ಏಕೇ ಮಹಿ ಸಾಮ ಮನ್ವತ ತೇನ ಸೂರ್ಯಮರೋಚಯನ್ ॥

|| ಪದಪಾಠಃ ||

ಅರ್ಚಂತಿ । ಏಕೇ । ಮಹಿ । ಸಾಮ । ಮನ್ವತ । ತೇನ । ಸೂರ್ಯಂ । ಅರೋಚಯನ್ || ೧೦ ||

। ಸಾಯಣಭಾಷ್ಯಂ ।

ಏಕೇಽತ್ರಯೋ ಮಹಿ ಮಹತ್ಸಾಮ ತ್ರಿವೃತ್ಪಂಚದಶಾದಿ ಮನ್ವತ। ಅಮನ್ವತ। ತದೇವಾರ್ಚಂತಿ। ಪೂಜಯಂತಿ ಏತಾದೃಶಾ ಅತ್ರಯಸ್ತೇನೋಕ್ತೇನ ಸಾಮ್ನಾ ಸೂರ್ಯಮರೋಚಯನ್। ಅದೀಪಯನ್। ತ ಏವಾತ್ರ ದೇವತಾ ||

|| ಪ್ರತಿಪದಾರ್ಥ ||

ಏಕೇ—ಋಷಿಗಳಲ್ಲಿ ಉತ್ತಮರಾದ ಅತ್ರಿಗಳು । ಮಹಿ—ಮಹತ್ತಾದ । ಸಾಮ—ತ್ರಿವೃದಾದಿ ಸಾಮವನ್ನು । ಮನ್ವತ—ಧ್ಯಾನರೂಪದಲ್ಲಿ ಅರಿತರು । ಅರ್ಚಂತಿ—ಅದನ್ನೇ ಪೂಜಿಸುತ್ತಾ (ಪಠಿಸುತ್ತಾ) । ತೇನ—ಆ ಸಾಮದಿಂದಲೇ । ಸೂರ್ಯಂ—ಸೂರ್ಯನನ್ನು । ಅರೋಚಯನ್—ಬೆಳಗುವಂತೆ ಮಾಡಿದರು.

|| ಭಾವಾರ್ಥ ||

ಋಷಿಗಳಲ್ಲಿ ಉತ್ತಮರಾದ ಅತ್ರಿಗಳು ಮಹತ್ತಾದ ತ್ರಿವೃದಾದಿ ಸಾಮವನ್ನು ಧ್ಯಾನರೂಪದಲ್ಲಿ ಅರಿತರು. ಅದನ್ನೇ ಪೂಜಿಸುತ್ತಾ (ಪಠಿಸುತ್ತಾ) ಆ ಸಾಮದಿಂದಲೇ ಸೂರ್ಯನನ್ನೂ ಬೆಳಗುವಂತೆ ಮಾಡಿದರು.

English Translation.

Some (the Atris) when worshipping, call to mind the great Saman, wherewith they light up the sun.



# ಮೂವತ್ತನೆಯ ಸೂಕ್ತವು

। ಸಾಯಣಭಾಷ್ಯಂ ।

ನಹಿ ವ ಇತಿ ಚತುರೃಚಂ ದಶಮಂ ಸೂಕ್ತಂ। ಆದ್ಯಾ ಗಾಯತ್ರೀ ದ್ವಿತೀಯಾ ಪುರಉಷ್ಣಿಕ್ ತೃತೀಯಾ ಬೃಹತೀ ಚತುರ್ಥ್ಯನುಷ್ಟುಪ್ । ಮನುರ್ವೈವಸ್ವತ ಋಷಿಃ । ಪೂರ್ವವದ್ವಿಶ್ವೇ ದೇವಾ ದೇವತಾ । ತಥಾ ಚಾನುಕ್ರಾಂತಂ । ನಹಿ ವಶ್ಚತುಷ್ಕಂ ಪುರಉಷ್ಣಿಗ್ಬೃಹತ್ಯನುಷ್ಟುಬಂತಮಿತಿ। ವಿನಿಯೋಗಸ್ತು ಲಿಂಗಾದವಗಂತವ್ಯಃ ||

ಅನುವಾದವು—ನಹಿ ವಃ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಮನುರ್ವೈವಸ್ವತಃ ಎಂಬುವನೇ ಋಷಿಯು; ಹಿಂದಿನಂತೆ ವಿಶ್ವೇದೇವತೆಗಳೇ ದೇವತೆಯು; ಈ ಸೂಕ್ತದಲ್ಲಿ ಮೊದಲನೆಯ ಋಕ್ಕು ಗಾಯತ್ರೀಛಂದಸ್ಸವು: ಎರಡನೆಯದು

ಪುರಉಷ್ಣಿಕ್, ಮೂರನೆಯದು ಬೃಹತೀ, ನಾಲ್ಕನೆಯದು ಅನುಷ್ಟುಪ್ ಎಂಬ ಛಂದಸ್ಸಿನದು. ಅನುಕ್ರಮಣಿಕೆಯಲ್ಲಿ— **ನಹಿ ವಶ್ಚತುಷ್ಕಂ ಪುರಉಷ್ಣಿಗ್ಬೃಹತ್ಯನುಷ್ಟುಬಂತಂ** ಎಂದು ಹೇಳಿರುವುದು. ವಿನಿಯೋಗವನ್ನು ಅರ್ಥಾನುಸಾರವಾಗಿ ತಿಳಿದುಕೊಳ್ಳಬೇಕು

## ಸೂಕ್ತ—೩೦

ಮಂಡಲ—೮ ॥ ಅನುವಾಕ—೪ ॥ ಸೂಕ್ತ—೩೦ ॥
ಅಷ್ಟಕ—೬ ॥ ಅಧ್ಯಾಯ—೨ ॥ ವರ್ಗ—೩೭ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪ ॥
॥ ಋಷಿಃ—ಮನುರ್ವೈವಸ್ವತಃ ॥
॥ ದೇವತಾ—ವಿಶ್ವೇದೇವಾಃ ॥
॥ ಛಂದಃ—೧. ಗಾಯತ್ರೀ । ೨. ಪುರಉಷ್ಣಿಕ್ । ೩. ಬೃಹತೀ । ೪. ಅನುಷ್ಟುಪ್ ॥

॥ ಸಂಹಿತಾಪಾಠಃ ॥

**ನಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ ।**
**ವಿಶ್ವೇ ಸತೋಮಹಾಂತ ಇತ್ ॥ ೧ ॥**

॥ ಪದಪಾಠಃ ॥

ನಹಿ । ವಃ । ಅಸ್ತಿ । ಅರ್ಭಕಃ । ದೇವಾಸಃ । ನ । ಕುಮಾರಕಃ ।
ವಿಶ್ವೇ । ಸತಃऽಮಹಾಂತಃ । ಇತ್ ॥ ೧ ॥

॥ ಸಾಯಣಭಾಷ್ಯಂ ॥

**ಹೇ ದೇವಾಸೋ ದೇವಾಃ ವೋ ಯುಷ್ಮಾಕಂ ಮಧ್ಯೇऽರ್ಭಕೋ ನಹ್ಯಸ್ತಿ । ಶಿಶುರ್ನಾಸ್ತಿ ಖಲು । ತಥಾ ನ ಕುಮಾರಕೋ ಯುಷ್ಮಾಕಂ ಮಧ್ಯೇ ಕುಮಾರೋऽಪಿ ನಾಸ್ತಿ । ಕಿಂತು ಸರ್ವೇ ಯೂಯಂ ಸವಯಸೋ ನಿತ್ಯತರುಣಾ ಭವಥ । ಏತದೇವ ಪ್ರತಿಪಾದಯತಿ । ವಿಶ್ವೇ ಸರ್ವೇ ದೇವಾ ಯೂಯಂ ಸತೋಮಹಾಂತ ಇತ್ । ಸರ್ವಸ್ಮಾದ್ವಿದ್ಯಮಾನಾತ್ಪೃಥಿವ್ಯಾಮಪಿ ಯೇ ಮಹಾಂತಸ್ತೇ ಸತೋಮಹಾಂತ ಇತ್ಯುಚ್ಯಂತೇ । ತಸ್ಮಾದ್ಯುಷ್ಮಾಕಮರ್ಭಕೋऽಪಿ ಕುಮಾರೋऽಪಿ ನಾಸ್ತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ದೇವಾಸಃ**—ಎಲೈ ದೇವತೆಗಳೇ । **ವಃ**—ನಿಮ್ಮಲ್ಲಿ । **ಅರ್ಭಕಃ**—ಎಳೆಯ ವಯಸ್ಸಿನ ದೇವತೆಯು । **ನಹಿ ಅಸ್ತಿ**—ಯಾರೂ ಇಲ್ಲವೇ ಇಲ್ಲ । **ನ ಕುಮಾರಕಃ**—ಕುಮಾರವಯಸ್ಸಿನವರೂ ಇಲ್ಲ । **ವಿಶ್ವೇ**—ನೀವೆಲ್ಲರೂ । **ಸತೋಮಹಾಂತ ಇತ್**—ಪೃಥಿವ್ಯಾದಿ ಲೋಕಗಳಿಗಿಂತಲೂ ಅಧಿಕವಾದ ವಯಸ್ಸೂ ಮಹತ್ತ್ವವೂ ಉಳ್ಳವರಾಗಿರುತ್ತೀರಿ.

|| ಭಾವಾರ್ಥ ||

ಎಲೈ ದೇವತೆಗಳೇ, ನಿಮ್ಮಲ್ಲಿ ಎಳೆಯ ವಯಸ್ಸಿನ ದೇವತೆಯು ಯಾರೂ ಇಲ್ಲವೇ ಇಲ್ಲ. ಕುಮಾರ ವಯಸ್ಸಿನವರೂ ಇಲ್ಲ. ನೀವೆಲ್ಲರೂ ಪೃಥಿವ್ಯಾದಿಲೋಕಗಳಿಗಿಂತಲೂ ಅಧಿಕವಾದ ವಯಸ್ಸುಳ್ಳವರೂ ಮಹತ್ತ್ವವುಳ್ಳವರೂ ಆಗಿರುತ್ತೀರಿ.

English Translation.

There is no one among you, gods, who is an infant or a youth; you verily are all of mature existence.

|| ಸಂಹಿತಾಪಾಠಃ ||

ಇತಿ ಸ್ತುತಾಸೋ ಅಸಥಾ ರಿಶಾದಸೋ ಯೇ ಸ್ಥ ತ್ರಯಶ್ಚ ತ್ರಿಂಶಚ್ಚ |
ಮನೋರ್ದೇವಾ ಯಜ್ಞಿಯಾಸಃ || ೨ ||

|| ಪದಪಾಠಃ ||

ಇತಿ | ಸ್ತುತಾಸಃ | ಅಸಥ | ರಿಶಾದಸಃ | ಯೇ | ಸ್ಥ | ತ್ರಯಃ | ಚ | ತ್ರಿಂಶತ್ | ಚ |
ಮನೋಃ | ದೇವಾಃ | ಯಜ್ಞಿಯಾಸಃ || ೨ ||

|| ಸಾಯಣಭಾಷ್ಯಂ ||

ಹೇ ರಿಶಾದಸೋ ರಿಶತಾಂ ಹಿಂಸಕಾನಾಮಸಿತಾರೋ ಹೇ ಮನೋರ್ಯಜ್ಞಿಯಾಸೋ ಮನುನಾಮಕಸ್ಯ ಮಮ ಯಜ್ಞಾರ್ಹಾ ಹೇ ದೇವಾಃ ಯೇ ಯೂಯಂ ತ್ರಯಶ್ಚ ತ್ರಿಸಂಖ್ಯಾಕಾಸ್ತ್ರಿಂಶಚ್ಚ ತ್ರಿಂಶತ್ಸಂಖ್ಯಾಕಾಸ್ತ್ರಯಸ್ತ್ರಿಂಶದ್ದೇವತಾಃ ಸ್ಥ ಭವಥ ಅಭೂತ ತೇ ಯೂಯಮಿತೀತ್ಥಮನೇನ ಪ್ರಕಾರೇಣ ಸ್ತುತಾಸೋಽಸಥ | ಮಯಾ ಮನುನಾ ಸ್ತುತಾ ಭವಥ || ಅಸ್ತೇರ್ಲೇಟಿ ಛಾಂದಸೋ ಲುಗಭಾವಃ || ಯದ್ವಾ | ಅಸಥೇತಿ ಕಾಂತ್ಯರ್ಥಃ | ಇತ್ಥಂ ಸ್ತುತಾ ಯೂಯಂ ಹವೀಂಷಿ ಕಾಮಯಧ್ವಂ ||

|| ಪ್ರತಿಪದಾರ್ಥ ||

ರಿಶಾದಸಃ— ಶತ್ರುಹಿಂಸಕರೂ | ಮನೋಃ— ಮನುವಿಗೆ (ನನಗೆ) | ಯಜ್ಞಿಯಾಸಃ— ಯಜ್ಞದಲ್ಲಿ ಪೂಜಾರ್ಹರೂ ಆದ | ದೇವಾಃ— ಎಲೈ ದೇವತೆಗಳೇ | ಯೇ— ಯಾವ ನೀವು | ತ್ರಯಶ್ಚ— ಮೂರು ಸಂಖ್ಯೆಯುಳ್ಳವರಾಗಿಯೂ | ತ್ರಿಂಶಚ್ಚ— ಅದಕ್ಕೆ ಅಧಿಕವಾಗಿ ಮುವತ್ತು ಸಂಖ್ಯೆಯುಳ್ಳವರಾಗಿಯೂ | ಸ್ಥ— ಆಗಿರುವಿರೋ (ಅಂತಹ ನೀವು) | ಇತಿ— ಈ ಪ್ರಕಾರವಾಗಿ | ಸ್ತುತಾಸಃ— ಪ್ರಶಂಸಿಸಲ್ಪಟ್ಟವರಾಗಿ | ಅಸಥ— ಆಗಿದ್ದೀರಿ.

॥ ಭಾವಾರ್ಥ ॥

. ಶತ್ರುಹಿಂಸಕರೂ, ಮನುನಾಮಕನಾದ ನನಗೆ ಯಜ್ಞದಲ್ಲಿ ಪೂಜಾರ್ಹರೂ ಆದ ಎಲೈ ದೇವತೆಗಳೇ, ಯಾವ ನೀವು ಮೂವತ್ತುಮೂರು ಸಂಖ್ಯೆಯುಳ್ಳವರಾಗಿರುವಿರೋ ಅಂತಹ ನೀವು ಈ ಪ್ರಕಾರವಾಗಿ ನನ್ನಿಂದ ಸ್ತುತರಾಗಿದ್ದೀರಿ.

English Translation.

Destroyers of foes, gods, adored by Manu, who are three-and-thirty, and are thus hymned ;

॥ ಸಂಹಿತಾಪಾಠಃ ॥

ತೇ ನಸ್ತ್ರಾಧ್ವಂ ತೇಽವತ ತ ಉ ನೋ ಅಧಿ ವೋಚತ ।
ಮಾ ನಃ ಪಥಃ ಪಿತ್ರ್ಯಾನ್ಮಾನವಾದಧಿ ದೂರಂ ನೈಷ್ಟ ಪರಾವತಃ ॥ ೩ ॥

॥ ಪದಪಾಠಃ ॥

ತೇ । ನಃ । ತ್ರಾಧ್ವಂ । ತೇ । ಅವತ । ತೇ । ಊಂ ಇತಿ । ನಃ । ಅಧಿ । ವೋಚತ ।
ಮಾ । ನಃ । ಪಥಃ । ಪಿತ್ರ್ಯಾತ್ । ಮಾನವಾತ್ । ಅಧಿ । ದೂರಂ । ನೈಷ್ಟ । ಪರಾಽವತಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ದೇವಾಃ ತೇ ಯೂಯಂ ನೋಽಸ್ಮಾಂಸ್ತ್ರಾಧ್ವಂ । ಬಾಧಕೇಭ್ಯೋ ರಕ್ಷೋಭ್ಯಸ್ತ್ರಾಯಧ್ವಂ। ತೇ ಯೂಯಮವತ । ಧನಾದಿಪ್ರದಾನೈರಸ್ಮಾನ್ರಕ್ಷತ । ತ ಏವ ದೇವಾ ನೋಽಸ್ಮಾನಧಿ ವೋಚತ । ಅಧಿಕಂ ಭವಂತಃ ಕರ್ಮಕಾರಿಣೋ ಧನಾದಿಮಂತಶ್ಚ ಭವಂತ್ವಿತಿ ಯೂಯಂ ಬ್ರೂತ । ಕಿಂಚ ಹೇ ದೇವಾಃ ಮಾನವಾತ್ । ಮನುಃ ಸರ್ವೇಷಾಂ ಪಿತಾ । ತತ ಆಗತಾತ್ಪಿತ್ರ್ಯಾತ್ ಪಿತಾ ಮನುರ್ಯಂ ಮಾರ್ಗಂ ಚಕ್ರೇ ತಸ್ಮಾತ್ಪಥೋ ಮಾರ್ಗಾನ್ನೋಽಸ್ಮಾನ್ಮಾ ನೈಷ್ಟ । ಮಾ ನಯತ । ಅಪನಯನಂ ಮಾ ಕುರುತೇತ್ಯರ್ಥಃ । ಸರ್ವದಾ ಬ್ರಹ್ಮಚರ್ಯಾಗ್ನಿಹೋತ್ರಾದಿಕರ್ಮಾಣಿ ಯೇನ ಮಾರ್ಗೇಣ ಭವಂತಿ ತಮೇವಾಸ್ಮಾನ್ನಯತ । ಕಿಂತು ದೂರಂ ಯ ಏತದ್ವ್ಯತಿರಿಕ್ತೋ ವಿಪ್ರಕೃಷ್ಟಮಾರ್ಗೋಽಸ್ತಿ ತಸ್ಮಾದಧಿ । ಅಧಿಕಮಿತ್ಯರ್ಥಃ । ಅಸ್ಮಾನಪನಯತ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) **ತೇ**—ನೀವು । **ನಃ**—ನಮ್ಮನ್ನು । **ತ್ರಾಧ್ವಂ**—ರಾಕ್ಷಸಾದಿಗಳಿಂದ ರಕ್ಷಿಸಿರಿ । **ತೇ**—ಅದೇ ನೀವು । **ಅವತ**—ಧನಪ್ರದಾನದಿಂದ ರಕ್ಷಿಸಿರಿ । **ತೇ**—ಅದೇ ನೀವು । **ನಃ**—ನಮಗೆ । **ಅಧಿವೋಚತ**—ಕಲ್ಯಾಣವಾಗಲೆಂದು ಹರಸಿರಿ । **ಪಿತ್ರ್ಯಾತ್**—ವಂಶಾನುಗತವಾಗಿ ಬಂದುದೂ । **ಮಾನವಾತ್**—

ಮನುವಿನಿಂದ ಅನುಸರಿಸಲ್ಪಟ್ಟದ್ದೂ ಆದ । **ಪಥಃ**—ಸನ್ಮಾರ್ಗದಿಂದ । **ನಃ**—ನಮ್ಮನ್ನು । **ಮಾ ನೈಷ್ಟ**—ಸರಿದು ಬೇರೆ ಮಾರ್ಗಕ್ಕೆ ಹೋಗುವಂತೆ ಮಾಡಬೇಡಿರಿ । **ದೂರಂ**—ಇದಕ್ಕೆ ವ್ಯತಿರಿಕ್ತವಾದ । **ಪರಾವತಃ**—ದೂರ ಮಾರ್ಗದಿಂದ । **ಅಧಿ**—ಅಧಿಕವಾಗಿ ಹಿಂತಿರುಗಿಸಿರಿ.

॥ ಭಾವಾರ್ಥ ॥

ಎಲೈ ದೇವತೆಗಳೇ, ನೀವು ನಮ್ಮನ್ನು ರಾಕ್ಷಸಾದಿಗಳಿಂದ ರಕ್ಷಿಸಿರಿ. ಅದೇ ನೀವು ಧನಪ್ರದಾನದಿಂದ ರಕ್ಷಿಸಿರಿ. ಅದೇ ನೀವು ನಮಗೆ ಕಲ್ಯಾಣವುಂಟಾಗಲೆಂದು ಹರಸಿರಿ. ವಂಶಾನುಗತವಾಗಿ ಬಂದುದೂ, ಮನುವಿನಿಂದ ಅನುಸರಿಸಲ್ಪಟ್ಟುದೂ ಆದ ಸನ್ಮಾರ್ಗದಿಂದ ನಾವು ಸರಿದು ಬೇರೆ ಮಾರ್ಗಕ್ಕೆ ಹೋಗುವಂತೆ ಮಾಡಬೇಡಿರಿ. ಇದಕ್ಕೆ ವ್ಯತಿರಿಕ್ತವಾದ ದೂರದ ಮಾರ್ಗದಿಂದ ನಮ್ಮನ್ನು ಹಿಂದಿರುಗಿಸಿರಿ.

## English Translation.

Preserve us, protect us, direct us (to our good); lead us not afar from the paternal paths of Manu, nor from those still more distant.

॥ ಸಂಹಿತಾಪಾಠಃ ॥

ಯೇ ದೇವಾಸ ಇಹ ಸ್ಥನ ವಿಶ್ವೇ ವೈಶ್ವಾನರಾ ಉತ ।
ಅಸ್ಮಭ್ಯಂ ಶರ್ಮ ಸಪ್ರಥೋ ಗವೇಽಶ್ವಾಯ ಯಚ್ಛತ ॥ ೪ ॥

॥ ಪದಪಾಠಃ ॥

ಯೇ । ದೇವಾಸಃ । ಇಹ । ಸ್ಥನ । ವಿಶ್ವೇ । ವೈಶ್ವಾನರಾಃ । ಉತ ।
ಅಸ್ಮಭ್ಯಂ । ಶರ್ಮ । ಸಽಪ್ರಥಃ । ಗವೇ । ಅಶ್ವಾಯ । ಯಚ್ಛತ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವಾಸೋ ದೇವಾಃ ಉತಾಪಿ ಚ ವೈಶ್ವಾನರಾಃ । ವಿಶ್ವೇ ಸರ್ವೇ ನರಾಃ ಕರ್ಮನೇತಾರೋಽಧ್ವರ್ಯ್ವಾದಯೋ ಯಸ್ಯ ಸ ವಿಶ್ವಾನರೋ ಯಜ್ಞಃ । ತಸ್ಮಿನ್ ಸೋಮಾದಿಹವೀಂಷಿ ಸ್ವೀಕರ್ತುಂ ಭವಾಃ ಪ್ರಾದುರ್ಭೂತಾಃ ॥ ಭವಾರ್ಥೇಽಣ್ಪ್ರತ್ಯಯಃ ॥ ಯದ್ವಾ । ವಿಶ್ವಾನರೋಽಗ್ನಿಃ । ದೇವಾನಾಂ ತನ್ಮುಖತ್ವಾತ್ತಸ್ಯ ಸಂಬಂಧಿನಃ । ವಿಶ್ವೇ ಸರ್ವೇ ಯೇ ದೇವಾ ಯೂಯಮಿಹಾಸ್ಮಿನ್ನಸ್ಮದೀಯೇ ಯಜ್ಞೇ ಸ್ಥನ ಹವೀಂಷ್ಯಾದಾತುಂ ಭವಥ ತತಃ ಸಪ್ರಥಃ ॥ ಪ್ರಥ ಪ್ರಖ್ಯಾನೇ ॥ ಸರ್ವತಃ ಪ್ರಸಿದ್ಧಂ ಸರ್ವತ್ರ ಪೃಥುತಮಂ ವಾ ಶರ್ಮ । ಸರ್ವಂ ಶೃಣಾತಿ ಹಿನಸ್ತಿ ದುಃಖಮಿತಿ ಶರ್ಮ ಸುಖಂ । ತದಸ್ಮಭ್ಯಂ ಪ್ರಯಚ್ಛತ । ತಥಾ ಗವೇಽಸ್ಮದೀಯೇಭ್ಯೋ ಯಜ್ಞಸಾಧನಭೂತೇಭ್ಯೋ ಗೋಭ್ಯೋಽಶ್ವಾಯ ಶರ್ಮ ಸುಖಂ ಪ್ರದತ್ತ ॥

|| ಪ್ರತಿಪದಾರ್ಥ ||

**ಉತ** – ಮತ್ತು | **ದೇವಾಸಃ**— ಎಲೈ ದೇವತೆಗಳೇ | **ವೈಶ್ವಾನರಾಃ**— ಅಧ್ವರ್ಯುವೇ ಮುಂತಾದ ಸಕಲರೂ ಸೇರಿರುವ ಯಜ್ಞದಲ್ಲಿ ಆವಿರ್ಭೂತರಾಗಿರುವ | **ಯೇ ವಿಶ್ವೇ**— ಯಾವ ನೀವೆಲ್ಲರೂ | **ಇಹ**— ನಮ್ಮ ಈ ಯಜ್ಞದಲ್ಲಿ | **ಸ್ಥನ**— ಹವಿಸ್ಸನ್ನು ಸ್ವೀಕರಿಸಲು ಸೇರಿರುವಿರೋ ಆ ನೀವು | **ಸಪ್ರಥಃ**— ಸರ್ವತ್ರ ಪ್ರಸಿದ್ಧವಾದ | **ಶರ್ಮ**— ಸುಖವನ್ನು | **ಅಸ್ಮಭ್ಯಂ**— ನಮಗೂ | **ಗವೇ**— ನಮ್ಮ ಪಶುಗಳಿಗೂ | **ಅಶ್ವಾಯ**— ಅಶ್ವಗಳಿಗೂ | **ಯಚ್ಛತ**— ಒದಗಿಸಿ ಕೊಡಿರಿ.

|| ಭಾವಾರ್ಥ ||

ಎಲೈ ದೇವತೆಗಳೇ, ಅಧ್ವರ್ಯುವೇ ಮುಂತಾದ ಸಕಲರೂ ಸೇರಿರುವ ಯಜ್ಞದಲ್ಲಿ ಆವಿರ್ಭೂತರಾಗಿರುವ ಯಾವ ನೀವೆಲ್ಲರೂ ನಮ್ಮ ಈ ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸಲು ಸೇರಿರುವಿರೋ ಆ ನೀವು ಸರ್ವತ್ರ ಪ್ರಸಿದ್ಧವಾದ ಸುಖವನ್ನು ನಮಗೂ ನಮ್ಮ ಪಶುಗಳಿಗೂ ಮತ್ತು ಅಶ್ವಗಳಿಗೂ ಒದಗಿಸಿ ಕೊಡಿರಿ.

English Translation.

Gods, who are present, all to whom this full sacrifice is offered, bestow upon us, upon our cattle and horses, happiness far renowned.



# ಮೂವತ್ತೊಂದನೆಯ ಸೂಕ್ತವು

|| ಸಾಯಣಭಾಷ್ಯಂ ||

**ಪಂಚಮೇಽನುವಾಕೇ ದ್ವಾದಶ ಸೂಕ್ತಾನಿ | ತತ್ರ ಯೋ ಯಜಾತೀತ್ಯಷ್ಟಾದಶರ್ಚಂ ಪ್ರಥಮಂ ಸೂಕ್ತಂ | ವೈವಸ್ವತೋ ಮನುರ್ಋಷಿಃ | ನವಮೀಚತುರ್ದಶ್ಯಾವನುಷ್ಟುಭೌ ಶಿಷ್ಟಾಃ ಪಂಚದಶ್ಯಾದ್ಯಾಷ್ಟತಸ್ರಃ ಪಂಕ್ತಯಃ | ದಶಮೋ ಪಾದನಿಚೃತ್ | ತ್ರಯಃ ಸಪ್ತಕಾಃ ಪಾದನಿಚೃತ್ | ಅನು. ೪-೪ | ಇತಿ ತಲ್ಲಕ್ಷಣಾತ್ | ಶಿಷ್ಟಾ ಏಕಾದಶ ಪ್ರಾಗ್ವತ್ಸಪ್ರಪರಿಭಾಷಯಾ ಗಾಯತ್ರ್ಯಃ | ಆದ್ಯಾಸು ಚತಸೃಷು ಯಜ್ಞಸ್ತತೋ ಯಜಮಾನಪ್ರಶಂಸಾ ಚ ಶ್ರೂಯತೇ | ಅತಸ್ತದ್ದೇವತಾಕಾಃ | ಯಾ ದಂಪತೀ ಇತ್ಯಾದ್ಯಾಸು ಪಂಚಮ್ಯಾದಿಷು ದಂಪತೀ ಪ್ರಶಸ್ಯೇತೇ | ಅತಸ್ತದ್ದೇವತಾಕಾಃ | ಅವಶಿಷ್ಟಾಸು ನವಸು ದಂಪತ್ಯೋರಾಶಿಷಃ ಪ್ರತಿಪಾದ್ಯಂತೇ | ಅತಸ್ತಾ ಏವ ದೇವತಾಃ | ತಥಾ ಚಾನುಕ್ರಮ್ಯತೇ | ಯೋ ಯಜಾತಿ ದ್ವ್ಯೂನಾತ್ರೇಜ್ಯಾಸ್ತವೋ ಯಜಮಾನಪ್ರಶಂಸಾ ಚ ಯೇತ್ಯಾದಿಪಂಚ ದಂಪತ್ಯೋಃ ಶಿಷ್ಟಾಸ್ತದಾಶಿಷೋಽನುಷ್ಟುಪ್ ಚತುಷ್ಪಂಕ್ತ್ಯಂತಂ ನವಮ್ಯನುಷ್ಟುಬ್ದಶಮೀ ಪಾದನಿಚೃದಿತಿ ||**

ಅನುವಾಕವು— ಎಂಟನೆಯ ಮಂಡಲದ ಐದನೆಯ ಅನುವಾಕದಲ್ಲಿ **ಹನ್ನೆರಡು ಸೂಕ್ತಗಳಿರುವವು.** ಅವುಗಳಲ್ಲಿ **ಯೋ ಯಜಾತಿ** ಎಂಬ ಈ ಸೂಕ್ತವು ಮೊದಲನೆಯದು ಇದರಲ್ಲಿ ಹದಿನೆಂಟು **ಋಕ್ಕುಗಳಿರುವವು.**

ಈ ಸೂಕ್ತಕ್ಕೆ ವಿವಸ್ವಂತಪುತ್ರನಾದ ಮನುವು ಋಷಿಯು; ಈ ಸೂಕ್ತದಲ್ಲಿ ಒಂಭತ್ತು ಮತ್ತು ಹದಿನಾಲ್ಕನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು; ಹದಿನೈದರಿಂದ ಮುಂದಿನ ನಾಲ್ಕು ಋಕ್ಕುಗಳು ಪಂಕ್ತಿಛಂದಸ್ಕವು ಹತ್ತನೆಯ ಋಕ್ಕು ಪಾದನಿಚೃತ್ ಎಂಬ ಛಂದಸ್ಸಿನದು **ತ್ರಯಃ ಸಪ್ತಕಾಃ ಪಾದನಿಚೃತ್** ಎಂದರೆ ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಪ್ರತಿಯೊಂದು ಪಾದದಲ್ಲಿಯೂ ಏಳೇಳು ಅಕ್ಷರಗಳಿದ್ದರೆ ಆ ಋಕ್ಕು ಪಾದನಿಚೃತ್ ಎಂಬ ಛಂದಸ್ಸಿನದು ಎಂದು ಈ ಛಂದಸ್ಸಿನ ಲಕ್ಷಣವಿರುವುದು. ಉಳಿದ ಹನ್ನೊಂದು ಋಕ್ಕುಗಳೂ ಗಾಯತ್ರೀಛಂದಸ್ಕವು. ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳಲ್ಲಿ ಯಜ್ಞ ಮತ್ತು ಯಜಮಾನನ ಪ್ರಶಂಸೆಯು ಉಕ್ತವಾಗಿರುವುದರಿಂದ ಆ ಋಕ್ಕುಗಳಿಗೆ ಅದೇ ದೇವತೆಯು; **ಯಾ ದಂಪತೀ** ಎಂದು ಮೊದಲಾಗುವ (೫-೯) ನಾಲ್ಕು ಋಕ್ಕುಗಳಲ್ಲಿ ದಂಪತಿಗಳ ವಿಷಯವು ಉಕ್ತವಾಗಿರುವುದರಿಂದ ಆ ಋಕ್ಕುಗಳಿಗೆ ದಂಪತಿಗಳೇ ದೇವತೆಯು; ಉಳಿದ ಒಂಭತ್ತು ಋಕ್ಕುಗಳಲ್ಲಿ ದಂಪತಿಗಳ ಆಶೀರ್ವಾದ ವಿಷಯವು ಉಕ್ತವಾಗಿರುವುದರಿಂದ ಆ ಋಕ್ಕುಗಳಿಗೆ ದಂಪತಿಗಳ ಆಶಿಷವೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಯೋ ಯಜಾತಿ ದ್ವ್ಯೂನಾತ್ರೇಜ್ಯಾಸ್ತವೋ ಯಜಮಾನಪ್ರಶಂಸಾ ಚ ಯೇತ್ಯಾದಿಪಂಚ ದಂಪತ್ಯೋಃ ಶಿಷ್ಟಾಸ್ತದಾಶಿಷೋಽನುಷ್ಟುಪ್ ಚತುಷ್ಪಂಕ್ತ್ಯಂತಂ ನವಮ್ಯನುಷ್ಟುಬ್ದಶಮೀ ಪಾದನಿಚೃತ್** ಎಂದು ಹೇಳಿರುವುದು.

## ಸೂಕ್ತ—೩೧

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೧ ॥
ಅಷ್ಟಕ—೬ ॥ ಅಧ್ಯಾಯ—೨ ॥ ವರ್ಗ—೩೮, ೩೯, ೪೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥
॥ ಋಷಿಃ—ಮನುರ್ವೈವಸ್ವತಃ ॥
॥ ದೇವತಾ—೧-೪, ಇಜ್ಯಾಸ್ತವೋ ಯಜಮಾನಪ್ರಶಂಸಾ ಚ । ೫-೯, ದಂಪತೀ । ೧೦-೧೮. ದಂಪತ್ಯೋರಾಶಿಷಃ ॥
॥ ಛಂದಃ—೧-೮, ೧೧-೧೩. ಗಾಯತ್ರೀ । ೯, ೧೪. ಅನುಷ್ಟುಪ್ । ೧೦ ಪಾದನಿಚೃತ್ ॥ ೧೫-೧೮. ಪಂಕ್ತಿಃ ॥

॥ ಸಂಹಿತಾಪಾಠಃ ॥

ಯೋ ಯಜಾತಿ ಯಜಾತ ಇತ್ಸುನವಚ್ಚ ಪಚಾತಿ ಚ ।
ಬ್ರಹ್ಮೇದಿಂದ್ರಸ್ಯ ಚಾಕನತ್ ॥ ೧ ॥

॥ ಪದಪಾಠಃ ॥

ಯಃ । ಯಜಾತಿ । ಯಜಾತೇ । ಇತ್ । ಸುನವತ್ । ಚ । ಪಚಾತಿ । ಚ ।
ಬ್ರಹ್ಮಾ । ಇತ್ । ಇಂದ್ರಸ್ಯ । ಚಾಕನತ್ ॥ ೧ ॥

|| ಸಾಯಣಭಾಷ್ಯಂ ||

**ಯೋ ಯಜಮಾನಃ ಸಕೃದ್ಯಜಾತಿ ಯಾಗಂ ಕರೋತಿ ಹವಿರ್ಭಿರ್ದೇವಾನ್ಪೂಜಯತಿ ಸ ದೇವೇಭ್ಯೋ ಲಬ್ಧಧನಾದಿಕಃ ಸನ್ ಯಜಾತ ಇತ್ । ಪುನರಭೀಷ್ಟಪ್ರಾಪ್ತ್ಯೈ ದೇವೇಭ್ಯೋ ಹವೀಂಷಿ ಪ್ರಯಚ್ಛತ್ಯೇವ । ತಥಾ ಸ ಏವ ಯಜಮಾನಃ ಸುನವಚ್ಚ ।। ಸೋಮಾಭಿಷವಂ ಕರೋತಿ ಚ । ಸ ಏವ ಪಚಾತಿ ಚ । ಪಶುಪುರೋಡಾಶಾದಿಕಂ ಪಚತಿ ಚ ॥ ಸರ್ವತ್ರ ಯಜಾದಿಷು ಲೇಟ್ಯಡಾಗಮಃ ॥ ಸ ಯಜಮಾನ ಇಂದ್ರಸ್ಯ ಬ್ರಹ್ಮ ಬ್ರಹ್ಮಾಣಿ । ಇದವಧಾರಣೇ । ಇಂದ್ರಸಂಬಂಧೀನಿ ಸ್ತೋತ್ರಾಣ್ಯೇವ ಚಾಕನತ್ । ಪುನಃಪುನಃ ಕಾಮಯತೇ ॥ ಕನತೇಃ ಕಾಂತ್ಯರ್ಥಾದ್ಯಙ್‌ಲುಕ್ಯಭ್ಯಾಸಸ್ಯ ದೀರ್ಘತ್ವಂ ಛಾಂದಸಂ । ತತೋ ಲೇಟ್ಯಡಾಗಮಃ ॥ ಅತ್ರ ಯಾಗೇ ಯಜಮಾನೋ ಧನಾದಿ ಲಭತ ಇತಿ ಯಜ್ಞಪ್ರಶಂಸಾ । ಸ ಏವ ದೃಷ್ಟಫಲಃ ಸನ್ ಸೋಮಾಭಿಷವಾದೀನ್ಕರೋತೀತಿ ಯಜಮಾನಪ್ರಶಂಸಾ ॥**

|| ಪ್ರತಿಪದಾರ್ಥ ||

**ಯಃ**—ಯಾವ ಯಜಮಾನನು । **ಯಜಾತಿ**—ಒಂದು ಸಲ ಯಾಗವನ್ನು ಮಾಡಿ (ಧನವನ್ನು ಹೊಂದಿರುವನೋ) । **ಯಜಾತ ಇತ್**—ಅವನೇ ಪುನಃ ಧನದ ಲಾಭಕ್ಕಾಗಿ ತಿರುಗಿಯೂ ಯಾಗವನ್ನಾಚರಿಸುತ್ತಾನೆ । **ಸುನವಚ್ಚ**—ಅವನೇ ಸೋಮವನ್ನು ಹಿಂಡಿ ಅರ್ಪಿಸುತ್ತಾನೆ । **ಪಚಾತಿ ಚ**—ಪುರೋಡಾಶಾದಿಗಳನ್ನೂ ಅರ್ಪಿಸುತ್ತಾನೆ (ಅದೇ ಯಜಮಾನನು) । **ಇಂದ್ರಸ್ಯ**—ಇಂದ್ರನ । **ಬ್ರಹ್ಮ ಇತ್**—ಸ್ತುತಿಗಳನ್ನೇ । **ಚಾಕನತ್**—ಪಠಿಸಲು ಆಶಿಸುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನು ಒಂದು ಸಲ ಯಾಗವನ್ನು ಮಾಡಿ ಧನವನ್ನು ಹೊಂದಿರುವನೋ ಅವನೇ ಪುನಃ ಧನಪ್ರಾಪ್ತಿಗಾಗಿ ತಿರುಗಿಯೂ ಯಜ್ಞಮಾಡುತ್ತಾನೆ. ಅವನೇ ಸೋಮವನ್ನೂ ಹಿಂಡಿ ಅರ್ಪಿಸುತ್ತಾನೆ. ಮತ್ತು ಪುರೋಡಾಶಾದಿಗಳನ್ನೂ ಅರ್ಪಿಸುತ್ತಾನೆ. ಅದೇ ಯಜಮಾನನು ಇಂದ್ರನ ಸ್ತುತಿಗಳನ್ನೇ ಪಠಿಸಲು ಆಶಿಸುತ್ತಾನೆ.

## English Translation.

He who offers oblations (to the gods, again) offers them : he pours forth libations and presents (the sacred cake), he delights in reiterating the the praise verily of Indra.

|| ಸಂಹಿತಾಪಾಠಃ ||

**ಪುರೋಳಾಶಂ ಯೋ ಅಸ್ಮೈ ಸೋಮಂ ರರತ ಆಶಿರಂ ।**

**ಪಾದಿತ್ತಂ ಶಕ್ರೋ ಅಂಹಸಃ ॥ ೨ ॥**

॥ ಪದಪಾಠಃ ॥

ಪುರೋಳಾಶಂ । ಯಃ । ಅಸ್ಮೈ । ಸೋಮಂ । ರರತೇ । ಆऽಶಿರಂ ।

ಪಾತ್ । ಇತ್ । ಶಕ್ರಃ । ಅಂಹಸಃ ॥ ೨ ॥

॥ ಸಾಯಣಭಾಷ್ಯಂ ॥

ಯೋ ಯಜಮಾನೋಽಸ್ಮಾ ಇಂದ್ರಾಯ ಪಶುಪುರೋಳಾಶಂ ತಥಾಶಿರಂ ತೃತೀಯಸವನೇ ಗೋಕ್ಷೀರೇಣಾಮಿಶ್ರಿತಂ ಸೋಮಂ ರರತೇ ಪ್ರಯಚ್ಛತಿ ॥ ರಾತೇರ್ಲಟಿ ಶಪಃ ಶ್ಲುಃ । ಅಡಾಗಮಃ ॥ ಶಕ್ರಃ ಸಮರ್ಥಃ ಸ ಇಂದ್ರಸ್ತಂ ಯಷ್ಟಾರಮಂಹಸಃ ಪಾಪಾತ್ತದ್ರೂಪಾದ್ರಕ್ಷಸೋ ವಾ ಪಾತ್ । ಇದವಧಾರಣೇ । ಅಪಾದೇವ । ರಕ್ಷತ್ಯೇವ । ಪಾತೇರ್ಲುಙಿ ರೂಪಂ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ಅಸ್ಮೈ**—ಈ ಇಂದ್ರನನ್ನುದ್ದೇಶಿಸಿ । **ಆಶಿರಂ**—ಕ್ಷೀರಾದಿಗಳಿಂದ ಮಿಶ್ರಿತವಾದ । **ಸೋಮಂ**—ಸೋಮರಸವನ್ನೂ । **ಪುರೋಡಾಶಂ**—ಪುರೋಡಾಶವನ್ನೂ । **ರರತೇ**—ಅರ್ಪಿಸುವನೋ । **ಶಕ್ರಃ**—ಸಮರ್ಥನಾದಇಂದ್ರನು । **ತಂ**—ಆ ಹವಿರ್ದಾತನನ್ನು । **ಅಂಹಸಃ**—ಪಾಪದಿಂದ । **ಪಾತ್ ಇತ್**—ಖಂಡಿತವಾಗಿಯೂ ರಕ್ಷಿಸುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನು ಇಂದ್ರನನ್ನುದ್ದೇಶಿಸಿ ಕ್ಷೀರಾದಿಗಳಿಂದ ಮಿಶ್ರಿತವಾದ ಸೋಮರಸವನ್ನೂ, ಪುರೋಡಾಶಾದಿಗಳನ್ನೂ ಅರ್ಪಿಸುವನೋ ಸಮರ್ಥನಾದ ಅದೇ ಯಜಮಾನನು ಆ ಹವಿರ್ದಾತನನ್ನು ಪಾಪದಿಂದ ಖಂಡಿತವಾಗಿಯೂ ರಕ್ಷಿಸುತ್ತಾನೆ.

English Translation.

Indra protects from sin that man who offers him cakes and presents Soma mixed with milk.

॥ ಸಂಹಿತಾಪಾಠಃ ॥

ತಸ್ಯ ದ್ಯುಮಾँ ಅಸದ್ರಥೋ ದೇವಜೂತಃ ಸ ಶೂಶುವತ್ ।

ವಿಶ್ವಾ ವನ್ವನ್ನಮಿತ್ರಿಯಾ ॥ ೩ ॥

॥ ಪದಪಾಠಃ ॥

ತಸ್ಯ । ದ್ಯುऽಮಾನ್ । ಅಸತ್ । ರಥಃ । ದೇವऽಜೂತಃ । ಸಃ । ಶೂಶುವತ್ ।

ವಿಶ್ವಾ । ವನ್ವನ್ । ಅಮಿತ್ರಿಯಾ ॥ ೩ ॥

॥ ಸಾಯಣಭಾಷ್ಯಂ ॥

ತಸ್ಯ ದೇವಾನ್ಪೂಜಯತೋ ಯಜಮಾನಸ್ಯ ದೇವಜೂತೋ ದೇವೈರಿಂದ್ರಾದಿಭಿಃ ಪ್ರೇರಿತೋ ದ್ಯುಮಾನ್ ದೀಪ್ತಿಮಾನ್ ರಥೋ ರಂಹಣಶೀಲಃ ಸ್ಯಂದನೋ ದೇವಾನಾಂ ಹವಿಷ್ಪ್ರದಾನರೂಪೇಣ ಯಜ್ಞೇನಾಸತ್ । ಭವತಿ । ಆಗಚ್ಛತಿ । ತೇತಸ್ತೇನ ರಥೇನಾಮಿತ್ರಿಯಾಮಿತ್ರಿಯಾಚ್ಛತ್ರುಭಿಃ ಕೃತಾನ್ ವಿಶ್ವಾ ಸರ್ವಾನ್ ಬಾಧಾನ್ ವನ್ವನ್ । ವನೋತಿರ್ಹಿಂಸಾಕರ್ಮೇತಿ ಯಾಸ್ಕಃ । ಹಿಂಸನ್ ಸ ಏವ ತೂತುವತ್ । ಪುತ್ರಾದಿಭಿರ್ಧನೈಶ್ಚ ವರ್ಧತೇ । ಅತ್ರ ಯೇನ ನೋ ರಥೋ ಬಾಧಾಭಾವಶ್ಚಾಭೂದಿತಿ ಯಾಗಪ್ರಶಂಸಾ ಯೇನ ಸಮ್ಯಗಿಷ್ಟದೇವಾ ರಥಂ ದತ್ತವಂತ ಇತಿ ಯಜಮಾನಪ್ರಶಂಸಾ ॥

॥ ಪ್ರತಿಪದಾರ್ಥ ॥

**ತಸ್ಯ**—ದೇವಪೂಜಕನಾದ ಯಜಮಾನನಿಗೆ । **ದೇವಜೂತಃ**—ದೇವತೆಗಳಿಂದ ಕಳುಹಲ್ಪಟ್ಟದೂ । **ದ್ಯುಮಾನ್**—ಪ್ರಭಾಯುತವಾದುದೂ ಆದ । **ರಥಃ**—ರಥವು । **ಅಸತ್**—ಬಂದು ಸೇರುತ್ತದೆ (ಆ ರಥದ ಸಹಾಯದಿಂದ) । **ಅಮಿತ್ರಿಯಾ**—ಶತ್ರುಗಳಿಂದ ಉಂಟಾಗುವ । **ವಿಶ್ವಾ**—ಸಮಸ್ತ ಹಿಂಸೆಗಳನ್ನೂ । **ವನ್ವನ್**—ನಾಶಪಡಿಸುತ್ತಾ । **ಸಃ**—ಅದೇ ಯಜಮಾನನು । **ತೂತುವತ್**—ಪುತ್ರಾದಿಗಳಿಂದ ಕೂಡಿದ ಅಭಿವೃದ್ಧಿಯನ್ನು ಹೊಂದುತ್ತಾನೆ.

॥ ಭಾವಾರ್ಥ ॥

ದೇವಪೂಜಕನಾದ ಯಜಮಾನನಿಗೆ ದೇವತೆಗಳಿಂದ ಕಳುಹಿಸಲ್ಪಟ್ಟದೂ, ಪ್ರಭಾಯುತವಾದುದೂ ಆದ ರಥವು ಬಂದು ಸೇರುತ್ತದೆ. ಆ ರಥದ ಸಹಾಯದಿಂದ ಶತ್ರುಗಳಿಂದ ಉಂಟಾಗುವ ಸಮಸ್ತ ಹಿಂಸೆಗಳನ್ನೂ ನಾಶಪಡಿಸುತ್ತಾ ಅದೇ ಯಜಮಾನನು ಪುತ್ರಾದಿಗಳಿಂದ ಕೂಡಿದ ಅಭಿವೃದ್ಧಿಯನ್ನು ಹೊಂದುತ್ತಾನೆ.

## English Translation.

A brilliant chariot comes to him, sent by the gods, with which, baffling all hostilies, he prospers.

॥ ಸಂಹಿತಾಪಾಠಃ ॥

ಅಸ್ಯ ಪ್ರಜಾವತೀ ಗೃಹೇಽಸಶ್ಚಂತೀ ದಿವೇದಿವೇ ।
ಇಳಾ ಧೇನುಮತೀ ದುಹೇ ॥ ೪ ॥

। ಪದಪಾಠಃ ।

ಅಸ್ಯ । ಪ್ರಜಾಽವತೀ । ಗೃಹೇ । ಅಸಶ್ಚಂತೀ । ದಿವೇಽದಿವೇ ।
ಇಳಾ । ಧೇನುಽಮತೀ । ದುಹೇ ॥ ೪ ॥

॥ ಸಾಯಣಭಾಷ್ಯಂ ॥

**ಪ್ರಜಾವತೀ ಪುತ್ರಾದಿಯುಕ್ತಮಸಶ್ಚಂತೀ । ಸಶ್ಚತಿರ್ಗತಿಕರ್ಮಾ । ಅಗಮನಶೀಲಂ ತಾದೃಶಂ ಧೇನುಮತೀ । ಪಯಸಾ ಸರ್ವಾನ್ ಧಿನೋತಿ ಪ್ರೀಣಯತೀತಿ ಧೇನುರ್ಗೌಃ । ತತ್ಸಹಿತಮಿಳಾನ್ನಮಸ್ಯ ಯಷ್ಟುರ್ಗೃಹೇ ದಿವೇದಿವೇ ದುಹೇ । ದುಹ್ಯತೇ । ಯದ್ವಾ । ಇಳೇತಿ ಗವಾಂ ದೇವತಾ । ಸಾ ಸ್ಥಿರಾ ಧೇನುಮತೀ । ಗವಾಂ ಪತಿತ್ವಾದ್ಧೇನುಭಿರ್ಧೇನುಮತೀ । ಇಳಾ ಗೋದೇವತಾ ದೇವೈಃ ಪ್ರೇರಿತಾ ಸತ್ಯಸ್ಯ ಯಜಮಾನಸ್ಯ ಗೃಹೇ ದೋಗ್ಧ್ರೀ । ಪುತ್ರಾದಿಕಮಸ್ಮೈ ದದಾತೀತ್ಯರ್ಥಃ ॥ ದುಹೇರ್ಲಟಿ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಅತ್ರೇಜ್ಯಾಸ್ತವಃ ॥**

॥ ಪ್ರತಿಪದಾರ್ಥ ॥

**ಅಸ್ಯ**—ದೇವಪೂಜಕನಾದ ಈ ಯಜಮಾನನ । **ಗೃಹೇ**—ಮನೆಯಲ್ಲಿ । **ದಿವೇದಿವೇ**—ಪ್ರತಿದಿನವೂ । **ಪ್ರಜಾವತೀ**—ಪುತ್ರಪೌತ್ರಾದಿಗಳಿಂದ ಕೂಡಿದುದೂ । **ಅಸಶ್ಚಂತೀ**—ಶಾಶ್ವತವಾದುದೂ । **ಧೇನುಮತೀ**—ಪುಷ್ಕಲವಾದ ಕ್ಷೀರವನ್ನು ಕೊಡುವ ಧೇನುಗಳಿಂದ ಕೂಡಿದುದೂ ಆದ । **ಇಳಾ**—ಅನ್ನವು । **ದುಹೇ**—ದೇವತೆಗಳಿಂದ ಒದಗಿಸಲ್ಪಡುತ್ತದೆ.

॥ ಭಾವಾರ್ಥ ॥

ದೇವಪೂಜಕನಾದ ಈ ಯಜಮಾನನ ಮನೆಯಲ್ಲಿ ಪ್ರತಿದಿನವೂ ಪುತ್ರಪೌತ್ರಾದಿಗಳಿಂದ ಕೂಡಿದುದೂ, ಶಾಶ್ವತವಾದುದೂ, ಪುಷ್ಕಲವಾದ ಕ್ಷೀರವನ್ನು ಕೊಡುವ ಧೇನುಗಳಿಂದ ಕೂಡಿದುದೂ ಆದ ಅನ್ನವು ದೇವತೆಗಳಿಂದ ಒದಗಿಸಲ್ಪಡುತ್ತದೆ.

English Translation.

In his house perpetual abundance, accompanied by progeny, (is present), and milch cows are milked day by day.

॥ ಸಂಹಿತಾಪಾಠಃ ॥

**ಯಾ ದಂಪತೀ ಸಮನಸಾ ಸುನುತ ಆ ಚ ಧಾವತಃ ।**
**ದೇವಾಸೋ ನಿತ್ಯಯಾಶಿರಾ ॥ ೫ ॥**

॥ ಪದಪಾಠಃ ॥

**ಯಾ । ದಂಪತೀ ಇತಿ ದಂऽಪತೀ । ಸऽಮನಸಾ । ಸುನುತಃ । ಆ । ಚ । ಧಾವತಃ ।**
**ದೇವಾಸಃ । ನಿತ್ಯಯಾ । ಆऽಶಿರಾ ॥ ೫ ॥**

॥ ಸಾಯಣಭಾಷ್ಯಂ ॥

ಅತ್ರ ಯಜನೇ ದಂಪತ್ಯೋಃ ಸ್ತುತಿಃ । ಹೇ ದೇವಾಸೋ ದೇವಾಃ ಸಮನಸಾ ಸಮನಸೌ ಕರ್ಮಣಿ ಸಮಾನಮನಸ್ಕೌ ಯಾ ಯೌ ದಂಪತೀ ಯಜ್ಞಕಾರಿಣೌ ಜಾಯಾಪತೀ ಸುನುತಃ ಸೋಮಾಭಿಷವಂ ಕುರುತಃ । ಯೌ ದಂಪತೀ ತತಸ್ತಮಭಿಷುತಂ ಸೋಮಮಾ ಧಾವತಶ್ಚ ದಶಾಪವಿತ್ರೇಣ ಶೋಧಯತಃ ॥ ಧಾವು ಗತಿಶುದ್ಧ್ಯೋಃ ॥ ತಥಾ ನಿತ್ಯಯಾ । ಯತ್ರ ತೃತೀಯಸವನೇ ಸೋಮೋಽಸ್ತಿ ತತ್ರಾಶ್ರಯಣದ್ರವ್ಯಂ ಗೋಕ್ಷೀರಮಸ್ತ್ಯೇವ । ತಸ್ಮಾನ್ನಿತ್ಯಸಂಬಂಧೇನಾಶಿರಾಶ್ರಯಣೇನ ಗೋಕ್ಷೀರೇಣ ಸಂಯುತಂ ಸೋಮಂ ಯೌ ಪ್ರಯಚ್ಛತಃ ತಾವನ್ನಾದೀನ್ ಪ್ರಾಪ್ನುತ ಇತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

**ದೇವಾಸಃ**—ಎಲೈ ದೇವತೆಗಳೇ । **ಸಮನಸಾ**—ಕರ್ಮದಲ್ಲಿ ಒಂದೇ ವಿಧವಾದ ಮನಸ್ಸುಳ್ಳ । **ಯಾ**—ಯಾವ । **ದಂಪತೀ**—ಪತಿಪತ್ನಿಯರು । **ಸುನುತಃ**—ಸೋಮವನ್ನು ಹಿಂಡುವರೋ । **ಚ**—ಮತ್ತು । **ಆ ಧಾವತಃ**—ಯಾರು ದಶಾಪವಿತ್ರದಿಂದ ಶುದ್ಧಿಮಾಡುವರೋ । (ಮತ್ತು) **ನಿತ್ಯಯಾ**—ನಿಯತವಾಗಿಯೂ ಶಾಶ್ವತವಾಗಿಯೂ ಸೇರಿರುವ । **ಆಶಿರಾ**—ಕ್ಷೀರಾದಿ ಶ್ರಯಣದ್ರವ್ಯಗಳೊಡನೆ ಸೇರಿರುವ ಸೋಮವನ್ನು ಅರ್ಪಿಸುವರೋ (ಆ ದಂಪತಿಗಳು ಅನ್ನಾದಿಗಳನ್ನು ಹೊಂದುತ್ತಾರೆ).

॥ ಭಾವಾರ್ಥ ॥

ಎಲೈ ದೇವತೆಗಳೇ, ಕರ್ಮದಲ್ಲಿ ಒಂದೇ ಮನಸ್ಸುಳ್ಳ ಯಾವ ಪತಿಪತ್ನಿಯರು ಸೋಮವನ್ನು ಹಿಂಡುವರೋ, ಮತ್ತು ದಶಾಪವಿತ್ರದಿಂದ ಶುದ್ಧಿಮಾಡಿ ನಿಯತವಾಗಿಯೂ, ಶಾಶ್ವತವಾಗಿಯೂ ಸೇರಿರುವ ಕ್ಷೀರಾದಿಶ್ರಯಣದ್ರವ್ಯಗಳೊಡನೆ ಸೇರಿರುವ ಸೋಮವನ್ನು ಅರ್ಪಿಸುವರೋ ಆ ದಂಪತಿಗಳು ಅನ್ನಾದಿಗಳನ್ನು ಹೊಂದುತ್ತಾರೆ.

English Translation.

Gods, may the husband and wife, who with one mind offer libations and purify them, and (propitate you) with Soma ever mixed with milk.

॥ ಸಂಹಿತಾಪಾಠಃ ॥

ಪ್ರತಿ ಪ್ರಾಶವ್ಯಾಁ ಇತಃ ಸಮ್ಯಂಚಾ ಬರ್ಹಿರಾಶಾತೇ ।
ನ ತಾ ವಾಜೇಷು ವಾಯತಃ ॥ ೬ ॥

॥ ಪದಪಾಠಃ ॥

ಪ್ರತಿ । ಪ್ರಾಶವ್ಯಾನ್ । ಇತಃ । ಸಮ್ಯಂಚಾ । ಬರ್ಹಿಃ । ಆಶಾತೇ ಇತಿ ।
ನ । ತಾ । ವಾಜೇಷು । ವಾಯತಃ ॥ ೬ ॥

॥ ಸಾಯಣಭಾಷ್ಯಂ ॥

ತೌ ದೇವೇಭ್ಯೋ ಹವಿಷಾಂ ದಾತಾರೌ ದಂಪತೀ ಪ್ರಾಶವ್ಯಾನ್ । ಅಶ ಭೋಜನೇ । ಪ್ರಪೂರ್ವಸ್ಯಾಸ್ಮಾದೌಣಾದಿಕೋ ಭಾವ ಉಣ್ಪ್ರತ್ಯಯಃ । ಪ್ರಾಶುರ್ಭಕ್ಷಣಂ । ತಸ್ಮೈ ಸಾಧೂನ್ ಹಿತಾನನ್ನಾದೀನ್ ಪ್ರತೀತಃ । ಪ್ರತಿಗಚ್ಛತಃ । ಯದ್ವಾ । ಪ್ರಾಶಿತವ್ಯಾನ್ ॥ ಅತ್ರ ವರ್ಣಲೋಪಃ ॥ ತಾವೇವ ಸಮ್ಯಂಚಾ ಸಮ್ಯಂಚೌ ಸಮೀಚೀನೌ ಸಂಗತೌ ಬರ್ಹಿರ್ಯಜ್ಞಮಾಶಾತೇ । ಅನಶಾತೇ । ತತ್ರ ದ್ರವ್ಯೈರ್ವ್ಯಾಪ್ನುತಃ । ತಸ್ಮಾತ್ತೌ ಯಷ್ಟಾರೌ ಜಾಯಾಪತೀ ವಾಜೇಷು ದೇವೈರ್ದತ್ತೇಷ್ವನ್ನೇಷು ನ ವಾಯುತಃ । ವಯತಿರ್ಗತ್ಯರ್ಥಃ । ನ ಗಚ್ಛತಃ । ಸರ್ವದಾನ್ನಸಹಿತೌ ತಿಷ್ಠತಾಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಮೇಲೆ ವರ್ಣಿತರಾದ ಪತಿಪತ್ನಿಯರು) ಪ್ರಾಶವ್ಯಾನ್— ಭಕ್ಷಣಕ್ಕೆ ಯೋಗ್ಯವಾದ ಅನ್ನಾದಿಗಳನ್ನೂ । ಪ್ರತಿ ಇತಃ— ಹೊಂದುತ್ತಾರೆ । ಸಮ್ಯಂಚಾ— ಇಬ್ಬರೂ ಕೂಡಿದವರಾಗಿ । ಬರ್ಹಿಂ— ಯಜ್ಞವನ್ನಾಚರಿಸಲು । ಆಶಾತೇ— ಸಮರ್ಥರಾಗುತ್ತಾರೆ । ತಾ— ಅವರು । ವಾಜೇಷು— ದೇವತೆಗಳಿಂದ ದತ್ತವಾದ ಅನ್ನಗಳಲ್ಲಿ । ನ ವಾಯುತಃ— ಯಾವ ವಿಚ್ಛಿತ್ತಿಯನ್ನೂ ನ್ಯೂನತೆಯನ್ನೂ ಹೊಂದಿರುವುದಿಲ್ಲ.

॥ ಭಾವಾರ್ಥ ॥

ಹಿಂದೆ ವರ್ಣಿತರಾದಂತಹ ಪತಿಪತ್ನಿಯರು ಭಕ್ಷಣಕ್ಕೆ ಯೋಗ್ಯವಾದ ಅನ್ನಾದಿಗಳನ್ನು ಹೊಂದುತ್ತಾರೆ. ಇಬ್ಬರೂ ಒಟ್ಟಿಗೆ ಕೂಡಿದವರಾಗಿ ಯಜ್ಞವನ್ನಾಚರಿಸಲು ಸಮರ್ಥರಾಗುತ್ತಾರೆ. ದೇವತೆಗಳಿಂದ ದತ್ತವಾದ ಅನ್ನಗಳಲ್ಲಿ ಅವರು ಯಾವ ವಿಚ್ಛಿತ್ತಿಯನ್ನೂ ಮತ್ತು ನ್ಯೂನತೆಯನ್ನೂ ಹೊಂದಿರುವುದಿಲ್ಲ.

## English Translation.

Constantly associated, may they acquire appropriate (sacrificial) viands; may they be able to offer sacrifice; may they never be wanting in food (given by the gods).

॥ ಸಂಹಿತಾಪಾಠಃ ॥

ನ ದೇವಾನಾಮಪಿ ಹ್ನುತಃ ಸುಮತಿಂ ನ ಜುಗುಕ್ಷತಃ ।
ಶ್ರವೋ ಬೃಹದ್ವಿವಾಸತಃ ॥ ೭ ॥

। ಪದಪಾಠಃ ।

ನ । ದೇವಾನಾಂ । ಅಪಿ । ಹ್ನುತಃ । ಸುಮತಿಂ । ನ । ಜುಘುಕ್ಷತಃ ।
ಶ್ರವಃ । ಬೃಹತ್ । ವಿವಾಸತಃ ॥ ೭ ॥

|| ಸಾಯಣಭಾಷ್ಯಂ ||

ಏತೌ ದಂಪತೀ ದೇವಾನಾಮಿಂದ್ರಾದೀನಾಂ ನಾಪಿ ಹ್ನುತಃ । ಅಪಲಾಪಂ ನ ಕುರುತಃ । ಅಪಹ್ನವೋಽಪಲಾಪಃ । ದೇವೇಭ್ಯೋ ಹವಿಃ ಪ್ರದಾಸ್ಯಾವ ಇತಿ ಪ್ರತಿಜ್ಞಾಯ ಪುನರದಾನಮಪಲಾಪಃ ॥ ಹ್ನುಙ್ ಅಪನಯೇ ॥ ಕಥಂ ನಾಪಲಪಂತೀತ್ಯವಸೀಯತೇ । ತದಾಹ । ಸುಮತಿಂ ಯುಷ್ಮದೀಯಾಂ ಶೋಭನಾಂ ಮತಿಂ ನ ಜುಗುಕ್ಷತಃ । ಜುಘುಕ್ಷತಃ । ನ ಸಂವರೀತುಮಿಚ್ಛತಃ । ಸಂವಾರಣಮಾಚ್ಛಾದನಂ । ನ ಛಾದಯತ ಇತ್ಯರ್ಥಃ । ಕಿಂತು ಸ್ತುತಿಂ ಕುರುತಃ ॥ ಗುಹೂ ಸಂವರಣೇ । ಸನಿ ಗ್ರಹಗುಹೋಶ್ಚ । ಪಾ. ೭-೨-೧೨ । ಇತೀಟ್ಪ್ರತಿಷೇಧಃ । ಢತ್ವಷತ್ವಭಾವೌ । ಸಂಹಿತಾಕಾಲೇ ಭಷ್ಭಾವೋ ನಾಸ್ತಿ ಛಾಂದಸತ್ವಾತ್ ॥ ಕಿಂಚ ಬೃಹದ್ದೇವೇಭ್ಯೋ ದೀಯಮಾನತ್ವಾನ್ಮಹಚ್ಛ್ರವಃ । ಶ್ರವ ಇತ್ಯನ್ನನಾಮ । ಮಹದನ್ನಂ ವಿವಾಸತಃ । ಯುಷ್ಮಭ್ಯಂ ಪ್ರಯಚ್ಛತಃ । ವಿವಾಸತಿಃ ಪರಿಚರಣಕರ್ಮಾ । ದಾನಮಪಿ ಚ ಪರಿಚರಣಮೇವ । ದೇವೈರ್ದತ್ತಮನ್ನಂ ಘೃತಾದಿಭಿರ್ಮಿಶ್ರೀಕೃತ್ಯ ಪುನಃಪುನರ್ಯಜತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಕರ್ಮನಿರತರಾದ ಆ ದಂಪತಿಗಳು) **ದೇವಾನಾಂ**—ದೇವತೆಗಳನ್ನುದ್ದೇಶಿಸಿ ಮಾಡಿದ ಸಂಕಲ್ಪವನ್ನು । **ನ ಅಪಿ ಹ್ನುತಃ**—ಮೀರುವುದಿಲ್ಲ, ತಮ್ಮ ಪ್ರತಿಜ್ಞಾಭಂಗವನ್ನುಂಟುಮಾಡುವುದಿಲ್ಲ । **ಸುಮತಿಂ**—ಉತ್ತಮವಾದ ಸ್ತುತಿಯನ್ನು । **ನ ಜುಘುಕ್ಷತಃ**—ಮುಚ್ಚುವುದಿಲ್ಲ (ದೇವತೆಗಳನ್ನು ಖಂಡಿತವಾಗಿ ಸ್ತುತಿಸುತ್ತಾರೆ) । **ಬೃಹತ್**—ಪ್ರಭೂತವಾಗಿ । **ಶ್ರವಃ**—ಹವಿಸ್ಸಿನ ರೂಪದ ಅನ್ನವನ್ನು । **ವಿವಾಸತಃ**—ಅರ್ಪಿಸುತ್ತಾರೆ.

॥ ಭಾವಾರ್ಥ ॥

ಕರ್ಮನಿರತರಾದ ಅದೇ ದಂಪತಿಗಳು ದೇವತೆಗಳನ್ನು ಉದ್ದೇಶಿಸಿ ಮಾಡಿದ ಸಂಕಲ್ಪವನ್ನು ಮೀರುವುದಿಲ್ಲ. ತಮ್ಮ ಪ್ರತಿಜ್ಞಾಭಂಗವನ್ನುಂಟುಮಾಡಿಕೊಳ್ಳದೇ, ಉತ್ತಮವಾದ ಸ್ತುತಿಯನ್ನು ಖಂಡಿತ ಅರ್ಪಿಸುತ್ತಾರೆ. ಅದನ್ನು ಮರೆಸುವುದಿಲ್ಲ. ಪ್ರಭೂತವಾಗಿ ಹವಿಸ್ಸಿನ ರೂಪದ ಅನ್ನವನ್ನು ಅರ್ಪಿಸುತ್ತಾರೆ

## English Translation.

They retract not (their promises) to the gods, they withhold not your praise, but offer abundant (sacrificial) food.

। ಸಂಹಿತಾಪಾಠಃ ।

ಪುತ್ರಿಣಾ ತಾ ಕುಮಾರಿಣಾ ವಿಶ್ವಮಾಯುರ್ವ್ಯಶ್ನುತಃ ।
ಉಭಾ ಹಿರಣ್ಯಪೇಶಸಾ ॥ ೮ ॥

। ಪದಪಾಠಃ ।

ಪುತ್ರಿಣಾ । ತಾ । ಕುಮಾರಿಣಾ । ವಿಶ್ವಂ । ಆಯುಃ । ವಿ । ಅಶ್ನುತಃ ।
ಉಭಾ । ಹಿರಣ್ಯಽಪೇಶಸಾ ॥ ೮ ॥

॥ ಸಾಯಣಭಾಷ್ಯಂ ॥

ಪುತ್ರಿಣಾ ಪುತ್ರವಂತೌ ತತ್ರಾಪಿ ಕುಮಾರಿಣಾ ಷೋಡಶವರ್ಷದೇಶೀಯಪುತ್ರವಂತೌ ಹಿರಣ್ಯ-ಪೇಶಸಾ ಹಿರಣ್ಮಯೈರಾಭರಣೈರಲಂಕೃತರೂಪಾವುಭೋಭೌ ತಾ ತೌ ದಂಪತೀ ವಿಶ್ವಂ ಸರ್ವಮಾಯುರಾ-ಯುಷ್ಯಂ ವ್ಯಶ್ನುತಃ । ವ್ಯಾಪ್ನುತಃ । ಯಜ್ಞೇನ ತಯೋಃ ಪುತ್ರಾದಿಕಂ ಧನಮಾಯುಶ್ಚ ಸಂಭವ-ತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಕುಮಾರಿಣಾ**—ಎಳೆಯ ತಾರುಣ್ಯವನ್ನು ಹೊಂದಿದ । **ಪುತ್ರಿಣಾ**—ಪುತ್ರಪುತ್ರಿಯರಿಂದೊಡಗೂಡಿದವರೂ । **ಹಿರಣ್ಯಪೇಶಸಾ**—ಸುವರ್ಣಮಯವಾದ ಅಲಂಕಾರವುಳ್ಳವರೂ ಆದ । **ಉಭಾ ತಾ**—ಆ ದಂಪತಿಗಳಿಬ್ಬರೂ । **ವಿಶ್ವಂ**-ಸಮಸ್ತವಾದ । **ಆಯುಃ**-ಆಯುಸ್ಸನ್ನೂ । **ವ್ಯಶ್ನುತಃ**-ಸುಖದಿಂದ ವ್ಯಾಪ್ತನಾಗುವಂತೆ ಹೊಂದುತ್ತಾರೆ.

॥ ಭಾವಾರ್ಥ ॥

ಯಜ್ಞಕರ್ಮನಿರತರಾದ ಆ ದಂಪತಿಗಳಿಬ್ಬರೂ ಎಳೆಯ ತಾರುಣ್ಯವನ್ನು ಹೊಂದಿದ ಪುತ್ರಪುತ್ರಿಯರಿಂದ ಒಡಗೂಡಿದವರೂ, ಸುವರ್ಣಮಯವಾದ ಅಲಂಕಾರವುಳ್ಳವರೂ ಆಗಿ ತಮ್ಮ ಸಮಸ್ತವಾದ ಆಯುಸ್ಸೂ ಸುಖದಿಂದ ಪೂರ್ಣವಾಗಿರುವಂತೆ ಹೊಂದುತ್ತಾರೆ.

English Translation.

Blessed with youthful and adolescent offspring, and both having their persons richly ornamented, they pass (happily) their whole life.

॥ ಸಂಹಿತಾಪಾಠಃ ॥

ವೀತಿಹೋತ್ರಾ ಕೃತದ್ವಸೂ ದಶಸ್ಯಂತಾಮೃತಾಯ ಕಂ ।
ಸಮೂಧೋ ರೋಮಶಂ ಹತೋ ದೇವೇಷು ಕೃಣುತೋ ದುವಃ ॥೯॥

॥ ಪದಪಾಠಃ ॥

ವೀತಿऽಹೋತ್ರಾ । ಕೃತದ್ವಸೂ ಇತಿ ಕೃತತ್ऽವಸೂ । ದಶಸ್ಯಂತಾ । ಅಮೃತಾಯ । ಕಂ ।
ಸಂ । ಊಧಃ । ರೋಮಶಂ । ಹತಃ । ದೇವೇಷು । ಕೃಣುತಃ । ದುವಃ ॥ ೯ ॥

॥ ಸಾಯಣಭಾಷ್ಯಂ ॥

ವೀತಿಹೋತ್ರಾ ವೀತಿಹೋತ್ರೌ । ವೀತಿಃ ಪ್ರಿಯಕರೋ ಹೋತ್ರಾ ಯಜ್ಞೋ ಯಯೋಸ್ತೌ । ಅನೇನ ಯಜ್ಞೇನ ತಯೋಃ ಸುಖಾದಿಕಂ ಸಂಭವತಿ । ತಾದೃಶೌ । ಯದ್ವಾ । ವೀತಿಃ ಕಾಂತ್ಯರ್ಥಃ । ಹೋತ್ರೇತಿ ವಾಙ್ನಾಮ । ಅಸ್ಮದ್ವಿಷಯಾಂ ಸ್ತುತಿಂ ಕುರುತಇತಿ ಪೃಥಕ್ಪೃಥಗ್ದೇವೈಃ ಕಾಮ್ಯಮಾನ-ಸ್ತುತೀ । ಅತ ಏವ ಕಂ ಸುಖಪ್ರದಂ ಹವೀರೂಪಮನ್ನಂ ದಶಸ್ಯಂತಾ ದೇವೇಭ್ಯಃ ಪ್ರಯಚ್ಛಂತೌ ಕೃತದ್ವಸೂ ॥ ತಕಾರೋಪಜನಶ್ಛಾಂದಸಃ ॥ ಯಾಚಮಾನಕೃತಧನೌ । ಪಾತ್ರೇಷೂಪಯುಕ್ತಧನಾ-

ವಿಶ್ಯೇರ್ಥಃ । ಏವಂವಿಧೌ ದಂಪತೀ ಅಮೃತಾಯಾಮರಣಾಯ ಸಂತಾನಾಭಿವೃದ್ಧ್ಯೈ ರೋಮಶಂ ರೋಮವಂತಂ ವೃಷಣಮೂಧೋ ಯೋನಿಂ ಚ ಸಂ ಹತಃ । ಸಂಯೋಜಯತ ಇತಿ । ಮೈಥುನಮುಸಾದ್ಯೇತೇ । ತತಃ ಸಪುತ್ರಾದಿಕೌ ತೌ ದೇವೇಷು ದುವಃ ಸ್ತುತ್ಯನ್ನದಾನರೂಪಾಂ ಪರಿಚರ್ಯಾಂ ಕೃಣುತಃ । ಕುರುತಃ ॥ ಪಂಚಭಿರ್ದಂಪತೀ ಅಸ್ತೂಯೇತಾಂ ॥

॥ ಪ್ರತಿಪದಾರ್ಥ ॥

**ವೀತಿಹೋತ್ರಾ**—ದೇವತೆಗಳಿಗೆ ಪ್ರಿಯಕರವಾದ ಯಜ್ಞವನ್ನು ಮಾಡುವವರೂ । **ಶಂ**– ಸುಖಕರವಾದ ಅನ್ನವನ್ನು (ಹವಿಸ್ಸನ್ನು) । **ದಶಸ್ಯಂತಾ**—ದೇವತೆಗಳಿಗೆ ಅರ್ಪಿಸುವವರೂ । **ಕೃತದ್ವಸೂ**—ಯಾಚಿಸಿದ ಧನವನ್ನು ಹೊಂದುವವರೂ ಆದ ಅದೇ ದಂಪತಿಗಳು । **ಅಮೃತಾಯ**—ಮರಣರಾಹಿತ್ಯವನ್ನು ಹೊಂದುವದಕ್ಕೋಸ್ಕರ (ಸಂತಾನಾಭಿವೃದ್ಧಿಗಾಗಿ) । **ರೋಮಶಂ ಊಧಃ ಸಂ ಹತಃ**—ಪುತ್ರೋತ್ಪತ್ತಿಗಾಗಿ ರೋಮಯುಕ್ತವಾದ ವೃಷಣಯೋನಿಗಳ ಸಂಬಂಧವನ್ನು ಮಾಡುತ್ತಾರೆ ಎಂದರೆ ಒಟ್ಟಿಗೆ ಸೇರುತ್ತಾರೆ । **ದೇವೇಷು**—ದೇವತೆಗಳನ್ನುದ್ದೇಶಿಸಿ । **ದುವಃ**—ಪೂಜೆಯನ್ನು । **ಕೃಣುತಃ**—ನೆರವೇರಿಸುತ್ತಾರೆ.

॥ ಭಾವಾರ್ಥ ॥

ದೇವತೆಗಳಿಗೆ ಪ್ರಿಯಕರವಾದ ಯಜ್ಞವನ್ನು ಮಾಡುವವರೂ, ಅವರಿಗೆ ಸುಖಕರವಾದ ಹವಿಸ್ಸನ್ನು ಅರ್ಪಿಸುವವರೂ ಆದ ದಂಪತಿಗಳು ತಾವು ದೇವತೆಗಳಿಂದ ಯಾಚಿಸಿದ ಧನವನ್ನು ಹೊಂದಿದವರಾಗಿ ತಮ್ಮ ಸಂತಾನಾಭಿವೃದ್ಧಿಯಿಂದ ವಂಶವು ವಿಚ್ಛಿತ್ತಿಯಿಲ್ಲದೆ ಬೆಳೆಯುವುದಕ್ಕಾಗಿ ಪುತ್ರಜನನದ ಉದ್ದಿಶ್ಯದಿಂದ ಇಬ್ಬರೂ ರೋಮಯುಕ್ತವಾದ ವೃಷಣಯೋನಿಗಳ ಸಂಬಂಧವನ್ನು ಮಾಡುತ್ತಾ ಒಟ್ಟಿಗೆ ಸೇರುತ್ತಾರೆ. ದೇವತೆಗಳನ್ನುದ್ದೇಶಿಸಿ ಪೂಜೆಯನ್ನು ನೆರವೇರಿಸುತ್ತಾರೆ.

## English Translation.

Offering acceptable sacrifices, obtaining the wealth they solicit, presenting gratifying (oblations to the gods), for the sake of immortality enjoying personal union, they (wife and husband) worship the gods.

॥ ಸಂಹಿತಾಪಾಠಃ ॥

ಆ ಶರ್ಮ ಪರ್ವತಾನಾಂ ವೃಣೀಮಹೇ ನದೀನಾಂ ।
ಆ ವಿಷ್ಣೋಃ ಸಚಾಭುವಃ ॥ ೧೦ ॥

॥ ಪದಪಾಠಃ ॥

ಆ । ಶರ್ಮ । ಪರ್ವತಾನಾಂ । ವೃಣೀಮಹೇ । ನದೀನಾಂ ।
ಆ । ವಿಷ್ಣೋಃ । ಸಚಾಽಭುವಃ ॥ ೧೦ ॥

॥ ಸಾಯಣಭಾಷ್ಯಂ ॥

ಏತದಾದಿಷು ದಂಪತ್ಯೋರಾಶಿಷಃ । ಯುಷ್ಮಾರೋ ವಯಂ ಪರ್ವತಾನಾಂ ಫಲಪುಷ್ಪಸಹಿತ-ಲತಾಭಿರ್ಯುಕ್ತಾನಾಂ ಯಚ್ಛರ್ಮ ಸುಖಂ ತತ್ತೇಷಾಂ ಸ್ಥೈರ್ಯಲಕ್ಷಣಂ ಸುಖಂ ವಾ ನದೀನಾಂ ಚೋಭಯಕೂಲವಾಸಿಭಿರ್ಮುನಿಭಿರ್ಮನುಷ್ಯೈರ್ವಾ ಜಪಾದ್ಯನುಷ್ಠಾನೇ ಕೃತೇ ಯತ್ಸುಖಂ ತಾಸಾಂ ಭವತಿ ತತ್ಸುಖಂ ಏಕತ್ರ ಸ್ಥಿತ್ವಾ ಸಕಲಪದಾರ್ಥಭೋಕ್ತೃತ್ವಲಕ್ಷಣಮನುಷ್ಠಾನಲಕ್ಷಣಂ ಸುಖಮಾ ವೃಣೀಮಹೇ । ಸಂಭಜಾಮಹೇ । ಸಜಾಭುವೋ ದೇವೈಃ ಸಹ ಭವತೋ ದೇವಸಹಿತಸ್ಯ ವಿಷ್ಣೋರಪಿ ಶತ್ರುಹನನಲಕ್ಷಣಂ ಯತ್ಸುಖಂ ತದಪಿ ವಯಮಾ ವೃಣೀಮಹೇ । ಬಾಧಾಭಾವಾದ್ಧವಿಷ್ಪ್ರದಾನೇನ ದೇವೈಃ ಸಹ ವರ್ತಾಮಹ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಪರ್ವತಾನಾಂ**—ಪರ್ವತಗಳಿಗೆ ಸಂಬಂಧಿಸಿದ । **ಶರ್ಮ**—ಸುಖವನ್ನೂ । **ನದೀನಾಂ**—ನದಿಗಳಿಗೆ ಸಂಬಂಧಿಸಿದ ಸುಖವನ್ನೂ । **ಆ ವೃಣೀಮಹೇ**—ನಾವು ಯಾಚಿಸುತ್ತೇವೆ । **ಸಜಾಭುವಃ**—ದೇವತೆಗಳೊಡಗೂಡಿದ । **ವಿಷ್ಣೋಃ**-ವಿಷ್ಣುವಿನಿಂದಲೂ । **ಆ (ವೃಣೀಮಹೇ)**-ತತ್ಸಂಬಂಧವಾದ ಸುಖವನ್ನು ಯಾಚಿಸುತ್ತೇವೆ.

॥ ಭಾವಾರ್ಥ ॥

ಪರ್ವತಗಳಿಂದ ಫಲಪುಷ್ಪಾದಿರೂಪಗಳಿಂದ ದತ್ತವಾಗುವ ಸುಖವನ್ನೂ ನದಿಗಳಿಂದ ಉತ್ಪನ್ನವಾಗುವ ಸಕಲ ಸುಖಗಳನ್ನೂ, ವಿಷ್ಣುವಿನ ಅನುಗ್ರಹದಿಂದ ಲಬ್ಧವಾಗುವ ಸುಖವನ್ನೂ ನಾವು ಯಾಚಿಸುತ್ತೇವೆ.

English Translation.

We solicit the happiness (afforded) by the mountains, the rivers, and Vishnu, associated (with the gods).

॥ ಸಂಹಿತಾಪಾಠಃ ॥

ಐತು ಪೂಷಾ ರಯಿರ್ಭಗಃ ಸ್ವಸ್ತಿ ಸರ್ವಧಾತಮಃ ।
ಉರುರಧ್ವಾ ಸ್ವಸ್ತಯೇ ॥ ೧೧ ॥

॥ ಪದಪಾಠಃ ॥

ಆ । ಏತು । ಪೂಷಾ । ರಯಿಃ । ಭಗಃ । ಸ್ವಸ್ತಿ । ಸರ್ವಽಧಾತಮಃ ।
ಉರುಃ । ಅಧ್ವಾ । ಸ್ವಸ್ತಯೇ ॥ ೧೧ ॥

॥ ಸಾಯಣಭಾಷ್ಯಂ ॥

ರಯಿರ್ಧನಾನಾಂ ದಾತಾ ಭಗೋ ಭಜನೀಯಃ ಸರ್ವಃ ಸರ್ವಧಾತಮಃ ಸರ್ವೇಷಾಂ ಧಾರಯಿತೃ-ತಮಃ ಸರ್ವೇಷಾಂ ಧನಾದಿಭಿಃ ಪೋಷಯಿತೃತಮಃ ಪೂಷೈತನ್ನಾಮಕೋ ದೇವಃ ಸ್ವಸ್ತಿ ಕ್ಷೇಮೋಽಸ್ಮೈತು ।

ಅಸ್ಮಾನ್ಪ್ರತಿ ಗಚ್ಛತು । ತತೋ ಮಾರ್ಗರಕ್ಷಕೇ ಪೂಷಣ್ಯಾಗತೇ ಸತ್ಯುರುರ್ವಿಸ್ತೀರ್ಣೋಽಧ್ವಾ ಮಾರ್ಗಃ ಸ್ವಸ್ತಯೇಽಸ್ಮಾಕಮವಿನಾಶಾಯ ಭವತು ॥

। ಪ್ರತಿಪದಾರ್ಥ ।

ರಯಿಃ—ಧನಪ್ರದನೂ । ಭಗಃ—ಸರ್ವರಿಗೂ ಪೂಜ್ಯನೂ । ಸರ್ವಧಾತಮಃ—ಎಲ್ಲರಿಗೂ ಧಾರಕನೂ ಆದ । ಪೂಷಾ—ಪೂಷದೇವನು । ಸ್ವಸ್ತಿ—ನಮಗೆ ಬೇಕಾದ ಕಲ್ಯಾಣವಸ್ತುಗಳೊಡನೆ । ಆ ಏತು—ದಯಮಾಡಲಿ । ಉರುಃ—ವಿಸ್ತೃತವಾದ । ಅಧ್ವಾ—ಮಾರ್ಗವು । ಸ್ವಸ್ತಯೇ—ನಮ್ಮ ಕಲ್ಯಾಣಕ್ಕಾಗಿ ತೆರೆಯಲ್ಪಡಲಿ

॥ ಭಾವಾರ್ಥ ॥

ಧನಪ್ರದನೂ, ಸರ್ವರಿಗೂ ಪೂಜ್ಯನೂ, ಎಲ್ಲರಿಗೂ ಧಾರಕನೂ ಆದ ಪೂಷದೇವನು ನಮಗೆ ಬೇಕಾದ ಕಲ್ಯಾಣವಸ್ತುಗಳೊಡನೆ ದಯಮಾಡಲಿ. ನಮ್ಮ ಕಲ್ಯಾಣಲಾಭಕ್ಕಾಗಿ ವಿಸ್ತೃತವಾದ ಮಾರ್ಗವು ತೆರೆಯಲ್ಪಡಲಿ.

English Translation.

May the adorable Pushan, the possessor of opulence, the most benevolent patron to all, come auspiciously ; may a wide path (be open) for our prosperity.

। ಸಂಹಿತಾಪಾಠಃ ।

ಅರಮತಿರನರ್ವಣೋ ವಿಶ್ವೋ ದೇವಸ್ಯ ಮನಸಾ ।
ಆದಿತ್ಯಾನಾಮನೇಹ ಇತ್ ॥ ೧೨ ॥

॥ ಪದಪಾಠಃ ॥

ಅರಮತಿಃ । ಅನರ್ವಣಃ । ವಿಶ್ವಃ । ದೇವಸ್ಯ । ಮನಸಾ ।
ಆದಿತ್ಯಾನಾಂ । ಅನೇಹಃ । ಇತ್ ॥ ೧೨ ॥

। ಸಾಯಣಭಾಷ್ಯಂ ।

ದೇವಾನಾಂ ಮಧ್ಯೇ ಪೂಷಣಮಾಹ । ಅನರ್ವಣಃ । ಅರ್ವಾ ಗಂತವ್ಯಃ । ಶತ್ರುಭಿರಗಂತವ್ಯಸ್ಯಾ-ಪ್ರತ್ಯೃತಸ್ಯ ದೇವಸ್ಯ ದ್ಯೋತಮಾನಸ್ಯ ಪೂಷ್ಣೋ ವಿಶ್ವಃ ಸರ್ವಃ ಸ್ತೋತೃಜನೋ ಮನಸಾ ಶ್ರದ್ಧಯಾ ಭಕ್ತ್ಯಾ ವಾರಮತಿರಲಂಮತಿಃ ಪರ್ಯಾಪ್ತಸ್ತುತಿರ್ಭವತಿ । ತಥಾ ಹ್ಯಾದಿತ್ಯಾನಾಮದಿತೇಃ ಪುತ್ರಾಣಾಂ ದೇವಾನಾಂ ದಾನಮನೇಹ ಇದಪಾಪಮೇವ ಖಲು । ತಸ್ಮಾದನ್ಯಾದಿಸ್ಪೃಹ್ಯತ್ವಯೋ ಸ್ತೋತೃಜನಃ ಪೂಷಣಂ ಸ್ತೌತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಆದಿತ್ಯಾನಾಂ**—ಅದಿತಿಪುತ್ರರಾದ ಆದಿತ್ಯರಿಂದ ಕೊಡಲ್ಪಡುವ ದಾನವು। **ಅನೇಹ ಇತ್**—ಖಂಡಿತ ಪಾಪರಹಿತವಾಗಿರುತ್ತದೆ (ಆದ್ದರಿಂದಲೇ)। **ಅನರ್ವಣಃ**—ಶತ್ರುಗಳಿಂದ ಅಪ್ರತಿಹತನೂ। **ದೇವಸ್ಯ**—ದೇವತಾತ್ಮನೂ ಆದ ಪೂಷನನ್ನು। **ವಿಶ್ವಃ**—ಸಕಲಜನವೂ। **ಮನಸಾ**—ಮನಃಪೂರ್ವಕವಾದ ಶ್ರದ್ಧೆಯಿಂದ। **ಅರಮತಿಃ**—ಪೂರ್ಣವಾಗಿ ಸ್ತುತಿಸುತ್ತಾರೆ.

॥ ಭಾವಾರ್ಥ ॥

ಅದಿತಿಪುತ್ರರಾದ ಆದಿತ್ಯರಿಂದ ಕೊಡಲ್ಪಡುವ ದಾನವು ಖಂಡಿತ ಪಾಪರಹಿತವಾಗಿರುತ್ತದೆ. ಆದುದರಿಂದ ಆ ದಾನಕ್ಕಾಗಿ ಶತ್ರುಗಳಿಂದ ಅಪ್ರತಿಹತನೂ, ದೇವತಾತ್ಮನೂ ಆದ ಪೂಷನನ್ನು ಸಕಲಜನವೂ ಮನಃಪೂರ್ವಕವಾದ ಶ್ರದ್ಧೆಯಿಂದ ಪೂರ್ಣವಾಗಿ ಸ್ತುತಿಸುತ್ತಾರೆ.

English Translation.

All men with (devout) minds are the unwearied (praiser) of the irresistible deity (Pushan), verily the (most) sinless of the Adityas.

॥ ಸಂಹಿತಾಪಾಠಃ ॥

ಯಥಾ ನೋ ಮಿತ್ರೋ ಅರ್ಯಮಾ ವರುಣಃ ಸಂತಿ ಗೋಪಾಃ ।
ಸುಗಾ ಋತಸ್ಯ ಪಂಥಾಃ ॥ ೧೩ ॥

॥ ಪದಪಾಠಃ ॥

ಯಥಾ । ನಃ । ಮಿತ್ರಃ । ಅರ್ಯಮಾ । ವರುಣಃ । ಸಂತಿ । ಗೋಪಾಃ ।
ಸುಽಗಾಃ । ಋತಸ್ಯ । ಪಂಥಾಃ ॥ ೧೩ ॥

॥ ಸಾಯಣಭಾಷ್ಯಂ ॥

**ಮಿತ್ರೋಽರ್ಯಮಾ ವರುಣಃ ಏತೇ ತ್ರಯೋ ದೇವಾ ನೋಽಸ್ಮಾಕಂ ಗೋಪಾ ಗೋಪಯಿತಾರೋ ಯಥಾ ಸಂತಿ ಭವಂತಿ ಯೈರ್ಮಾರ್ಗೈರ್ವಯಮೇತೈಃ ಪಾಲಯಿತವ್ಯಾ ಭವಾಮ ತೇ ಋತಸ್ಯ ಸತ್ಯಭೂತಸ್ಯ ಯಜ್ಞಸ್ಯ ಪಂಥಾಃ ಪಂಥಾನಃ ಸುಗಾ ಏಷಾಂ ಸುಗಮನಾ ಭವಂತು । ತೈರಾಗತ್ಯಾಸ್ಮಾನ್ಯಜ್ಞಮಾರ್ಗೇ ಸ್ಥಾಪಯಂತ್ವಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಮಿತ್ರಃ**—ಮಿತ್ರನೂ। **ವರುಣಃ**—ವರುಣನೂ। **ಅರ್ಯಮಾ**—ಅರ್ಯಮನೂ। **ನಃ**—ನಮಗೆ। **ಗೋಪಾಃ**—ರಕ್ಷಕರಾಗಿ। **ಯಥಾ**—ಯಾವ ಪ್ರಕಾರವಾಗಿ। **ಸಂತಿ**—ಆಗಿರುವರೋ (ಆ ರೀತಿಯಲ್ಲಿ)। **ಋತಸ್ಯ**—ಯಜ್ಞದ। **ಪಂಥಾಃ**—ಮಾರ್ಗವು। **ಸುಗಾಃ**—ಸುಲಭವಾಗಿ ನಮಗೆ ಲಭಿಸುವಂತಾಗಲಿ.

॥ ಭಾವಾರ್ಥ ॥

ಯಾವ ರೀತಿಯಾದ ಯಜ್ಞನಿರ್ವಹಣದಿಂದ ಮಿತ್ರನೂ, ವರುಣನೂ, ಅರ್ಯಮನೂ ನಮಗೆ ರಕ್ಷಕರಾಗಿರುವರೋ ಅಂತಹ ಯಜ್ಞನಿರ್ವಹಣದ ಮಾರ್ಗವು ನಮಗೆ ಸುಲಭವಾಗಿ ಸಿಕ್ಕುವಂತಾಗಲಿ.

English Translation.

Since Mitra, Aryaman and Varuna are our protectors, may the paths of the sacrifice be easily traversed (by them)

॥ ಸಂಹಿತಾಪಾಠಃ ॥

ಅಗ್ನಿಂ ವಃ ಪೂರ್ವ್ಯಂ ಗಿರಾ ದೇವಮೀಳೇ ವಸೂನಾಂ ।

ಸಪರ್ಯಂತಃ ಪುರುಪ್ರಿಯಂ ಮಿತ್ರಂ ನ ಕ್ಷೇತ್ರಸಾಧಸಂ ॥ ೧೪ ॥

॥ ಪದಪಾಠಃ ॥

ಅಗ್ನಿಂ । ವಃ । ಪೂರ್ವ್ಯಂ । ಗಿರಾ । ದೇವಂ । ಈಳೇ । ವಸೂನಾಂ ।

ಸಪರ್ಯಂತಃ । ಪುರುऽಪ್ರಿಯಂ । ಮಿತ್ರಂ । ನ । ಕ್ಷೇತ್ರಸಾಧಸಂ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ದೇವಾಃ ವೋ ಯುಷ್ಮಾಕಂ ಪೂರ್ವ್ಯಂ ಮುಖ್ಯಂ ಪುರತೋಗಂತಾರಂ ವಾ ದೇವಂ ಸ್ವಭಾಸಾ ದೀಪ್ಯಮಾನಮಗ್ನಿಂ ವಸೂನಾಂ ಪ್ರಾಪ್ತಯೇ ಗಿರಾ ಸ್ತುತಿಲಕ್ಷಣಯಾ ವಾಚೇಳೇ । ಅಹಂ ಸ್ತೌಮಿ । ಕಿಂಚ ಸಪರ್ಯಂತೋ ಯುಷ್ಮಾನ್ಪರಿಚರಂತೋ ಮನುಷ್ಯಾಃ ಪುರುಪ್ರಿಯಂ ಬಹುವಿಧಪ್ರಿಯಂ ಬಹೂನಾಮಭಿಮತದಾನೇನ ಪ್ರೀಣಯಿತಾರಂ ವಾ ಕ್ಷೇತ್ರಸಾದಸಂ । ಕ್ಷಿಯಂತಿ ನಿವಸಂತಿ ಕರ್ಮಕರಣಾರ್ಥಮತ್ರೇತಿ ಕ್ಷೇತ್ರೋ ಯಜ್ಞಃ । ತಸ್ಯ ಸಾಧಕಂ । ಸಾಧನೇ ದೃಷ್ಟಾಂತಃ । ಮಿತ್ರಂ ನ । ಯಥಾ ಮಿತ್ರಂ ಸುಹೃದನ್ಯಸ್ಯ ಕ್ಷೇತ್ರಂ ಕೇದಾರಾದಿಕಂ ಸಾಧಯತಿ ತದ್ವದ್ಯಜ್ಞಸಾಧಕಮಗ್ನಿಂ ವಸುಪ್ರಾಪ್ತಯೇ ಸ್ತುವಂತಿ ॥

॥ ಪ್ರತಿಪದಾರ್ಥ ॥

(ಎಲೈ ದೇವತೆಗಳೇ) ವಃ—ನಿಮ್ಮಲ್ಲಿ । **ಪೂರ್ವ್ಯಂ**—ಮುಖ್ಯನೂ । **ದೇವಂ—ಪ್ರಕಾಶ**ಮಾನನೂ ಆದ । **ಅಗ್ನಿಂ**—ಅಗ್ನಿಯನ್ನು । **ವಸೂನಾಂ**—ಧನದ ಪ್ರಾಪ್ತಿಗಾಗಿ । **ಗಿರಾ**—ಸ್ತುತಿರೂಪವಾದ ವಾಕ್ಕಿನಿಂದ । **ಈಳೇ**—ಸ್ತುತಿಸುತ್ತೇನೆ । **ಮಿತ್ರಂ ನ**—ಸ್ನೇಹಿತನಂತಿರುವವನೂ । **ಪುರುಪ್ರಿಯಂ**—ಅನೇಕರಿಗೆ ಬೇಕಾದವನೂ । **ಕ್ಷೇತ್ರಸಾಧಸಂ**—ಯಜ್ಞಸಾಧಕನೂ ಆದ ಇದೇ ಅಗ್ನಿಯನ್ನು । **ಸಪರ್ಯಂತಃ**—ಮಾನವರು ಪೂಜಿಸುತ್ತಾ (ತಮ್ಮ ಇಷ್ಟಾರ್ಥಗಳನ್ನು ಹೊಂದುತ್ತಾರೆ).

॥ ಭಾವಾರ್ಥ ॥

ಎಲೈ ದೇವತೆಗಳೇ, ನಿಮ್ಮಲ್ಲಿ ಅತಿಮುಖ್ಯನೂ, ಪ್ರಕಾಶಮಾನನೂ ಆದ ಅಗ್ನಿಯನ್ನು ಧನಪ್ರಾಪ್ತಿಗಾಗಿ ಸ್ತುತಿರೂಪವಾದ ವಾಕ್ಕಿನಿಂದ ಸ್ತುತಿಸುತ್ತೇನೆ. ಸ್ನೇಹಿತನಂತಿರುವವನೂ, ಅನೇಕರಿಗೆ ಬೇಕಾದವನೂ ಯಜ್ಞಸಾಧಕನೂ ಆದ ಅದೇ ಅಗ್ನಿಯನ್ನು ಮಾನವರು ಪೂಜಿಸುತ್ತಾ ತಮ್ಮ ಇಷ್ಟಾರ್ಥಗಳನ್ನು ಹೊಂದುತ್ತಾರೆ.

English Translation.

I worship the divine Agni, the preceder of you, (gods), with praise, (for the sake) of riches; the worshippers (cherish him), the bountiful perfector of the sacrifice, like a friend.

॥ ಸಂಹಿತಾಪಾಠಃ ॥

ಮಕ್ಷೂ ದೇವವತೋ ರಥಃ ಶೂರೋ ವಾ ಪೃತ್ಸು ಕಾಸು ಚಿತ್ ।
ದೇವಾನಾಂ ಯ ಇನ್ಮನೋ ಯಜಮಾನ ಇಯಕ್ಷತ್ಯಭೀದಯಜ್ವನೋ
ಭುವತ್ ॥ ೧೫ ॥

॥ ಪದಪಾಠಃ ॥

ಮಕ್ಷು । ದೇವಽವತಃ । ರಥಃ । ಶೂರಃ । ವಾ । ಪೃತ್ಽಸು । ಕಾಸು । ಚಿತ್ ।
ದೇವಾನಾಂ । ಯಃ । ಇತ್ । ಮನಃ । ಯಜಮಾನಃ । ಇಯಕ್ಷತಿ । ಅಭಿ । ಇತ್ । ಅಯಜ್ವನಃ ।
ಭುವತ್ ॥ ೧೫ ॥

॥ ಸಾಯಣಭಾಷ್ಯಂ ॥

ದೇವವತಃ । ದೇವಾ ಯಷ್ಟವ್ಯತಯಾ ಯಸ್ಯ ಸಂತಿ ಸ ದೇವವಾನ್ । ತಸ್ಯ ರಥೋ ದೇವೈರ್ದತ್ತೋ ಮಕ್ಷು ಶೀಘ್ರಂ ದುರ್ಗಮಂ ಮಾರ್ಗಮಪಿ ಪ್ರವಿಶತಿ । ಸರ್ವತ್ರಾಪ್ರತಿಹತಗತಿರಿತ್ಯರ್ಥಃ । ತತ್ರ ದೃಷ್ಟಾಂತಃ । ವೇತಿಶಬ್ದೋಽತ್ರೋಪಮಾನವಾಚೀ । ಯಥಾ ಶೂರೋ ಯೋದ್ಧಾ ಕಾಸು ಚಿತ್ಪೃತ್ಸು ಪೃತನಾಸು ತದ್ವತ್ । ಯೋ ದೇವಾನಾಂ । ಇದವಧಾರಣೇ । ಮನ ಏವೇಯಕ್ಷತಿ ಸ್ತುತಿಭಿಃ ಪೂಜಯಿತುಮಿಚ್ಛತಿ । ಯದ್ವಾ । ದೇವಾನಾಂ ಮನ ಇಯಕ್ಷತಿ ಹವಿರ್ಭಿರ್ಯಷ್ಟುಮಿಚ್ಛತಿ । ಸ ಯಜಮಾನೋಽಯಜ್ವನೋ ಯಾಗಮಕುರ್ವತೋ ಜನಾನಭಿ ಭುವತ್ । ಸ್ವಸಾಮರ್ಥ್ಯೇನಾಭಿಭವತ್ಯೇವ ॥ ಇಯಕ್ಷತಿ । ಯಕ್ಷ ಪೂಜಾಯಾಂ । ಯಜ ದೇವಪೂಜಾದಿಷು । ಉಭಯೋರಭ್ಯಾಸಸ್ಯ ಸಂಪ್ರಸಾರಣಂ ಛಾಂದಸಂ । ಪೂರ್ವಸ್ಯ ಸ್ಕೋಃ ಸಂಯೋಗಾದ್ಯೋರಿತಿ ಕಕಾರಲೋಪಃ ॥

॥ ಪ್ರತಿಪದಾರ್ಥ ॥

**ಕಾಸು ಚಿತ್ ಪೃತ್ಸು** – ಎಂತಹ ಯುದ್ಧಗಳಲ್ಲಾದರೂ । **ಶೂರಃ ನಾ**—ಶೂರನು ಮುನ್ನುಗ್ಗುವಂತೆ । **ದೇವವತಃ**—ದೇವಪೂಜಕನ । **ರಥಃ**—ರಥವು । **ಮಕ್ಷು**—ಶೀಘ್ರವಾಗಿ (ದುರ್ಗಮವಾದ ಪ್ರದೇಶಗಳಲ್ಲೂ ಸಂಚರಿಸುತ್ತದೆ) । **ಯಃ**—ಯಾವ ಪುರುಷನು । **ದೇವಾನಾಂ ಇತ್ ಮನಃ**—ದೇವತೆಗಳ ಮನಸ್ಸನ್ನೇ । **ಇಯಕ್ಷತಿ**—ಪೂಜಿಸಿ ಹರ್ಷಗೊಳಿಸಲಿಚ್ಛಿಸುವನೋ । **ಯಜಮಾನಃ**—ಅದೇ ಯಜಮಾನನು । **ಅಯಜ್ವನಃ**—ಕರ್ಮಭ್ರಷ್ಟರಾದ ಜನರನ್ನು । **ಅಭಿ ಭುವತ್ ಇತ್**—ಸೋಲಿಸುತ್ತಾನೆ ಇದು ಖಂಡಿತ.

॥ ಭಾವಾರ್ಥ ॥

ಎಂತಹ ಯುದ್ಧಗಳಲ್ಲಾದರೂ ಶೂರನು ಮುನ್ನುಗ್ಗುವಂತೆ ದೇವಪೂಜಕನ ರಥವು ಶೀಘ್ರವಾಗಿ ದುರ್ಗಮವಾದ ಪ್ರದೇಶಗಳಲ್ಲೂ ಸಂಚರಿಸುತ್ತದೆ. ಯಾರು ದೇವತೆಗಳನ್ನೇ ಪೂಜಿಸಿ ಅವರ ಮನಸ್ಸಿಗೆ ಹರ್ಷವನ್ನುಂಟು ಮಾಡುವನೋ ಅದೇ ಯಜಮಾನನು ಖಂಡಿತವಾಗಿಯೂ ಕರ್ಮಭ್ರಷ್ಟರಾದ ಜನರನ್ನು ಸೋಲಿಸುತ್ತಾನೆ.

English Translation.

The chariot of the devout worshipper quickly (prevails), as the hero (prevails) in all combats whatever: the clebrator of the sacrifice, who desires to propitiate the mind of the gods, overcomes those who are no sacrificers.

॥ ಸಂಹಿತಾಪಾಠಃ ॥

ನ ಯಜಮಾನ ರಿಷ್ಯಸಿ ನ ಸುನ್ವಾನ ನ ದೇವಯೋ ।
ದೇವಾನಾಂ ಯ ಇನ್ಮನೋ ಯಜಮಾನ ಇಯಕ್ಷತ್ಯಭೀದಯಜ್ವನೋ
ಭುವತ್ ॥ ೧೬ ॥

॥ ಪದಪಾಠಃ ॥

ನ । ಯಜಮಾನ । ರಿಷ್ಯಸಿ । ನ । ಸುನ್ವಾನ । ನ । ದೇವಯೋ ಇತಿ ದೇವSಯೋ ।
ದೇವಾನಾಂ । ಯಃ । ಇತ್ । ಮನಃ । ಯಜಮಾನಃ । ಇಯಕ್ಷತಿ । ಅಭಿ । ಇತ್ । ಅಯಜ್ವನಃ ।
ಭುವತ್ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಯಜಮಾನ ಯೋ ಭವಾನ್ ದೇವಾನಾಂ ಮನ ಇಯಕ್ಷತಿ ಸ ತ್ವಂ ನ ರಿಷ್ಯಸಿ । ವಿನಷ್ಟೋ ನ ಭವಸಿ । ಕಿಂತು ಪುತ್ರಪೌತ್ರಾದಿಭಿರ್ವರ್ಧಸೇ । ಹೇ ಸುನ್ವಾನ ಸೋಮಾಭಿಷವಂ ಕುರ್ವನ್ ಯಃ

ಸುನ್ವಂಸ್ತೇಷಾಂ ಮನ ಇಯಕ್ಷತಿ ಸ ತ್ವಮಪಿ ನ ರಿಷ್ಯಸಿ। ಹೇ ದೇವಯೋ ದೇವಾನ್ ಕಾಮಯಮಾನ ಯೋ ದೇವಾನಿಯಕ್ಷತಿ ತಾದೃಶಸ್ತ್ವಮಪಿ ನ ರಿಷ್ಯಸಿ। ಕಿಂತು ಧನಾದಿಭಿರ್ವರ್ಧಸೇ। ದೇವಾನಾಂ ಮನೋ ಯೋ ಯಜಮಾನೋ ಯಷ್ಟುಮಿಚ್ಛತಿ ಸ ಯಾಗಮಕುರ್ವತೋ ಜನಾನಭಿಭವತಿ ॥

॥ ಪ್ರತಿಪದಾರ್ಥ ॥

**ಯಜಮಾನ**— ಎಲೈ ಯಜ್ಞಕರ್ತನೇ। **ಯಃ**— ಯಾವ ನೀನು। **ದೇವಾನಾಂ**— ದೇವತೆಗಳ। **ಮನಃ**— ಮನಸ್ಸನ್ನು। **ಇಯಕ್ಷತಿ**— ಪೂಜಿಸಿ ತೃಪ್ತಿಗೊಳಿಸುವೆಯೋ ಅಂತಹ ನೀನು। **ನ ರಿಷ್ಯಸಿ**— ನಾಶವನ್ನು ಹೊಂದುವುದಿಲ್ಲ। **ಸುನ್ವಾನ**— ಸೋಮವನ್ನು ಹಿಂಡಿ ಅರ್ಪಿಸುವ ಎಲೈ ಯಜಮಾನನೇ। **ನ**— ನಿನಗೆ ನಾಶವಿಲ್ಲ। **ದೇವಯೋ**— ಎಲೈ ದೇವಪೂಜಕನೇ। **ನ**— ನೀನು ನಾಶವನ್ನು ಹೊಂದುವುದಿಲ್ಲ। **(ಸಃ) ಯಜಮಾನಃ**— ಅದೇ ಯಜಮಾನನು। **ಅಯಜ್ವನಃ**— ಕರ್ಮಭ್ರಷ್ಟರಾದ ಜನರನ್ನೂ। **ಅಭಿ ಭುವತ್ ಇತ್**— ಖಂಡಿತವಾಗಿಯೂ ಸೋಲಿಸುತ್ತಾನೆ.

॥ ಭಾವಾರ್ಥ ॥

ಎಲೈ ಯಜ್ಞಕರ್ತನೇ, ಯಾವ ನೀನು ದೇವತೆಗಳ ಮನಸ್ಸನ್ನು ಪೂಜಿಸಿ ತೃಪ್ತಿಗೊಳಿಸುವೆಯೋ ಅಂತಹ ನೀನು ನಾಶವನ್ನು ಹೊಂದುವುದಿಲ್ಲ. ಸೋಮವನ್ನು ಹಿಂಡಿ ಅರ್ಪಿಸುವ ಎಲೈ ಯಜಮಾನನೇ, ನಿನಗೆ ನಾಶವಿಲ್ಲ. ಎಲೈ ದೇವಪೂಜಕನೇ, ನೀನು ನಾಶವನ್ನು ಹೊಂದುವುದಿಲ್ಲ. ಯಾರು ದೇವತೆಗಳ ಮನಸ್ಸನ್ನೇ ಪೂಜಿಸಿ ಹರ್ಷಗೊಳಿಸುವನೋ ಅದೇ ಯಜಮಾನನು ಕರ್ಮಭ್ರಷ್ಟರಾದ ಜನರನ್ನು ಖಂಡಿತ ಸೋಲಿಸುತ್ತಾನೆ.

English Translation.

Devoted to the gods, pouring out to them libations, you, worshipper, shall not perish : the clebrator of the sacrifice, who desires to propitiate the mind of the gods, overcomes those who are no sacrificers.

॥ ಸಂಹಿತಾಪಾಠಃ ॥

ನಕಿಷ್ಟಂ ಕರ್ಮಣಾ ನಶನ್ನ ಪ್ರ ಯೋಷನ್ನ ಯೋಷತಿ।
ದೇವಾನಾಂ ಯ ಇನ್ಮನೋ ಯಜಮಾನ ಇಯಕ್ಷತ್ಯಭೀದಯಜ್ವನೋ ಭುವತ್ ॥ ೧೭ ॥

॥ ಪದಪಾಠಃ ॥

ನಕಿಃ। ತಂ। ಕರ್ಮಣಾ। ನಶತ್। ನ। ಪ್ರ। ಯೋಷತ್। ನ। ಯೋಷತಿ।
ದೇವಾನಾಂ। ಯಃ। ಇತ್। ಮನಃ। ಯಜಮಾನಃ। ಇಯಕ್ಷತಿ। ಅಭಿ। ಇತ್। ಅಯಜ್ವನಃ। ಭುವತ್ ॥ ೧೭ ॥

॥ ಸಾಯಣಭಾಷ್ಯಂ ॥

ಯೋ ಯಜಮಾನೋ ದೇವಾನಾಂ ಮನೋ ಯಷ್ಟುಮಿಚ್ಛತಿ ತಂ ನಕಿರ್ನ ಕಶ್ಚಿದಪಿ ನಶತ್ । ಸ್ವಕೀಯೇನ ಕರ್ಮಣಾ ನ ವ್ಯಾಪ್ನೋತಿ । ನಶತಿರ್ವ್ಯಾಪ್ತಿಕರ್ಮಾ । ಕಿಂಚ ಸ ಯಷ್ಟಾ ನ ಪ್ರ ಯೋಷತ್ । ಸ್ವಸ್ಮಾತ್ಸ್ಥಾನಾನ್ನ ವಿಭಕ್ತಃ ಪೃಥಕ್ಕೃತೋ ನ ಭವತಿ । ಕಿಂಚ ನ ಯೋಷತಿ । ಪುತ್ರಾದಿಭಿರ್ಧನಾದಿಭಿಶ್ಚ ನ ವಿಭಕ್ತೋ ಭವತಿ ॥ ಯು ಮಿಶ್ರಣಾಮಿಶ್ರಣಯೋರಿತ್ಯಸ್ಯೋಭಯತ್ರ ಲೇಟ್ಯಡಾಗಮಃ ॥ ಶಿಷ್ಟಂ ವ್ಯಾಖ್ಯಾತಂ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ದೇವಾನಾಂ**—ದೇವತೆಗಳ । **ಮನಃ ಇತ್**—ಮನಸ್ಸನ್ನೇ ಉದ್ದೇಶಿಸಿ । **ಇಯಕ್ಷತಿ**—ಸಂತೃಪ್ತಿಗೊಳಿಸುವನೋ । **ತಂ**—ಆ ಯಜಮಾನನನ್ನು । **ಕರ್ಮಣಾ**—ತನ್ನ ಕಾರ್ಯಗಳಿಂದ । **ನಕಿಃ**—ಯಾರೂ ಕೂಡ । **ನಶತ್**—ಆಕ್ರಮಿಸಲಾರರು । **ನ ಪ್ರ ಯೋಷತ್**—ಅಂತಹ ಯಜಮಾನನು ಸ್ಥಾನಭ್ರಷ್ಟನಾಗುವುದಿಲ್ಲ । **ನ ಯೋಷತಿ**—ಪುತ್ರಾದಿಗಳಿಂದ ವಿಯುಕ್ತನಾಗುವುದಿಲ್ಲ । (ಸಃ) **ಯಜಮಾನಃ**—ಅದೇ ಯಜ್ಞಕರ್ತನು । **ಅಯಜ್ವನಃ**—ಕರ್ಮಭ್ರಷ್ಟರಾದ ಜನರನ್ನು । **ಅಭಿ ಭುವತ್ ಇತ್**—ಖಂಡಿತ ಸೋಲಿಸುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನು ದೇವತೆಗಳ ಮನಸ್ಸನ್ನೇ ಪೂಜೆಯಿಂದ ಸಂತೃಪ್ತಿಗೊಳಿಸುವನೋ ಆ ಯಜಮಾನನನ್ನು ಯಾರೂ ಆಕ್ರಮಿಸಲಾರರು. ಅವನು ಸ್ಥಾನಭ್ರಷ್ಟತ್ವವನ್ನು ಹೊಂದುವುದಿಲ್ಲ ಪುತ್ರಾದಿಗಳಿಂದ ವಿಮುಕ್ತನಾಗುವುದಿಲ್ಲ. ಅದೇ ಯಜ್ಞಕರ್ತನು ಕರ್ಮಭ್ರಷ್ಟರಾದ ಜನರನ್ನು ಖಂಡಿತ ಸೋಲಿಸುತ್ತಾನೆ.

## English Translation.

No one obstructs him by his acts, he is never driven (from his station), he is never separated (from his family): the celebrator of the sacrifice, who desires to propitiate the mind of the gods, overcomes those who are no sacrificers.

॥ ಸಂಹಿತಾಪಾಠಃ ॥

ಅಸದತ್ರ ಸುವೀರ್ಯಮುತ ತ್ಯದಾಶ್ವಶ್ವ್ಯಂ ।
ದೇವಾನಾಂ ಯ ಇನ್ಮನೋ ಯಜಮಾನ ಇಯಕ್ಷತ್ಯಭೀದಯಜ್ವನೋ ಭುವತ್ ॥ ೧೮ ॥

॥ ಪದಪಾಠಃ ॥

ಆಸತ್ । ಅತ್ರ । ಸುಽವೀರ್ಯಂ । ಉತ । ತ್ಯತ್ । ಆಶುಽಅಶ್ವ್ಯಂ ।

ದೇವಾನಾಂ । ಯಃ । ಇತ್ । ಮನಃ । ಯಜಮಾನಃ । ಇಯಕ್ಷತಿ । ಅಭಿ । ಇತಿ । ಅಯಜ್ವನಃ ।
ಭುವತ್ ॥ ೧೮ ॥

॥ ಸಾಯಣಭಾಷ್ಯಂ ॥

ಯೋ ಯಜಮಾನೋ ದೇವಾನಾಂ ಮನೋ ಯಷ್ಟುಮಿಚ್ಛತಿ ಅತ್ರಾಸ್ಮಿನ್ಯಜಮಾನೇ ಸುವೀರ್ಯಂ ಶೋಭನವೀರ್ಯೋಪೇತಂ ಪುತ್ರಾದಿಕಮಸತ್ । ಭವತ್ಯೇವ । ಉತಾಪಿ ಚಾಶ್ವಶ್ವ್ಯಮಾಶುಗಮನಾಶ್ವ-ಸಂಘಯುಕ್ತಂ ತ್ಯತ್ತದ್ಧನಾದಿಕಂ ತಸ್ಮಿನ್ಯಜಮಾನೇ ಭವತಿ । ದೇವಾನಾಂ ಮನೋ ಯೋ ಜನೋ ಹವಿರ್ಭಿರ್ಯಷ್ಟುಮಿಚ್ಛತಿ ಯದ್ವಾ ಪೂಜಯಿತುಮಿಚ್ಛತಿ ಸ ಜನೋಽಯಜ್ವನಃ ಸರ್ವಾನಭಿಭವತ್ಯೇವ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ದೇವಾನಾಂ**—ದೇವತೆಗಳ । **ಮನ ಇತ್**—ಮನಸ್ಸನ್ನೇ । **ಇಯಕ್ಷತಿ**—ಪೂಜಿಸಿ ಸಂತೃಪ್ತಿಗೊಳಿಸುವನೋ । **ಅತ್ರ**—ಅದೇ ಯಜಮಾನನಲ್ಲಿ । **ಸುವೀರ್ಯಃ**—ಉತ್ತಮವಾದ ಶಕ್ತಿಯಿಂದೊಡಗೂಡಿದ ಪುತ್ರಾದಿಗಳು । **ಆಸತ್**—ಇದ್ದೇ ಇರುತ್ತಾರೆ । **ಉತ**—ಮತ್ತು । **ತ್ಯತ್**—ಪ್ರಸಿದ್ಧವಾದ । **ಆಶ್ವಶ್ವ್ಯಂ**—ಶೀಘ್ರಗಾಮಿಯಾದ ಅಶ್ವಗಳಿಂದ ಯುಕ್ತವಾದ ಧನವೂ ಇರುತ್ತದೆ । **(ಸಃ) ಯಜಮಾನಃ**—ಅದೇ ಯಜಮಾನನು । **ಅಯಜ್ವನಃ**—ಕರ್ಮರಹಿತರನ್ನು । **ಅಭಿ ಭುವತ್ ಇತ್**—ಖಂಡಿತ ಸೋಲಿಸುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನು ದೇವತೆಗಳ ಮನಸ್ಸನ್ನೇ ಪೂಜಿಸಿ ಸಂತೃಪ್ತಿಗೊಳಿಸುತ್ತಾನೋ ಅದೇ ಯಜಮಾನನಲ್ಲಿ ಉತ್ತಮವಾದ ಶಕ್ತಿಯಿಂದೊಡಗೂಡಿದ ಪುತ್ರಾದಿಗಳು ಇದ್ದೇ ಇರುತ್ತಾರೆ. ಮತ್ತು ಶೀಘ್ರಗಾಮಿಯಾದ ಅಶ್ವಗಳಿಂದ ಕೂಡಿದ ಪ್ರಸಿದ್ಧವಾದ ಧನವೂ ಇರುತ್ತದೆ. ಅದೇ ಯಜಮಾನನು ಕರ್ಮಭ್ರಷ್ಟರಾದ ಜನರನ್ನು ಖಂಡಿತ ಸೋಲಿಸುತ್ತಾನೆ.

## English Translation.

To him in this life is a valiant progeny, to him are swift herds of horses; the celebrator of the sacrifice, who desires to propitiate the mind of the gods, overcomes those who are no sacrificers.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಷಷ್ಠಾಷ್ಟಕೇ ದ್ವಿತೀಯೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯಲ್ಲಿ ಆರನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥
॥ ಶುಭಂ ಭೂಯಾತ್ ॥

॥ ಮಂಗಳಂ ॥



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

### ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

**(ಕರ್ನಾಟಕಭಾಷಾರ್ಥಾನುವಾದವಿವರಣೆ ಸಹಿತವಾಗಿ)**



## ॥ ಷಷ್ಠಾಷ್ಟಕೇ ತೃತೀಯೋಽಧ್ಯಾಯಃ ॥

**ಆರನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು**



## ಎಂಟನೆಯ ಮಂಡಲದಲ್ಲಿ ಮೂವತ್ತೆರಡನೆಯ ಸೂಕ್ತವು.



॥ ಸಾಯಣಭಾಷ್ಯಂ ॥

ಅಥ ಷಷ್ಠಸ್ಯ ತೃತೀಯೋಽಧ್ಯಾಯ ಆರಭ್ಯತೇ ॥ ಪ್ರ ಕೃತಾನೀತಿ ತ್ರಿಂಶದೃಚಂ ದ್ವಿತೀಯಂ ಸೂಕ್ತಂ । ತತ್ರೇಯಮನುಕ್ರಮಣಿಕಾ । ಪ್ರ ಕೃತಾನಿ ತ್ರಿಂಶನ್ಮೇಧಾತಿಥಿರಿತಿ । ಕಾಣ್ವೋ ಮೇಧಾತಿಥಿರ್ಋಷಿಃ । ಪರಂ ಗಾಯತ್ರಂ ಪ್ರಾಗ್ವತ್ಸಪ್ರೇರಿತಿ ಪರಿಭಾಷಯಾ ಗಾಯತ್ರೀ ಛಂದಃ । ಅನಾದೇಶಪರಿಭಾಷಯೇಂದ್ರೋ ದೇವತಾ ॥ ಮಹಾವ್ರತೇ ನಿಷ್ಕೇವಲ್ಯೇ ಗಾಯತ್ರತೃಚಾಶೀತಾವೇತತ್ಸೂಕ್ತಂ । ತಥೈವ ಪಂಚಮಾರಣ್ಯಕೇ ಶೌನಕೇನ ಸೂತ್ರಿತಂ । ಪ್ರ ಕೃತಾನ್ಯೃಜೀಷಿಣ ಆ ಘಾ ಯೇ ಅಗ್ನಿಮಿಂಧತೇ । ಐ. ಆ. ೫-೨-೩ । ಇತಿ ॥ ಅತಿರಾತ್ರೇ ಪ್ರಥಮೇ ಪರ್ಯಾಯೇ ಮೈತ್ರಾವರುಣಶಸ್ತ್ರೇ ಪ್ರ ಕೃತಾನೀತಿ ತೃಚೋಽನುರೂಪಃ । ಸೂತ್ರಿತಂ ಚ । ಪ್ರ ವ ಇಂದ್ರಾಯ ಮಾದನಂ ಪ್ರ ಕೃತಾನ್ಯೃಜೀಷಿಣಃ । ಆ. ೬-೪ ।

**ಇತಿ ॥ ತಸ್ಮಿನ್ನೇವ ಶಸ್ತ್ರೇ ಪ್ರತಿ ಶ್ರುತಾಯೇತ್ಯಾದ್ಯಾಃ ಪಂಚದಶರ್ಚಃ । ಸೂತ್ರ್ಯತೇ ಹಿ । ಪ್ರತಿ ಶ್ರುತಾಯ ವೋ ಧೃಷದಿತಿ ಪಂಚದಶ । ಆ. ೬-೪ । ಇತಿ ॥ ದಶಮೇಽಹನಿ ಪ್ರಾತಃಸವನೇಽಚ್ಛಾವಾಕಶಸ್ತ್ರೇ ಪತ್ನೀಯಜಮಾನಸ್ತೋತ್ರೇ ಪ್ರತಿ ಶ್ರುತಾಯೇತಿ ತೃಚಃ । ಸೂತ್ರಿತಂ ಚ । ಪ್ರತಿ ಶ್ರುತಾಯ ವೋ ಧೃಷದಿತಿ ತೃಚೌ । ಆ. ೮-೧೨ । ಇತಿ ॥ ಅಹೀನಾಂತರ್ಗತಸ್ಯಾತಿರಾತ್ರಸ್ಯ ಪ್ರಥಮೇ ಪರ್ಯಾಯೇ ಹೋತುಃ ಪನ್ಯ ಇದುಪ ಗಾಯತೇತ್ಯನುರೂಪಃ ॥**

ಅನುವಾದವು— ಈಗ ಆರನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಪ್ರಾರಂಭಿಸಲ್ಪಡುವುದು. **ಪ್ರ ಕೃತಾನಿ** ಎಂಬ ಈ ಸೂಕ್ತವು ಎಂಟನೆಯ ಮಂಡಲದ ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಮೂವತ್ತು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ— **ಪ್ರ ಕೃತಾನಿ ತ್ರಿಂಶನ್ಮೇಧಾತಿಥಿಃ** ಎಂದು ಹೇಳಿರುವುದು. ಈ ಸೂಕ್ತಕ್ಕೆ **ಮೇಧಾತಿಥಿಃ ಕಾಣ್ವಃ** ಎಂಬುವನು ಋಷಿಯು; ಇಂದ್ರನು ದೇವತೆಯು, ಗಾಯತ್ರೀಛಂದಸ್ಸು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕಪಂಚಮಾರಣ್ಯಕದಲ್ಲಿ **ಪ್ರ ಕೃತಾನ್ಯೃಜೀಷಿಣ ಆ ಘಾ ಯೇ ಅಗ್ನಿಮಿಂಧತೇ** ಎಂಬ ವಾಕ್ಯದಿಂದ (ಐ. ಆ. ೫-೭-೩) ನಿರ್ದಿಷ್ಟವಾಗಿರುವುದು. ಅತಿರಾತ್ರವೆಂಬ ಯಾಗದ ಪ್ರಥಮ ಪರ್ಯಾಯದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಪ್ರ ಕೃತಾನಿ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ವ ಇಂದ್ರಾಯ ಮಾದನಂ ಪ್ರ ಕೃತಾನ್ಯೃಜೀಷಿಣಃ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಮತ್ತು ಮೇಲೆ ಹೇಳಿದ ಶಸ್ತ್ರಮಂತ್ರಗಳಲ್ಲಿ **ಪ್ರತಿ ಶ್ರುತಾಯ** ಎಂದು ಮೊದಲಾಗುವ ಈ ಸೂಕ್ತದ ಹದಿನೈದು ಋಕ್ಕುಗಳ (೪-೧೮) ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಪ್ರತಿ ಶ್ರುತಾಯ ವೋ ಧೃಷದಿತಿ ಪಂಚದಶ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಮತ್ತು ಯಾಗದ ಹತ್ತನೆಯ ದಿವಸ ಪ್ರಾತಃಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪತ್ನೀಯಜಮಾನರ ಪರವಾಗಿ ಪಠಿಸುವ ಋಕ್ಕಿಗಾಗಿ **ಪ್ರತಿ ಶ್ರುತಾಯ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೪-೬ ಋಕ್ಕುಗಳನ್ನು) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರತಿ ಶ್ರುತಾಯ ವೋ ಧೃಷದಿತಿ ತೃಚೌ** ಎಂಬ ಸೂತ್ರದಿಂದ (ಆ. ೮-೧೨) ವಿವೃತವಾಗಿರುವುದು. ಮತ್ತು ಅತಿರಾತ್ರವೆಂಬ ಯಾಗದಲ್ಲಿ ಪಠಿಸುವ ಅಹೀನಸೂಕ್ತದ ಮಧ್ಯದಲ್ಲಿ ಪ್ರಥಮಪರ್ಯಾಯದಲ್ಲಿ ಹೋತೃವೆಂಬ ಋತ್ವಿಜನು **ಪನ್ಯ ಇದುಪ ಗಾಯತ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (೧೬-೧೮ ಋಕ್ಕುಗಳನ್ನು) ಅನುರೂಪತೃಚವನ್ನಾಗಿ ಪಠಿಸಬೇಕೆಂದು ನಿರ್ದಿಷ್ಟವಾಗಿರುವುದು.

## ಸೂಕ್ತ—೩೨

**ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೨ ॥**
**ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೧, ೨, ೩, ೪, ೫, ೬ ॥**

**॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ॥**
**॥ ಋಷಿಃ—ಮೇಧಾತಿಥಿಃ ಕಾಣ್ವಃ ॥**
**॥ ದೇವತಾ—ಇಂದ್ರಃ ॥**
**। ಛಂದಃ—ಗಾಯತ್ರೀ ।**

॥ ಸಂಹಿತಾಪಾಠಃ ॥

ಪ್ರ ಕೃತಾನ್ಯೃಜೀಷಿಣಃ ಕಣ್ವಾ ಇಂದ್ರಸ್ಯ ಗಾಥಯಾ ।
ಮದೇ ಸೋಮಸ್ಯ ವೋಚತ ॥ ೧ ॥

॥ ಪದಪಾಠಃ ॥

ಪ್ರ । ಕೃತಾನಿ । ಋಜೀಷಿಣಃ । ಕಣ್ವಾಃ । ಇಂದ್ರಸ್ಯ । ಗಾಥಯಾ ।
ಮದೇ । ಸೋಮಸ್ಯ । ವೋಚತ ॥ ೧ ॥

॥ ಸಾಯಣಭಾಷ್ಯಂ ॥

ಹೇ ಕಣ್ವಾಃ ಋಜೀಷಿಣ ಋಜೀಷವತಃ ಸೋಮಸ್ಯ ಕೃತಾನಿ ಕರ್ಮಾಣೀಂದ್ರಸ್ಯ ಗಾಥಯೇಂದ್ರಸ್ಯ ವಾಚಾ ಮದೇಽಸ್ಯ ಮದೇ ಸಂಜಾತೇ ಸತಿ ಪ್ರ ವೋಚತ । ಪ್ರಬ್ರೂತ ॥

॥ ಪ್ರತಿಪದಾರ್ಥ ॥

**ಕಣ್ವಾಃ**—ಎಲೈ ಕಣ್ವಗೋತ್ರದ ಋಷಿಗಳೇ । **ಇಂದ್ರಸ್ಯ**—ಇಂದ್ರನಿಗೆ । **ಮದೇ**—ಸೋಮಪಾನದಿಂದ ಹರ್ಷವುಂಟಾದಾಗ । **ಋಜೀಷಿಣಃ**—ಒಂದು ಬಾರಿ ಜಜ್ಜಿ ಹಿಂಡಿದ ಸೋಮಲತೆಗಳಿಂದ ಮತ್ತೆ ಹಿಂಡಿದ । **ಸೋಮಸ್ಯ**—ಸೋಮರಸದ । **ಕೃತಾನಿ**—ಹರ್ಷಕಾರಿತ್ವಾದಿಗುಣಗಳನ್ನು । **ಗಾಥಯಾ** । ಸ್ತುತಿರೂಪವಾದ ವಾಕ್ಯದಿಂದ । **ಪ್ರವೋಚತ**—ಪ್ರಶಂಸೆಮಾಡಿ.

॥ ಭಾವಾರ್ಥ ॥

ಎಲೈ ಕಣ್ವಗೋತ್ರೋದ್ಭವರಾದ ಋಷಿಗಳೇ, ಇಂದ್ರನಿಗೆ ಸೋಮಪಾನದಿಂದ ಹರ್ಷವುಂಟಾದಾಗ ಒಂದೆ ಜಜ್ಜಿ ಹಿಂಡಿದ ಸೋಮಲತೆಗಳಿಂದಲೇ ಮತ್ತೆ ಇನ್ನೊಂದಾವರ್ತಿ ಜಜ್ಜಿ ತೆಗೆದ ಸೋಮರಸದ ಗುಣಾತಿಶಯಗಳನ್ನು ಚೆನ್ನಾಗಿ ಪ್ರಶಂಸೆಮಾಡಿರಿ.

## English Translation.

Celebrate with songs the great deeds of Indra, the drinker of the stale Soma, when in his exhilaration.

॥ ವಿಶೇಷವಿಷಯಗಳು ॥

**ಋಜೀಷಿಣಃ ಸೋಮಸ್ಯ**—ಋಜೀಷವೆಂದರೆ ಸೋಮರಸವನ್ನು ಹಿಂಡಿ ತೆಗೆದ ಮೇಲೆ ಉಳಿದ ಸಿಪ್ಪೆಯಂತಿರುವ ಜಜ್ಜಿದ ಲತೆಗಳು. ತೃತೀಯಸವನಕಾಲದಲ್ಲಿ ಒಂದಾವರ್ತಿ ಜಜ್ಜಿದ ಲತೆಗಳಿಂದಲೇ ಪುನಃ ಜಜ್ಜಿ ಸಿಕ್ಕುವ ರಸದ ಜತೆಗೆ ಹಾಲು, ಮೊಸರು, ಯವಧಾನ್ಯದ ಹಿಟ್ಟು ಇವುಗಳಲ್ಲಿ ಯಾವುದಾದರೂ ಒಂದನ್ನು ಬೆರಸಿ

ಇಂದ್ರನಿಗೆ ಅರ್ಪಿಸುವರು. ಆದುದರಿಂದ ತೃತೀಯಸವನಕಾಲದಲ್ಲಿ ಈ ವಿಧವಾದ ಸೋಮರಸದಿಂದ ಇಂದ್ರನು ಹರ್ಷಿತನಾದಾಗ ಆ ಸೋಮರಸದ ಹರ್ಷ (ಮದ) ವನ್ನುಂಟುಮಾಡುವ ಗುಣಾತಿಶಯಗಳನ್ನು ಚೆನ್ನಾಗಿ ಪ್ರಶಂಸೆಮಾಡಿ ಎಂದು ಋಷಿಯು ತನ್ನ ವಂಶದವರಾದ ಕಣ್ವಗೋತ್ರದ ಋಷಿಗಳನ್ನು ಸಂಬೋಧಿಸಿ ಹೇಳಿರುವನು.

। ಸಂಹಿತಾಪಾಠಃ ॥

ಯಃ ಸೃಬಿಂದಮನರ್ಶನಿಂ ಪಿಪ್ರುಂ ದಾಸಮಹೀಶುವಂ ।
ವಧೀದುಗ್ರೋ ರಿಣನ್ನಪಃ ॥ ೨ ॥

॥ ಪದಪಾಠಃ ॥

ಯಃ । ಸೃಬಿಂದಂ । ಅನರ್ಶನಿಂ । ಪಿಪ್ರುಂ । ದಾಸಂ । ಅಹೀಶುವಂ ।
ವಧೀತ । ಉಗ್ರಃ । ರಿಣನ್ । ಅಪಃ ॥ ೨ ॥

॥ ಸಾಯಣಭಾಷ್ಯಂ ॥

ಯ ಇಂದ್ರ ಉಗ್ರ ಉದ್ಗೂರ್ಣಸ್ತೇಜಸ್ವೀ ವಾ ಸೋಽಪ ಉದಕಾನಿ ರಿಣನ್ ಪ್ರೇರಯನ್ ಸೃಬಿಂದನಾಮಕಂ ಶತ್ರುಮನರ್ಶನಿಮನರ್ಶನಿನಾಮಕಂ ಪಿಪ್ರುಂ ಪಿಪ್ರುನಾಮಕಂ ಚ ದಾಸಂ ಅಹೀಶುವಂ ಚ ಶತ್ರುಂ ವಧೀತ್ । ಅವಧೀತ್ । ಜಘಾನ ॥

॥ ಪ್ರತಿಪದಾರ್ಥ ।

ಯಃ—ಯಾವ ಇಂದ್ರನು । ಉಗ್ರಃ—ಉಗ್ರನೂ ಪರಾಕ್ರಮಿಯೂ ಆಗಿರುವನೋ ಆ ಇಂದ್ರನೇ ಅಪಃ—ಉದಕಗಳನ್ನು । ರಿಣನ್—ಪ್ರೇರಿಸುತ್ತಾ । ಸೃಬಿಂದಂ—ಸೃಬಿಂದನೆಂಬ ಶತ್ರುವನ್ನೂ । ಅನರ್ಶನಿಂ—ಅನರ್ಶನಿ ಎಂಬುವನನ್ನೂ । ಪಿಪ್ರುಂ—ಪಿಪ್ರು ಎಂಬುವನನ್ನೂ । ದಾಸಂ—ದಾಸನನ್ನೂ । ಅಹೀಶುವಂ—ಅಹೀಶುವನೆಂಬುವನನ್ನೂ । ವಧೀತ್—ಕೊಂದನು.

। ಭಾವಾರ್ಥ ।

ಕ್ರೂರನೂ, ಪರಾಕ್ರಮಿಯೂ ಆದ ಇಂದ್ರನು ಅತಿಯಾಗಿ ವೃಷ್ಟ್ಯುದಕಗಳನ್ನು ಸುರಿಸಿ ಸೃಬಿಂದ, ಅನರ್ಶನಿ, ಪಿಪ್ರು, ದಾಸ, ಅಹೀಶುವ ಎಂಬ ಶತ್ರುಗಳನ್ನು ಕೊಂದನು.

## English Translation.

The fierce (deity) who, liberating the waters, has slain **Sribinda**, **Anarshani**, Pipru and the slave Ahishuva.

॥ ಸಂಹಿತಾಪಾಠಃ ॥

ನ್ಯರ್ಬುದಸ್ಯ ವಿಷ್ಟಪಂ ವರ್ಷ್ಮಾಣಂ ಬೃಹತಸ್ತಿರ ।
ಕೃಷೇ ತದಿಂದ್ರ ಪೌಂಸ್ಯಂ ॥ ೩ ॥

॥ ಪದಪಾಠಃ ॥

ನಿ । ಅರ್ಬುದಸ್ಯ । ವಿಷ್ಟಪಂ । ವರ್ಷ್ಮಾಣಂ । ಬೃಹತಃ । ತಿರ ।
ಕೃಷೇ । ತತ್ । ಇಂದ್ರ । ಪೌಂಸ್ಯಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಬೃಹತೋ ಮಹತೋಽರ್ಬುದಸ್ಯ ಮೇಘಸ್ಯ ವರ್ಷ್ಮಾಣಮುದಕಸ್ಯ ವಾರಕಂ ವಿಷ್ಟಪಂ ಸ್ಥಾನಂ ನಿ ತಿರ । ವಿಧ್ಯ । ತತ್ಪ್ರಸಿದ್ಧಂ ಪೌಂಸ್ಯಂ ವ್ರತಂ ಚ ಕೃಷೇ । ಕುರು ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಬೃಹತಃ**—ಬಹಳ ದೊಡ್ಡದಾದ । **ಅರ್ಬುದಸ್ಯ**—ಮೇಘದ । **ವರ್ಷ್ಮಾಣಂ**—ಉದಕವನ್ನು ತಡೆದಿರುವ । **ವಿಷ್ಟಪಂ**—ಸ್ಥಾನವನ್ನು । **ನಿ ತಿರ**—ಒಡೆದುಹಾಕು । **ತತ್**—ಪ್ರಸಿದ್ಧವಾದ । **ಪೌಂಸ್ಯಂ**—ಆ ಸಾಹಸಕಾರ್ಯವನ್ನು । **ಕೃಷೇ**—ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಬೃಹದಾಕಾರವಾಗಿ ಹರಡಿ ಉದಕವನ್ನು ಸುರಿಸದೆ ತಡೆದಿರುವ ಮೇಘವನ್ನು ಸೀಳಿ ವೃಷ್ಟಿಯನ್ನು ಸುರಿಸು. ಈ ಸಾಹಸಕೃತ್ಯವನ್ನು ನೀನೇ ಮಾಡು.

## English Translation.

Pierce the rain-holding domain of the vast Arbuda : achieve, Indra, this manly exploit.

॥ ಸಂಹಿತಾಪಾಠಃ ॥

ಪ್ರತಿ ಶ್ರುತಾಯ ವೋ ಧೃಷತ್ತೂರ್ಣಾಶಂ ನ ಗಿರೇರಧಿ ।
ಹುವೇ ಸುಶಿಪ್ರಮೂತಯೇ ॥ ೪ ॥

॥ ಪದಪಾಠಃ ॥

ಪ್ರತಿ । ಶ್ರುತಾಯ । ವಃ । ಧೃಷತ್ । ತೂರ್ಣಾಶಂ । ನ । ಗಿರೇಃ । ಅಧಿ ।

ಹುವೇ । ಸುಽಶಿಪ್ರಂ । ಊತಯೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರಃ ವೋ ಯುಷ್ಮಾಕಂ ಶ್ರುತಾಯ ಸ್ತುತೀನಾಂ ಶ್ರವಣಾಯ ರಕ್ಷಣಾಯ ಚ ಧೃಷಚ್ಛತ್ರೂನ್ ಧೃಷಂತಂ ಸುಶಿಪ್ರಂ ಸುಹನುಮಿಂದ್ರಂ ಪ್ರತಿ ಹುವೇ । ಹ್ವಯಾಮಿ । ತೂರ್ಣಾಶಂ ನ ಯಥಾ ಘರ್ಮೇಽಭಿತಪ್ತಾಃ ಪುಮಾಂಸ್ತೂರ್ಣಾಶಮುದಕಂ । ತಥಾ ಚ ಯಾಸ್ಕಃ । ತೂರ್ಣಾಶಮುದಕಂ ಭವತಿ ತೂರ್ಣಮಶ್ನುತೇ । ನಿ. ೫-೧೬ । ಇತಿ । ಗಿರೇರಧಿ ಮೇಘಂ ಪ್ರತಿ ಹ್ವಯತಿ । ಪರ್ವತೋ ಗಿರಿರಿತಿ ಮೇಘನಾಮಸು ಪಾಠಾತ್ । ತದ್ವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಜನರೇ) ಗಿರೇಃ ಅಧಿ—ಬೇಸಿಗೆಯಲ್ಲಿ ಬಿಸಿಲಿನಿಂದ ಸಂತಪ್ತರಾದ ಜನರು ಮೇಘದಿಂದ । ತೂರ್ಣಾಶಂ ನ—ಉದಕವನ್ನು ಬಯಸುವಂತೆ । ಧೃಷತ್—ಶತ್ರುಧರ್ಷಕನೂ । ಸುಶಿಪ್ರಂ—ಆಕರ್ಷಕವಾದ ಕೆನ್ನೆಯುಳ್ಳವನೂ ಆದ ಇಂದ್ರನನ್ನು । ವಃ—ನಿಮ್ಮ । ಶ್ರುತಾಯ—ಸ್ತೋತ್ರಗಳನ್ನು ಕೇಳುವುದಕ್ಕಾಗಿಯೂ । ಅವಸೇ—ರಕ್ಷಣಾರ್ಥವಾಗಿಯೂ । ಪ್ರತಿ ಹುವೇ—ಪ್ರಾರ್ಥಿಸಿ ಕರೆಯುತ್ತೇನೆ.

॥ ಭಾವಾರ್ಥ ॥

ಎಲೈ ಸ್ತೋತೃಜನರೇ, ಬೇಸಿಗೆಯ ಬಿಸಿಲಿನಿಂದ ಬಳಲಿದ ಜನರು ಮೇಘದಿಂದ ಉದಕವನ್ನು ಅಪೇಕ್ಷಿಸುವಂತೆ, ಶತ್ರುಧರ್ಷಕನೂ, ಆಕರ್ಷಕವಾದ ಕೆನ್ನೆಯುಳ್ಳವನೂ ಆದ ಇಂದ್ರನನ್ನು ರಕ್ಷಣಾರ್ಥವಾಗಿಯೂ ನಿಮ್ಮ ಸ್ತುತಿಗಳನ್ನು ಕೇಳುವುದಕ್ಕಾಗಿಯೂ ಪ್ರಾರ್ಥಿಸಿ ಕರೆಯುತ್ತೇನೆ.

## English Translation.

I invoke the victorious handsome-jawed Indra for your protection, and to hear (your praises), as (a traveller invokes) the water from the cloud.

॥ ವಿಶೇಷವಿಷಯಗಳು ॥

ತೂರ್ಣಾಶಂ—ತೂರ್ಣಾಶವೆಂದರೆ ಉದಕವು. ಈ ಶಬ್ದಕ್ಕೆ ಯಾಸ್ಕರು ಅರ್ಥವಿವರಣೆಮಾಡಿದ್ದಾರೆ—

ತೂರ್ಣಾಶಂ । ತೂರ್ಣಾಶಮುದಕಂ ಭವತಿ ತೂರ್ಣಮಶ್ನುತೇ । ತೂರ್ಣಾಶಂ ನ ಗಿರೇರಧಿ ಇತ್ಯಪಿ ನಿಗಮೋ ಭವತಿ । (ನಿ. ೫-೧೬)

ತೂರ್ಣಾಶವೆಂದರೆ ಉದಕವು ಈ ಉದಕವು ವೇಗವಾಗಿ ಹರಿಯುತ್ತದು ಅಥವಾ ಬೇಗನೆ ಸುತ್ತಲೂ ವ್ಯಾಪಿಸಿ ಹರಡಿಕೊಳ್ಳುವುದು. ಆದ್ದರಿಂದ ತೂರ್ಣಾಶವೆಂದರೆ ಉದಕವು. ಈ ವಿಷಯದಲ್ಲಿ ತೂರ್ಣಾಶಂ ನ ಗಿರೇರಧಿ ಎಂಬ ಶ್ರುತಿವಾಕ್ಯದ ಉದಾಹರಣೆಯೂ ಇರುವುದು.

**ತೂರ್ಣಾಶಂ—ಉದಕಂ** । ತೂರ್ಣಾಶವೆಂದರೆ ಉದಕವು. ಈ ಶಬ್ದಕ್ಕೆ ಯಾಸ್ಕರು—**ತೂರ್ಣಾಶಮುದಕಂ ಭವತಿ ತೂರ್ಣಮಶ್ನುತೇ** (ನಿ. ೫-೧೬) ಎಂದು ನಿರ್ವಚನವನ್ನು ಹೇಳಿದ್ದಾರೆ ತೂರ್ಣವೆಂದರೆ ಬೇಗನೆ ಬೇಗನೆ ತಿನ್ನುವುದರಿಂದ ಎಂದರೆ ಘಟ್ಟಿಯಾದ ಆಹಾರದಂತೆ ಅಗಿದು ತಿನ್ನಬೇಕಾದ ಅವಶ್ಯಕತೆ ಇಲ್ಲದೆ ಸುಲಭವಾಗಿ ಪಾನಮಾಡಬಹುದಾದ್ದರಿಂದ ಉದಕಕ್ಕೆ ತೂರ್ಣಾಶವೆಂದು ಹೆಸರು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

**ಸ ಗೋರಶ್ವಸ್ಯ ವಿ ವ್ರಜಂ ಮಂದಾನಃ ಸೋಮ್ಯೇಭ್ಯಃ ।**
**ಪುರಂ ನ ಶೂರ ದರ್ಷಸಿ ॥ ೫ ॥**

॥ ಪದಪಾಠಃ ॥

**ಸಃ । ಗೋಃ । ಅಶ್ವಸ್ಯ । ವಿ । ವ್ರಜಂ । ಮಂದಾನಃ । ಸೋಮ್ಯೇಭ್ಯಃ ।**
**ಪುರಂ । ನ । ಶೂರ । ದರ್ಷಸಿ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಶೂರೇಂದ್ರ ಸ ಪ್ರಸಿದ್ಧಸ್ತ್ವಂ ಮಂದಾನೋ ಮೋದಮಾನೋ ಗೋರಶ್ವಸ್ಯ ಚ ವ್ರಜಂ ನಿವಾಸಸ್ಥಾನಂ ಸೋಮ್ಯೇಭ್ಯಃ ಸೋಮಾರ್ಹೇಭ್ಯಃ ಪುರಂ ನ ಶತ್ರೂಣಾಂ ನಗರಮಿವ ವಿ ದರ್ಷಸಿ । ವಿವೃತದ್ವಾರಂ ಕರೋಷಿ ॥**

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ಸಃ**—ಪ್ರಸಿದ್ಧನಾದ ನೀನು । **ಮಂದಾನಃ**—ನಮ್ಮ ಸ್ತೋತ್ರಗಳಿಂದ ಹರ್ಷಿತನಾಗಿ । **ಸೋಮ್ಯೇಭ್ಯಃ**—ನಿನಗಾಗಿ ಸೋಮರಸವನ್ನು ಸಿದ್ಧಪಡಿಸಿರುವ ನಮಗಾಗಿ । **ಪುರಂ ನ**—ಶತ್ರುಗಳ ಪಟ್ಟಣಗಳ ದ್ವಾರಗಳನ್ನು ತೆಗೆಯುವಂತೆ । **ಗೋಃ**—ಗೋವುಗಳೂ । **ಅಶ್ವಸ್ಯ**—ಕುದುರೆಗಳೂ ಇರುವ । **ವ್ರಜಂ**—ಕೊಟ್ಟಿಗೆಯ ಬಾಗಿಲನ್ನು । **ವಿ ದರ್ಷಸಿ**—ತೆಗೆದಿರು.

॥ ಭಾವಾರ್ಥ ॥

ಎಲೈ ಪರಾಕ್ರಮಿಯಾದ ಇಂದ್ರನೇ, ನಮ್ಮ ಸ್ತೋತ್ರಗಳಿಂದ ಸಂತುಷ್ಟನಾದ ನೀನು ನಿನಗಾಗಿ ಸೋಮರಸವನ್ನು ಸಿದ್ಧಪಡಿಸಿರುವ ನಮಗೆ ಕೊಡುವುದಕ್ಕಾಗಿ ಶತ್ರುಗಳ ಪಟ್ಟಣಗಳ ದ್ವಾರಗಳನ್ನು ಬಲಾತ್ಕಾರದಿಂದ ತೆಗೆಯುವಂತೆ ಗೋವುಗಳೂ, ಅಶ್ವಗಳೂ ತುಂಬಿರುವ ಕೊಟ್ಟಿಗೆಯ ಬಾಗಿಲನ್ನು ತೆರೆದಿಡು.

## English Translation.

Exhilarated by the Soma draughts, you, hero, throw open the pastures of the cattle and horses like a (hostile) city.

॥ ಸಂಹಿತಾಪಾಠಃ ॥

ಯದಿ ಮೇ ರಾರಣಃ ಸುತ ಉಕ್ಥೇ ವಾ ದಧಸೇ ಚನಃ ।
ಆರಾದುಪ ಸ್ವಧಾ ಗಹಿ ॥ ೬ ॥

॥ ಪದಪಾಠಃ ॥

ಯದಿ । ಮೇ । ರರಣಃ । ಸುತೇ । ಉಕ್ಥೇ । ವಾ । ದಧಸೇ । ಚನಃ ।
ಆರಾತ್ । ಉಪ । ಸ್ವಧಾ । ಆ । ಗಹಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮೇ ಮಮ ಸುತೇಽಭಿಷುತೇ ಸೋಮ ಉಕ್ಥೇ ಸ್ತೋತ್ರೇ ವಾ ಯದಿ ರಾರಣಃ ರಮಸೇ ಚನೋಽನ್ನಂ ಯದಿ ಚ ದಧಸೇ ಮಹ್ಯಂ ಪ್ರಯಚ್ಛಸಿ ತರ್ಹ್ಯಾರೂದ್ದೂರಾತ್ ಸ್ವಧಾನ್ನೇನೋಪಾ ಗಹಿ । ಉಪಾಗಚ್ಛ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಮೇ**—ನಾನು ಹಿಂಡಿದ । **ಸುತೇ**—ಸೋಮರಸದಲ್ಲಿಯಾಗಲಿ । **ವಾ—ಅಥವಾ** । **ಉಕ್ಥೇ**—ನಾನು ಪಠಿಸುವ ಸ್ತೋತ್ರಗಳಲ್ಲಿಯಾಗಲಿ । **ಯದಿ ರರಾಣಃ**—ನಿನಗೆ ಹರ್ಷವುಂಟಾದದ್ದೇ ಆದರೆ ಮತ್ತು । **ಚನಃ**—ಅನ್ನವನ್ನು । **ದಧಸೇ**—ನನಗೆ ನೀನು ಕೊಡುವುದಾದರೆ । **ಆರಾತ್**—ದೂರ ಪ್ರದೇಶದಲ್ಲಿದ್ದರೂ ಅಲ್ಲಿಂದ । **ಸ್ವಧಾ**—ನಮಗೆ ಕೊಡಬೇಕಾದ ಅನ್ನದಿಂದ ಸಹಿತನಾಗಿ । **ಉಪ ಆ ಗಹಿ**—ನಮ್ಮ ಸಮೀಪಕ್ಕೆ ದಯಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಾನು ನಿನಗಾಗಿ ಹಿಂಡಿ ಸಿದ್ಧಪಡಿಸಿರುವ ಸೋಮರಸದಲ್ಲಿಯಾಗಲಿ, ನಾನು ಪಠಿಸುವ ಸ್ತೋತ್ರಗಳಲ್ಲಿಯಾಗಲಿ ನಿನಗೆ ಸಂತೋಷವುಂಟಾದರೆ ಮತ್ತು ನೀನು ನನಗೆ ಅನ್ನವನ್ನು ಕೊಡುವುದಾದರೆ ನೀನು ದೂರ ಪ್ರದೇಶದಲ್ಲಿದ್ದರೂ ಅಲ್ಲಿಂದ ನಮಗೆ ಕೊಡಬೇಕಾದ ಅನ್ನದಿಂದ ಕೂಡಿ ನಮ್ಮ ಸಮೀಪಕ್ಕೆ ದಯಮಾಡು.

## English Translation.

If you are propitiated by my libation and praise. bestow food (upon me), come with viands from afar.

॥ ಸಂಹಿತಾಪಾಠಃ ॥

ವಯಂ ಘಾ ತೇ ಅಪಿ ಷ್ಮಸಿ ಸ್ತೋತಾರ ಇಂದ್ರ ಗಿರ್ವಣಃ ।
ತ್ವಂ ನೋ ಜಿನ್ವ ಸೋಮಪಾಃ ॥ ೭ ॥

। ಪದಪಾಠಃ ।

ವಯಂ । ಘ । ತೇ । ಅಪಿ । ಸ್ಮಸಿ । ಸ್ತೋತಾರಃ । ಇಂದ್ರ । ಗಿರ್ವಣಃ ।
ತ್ವಂ । ನಃ । ಜಿನ್ವ । ಸೋಮಽಪಾಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಗಿರ್ವಣೋ ಗೀರ್ಭಿರ್ವನನೀಯೇಂದ್ರ ತೇ ತವಾಪಿ ವಯಂ ಘ ವಯಂ ಖಲು ಸ್ತೋತಾರಃ ಸ್ಮಸಿ । ಭವಾಮಃ । ಹೇ ಸೋಮಪಾಃ ಸೋಮಸ್ಯ ಪಾತರಿಂದ್ರ ತ್ವಂ ನೋಽಸ್ಮಾಞ್ಜಿನ್ವ । ಪ್ರೀಣಯಸಿ ॥

॥ ಪ್ರತಿಪದಾರ್ಥ ॥

ಗಿರ್ವಣಃ—ಸ್ತುತಿವಾಕ್ಯಗಳಿಂದ ಆಕರ್ಷಿಸಲ್ಪಡುವ । **ಇಂದ್ರ**—ಎಲೈ ಇಂದ್ರನೇ । **ವಯಂ ಘ**—ನಾವೂ ಸಹ । **ತೇ ಅಪಿ**—ನಿನ್ನನ್ನೇ ಉದ್ದೇಶಿಸಿ । **ಸ್ತೋತಾರಃ**—ಸ್ತೋತ್ರಮಾಡುವವರಾಗಿ । **ಸ್ಮಸಿ**—ಇದ್ದೇವೆ । **ಸೋಮಪಾಃ**—ಸೋಮ ಪಾನಮಾಡುವ ಎಲೈ ಇಂದ್ರನೇ । **ತ್ವಂ**—ನೀನು । **ನಃ**—ನಮ್ಮನ್ನು । **ಜಿನ್ವ**—ಸಂತೋಷಗೊಳಿಸು.

॥ ಭಾವಾರ್ಥ ॥

ಸ್ತುತಿವಾಕ್ಯಗಳಿಂದ ಆಕರ್ಷಿತನಾಗುವ ಎಲೈ ಇಂದ್ರನೇ, ನಾವೂ ನಿನ್ನನ್ನೇ ಉದ್ದೇಶಿಸಿ ಸ್ತೋತ್ರಮಾಡುತ್ತೇವೆ. ಸೋಮಪಾನಮಾಡುವ ಎಲೈ ಇಂದ್ರನೇ, ನೀನು ನಮ್ಮನ್ನು ಸಂತೋಷಗೊಳಿಸು.

English Translation.

Indra, you are pleased by praise, we are your adorers; do you therefore, who are the drinker of the Soma, be generous unto us.

। ಸಂಹಿತಾಪಾಠಃ ॥

ಉತ ನಃ ಪಿತುಮಾ ಭರ ಸಂರರಾಣೋ ಅವಿಕ್ಷಿತಂ ।
ಮಘವನ್ಭೂರಿ ತೇ ವಸು ॥ ೮ ॥

। ಪದಪಾಠಃ ॥

ಉತ । ನಃ । ಪಿತುಂ । ಆ । ಭರ । ಸಂಽರರಾಣಃ । ಅವಿಽಕ್ಷಿತಂ ।
ಮಘಽವನ್ । ಭೂರಿ । ತೇ । ವಸು ॥ ೮ ॥

। ಸಾಯಣಭಾಷ್ಯಂ ।

ಉತಾಪಿ ಚ ಹೇ ಮಘವನ್ ಸಂರರಾಣಃ ಸಂರಮಮಾಣಸ್ತ್ವಮವಿಕ್ಷಿತಮವಿಕ್ಷೀಣಂ ಪಿತು-ಮನ್ನಂ । ಪೃಕ್ಷಃ ಪಿತುರಿತ್ಯನ್ನನಾಮಸು ಪಾಠಾತ್ । ನೋಽಸ್ಮಭ್ಯಮಾ ಭರ । ಆಹರ । ತೇ ತವ ವಸು-ಧನಂ ಭೂರ್ಯಧಿಕಂ ಹಿ ॥

। ಪ್ರತಿಪದಾರ್ಥ ॥

**ಉತ**—ಮತ್ತು । **ಹೇ ಮಘವನ್**—ಧನವಂತನಾದ ಎಲೈ ಇಂದ್ರನೇ । **ಸಂರರಾಣಃ**—ನಮ್ಮ ಸ್ತುತಿಗಳಿಂದ ಸಂತೋಷಗೊಂಡವನಾಗಿ । **ಅವಿಕ್ಷಿತಂ**—ನಾಶವಾಗದಿರುವ । **ಪಿತುಂ**—ಅನ್ನವನ್ನು । **ನಃ**—ನಮಗೆ । **ಆ ಭರ**—ತಂದೊದಗಿಸು । **ತೇ**—ನಿನ್ನ । **ವಸು**—ಧನವು । **ಭೂರಿ**—ಬಹಳವಾಗಿದೆ.

॥ ಭಾವಾರ್ಥ ॥

ಇದಲ್ಲದೆ ಧನವಂತನಾದ ಎಲೈ ಇಂದ್ರನೇ, ನಮ್ಮ ಸ್ತುತಿಗಳಿಂದ ಪ್ರೀತನಾದ ನೀನು ನಾಶವಾಗದಿರುವ ಅನ್ನವನ್ನು ನಮಗೆ ತಂದುಕೊಡು. ನಿನ್ನಲ್ಲಿರುವ ಧನವು ಅಪಾರವಾಗಿದೆ.

English Translation.

Gratified by us, bring us undiminished food, Maghavan, for vast is your wealth.

॥ ಸಂಹಿತಾಪಾಠಃ ॥

ಉತ ನೋ ಗೋಮತಸ್ಕೃಧಿ ಹಿರಣ್ಯವತೋ ಅಶ್ವಿನಃ ।
ಇಳಾಭಿಃ ಸಂ ರಭೇಮಹಿ ॥ ೯ ॥

॥ ಪದಪಾಠಃ ॥

**ಉತ । ನಃ । ಗೋಽಮತಃ । ಕೃಧಿ । ಹಿರಣ್ಯಽವತಃ । ಅಶ್ವಿನಃ ।**
**ಇಳಾಭಿಃ । ಸಂ । ರಭೇಮಹಿ ॥ ೯ ॥**

॥ ಸಾಯಣಭಾಷ್ಯಂ ॥

**ಉತಾಪಿ ಚ ಹೇ ಇಂದ್ರ ನೋಽಸ್ಮಾನ್ ಗೋಮತೋ ಗೋಮಿನಃ ಕೃಧಿ । ಕುರು । ಅಶ್ವಿನೋಽಶ್ವಯುಕ್ತಾನ್ ಕೃಧಿ । ಹಿರಣ್ಯವತೋ ಧನವತಶ್ಚ ಕೃಧಿ । ಇಳಾಭಿರನ್ನೈಶ್ಚ ಸಂ ರಭೇಮಹಿ । ವಯಂ ಸಂರಬ್ಧಾ ಭವೇಮ ॥**

॥ ಪ್ರತಿಪದಾರ್ಥ ॥

**ಉತ**—ಮತ್ತು ಎಲೈ ಇಂದ್ರನೇ । **ನಃ**—ನಮ್ಮನ್ನು । **ಗೋಮತಃ**—ಗೋವುಗಳುಳ್ಳವರನ್ನಾಗಿಯೂ । **ಅಶ್ವಿನಃ**—ಅಶ್ವವುಳ್ಳವರನ್ನಾಗಿಯೂ । **ಹಿರಣ್ಯವತಃ**—ಧನವಂತರನ್ನಾಗಿಯೂ । **ಕೃಧಿ**—ಮಾಡು (ಮತ್ತು ನಾವು) । **ಇಳಾಭಿಃ**—ಅನ್ನಗಳಿಂದ (ಅನ್ನಗಳನ್ನು) । **ಸಂ ರಭೇಮಹಿ**—ಹೊಂದಿರುವಂತಾಗಲಿ.

॥ ಭಾವಾರ್ಥ ॥

ಮತ್ತು ಎಲೈ ಇಂದ್ರನೇ, ನೀನು ನಮಗೆ ಗೋವುಗಳನ್ನೂ, ಅಶ್ವಗಳನ್ನೂ ಕೊಟ್ಟು ನಮ್ಮನ್ನು ಧನವಂತರನ್ನಾಗಿ ಮಾಡು. ಮತ್ತು ನಾವು ಅನ್ನಗಳನ್ನು ಯಾವಾಗಲೂ ಪಡೆದಿರುವಂತಾಗಲಿ.

## English Translation.

Make us (Indra) possessed of cattle, of gold, and horses: may we prosper with abundant viands.

॥ ಸಂಹಿತಾಪಾಠಃ ॥

ಬೃಬದುಕ್ಥಂ ಹವಾಮಹೇ ಸೃಪ್ರಕರಸ್ನಮೂತಯೇ ।

ಸಾಧು ಕೃಣ್ವಂತಮವಸೇ ॥ ೧೦ ॥

॥ ಪದಪಾಠಃ ॥

ಬೃಬತ್ऽಉಕ್ಥಂ । ಹವಾಮಹೇ । ಸೃಪ್ರऽಕರಸ್ನಂ । ಊತಯೇ ।

ಸಾಧು । ಕೃಣ್ವಂತಂ । ಅವಸೇ ॥ ೧೦ ॥

॥ ಸಾಯಣಭಾಷ್ಯಂ ॥

ಊತಯೇ ಲೋಕಸ್ಯ ರಕ್ಷಣಾಯ ಸೃಪ್ರಕರಸ್ನಂ ಪ್ರಸೃತಬಾಹುಂ । ಕರಸ್ನೌ ಬಾಹೂ ಕರ್ಮಣಾಂ ಪ್ರಸ್ನಾತಾರೌ । ನಿ. ೬-೧೭ । ಇತಿ ಯಾಸ್ಕವಚನಾತ್ । ಅವಸೇ ಲೋಕಸ್ಯ ಪಾಲನಾಯ ಸಾಧು ಕೃಣ್ವಂತಂ ಸಾಧು ಕುರ್ವಂತಂ ಬೃಬದುಕ್ಥಂ ಮಹದುಕ್ಥಮಿಂದ್ರಂ ಹವಾಮಹೇ । ಹ್ವಯಾಮಃ । ತಥಾ ಚ ಯಾಸ್ಕಃ । ಬೃಬದುಕ್ಥೋ ಮಹದುಕ್ಥೋ ವಕ್ತವ್ಯಮಸ್ಮಾ ಉಕ್ಥಂ । ನಿ. ೩-೪ । ಇತಿ ॥

। ಪ್ರತಿಪದಾರ್ಥ ।

ಊತಯೇ—ಲೋಕರಕ್ಷಣಾರ್ಥವಾಗಿ । ಸೃಪ್ರಕರಸ್ನಂ—ತನ್ನ ಬಾಹುಗಳನ್ನು ಎತ್ತಿ ಹಿಡಿದಿರುವವನೂ । ಅವಸೇ—ಲೋಕವನ್ನು ರಕ್ಷಿಸುವುದಕ್ಕಾಗಿ । ಸಾಧು – ಒಳ್ಳೆಯ ಕೆಲಸಗಳನ್ನೇ । ಕೃಣ್ವಂತಂ—ಮಾಡುತ್ತಿರುವವನೂ । ಬೃಬದುಕ್ಥಂ—ಮಹತ್ಸ್ತೋತ್ರಗಳಿಂದ ಪ್ರಶಂಸಿಸಲ್ಪಡುವವನೂ ಆದ ಇಂದ್ರನನ್ನು । ಹವಾಮಹೇ—ನಾವು ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಲೋಕರಕ್ಷಣಾರ್ಥವಾಗಿ ತನ್ನ ಬಾಹುಗಳನ್ನು ಮೇಲೆತ್ತಿ ನೀಡಿರುವವನೂ, ಲೋಕದ ಜನರನ್ನು ಕಷ್ಟದಿಂದ ಕಾಪಾಡುವುದಕ್ಕಾಗಿ ಉತ್ತಮವಾದ ನಾನಾಸಾಹಸಕಾರ್ಯಗಳನ್ನೆಸಗುವವನೂ ದೊಡ್ಡ ದೊಡ್ಡ ಸ್ತೋತ್ರಗಳಿಂದ ಪ್ರಶಂಸಿಸಲ್ಪಡುವವನೂ ಆದ ಇಂದ್ರನನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

We invoke Indra, who is greatly to be praised, whose arm is stretched out for the protection (of the world), acting nobly for our defence.

॥ ವಿಶೇಷವಿಷಯಗಳು ॥

ಯಾಸ್ಕರು **ಸೃಪ್ರಃ** ಎಂಬ ಶಬ್ದದ ನಿರ್ವಚನವನ್ನು ಹೇಳುವ ಸಂದರ್ಭದಲ್ಲಿ ಈ ಋಕ್ಕಿನಲ್ಲಿರುವ **ಸೃಪ್ರಕರಸ್ನಂ** ಎಂಬ ಶಬ್ದದ ನಿರ್ವಚನವನ್ನೂ ಹೇಳಿದಾರೆ.

> **ಸೃಪ್ರಃ ಸರ್ಪಣಾತ್ । ಇದಮಪೀತರತ್ ಸೃಪ್ರಮೇತಸ್ಮಾದೇವ ಸರ್ಪಿರ್ವಾ ತೈಲಂ ವಾ । ಸೃಪ್ರಕರಸ್ನಮೂತಯೇ ಇತ್ಯಪಿ ನಿಗಮೋ ಭವತಿ । ಕರಸ್ನೌ ಬಾಹೂ ಕರ್ಮಣಾಂ ಪ್ರಸ್ನಾತಾರೌ ॥** (ನಿ. ೬-೧೭)

ಎಂದರೆ—**ಸೃಪ್ರಃ** ಎಂಬ ಶಬ್ದವು ಜಾರಿಹೋಗು, ನುಣುಚಿಕೊಳ್ಳು ಎಂದರ್ಥವಿರುವ **ಸೃಪ್** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಸೃಪ್ರ ಶಬ್ದಕ್ಕೆ ಘೃತ ಅಥವಾ ತೈಲ (ಎಣ್ಣೆ) ಎಂಬರ್ಥವಿರುವಾಗಲೂ ಈ ಶಬ್ದವು ಇದೇ ಧಾತುವಿನಿಂದ ನಿಷ್ಪನ್ನವಾಗುವುದು. **ಸೃಪ್ರಕರಸ್ನಮೂತಯೇ** ಎಂಬುದು ಶ್ರುತಿವಾಕ್ಯದ ಉದಾಹರಣೆಯು. **ಕರಸ್ನೌ** ಎಂದರೆ ನೀಡಿರುವ, ಚಾಚಿರುವ ಎರಡು ಕೈಗಳು ಎಂದರ್ಥವು ಪ್ರಕೃತ ಋಕ್ಕಿನಲ್ಲಿ ಇಂದ್ರನು ಜನರನ್ನು ರಕ್ಷಿಸುವುದಕ್ಕಾಗಿ ತನ್ನ ಎರಡು ಕೈಗಳನ್ನು ಮೇಲೆತ್ತಿ ಚಾಚಿರುವನು ಎಂದರ್ಥವು

**ಬೃಬದುಕ್ಥಂ**—ಈ ಶಬ್ದವನ್ನು ವಿವರಿಸುವುದಕ್ಕಾಗಿಯೂ ಯಾಸ್ಕರು ಈ ಶಬ್ದದ ನಿರ್ವಚನವನ್ನು ಹೇಳಿದಾರೆ—

> **ಬೃಬದುಕ್ಥಂ । ಬೃಬದುಕ್ಥೋ ಮಹದುಕ್ಥೋ ವಕ್ತವ್ಯಮಸ್ಮಾ ಉಕ್ಥಮಿತಿ ಬೃಬದುಕ್ಥೋ ವಾ । ಬೃಬದುಕ್ಥಂ ಹವಾಮಹೇ ಇತ್ಯಪಿ ನಿಗಮೋ ಭವತಿ ॥** (ನಿ. ೬-೪)

ಬೃಬದುಕ್ಥವೆಂದರೆ ಶ್ರೇಷ್ಠರೀತಿಯಿಂದ ನಿರ್ಮಿತವಾದ ಮಹಾಸ್ತೋತ್ರವು ಎಂದರ್ಥವು. ಇಂತಹ ಶ್ರೇಷ್ಠವಾದ ಸ್ತುತಿಗಳಿಂದ ಸ್ತುತಿಸಲ್ಪಡುವ ಇಂದ್ರನನ್ನು ಎಂದು ಈ ಶಬ್ದಾರ್ಥವು. ಉದಾಹರಣೆಗಾಗಿ ಪ್ರಕೃತ ಋಕ್ಕಿನಲ್ಲಿರುವ **ಬೃಬದುಕ್ಥಂ ಹವಾಮಹೇ** ಎಂಬ ವಾಕ್ಯವನ್ನೇ ತೆಗೆದುಕೊಂಡು ಅರ್ಥವಿವರಣೆಮಾಡಿರುವರು.

॥ ಸಂಹಿತಾಪಾಠಃ ॥

ಯಃ ಸಂಸ್ಥೇ ಚಿಚ್ಛತಕ್ರತುರಾದೀಂ ಕೃಣೋತಿ ವೃತ್ರಹಾ ।
ಜರಿತೃಭ್ಯಃ ಪುರೂವಸು ॥ ೧೧ ॥

॥ ಪದಪಾಠಃ ॥

**ಯಃ । ಸಂಽಸ್ಥೇ । ಚಿತ್ । ಶತಽಕ್ರತುಃ । ಆತ್ । ಈಂ । ಕೃಣೋತಿ । ವೃತ್ರಽಹಾ ।**
**ಜರಿತೃಽಭ್ಯಃ । ಪುರುಽವಸುಃ ॥ ೧೧ ॥**

॥ ಸಾಯಣಭಾಷ್ಯಂ ॥

**ಯಃ ಪ್ರಸಿದ್ಧ ಇಂದ್ರಃ ಸಂಸ್ಥೇ ಸಂಗ್ರಾಮೇ ಶತಕ್ರತುರ್ಬಹುಕರ್ಮಾ ಭವತಿ ಅಪಿ ಚಾದನಂ- ತರಮೀಮಿದಂ ಶತ್ರುವಧಾದಿಕಂ ಕೃಣೋತಿ ಕರೋತಿ ಚಿದೇವ ಅಯಮಿಂದ್ರೋ ವೃತ್ರಹಾ ಶತ್ರೂಣಾಂ**

ಹಂತಾ ಭವತಿ । ಕಿಂಚ ಜರಿತೃಭ್ಯಃ ಸ್ತೋತೃಭ್ಯಾಣಾಮರ್ಥೇ ಪುರೂವಸುರ್ಬಹುಧನೋ ಭವತಿ । ಸ ಸ್ವಾರ್ಥಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**— ಪ್ರಸಿದ್ಧನಾದ ಯಾವ ಇಂದ್ರನು । **ಸಂಸ್ಥೇ**— ಯುದ್ಧದಲ್ಲಿ । **ಶತಕ್ರತುಃ**— ಅನೇಕ ಸಾಹಸ ಕೃತ್ಯಗಳನ್ನು ಮಾಡುವನೋ । **ಆತ್**— ಅನಂತರ । **ಈಂ**— ಶತ್ರುವಧಾದಿಕರ್ಮಗಳನ್ನು । **ಕೃಣೋತಿ**— ಮಾಡುವನೋ । **ಚಿತ್**— ಆ ಇಂದ್ರನೇ । **ವೃತ್ರಹಾ**— ಶತ್ರುಗಳನ್ನು ಸಂಹರಿಸುವನು ಮತ್ತೂ । **ಜರಿತೃಭ್ಯಃ**— ತನ್ನನ್ನು ಸ್ತೋತ್ರಮಾಡುವ ಜನರಿಗೆ ಕೊಡುವುದಕ್ಕಾಗಿ । **ಪುರುವಸುಃ**-- ಬಹಳವಾದ ಧನವನ್ನು ಹೊಂದಿರುವನು.

॥ ಪ್ರತಿಪದಾರ್ಥ ॥

ಪ್ರಸಿದ್ಧನಾದ ಯಾವ ಇಂದ್ರನು ಯುದ್ಧದಲ್ಲಿ ಅನೇಕ ಸಾಹಸಕೃತ್ಯಗಳನ್ನು ಮಾಡುತ್ತಾ ಶತ್ರುಗಳ ಸಂಹಾರ ವನ್ನು ಮಾಡುವನೋ, ಆ ಇಂದ್ರನೇ ಶತ್ರುಗಳನ್ನು ಕೊಲ್ಲುವನು. ತನ್ನನ್ನು ಸ್ತೋತ್ರಮಾಡುವ ಜನರಿಗೆ ಕೊಡು ವುದಕ್ಕಾಗಿ ಇಂದ್ರನ ಬಳಿ ಬಹಳ ಧನವಿರುವುದು.

## English Translation.

The slayer of Vritra, the occomplisher of a hundred exploits in war, achieves them that he may be the giver of much wealth to his worshippers.

॥ ಸಂಹಿತಾಪಾಠಃ ॥

ಸ ನಃ ಶಕ್ರಶ್ಚಿದಾ ಶಕದ್ದಾನವಾँ ಅಂತರಾಭರಃ ।
ಇಂದ್ರೋ ವಿಶ್ವಾಭಿರೂತಿಭಿಃ ॥ ೧೨ ॥

॥ ಪದಪಾಠಃ ॥

ಸಃ । ನಃ । ಶಕ್ರಃ । ಚಿತ್ । ಆ । ಶಕತ್ । ದಾನऽವಾನ್ । ಅಂತಃऽಆಭರಃ ।
ಇಂದ್ರಃ । ವಿಶ್ವಾಭಿಃ । ಊತಿऽಭಿಃ ॥ ೧೨ ॥

॥ ಸಾಯಣಭಾಷ್ಯಂ ॥

**ಶಕ್ರಃ ಶಕ್ತಃ ಸ ಇಂದ್ರೋ ನಶ್ಚಿದಸ್ಮಾನಸ್ಮಾ ಶಕತ್ । ಶಕ್ತಾನ್ ಕರೋತು । ಅಪಿ ಚೇಂದ್ರೋ ದಾನವಾನ್ ವಿಶ್ವಾಭಿಃ ಸರ್ವೈರೂತಿಭಿಃ ಪಾಲನೈರಂತರಾಭರೋऽಂತರಾಹರಶ್ಛಿದ್ರಾಣಾಮಾಪೂರಕಃ । ಛಿದ್ರಾಪಿಧಾಯೀತ್ಯರ್ಥಃ ॥**

॥ ಪ್ರತಿಪದಾರ್ಥ ॥

ಶಕ್ರಃ— ಶಕ್ತನಾದ । **ಸಃ**— ಆ ಇಂದ್ರನು । **ನಃ ಚಿತ್**— ನಮ್ಮನ್ನೂ ಸಹ । **ಆ ಶಕತ್**— ಶಕ್ತರ ನ್ನಾಗಿ ಮಾಡಲಿ ಮತ್ತು । ದಾನವಾನ್- ಉದಾರವಾಗಿ ದಾನಮಾಡುವ । **ಇಂದ್ರಃ**— ಇಂದ್ರನು । **ವಿಶ್ವಾಭಿಃ**—

ಸಮಸ್ತವಾದ । **ಊತಿಭಿಃ**—ತನ್ನ ರಕ್ಷಣೆಗಳೊಡನೆ ನಮ್ಮ । **ಅಂತರಾಭರಃ**—ಅಪಾಯಕ್ಕೊಳಗಾಗುವ ಪ್ರದೇಶಗಳನ್ನು ರಕ್ಷಿಸುವನು.

॥ ಭಾವಾರ್ಥ ॥

ಶಕ್ತನಾದ ಇಂದ್ರನು ನಮ್ಮನ್ನೂ ಸಹ ಶಕ್ತಿಯುತರನ್ನಾಗಿ ಮಾಡಲಿ. ಉದಾರವಾಗಿ ದಾನಮಾಡುವ ಸ್ವಭಾವವುಳ್ಳ ಆ ಇಂದ್ರನು ತನ್ನ ಸಮಸ್ತ ರಕ್ಷಣೆಗಳಿಂದ ಅಪಾಯಕ್ಕೀಡಾಗುವ ನಮ್ಮನ್ನು ರಕ್ಷಿಸಲಿ.

English Translation.

May Sakra give us strength, may the liberal Indra with all protections be the supplier of our deficiencies.

॥ ವಿಶೇಷವಿಷಯಗಳು ॥

**ಅಂತರಾಭರಃ—ಅಂತರಾಹರಶ್ಛಿದ್ರಾಣಾಮಾಪೂರಕಃ ।** ಯುದ್ಧಮಾಡುವಾಗ ಶತ್ರುಗಳು ಅವಕಾಶ ಸಿಕ್ಕಿದ ಸ್ಥಳದಲ್ಲಿ ನುಗ್ಗುವರು. ಎಲ್ಲಾ ಪ್ರದೇಶವೂ ಅಭೇದ್ಯವಾಗಿರುವುದಿಲ್ಲ. ಸೈನಿಕರ ವಿಷಯವೂ ಹಾಗೆಯೇ. ದೇಹರಕ್ಷಣಾರ್ಥವಾಗಿ ಕವಚಾದಿಗಳನ್ನು ಧರಿಸಿದ್ದರೂ ಅಪಾಯಕ್ಕೀಡಾಗುವ ಭಾಗವು ಅಥವಾ ಅವಯವವು ಇದ್ದೇ ಇರುವುದು. ಇಂತಹ ಅಪಾಯಕ್ಕೊಳಗಾಗಬಹುದಾದ (Vulnerable points) ಭಾಗಗಳನ್ನು ಇಂದ್ರನು ತನ್ನ ಸ್ವಶಕ್ತಿಸಾಮರ್ಥ್ಯಗಳಿಂದ ಕಾಪಾಡಲಿ ಎಂಬ ಭಾವವು ಇಲ್ಲಿ ಸೂಚಿತವಾಗಿರುವುದು.

॥ ಸಂಹಿತಾಪಾಠಃ ॥

ಯೋ ರಾಯೋ३ವನಿರ್ಮಹಾನ್ತ್ಸುಪಾರಃ ಸುನ್ವತಃ ಸಖಾ ।
ತಮಿಂದ್ರಮಭಿ ಗಾಯತ ॥ ೧೩ ॥

॥ ಪದಪಾಠಃ ॥

ಯಃ । ರಾಯಃ । ಅವನಿಃ । ಮಹಾನ್ । ಸುऽಪಾರಃ । ಸುನ್ವತಃ । ಸಖಾ ।
ತಂ । ಇಂದ್ರಂ । ಅಭಿ । ಗಾಯತ ॥ ೧೩ ॥

॥ ಸಾಯಣಭಾಷ್ಯಂ ॥

**ಯ ಇಂದ್ರೋ ರಾಯೋ ಧನಸ್ಯಾವನಿಃ ಪಾಲಕೋ ಮಹಾನ್ ಸರ್ವೋತ್ತಮಃ ಸುಪಾರಃ ಶೋಭನಪಾರಣಶ್ಚ ಭವತಿ । ಯಶ್ಚ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಸಖಾ ಪ್ರಿಯೋ ಭವತಿ । ತಮಿಂದ್ರಮಭಿ ಗಾಯತ । ಅಭಿಷ್ಟುತ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ರಾಯಃ**—ಧನಕ್ಕೆ । **ಅವನಿಃ**—ಪಾಲಕನೋ । **ಮಹಾನ್**—ಸರ್ವೋತ್ತಮನೂ । **ಸುಪಾರಃ**—ಸುಲಭವಾಗಿ ಸ್ತೋತೃಜನರಿಂದ ಸಮಾಪಿಸಲ್ಪಡುವವನೂ ಆಗಿರುವನೋ ।

**ಸುನ್ವತೇ**— ಸೋಮಾಭಿಷವವನ್ನು ಮಾಡುವ ಯಜಮಾನನ | **ಸಖಾ**— ಪ್ರಿಯಮಿತ್ರನಾಗಿರುವನೋ | **ತಂ ಇಂದ್ರಂ**— ಅದೇ ಇಂದ್ರನನ್ನು | **ಅಭಿ ಗಾಯತ**— ಗಾನಾದಿಗಳಿಂದ ಸ್ತುತಿಸಿರಿ.

|| ಭಾವಾರ್ಥ ||

ಯಾವ ಇಂದ್ರನು ಧನಕ್ಕೆ ಪಾಲಕನೋ, ಯಾವ ಇಂದ್ರನು ಸರ್ವೋತ್ತಮನೂ, ಸ್ತೋತೃಜನರಿಗೆ ಸುಲಭವಾಗಿ ಲಭ್ಯನೂ ಆಗಿರುವನೋ, ಸೋಮಾಭಿಷವವನ್ನು ಮಾಡಿ ಯಜ್ಞಮಾಡುವ ಯಜಮಾನನಿಗೆ ಸ್ನೇಹಿತನಾಗಿರುವನೋ ಅಂತಹ ಇಂದ್ರನನ್ನೇ ಗುಣಗಾನಮಾಡಿ ಸ್ತೋತ್ರಮಾಡಿರಿ.

English Translation.

Glorify that Indra who is the preserver of riches, the mighty, the conveyer beyond (calamity), the friend of offerer of the libation.

| ಸಂಹಿತಾಪಾಠಃ ||

ಆಯುಂತಾರಂ ಮಹಿ ಸ್ಥಿರಂ ಪೃತನಾಸು ಶ್ರವೋಜಿತಂ |
ಭೂರೇರೀಶಾನಮೋಜಸಾ || ೧೪ ||

|| ಪದಪಾಠಃ ||

ಆऽಯುಂತಾರಂ | ಮಹಿ | ಸ್ಥಿರಂ | ಪೃತನಾಸು | ಶ್ರವಃऽಜಿತಂ |
ಭೂರೇಃ | ಈಶಾನಂ | ಓಜಸಾ || ೧೪ ||

| ಸಾಯಣಭಾಷ್ಯಂ ||

**ಆಯುಂತಾರಮಾಗಂತಾರಂ ಮಹಿ ಮಹಾಂತಂ ಪೃತನಾಸು ಸಂಗ್ರಾಮೇಷು ಸ್ಥಿರಮಚಲಂ ಶ್ರವೋಜಿತಂ ಶ್ರವಸೋ ಜೇತಾರಮೋಜಸಾ ಬಲೇನ ಭೂರೇರ್ಬಹೋರ್ಧನಸ್ಯೇಶಾನಮೀಶ್ವರಮಭಿಗಾಯತ ||**

| ಪ್ರತಿಪದಾರ್ಥ ||

ಆಯುಂತಾರಂ— ಸ್ತೋತ್ರಮಾಡುವವರ ಸಮೀಪಕ್ಕೆ ಬರುವವನೂ | **ಮಹಿ**— ಮಹಾಮಹಿಮನೂ | **ಪೃತನಾಸು**— ಯುದ್ಧಗಳಲ್ಲಿ | **ಸ್ಥಿರಂ**— ಓಡಿಹೋಗದೆ ಶತ್ರುವನ್ನೆದುರಿಸಿ ದೃಢವಾಗಿ ನಿಲ್ಲುವವನೂ | **ಶ್ರವೋಜಿತಂ**— ಶತ್ರುಗಳ ಅನ್ನವನ್ನು ಜಯಿಸಿ ಗಳಿಸುವವನೂ ಅಥವಾ ಕೀರ್ತಿಯನ್ನು ಗಳಿಸುವವನೂ | **ಓಜಸಾ**— ತನ್ನ ಸ್ವಶಕ್ತಿಯಿಂದ | **ಭೂರೇಃ**— ಬಹಳವಾದ ಧನಕ್ಕೆ | **ಈಶಾನಂ**— ಒಡೆಯನೂ ಆದ (ಇಂದ್ರನನ್ನು ಸ್ತುತಿಸಿರಿ).

|| ಭಾವಾರ್ಥ ||

ಸ್ತೋತ್ರಮಾಡುವವರನ್ನು ಅನುಗ್ರಹಿಸಲು ಅವರ ಸಮೀಪಕ್ಕೆ ಬರುವವನೂ, ಮಹಾಮಹಿಮನೂ, ಯುದ್ಧಗಳಲ್ಲಿ ಸೋತು ಓಡಿಹೋಗದೆ ಶತ್ರುಗಳನ್ನೆದುರಿಸಿ ದೃಢವಾಗಿ ನಿಲ್ಲುವವನೂ, ಯುದ್ಧದಲ್ಲಿ ಶತ್ರುಗಳಿಂದ ಅನ್ನವನ್ನು ಕಸಿದುಕೊಳ್ಳುವವನೂ ಅಥವಾ ಕೀರ್ತಿಯನ್ನು ಗಳಿಸುವವನೂ, ತನ್ನ ಸ್ವಶಕ್ತಿಯಿಂದ ಅಪಾರವಾದ ಧನರಾಶಿಗೆ ಒಡೆಯನೂ ಆದ ಇಂದ್ರನನ್ನು ಸ್ತುತಿಸಿರಿ.

English Translation.

Him who comes nigh, the mighty, the firm in battles, the acquirer of fame, the lord of the vast riches through his prowess.

|| ಸಂಹಿತಾಪಾಠಃ ||

ನಕಿರಸ್ಯ ಶಚೀನಾಂ ನಿಯಂತಾ ಸೂನೃತಾನಾಂ ।
ನಕಿರ್ವಕ್ತಾ ನ ದಾದಿತಿ || ೧೫ ||

|| ಪದಪಾಠಃ ||

ನಕಿಃ । ಅಸ್ಯ । ಶಚೀನಾಂ । ನಿಽಯಂತಾ । ಸೂನೃತಾನಾಂ ।
ನಕಿಃ । ವಕ್ತಾ । ನ । ದಾತ್ । ಇತಿ || ೧೫ ||

|| ಸಾಯಣಭಾಷ್ಯಂ ||

**ಅಸ್ಯೇಂದ್ರಸ್ಯ ಸೂನೃತಾನಾಂ ಶೋಭನಾನಾಂ ಶಚೀನಾಂ ಕರ್ಮಣಾಂ । ಧೀಃ ಶಚೀತಿ ಕರ್ಮನಾಮಸು ಪಾಠಾತ್ । ನಕಿರ್ನ ಕಶ್ಚಿನ್ನಿಯಂತಾ ನಿಯಾಮಕಃ । ಅಯಮಿಂದ್ರೋ ನ ದಾದಿತಿ ನ ಪ್ರಯಚ್ಛತೀತಿ ನಕಿರ್ವಕ್ತಾ ನ ಕಶ್ಚಿದ್ವದತಿ । ಕಿಂತು ಸರ್ವೋಽಪಿ ಜನೋಽಯಂ ಪ್ರದಾತೇತ್ಯೇವ ಬ್ರವೀತೀತ್ಯರ್ಥಃ ||**

|| ಪ್ರತಿಪದಾರ್ಥ ||

**ಅಸ್ಯ**—ಈ ಇಂದ್ರನ । **ಸೂನೃತಾನಾಂ**—ಶ್ರೇಷ್ಠನಾದ ಅಥವಾ ಮಂಗಳಕರವಾದ । **ಶಚೀನಾಂ**—ಕರ್ಮಗಳಿಗೆ । **ನಿಯಂತಾ**—ನಿಯಮನಮಾಡುವವನು । **ನಕಿಃ**—ಯಾರೂ ಇಲ್ಲ । (ಮತ್ತು ಈ ಇಂದ್ರನು) **ನ ದಾತ್ ಇತಿ**—ಸ್ತೋತೃಜನರಿಗೆ ಏನನ್ನೂ ಕೊಡುವುದಿಲ್ಲವೆಂದು । **ನಕಿಃ ವಕ್ತಾ**—ಹೇಳುವವನು ಯಾರೂ ಇಲ್ಲ.

|| ಭಾವಾರ್ಥ ||

ಇಂದ್ರನು ಮಾಡುವ ಉತ್ತಮವಾದ ಕರ್ಮಗಳನ್ನು ಇಷ್ಟೇ ಮಾಡಬೇಕೆಂದು ಅವನನ್ನು ನಿಯಮನಮಾಡುವವನು ಯಾರೂ ಇಲ್ಲ. ಇಂದ್ರನು ಯಾರ ಅಧೀನಕ್ಕೂ ಒಳಪಟ್ಟಿಲ್ಲ. ಮತ್ತು ತನ್ನನ್ನು ಸ್ತೋತ್ರಮಾಡುವ ಜನರಿಗೆ ಈ ಇಂದ್ರನು ಏನನ್ನೂ ಕೊಡುವುದಿಲ್ಲವೆಂದು ಹೇಳುವ ಮನುಷ್ಯನೂ ಯಾರೂ ಇಲ್ಲ. ಎಂದರೆ, ಇಂದ್ರನು ತನ್ನನ್ನು ಪ್ರಶಂಸಿಸುವವರಿಗೆ ಬೇಕಾದ್ದನ್ನು ಕೊಡುವನೆಂದು ಎಲ್ಲರೂ ಹೇಳುತ್ತಾರೆ.

## English Translation.

No one puts a limit to his glorious deeds, no one asserts that he is **not generous.**

॥ ಸಂಹಿತಾಪಾಠಃ ॥

ನ ನೂನಂ ಬ್ರಹ್ಮಣಾಮೃಣಂ ಪ್ರಾಶೂನಾಮಸ್ತಿ ಸುನ್ವತಾಂ ।
ನ ಸೋಮೋ ಅಪ್ರತಾ ಪಪೇ ॥ ೧೬ ॥

॥ ಪದಪಾಠಃ ॥

**ನ । ನೂನಂ । ಬ್ರಹ್ಮಣಾಂ । ಋಣಂ । ಪ್ರಾಶೂನಾಂ । ಅಸ್ತಿ । ಸುನ್ವತಾಂ ।**
**ನ । ಸೋಮಃ । ಅಪ್ರತಾ । ಪಪೇ ॥ ೧೬ ॥**

॥ ಸಾಯಣಭಾಷ್ಯಂ ॥

**ಪ್ರಾಶೂನಾಂ । ಯೇ ಸೋಮಂ ಪ್ರಾಶ್ನುವಂತಿ ತೇ ಪ್ರಾಶವಃ । ತೇಷಾಂ ಸೋಮಂ ಸುನ್ವತಾಂ ಬ್ರಹ್ಮಣಾಂ ಬ್ರಾಹ್ಮಣಾನಾಮೃಣಂ ದೇವರ್ಣಂ ನ ನೂನಮಸ್ತಿ । ನ ಖಲು ವಿದ್ಯತೇ । ತಥಾ ಚ ಶ್ರೂಯತೇ । ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ । ತೈ. ಸಂ. ೬-೩-೧೦-೫ । ಇತಿ । ಕಿಂಚಾಪ್ರತಾವಿಸ್ತೀರ್ಣಧನೇನ ಸೋಮೋ ನ ಪಪೇ । ನ ಪೀಯತೇ । ಪ್ರಭೂತಧನೇನೈವ ಸೋಮಃ ಪೀಯತ ಇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಪ್ರಾಶೂನಾಂ**—ಸೋಮಪಾನಮಾಡುವ ಜನರಿಗೂ । **ಸುನ್ವತಾಂ**—ಯಜ್ಞದಲ್ಲಿ ಸೋಮಾಭಿಷವವನ್ನು ಮಾಡುವ । **ಬ್ರಹ್ಮಣಾಂ**—ಬ್ರಾಹ್ಮಣರಿಗೂ । **ಋಣಂ**—ದೇವತೆಗಳಿಗೆ ತೀರಿಸಬೇಕಾದ ದೇವ ಋಣವು । **ನೂನಂ**—ನಿಶ್ಚಯವಾಗಿಯೂ । **ನ ಅಸ್ತಿ**—ಇರುವುದಿಲ್ಲ (ಮತ್ತು) । **ಅಪ್ರತಾ**—ಹೆಚ್ಚಾಗಿ ಧನವಿಲ್ಲದವರಿಂದ । **ಸೋಮಃ**—ಸೋಮರಸವು । **ನ ಪಪೇ**—ಪಾನಮಾಡಲ್ಪಡುವುದಿಲ್ಲ.

॥ ಭಾವಾರ್ಥ ॥

ಯಜ್ಞಾದಿಗಳನ್ನು ಸೋಮಪಾನಮಾಡುವ ಜನರಿಗೂ, ಯಜ್ಞಾನುಷ್ಠಾನಮಾಡುವಾಗ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆದು ವಿಧ್ಯುಕ್ತವಾಗಿ ದೇವತೆಗಳಿಗೆ ಅರ್ಪಿಸಿ ತಾವೂ ಪಾನ ಮಾಡುವ ಜನರಿಗೂ ದೇವಸಂಬಂಧವಾದ ಋಣವಿರುವುದಿಲ್ಲ. ಮತ್ತು ಯಜ್ಞಾದಿಗಳನ್ನು ಅನುಷ್ಠಾನಮಾಡಲು ಸಾಕಷ್ಟು ಧನಸಹಾಯವಿಲ್ಲದಿರುವವರಿಂದ ಸೋಮ ಪಾನವು ಸಾಧ್ಯವಾಗುವುದಿಲ್ಲ.

## English Translation.

Verily no debt is due (to the gods) by those Soma-partaking Brahmans offering libations: the Soma is not drunk without the expediture of boundless (wealth).

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಸೋಮಪಾನ, ಸೋಮಾಭಿಷವ ಎಂದರೆ, ವಿಧ್ಯುಕ್ತವಾಗಿ ಯಜ್ಞಕರ್ಮಾನುಷ್ಠಾನವಲ್ಲಿ ಮಾಡುವ ಸೋಮಪಾನವೆಂದರ್ಥವು. ಈ ರೀತಿ ಯಜ್ಞಾನುಷ್ಠಾನಪೂರ್ವಕವಾದ ಸೋಮಪಾನವಾಡುವವರಿಗೆ ದೇವಋಣವಿರುವುದಿಲ್ಲ ಮತ್ತು ಅಲ್ಪಧನವುಳ್ಳ ಪುರುಷರಿಂದ ಯಜ್ಞಾನುಷ್ಠಾನಮಾಡಲು ಸಾಧ್ಯವಿಲ್ಲವಾದ್ದರಿಂದ ಅಂತಹ ಜನರು ಸೋಮ ಪಾನಮಾಡಲು ಸಾಧ್ಯವಿಲ್ಲವೆಂದು ಇಲ್ಲಿ ಹೇಳಿದೆ. ದೇವಋಣವೆಂದರೇನು ಎಂಬುದನ್ನು ವಿವರಿಸುವುದು ಇಲ್ಲಿ ಅವಶ್ಯಕವಾಗಿದೆ. ಈ ವಿಷಯದಲ್ಲಿ ತೈತ್ತಿರೀಯ ಶ್ರುತಿಯು ಈ ರೀತಿ ತಿಳಿಸವುದು.

**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣರ್ಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ ||** (ತೈ. ಸಂ. ೬-೩-೧೦-೫)

ಎಂದರೆ ಬ್ರಾಹ್ಮಣನಾದವನು ಹುಟ್ಟುವಾಗಲೇ ಮೂರು ವಿಧವಾದ ಋಣಗಳನ್ನು (ಸಾಲಗಳನ್ನು) ಹೊತ್ತುಕೊಂಡೇ ಹುಟ್ಟುವನು ಎಂದರೆ ಬ್ರಾಹ್ಮಣನಾಗಿ ಹುಟ್ಟಿದವನು ಋಷಿಋಣ, ದೇವಋಣ, ಪಿತೃಋಣ ಎಂಬ ಮೂರು ಋಣಗಳನ್ನು ತೀರಿಸಲೇಬೇಕಾಗಿರುವುದು. ಇಲ್ಲದಿದ್ದರೆ ಅವನಿಗೆ ಸದ್ಗತಿ ಇಲ್ಲ. ಈ ಋಣಗಳನ್ನು ತೀರಿಸುವ ಬಗೆ ಹೇಗೆಂದರೆ—ಉಪನಯನವಾದ ಕೂಡಲೇ ಬ್ರಹ್ಮಚರ್ಯಾಶ್ರಮದಲ್ಲಿ ಗುರುಶುಶ್ರೂಷೆಮಾಡುತ್ತಾ ವೇದಾಧ್ಯಯನವನ್ನು ಮಾಡಿದರೆ ಅವನು ಋಷಿಋಣವನ್ನು ತೀರಿಸಿದಂತಾಗುವುದು. ಬಳಿಕ ಸಕಾಲದಲ್ಲಿ ವಿವಾಹವನ್ನು ಮಾಡಿಕೊಂಡು ಗೃಹಸ್ಥನಾಗಿ ದೇವತೆಗಳನ್ನು ಆರಾಧಿಸುವುದಕ್ಕಾಗಿ ಯಜ್ಞಯಾಗಾದಿಗಳನ್ನು ಮಾಡಿದರೆ ದೇವಋಣವನ್ನು ತೀರಿಸಿದಂತಾಗುವುದು. ಮತ್ತು ವಿವಾಹಿತ ಸ್ವಪತ್ನಿಯಲ್ಲಿ ಪುತ್ರೋತ್ಪಾದನೆ ಮಾಡುವುದರಿಂದ ಪಿತೃಋಣವನ್ನು ತೀರಿಸಿದಂತಾಗುವುದು ಆದ್ದರಿಂದ ಬ್ರಾಹ್ಮಣನಾದವನು ಈ ಮೂರು ವಿಧವಾದ ಋಣಪರಿಹಾರಕ್ಕಾಗಿ ಉಪನಯನಾನಂತರ ಗುರುಕುಲವಾಸ ವಾಸಮಾಡಿ ವೇದಾಧ್ಯಯನವನ್ನು ಸಮಾಪ್ತಿಗೊಳಿಸಿ ಗುರುವಿನ ಅನುಜ್ಞೆಯಿಂದ ವಿವಾಹವನ್ನು ಮಾಡಿಕೊಂಡು ಯಜ್ಞಾನುಷ್ಠಾನಗಳನ್ನು ಮಾಡುತ್ತಾ ದೇವತೆಗಳನ್ನು ತೃಪ್ತಿಪಡಿಸಿ ಸಕಾಲದಲ್ಲಿ ಪುತ್ರೋತ್ಪಾದನೆ ಮಾಡಿ ಸತ್ಕರ್ಮಾಚರಣೆಯನ್ನು ಮಾಡುತ್ತಿರಬೇಕು ಎಂದು ಈ ಶ್ರುತಿವಾಕ್ಯದ ಮುಖ್ಯಾಭಿಪ್ರಾಯವು. ಪ್ರಕೃತ ಋಕ್ಕಿನಲ್ಲಿ ದೇವಋಣದ ವಿಷಯವು ಮಾತ್ರ ಸೂಚಿತವಾಗಿರುವುದು. ಸೋಮಾಭಿಷವ, ಸೋಮಪಾನ ಇತ್ಯಾದಿ ಶಬ್ದಗಳಿಂದ ಯಜ್ಞಾನುಷ್ಠಾನವು ಸೂಚಿತವಾಗುವುದು. ಯಜ್ಞಗಳಲ್ಲಿ ಮಾತ್ರ ವಿಧ್ಯುಕ್ತವಾದ ಸೋಮಪಾನವು ಉಕ್ತವಾಗಿರುವುದರಿಂದ, ಸೋಮಾಭಿಷವ, ಸೋಮಪಾನ ಎಂಬ ಶಬ್ದಗಳಿಗೆ ಯಜ್ಞಾನುಷ್ಠಾನವೆಂದೇ ಅರ್ಥವು. ಇವುಗಳನ್ನು ಮಾಡುವುದರಿಂದ ದೇವಋಣವು ತೀರುವುದು ಎಂದು ಋಕ್ಕಿನ ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಪನ್ಯ ಇದುಪ ಗಾಯತ ಪನ್ಯ ಉಕ್ಥಾನಿ ಶಂಸತ ।

ಬ್ರಹ್ಮಾ ಕೃಣೋತ ಪನ್ಯ ಇತ್ ॥ ೧೭ ॥

॥ ಪದಪಾಠಃ ॥

ಪನ್ಯೇ । ಇತ್ । ಉಪ । ಗಾಯತ । ಪನ್ಯೇ । ಉಕ್ಥಾನಿ । ಶಂಸತ ।

ಬ್ರಹ್ಮ । ಕೃಣೋತ । ಪನ್ಯೇ । ಇತ್ ॥ ೧೭ ॥

॥ ಸಾಯಣಭಾಷ್ಯಂ ॥

**ಹೇ ಉಪಗಾತಾರಃ ಪನ್ಯ ಇತ್ ಸ್ತುತ್ಯ ಏವೇಂದ್ರ ಉಪ ಗಾಯತ । ಉಪಗಾನಂ ಕುರುತ । ಕಿಂಚ ಪನ್ಯ ಏವೇಂದ್ರ ಉಕ್ಥಾನಿ ಸ್ತೋತ್ರಾಣಿ ಶಂಸತ । ಹೇ ಸ್ತೋತಾರ ಇತಿ ಶೇಷಃ । ಪನ್ಯ ಇತ್ ಸ್ತುತ್ಯ ಏವೇಂದ್ರೇ ಬ್ರಹ್ಮಾಣ್ಯನ್ಯಾನಿ ಸ್ತೋತ್ರಾಣಿ ಕೃಣೋತ । ಕುರುತ ॥**

॥ ಪ್ರತಿಪದಾರ್ಥ ॥

(ಸಾಮಗಾನಮಾಡುವ ಎಲೈ ಉಪಗಾತೃಗಳೇ) **ಪನ್ಯೇ ಇತ್**—ಸ್ತುತ್ಯನಾದ ಇಂದ್ರನನ್ನುದ್ದೇಶಿಸಿಯೇ । **ಉಪ ಗಾಯತ**—ಸಾಮಮಂತ್ರಗಳಿಂದ ಗಾನಮಾಡಿರಿ । (ಮತ್ತು) **ಪನ್ಯೇ**—ಸ್ತುತ್ಯನಾದ ಇಂದ್ರನನ್ನುದ್ದೇಶಿಸಿಯೇ । **ಉಕ್ಥಾನಿ**—ಸ್ತೋತ್ರಗಳನ್ನು । **ಶಂಸತ**—ಪಠಿಸಿರಿ । (ಎಲೈ ಸ್ತೋತೃಗಳೇ) **ಪನ್ಯೇ ಇತ್**—ಸ್ತುತ್ಯನಾದ ಇಂದ್ರನನ್ನುದ್ದೇಶಿಸಿಯೇ । **ಬ್ರಹ್ಮ**—ಸ್ತೋತ್ರಗಳನ್ನು । **ಕೃಣೋತ**—ನಿರ್ಮಿಸಿ ಅರ್ಪಿಸಿರಿ.

॥ ಭಾವಾರ್ಥ ॥

ಎಲೈ ಸಾಮಗಾಯಕರೇ, ಸ್ತುತ್ಯನಾದ ಇಂದ್ರನನ್ನುದ್ದೇಶಿಸಿ ಸಾಮಮಂತ್ರಗಳಿಂದ ಇಂದ್ರನ ಗುಣಗಾನ ಮಾಡಿರಿ. ಆ ಸ್ತುತ್ಯನಾದ ಇಂದ್ರನನ್ನು ಉದ್ದೇಶಿಸಿಯೇ ಸ್ತೋತ್ರಗಳನ್ನೂ ಪಠಿಸಿರಿ. ಎಲೈ ಸ್ತೋತೃಗಳೇ, ಸ್ತುತ್ಯನಾದ ಇಂದ್ರನನ್ನುದ್ದೇಶಿಸಿಯೇ ಉತ್ತಮವಾದ ಸ್ತುತಿಗಳನ್ನು ನಿರ್ಮಿಸಿ ಅರ್ಪಿಸಿರಿ

## English Translation.

Sing praises to the adorable (Indra), repeat prayers to the adorable (Indra), address hymns to the adorable (Indra).

॥ ಸಂಹಿತಾಪಾಠಃ ॥

ಪನ್ಯ ಆ ದರ್ದಿರಚ್ಛತಾ ಸಹಸ್ರಾ ವಾಜ್ಯವೃತಃ ।

ಇಂದ್ರೋ ಯೋ ಯಜ್ವನೋ ವೃಧಃ ॥ ೧೮ ॥

|| ಪದಪಾಠಃ ||

ಪನ್ಯಃ । ಆ । ದರ್ದಿರತ್ । ಶತಾ । ಸಹಸ್ರಾ । ವಾಜೀ । ಅವೃತಃ ।

ಇಂದ್ರಃ । ಯಃ । ಯಜ್ವನಃ । ವೃಧಃ ॥ ೧೮ ॥

|| ಸಾಯಣಭಾಷ್ಯಂ ||

ಯೋ ವಾಜೀ ಬಲವಾನ್ಪೃತಾ ವೀರಾಣಾಂ ಶತಾನಿ ಸಹಸ್ರಾ ಸಹಸ್ರಾಣಿ ಚಾ ದರ್ದಿರತ್ ಅಭಿಮುಖ್ಯೇನ ದಾರಯತಿ ಸೋಽಯಮಿಂದ್ರಃ ಶತ್ರುಭಿರವೃತಃ ಪನ್ಯಃ ಸ್ತುತ್ಯೋ ಭವತಿ । ಯಜ್ವನೋ ವಿಧಿನೇಷ್ಟವತೋ ಯಜಮಾನಸ್ಯ ವೃಧೋ ವರ್ಧಯಿತಾ ಚ ಭವತಿ ॥

|| ಪ್ರತಿಪದಾರ್ಥ ||

**ಯಃ**— ಯಾವ ಇಂದ್ರನು । **ವಾಜೀ**— ಶಕ್ತಿವಂತನೂ । **ಶತಾ**— ನೂರು ಮಂದಿ ವೀರರನ್ನೂ । **ಸಹಸ್ರಾ**— ಸಾವಿರಾರು ಮಂದಿ ಯೋಧರನ್ನೂ । **ಆ ದರ್ದಿರತ್**— ಸುಲಭವಾಗಿ ಯುದ್ಧದಲ್ಲಿ ಸೀಳಿಹಾಕಬಲ್ಲನೋ । **ಇಂದ್ರಃ**— ಅಂತಹ ಇಂದ್ರನು । **ಅವೃತಃ**— ಶತ್ರುಗಳಿಂದ ಅಜೇಯನಾಗಿಯೂ । **ಪನ್ಯಃ**— ಸ್ತುತ್ಯನಾಗಿಯೂ । **ಯಜ್ವನಃ**— ಯಜ್ಞಮಾಡುವ ಯಜಮಾನನಿಂದ ವಿಧಿಪೂರ್ವಕವಾಗಿ ಆರಾಧಿಸಲ್ಪಡುವವನೂ ಆಗಿ । **ವೃಧಃ**— ಯಜಮಾನನನ್ನು ವೃದ್ಧಿಪಡಿಸುತ್ತಾನೆ.

|| ಭಾವಾರ್ಥ ||

ಇಂದ್ರನು ಅತ್ಯಂತ ಬಲಶಾಲಿಯು. ಯುದ್ಧದಲ್ಲಿ ಶತ್ರುಗಳಿಂದ ಸುತ್ತುವರಿಯಲ್ಪಡದೆ ತಾನು ಮಾತ್ರ ನೂರಾರು, ಸಾವಿರಾರು ವೀರರನ್ನೂ ಸುಲಭವಾಗಿ ಸೀಳಿಹಾಕಬಲ್ಲನು. ಇಂತಹ ಸ್ತುತ್ಯನಾದ ಇಂದ್ರನು ಯಜ್ಞಮಾಡುವ ಯಜಮಾನನಿಂದ ಸ್ತುತಿಸಲ್ಪಟ್ಟು ಅವನಿಗೆ ಅಭಿವೃದ್ಧಿಯನ್ನುಂಟುಮಾಡುತ್ತಾನೆ.

## English Translation.

The powerful Indra, the discomforter of hundreds and thousands, unchecked (by foes), is adorable; he who is the benefactor of the sacrificer.

|| ಸಂಹಿತಾಪಾಠಃ ||

ವಿ ಷೂ ಚರ ಸ್ವಧಾ ಅನು ಕೃಷ್ಟೀನಾಮನ್ವಾಹುವಃ ।

ಇಂದ್ರ ಪಿಬ ಸುತಾನಾಂ ॥ ೧೯ ॥

॥ ಪದಪಾಠಃ ॥

ವಿ । ಸು । ಚರ । ಸ್ವಧಾಃ । ಅನು । ಕೃಷ್ಟೀನಾಂ । ಅನು । ಆಽಹುವಃ ।

ಇಂದ್ರ । ಪಿಬ । ಸುತಾನಾಂ ॥ ೧೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಆಹುವ ಆಹ್ವಾತವ್ಯಸ್ತ್ವಂ ಕೃಷ್ಟೀನಾಂ ಮನುಷ್ಯಾಣಾಂ ಸ್ವಧಾ ಹವೀಂಷ್ಯನು ಸುಸುಷ್ಠು ವಿ ಚರ । ದ್ವಿತೀಯೋಽನು ಪೂರಣಃ । ಸುತಾನಾಮಭಿಷುತಾನ್ ಸೋಮಾಂಶ್ಚ ಪಿಬ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಆಹುವಃ—ಆಹ್ವಾನಿಸಲ್ಪಡುವ ನೀನು । ಕೃಷ್ಟೀನಾಂ—ಮನುಷ್ಯರು ಅರ್ಪಿಸುವ । ಸ್ವಧಾಃ ಅನು-ಹವಿಸ್ಸಿನ ಸಮೀಪಕ್ಕೆ । ಸು ವಿ ಚರ-ಹೋಗುತ್ತೀಯಲ್ಲವೇ । ಸುತಾನಾಂ—ಹಿಂಡಿ ಸಿದ್ಧಪಡಿಸಿದ ಸೋಮರಸಗಳನ್ನು । ಪಿಬ—ಪಾನಮಾಡು

॥ ಭಾವಾರ್ಥ ॥

ಎಲೈ ಇಂದ್ರನೇ, ಯಜ್ಞಾದಿಗಳಲ್ಲಿ ಆಹ್ವಾನಿಸಲ್ಪಡುವ ನೀನು ಮನುಷ್ಯರು ಅರ್ಪಿಸುವ ಹವಿಸ್ಸಿನ ಸಮೀಪಕ್ಕೆ ಭಕ್ಷಣಾರ್ಥವಾಗಿ ಹೋಗುತ್ತೀಯೆ. ಎಲೈ ಇಂದ್ರನೇ, ಹಿಂಡಿ ಸಿದ್ಧವಾಗಿರುವ ಸೋಮರಸಗಳನ್ನು ಪಾನಮಾಡು.

English Translation.

Indra, you are to be invoked of men, come to their offered viands, drink of (their) libations.

॥ ಸಂಹಿತಾಪಾಠಃ ॥

ಪಿಬ ಸ್ವಧೈನವಾನಾಮುತ ಯಸ್ತುಗ್ರ್ಯೇ ಸಚಾ ।

ಉತಾಯಮಿಂದ್ರ ಯಸ್ತವ ॥ ೨೦ ॥

॥ ಪದಪಾಠಃ ॥

ಪಿಬ । ಸ್ವಽಧೈನವಾನಾಂ । ಉತ । ಯಃ । ತುಗ್ರ್ಯೇ । ಸಚಾ ।

ಉತ । ಅಯಂ । ಇಂದ್ರ । ಯಃ । ತವ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ್ವಧೈನವಾನಾಂ ಸ್ವಧೈನವಾನ್ ಸ್ವಭೂತಪಯಸೋ ಧೇನೋಃ ಸಂಬಂಧಿನಃ ಸೋಮಾನ್ । ಧೇನ್ವಾ ಕ್ರೀತಾನಿತ್ಯರ್ಥಃ । ತಥಾ ಚ ಶ್ರೂಯತೇ । ಧೇನ್ವಾ ಕ್ರೀಣಾತೀತಿ । ಉತಾಪಿ ಚ

**ಯಃ ಸೋಮಸ್ತುಗ್ರ್ಯ ಉದಕೇ । ಬುಸಂ ತುಗ್ರ್ಯಮಿತ್ಯುದಕನಾಮಸು ಪಾಠಾತ್ । ಸಚಾ ಸಂಸ್ಪೃಷ್ಟಃ ತಮಪಿ ಸೋಮಂ ಪಿಬ । ಉತಾಪಿ ಚ ಯಃ ಸೋಮಸ್ತವ ತ್ವದೀಯಸ್ತ್ವಾಮುದ್ದಿಶ್ಯ ಗೃಹೀತಃ ಸೋಽಯಂ ತ್ವಯಾ ಪಾತವ್ಯ ಇತಿ ಶೇಷಃ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಸ್ವಧೈನವಾನಾಂ**—ಗೋವುಗಳನ್ನು ಕೊಟ್ಟು ನಿನಗಾಗಿ ಕೊಂಡುಕೊಂಡಿರುವುದೂ । **ಉತ**—ಮತ್ತು । **ಯಃ**—ಯಾವ ಸೋಮವು । **ತುಗ್ರ್ಯೇ ಸಚಾ**—ನೀರಿನಿಂದ ಮಿಶ್ರಿತವಾಗಿರುವುದೋ । **ಯಃ**—ಯಾವ ಸೋಮವು । **ತವ**—ನಿನಗಾಗಿಯೇ ಹಿಂಡಲ್ಪಟ್ಟಿರುವುದೋ । **ಅಯಂ**—ಅಂತಹ ಈ ಸೋಮವು ನಿನ್ನಿಂದ ಪಾನಮಾಡಲ್ಪಡಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಪಾನಾರ್ಥವಾಗಿ ಈ ಸೋಮಲತೆಗಳನ್ನು ಗೋವುಗಳನ್ನು ಕೊಟ್ಟು ಕೊಂಡುಕೊಂಡು, ಚೆನ್ನಾಗಿ ಹಿಂಡಿ ಅದಕ್ಕೆ ಉದಕವನ್ನು ಮಿಶ್ರಮಾಡಿ ಪಾನಮಾಡಲು ಸಿದ್ಧಪಡಿಸಲಾಗಿದೆ. ಅಂತಹ ಈ ಸೋಮವನ್ನು ಪಾನಮಾಡು.

## English Translation.

Drink of the (Soma) purchased by the milch cow, that (Soma) which is mixed with water, that which, Indra, is especially yours.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಗೋವುಗಳನ್ನು ಕೊಟ್ಟು ಸೋಮವನ್ನು ಕೊಂಡುಕೊಂಡಿರುವೆಯೆಂದು ಹೇಳಿದೆ. ಸೋಮಲತೆಗಳು ಕೆಲವು ನದೀತೀರಗಳಲ್ಲಿಯೂ ಎತ್ತರವಾದ ಪರ್ವತಪ್ರದೇಶಗಳಲ್ಲಿಯೂ ಬೆಳೆಯುವುದರಿಂದ ಅವುಗಳನ್ನು ಸುಲಭವಾಗಿ ಎಲ್ಲರೂ ತರಲು ಸಾಧ್ಯವಿಲ್ಲ. ಆದುದರಿಂದ ಬಹು ಶ್ರಮಪಟ್ಟು ಅವುಗಳನ್ನು ದೂರಪ್ರದೇಶಗಳಿಂದ ತಂದವರಿಂದ ಕೊಂಡುಕೊಂಡು ಯಜ್ಞಾದಿಗಳಲ್ಲಿ ಉಪಯೋಗಿಸುವುದು ರೂಢಿಗೆ ಬಂದಿದೆ. ಈ ರೀತಿ ಕೊಂಡುಕೊಳ್ಳುವುದಕ್ಕೆ ಸೋಮಕ್ರಯಣವೆಂದು ಹೆಸರು. ಇದು ಯಜ್ಞಾಂಗವಾದ ಒಂದು ಕರ್ಮವೆಂದೇ ಪರಿಗಣಿಸಲ್ಪಟ್ಟಿದೆ. ಸೋಮಲತೆಗಳನ್ನು ಕೊಂಡುಕೊಳ್ಳುವಾಗ ಅವಕ್ಕೆ ಪ್ರತಿಫಲವಾಗಿ ಅನೇಕ ವಿಧವಾದ ವಸ್ತುಗಳನ್ನು ಕೊಡುವುದು ರೂಢಿಯು. ಆ ವಸ್ತುಗಳು ಯಾವುವು ಎಂಬ ವಿಷಯದಲ್ಲಿ ತೈತ್ತಿರೀಯಸಂಹಿತೆಯ ವಾಕ್ಯವು ವಿಶದವಾಗಿ ತಿಳಿಸುತ್ತದೆ.

**ಅಜಯಾ ಕ್ರೀಣಾತಿ ಸತಪಸಮೇವೈನಂ ಕ್ರೀಣಾತಿ ಹಿರಣ್ಯೇನ ಕ್ರೀಣಾತಿ ಸಶುಕ್ರಮೇವೈನಂ ಕ್ರೀಣಾತಿ ಧೇನ್ವಾ ಕ್ರೀಣಾತಿ ಸಾಶಿರಮೇವೈನಂ ಕ್ರೀಣಾತ್ಯೃಷಭೇಣ ಕ್ರೀಣಾತಿ ಸೇಂದ್ರಮೇವೈನಂ ಕ್ರೀಣಾತ್ಯನಡುಹಾ ಕ್ರೀಣಾತಿ ವಹ್ನಿರ್ವಾ ಅನಡ್ವಾನ್ ವಹ್ನಿನೈವ ವಹ್ನಿ ಯಜ್ಞಸ್ಯ ಕ್ರೀಣಾತಿ ಮಿಥುನಾಭ್ಯಾಂ ಕ್ರೀಣಾತಿ ಮಿಥುನಸ್ಯಾವರುಧ್ಯೈ ವಾಸಸಾ ಕ್ರೀಣಾತಿ ಸರ್ವದೇವತ್ಯಂ ವೈ ವಾಸಃ ಸರ್ವಾಭ್ಯ ಏವೈನಂ ದೇವತಾಭ್ಯಃ ಕ್ರೀಣಾತಿ ದಶ ಸಂಪದ್ಯಂತೇ ॥**

(ತೈ. ಸಂ ೬ ೧-೧೦-೧, ೨)

ಆಡು, ತಪಸ್ಸು, ಸುವರ್ಣ, ಶುಕ್ರ, ಕರೆಯುವ ಹಸು, ಹಾಲು, ಹೋರಿ, ಎತ್ತು, ಒಂದು ಜತೆ, ವಸ್ತ್ರ ಎಂದು ಹತ್ತು ವಿಧವಾದ ದ್ರವ್ಯಗಳಲ್ಲಿ ಯಾವುದಾದರೂ ಒಂದನ್ನು ಕೊಟ್ಟು ಕೊಂಡುಕೊಳ್ಳಬಹುದೆಂದು ಹೇಳಿದೆ. ಇವುಗಳಲ್ಲಿ ಧೇನು ಎಂದರೆ, ಹಾಲನ್ನು ಕರೆಯುವ ಹಸುವನ್ನು ಕೊಟ್ಟು ಕೊಂಡುಕೊಂಡ ಸೋಮವನ್ನು ಇಂದ್ರನಿಗಾಗಿ ಸಿದ್ಧಪಡಿಸಿದೆಯೆಂದು ಪ್ರಕೃತ ಋಕ್ಕಿನಲ್ಲಿ ಹೇಳಿದೆ.

॥ ಸಂಹಿತಾಪಾಠಃ ॥

ಅತೀಹಿ ಮನ್ಯುಷಾವಿಣಂ ಸುಷುವಾಂಸಮುಪಾರಣೇ ।
ಇಮಂ ರಾತಂ ಸುತಂ ಪಿಬ ॥ ೨೧ ॥

॥ ಪದಪಾಠಃ ॥

ಅತಿ । ಇಹಿ । ಮನ್ಯುऽಸಾವಿನಂ । ಸುಸುऽವಾಂಸಂ । ಉಪऽಅರಣೇ ।
ಇಮಂ । ರಾತಂ । ಸುತಂ । ಪಿಬ ॥ ೨೧ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಮನ್ಯುಷಾವಿಣಂ ಕ್ರೋಧೇನ ಸೋಮಂ ಸುನ್ವಂತಮತೀಹಿ । ಅತಿಗಚ್ಛ । ತಥೋಪಾರಣೇ । ಬ್ರಾಹ್ಮಣಾ ಉಪೇತ್ಯ ಯಸ್ಮಿನ್ದೇಶೇ ನ ರಮಂತೇ ಸ ಉಪಾರಣಃ । ತಸ್ಮಿನ್ದೇಶೇ ಸುಷುವಾಂಸಂ ಸುನ್ವಂತಮತೀಹಿ । ಇಮಂ ರಾತಂ ಬ್ರಾಹ್ಮಣೋಪದ್ರವರಹಿತೇ ದೇಶೇऽಸ್ಮಾಭಿರ್ದತ್ತಮಿಮಂ ಸುತಂ ಸೋಮಂ ಪಿಬ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಮನ್ಯುಷಾವಿಣಂ**—ಕೋಪಾವಿಷ್ಟನಾಗಿ ಸೋಮವನ್ನು ಹಿಂಡುವವನು ಸಿದ್ಧಪಡಿಸುವ ಸೋಮಪಾನಕ್ಕಾಗಿ । **ಅತಿ ಇಹಿ**—ಹೋಗಬೇಡ । **ಉಪಾರಣೇ**—ಬ್ರಾಹ್ಮಣರಿಲ್ಲದ ಪ್ರದೇಶದಲ್ಲಿ । **ಸುಷುವಾಂಸಂ**—ಹಿಂಡುವವನು ಸಿದ್ಧಪಡಿಸುವ ಸೋಮಪಾನಕ್ಕಾಗಿಯೂ ಹೋಗಬೇಡ (ಆದರೆ) । **ಇಮಂ ರಾತಂ**—ಬ್ರಾಹ್ಮಣೋಪದ್ರವರಹಿತವಾದ ಈ ಪ್ರದೇಶದಲ್ಲಿ ನಮ್ಮಿಂದ ಸಿದ್ಧಪಡಿಸಲ್ಪಟ್ಟ । **ಸುತಂ**—ಈ ಸೋಮರಸವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವಾಗಲೂ ಕ್ರೋಧಾವಿಷ್ಟನಾಗಿರುವವನು ಹಿಂಡುವ ಸೋಮರಸವನ್ನು ಪಾನಮಾಡಲು ಅಲ್ಲಿಗೆ ಹೋಗಬೇಡ. ಮತ್ತು ಬ್ರಾಹ್ಮಣರಿಲ್ಲದ ಪ್ರದೇಶದಲ್ಲಿ ಎಂದರೆ ಯಜ್ಞಾನುಷ್ಠಾನರಹಿತವಾದ ಪ್ರದೇಶದಲ್ಲಿ ಹಿಂಡುವ ಸೋಮವನ್ನು ಪಾನಮಾಡಬೇಡ. ಆದರೆ ನಾವು ಸಿದ್ಧಪಡಿಸಿರುವ ಈ ಸೋಮವು ಉತ್ತಮಪ್ರದೇಶದಲ್ಲಿ ಬ್ರಾಹ್ಮಣರಿಂದ ಮಂತ್ರಪೂತವಾಗಿ ಹಿಂಡಲ್ಪಟ್ಟು ಸಿದ್ಧವಾಗಿದೆ. ಇಂತಹ ಸೋಮರಸವನ್ನು ಪಾನಮಾಡು.

## English Translation.

Indra, pass by the man who offers the libation in anger, him who pours it out upon a spot disapproved of ; drink this presented Soma.

|| ಸಂಹಿತಾಪಾಠಃ ||

ಇಹಿ ತಿಸ್ರಃ ಪರಾವತ ಇಹಿ ಪಂಚ ಜನಾಁ ಅತಿ ।
ಧೇನಾ ಇಂದ್ರಾವಚಾಕಶತ್ ॥ ೨೨ ॥

। ಪದಪಾಠಃ ।

ಇಹಿ । ತಿಸ್ರಃ । ಪರಾಽವತಃ । ಇಹಿ । ಪಂಚ । ಜನಾನ್ । ಅತಿ ।
ಧೇನಾಃ । ಇಂದ್ರ । ಅವಽಚಾಕಶತ್ ॥ ೨೨ ॥

। ಸಾಯಣಭಾಷ್ಯಂ ।

ಹೇ ಇಂದ್ರ ಧೇನಾ ಅಸ್ಮದೀಯಾಃ ಸ್ತುತೀರವಚಾಕಶದ್ಭ್ಯೋಽಪಶ್ಯತ್ ಸ ತ್ವಂ ಪಾರಾವತೋ ದೂರಾತ್ । ಆರೇ ಪರಾವತ ಇತಿ ದೂರನಾಮಸು ಪಾಠಾತ್ । ತಿಸ್ರೋಽಗ್ರಪೃಷ್ಠಪಾರ್ಶ್ವದಿಕ ಇಹಿ । ಗಚ್ಛ । ಅನೇನಾಗ್ರತಃ ಪೃಷ್ಠತಃ ಪಾರ್ಶ್ವತಶ್ಚೇಂದ್ರಸ್ಯಾಗಮನಮಾಶಾಸ್ತೇ । ಅಪಿ ಚ ಪಂಚ ಜನಾನ್ ಮನುಷ್ಯಾನತೀಹಿ । ಅತಿಗಚ್ಛ । ಯದ್ವಾ । ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸಿ ಚ ಪಂಚ ಜನಾಃ । ತಾನತೀಹೀತ್ಯರ್ಥಃ । ತಥಾ ಚ ಯಾಸ್ಕಃ । ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ । ನಿ. ೩-೮ । ಇತಿ ॥

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಧೇನಾಃ**—ನಮ್ಮ ಸ್ತುತಿಗಳನ್ನು । **ಅವಚಾಕಶತ್**—ನೋಡಿ ತಿಳಿಯುವ ನೀನು । **ಪರಾವತಃ**—ದೂರಪ್ರದೇಶದಿಂದ । **ತಿಸ್ರಃ**—ಮೂರು ಕಡೆಗಳಿಂದ ಎಂದರೆ ಮುಂದುಗಡೆ ಹಿಂದುಗಡೆ ಮತ್ತು ಪಾರ್ಶ್ವಪ್ರದೇಶಗಳಿಂದ । **ಇಹಿ**—ಇಲ್ಲಿಗೆ ಬಾ । **ಪಂಚ ಜನಾನ್**—ಗಂಧರ್ವಾದಿ ಪಂಚಜನರನ್ನೂ **ಅತಿ**—ಅತಿಕ್ರಮಿಸಿ । **ಇಹಿ**— ಇಲ್ಲಿಗೆ ಬಾ.

|| ಭಾವಾರ್ಥ ||

ಎಲೈ ಇಂದ್ರನೇ, ನಾವು ಮಾಡುವ ಸ್ತುತಿವಾಕ್ಯಗಳನ್ನು ದೂರದಿಂದಲೇ ನೋಡಿ ತಿಳಿಯುವ ನೀನು ದೂರ ಪ್ರದೇಶದಿಂದ ನಮ್ಮ ಸಮೀಪಕ್ಕೆ ಮುಂದುಗಡೆಯಿಂದಲೂ, ಹಿಂದುಗಡೆಯಿಂದಲೂ ಅಥವಾ ಪಾರ್ಶ್ವಗಳಿಂದಲೂ ಬಾ. ಅಥವಾ ಮಾರ್ಗಮಧ್ಯದಲ್ಲಿರುವ ಗಂಧರ್ವಾದಿಪಂಚಜನರನ್ನೂ ಅಥವಾ ಐದು ಜನಾಂಗದ ಜನರನ್ನೂ ಲಕ್ಷಿಸದೆ ಅವರನ್ನು ಅತಿಕ್ರಮಿಸಿ ನಮ್ಮ ಸಮೀಪಕ್ಕೆ ಬಾ.

## English Translation.

Indra, you have beheld our praises; proceed in three directions from a distanee, pass beyond the five orders of beings.

|| ಸಂಹಿತಾಪಾಠಃ ||

ಸೂರ್ಯೋ ರಶ್ಮಿಂ ಯಥಾ ಸೃಜಾ ತ್ವಾ ಯಚ್ಛಂತು ಮೇ ಗಿರಃ ।
ನಿಮ್ನಮಾಪೋ ನ ಸಧ್ರ್ಯಕ್ ॥ ೨೩ ॥

|| ಪದಪಾಠಃ ||

ಸೂರ್ಯಃ । ರಶ್ಮಿಂ । ಯಥಾ । ಸೃಜ । ಆ । ತ್ವಾ । ಯಚ್ಛಂತು । ಮೇ । ಗಿರಃ ।
ನಿಮ್ನಂ । ಆಪಃ । ನ । ಸಧ್ರ್ಯಕ್ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸೂರ್ಯೋ ಯಥಾ ರಶ್ಮಿಂ ರಶ್ಮೀನ್ಕಿರಣಾನಶ್ವಪ್ರಗ್ರಹಾನ್ವಾ ವಿಸೃಜತಿ ತಥಾ ಮಹ್ಯಂ ಧನಂ ವಿಸೃಜ । ಅಪಿ ಚ ಮೇ ಮದೀಯಾ ಗಿರಃ ಸ್ತುತಯಃ ಸಧ್ರ್ಯಕ್ ಸಹ ತ್ವಾಮಾ ಯಚ್ಛಂತು । ನಿಮ್ನಮಾಪೋ ನ । ಯಥಾ ನಿಮ್ನದೇಶಮಾಪಃ ಸಹ ಪರಿಗೃಹ್ಣಂತಿ ತದ್ವದಿತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಸೂರ್ಯಃ**—ಸೂರ್ಯನು । **ಯಥಾ**—ಯಾವ ಪ್ರಕಾರವಾಗಿ । **ರಶ್ಮಿಂ**—ತನ್ನ ಕಿರಣಗಳನ್ನು ಸುತ್ತಲೂ ಹರಡುವನೋ ಅದರಂತೆ । **ಸೃಜ**—ಧನಾದಿಗಳನ್ನು ನನಗೆ ಕೊಡು । **ನಿಮ್ನಂ**—ತಗ್ಗಾದ ಪ್ರದೇಶದಲ್ಲಿ । **ಆಪೋ ನ**—ನೀರು ಹರಿದು ಹೋಗಿ ನಿಲ್ಲುವಂತೆ । **ಮೇ**—ನನ್ನ । **ಗಿರಃ**—ಸ್ತುತಿವಾಕ್ಯಗಳು । **ಸಧ್ರ್ಯಕ್**—ಒಟ್ಟಿಗೆ ಒಂದಾಗಿ ಸೇರಿ । **ತ್ವಾ**—ನಿನ್ನನ್ನು । **ಯಚ್ಛಂತು**—ಸೇರಿಕೊಳ್ಳಲಿ.

। ಭಾವಾರ್ಥ ।

ಎಲೈ ಇಂದ್ರನೇ, ಸೂರ್ಯನು ತನ್ನ ಕಿರಣಗಳನ್ನು ತನ್ನ ಸುತ್ತಲೂ ಪ್ರಸರಿಸುವಂತೆ ನೀನು ಧನಾದಿಗಳನ್ನು ನನ್ನ ಬಳಿಗೆ ಬಂದು ಸೇರುವಂತೆ ಮಾಡು. ಹರಿಯುವ ನೀರು ತಗ್ಗಾದ ಪ್ರದೇಶದಲ್ಲಿ ಹೋಗಿ ನಿಲ್ಲುವಂತೆ ನಾನು ಮಾಡುವ ಸ್ತುತಿವಾಕ್ಯಗಳು ನಿನ್ನ ಬಳಿಗೆ ಹೋಗಿ ಸೇರುವಂತಾಗಲಿ.

## English Translation.

As the sun disperses his rays, so you disperse (wealth upon me): may my praises rapidly draw you, as waters (reach) the low ground.

‖ ಸಂಹಿತಾಪಾಠಃ ‖

ಅಧ್ವರ್ಯ॒ವಾ ತು ಹಿ ಷಿ॒ಂಚ ಸೋಮಂ॑ ವೀ॒ರಾಯ॑ ಶಿ॒ಪ್ರಿಣೇ॑ ।

ಭರಾ॑ ಸು॒ತಸ್ಯ॑ ಪೀ॒ತಯೇ॑ ॥ ೨೪ ॥

‖ ಪದಪಾಠಃ ‖

ಅಧ್ವ॑ರ್ಯೋ॒ ಇತಿ॑ । ಆ । ತು । ಹಿ । ಸಿ॒ಂಚ । ಸೋಮ॑ಮ್ । ವೀ॒ರಾಯ॑ । ಶಿ॒ಪ್ರಿಣೇ॑ ।

ಭರ॑ । ಸು॒ತಸ್ಯ॑ । ಪೀ॒ತಯೇ॑ ॥ ೨೪ ॥

‖ ಸಾಯಣಭಾಷ್ಯಂ ‖

ಹೇ ಅಧ್ವರ್ಯವಃ ಶಿಪ್ರಿಣೇ ಹನೂಮತೇ ವೀರಾಯ ಶೂರಾಯೇಂದ್ರಾಯ ಸೋಮಂ ತು ಹಿ ಕ್ಷಿಪ್ರಮೇವಾ ಸಿಂಚ । ಸುತಸ್ಯ ಸುತಂ ಸೋಮಂ ಪೀತಯೇ ಪಾನಾಯ ಚ ಭರ । ಆಹರ ಚ ॥

‖ ಪ್ರತಿಪದಾರ್ಥ ‖

**ಅಧ್ವರ್ಯೋ**—ಎಲೈ ಅಧ್ವರ್ಯುವೇ । **ಶಿಪ್ರಿಣೇ**—ಆಕರ್ಷಕವಾದ ಕೆನ್ನೆಯಿಂದ ಶೋಭಿಸುವ । **ವೀರಾಯ**—ಶೂರನಾದ ಇಂದ್ರನಿಗಾಗಿ । **ಸೋಮಂ ತು**-ಸೋಮರಸವನ್ನು । ಹಿ-ಬೇಗನೆ । **ಆ ಸಿಂಚ**—ಹಿಂಡಿ ಸಿದ್ಧಪಡಿಸು । **ಸುತಸ್ಯ**—ಹಿಂಡಿದ ಸೋಮರಸವನ್ನು । **ಪೀತಯೇ**—ಇಂದ್ರನ ಪಾನಾರ್ಥವಾಗಿ । **ಭರ**—ತೆಗೆದುಕೊಂಡು ಬಾ.

‖ ಭಾವಾರ್ಥ ‖

ಎಲೈ ಅಧ್ವರ್ಯುವೇ, ಆಕರ್ಷಕವಾದ ಕೆನ್ನೆಯಿಂದ ಶೋಭಿಸುವ ಶೂರನಾದ ಇಂದ್ರನಿಗಾಗಿ ಸೋಮರಸವನ್ನು ಬೇಗನೆ ಸಿದ್ಧಪಡಿಸು. ಮತ್ತು ಹಿಂಡಿದ ಆ ಸೋಮರಸವನ್ನು ಇಂದ್ರನ ಪಾನಾರ್ಥವಾಗಿ ತೆಗೆದುಕೊಂಡು ಬಾ.

English Translation.

Adhwaryu, quickly pour forth the soma to the hero Indra with the goodly jaws; bring the Soma for his drinking.

‖ ಸಂಹಿತಾಪಾಠಃ ‖

ಯ ಉ॒ದ್ನಃ ಫ॑ಲಿ॒ಗಂ ಭಿ॒ನನ್ನ್ಯ॑ೢ॒ಕ್ಸಿಂಧೂಁ॑ರ॒ವಾಸೃ॑ಜತ್ ।

ಯೋ ಗೋಷು॑ ಪ॒ಕ್ವಂ ಧಾ॒ರಯ॑ತ್ ॥ ೨೫ ॥

॥ ಪದಪಾಠಃ ॥

ಯಃ । ಉದ್ನಃ । ಫಲಿಽಗಂ । ಭಿನತ್ । ನ್ಯಕ್ । ಸಿಂಧೂನ್ । ಅವಽಅಸೃಜತ್ ।

ಯಃ । ಗೋಷು । ಪಕ್ವಂ । ಧಾರಯತ್ । ೨೫ ॥

॥ ಸಾಯಣಭಾಷ್ಯಂ ॥

ಹೇ ಉದ್ನ ಉದಕಾರ್ಥಂ ಫಲಿಗಂ ಮೇಘಂ । ರೈವತಃ ಫಲಿಗ ಇತಿ ಮೇಘನಾಮಸು ಪಾಠಾತ್ । ಭಿನತ್ ಅಭಿನತ್ । ಸಿಂಧೂನಪಶ್ಚಾಂತರಿಕ್ಷಾನ್ನ್ಯಗವಾಗವಾಸೃಜತ್ । ಯಶ್ಚ ಗೋಷು ಪಕ್ವಂ ಪಯೋ ಧಾರಯತ್ ಅಧಾರಯತ್ । ಸ ಇಂದ್ರ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಉದ್ನಃ**—ಉದಕಾರ್ಥವಾಗಿ । **ಫಲಿಗಂ**—ಮೇಘವನ್ನು । **ಭಿನತ್**—ಸೀಳಿಹಾಕಿದನೋ । **ಸಿಂಧೂನ್**—ಮೇಘದಲ್ಲಿದ್ದ ಉದಕಗಳನ್ನು । **ನ್ಯಕ್**—ಅಂತರಿಕ್ಷದಿಂದ ಕೆಳಮುಖವಾಗಿ । **ಅವಾಸೃಜತ್**—ಸುರಿಯುವಂತೆ ಮಾಡಿದನೋ । **ಯಃ**—ಯಾವ ಇಂದ್ರನು । **ಗೋಷು**—ಗೋವುಗಳಲ್ಲಿ । **ಪಕ್ವಂ**—ಸಿದ್ಧವಾದ ಹಾಲನ್ನು । **ಧಾರಯತ್**—ಇರಿಸಿದನೋ ಅಂತಹ ಇಂದ್ರನ ಪಾನಾರ್ಥವಾಗಿ ಸೋಮರಸವನ್ನು ತೆಗೆದುಕೊಂಡು ಬಾ.

॥ ಭಾವಾರ್ಥ ॥

ವೃಷ್ಟಿಯನ್ನು ಸುರಿಸುವುದಕ್ಕಾಗಿ ಯಾವ ಇಂದ್ರನು ಮೇಘವನ್ನು ಸೀಳಿಹಾಕಿದನೋ, ಯಾವ ಇಂದ್ರನು ಅಂತರಿಕ್ಷದಲ್ಲಿದ್ದ ಆ ಉದಕವನ್ನು ಕೆಳಮುಖವಾಗಿ ವೃಷ್ಟಿರೂಪದಲ್ಲಿ ಸುರಿಯುವಂತೆ ಮಾಡಿದನೋ, ಯಾವ ಇಂದ್ರನು ಗೋವುಗಳಲ್ಲಿ ಹಾಲನ್ನು ಸ್ಥಾಪಿಸಿದನೋ ಅಂತಹ ಮಹತ್ತ್ವವುಳ್ಳ ಇಂದ್ರನ ಪಾನಾರ್ಥವಾಗಿ, ಎಲೈ ಅಧ್ವರ್ಯುವೇ, ಸೋಮರಸವನ್ನು ತೆಗೆದುಕೊಂಡು ಬಾ.

English Translation.

Who clove the cloud for (the issue of) the rain, who sent down the waters, who placed the mature (milk) in the cattle.

॥ ಸಂಹಿತಾಪಾಠಃ ॥

ಅಹನ್ವೃತ್ರಮೃಚೀಷಮ ಔರ್ಣವಾಭಮಹೀಶುವಂ ।

ಹಿಮೇನಾವಿಧ್ಯದರ್ಬುದಂ ॥ ೨೬ ॥

॥ ಪದಪಾಠಃ ॥

**ಅಹನ್ । ವೃತ್ರಂ । ಋಚೀಷಮಃ । ಔರ್ಣ౽ವಾಭಂ । ಅಹೀಶುವಂ ।**

**ಹಿಮೇನ । ಅವಿಧ್ಯತ್ । ಅರ್ಬುದಂ ॥ ೨೬ ॥**

॥ ಸಾಯಣಭಾಷ್ಯಂ ॥

**ಋಚೀಷಮ ಋಚಾ ದೀಪ್ತ್ಯಾ ಸಮ ಇಂದ್ರೋ ವೃತ್ರಂ ವೃತ್ರನಾಮಕಂ ಶತ್ರುಮಹನ್ । ಜಘಾನ । ತಥೌರ್ಣವಾಭಮೌರ್ಣವಾಭನಾಮಕಮಹೀಶುವಮಹೀಶುವನಾಮಕಂ ಚ ಶತ್ರುಮಹನ್ । ತಥಾ ಹಿಮೇನ ತುಷಾರೇಣೋದಕೇನ ವಾರ್ಬುದಂ ಮೇಘಮವಿಧ್ಯತ್ ॥**

॥ ಪ್ರತಿಪದಾರ್ಥ ॥

**ಋಚೀಷಮಃ**—ಪ್ರಕಾಶಮಾನನಾದ ಇಂದ್ರನು । **ವೃತ್ರಂ**—ವೃತ್ರನೆಂಬ ಅಸುರನನ್ನು । **ಅಹನ್**—ಕೊಂದನು (ಮತ್ತು) । **ಔರ್ಣವಾಭಂ**—ಔರ್ಣವಾಭನೆಂಬ ಅಸುರನನ್ನೂ । **ಅಹೀಶುವಂ**—ಅಹೀಶುವನೆಂಬ ಅಸುರನನ್ನೂ ಕೊಂದನು । **ಅರ್ಬುದಂ**—ಮೇಘವನ್ನು । **ಹಿಮೇನ**—ಶೀತಳೋದಕದಿಂದ ಅಥವಾ ಹಿಮದಿಂದ । **ಅವಿಧ್ಯತ್**—ಛಿದ್ರಮಾಡಿದನು.

॥ ಭಾವಾರ್ಥ ॥

ಅತ್ಯಂತ ಪ್ರಕಾಶಮಾನವಾದ ಶರೀರವುಳ್ಳ ಇಂದ್ರನು ವೃತ್ರನೆಂಬ ಅಸುರನನ್ನೂ, ಔರ್ಣವಾಭ, ಅಹೀಶುವ ಎಂಬ ಅಸುರರನ್ನೂ ಕೊಂದನು. ಮತ್ತು ಹಿಮದಿಂದ ಮೇಘವನ್ನು ಛಿದ್ರವಾಗುವಂತೆ ಭೇದಿಸಿದನು.

English Translation.

The brilliant Indra slew Vritra, Aurnavabha, Ahishuva; he smote Arbuda with frost.

॥ ಸಂಹಿತಾಪಾಠಃ ॥

ಪ್ರ ವ ಉಗ್ರಾಯ ನಿಷ್ಟುರೇ౽ಷಾಳ್ಹಾಯ ಪ್ರಸಕ್ಷಿಣೇ ।

ದೇವತ್ತಂ ಬ್ರಹ್ಮ ಗಾಯತ ॥ ೨೭ ॥

॥ ಪದಪಾಠಃ ॥

**ಪ್ರ । ವಃ । ಉಗ್ರಾಯ । ನಿಃ౽ತುರೇ । ಅಷಾಳ್ಹಾಯ । ಪ್ರ౽ಸಕ್ಷಿಣೇ ।**

**ದೇವತ್ತಂ । ಬ್ರಹ್ಮ । ಗಾಯತ ॥ ೨೭ ॥**

॥ ಸಾಯಣಭಾಷ್ಯಂ ॥

ಹೇ ಉದ್ಗಾತಾರಃ ವೋ ಯೂಯಮುಗ್ರಾಯೋದ್ಗೂರ್ಣಾಯ ನಿಷ್ಷುರೇ ಶತ್ರೂನ್ನಿಸ್ತರತೇಽಷಾಳ್ಹಾಯ ಶತ್ರೂಣಾಮಭಿಭವಿತ್ರೇ ಪ್ರಸಕ್ಷಿಣೇ ಪ್ರಸಹನಶೀಲಾಯೇಂದ್ರಾಯ ದೇವತ್ತಂ ದೇವಪ್ರಸಾದಲಬ್ಧಂ ಬ್ರಹ್ಮ ಸ್ತೋತ್ರಂ ಪ್ರ ಗಾಯತ ॥

॥ ಪ್ರತಿಪದಾರ್ಥ ॥

(ಎಲೈ ಸಾಮಗಾನಮಾಡುವ ಉದ್ಗಾತೃಗಳೇ) **ವಃ**-ನೀವು । **ಉಗ್ರಾಯ**-ಭಯಂಕರನೂ । **ನಿಷ್ಷುರೇ**-ಶತ್ರುಗಳನ್ನು ನಿರ್ಲಕ್ಷಿಸುವವನೂ । **ಅಷಾಳ್ಹಾಯ**—ಶತ್ರುಗಳನ್ನು ಸೋಲಿಸುವವನೂ । **ಪ್ರಸಕ್ಷಿಣೇ**—ಯುದ್ಧದಲ್ಲಿ ಶತ್ರುಗಳ ಹಿಂಸೆಯನ್ನು ಸಹಿಸಲು ಸಮರ್ಥನಾದವನೂ ಆದ ಇಂದ್ರನನ್ನುದ್ದೇಶಿಸಿ । **ದೇವತ್ತಂ**—ದೇವತೆಗಳ ಅನುಗ್ರಹದಿಂದ ಲಬ್ಧವಾದ । **ಬ್ರಹ್ಮ**—ಸ್ತೋತ್ರವನ್ನು । **ಪ್ರ ಗಾಯತ**—ಗಾನಪೂರ್ವಕವಾಗಿ ಪಠಿಸಿ.

॥ ಭಾವಾರ್ಥ ॥

ಎಲೈ ಸಾಮಗಾನಮಾಡುವ ಉದ್ಗಾತೃನಾಮಕ ಋತ್ವಿಕ್ಕುಗಳೇ, ಶತ್ರುಗಳಿಗೆ ಭಯಂಕರನಾದವನೂ, ಯುದ್ಧಾದಿಗಳಲ್ಲಿ ಶತ್ರುಗಳನ್ನು ನಿರ್ಲಕ್ಷಿಸಿ ಅವರನ್ನು ಸೋಲಿಸುವವನೂ, ಅವರ ಹಿಂಸೆಯನ್ನು ಸಹಿಸಲು ಸಮರ್ಥನಾದವನೂ ಆದ ಇಂದ್ರನನ್ನುದ್ದೇಶಿಸಿ ದೇವತೆಗಳ ಅನುಗ್ರಹದಿಂದ ಪ್ರಾಪ್ತವಾದ ಸಾಮಮಂತ್ರಗಳನ್ನೂ (ಸ್ತೋತ್ರಗಳನ್ನೂ) ಗಾನಮಾಡಿ ಪಠಿಸಿರಿ.

English Translation.

Sing aloud (priests) to the fierce, Victorious (Indra) the overpowerer, the subduer (of foes), the praise inspired by the gods.

॥ ಸಂಹಿತಾಪಾಠಃ ॥

ಯೋ ವಿಶ್ವಾನ್ಯಭಿ ವ್ರತಾ ಸೋಮಸ್ಯ ಮದೇ ಅಂಧಸಃ ।

ಇಂದ್ರೋ ದೇವೇಷು ಚೇತತಿ ॥ ೨೮ ॥

॥ ಪದಪಾಠಃ ॥

ಯಃ । ವಿಶ್ವಾನಿ । ಅಭಿ । ವ್ರತಾ । ಸೋಮಸ್ಯ । ಮದೇ । ಅಂಧಸಃ ।

ಇಂದ್ರಃ । ದೇವೇಷು । ಚೇತತಿ ॥ ೨೮ ॥

|| ಸಾಯಣಭಾಷ್ಯಂ ||

**ಅಂಧಸೋಽದ್ಯಮಾನಸ್ಯ ಸೋಮಸ್ಯ ಮದೇ ಸಂಜಾತೇ ವಿಶ್ವಾನಿ ಸರ್ವಾಣಿ ವ್ರತಾ ವ್ರತಾನಿ ಕರ್ಮಾಣಿ ಯ ಇಂದ್ರೋ ದೇವೇಷ್ವಭಿ ಚೇತತಿ ಜ್ಞಾಪಯತಿ ತಸ್ಮಾ ಇಂದ್ರಾಯ ದೇವತ್ತಂ ಬೃಹ್ಮ ಗಾಯತೇತ್ಯರ್ಥಃ ||**

|| ಪ್ರತಿಪದಾರ್ಥ ||

**ಅಂಧಸಃ**—ಭಕ್ಷಣಯೋಗ್ಯವಾದ (ಪಾನಯೋಗ್ಯವಾದ) | **ಸೋಮಸ್ಯ**—ಸೋಮರಸದ | **ಮದೇ**—ಹರ್ಷವುಂಟಾದಾಗ | **ಯಃ**—ಯಾವ ಇಂದ್ರನು | **ವಿಶ್ವಾನಿ**—ಸಮಸ್ತವಾದ | **ವ್ರತಾ**—ಸಾಹಸಕಾರ್ಯಗಳನ್ನು | **ದೇವೇಷು**—ದೇವತೆಗಳಲ್ಲಿ | **ಅಭಿ ಚೇತತಿ**—ಪ್ರಕಟಿಸುವನೋ ಅಂತಹ ಇಂದ್ರನನ್ನುದ್ದೇಶಿಸಿ ಸಾಮಗಾನಮಾಡಿರಿ.

|| ಭಾವಾರ್ಥ ||

ಎಲೈ ಉದ್ಗಾತೃಗಳೇ, ಪಾನಯೋಗ್ಯವಾದ ಸೋಮರಸದಿಂದ ಇಂದ್ರನಿಗೆ ಹರ್ಷವುಂಟಾದಾಗ ಆ ಇಂದ್ರನು ಅನೇಕ ಸಾಹಕೃತ್ಯಗಳನ್ನು ದೇವತೆಗಳಿಗೆ ತಿಳಿಯುವಂತೆ ಮಾಡುವನು. ಅಂತಹ ಇಂದ್ರನನ್ನುದ್ದೇಶಿಸಿ ಸ್ತೋತ್ರರೂಪವಾದ ಸಾಮಮಂತ್ರಗಳನ್ನು ಗಾನಮಾಡಿ ಸ್ತುತಿಸಿರಿ.

## English Translation.

Indra, who, in the exhilaration of the quaffed Soma, makes known among the gods all pious rites.

|| ಸಂಹಿತಾಪಾಠಃ ||

ಇಹ ತ್ವಾ ಸಧಮಾದ್ಯಾ ಹರೀ ಹಿರಣ್ಯಕೇಶ್ಯಾ |
ವೋಳ್ಹಾಮಭಿ ಪ್ರಯೋ ಹಿತಂ || ೨೯ ||

|| ಪದಪಾಠಃ ||

**ಇಹ | ತ್ವಾ | ಸಧಽಮಾದ್ಯಾ | ಹರೀ ಇತಿ | ಹಿರಣ್ಯಽಕೇಶ್ಯಾ |**
**ವೋಳ್ಹಾಂ | ಅಭಿ | ಪ್ರಯಃ | ಹಿತಂ || ೨೯ ||**

|| ಸಾಯಣಭಾಷ್ಯಂ ||

**ಇಹ ಯಜ್ಞೇ ತ್ವಾ ತೌ ಪ್ರಸಿದ್ಧೌ ಸಧಮಾದ್ಯಾ ಸಹ ಮಾದ್ಯಂತೌ ಹಿರಣ್ಯಕೇಶ್ಯಾ ಹಿರಣ್ಯಕೇಶೌ ಹರೀ ಅಶ್ವೌ ಹಿತಂ ಹಿತಕರಂ ಪ್ರಯಃ ಸೋಮರೂಪಮನ್ನಮಭ್ಯಭಿಲಕ್ಷ್ಯ ವೋಳ್ಹಾಂ | ಇಂದ್ರಂ ವಹತಾಂ | ಪ್ರಾಪಯತಾಮಿತಿ ||**

|| ಪ್ರತಿಪದಾರ್ಥ ||

**ಇಹ**- ಈ ಯಜ್ಞದಲ್ಲಿ | **ತ್ಯಾ**—ಪ್ರಸಿದ್ಧವಾದವೂ | **ಸಧಮಾದ್ಯಾ**—ಯಾವಾಗಲೂ ಜತೆಯಲ್ಲಿಯೇ ಇದ್ದು ಸಂತೋಷಪಡುತ್ತಿರುವವೂ | **ಹಿರಣ್ಯಕೇಶ್ಯಾ**—ಸುವರ್ಣದಂತೆ ಥಳಥಳಿಸುವ ಕೇಶಗಳಿಂದ ಪ್ರಕಾಶಿಸುತ್ತಿರುವವೂ ಆದ | **ಹರೀ**—ಇಂದ್ರನ ಕುದುರೆಗಳು | **ಹಿತಂ**—ಹಿತಕರವಾದ | **ಪ್ರಯಃ ಅಭಿ**—ಸೋಮರೂಪವಾದ ಅನ್ನವನ್ನು ಅಭಿಲಕ್ಷಿಸಿ (ಭಕ್ಷಿಸುವುದಕ್ಕಾಗಿ) | **ವೋಳ್ಹಾಂ**—ಇಂದ್ರನನ್ನು ಕರೆತರಲಿ.

|| ಭಾವಾರ್ಥ ||

ಪ್ರಸಿದ್ಧವಾದವೂ, ಯಾವಾಗಲೂ ಜತೆಯಾಗಿಯೇ ಸಂತೋಷದಿಂದಿರುವವೂ, ಚಿನ್ನದಂತೆ ಥಳಥಳಿಸುವ ಕತ್ತಿನ ಮೇಲಿನ ಕೇಶಪಂಕ್ತಿಯಿಂದ ಒಪ್ಪುತ್ತಿರುವವೂ ಆದ ಇಂದ್ರನ ಕುದುರೆಗಳು ಸೋಮರೂಪವಾದ ಅನ್ನಾಭಿಮುಖವಾಗಿ ಇಂದ್ರನನ್ನು ಈ ಯಜ್ಞಭೂಮಿಗೆ ಕರೆತರಲಿ.

## English Translation.

May those two golden-maned steeds, together exulting, bring him hither to the salutaey (sacrificial) food.

|| ಸಂಹಿತಾಪಾಠಃ ||

ಅರ್ವಾಂಚಂ ತ್ವಾ ಪುರುಷ್ಟುತ ಪ್ರಿಯಮೇಧಸ್ತುತಾ ಹರೀ |
ಸೋಮಪೇಯಾಯ ವಕ್ಷತಃ || ೩೦ ||

|| ಪದಪಾಠಃ ||

ಅರ್ವಾಚಂ | ತ್ವಾ | ಪುರುऽಸ್ತುತ | ಪ್ರಿಯಮೇಧऽಸ್ತುತಾ | ಹರೀ ಇತಿ |
ಸೋಮऽಪೇಯಾಯ | ವಕ್ಷತಃ || ೩೦ ||

|| ಸಾಯಣಭಾಷ್ಯಂ ||

**ಹೇ ಪುರುಷ್ಟುತೇಂದ್ರ ತ್ವಾ ತ್ವಾಂ ಪ್ರಿಯಮೇಧಸ್ತುತಾ ಹರೀ ಅಶ್ವೌ ಸೋಮಪೇಯಾಯ ಸೋಮಪಾನಾಯಾರ್ವಾಂಚಮಸ್ಮದಭಿಮುಖಂ ವಕ್ಷತಃ | ವಹತಃ ||**

|| ಪ್ರತಿಪದಾರ್ಥ ||

**ಪುರುಷ್ಟುತ**-ಅನೇಕರಿಂದ ಸ್ತುತಿಸಲ್ಪಡುವ ಎಲೈ ಇಂದ್ರನೇ | **ತ್ವಾ**-ನಿನ್ನನ್ನು | **ಪ್ರಿಯಮೇಧಸ್ತುತಾ**—ಪ್ರಿಯಮೇಧನಾಮಕನಾದ ನಮ್ಮಿಂದ ಸ್ತುತಿಸಲ್ಪಡುವ | **ಹರೀ**—ಅಶ್ವಗಳು | **ಸೋಮಪೇಯಾಯ**—ಸೋಮಪಾನಾರ್ಥವಾಗಿ **ಅರ್ವಾಂಚಂ**—ನಮಗಭಿಮುಖವಾಗಿ | **ವಕ್ಷತಃ**—ಕರೆತರಲಿ.

|| ಭಾವಾರ್ಥ ||

ಅನೇಕ ಜನರಿಂದ ಸ್ತುತಿಸಲ್ಪಡುವ ಎಲೈ ಇಂದ್ರನೇ, ಪ್ರಿಯಮೇಧನೆಂಬ ಹೆಸರಿನಿಂದ ಪ್ರಸಿದ್ಧನಾದ ನನ್ನಿಂದ ಸ್ತುತಿಸಲ್ಪಡುವ ನಿನ್ನ ಕುದುರೆಗಳು ನಿನ್ನನ್ನು ಸೋಮಪಾನಾರ್ಥವಾಗಿ ನಮಗಭಿಮುಖವಾಗಿ ಕರೆತರಲಿ.

English Translation.

Indra, the glorified of many, let your horses, praised by Priyamedha, bring you down to drink the Soma.



# ಮೂವತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

**ವಯಂ ಘ ತ್ವೇತ್ಯೇಕೋನವಿಂಶತ್ಯೃಚಂ ತೃತೀಯಂ ಸೂಕ್ತಂ ಕಾಣ್ವಸ್ಯ ಮೇಧ್ಯಾತಿಥೇರಾರ್ಷಂ ಬೃಹತೀಛಂದಸ್ಕಂ| ಷೋಡಶ್ಯಾದ್ಯಾಸ್ತಿಸ್ರೋ ಗಾಯತ್ರ್ಯ ಏಕೋನವಿಂಶ್ಯನುಷ್ಟುಪ್| ಇಂದ್ರೋ ದೇವತಾ| ತಥಾ ಚಾನುಕ್ರಾಂತಂ | ವಯಂ ಘ್ನ್ಯೇಕೋನಾ ಮೇಧ್ಯಾತಿಥಿರ್ಬಾರ್ಹತಂ ತ್ರಿಗಾಯತ್ರ್ಯನುಷ್ಟುಬಂತಮಿತಿ|| ಮಹಾವ್ರತೇ ನಿಷ್ಕೇವಲ್ಯೇ ಬಾರ್ಹತತೃಚಾಶೀತಾವಾದಿತಃ ಪಂಚದಶರ್ಚಃ | ತಥೈವ ಪಂಚಮಾರಣ್ಯಕೇ ಶೌನಕೇನ ಸೂತ್ರ್ಯತೇ | ವಯಂ ಘ ತ್ವಾ ಸುತಾವಂತ ಇತಿ ಪಂಚದಶ ನೋ ಷು ತ್ವಾ ವಾಘತಶ್ಚ ನೇತ್ಯೇತಸ್ಯ ದ್ವಿಪದಾಂ ಚೋದ್ಧರತಿ | ಐ. ಆ. ೫-೨-೪ | ಇತಿ || ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ವಯಂ ಘ ತ್ವೇತಿ ತೃಚೋ ವೈಕಲ್ಪಿಕಃ ಸ್ತೋತ್ರಿಯಃ | ತಥಾ ಚ ಸೂತ್ರಂ | ವಯಂ ಘ ತ್ವಾ ಸುತಾವಂತಃ ಕ ಈಂ ವೇದ ಸುತೇ ಸಚಾ | ಆ. ೭-೪ | ಇತಿ || ಸ್ವರಸಾಮ್ನ್ಯಯಮೇವ ತೃಚೋಽನುರೂಪಃ | ಸೂತ್ರಿತಂ ಚ | ವಯಂ ಘ ತ್ವಾ ಸುತಾವಂತ ಇತಿ ತಿಸ್ರೋ ಬೃಹತ್ಯಃ | ಆ. ೮-೫ | ಇತಿ || ತಸ್ಮಿನ್ನೇವ ಶಸ್ತ್ರೇ ಕ ಈಂ ವೇದೇತಿ ವೈಕಲ್ಪಿಕೋಽನುರೂಪಃ | ಸೂತ್ರಮುಕ್ತಮೇವ ||**

ಅನುವಾದವು—**ವಯಂ ಘ ತ್ವಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹತ್ತೊಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಮೇಧ್ಯಾತಿಥಿಃ ಕಾಣ್ವಃ** ಎಂಬುವನು ಋಷಿಯು; ಇಂದ್ರನು ದೇವತೆಯು; ಬೃಹತೀಛಂದಸ್ಕವು. ಆದರೆ ಹದಿನಾರನೆಯ ಋಕ್ಕಿನಿಂದ ಮುಂದಿನ ಮೂರು ಋಕ್ಕುಗಳು ಗಾಯತ್ರೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ವಯಂ ಘ್ನ್ಯೇಕೋನಾ ಮೇಧ್ಯಾತಿಥಿರ್ಬಾರ್ಹತಂ ತ್ರಿಗಾಯತ್ರ್ಯನುಷ್ಟುಬಂತಂ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ಬೃಹತೀ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ಮೊದಲಿನ ಹದಿನೈದು ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕ ಪಂಚಮಾರಣ್ಯಕದಲ್ಲಿ ಶೌನಕಮಹರ್ಷಿಯಿಂದ—**ವಯಂ ಘ ತ್ವಾ ಸುತಾವಂತ ಇತಿ ಪಂಚದಶ ನೋ ಷು ತ್ವಾ ವಾಘತಶ್ಚ ನೇತ್ಯೇತಸ್ಯ ದ್ವಿಪದಾಂ ಚೋದ್ಧರತಿ** ಎಂಬ ಸೂತ್ರದಿಂದ (ಐ. ಆ. ೫-೨-೪) ವಿವೃತವಾಗಿರುವುದು. ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು **ಪಠಿಸ**

ಬೇಕಾದ ಶಸ್ತ್ರಮಂತ್ರಗಳಲ್ಲಿ **ವಯಂ ಘ ತ್ವಾ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಕಲ್ಪಿಕಸ್ತೋತ್ರಿಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ವಯಂ ಘ ತ್ವಾ ಸುತಾವಂತಃ ಕ ಈಂ ವೇದ ಸುತೇ ಸಚಾ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು. ಸ್ವರಸಾಮ್ನಿಯೆಂಬ ಇಷ್ಟಿಯಲ್ಲಿಯೂ ಈ ಮೂರು ಋಕ್ಕುಗಳನ್ನು ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ವಯಂ ಘ ತ್ವಾ ಸುತಾವಂತ ಇತಿ ತಿಸ್ರೋ ಬೃಹತ್ಯಃ** ಎಂಬ ಸೂತ್ರದಿಂದ (ಆ ೮-೫) ವಿವೃತವಾಗಿರುವುದು. ಅದೇ ಇಷ್ಟಿಯ ಶಸ್ತ್ರಮಂತ್ರಗಳಲ್ಲಿ **ಕ ಈಂ ವೇದ** ಎಂಬ ತೃಚವನ್ನು (ಈ ಸೂಕ್ತದ ೭-೯ ಋಕ್ಕುಗಳನ್ನು) ಅನುರೂಪತೃಚವನ್ನಾಗಿ ಪಠಿಸಬೇಕೆಂದು ನಿರ್ದೇಶಿಸುವ ಸೂತ್ರವನ್ನು (ಆ. ೭-೪) ಹಿಂದೆಯೇ ತಿಳಿಸಲಾಗಿದೆ.

## ಸೂಕ್ತ—೩೩

ಮಂಡಲ—೮ || ಅನುವಾಕ—೫ || ಸೂಕ್ತ—೩೩ ||
ಅಷ್ಟಕ—೬ || ಅಧ್ಯಾಯ—೩ || ವರ್ಗ—೭, ೮, ೯, ೧೦ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೯ ||
|| ಋಷಿಃ—ಮೇಧಾತಿಥಿಃ ಕಾಣ್ವಃ ||
|| ದೇವತಾ—ಇಂದ್ರಃ ||
|| ಛಂದಃ—೧-೧೫. ಬೃಹತೀ | ೧೬-೧೮. ಗಾಯತ್ರೀ | ೧೯. ಅನುಷ್ಟುಪ್ ||

|| ಸಂಹಿತಾಪಾಠಃ ||

ವಯಂ ಘ ತ್ವಾ ಸುತಾವಂತ ಆಪೋ ನ ವೃಕ್ತಬರ್ಹಿಷಃ |
ಪವಿತ್ರಸ್ಯ ಪ್ರಸ್ರವಣೇಷು ವೃತ್ರಹನ್ಪರಿ ಸ್ತೋತಾರ ಆಸತೇ || ೧ ||

|| ಪದಪಾಠಃ ||

ವಯಂ | ಘ | ತ್ವಾ | ಸುತಽವಂತಃ | ಆಪಃ | ನ | ವೃಕ್ತಽಬರ್ಹಿಷಃ |
ಪವಿತ್ರಸ್ಯ | ಪ್ರಽಸ್ರವಣೇಷು | ವೃತ್ರಽಹನ್ | ಪರಿ | ಸ್ತೋತಾರಃ | ಆಸತೇ || ೧ ||

|| ಸಾಯಣಭಾಷ್ಯಂ ||

**ಹೇ ವೃತ್ರಹನ್ನಿಂದ್ರ ತ್ವಾ ತ್ವಾಂ ವಯಂ ಘ ವಯಂ ಖಲು ಸುತವಂತಃ ಸೋಮಮಭಿಷುತವಂತ ಆಪೋ ನಾಪ ಇವ ಪ್ರವಣಮಭಿಗಚ್ಛಾಮಃ | ಪವಿತ್ರಸ್ಯ ಸೋಮಾನಾಂ ಪ್ರಸ್ರವಣೇಷು ವೃಕ್ತಬರ್ಹಿಷಃ ಸ್ತೀರ್ಣಬರ್ಹಿಷಃ ಸ್ತೋತಾರಶ್ಚ ತ್ವಾಂ ಪರ್ಯುಪಾಸತೇ ||**

|| ಪ್ರತಿಪದಾರ್ಥ ||

**ವೃತ್ರಹನ್**—ವೃತ್ರಸಂಹಾರಕನಾದ ಎಲೈ ಇಂದ್ರನೇ | **ತ್ವಾ**—ನಿನ್ನನ್ನು ದ್ದೇಶಿಸಿ | **ವಯಂ**— ನಾವು | **ಸುತವಂತಃ**—ಸೋಮರಸವನ್ನು ಹಿಂಡುವವರಾಗಿ | **ಆಪೋ ನ**—ತಗ್ಗಾದ ಪ್ರದೇಶಕ್ಕೆ ಹರಿದುಹೋಗುವ ನೀರಿನಂತೆ |

ಸೋಮಾಭಿಷವವನ್ನು ಮಾಡುತ್ತಿದ್ದೇವೆ। **ಪವಿತ್ರಸ್ಯ**—ಶುದ್ಧವಾದ ಸೋಮವು। **ಪ್ರಸ್ರವಣೇಷು**—ಹಿಂಡಿ ಸಿದ್ಧಮಾಡಲ್ಪಟ್ಟಾಗ। **ವೃಕ್ತಬರ್ಹಿಷಃ**—ಯಜ್ಞದಲ್ಲಿ ನೀನು ಬಂದು ಕುಳಿತುಕೊಳ್ಳುವುದಕ್ಕಾಗಿ ಕತ್ತರಿಸಿದ ದರ್ಭೆಗಳನ್ನು ಆಸನಾರ್ಥವಾಗಿ ಹರಡಿ ಸಿದ್ಧಪಡಿಸಿರುವ। **ಸ್ತೋತಾರಃ**—ಸ್ತೋತ್ರಮಂತ್ರಗಳನ್ನು ಪಠಿಸುತ್ತಿರುವ ಋತ್ವಿಕ್ಕುಗಳು ನಿನ್ನನ್ನು ಉಪಚರಿಸುತ್ತಾರೆ

॥ ಭಾವಾರ್ಥ ॥

ವೃತ್ರನಾಶಕನಾದ ಎಲೈ ಇಂದ್ರನೇ, ತಗ್ಗಾದ ಪ್ರದೇಶಕ್ಕೆ ನೀರು ಹರಿದುಹೋಗಿ ನಿಲ್ಲುವಂತೆ ನಾವು ನಿನ್ನನ್ನುದ್ದೇಶಿಸಿ ಹಿಂಡುವ ಸೋಮರಸವು ನಾವು ಮಾಡುವ ಯಜ್ಞದಲ್ಲಿ ಹರಿಯುತ್ತಾ ಒಂದಾಗಿ ಸೇರಿ ಒಂದೆಡೆ ನಿಲ್ಲುವುದು. ಇಂತಹ ಸೋಮವು ನಿನಗಾಗಿ ಸಿದ್ಧಪಡಿಸಲ್ಪಟ್ಟಾಗ ಋತ್ವಿಕ್ಕುಗಳು, ನೀನು ಬಂದು ಕುಳಿತುಕೊಳ್ಳುವುದಕ್ಕಾಗಿ ದರ್ಭಾಸನವನ್ನು ಸಿದ್ಧಪಡಿಸಿ ಸ್ತೋತ್ರಾದಿಗಳಿಂದ ನಿನ್ನನ್ನು ಸೇವಿಸುವರು.

English Translation.

We are pouring forth to you the Soma juice like water: the praisers strewing the clipped sacred grass, worship you, slayer of Vritra, in the, streams (falling) from the filter.

॥ ಸಂಹಿತಾಪಾಠಃ ॥

ಸ್ವರಂತಿ ತ್ವಾ ಸುತೇ ನರೋ ವಸೋ ನಿರೇಕ ಉಕ್ಥಿನಃ ।
ಕದಾ ಸುತಂ ತೃಷಾಣ ಓಕ ಆ ಗಮ ಇಂದ್ರ ಸ್ವಬ್ದೀವ ವಂಸಗಃ ॥ ೨ ॥

॥ ಪದಪಾಠಃ ॥

ಸ್ವರಂತಿ । ತ್ವಾ । ಸುತೇ । ನರಃ । ವಸೋ ಇತಿ । ನಿರೇಕೇ । ಉಕ್ಥಿನಃ ।
ಕದಾ । ಸುತಂ । ತೃಷಾಣಃ । ಓಕಃ । ಆ । ಗಮಃ । ಇಂದ್ರ । ಸ್ವಬ್ದೀಽಇವ । ವಂಸಗಃ ॥ ೨ ॥

॥ ಸಾಯಣಭಾಷ್ಯಂ ॥

**ಹೇ ವಸೋ ವಾಸಯಿತರಿಂದ್ರ ತ್ವಾ ತ್ವಾಂ ಸುತೇಽಭಿಷುತೇ ಸೋಮೇ ನಿರೇಕೇ ನಿರ್ಗಮನೇ ಉಕ್ಥಿನೋ ನರೋ ನೇತಾರಃ ಸ್ವರಂತಿ । ಶಬ್ದಾಯಂತೇ । ಅಪಿ ಚೇಂದ್ರಃ ಸುತಂ ಸೋಮಂ ಪ್ರತಿ ತೃಷಾಣಸ್ತೃಷ್ಯನ್ ಸ್ವಬ್ದೀವ ಸ್ವಭೂತಶಬ್ದ ಇವ ವಂಸಗೋ ವನನೀಯಗಮನೋ ವೃಷಭಃ ಶಬ್ದಂ ಕುರ್ವನ್ ಕದೌಕಃ ಸ್ಥಾನಮಾಗಮಃ ॥**

॥ ಪ್ರತಿಪದಾರ್ಥ ॥

**ಹೇ ವಸೋ**—ವಸತಿದಾಯಕನಾದ ಎಲೈ ಇಂದ್ರನೇ। **ಸುತೇ**—ಲತೆಗಳನ್ನು ಜಜ್ಜಿ ಹಿಂಡಿದ ಸೋಮರಸವು। **ನಿರೇಕೇ**—ಈಚೆಗೆ ಹರಿದುಬರುತ್ತಿರುವಾಗ। **ಉಕ್ಥಿನಃ**—ಉಕ್ಥಮಂತ್ರಗಳನ್ನು ಪಠಿಸುತ್ತಿರುವ। **ನರಃ**—

ಯಜ್ಞದಲ್ಲಿ ಮುಖ್ಯಪಾತ್ರಗಳನ್ನು ವಹಿಸಿರುವ ಋತ್ವಿಗಾದಿಗಳು | **ತ್ವಾಂ**— ನಿನ್ನನ್ನು | **ಸ್ವರಂತಿ**— ಉಚ್ಚಧ್ವನಿಯಿಂದ ಸ್ತೋತ್ರಮಾಡುತ್ತಾರೆ (ಇಂತಹ ಇಂದ್ರನು) | **ಸುತಂ**— ಹಿಂಡಿ ಸಿದ್ಧಪಡಿಸಿದ ಸೋಮರಸವನ್ನು ಲಕ್ಷೀಕರಿಸಿ | **ತೃಷಾಣಃ**— ಬಾಯಾರಿದವನಾಗಿ | **ಸ್ವಬ್ದೀವ ವಂಸಗಃ**— ಗೂಳಿಯಂತೆ ಗುಟುರುಹಾಕುತ್ತಾ | **ಕದಾ**— ಯಾವಾಗ | **ಓಕಃ**— ಯಜ್ಞಮಾಡುವ ಈ ಪ್ರದೇಶಕ್ಕೆ | **ಆ ಗಮಃ**— ಬರುವನು ?

| ಭಾವಾರ್ಥ ||

ಎಲೈ ವಸತಿದಾಯಕನಾದ ಇಂದ್ರನೇ, ಸೋಮಲತೆಗಳನ್ನು ಕಲ್ಲಿನಿಂದ ಜಜ್ಜುವಾಗ ಅದರಿಂದ ಹೊರಟ ಸೋಮರಸವು ಹರಿದುಬರುತ್ತಿರುವುದು. ಆ ಕಾಲದಲ್ಲಿ ಯಜ್ಞನೇತೃಗಳಾದ ಋತ್ವಿಗ್ಯಜಮಾನರು ನಿನ್ನನ್ನು ಘಟ್ಟಿಯಾದ ಧ್ವನಿಯಿಂದ ಸ್ತೋತ್ರಮಾಡುವರು. ಇಂತಹ ಗುಣವಿಶಿಷ್ಟನಾದ ಇಂದ್ರನು ಗುಟುಕುಹಾಕುವ ಗೂಳಿಯಂತೆ ಬಾಯಾರಿದವನಾಗಿ ಸೋಮಪಾನಾರ್ಥವಾಗಿ ಈ ಯಜ್ಞಪ್ರದೇಶಕ್ಕೆ ಯಾವಾಗ ಬರುವನು ?

## English Translation.

The leaders (of rites), repeating praises, shout to you, Vasu, when the libation issues forth, when, Indra, bellowing like a bull, do you come to the dwelling thirsting for the Soma ?

|| ಸಂಹಿತಾಪಾಠಃ ||

ಕಣ್ವೇಭಿರ್ಧೃಷ್ಣವಾ ಧೃಷದ್ವಾಜಂ ದರ್ಷಿ ಸಹಸ್ರಿಣಂ |
ಪಿಶಂಗರೂಪಂ ಮಘವನ್ವಿಚರ್ಷಣೇ ಮಕ್ಷೂ ಗೋಮಂತಮೀಮಹೇ ||

| ಪದಪಾಠಃ |

ಕಣ್ವೇಭಿಃ | ಧೃಷ್ಣೋ ಇತಿ | ಆ | ಧೃಷತ್ | ವಾಜಂ | ದರ್ಷಿ | ಸಹಸ್ರಿಣಂ |
ಪಿಶಂಗಽರೂಪಂ | ಮಘಽವನ್ | ವಿಽಚರ್ಷಣೇ | ಮಕ್ಷು | ಗೋಽಮಂತಂ | ಈಮಹೇ || ೩ ||

| ಸಾಯಣಭಾಷ್ಯಂ |

ಹೇ ಧೃಷ್ಣೋ ಧರ್ಷಕೇಂದ್ರ ಕಣ್ವೇಭಿಃ ಕಣ್ವಾನುದ್ದಿಶ್ಯ || ವಿಭಕ್ತಿವ್ಯತ್ಯಯಃ || ಸಹಸ್ರಿಣಂ ಸಹಸ್ರಸಂಖ್ಯಾಕಂ ವಾಜಮಾ ದರ್ಷಿ | ದೇಹಿ | ಹೇ ಮಘವನ್ಧನವನ್ ವಿಚರ್ಷಣೇ ವಿದ್ರಷ್ಟರಿಂದ್ರ ಧೃಷದ್ಧೃಷ್ಟಂ ಪಿಶಂಗರೂಪಂ ಗೋಮಂತಂ ಚ ವಾಜಂ ಮಕ್ಷು ಶೀಘ್ರಮೀಮಹೇ | ಯಾಚಾಮಹೇ | ತ್ವಾಮಿತಿ ಶೇಷಃ ||

| ಪ್ರತಿಪದಾರ್ಥ |

**ಹೇ ಧೃಷ್ಣೋ**— ಶತ್ರುಧರ್ಷಕನಾದ ಎಲೈ ಇಂದ್ರನೇ | **ಕಣ್ವೇಭಿಃ**— ಕಣ್ವಋಷಿಯ ಪುತ್ರರನ್ನುದ್ದೇಶಿಸಿ | **ಸಹಸ್ರಿಣಂ**— ಸಹಸ್ರಸಂಖ್ಯಾಕವಾದ (ಬಹಳವಾದ) | **ವಾಜಂ**— ಅನ್ನವನ್ನು | **ಆ ದರ್ಷಿ**— ಕೊಡು | **ಹೇ**

**ಮಘವನ್**—ಧನವಂತನಾದ | **ವಿಚರ್ಷಣೇ**—ಸಕಲವನ್ನು ನೋಡಿ ತಿಳಿಯುವ ಎಲೈ ಇಂದ್ರನೇ | **ಧೃಷತ್**—ಪುಷ್ಟಿಕರವಾದುದೂ| **ಪಿಶಂಗರೂಪಂ**-ಪಕ್ವವಾಗಿ (ಬಲಿತ) ಹಳದೀ ಬಣ್ಣಕ್ಕೆ ತಿರುಗಿರುವುದೂ ಆದ| **ಗೋಮಂತಂ**—ಯವಧಾನ್ಯವನ್ನು | **ಮಕ್ಷು** - ಶೀಘ್ರವಾಗಿ | **ಈಮಹೇ**—ನಿನ್ನಿಂದ ಪಡೆಯಲು ಪ್ರಾರ್ಥಿಸುತ್ತೇವೆ.

॥ ಭಾವಾರ್ಥ ॥

ಶತ್ರುಧರ್ಷಕನಾದ ಎಲೈ ಇಂದ್ರನೇ, ಸಹಸ್ರಸಂಖ್ಯಾಕವಾದ ಎಂದರೆ ಅನೇಕ ವಿಧವಾದ ಅಥವಾ ಬಹಳವಾದ ಅನ್ನಾದ್ಯಾಹಾರಗಳನ್ನು ಕಣ್ವಋಷಿ ಸಂತತಿಯವರಾದ ನಮಗೆ ಕೊಡು. ಸಮಸ್ತವನ್ನು ನೋಡುವವನೂ, ಧನವಂತನೂ ಆದ ಎಲೈ ಇಂದ್ರನೇ, ಪುಷ್ಟಿಕರವಾದುದೂ, ಚೆನ್ನಾಗಿ ಬಲಿತು ಪೀತವರ್ಣವುಳ್ಳದ್ದೂ ಆದ ಯವಧಾನ್ಯವನ್ನು (ಭತ್ತವನ್ನು) ನಮಗೆ ಬೇಗನೆ ಕೊಡುವಂತೆ ನಿನ್ನನ್ನು ಪ್ರಾರ್ಥಿಸುತ್ತೇವೆ

English Translation.

Resolute (Indra), bestow abundantly upon the descendants of Kanwa thousands of viands; wise Maghavan, we earnestly solicit you for (wealth) of gold and cattle.

॥ ಸಂಹಿತಾಪಾಠಃ ॥

ಪಾಹಿ ಗಾಯಾಂಧಸೋ ಮದ ಇಂದ್ರಾಯ ಮೇಧ್ಯಾತಿಥೇ ।
ಯಃ ಸಂಮಿಶ್ಲೋ ಹರ್ಯೋರ್ಯಃ ಸುತೇ ಸಚಾ ವಜ್ರೀ ರಥೋ ಹಿರ-
ಣ್ಯಯಃ ॥ ೪ ॥

॥ ಪದಪಾಠಃ ॥

ಪಾಹಿ । ಗಾಯ । ಅಂಧಸಃ । ಮದೇ । ಇಂದ್ರಾಯ । ಮೇಧ್ಯಽಅತಿಥೇ ।
ಯಃ । ಸಂಽಮಿಶ್ಲಃ । ಹರ್ಯೋಃ । ಯಃ । ಸುತೇ । ಸಚಾ । ವಜ್ರೀ । ರಥಃ । ಹಿರಣ್ಯಯಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಮೇಧ್ಯಾತಿಥೇ ಪಾಹಿ । ಸೋಮಂ ಪಿಬ । ಅಂಧಸಃ ಪೀತಸ್ಯ ಸೋಮಸ್ಯ ಮದೇ ತಸ್ಮಾ ಇಂದ್ರಾಯ ಗಾಯ । ಸ್ತೋತ್ರಂ ಪಠ ಚ । ಯ ಇಂದ್ರೋ ಹರ್ಯೋರಶ್ವಯೋಃ ಸಂಮಿಶ್ಲಃ ಸ್ವರಥೇ ಸಂಮಿಶ್ಲಯಿತಾ । ಯಶ್ಚ ಸುತೇ ಸೋಮೇ ಸಚಾ ಸಹಾಯಃ । ಯ ಇಂದ್ರೋ ವಜ್ರೀ । ಯಸ್ಯ ರಥೋ ಹಿರಣ್ಮಯೋ ಹಿರಣ್ಮಯಃ ॥

॥ ಪ್ರತಿಪದಾರ್ಥ ॥

**ಮೇಧ್ಯಾತಿಥೇ**—ಎಲೈ ಮೇಧ್ಯಾತಿಥಿಯೇ | **ಪಾಹಿ**—ಸೋಮವನ್ನು ಪಾನಮಾಡು | **ಅಂಧಸಃ**—ಸೋಮದ ಪಾನದಿಂದ | **ಮದೇ**—ಸಂತೃಪ್ತಿಯುಂಟಾದಾಗ | **ಯಃ**—ಯಾವ ಇಂದ್ರನು | **ಹರ್ಯೋಃ**—

ತನ್ನ ಎರಡು ಅಶ್ವಗಳನ್ನೂ | **ಸಂಮಿಶ್ಲಃ**—ತನ್ನ ರಥಕ್ಕೆ ಯೋಜಿಸುವನೋ | **ಯಃ**—ಯಾರು | **ಸುತೇ**—ಸೋಮರಸವು ಹಿಂಡಲ್ಪಟ್ಟಾಗ | **ಸಚಾ**—ನಮ್ಮೊಡನೆ ಬಂದು ಸೇರುವನೋ | **ವಜ್ರೀ**—ಯಾವನು ವಜ್ರಾಯುಧವನ್ನು ಹಿಡಿದಿರುವನೋ | **ರಥಃ**—ಯಾವನ ರಥವು | **ಹಿರಣ್ಯಯಃ**—ಸುವರ್ಣನಿರ್ಮಿತವಾಗಿರುವುದೋ! (**ತಸ್ಮೈ**) **ಇಂದ್ರಾಯ**—ಆ ಇಂದ್ರನನ್ನುದ್ದೇಶಿಸಿ | **ಗಾಯ**—ಸ್ತೋತ್ರವನ್ನು ಪಠಿಸು.

॥ ಭಾವಾರ್ಥ ॥

ಎಲೈ ಮೇಧ್ಯಾತಿಥಿಯೇ, ಸೋಮವನ್ನು ಪಾನಮಾಡು. ಸೋಮಪಾನದಿಂದ ಸಂತೃಪ್ತಿಯುಂಟಾದಾಗ ಯಾವ ಇಂದ್ರನು ತನ್ನ ಎರಡು ಅಶ್ವಗಳನ್ನೂ ತನ್ನ ರಥಕ್ಕೆ ಯೋಜಿಸುವನೋ, ಯಾರು ಸೋಮರಸದ ಅಭಿಷವಕಾಲದಲ್ಲಿ ನಮ್ಮೊಡನೆ ಬಂದು ಸೇರುವನೋ ಯಾವನು ವಜ್ರಾಯುಧಧಾರಿಯಾಗಿರುವನೋ, ಯಾವನ ರಥವು ಸುವರ್ಣನಿರ್ಮಿತವಾಗಿರುವುದೋ ಆ ಇಂದ್ರನನ್ನುದ್ದೇಶಿಸಿ ಸ್ತೋತ್ರವನ್ನು ಪಠಿಸು.

## English Translation.

Drink, Medhyatthi, and in the exhilaration of the draught sing to Indra, to him who has harnessed his horses, who, when the Soma is poured out, is present, the wielder of the thunderbolt, whose chariot is of gold.

॥ ಸಂಹಿತಾಪಾಠಃ ॥

ಯಃ ಸುಷವ್ಯಃ ಸುದಕ್ಷಿಣ ಇನೋ ಯಃ ಸುಕ್ರತುರ್ಗೃಣೇ ।
ಯ ಆಕರಃ ಸಹಸ್ರಾ ಯಃ ಶತಾಮಘ ಇಂದ್ರೋ ಯಃ ಪೂರ್ಭಿದಾರಿತಃ ॥

॥ ಪದಪಾಠಃ ॥

ಯಃ । ಸುಽಸವ್ಯಃ । ಸುಽದಕ್ಷಿಣಃ । ಇನಃ । ಯಃ । ಸುಽಕ್ರತುಃ । ಗೃಣೇ ।
ಯಃ । ಆಽಕರಃ । ಸಹಸ್ರಾ । ಯಃ । ಶತಽಮಘಃ । ಇಂದ್ರಃ । ಯಃ । ಪೂಃಽಭಿತ್ । ಆರಿತಃ ।೫॥

॥ ಸಾಯಣಭಾಷ್ಯಂ ॥

ಯಃ ಸುಷವ್ಯಃ ಶೋಭನಸವ್ಯಹಸ್ತಃ । ಯಶ್ಚ ಸುದಕ್ಷಿಣಃ । ಯಶ್ಚೇನ ಈಶ್ವರಃ । ನಿಯುತ್ವಾನಿನ ಇತೀಶ್ವರನಾಮಸು ಪಾಠಾತ್ । ಯಶ್ಚಾಪಿ ಸುಕ್ರತುಃ ಸುಪ್ರಜ್ಞಃ । ಸಹಸ್ರಾ ಸಹಸ್ರಾಣಾಂ ಬಹೂನಾಂ ಯಶ್ಚಾಕರಃ ಕರ್ತಾ । ಯಶ್ಚಾಪಿ ಶತಮಘೋ ಬಹುಧನಃ । ಯಶ್ಚ ಪೂರ್ಭಿತ್ ಪುರಾಂ ಭೇತ್ತಾ । ಯಶ್ಚಾರಿತಃ ಪತ್ಯೃತಃ ಸ್ತೋಮಾನ್ । ತಥಾ ಚ ಯಾಸ್ಕಃ । ಯ ಆರಿತಃ ಕರ್ಮಣಿಕರ್ಮಣಿ ಸ್ಥಿರಃ ಪ್ರತ್ಯೃತಃ ಸ್ತೋಮಾನ್ । ನಿ. ೫-೧೫ । ಇತಿ । ಸ ಇಂದ್ರೋ ಗೃಣೇ । ಅಸ್ಮಾಭಿಃ ಸ್ತೂಯತೇ ಚ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಸುಷವ್ಯಃ**—ಉತ್ತಮವಾದ ಎಡಗೈಯುಳ್ಳವನೋ । **ಸುದಕ್ಷಿಣಃ**—ಯಾರು ಉತ್ತಮವಾದ ಬಲಗೈಯುಳ್ಳವನೋ । **ಇನಃ**—ಯಾರು ಜಗತ್ತಿಗೆ ಈಶ್ವರನೋ । **ಯಃ**—ಯಾರು । **ಸುಕ್ರತುಃ**—ಉತ್ತಮವಾದ ಪ್ರಜ್ಞೆಯುಳ್ಳವನೋ । **ಯಃ**—ಯಾರು । **ಸಹಸ್ರಾ**—ಅನೇಕ ಸಂಖ್ಯಾಕವಾದ ಕರ್ಮಗಳಿಗೆ । **ಅಕರಃ**—ಕರ್ತನೋ । **ಯಃ**—ಯಾರು । **ಶತಮಘಃ**—ಅನೇಕವಾದ ಧನಸಂಪತ್ತುಳ್ಳವನೋ । **ಯಃ**—ಯಾರು । **ಪೂರ್ಭಿತ್**—ಶತ್ರುಪಟ್ಟಣಗಳನ್ನು ನಾಶಮಾಡುವವನೋ । **ಆರಿತಃ**—ಯಾರು ಸ್ತುತಿಸೋಮಾದಿಗಳಿಂದ ತೃಪ್ತನಾಗುವವನೋ । **ಇಂದ್ರಃ**—ಅದೇ ಇಂದ್ರನು । **ಗೃಣೇ**—ನಮ್ಮಿಂದ ಸ್ತುತಿಸಲ್ಪಡುತ್ತಾನೆ.

॥ ಭಾವಾರ್ಥ ॥

ಯಾವ ಇಂದ್ರನು ಉತ್ತಮವಾದ ಎಡಗೈಯುಳ್ಳವನೋ, ಯಾರು ಉತ್ತಮವಾದ ಬಲಗೈಯುಳ್ಳವನೋ, ಯಾರು ಜಗತ್ತಿಗೆ ಈಶ್ವರನೋ, ಯಾರು ಉತ್ತಮವಾದ ಪ್ರಜ್ಞೆಯುಳ್ಳವನೋ, ಯಾರು ಅನೇಕಸಂಖ್ಯಾಕವಾದ ಕರ್ಮಗಳಿಗೆ ಕರ್ತನೋ, ಯಾರು ಅನೇಕ ಧನಸಂಪತ್ತುಳ್ಳವನೋ, ಯಾರು ಶತ್ರುಪಟ್ಟಣಗಳನ್ನು ನಾಶಮಾಡುವವನೋ, ಯಾರು ಸ್ತುತಿಸೋಮಾದಿಗಳಿಂದ ತೃಪ್ತನಾಗುವವನೋ ಅದೇ ಇಂದ್ರನು ನಮ್ಮಿಂದ ಸ್ತುತಿಸಲ್ಪಡುತ್ತಾನೆ.

English Translation.

He who is well-handed, both left and right, who is the lord, who is wise, the performer of numerous great acts, the giver of vast wealth, Indra, who is the demolisher of cities, who is gratified by praise, is glorified (by us).

॥ ಸಂಹಿತಾಪಾಠಃ ॥

ಯೋ ಧೃಷಿತೋ ಯೋಽವೃತೋ ಯೋ ಅಸ್ತಿ ಶ್ಮಶ್ರುಷು ಶ್ರಿತಃ ।
ವಿಭೂತದ್ಯುಮ್ನಶ್ಚ್ಯವನಃ ಪುರುಷ್ಟುತಃ ಕ್ರತ್ವಾ ಗೌರಿವ ಶಾಕಿನಃ ॥ ೬ ॥

। ಪದಪಾಠಃ ।

ಯಃ । ಧೃಷಿತಃ । ಯಃ । ಅವೃತಃ । ಯಃ । ಅಸ್ತಿ । ಶ್ಮಶ್ರುಷು । ಶ್ರಿತಃ ।
ವಿಭೂತಽದ್ಯುಮ್ನಃ । ಚ್ಯವನಃ । ಪುರುಽಸ್ತುತಃ । ಕ್ರತ್ವಾ । ಗೌಃಽಇವ । ಶಾಕಿನಃ ॥ ೬ ॥

। ಸಾಯಣಭಾಷ್ಯಂ ।

ಯೋ ಧೃಷಿತಃ ಶತ್ರೂಣಾಂ ಧರ್ಷಯಿತಾ । ಯಶ್ಚಾವೃತಃ ಶತ್ರುಭಿರಪರಿವೃತಃ । ಯಶ್ಚಾಪಿ ಶ್ಮಶ್ರುಷು ಯುದ್ಧೇಷು । ಶ್ರವಃ ಶ್ರಯಂಶ್ಯಸ್ಮಿನ್ನಿತಿ ವ್ಯುತ್ಪತ್ತೇಃ ಶ್ಮಶ್ರು ಯುದ್ಧಮಿತಿ ವೃದ್ಧಾ ವದಂತಿ ।

**ಶ್ರಿತೋಽಸ್ತಿ ಭವತಿ । ಯಶ್ಚಾಪಿ ವಿಭೂತದ್ಯುಮ್ನಃ ಪ್ರಭೂತಧನಃ । ಯಶ್ಚ ಚ್ಯವನಃ ಸೋಮಾನಾಂ ಚ್ಯಾವಯಿತಾ । ಯಶ್ಚಾಪಿ ಪುರುಷ್ಟುತೋ ಬಹುಸ್ತುತಃ । ಸ ಇಂದ್ರಃ ಕೃತ್ವಾ ಕರ್ಮಣಾ ಶಾಕಿನಃ ಶಕ್ತಸ್ಯ ಯಜಮಾನಸ್ಯ ಗೌರಿವ ಯಥಾ ಗೌಃ ಪಯಸೋ ದೋಗ್ಧ್ರೀ ತಥಾ ಕಾಮಾನಾಂ ದೋಗ್ಧ್ರೀ ಭವತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಧೃಷಿತಃ**—ಶತ್ರುಗಳನ್ನು ಸದೆಬಡಿಯುವವನೋ । **ಯಃ**—ಯಾರು । **ಅವೃತಃ**—ಶತ್ರುಗಳಿಂದ ಸುತ್ತುವರಿಯಲ್ಪಡದೇ ಇರುವನೋ । **ಯಃ**—ಯಾರು । **ಕೃತ್ರುಷು**—ಯುದ್ಧಗಳಲ್ಲಿ । **ಶ್ರಿತಃ ಅಸ್ತಿ**—ನಿರತನಾಗಿರುವನೋ । **ವಿಭೂತದ್ಯುಮ್ನಃ**—ಯಾರು ಅತ್ಯಧಿಕವಾದ ಧನವುಳ್ಳವನಾಗಿಯೂ । **ಚ್ಯವನಃ**—ಸೋಮವನ್ನು ಅಪೇಕ್ಷಿಸುವವನಾಗಿಯೂ । **ಪುರುಷ್ಟುತಃ**—ಅನೇಕರಿಂದ ಸ್ತುತಿಸಲ್ಪಡುವವನಾಗಿಯೂ ಇರುವನೋ (ಅದೇ ಇಂದ್ರನು) । **ಗೌಃ ಇವ**—ಧೇನುವು ಪುಷ್ಕಲವಾಗಿ ಕ್ಷೀರವನ್ನು ಕೊಡುವಂತೆ । **ಕೃತ್ವಾ**—ತನ್ನ ಕರ್ಮಗಳಿಂದ । **ಶಾಕಿನಃ**—ಕರ್ಮಶಕ್ತನಾದ ಯಜಮಾನನಿಗೆ ಪ್ರಭೂತವಾದ ಧನಸಂಪತ್ತನ್ನೊದಗಿಸುತ್ತಾನೆ.

॥ ಭಾವಾರ್ಥ ॥

ಯಾವ ಇಂದ್ರನು ಶತ್ರುಗಳನ್ನು ಸದೆಬಡಿಯುವವನೋ, ಯಾರು ಶತ್ರುಗಳಿಂದ ಸುತ್ತುವರಿಯಲ್ಪಡದೇ ಇರುವನೋ, ಯಾರು ಯುದ್ಧಗಳಲ್ಲಿ ನಿರತನಾಗಿರುವನೋ, ಯಾರು ಅತ್ಯಧಿಕವಾದ ಧನವುಳ್ಳವನಾಗಿಯೂ, ಸೋಮವನ್ನು ಅಪೇಕ್ಷಿಸುವವನಾಗಿಯೂ, ಅನೇಕರಿಂದ ಸ್ತುತಿಸಲ್ಪಡುವವನಾಗಿಯೂ ಇರುವನೋ ಅದೇ ಇಂದ್ರನು ಧೇನುವು ಪುಷ್ಕಲವಾಗಿ ಕ್ಷೀರವನ್ನು ಕೊಡುವಂತೆ ತನ್ನ ಕರ್ಮಗಳಿಂದ ಕರ್ಮಶಕ್ತನಾದ ಯಜಮಾನನಿಗೆ ಪ್ರಭೂತವಾದ ಧನಸಂಪತ್ತನ್ನೊದಗಿಸುತ್ತಾನೆ.

## English Translation.

He who is the subduer (of foes), the unresisted, practised in combats possessed of vast wealth, the demander of the libation, the praised of many who by his acts (of bounty) is like a milch cow to the competent (worshipper).

॥ ಸಂಹಿತಾಪಾಠಃ ॥

ಕ ಈಂ ವೇದ ಸುತೇ ಸಚಾ ಪಿಬಂತಂ ಕದ್ವಯೋ ದಧೇ ।
ಅಯಂ ಯಃ ಪುರೋ ವಿಭಿನತ್ತ್ಯೋಜಸಾ ಮಂದಾನಃ ಶಿಪ್ರ್ಯಂಧಸಃ ॥

॥ ಪದಪಾಠಃ ॥

**ಕಃ । ಈಂ । ವೇದ । ಸುತೇ । ಸಚಾ । ಪಿಬಂತಂ । ಕತ್ । ವಯಃ । ದಧೇ ।**
**ಅಯಂ । ಯಃ । ಪುರಃ । ವಿಽಭಿನತ್ತಿ । ಓಜಸಾ । ಮಂದಾನಃ । ಶಿಪ್ರೀ । ಅಂಧಸಃ ॥ ೭ ॥**

|| ಸಾಯಣಭಾಷ್ಯಂ ||

ಸುತೇಽಭಿಷುತೇ ಸೋಮೇ ಸಚೇತ್ವಿಗ್ಭಿಃ ಸಹ ಸೋಮಂ ಪಿಬಂತಮಿಮೇನಮಿಂದ್ರಂ ಕೋ ವೇದ। ವೇತ್ತಿ। ನ ಕೋಽಪಿ ವೇತ್ತೀತ್ಯರ್ಥಃ। ಕತ್ ಕಿಂ ವಾ ವಯೋಽನ್ನಂ ದಧೇ।ಧಾರಯತಿ। ಯೋಽಯಮಿಂದ್ರಃ ಶಿಪ್ರೀ ಹನೂಮಾನಂಧಸಃ ಸೋಮೇನ ಮಂದಾನೋ ಮಂದಮಾನ ಓಜಸಾ ಬಲೇನ ಪುರೋ ವಿಭಿನತ್ತಿ ||

|| ಪ್ರತಿಪದಾರ್ಥ ||

**ಸುತೇ**— ಸೋಮವು ಹಿಂಡಲ್ಪಟ್ಟು ಸಿದ್ಧವಾಗಿರುವಾಗ | **ಸಚಾ**— ಋತ್ವಿಕ್ಕುಗಳೊಡನೆ | **ಪಿಬಂತಂ**— ಸೋಮವನ್ನು ಪಾನಮಾಡುವ | **ಈಂ**— ಈ ಇಂದ್ರನನ್ನು | **ಕಃ**— ಯಾರು ತಾನೇ | **ವೇದ**— ಅರಿಯುತ್ತಾರೆ? **ಕತ್ ವಯಃ**— ಯಾವ ವಿಧವಾದ ಅನ್ನವನ್ನು | **ದಧೇ**— ಇಂದ್ರನು ತನ್ನ ಉದರದಲ್ಲಿ ಧರಿಸುತ್ತಾನೆ | **ಯಃ**— ಯಾವನು | **ಶಿಪ್ರೀ**— ಉತ್ತಮವಾದ ಕೆನ್ನೆಯುಳ್ಳವನೋ | **ಅಯಂ**— ಅದೇ ಈ ಇಂದ್ರನು | **ಅಂಧಸಃ**— ಸೋಮಪಾನದಿಂದ | **ಮಂದಮಾನಃ**— ಹರ್ಷಿಸುತ್ತಾ | **ಓಜಸಾ**— ತನ್ನ ಶಕ್ತಿಯಿಂದ | **ಪುರಃ**— ಶತ್ರು ಪಟ್ಟಣಗಳನ್ನು | **ವಿಭಿನತ್ತಿ**— ಸೀಳಿಹಾಕುತ್ತಾನೆ.

|| ಭಾವಾರ್ಥ ||

ಸೋಮವು ಹಿಂಡಲ್ಪಟ್ಟು ಸಿದ್ಧವಾಗಿರುವಾಗ ಋತ್ವಿಕ್ಕುಗಳೊಡನೆ ಸೋಮವನ್ನು ಪಾನಮಾಡುವ ಈ ಇಂದ್ರನನ್ನು ಯಾರು ತಾನೇ ಅರಿಯುತ್ತಾರೆ? ಯಾವ ವಿಧವಾದ ಅನ್ನವನ್ನು ಈ ಇಂದ್ರನು ತನ್ನ ಉದರದಲ್ಲಿ ಧರಿಸುತ್ತಾನೆ? ಉತ್ತಮವಾದ ಕೆನ್ನೆಯುಳ್ಳ ಅದೇ ಈ ಇಂದ್ರನು ಸೋಮಪಾನದಿಂದ ಹರ್ಷಿಸುತ್ತಾ ತನ್ನ ಶಕ್ತಿಯಿಂದ ಶತ್ರುಪಟ್ಟಣಗಳನ್ನು ಸೀಳಿಹಾಕುತ್ತಾನೆ.

## English Translation.

Who knows him drinking with (the priests) when the Soma is effused? what food has he partaken of? he, the handsome-jawed, who, exhilarated by the (sacrificial) beverage, destroys cities by his might.

|| ಸಂಹಿತಾಪಾಠಃ ||

ದಾನಾ ಮೃಗೋ ನ ವಾರಣಃ ಪುರುತ್ರಾ ಚರಥಂ ದಧೇ |
ನಕಿಷ್ಟ್ವಾ ನಿ ಯಮದಾ ಸುತೇ ಗಮೋ ಮಹಾಂಶ್ಚರಸ್ಯೋಜಸಾ || ೮ ||

|| ಪದಪಾಠಃ ||

ದಾನಾ | ಮೃಗಃ | ನ | ವಾರಣಃ | ಪುರುಽತ್ರಾ | ಚರಥಂ | ದಧೇ |
ನಕಿಃ | ತ್ವಾ | ನಿ | ಯಮತ್ | ಆ | ಸುತೇ | ಗಮಃ | ಮಹಾನ್ | ಚರಸಿ | ಓಜಸಾ || ೮ ||

॥ ಸಾಯಣಭಾಷ್ಯಂ ॥

ಮೃಗಃ ಶತ್ರೂಣಾಮನ್ವೇಷಕೋ ವಾರಣೋ ಗಜೋ ದಾನಾ ಮದಜಲಾನೀವ ಪುರುತ್ರಾ ಬಹುಷು ಯಜ್ಞೇಷು ಚರಥಂ ಚರಣಶೀಲಂ ಮದಂ ದಧೇ । ಇಂದ್ರೋ ಧಾರಯತಿ । ಅಥ ಪ್ರತ್ಯಕ್ಷಸ್ತುತಿಃ । ಹೇ ಇಂದ್ರ ತ್ವಾ ತ್ವಾಂ ನಕಿರ್ನಿ ಯಮತ್ । ನ ಕಶ್ಚಿನ್ನಿಯಚ್ಛತಿ । ಸುತೇ ಸೋಮ ಆ ಗಮಃ । ಆಗಚ್ಛ । ಮಹಾನ್ ಹಿ ತ್ವಮೋಜಸಾ ಬಲೇನ ಸರ್ವತಶ್ಚರಸಿ ॥

॥ ಪ್ರತಿಪದಾರ್ಥ ॥

**ಮೃಗಃ**—ಶತ್ರುಪ್ರಾಣಿಗಳನ್ನು ಹುಡುಕತಕ್ಕ । **ವಾರಣಃ ನ**—ಆನೆಯು । **ದಾನಾ**—ತನ್ನ ಮದ ಜಲವನ್ನು ಸುರಿಸುವಂತೆ । **ಪುರುತ್ರಾ**—ಅನೇಕ ಯಜ್ಞಗಳಲ್ಲಿ । **ಚರಥಂ**—ಪ್ರಕಟಿಸಲ್ಪಡುವ ಮದವನ್ನು । **ದಧೇ**—ಇಂದ್ರನು ಧರಿಸುತ್ತಾನೆ । (ಎಲೈ ಇಂದ್ರನೇ) **ತ್ವಾ**—ನಿನ್ನನ್ನು । **ನಕಿಃ ನಿ ಯಮತ್**—ಯಾರೂ ಕೂಡ ತಡೆಯಲಾರರು । **ಸುತೇ**—ಸೋಮವು ಹಿಂಡಿ ಸಿದ್ಧವಾಗಿರುವಾಗ । **ಆ ಗಮಃ**—ದಯಮಾಡು । **ಮಹಾನ್**—ಮಹಾತ್ಮನಾದ ನೀನು । **ಓಜಸಾ**—ನಿನ್ನ ಶಕ್ತಿಯಿಂದ । **ಚರಸಿ**—ಸಂಚರಿಸುತ್ತೀಯೆ.

॥ ಭಾವಾರ್ಥ ॥

ಶತ್ರುಪ್ರಾಣಿಗಳನ್ನು ಹುಡುಕತಕ್ಕ ಆನೆಯು ತನ್ನ ಮದಜಲವನ್ನು ಸುರಿಸುವಂತೆ ಅನೇಕ ಯಜ್ಞಗಳಲ್ಲಿ ಪ್ರಕಟಿಸಲ್ಪಡುವ ಮದವನ್ನು ಇಂದ್ರನು ಧರಿಸುತ್ತಾನೆ. ಎಲೈ ಇಂದ್ರನೇ, ನಿನ್ನನ್ನು ಯಾರೂ ಕೂಡ ತಡೆಯಲಾರರು. ಸೋಮವು ಹಿಂಡಿ ಸಿದ್ಧವಾಗಿರುವಾಗ ದಯಮಾಡು. ಮಹಾತ್ಮನಾದ ನೀನು ನಿನ್ನ ಸ್ವಶಕ್ತಿಯಿಂದಲೇ ಸಂಚರಿಸುತ್ತೀಯೆ.

## English Translation.

As a wild elephant emiting the dews of passion, he manifests his exhilaration in many places: no one checks you, (Indra), come to the libation; you are mighty, and go (everywhere) through your strength.

॥ ಸಂಹಿತಾಪಾಠಃ ॥

ಯ ಉಗ್ರಃ ಸನ್ನನಿಷ್ಟೃತಃ ಸ್ಥಿರೋ ರಣಾಯ ಸಂಸ್ಕೃತಃ ।
ಯದಿ ಸ್ತೋತುರ್ಮಘವಾ ಶೃಣವದ್ಧವಂ ನೇಂದ್ರೋ ಯೋಷತ್ಯಾ ಗಮತ್ ॥

॥ ಪದಪಾಠಃ ॥

ಯಃ । ಉಗ್ರಃ । ಸನ್ । ಅನಿಃऽಸ್ತೃತಃ । ಸ್ಥಿರಃ । ರಣಾಯ । ಸಂಸ್ಕೃತಃ ।
ಯದಿ । ಸ್ತೋತುಃ । ಮಘऽವಾ । ಶೃಣವತ್ । ಹವಂ । ನ । ಇಂದ್ರಃ । ಯೋಷತಿ । ಆ । ಗಮತ್ ॥

॥ ಸಾಯಣಭಾಷ್ಯಂ ॥

**ಯ ಉಗ್ರ ಉದ್ಗೂರ್ಣ ಓಜಸ್ವೀ ವಾ ಸನ್ ಭವನ್ನನಿಷ್ಟೃತಃ ಶತ್ರುಭಿರನಿಸ್ತೀರ್ಣಃ ಸ್ಥಿರೋಽಚಲೋ ರಣಾಯ ಯುದ್ಧಾಯ ಸಂಸ್ಕೃತಃ ಶಸ್ತ್ರೈರಲಂಕೃತಃ ಸೋಽಪ್ಯರ್ವಾ ಸಂಸ್ಕೃತಃ ಸ ಇಂದ್ರೋ ಮಘವಾ ಧನವಾನ್ ಯದಿ ಸ್ತೋತುರ್ಹವಮಾಹ್ವಾನಂ ಶೃಣವತ್ ಶೃಣೋತಿ ತರ್ಹ್ಯನ್ಯತ್ರ ನ ಯೋಷತಿ । ನ ಗಚ್ಛತಿ । ಕಿಂತ್ವಾ ಗಮತ್ । ತತ್ರೈವಾಗಚ್ಛತಿ ॥**

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಉಗ್ರಃ ಸನ್**—ಅತ್ಯಧಿಕವಾದ ಬಲವುಳ್ಳವನಾಗಿದ್ದು । **ಅನಿಷ್ಟೃತಃ**—ಶತ್ರುಗಳಿಂದ ಎದುರಿಸಲ್ಪಡದೆಯೂ । **ಸ್ಥಿರಃ**—ನಿಶ್ಚಲನಾಗಿಯೂ । **ರಣಾಯ**—ಯುದ್ಧಕ್ಕಾಗಿ । **ಸಂಸ್ಕೃತಃ**—ಆಯುಧಗಳಿಂದ ಅಲಂಕೃತನಾಗಿಯೂ ಇರುವನೋ । **ಇಂದ್ರಃ**—ಅದೇ ಇಂದ್ರನು । **ಮಘವಾ**—ಅತ್ಯಧಿಕವಾದ ಧನವಂತನಾಗಿದ್ದು । **ಯದಿ**—ಯಾವ ವೇಳೆಯಲ್ಲಿ । **ಸ್ತೋತುಃ**—ಸ್ತುತಿಕರ್ತನ । **ಹವಂ**—ಆಹ್ವಾನವನ್ನು । **ಶೃಣವತ್**—ಕೇಳುವನೋ (ಆಗ) । **ನ ಯೋಷತ್**—ಈ ಸ್ಥಾನವನ್ನು ಬಿಟ್ಟು ಬೇರೆ ಸ್ಥಾನಕ್ಕೆ ಖಂಡಿತ ಹೋಗುವುದಿಲ್ಲ । **ಆ ಗಮತ್**—ಈ ಯಜ್ಞಪ್ರದೇಶಕ್ಕೇ ಖಂಡಿತ ಬರುತ್ತಾನೆ.

॥ ಭಾವಾರ್ಥ ॥

ಯಾವ ಇಂದ್ರನು ಅತ್ಯಧಿಕವಾದ ಬಲವುಳ್ಳವನಾಗಿದ್ದು ಶತ್ರುಗಳಿಂದ ಎದುರಿಸಲ್ಪಡದೆಯೂ, ನಿಶ್ಚಲನಾಗಿಯೂ, ಯುದ್ಧಕ್ಕಾಗಿ ಆಯುಧಗಳಿಂದ ಅಲಂಕೃತನಾಗಿಯೂ ಇರುವನೋ, ಅದೇ ಇಂದ್ರನು ಅತ್ಯಧಿಕವಾದ ಧನವಂತನಾಗಿದ್ದು, ಯಾವ ವೇಳೆಯಲ್ಲಿ ಸ್ತುತಿಕರ್ತನ ಆಹ್ವಾನವನ್ನು ಕೇಳುವನೋ, ಆಗ ಆ ಸ್ಥಾನವನ್ನು ಬಿಟ್ಟು ಬೇರೆ ಸ್ಥಾನಕ್ಕೆ ಖಂಡಿತ ಹೋಗುವುದಿಲ್ಲ. ಈ ಯಜ್ಞಪ್ರದೇಶಕ್ಕೆ ಖಂಡಿತ ಬರುತ್ತಾನೆ.

English Translation.

He who is fierce, unmoved (by foes) and firm, ready equipped for battle,—if Maghavan hears the invocation of his adorer, he will not go apart (from us) but come hither.

॥ ಸಂಹಿತಾಪಾಠಃ ॥

**ಸತ್ಯಮಿತ್ಥಾ ವೃಷೇದಸಿ ವೃಷಜೂತಿರ್ನೋಽವೃತಃ ।**
**ವೃಷಾ ಹ್ಯುಗ್ರ ಶೃಣ್ವಿಷೇ ಪರಾವತಿ ವೃಷೋ ಅರ್ವಾವತಿ ಶ್ರುತಃ ॥ ೧೦ ॥**

। ಪದಪಾಠಃ ।

**ಸತ್ಯಂ । ಇತ್ಥಾ । ವೃಷಾ । ಇತ್ । ಅಸಿ । ವೃಷಽಜೂತಿಃ । ನಃ । ಅವೃತಃ ।**
**ವೃಷಾ । ಹಿ । ಉಗ್ರ । ಶೃಣ್ವಿಷೇ । ಪರಾಽವತಿ । ವೃಷೋ ಇತಿ । ಅರ್ವಾಽವತಿ । ಶ್ರುತಃ ॥ ೧೦ ॥**

॥ ಸಾಯಣಭಾಷ್ಯಂ ॥

ಹೇ ಉಗ್ರೋದ್ಗೂರ್ಣೇಂದ್ರ ತ್ವಂ ಸತ್ಯಮಿತ್ಥೇತ್ಥಂ ವೃಷೇತ್ಕಾಮಾನಾಂ ವರ್ಷಕ ಏವಾಸಿ । ವೃಷಜೂತಿರ್ವೃಷಭಿಶ್ವಾಕೃಷ್ಟೋ ನೋಽಸ್ಮಾಕಮವೃತಃ ಶತ್ರುಭಿರಪರಿವೃತಶ್ಚಾಸಿ । ವೃಷಾ ಹಿ ಸೇಚಕ ಏವ ಶೃಣ್ವಿಷೇ । ಶ್ರೂಯಸೇ । ಪರಾವತಿ ದೂರೇಽಪಿ ವೃಷೈವಾರ್ವಾವತಿ ಸಮೀಪೇಽಪಿ ವೃಷಾ ಸೇಚಕ ಏವ ಶ್ರುತಃ । ವೃಷೈವಾಶ್ರೂಯಥಾಃ ॥

॥ ಪ್ರತಿಪದಾರ್ಥ ॥

**ಉಗ್ರ**—ಅತ್ಯದ್ಭುತವಾದ ಶಕ್ತಿಯುಳ್ಳ ಎಲೈ ಇಂದ್ರನೇ । (**ತ್ವಂ**—ನೀನು) । **ಇತ್ಥಾ**—ಈ ಪ್ರಕಾರವಾಗಿ । **ವೃಷೇತ್**—ಕಾಮವರ್ಷಕನಾಗಿಯೇ । **ಅಸಿ**—ಆಗಿದ್ದೀಯೆ । **ನಃ**—ನಮ್ಮಲ್ಲಿಗೆ । **ವೃಷಜೂತಿಃ**—ಅಶ್ವಗಳಿಂದ ಕರೆತರಲ್ಪಟ್ಟು । **ಅವೃತಃ**—ಶತ್ರುಗಳಿಂದ ಸುತ್ತುವರೆಯಲ್ಪಡದಿದ್ದೀಯೆ । **ವೃಷಾ ಹಿ**—ನೀನು ಇಷ್ಟಾರ್ಥಪ್ರದನೆಂಬುದಾಗಿಯೇ । **ಶೃಣ್ವಿಷೇ**—ಪ್ರಖ್ಯಾತನಾಗಿದ್ದೀಯೇ । **ಪರಾವತಿ**—ದೂರದೇಶದಲ್ಲಿದ್ದರೂ । **ಅರ್ವಾವತಿ**—ಸಮೀಪದೇಶದಲ್ಲಿದ್ದರೂ । **ವೃಷಾ (ಇತಿ) ಶ್ರುತಃ**—ಕಾಮವರ್ಷಕನೆಂದು ಪ್ರಸಿದ್ಧನಾಗಿದ್ದೀಯೆ.

॥ ಭಾವಾರ್ಥ ॥

ಅತ್ಯದ್ಭುತವಾದ ಶಕ್ತಿಯುಳ್ಳ ಎಲೈ ಇಂದ್ರನೇ, ನೀನು ಈ ಪ್ರಕಾರವಾಗಿ ಕಾಮವರ್ಷಕನೇ ಆಗಿದ್ದೀಯೆ. ಅಶ್ವಗಳಿಂದ ನಮ್ಮಲ್ಲಿಗೆ ಕರೆತರಲ್ಪಟ್ಟು ಶತ್ರುಗಳಿಂದ ಸುತ್ತುವರೆಯಲ್ಪಡದಿದ್ದೀಯೆ. ನೀನು ದೂರದೇಶದಲ್ಲಿರಲಿ ಅಥವಾ ಸಮೀಪದ ಪ್ರದೇಶದಲ್ಲಿರಲಿ, ಕಾಮವರ್ಷಕನೆಂದೇ ಪ್ರಸಿದ್ಧನಾಗಿದ್ದೀಯೆ

## English Translation.

Verily (Indra), in this manner you are the showerer (of benefits), brought by vigorous (steeds) to us, unarrested (by foes); fierce (Indra), you are celebrated as a showerer (of benefits) when afar; you are celebrated as a showerer (of benefits) when nigh.

॥ ಸಂಹಿತಾಪಾಠಃ ॥

ವೃಷಣಸ್ತೇ ಅಭೀಶವೋ ವೃಷಾ ಕಶಾ ಹಿರಣ್ಯಯೀ ।
ವೃಷಾ ರಥೋ ಮಘವನ್ವೃಷಣಾ ಹರೀ ವೃಷಾ ತ್ವಂ ಶತಕ್ರತೋ ॥ ೧೧ ॥

॥ ಪದಪಾಠಃ ॥

ವೃಷಣಃ । ತೇ । ಅಭೀಶವಃ । ವೃಷಾ । ಕಶಾ । ಹಿರಣ್ಯಯೀ ।
ವೃಷಾ । ರಥಃ । ಮಘಽವನ್ । ವೃಷಣಾ । ಹರೀಇತಿ । ವೃಷಾ । ತ್ವಂ । ಶತಕ್ರತೋ ಇತಿ ಶತಽಕ್ರತೋ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಮಘವನ್ ತೇ ತವಾಭೀಶವೋ ರಶ್ಮಯೋಽಶ್ವರಶನಾ ವೃಷಣೋ ವರ್ಷಿತಾರಃ । ಹಿರಣ್ಯಯೀ ಹಿರಣ್ಮಯೀ ಕಶಾಪಿ ವೃಷಾ । ರಥೋಽಪಿ ವೃಷಾ ವರ್ಷಿತಾ । ಹರೀ ಅಶ್ವಾವಪಿ ವೃಷಣಾ ವೃಷಣೌ ವರ್ಷಿತಾರೌ । ಹೇ ಶತಕ್ರತೋ ಬಹುಪ್ರಜ್ಞೇಂದ್ರ ತ್ವಂ ಚ ವೃಷಾ ವರ್ಷಿತಾ ॥**

॥ ಪ್ರತಿಪದಾರ್ಥ ॥

**ಮಘವನ್**—ಧನವಂತನಾದ ಎಲೈ ಇಂದ್ರನೇ । **ತೇ**—ನಿನ್ನ । **ಅಭೀಶವಃ**—ಕುದುರೆಯ ಕಡಿವಾಣಗಳು (ಲಗಾಮುಗಳೂ) । **ವೃಷಣಃ**—ಕಾಮವರ್ಷಕವಾಗಿವೆ । **ಹಿರಣ್ಯಯೀ**—ಸುವರ್ಣನಿರ್ಮಿತವಾದ । **ಕಶಾ**—ಚಾವುಟಿಯೂ । **ವೃಷಾ**—ಇಷ್ಟಾರ್ಥಪ್ರದವಾಗಿಯೇ ಇದೆ । **ರಥಃ**—ನಿನ್ನ ರಥವೂ ಕೂಡ । **ವೃಷಾ**—ಇಷ್ಟಾರ್ಥಪ್ರದವಾಗಿಯೇ ಇದೆ । **ಹರೀ**—ನಿನ್ನ ಅಶ್ವಗಳೂ ಸಹ । **ವೃಷಣಾ**—ಇಷ್ಟಾರ್ಥಪ್ರದವಾಗಿವೆ । **ಶತಕ್ರತೋ**—ಬಹುವಿಧವಾದ ಕರ್ಮಕಾರಕನಾದ ಎಲೈ ಇಂದ್ರನೇ । **ತ್ವಂ**—ನೀನೂ । **ವೃಷಾ**—ಇಷ್ಟಾರ್ಥಪ್ರದನಾಗಿಯೇ ಇದ್ದೀಯೆ.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ನಿನ್ನ ಕುದುರೆಯ ಕಡಿವಾಣಗಳು (ಲಗಾಮುಗಳು) ಕಾಮವರ್ಷಕವಾಗಿವೆ. ಸುವರ್ಣನಿರ್ಮಿತವಾದ ಚಾವುಟಿಯೂ ಇಷ್ಟಾರ್ಥಪ್ರದವಾಗಿಯೇ ಇದೆ. ನಿನ್ನ ಅಶ್ವಗಳೂ ಕೂಡ ಇಷ್ಟಾರ್ಥಪ್ರದವಾಗಿವೆ. ಬಹುವಿಧವಾದ ಕರ್ಮಕಾರಕನಾದ ಎಲೈ ಇಂದ್ರನೇ, ನೀನೂ ಸಹ ಇಷ್ಟಾರ್ಥಪ್ರದನಾಗಿಯೇ ಇದ್ದೀಯೆ.

## English Translation.

Showerers (of benefits) are your reins, such also is your golden whip; your chariot, Maghavan, is a showerer (of benefits), so are your two horses; and you, too, Sathakratu, are the showerer (of benefits).

॥ ಸಂಹಿತಾಪಾಠಃ ॥

ವೃಷಾ ಸೋತಾ ಸುನೋತು ತೇ ವೃಷನ್ನೃಜೀಪಿನ್ನಾ ಭರ ।
ವೃಷಾ ದಧನ್ವೇ ವೃಷಣಂ ನದೀಷ್ವಾ ತುಭ್ಯಂ ಸ್ಥಾತರ್ಹರೀಣಾಂ ॥ ೧೨ ॥

॥ ಪದಪಾಠಃ ॥

**ವೃಷಾ । ಸೋತಾ । ಸುನೋತು । ತೇ । ವೃಷನ್ । ಋಜೀಪಿನ್ । ಆ । ಭರ ।**
**ವೃಷಾ । ದಧನ್ವೇ । ವೃಷಣಂ । ನದೀಷು । ಆ । ತುಭ್ಯಂ । ಸ್ಥಾತಃ । ಹರೀಣಾಂ ॥ ೧೨ ॥**

|| ಸಾಯಣಭಾಷ್ಯಂ ||

ಹೇ ವೃಷನ್ ವರ್ಷಿತರಿಂದ್ರ ತೇ ತವ ಸೋತಾಭಿಷವಕರ್ತಾ ವೃಷಾ ವರ್ಷಿತಾ ಸನ್ ಸುನೋತು। ಸೋಮಮಭಿಷುಣೋತು। ಹೇ ಋಜೀಷಿನ್ನೃಜುಗಮನೇಂದ್ರ ಆ ಭರ। ಧನಮಸ್ಮಭ್ಯಮಾಹರ। ಹರೀಣಾಮಶ್ವಾನಾಮಾಭಿಮುಖ್ಯೇನ ಹೇ ಸ್ಥಾತರಿಂದ್ರ ತುಭ್ಯಂ ನದೀಷೂದಕೇಷು ವೃಷಣಂ ವರ್ಷಿತಾರಂ ಸೋಮಂ ವೃಷಾ ವರ್ಷಿತಾ ದಧನ್ವೇ। ಧಾರಿತವಾನಭಿಷವಾರ್ಥಂ ||

। ಪ್ರತಿಪದಾರ್ಥ ।

**ವೃಷನ್**—ವೃಷ್ಟಿಪ್ರದನಾದ ಎಲೈ ಇಂದ್ರನೇ। **ತೇ**—ನಿನಗಾಗಿ। **ಸೋತಾ**--ಸೋಮವನ್ನು ಹಿಂಡತಕ್ಕವನು। **ವೃಷಾ**—ಕಾಮವರ್ಷಕನಾಗಿಯೇ। **ಸುನೋತು**—ಸೋಮವನ್ನು ಹಿಂಡಲಿ। **ಋಜೀಷಿನ್**—ನೇರವಾದ ಗಮನವುಳ್ಳ ಎಲೈ ಇಂದ್ರನೇ। **ಆ ಭರ**—ನಮಗಾಗಿ ಧನವನ್ನು ತುಂಬಿಕೊಂಡು ಬಾ। **ಹರೀಣಾಂ**—ಅಶ್ವಗಳನ್ನು। **ಆ**—ನಮಗಭಿಮುಖವಾಗಿ। **ಸ್ಥಾತಃ**—ನಿಲ್ಲಿಸತಕ್ಕ ಎಲೈ ಇಂದ್ರನೇ। **ನದೀಷು**—ಉದಕಗಳಲ್ಲಿ। **ವೃಷಣಂ**—ಮಿಶ್ರವಾಗತಕ್ಕ ಸೋಮವನ್ನು। **ವೃಷಾ**—ಕಾಮವರ್ಷಕನಾದ ಯಜಮಾನನು। **ತುಭ್ಯಂ**—ನಿನಗಾಗಿ। **ದಧನ್ವೇ**—ಹಿಡಿದು ನಿಂತಿದ್ದಾನೆ.

। ಭಾವಾರ್ಥ ।

ವೃಷ್ಟಿಪ್ರದನಾದ ಎಲೈ ಇಂದ್ರನೇ, ಸೋಮವನ್ನು ನಿನಗಾಗಿ ಹಿಂಡತಕ್ಕ ಯಜಮಾನನು ಕಾಮವರ್ಷಕನಾಗಿಯೇ ಸೋಮವನ್ನು ಹಿಂಡಲಿ. ನೇರವಾದ ಗಮನವುಳ್ಳ ಎಲೈ ಇಂದ್ರನೇ, ನಮಗಾಗಿ ಧನವನ್ನು ತುಂಬಿಕೊಂಡು ಬಾ. ಅಶ್ವಗಳನ್ನು ನನಗಭಿಮುಖವಾಗಿ ನಿಲ್ಲಿಸತಕ್ಕ ಎಲೈ ಇಂದ್ರನೇ, ಉದಕಗಳಿಂದ ಮಿಶ್ರವಾಗತಕ್ಕ ಸೋಮವನ್ನು ಕಾಮವರ್ಷಕನಾದ ಯಜಮಾನನು ನಿನಗಾಗಿ ಹಿಡಿದಿದ್ದಾನೆ.

## English Translation.

Showerer (of benefits), may the offerer of the libation to you effuse the soma as a showerer ; straight-going (Indra), bring (us wealth) : arrester of your horses, the showerer (of the oblation) has prepared the bountiful Soma to be mixed with the waters for you.

। ಸಂಹಿತಾಪಾಠಃ ।

ಏಂದ್ರ ಯಾಹಿ ಪೀತಯೇ ಮಧು ಶವಿಷ್ಠ ಸೋಮ್ಯಂ।

ನಾಯಮಚ್ಛಾ ಮಘವಾ ಶೃಣವದ್ಗಿರೋ ಬ್ರಹ್ಮೋಕ್ಥಾ ಚ ಸುಕ್ರತುಃ ॥

॥ ಪದಪಾಠಃ ॥

ಆ । ಇಂದ್ರ । ಯಾಹಿ । ಪೀತಯೇ । ಮಧು । ಶವಿಷ್ಠ । ಸೋಮ್ಯಂ ।

ನ । ಅಯಂ । ಅಚ್ಛ । ಮಘಽವಾ । ಶೃಣವತ್ । ಗಿರಃ । ಬ್ರಹ್ಮ । ಉಕ್ಥಾ । ಚ । ಸುಽಕ್ರತುಃ ॥೧೪॥

। ಸಾಯಣಭಾಷ್ಯಂ ॥

ಹೇ ಶವಿಷ್ಠ ಬಲವತ್ತಮೇಂದ್ರ ಸೋಮ್ಯಂ ಸೋಮಾತ್ಮಕಂ ಮಧ್ವಮೃತಂ ಪೀತಯೇ ಪಾನಾಯಾ ಯಾಹಿ । ಆಗಚ್ಛ । ಕಿಮರ್ಥಮಾಗಮನಮಪೇಕ್ಷ್ಯತ ಆಹ । ಯತ ಆಗಮನಮಂತರೇಣ ಮಘವಾ ಧನವಾನ್ ಸುಕ್ರತುಃ ಸುಕರ್ಮಾ ಶೋಭನಪ್ರಜ್ಞೋ ವಾಯಮಿಂದ್ರೋ ಗಿರಃ ಸ್ತುತೀರ್ಬ್ರಹ್ಮ ಸ್ತೋತ್ರಾಣ್ಯುಕ್ಥಾನಿ ಚ ನಾಚ್ಛ ಶೃಣವತ್ ನಾಭಿಶೃಣೋತಿ । ಅತ ಆಗಮನಮಿತ್ಯರ್ಥಃ ॥

। ಪ್ರತಿಪದಾರ್ಥ ।

**ಶವಿಷ್ಠ**—ಅತ್ಯಧಿಕವಾದ ಶಕ್ತಿಯುಳ್ಳ । **ಇಂದ್ರ**—ಎಲೈ ಇಂದ್ರನೇ । **ಸೋಮ್ಯಂ**—ಸೋಮರೂಪವಾದ । **ಮಧು**—ಅಮೃತವನ್ನು । **ಪೀತಯೇ**—ಪಾನಮಾಡಲು । **ಆ ಯಾಹಿ**—ದಯಮಾಡು (ತನ್ನ ಆಗಮನವಿಲ್ಲದಿದ್ದರೆ) । **ಮಘವಾ**—ಧನವಂತನೂ । **ಸುಕ್ರತುಃ**—ಉತ್ತಮವಾದ ಕರ್ಮವುಳ್ಳವನೂ ಆದ । **ಅಯಂ**—ಈ ಇಂದ್ರನು ) **ಗಿರಃ**—ಸ್ತುತಿಗಳನ್ನೂ । **ಉಕ್ಥಾ ಬ್ರಹ್ಮ ಚ**—ನಮ್ಮ ಉಕ್ಥರೂಪವಾದ ಸ್ತೋತ್ರಗಳನ್ನೂ । **ಅಚ್ಛ**—ಪೂರ್ಣವಾಗಿ । **ನ ಶೃಣವತ್**—ಕೇಳಲಾರನು.

। ಭಾವಾರ್ಥ ॥

ಅತ್ಯಧಿಕವಾದ ಶಕ್ತಿಯುಳ್ಳ ಎಲೈ ಇಂದ್ರನೇ, ಸೋಮರೂಪವಾದ ಅಮೃತವನ್ನು ಪಾನಮಾಡಲು ದಯಮಾಡು. ತನ್ನ ಆಗಮನವಿಲ್ಲದಿದ್ದರೆ ಧನವಂತನೂ, ಉತ್ತಮವಾದ ಕರ್ಮವುಳ್ಳವನೂ ಆದ ಈ ಇಂದ್ರನು ಸ್ತುತಿಗಳನ್ನೂ, ನಮ್ಮ ಉಕ್ಥರೂಪವಾದ ಸ್ತೋತ್ರಗಳನ್ನೂ ಪೂರ್ಣವಾಗಿ ಹೇಳಲಾರನು.

## English Translation.

Come, most powerful Indra, to drink of the Soma ambrosia, (for without coming) this Maghavan, the achiever of many exploits, hears not our praises, our chaunts, our hymns.

। ಸಂಹಿತಾಪಾಠಃ ।

ವಹಂತು ತ್ವಾ ರಥೇಷ್ಠಾಮಾ ಹರಯೋ ರಥಯುಜಃ ।

ತಿರಶ್ಚಿದರ್ಯಂ ಸವನಾನಿ ವೃತ್ರಹನ್ನನ್ಯೇಷಾಂ ಯಾ ಶತಕ್ರತೋ ॥೧೫॥

|| ಪದಪಾಠಃ ||

ವಹಂತು । ತ್ವಾ । ರಥೇಽಸ್ಥಾಂ । ಆ । ಹರಯಃ । ರಥಽಯುಜಃ ।

ತಿರಃ । ಚಿತ್ । ಅರ್ಯಂ । ಸವನಾನಿ । ವೃತ್ರಽಹನ್ । ಅನ್ಯೇಷಾಂ । ಯಾ । ಶತಕ್ರತೋ ಇತಿ ಶತಽಕ್ರತೋ ॥ ೧೪ ॥

|| ಸಾಯಣಭಾಷ್ಯಂ ||

ಹೇ ವೃತ್ರಹಞ್ಛತಕ್ರತೋ ಬಹುಪ್ರಜ್ಞ ರಥೇಷ್ಠಾಂ ರಥಸ್ಥಾಮರ್ಯಮೀಶ್ವರಂ ತ್ವಾ ತ್ವಾಂ ರಥಯುಜೋ ರಥೇ ಯುಕ್ತಾ ಹರಯೋಽಶ್ವಾ ಅನ್ಯೇಷಾಂ ಯಾ ಯಾನಿ ಸವನಾನಿ ಸಂತಿ ತಾನಿ ತಿರಸ್ತಿರಸ್ಕುರ್ವಂತಃ ಸವನಾನ್ಯಸ್ಮದೀಯಾನಿ ಸವನಾನ್ಯಾ ವಹಂತು ॥

||ಪ್ರತಿಪದಾರ್ಥ ||

**ವೃತ್ರಹನ್**—ಶತ್ರುನಾಶಕನೂ । **ಶತಕ್ರತೋ**—ಅನೇಕ ವಿಧವಾದ ಯಜ್ಞಕರ್ಮವುಳ್ಳವನೂ ಆದ ಎಲೈ ಇಂದ್ರನೇ । **ರಥೇಷ್ಠಾಂ**—ರಥದಲ್ಲಿ ಕುಳಿತಿರುವವನೂ । **ಅರ್ಯಂ**—ಈಶ್ವರನೂ ಆದ । **ತ್ವಾ**—ನಿನ್ನನ್ನು । **ರಥಯುಜಃ**—ರಥದಲ್ಲಿ ಯೋಜಿತವಾಗಿರುವ । **ಹರಯಃ**—ಅಶ್ವಗಳು । **ಅನ್ಯೇಷಾಂ**—ಇತರರಿಂದ ನೆರವೇರಿಸಲ್ಪಡುವ । **ಯಾ**—ಯಾವ ಯಜ್ಞಕರ್ಮಗಳುಂಟೋ ಅವುಗಳನ್ನು । **ತಿರಶ್ಚಿತ್**—ಹಿಂದಕ್ಕೆ ತಳ್ಳಿಹಾಕುತ್ತಾ । **ಸವನಾನಿ**—ನಮ್ಮ ಯಜ್ಞಕ್ಕೆ । **ಆ ವಹಂತು**—ಕರೆತರಲಿ.

|| ಭಾವಾರ್ಥ ||

ಶತ್ರುನಾಶಕನೂ, ಅನೇಕ ವಿಧವಾದ ಯಜ್ಞಕರ್ಮಗಳುಳ್ಳವನೂ ಆದ ಎಲೈ ಇಂದ್ರನೇ, ರಥದಲ್ಲಿ ಕುಳಿತಿರುವವನೂ, ಈಶ್ವರನೂ ಆದ ನಿನ್ನನ್ನು ರಥದಲ್ಲಿ ಯೋಜಿತವಾಗಿರುವ ಅಶ್ವಗಳು ಇತರರಿಂದ ನೆರವೇರಿಸಲ್ಪಡುವ ಯಾವ ಯಜ್ಞಕರ್ಮಗಳುಂಟೋ ಅವುಗಳನ್ನು ಹಿಂದಕ್ಕೆ ತಳ್ಳಿಹಾಕುತ್ತಾ ಎಂದರೆ ಅಲ್ಲಿಗೆ ಹೋಗದೆ ನಮ್ಮ ಯಜ್ಞಕ್ಕೇ ಕರೆತರಲಿ.

## English Translation.

Satakrutu, slayer of Vritra, let your horses, yoked to your car, bring you, the lord, riding in your chariot, (to our sacrifices), avoiding those sacrifices (offered) by others.

। ಸಂಹಿತಾಪಾಠಃ ।

ಅಸ್ಮಾಕಮದ್ಯಾಂತಮಂ ಸ್ತೋಮಂ ಧಿಷ್ವ ಮಹಾಮಹ ।

ಅಸ್ಮಾಕಂ ತೇ ಸವನಾ ಸಂತು ಶಂತಮಾ ಮದಾಯ ದ್ಯುಕ್ಷ ಸೋಮಪಾಃ ॥

॥ ಪದಪಾಠಃ ॥

ಅಸ್ಮಾಕಂ । ಅದ್ಯ । ಅಂತಮಂ । ಸ್ತೋಮಂ । ಧಿಷ್ವ । ಮಹಾಽಮಹ ।

ಅಸ್ಮಾಕಂ । ತೇ । ಸವನಾ । ಸಂತು । ಶಂಽತಮಾ । ಮದಾಯ । ದ್ಯುಕ್ಷ । ಸೋಮಽಪಾಃ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಮಹಾಮಹ ಮಹಃ ಮಹಸಿ ಮಹನ್ ಮಹಾಪೂಜ ವಾದ್ಯಾಂತಮಮಂತಿಕತಮಮಸ್ಮಾಕಂ ಮೇಧ್ಯಾತಿಥೀನಾಂ ಸ್ತೋಮಂ ಧಿಷ್ವ । ಧಾರಯ । ಹೇ ದ್ಯುಕ್ಷ ದೀಪ್ತ ಸೋಮಪಾಃ ಸೋಮಸ್ಯ ಪಾತರಿಂದ್ರ ತೇ ತವ ಮದಾಯ ಮದಾರ್ಥಂ ಸವನಾ ಸವನಾನ್ಯಸ್ಮಾಕಂ ಶಂತಮಾ ಶಂತಮಾನಿ ಸಂತು । ಭವಂತು ॥

॥ ಪ್ರತಿಪದಾರ್ಥ ॥

**ಮಹಾಮಹ**—ಅತ್ಯಧಿಕವಾದ ಪೂಜೆಗೆ ಅರ್ಹನಾದ ಎಲೈ ಇಂದ್ರನೇ । **ಅದ್ಯ**—ಈ ಯಾಗ ಕಾಲದಲ್ಲಿ । **ಅಂತಮಂ**—ನಿನಗೆ ಅತ್ಯಂತ ಸಮೀಪವಾಗಿರುವ । **ಅಸ್ಮಾಕಂ**-ಮೇಧ್ಯಾತಿಥಿವಂಶಸ್ಥರಾದ ನಮ್ಮ । **ಸ್ತೋಮಂ**—ಸ್ತುತಿಗಳನ್ನು । **ಧಿಷ್ವ**—ಧರಿಸು । **ದ್ಯುಕ್ಷ**—ಪ್ರಕಾಶಮಾನನಾದವನೂ । **ಸೋಮಪಾಃ**—ಸೋಮವನ್ನು ಪಾನಮಾಡುವವನೂ ಆದ ಎಲೈ ಇಂದ್ರನೇ । **ತೇ**—ನಿನ್ನ । **ಮದಾಯ**—ಹರ್ಷಾರ್ಥವಾಗಿ ನೆರವೇರಿದ । **ಸವನಾ**—ಯಜ್ಞಗಳು । **ಅಸ್ಮಾಕಂ**—ನಮಗೆ । **ಶಂತಮಾ**—ಸುಖವನ್ನುಂಟುಮಾಡುವವಾಗಿ । **ಸಂತು**—ಆಗಲಿ.

॥ ಭಾವಾರ್ಥ ॥

ಅತ್ಯಧಿಕವಾದ ಪೂಜೆಗೆ ಅರ್ಹನಾದ ಎಲೈ ಇಂದ್ರನೇ, ಈ ಯಾಗ ಕಾಲದಲ್ಲಿ ನಿನಗೆ ಅತ್ಯಂತ ಸಮೀಪದಲ್ಲಿರುವ ಮೇಧ್ಯಾತಿಥಿವಂಶಸ್ಥರಾದ ನಮ್ಮ ಸ್ತುತಿಗಳನ್ನು ಧರಿಸು (ಕೇಳು). ಪ್ರಕಾಶಮಾನನೂ, ಸೋಮವನ್ನು ಪಾನಮಾಡುವವನೂ ಆದ ಎಲೈ ಇಂದ್ರನೇ, ನಿನ್ನ ಹರ್ಷಾರ್ಥವಾಗಿ ನೆರವೇರುವ ನಮ್ಮ ಯಜ್ಞಗಳು ನಮಗೆ ಸುಖಕಾರಕಗಳಾಗಿ ಆಗಲಿ.

English Translation.

Greatest of the great, brilliant drinker of the Soma, accept to-day this our present praise; may our sacrifices be most successful in exciting your exhilaration.

॥ ಸಂಹಿತಾಪಾಠಃ ॥

ನಹಿ ಷಸ್ತವ ನೋ ಮಮ ಶಾಸ್ತ್ರೇ ಅನ್ಯಸ್ಯ ರಣ್ಯತಿ ।

ಯೋ ಅಸ್ಮಾನ್ವೀರ ಆನಯತ್ ॥ ೧೬ ॥

|| ಪದಪಾಠಃ ||

**ನಹಿ । ಸಃ । ತವ । ನೋ ಇತಿ । ಮಮ । ಶಾಸ್ತ್ರೇ । ಅನ್ಯಸ್ಯ । ರಣ್ಯತಿ ।**

**ಯಃ । ಅಸ್ಮಾನ್ । ವೀರಃ । ಆ । ಅನಯತ್ ॥ ೧೬ ॥**

|| ಸಾಯಣಭಾಷ್ಯಂ ||

ಯೋ ವೀರಃ ಶೂರೋಽಸ್ಮಾನಾನಯತ್ ಸ ಇಂದ್ರಸ್ತವ ಶಾಸ್ತ್ರೇ ಶಾಸನೇ ನಹಿ ರಣ್ಯತಿ । ನ ರಮತೇ । ಮಮಾಪಿ ಶಾಸ್ತ್ರೇ ಶಾಸನೇ ನೋ ರಣ್ಯತಿ । ಅನ್ಯಸ್ಯಾಪಿ ಶಾಸನೇ ನ ರಣ್ಯತಿ । ಕಿಂತು ರಕ್ಷಣ ಏವ ರಮತ ಇತ್ಯರ್ಥಃ ॥

|| ಪ್ರತಿಪದಾರ್ಥ ||

**ವೀರಃ**—ಶೂರನಾದ । **ಯಃ**—ಯಾವ ಇಂದ್ರನು । **ಅಸ್ಮಾನ್**—ನಮ್ಮನ್ನು । **ಆನಯತ್**—ಸನ್ಮಾರ್ಗದಲ್ಲಿ ಕರೆತಂದನೋ । **ಸಃ**—ಅದೇ ಇಂದ್ರನು । **ತವ** ನಿನಗೆ । **ಶಾಸ್ತ್ರೇ**—ಹಿಂಸಕವಾದ ಶಿಕ್ಷ ಮಾಡುವುದರಲ್ಲಿ । **ನಹಿ ರಣ್ಯತಿ**—ಖಂಡಿತವಾಗಿಯೂ ಸಂತೋಷಪಡುವುದಿಲ್ಲ । **ಮಮ**—ನನ್ನ ಹಿಂಸಕವಾದ ಶಿಕ್ಷೆಯಲ್ಲಿಯೂ । **ನೋ**—ಸಂತೋಷಪಡುವುದಿಲ್ಲ । **ಅನ್ಯಸ್ಯ**—ನಮಗೆ ಸೇರಿದ ಇತರರನ್ನು ಹಿಂಸಿಸುವುದರಲ್ಲಿಯೂ ಸಂತೋಷಗೊಳ್ಳುವುದಿಲ್ಲ.

|| ಭಾವಾರ್ಥ ||

ಶೂರನಾದ ಯಾವ ಇಂದ್ರನು ನಮ್ಮನ್ನು ಸನ್ಮಾರ್ಗದಲ್ಲಿ ಕರೆತಂದನೋ, ಅದೇ ಇಂದ್ರನು ನಿನಗೆ ಹಿಂಸಾಕಾರಕವಾದ ಶಿಕ್ಷೆಯನ್ನು ಕೊಡುವುದರಲ್ಲಿ ಖಂಡಿತವಾಗಿಯೂ ಸಂತೋಷಪಡುವುದಿಲ್ಲ. ನನಗೆ ಹಿಂಸೆಯನ್ನುಂಟು ಮಾಡುವ ಶಿಕ್ಷೆಯಲ್ಲಾಗಲಿ ಅಥವಾ ನಮಗೆ ಸೇರಿದ ಇತರರನ್ನು ಹಿಂಸಿಸುವ ಶಿಕ್ಷೆಯಿಂದಾಗಲಿ ಸಂತೋಷಗೊಳ್ಳುವುದಿಲ್ಲ.

## English Translation.

The hero (Indra) who has (ever) guided us delights not in your punishment, nor in my, nor in that of any other.

|| ಸಂಹಿತಾಪಾಠಃ ||

**ಇಂದ್ರಶ್ಚಿದ್ಘಾ ತದಬ್ರವೀತ್ಸ್ತ್ರಿಯಾ ಅಶಾಸ್ಯಂ ಮನಃ ।**

**ಉತೋ ಅಹ ಕ್ರತುಂ ರಘುಂ ॥ ೧೭ ॥**

|| ಪದಪಾಠಃ ||

**ಇಂದ್ರಃ । ಚಿತ್ । ಘ । ತತ್ । ಅಬ್ರವೀತ್ । ಸ್ತ್ರಿಯಾಃ । ಅಶಾಸ್ಯಂ । ಮನಃ ।**

**ಉತೋ ಇತಿ । ಅಹ । ಕ್ರತುಂ । ರಘುಂ ॥ ೧೭ ॥**

|| ಸಾಯಣಭಾಷ್ಯಂ ||

ಯೋ ಮೇಧ್ಯಾತಿಥೇರ್ಧನಪ್ರದಾತಾ ಪ್ಲಾಯೋಗಿರಾಸಂಗಃ ಸ ಪುಮಾನ್ ಭೂತ್ವಾ ಸ್ತ್ರ್ಯಭವತ್ । ತದಾ ಯದಿಂದ್ರ ಉವಾಚ ತದಿದಮಾಹ । ತಥಾ ಚಾಹುಃ ॥ ಪ್ಲಾಯೋಗಿಶ್ಚಾಸಂಗೋ ಯಃ ಸ್ತ್ರೀ ಭೂತ್ವಾ ಪುಮಾನಭೂತ್ ಸ ಮೇಧ್ಯಾತಿಥಯೇ ದಾನಂ ದತ್ತ್ವೇತಿ । ಇಂದ್ರಶ್ಚಿದ್ಘೇಂದ್ರಃ ಖಲು ತದಬ್ರವೀತ್ । ಸ್ತ್ರಿಯಾ ಮನಶ್ಚಿತ್ತಮಶಾಸ್ಯಂ ಪುರುಷೇಣಾಶಿಷ್ಯಂ ಶಾಸಿತುಮಶಕ್ಯಂ ಪ್ರಬಲತ್ವಾದಿತಿ । ಉತೋ ಅಪಿ ಚ ಸ್ತ್ರಿಯಾಃ ಕ್ರತುಂ ಪ್ರಜ್ಞಾಂ ರಘುಂ ಲಘುಮಾಹ ॥

|| ಪ್ರತಿಪದಾರ್ಥ ||

ಸ್ತ್ರಿಯಾಃ—ಹೆಂಗಸಿನ । ಮನಃ—ಮನಸ್ಸು । ಅಶಾಸ್ಯಂ—ನಿಯಮನಕ್ಕೆ ಒಳಪಡತಕ್ಕದಲ್ಲ ಎಂಬುದಾಗಿ । ಇಂದ್ರಶ್ಚಿತ್ ಘ—ಇಂದ್ರನೇ । ತದಬ್ರವೀತ್- ಸ್ವತಃ ಈ ವಿಷಯವನ್ನು ಹೇಳಿದ್ದಾನೆ । ಉತೋ—ಅದೂ ಅಲ್ಲದೇ । ಕ್ರತುಂ ಅಹ—ಅವಳ ಪ್ರಜ್ಞೆಯನ್ನೂ । ರಘುಂ—ಕೆಳಗಿನ ಮಟ್ಟದ್ದೆಂಬುದಾಗಿಯೂ ಹೇಳಿದ್ದಾನೆ.

|| ಭಾವಾರ್ಥ ||

ಹೆಂಗಸಿನ ಮನಸ್ಸು ಗಂಡಸಿನ ನಿಯಮನಕ್ಕೆ ಒಳಪಡತಕ್ಕದ್ದಲ್ಲವೆಂದು ಇಂದ್ರನೇ ಸ್ವತಃ ತಿಳಿಸಿದ್ದಾನೆ. ಅಲ್ಲದೇ ಅವಳ ಪ್ರಜ್ಞೆಯೂ (ತಿಳಿವಳಿಕೆಯೂ) ಕೆಳಮಟ್ಟದ್ದೆಂದೂ ತಿಳಿಸಿದ್ದಾನೆ.

English Translation.

Verily Indra said that the mind of woman is not to be controlled, he declared also that her intellect was small.

|| ಸಂಹಿತಾಪಾಠಃ ||

ಸಪ್ತೀ ಚಿದ್ಘಾ ಮದಚ್ಯುತಾ ಮಿಥುನಾ ವಹತೋ ರಥಂ ।
ಏವೇದ್ಧೂರ್ವೃಷ್ಣ ಉತ್ತರಾ ॥ ೧೮ ॥

|| ಪದಪಾಠಃ ||

ಸಪ್ತೀ ಇತಿ । ಚಿತ್ । ಘ । ಮದಽಚ್ಯುತಾ । ಮಿಥುನಾ । ವಹತಃ । ರಥಂ ।
ಏವ । ಇತ್ । ಧೂಃ । ವೃಷ್ಣಃ । ಉತ್ಽತರಾ ॥ ೧೮ ॥

|| ಸಾಯಣಭಾಷ್ಯಂ ||

ಸಪ್ತೀ ಚಿದ್ಘೇಂದ್ರಸ್ಯಾಶ್ವಾಪಿ ಖಲು ಮದಚ್ಯುತಾ ಸೋಮಂ ಪ್ರತಿ ಗಂತಾರಾವಿಂದ್ರಸ್ಯೈವ ರಥಂ ಮಿಥುನೌ ವಹತಃ । ಏವೇದೇವಮೇವ ವೃಷ್ಣ ಇಂದ್ರಸ್ಯ ರಥೋ ಧೂರುತ್ತರಾತ್ಸಯೋರುತ್ತರಾ ಭವತಿ ॥

॥ ಪ್ರತಿಪದಾರ್ಥ ॥

**ಸಪ್ತೀ ಚಿತ್ ಘ**—ಇಂದ್ರನ ಅಶ್ವಗಳೂ ಕೂಡ | **ಮದಚ್ಯುತಾ**—ಮದಕಾರಕವಾದ ಸೋಮಕ್ಕಾಗಿ | **ರಥಂ**—ಇಂದ್ರನ ರಥವನ್ನು | **ಮಿಥುನಾ**—ಒಟ್ಟಿಗೆ | **ವಹತಃ**—ವಹಿಸಿಕೊಂಡು ಬರುತ್ತವೆ | **ಏವೇತ್**—ಇದರಂತೆಯೇ | **ವೃಷ್ಣಃ**—ವೃಷ್ಟಿಕಾರಕನಾದ ಇಂದ್ರನ | **ಧೂಃ**—ನೊಗವೂ ಸಹ | **ಉತ್ತರಾ**—ಇಂದ್ರನ ಕುದುರೆಗಳ ಹೆಗಲಿನ ಮೇಲಿರುತ್ತವೆ

॥ ಭಾವಾರ್ಥ ॥

ಇಂದ್ರನ ಅಶ್ವಗಳೂ ಸಹ ಮದಕಾರಕವಾದ ಸೋಮಕ್ಕಾಗಿ ಇಂದ್ರನ ರಥವನ್ನು ಒಟ್ಟಿಗೆ ಎಳೆದುಕೊಂಡು ಬರುತ್ತವೆ. ಇದರಂತೆಯೇ, ವೃಷ್ಟಿಕಾರಕನಾದ ಇಂದ್ರನ ನೊಗವೂ ಸಹ ಇಂದ್ರನ ಕುದುರೆಗಳ ಹೆಗಲಿನ ಮೇಲಿರುತ್ತದೆ.

## English Translation.

The two horses of Indra, hastening to the exhilaration (of the Soma) draw his chariot; the pole of the showerer rests upon them.

॥ ಸಂಹಿತಾಪಾಠಃ ॥

ಅಧಃ ಪಶ್ಯಸ್ವ ಮೋಪರಿ ಸಂತರಾಂ ಪಾದಕೌ ಹರ ।
ಮಾ ತೇ ಕಶಪ್ಲಕೌ ದೃಶನ್ ಸ್ತ್ರೀ ಹಿ ಬ್ರಹ್ಮಾ ಬಭೂವಿಥ ॥ ೧೯ ॥

॥ ಪದಪಾಠಃ ॥

**ಅಧಃ । ಪಶ್ಯಸ್ವ । ಮಾ । ಉಪರಿ । ಸಂಽತರಾಂ । ಪಾದಕೌ । ಹರ ।**
**ಮಾ । ತೇ । ಕಶಽಪ್ಲಕೌ । ದೃಶನ್ । ಸ್ತ್ರೀ । ಹಿ । ಬ್ರಹ್ಮಾ । ಬಭೂವಿಥ ॥ ೧೯ ॥**

॥ ಸಾಯಣಭಾಷ್ಯಂ ॥

ಏವಮಂತರಿಕ್ಷಾದಾಗಚ್ಛನ್ರಥಸ್ಥ ಇಂದ್ರಃ ಸ್ತ್ರಿಯಂ ಸಂತಂ ಸ್ವಸ್ಮಾತ್ಸ್ವಂಸ್ತ್ರ್ಯಮಿಚ್ಛಂತಂ ಪ್ಲಾಯೋಗಿಂ ಯದುವಾಚ ತದಾಹ । ಹೇ ಪ್ಲಾಯೋಗೇ ತ್ವಂ ಸ್ತ್ರೀ ಸತ್ಯಧಃ ಪಶ್ಯಸ್ವ । ಏಷ ಸ್ತ್ರೀಣಾಂ ಧರ್ಮಃ । ಉಪರಿ ಮಾ ಪಶ್ಯಸ್ವ । ಉಪರಿದರ್ಶನಂ ಸ್ತ್ರೀಣಾಂ ಧರ್ಮೋ ನ ಭವತಿ ಹಿ । ಪಾದಕೌ ಪಾದಾವಪಿ ಸಂತರಾಂ ಸಂಶ್ಲಿಷ್ಟೌ ಯಥಾ ಭವತಸ್ತಥಾ ಹರ । ಯಥಾ ಪುರುಷೋ ವಿಶ್ಲಿಷ್ಟಪಾದನಿಧಾನೋ ಭವತಿ ತಥಾ ತ್ವಯಾ ಸ್ತ್ರಿಯಾ ನ ಕರ್ತವ್ಯಮಿತ್ಯರ್ಥಃ । ಅಪಿ ಚ ತೇ ಕಶಪ್ಲಕೌ । ಕಶಶ್ಚ ಪ್ಲಕಶ್ಚ ಕಶಪ್ಲಕೌ । ಕಶತಿರಾಹನನಕರ್ಮಾ । ಕಶಪ್ಲಕಾವುಭೇ ಅಂಗೇ ಮಾ ದೃಶನ್ । ಪುರುಷಾ ನ ಪಶ್ಯಂತು । ತಯೋರದರ್ಶನಂ ವಾಸಸಃ ಸುಷ್ಠು ಪರಿಧಾನೇನ ಭವತಿ । ಅತಃ ಸುಷ್ಠು ವಾಸಸಾ ಪರಿಧಾನಂ ಕುರು । ಸ್ತ್ರಿಯೋ ಹ್ಯಾ ಗುಲ್ಫಾದಭಿಸಂವೀತಾ ಭವಂತೀತ್ಯರ್ಥಃ ಹಿ ಯಸ್ಮಾತ್ಕಾರಣಾದ್ಬ್ರಹ್ಮಾ ಸನ್ ಸ್ತ್ರೀ ಬಭೂವಿಥ ॥

॥ ಪ್ರತಿಪದಾರ್ಥ ॥

(ಎಲೈ ಪ್ಲಯೋಗಪುತ್ರನೇ) **ಅಧಃ**—(ಸ್ತ್ರೀಗೆ ಲಕ್ಷಣವಾಗಿ) ಅಧೋಭಾಗಕ್ಕೆ । **ಪಶ್ಯಸ್ವ**—ನೋಡು । **ಉಪರಿ**—ಮೇಲುಗಡೆಗೆ । **ಮಾ**—ನೋಡಬೇಡ । **ಪಾದಕೌ**—ನಿನ್ನ ಪಾದಗಳೆರಡನ್ನೂ । **ಸಂತರಾಂ**—ಒಟ್ಟಿಗೆ ಸೇರಿರುವಂತೆ । **ಹರ**—ಜೋಡಿಸಿಕೊ । **ತೇ**—ನಿನ್ನ । **ಕಶಪ್ಲಕೌ**—ಮುಂಡಿಗಳನ್ನು । **ಮಾ ದೃಶನ್**—ಪುರುಷರು ನೋಡದಿರುವಂತಾಗಲಿ । **ಹಿ**—ಏತಕ್ಕೆಂದರೆ । **ಬ್ರಹ್ಮಾ**—ನೀನು ಬ್ರಹ್ಮಸ್ಥಾನದಲ್ಲಿದ್ದು । **ಸ್ತ್ರೀ**—ಹೆಂಗಸಾಗಿ । **ಬಭೂವ**—ಪರಿವರ್ತಿತನಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಪ್ಲಯೋಗಪುತ್ರನೇ, ಸ್ತ್ರೀಗೆ ಲಕ್ಷಣವಾಗಿ ನೀನು ಅಧೋಭಾಗಕ್ಕೆ ಮಾತ್ರ ನೋಡು. ನಿನ್ನ ದೃಷ್ಟಿಯನ್ನು ಊರ್ಧ್ವಮುಖವಾಗಿ ಪ್ರಸರಿಸಬೇಡ ನಿನ್ನ ಪಾದಗಳೆರಡನ್ನೂ ಒಟ್ಟಿಗೆ ಸೇರಿರುವಂತೆ ಜೋಡಿಸು. ನಿನ್ನ ಮುಂಡಿಗಳನ್ನು ಪುರಷರು ನೋಡದಿರುವಂತಾಗಲಿ. ಏತಕ್ಕೆಂದರೆ, ನೀನು ಬ್ರಹ್ಮಸ್ಥಾನದಲ್ಲಿದ್ದು ಹೆಂಗಸಾಗಿ ಪರಿವರ್ತಿತನಾಗಿದ್ದೀಯೆ.

English Translation.

Cast your eyes (son of Playoga) downwards, not upwards: **keep** your feet close together; let not (men) behold your ankles, for having been **a** Brahman you have become a female.



## ಮೂವತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಐಂದ್ರ ಯಾಹೀತ್ಯಷ್ಟಾದಶರ್ಚಂ ಚತುರ್ಥಂ ಸೂಕ್ತಂ ಕಾಣ್ವಸ್ಯ ನೀಪಾತಿಥೇರಾರ್ಷಮಾನುಷ್ಟುಭಂ । ಷೋಡಶಾದ್ಯಾಸ್ತಿಸ್ರೋ ಗಾಯತ್ರ್ಯಃ । ವಸುರೋಚಿಷೋಽಂಗಿರೋಗೋತ್ರಾಃ ಸಹಸ್ರಸಂಖ್ಯಾಕಾ ಆ ಯದಿಂದ್ರಶ್ಚೇತ್ಯಾದೀನಾಂ ತಾಸಾಂ ತಿಸೃಣಾಮೃಷಯಃ । ಇಂದ್ರೋ ದೇವತಾ । ತಥಾ ಚಾನುಕ್ರಮಣಂ । ಐಂದ್ರ ಯಾಹಿ ದ್ವ್ಯೂನಾ ನೀಪಾತಿಥಿರಾನುಷ್ಟುಭಂ ತೃಚೋಽಂತ್ಯೋ ಗಾಯತ್ರ್ಯಸ್ತಂ ಸಹಸ್ರಂ ವಸುರೋಚಿಷೋಽಂಗಿರಸೋಽಪಶ್ಯನ್ನಿತಿ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಐಂದ್ರ ಯಾಹಿ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ನಾಲ್ಕನೆಯ **ಸೂಕ್ತವು. ಇ**ದರಲ್ಲಿ ಹದಿನೆಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋದ್ಭವನಾದ ನೀಪಾತಿಥಿ **ಎಂಬುವನು ಋ**ಷಿಯು; ಇಂದ್ರನು ದೇವತೆಯು; ಈ ಸೂಕ್ತದ ಹದಿನಾರನೆಯ ಋಕ್ಕಿನಿಂದ ಮುಂದಿನ ಮೂರು **ಋಕ್ಕು**ಗಳು ಗಾಯತ್ರೀಛಂದಸ್ಸುವು. **ಆ ಯದಿಂದ್ರಶ್ಚ** ಎಂದು ಮೊದಲಾಗುವ ಈ ಸೂಕ್ತದ ಕೊನೆಯ ಮೂರು **ಋಕ್ಕುಗಳಿಗೆ**

ಸಹಸ್ರಸಂಖ್ಯಾಕರಾದ ಮತ್ತು ಅಂಗಿರೋಗೋತ್ರಜರಾದ **ವಸುರೋಚಿಷಃ** ಎಂಬುವರು ಋಷಿಗಳು. ಅನುಕ್ರಮಣಿಕೆ ಯಲ್ಲಿ—**ಏಂದ್ರ ಯಾಹಿ ದ್ವ್ಯೂನಾ ನೀಪಾತಿಥಿರಾನುಷ್ಟುಭಂ ತೃಚೋಽನ್ತ್ಯೋ ಗಾಯತ್ರಸ್ತಂ ಸಹಸ್ರಂ ವಸುರೋಚಿಷೋಽಙ್ಗಿರಸೋಽಪಶ್ಯನ್** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೩೪

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೪ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೧೧, ೧೨, ೧೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥
॥ ಋಷಿಃ—೧-೧೫. ನೀಪಾತಿಥಿಃ ಕಾಣ್ವಃ। ೧೬-೧೮. ಸಹಸ್ರಂ ವಸುರೋಚಿಷೋಽಙ್ಗಿರಸಃ ॥
॥ ದೇವತಾ—ಇಂದ್ರಃ ॥
। ಛಂದಃ—೧-೧೫, ಅನುಷ್ಟುಪ್ । ೧೬-೧೮. ಗಾಯತ್ರೀ ॥

॥ ಸಂಹಿತಾಪಾಠಃ ॥

ಏಂದ್ರ ಯಾಹಿ ಹರಿಭಿರುಪ ಕಣ್ವಸ್ಯ ಸುಷ್ಟುತಿಂ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೧ ॥

॥ ಪದಪಾಠಃ ॥

ಆ । ಇಂದ್ರ । ಯಾಹಿ । ಹರಿಽಭಿಃ । ಉಪ । ಕಣ್ವಸ್ಯ । ಸುಽಸ್ತುತಿಂ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾಽವಸೋ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಕಣ್ವಸ್ಯ ಸುಷ್ಟುತಿಂ ಶೋಭನಾಂ ಸ್ತುತಿಂ ಹರಿಭಿರಶ್ವೈರುಪಾ ಯಾಹಿ । ದಿವೋ ದ್ಯುಲೋಕಂ । ದ್ವಿತೀಯಾರ್ಥೇ ಷಷ್ಠೀ । ಅಮುಷ್ಯಾಮುಷ್ಮಿನ್ನಿಂದ್ರೇ ಶಾಸತಃ ಶಾಸತಿ ॥ ವಿಭಕ್ತಿವ್ಯತ್ಯಯಃ ॥ ತತ್ರ ವಯಂ ಸುಖಮಾಸ್ಮಹೇ । ಹೇ ದಿವಾವಸೋ ದೀಪ್ತಹವಿಷ್ಕೇಂದ್ರ ದಿವಂ ಸ್ವರ್ಗಂ ಯಯ । ಯೂಯಂ ಗಚ್ಛತ । ಬಹುವಚನಂ ಪೂಜಾರ್ಥಂ । ಯದ್ವಾ । ಹೇ ದಿವಾವಸೋ ದಿವೋ ದ್ಯುನಾಮಕಮಮುಷ್ಯಾಮುಂ ಲೋಕಂ ಶಾಸನಂ ಕುರ್ವಂತೋ ಯೂಯಂ ದಿವಂ ಸ್ವರ್ಗಂ ಯಯ । ಗಚ್ಛತ । ಅತ್ರ ಬಹುವಚನಂ ಪೂಜಾರ್ಥಮಿತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಕಣ್ವಸ್ಯ**—ಕಣ್ವನ । **ಸುಷ್ಟುತಿಂ**—ಉತ್ತಮವಾದ ಸ್ತುತಿಯನ್ನು ಕೇಳಲು । **ಹರಿಭಿಃ**—ನಿನ್ನ ಅಶ್ವಗಳೊಡನೆ । **ಉಪ ಆ ಯಾಹಿ**—ದಯಮಾಡು । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗಲೋಕವನ್ನು । **ಶಾಸತಃ**—ಆಳುತ್ತಿರುವುದರಿಂದ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿ

ಸಿಂಪ ಪ್ರಕಾಶಿಸುವ ಎಲೈ ಇಂದ್ರನೇ। ದಿವಃ—ಸ್ವರ್ಗಕ್ಕೆ। ಯಯ—ಪುನಃ ಹಿಂದಿರುಗು। [ಅಥವಾ ದಿವಾವಸೋ—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ। ಅಮುಷ್ಯ—ನೀನು। ಶಾಸತಃ—ಆಳುತ್ತಿರುವುದರಿಂದ (ನಾವು ಸುಖವಾಗಿದ್ದೇವೆ)]। [ಅಥವಾ ದಿವಃ—ದ್ಯುನಾಮಕವಾದ। ಅಮುಷ್ಯ—ಈ ಲೋಕವನ್ನು। ಶಾಸತಃ—ಆಳುವ ನೀನು। ದಿವಃ—ಸ್ವರ್ಗಕ್ಕೆ। ಯಯ—ಹಿಂತಿರುಗಿ ಹೋಗು.]

॥ ಭಾವಾರ್ಥ ॥

ಎಲೈ ಇಂದ್ರನೇ, ಕಣ್ವನ ಉತ್ತಮವಾದ ಸ್ತುತಿಯನ್ನು ಕೇಳಲು ನಿನ್ನ ಅಶ್ವಗಳೊಡನೆ ದಯಮಾಡು. ಈ ಇಂದ್ರನು ಸ್ವರ್ಗಲೋಕವನ್ನು ಆಳುತ್ತಿರುವುದರಿಂದ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಪುನಃ ಸ್ವರ್ಗಕ್ಕೆ ಹಿಂತಿರುಗು.

English Translation

Come, Indra, with your horses to receive the praise of Kanwa; do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಆ ತ್ವಾ ಗ್ರಾವಾ ವದನ್ನಿಹ ಸೋಮೀ ಘೋಷೇಣ ಯಚ್ಛತು।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೨ ॥

॥ ಪದಪಾಠಃ ॥

ಆ। ತ್ವಾ। ಗ್ರಾವಾ। ವದನ್। ಇಹ। ಸೋಮೀ। ಘೋಷೇಣ। ಯಚ್ಛತು।
ದಿವಃ। ಅಮುಷ್ಯ। ಶಾಸತಃ। ದಿವಂ। ಯಯ। ದಿವಾವಸೋ ಇತಿ ದಿವಾऽವಸೋ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಮಿಹ ಯಜ್ಞೇ ಗ್ರಾವಾ ಸೋಮಾಭಿಷವಸಾಧನಃ ಸೋಮೀ ಸೋಮವಾನ್ ವದಞ್ಛಬ್ದಂ ಕುರ್ವನ್ ಘೋಷೇಣ ಧ್ವನಿನಾ ಸಹಾ ಯಚ್ಛತು। ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಇಹ—ನಮ್ಮ ಈ ಯಜ್ಞದಲ್ಲಿ। ಗ್ರಾವಾ—ಸೋಮವನ್ನು ಹಿಂಡುವ ಕಲ್ಲು। ಸೋಮೀ—ಸೋಮವನ್ನು ಹಿಂಡುತ್ತಲೂ। ವದನ್—ಹಿಂಡುವ ಶಬ್ದವನ್ನು ಮಾಡುತ್ತಲೂ। ಘೋಷೇಣ—ತನ್ನ ಧ್ವನಿಯಿಂದ। ತ್ವಾ—ನಿನ್ನನ್ನು। ಆ ಯಚ್ಛತು—ಕರೆತರಲಿ। ಅಮುಷ್ಯ—ಈ ಇಂದ್ರನು। ದಿವಃ—ಸ್ವರ್ಗಲೋಕವನ್ನು। ಶಾಸತಃ—ಆಳುತ್ತಿರುವುದರಿಂದ (ನಾವು ಸುಖವಾಗಿದ್ದೇವೆ)। ದಿವಾವಸೋ—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ। ದಿವಃ—ಸ್ವರ್ಗಕ್ಕೆ। ಯಯ—ಪುನಃ ಹಿಂತಿರುಗು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮ ಈ ಯಜ್ಞದಲ್ಲಿ ಸೋಮವನ್ನು ಹಿಂಡುವ ಕಲ್ಲು ಸೋಮವನ್ನು ಹಿಂಡುತ್ತಲೂ, ಹಿಂಡುವ ಶಬ್ದವನ್ನು ಮಾಡುತ್ತಲೂ ತನ್ನ ಧ್ವನಿಯಿಂದ ನಿನ್ನನ್ನು ಕರೆತರಲಿ. ಈ ಇಂದ್ರನು ಸ್ವರ್ಗವನ್ನು ಆಳುತ್ತಿರುವುದರಿಂದ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಪುನಃ ಸ್ವರ್ಗಕ್ಕೆಹಿಂತಿರುಗು.

## English Translation.

May the grinding stone, yielding the Soma juice as it utters a sound bring you hither with the noise; do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಅತ್ರಾ ವಿ ನೇಮಿರೇಷಾಮುರಾಂ ನ ಧೂನುತೇ ವೃಕಃ ।

ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೩ ॥

॥ ಪದಪಾಠಃ ॥

ಅತ್ರ । ವಿ । ನೇಮಿಃ । ಏಷಾಂ । ಉರಾಂ । ನ । ಧೂನುತೇ । ವೃಕಃ ।

ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾऽವಸೋ ॥ ೩ ॥

॥ ಸಾಯಣಭಾಷ್ಯಂ ॥

ಅತ್ರಾಸ್ಮಿನ್ಯಜ್ಞ ಏಷಾಮಭಿಷವಗ್ರಾವ್ಣಾಂ ನೇಮಿಃ ಸೋಮಲತಾ ವಿ ಧೂನುತೇ । ವಿಶೇಷೇಣ ಕಂಪಯತಿ । ಉರಾಂ ಮೇಷೀಂ ವೃಕೋ ನ ವೃಕ ಇವ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ವೃಕಃ**—ತೋಳವು । **ಉರಾಂ ನ**—ಹೆಣ್ಣುಕುರಿಯನ್ನು ನಡುಗಿಸುವಂತೆ । **ಅತ್ರ**—ಈ ಯಜ್ಞದಲ್ಲಿ । **ಏಷಾಂ**—ಈ ಹಿಂಡುವ ಕಲ್ಲುಗಳ । **ನೇಮಿಃ**—ಹೊರವಲಯವು । **ವಿ ಧೂನುತೇ**—ಸೋಮಲತೆಗಳನ್ನು ಕಂಪಿಸುವಂತೆ ಮಾಡುತ್ತದೆ । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗಲೋಕವನ್ನು । **ಶಾಸತಃ**—ಆಳುತ್ತಿರುವುದರಿಂದ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಃ**—ಸ್ವರ್ಗಕ್ಕೆ । **ಯಯ**—ಪುನಃ ಹಿಂತಿರುಗು.

॥ ಭಾವಾರ್ಥ ॥

ತೋಳವು ಹೆಣ್ಣುಕುರಿಯನ್ನು ನಡುಗಿಸುವಂತೆ ಈ ಯಜ್ಞದಲ್ಲಿ ಈ ಓಂಡುವ ಕಲ್ಲುಗಳ ಹೊರವಲಯವು ಸೋಮಲತೆಗಳನ್ನು ಕಂಪಿಸುವಂತೆ ಮಾಡುತ್ತದೆ. ಈ ಇಂದ್ರನು ಸ್ವರ್ಗಲೋಕವನ್ನು ಆಳುತ್ತಿರುವುದರಿಂದ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ಸ್ವರ್ಗಕ್ಕೆ ಪುನಃ ಹಿಂತಿರುಗು.

English Translation.

The circumference of these (stones) shakes (the Soma) at this (rite), as a wolf (terrifies) a sheep; do you, ruling yondor heaven, O radiant with oblations, return thither.

॥ ಸಂಹಿತಾಪಾಠಃ ॥

ಆ ತ್ವಾ ಕಣ್ವಾ ಇಹಾವಸೇ ಹವಂತೇ ವಾಜಸಾತಯೇ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೪ ॥

॥ ಪದಪಾಠಃ ॥

ಆ । ತ್ವಾ । ಕಣ್ವಾಃ । ಇಹ । ಅವಸೇ । ಹವಂತೇ । ವಾಜಽಸಾತಯೇ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾಽವಸೋ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಾ ತ್ವಾಮಿಹ ಯಜ್ಞೇ ಕಣ್ವಾ ಅವಸೇ ರಕ್ಷಣಾಯ ವಾಜಸಾತಯೇಽನ್ನಸ್ಯ ಪ್ರಾಪ್ತ್ಯರ್ಥಂ ಚಾ ಹವಂತೇ । ಆಭಿಮುಖ್ಯೇನ ಹ್ವಯಂತಿ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತ್ವಾ**—ನಿನ್ನನ್ನು । **ಇಹ**— ಈ ಯಜ್ಞದಲ್ಲಿ । **ಕಣ್ವಾಃ**—ಕಣ್ವಋಷಿಗಳು । **ಅವಸೇ**—ರಕ್ಷಣಾರ್ಥವಾಗಿಯೂ । **ವಾಜಸಾತಯೇ**—ಅನ್ನವನ್ನು ಹೊಂದುವುದಕ್ಕಾಗಿಯೂ । **ಆ ಹವಂತೇ**—ಪ್ರಾರ್ಥಿಸಿ ಕರೆಯುತ್ತಾರೆ । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗಲೋಕವನ್ನು । **ಶಾಸತಃ**—ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಃ**—ಸ್ವರ್ಗಕ್ಕೆ । **ಯಯ** ಪುನಃ ಹಿಂತಿರುಗು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನು ಈ ಯಜ್ಞದಲ್ಲಿ ಕಣ್ವಋಷಿಗಳು ರಕ್ಷಣಾರ್ಥವಾಗಿಯೂ, ಅನ್ನವನ್ನು ಹೊಂದುವುದಕ್ಕಾಗಿಯೂ ಪ್ರಾರ್ಥಿಸಿ ಕರೆಯುತ್ತಾರೆ. ಈ ಇಂದ್ರನು ಸ್ವರ್ಗವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಪುನಃ ಸ್ವರ್ಗಕ್ಕೆ ಹಿಂತಿರುಗು.

## English Translation.

The Kanwas invoke you hither for protection and for food; do you, ruling yonder heaven, O radiant with oblations return thither.

|| ಸಂಹಿತಾಪಾಠಃ ||

ದಧಾಮಿ ತೇ ಸುತಾನಾಂ ವೃಷ್ಣೇ ನ ಪೂರ್ವಪಾಯ್ಯಂ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ।। ೫ ।।

|| ಪದಪಾಠಃ ||

ದಧಾಮಿ । ತೇ । ಸುತಾನಾಂ । ವೃಷ್ಣೇ । ನ । ಪೂರ್ವಽಪಾಯ್ಯಂ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾಽವಸೋ ।। ೫ ।।

|| ಸಾಯಣಭಾಷ್ಯಂ ||

ಹೇ ಇಂದ್ರ ತೇ ತುಭ್ಯಂ ಸುತಾನಾಂ । ದ್ವಿತೀಯಾರ್ಥೇ ಷಷ್ಠೀ । ಸುತಾನ್ ಸೋಮಾನ್ ದಧಾಮಿ । ಪ್ರಯಚ್ಛಾಮಿ । ವೃಷ್ಣೇ ನ ಯಥಾ ವಾಯವೇ ಪೂರ್ವಪಾಯ್ಯಂ ಯಜ್ಞಮುಖೇ ಪೇಯಂ ಪ್ರಯಚ್ಛಂತಿ ತದ್ವದಹಂ ಪ್ರಯಚ್ಛಾಮೀತ್ಯರ್ಥಃ । ಸಿದ್ಧಮನ್ಯತ್ ।।

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಪೂರ್ವಪಾಯ್ಯಂ**—ಯಜ್ಞದಲ್ಲಿ ಎಲ್ಲರಿಗಿಂತಲೂ ಮೊದಲು ಪಾನಮಾಡಲು ಅರ್ಹವಾದ ಸೋಮವನ್ನು । **ವೃಷ್ಣೇ ನ**—ವಾಯುವಿಗೆ ಅರ್ಪಿಸುವಂತೆ । **ತೇ**—ನಿನ್ನನ್ನುದ್ದೇಶಿಸಿ । **ಸುತಾನಾಂ**—ಹಿಂಡಿ ಸಿದ್ಧವಾಗಿರುವ ಸೋಮವನ್ನು । **ದಧಾಮಿ**—ಅರ್ಪಿಸುತ್ತೇನೆ । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗ ಲೋಕವನ್ನು । **ಶಾಸತಃ**—ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಃ**—ಸ್ವರ್ಗಕ್ಕೆ । **ಯಯ**—ಪುನಃ ಹಿಂತಿರುಗಿ ಹೋಗು.

|| ಭಾವಾರ್ಥ ||

ಎಲೈ ಇಂದ್ರನೇ, ಯಜ್ಞದಲ್ಲಿ ಎಲ್ಲಾ ದೇವತೆಗಳಿಗಿಂತಲೂ ಮೊದಲು ಪಾನಮಾಡಲು ಅರ್ಹವಾದ ಸೋಮವನ್ನು ವಾಯುವಿಗೆ ಅರ್ಪಿಸುವಂತೆ ನಿನ್ನನ್ನುದ್ದೇಶಿಸಿ ಹಿಂಡಿ ಸಿದ್ಧವಾಗಿರುವ ಸೋಮವನ್ನು ಅರ್ಪಿಸುತ್ತೇನೆ. ಈ ಇಂದ್ರನು ಸ್ವರ್ಗಲೋಕವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಪುನಃ ಸ್ವರ್ಗಕ್ಕೆ ಹಿಂತಿರುಗು.

## English Translation.

I make offering to you of the libations as the first drink is presented to the showerer ; do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಸ್ವಃತ್ಪುರಂಧಿರ್ನ ಆ ಗಹಿ ವಿಶ್ವತೋಧೀರ್ನ ಊತಯೇ ।
[redacted]ವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೬ ॥

॥ ಪದಪಾಠಃ ॥

ಸ್ವಃ೯ಽಪುರಂಧಿಃ । ನಃ । ಆ । ಗಹಿ । ವಿಶ್ವತಃಽಧೀಃ । ನಃ । ಊತಯೇ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾಽವಸೋ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಸ್ವಃತ್ಪುರಂಧಿಃ ಸ್ವರ್ಗಕುಟುಂಬೀ ನೋಽಸ್ಮಾನಾ ಗಹಿ । ತಥಾ ವಿಶ್ವತೋಧೀಃ ಸರ್ವಜಗತೋ ಧಾರಕಸ್ತ್ವಂ ನೋಽಸ್ಮಾಕಮೂತಯೇ ರಕ್ಷಣಾಯಾ ಗಹಿ । ಆಗಚ್ಛ ।**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) । **ಸ್ವಃತ್ಪುರಂಧಿಃ**—ಸ್ವರ್ಗವೆಂಬ ಕುಟುಂಬಕ್ಕೆ ಯಜಮಾನನಾದ ನೀನು । **ನಃ**—ನಮ್ಮಲ್ಲಿಗೆ । **ಆ ಗಹಿ**—ದಯಮಾಡು । **ವಿಶ್ವತೋಧೀಃ**—ಸಕಲ ಜಗತ್ತಿಗೂ ಧಾರಕನಾದ ನೀನು । **ನಃ**—ನಮ್ಮ । **ಊತಯೇ**—ರಕ್ಷಣಾರ್ಥವಾಗಿ (ನಮ್ಮಲ್ಲಿಗೆ ಬಾ) । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗಲೋಕವನ್ನು । **ಶಾಸತಃ**—ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಃ**—ಸ್ವರ್ಗಕ್ಕೆ । **ಯಯ**—ಪುನಃ ಹಿಂತಿರುಗಿ ಹೋಗು.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ವರ್ಗವೆಂಬ ಕುಟುಂಬಕ್ಕೆ ಯಜಮಾನನಾದ ನೀನು ನಮ್ಮಲ್ಲಿಗೆ ದಯಮಾಡು. ಸಕಲ ಜಗತ್ತಿಗೂ ಧಾರಕನಾದ ನೀನು ನಮ್ಮ ರಕ್ಷಣಾರ್ಥವಾಗಿ ನಮ್ಮಲ್ಲಿಗೆ ಬಾ. ಇಂದ್ರನು ಸ್ವರ್ಗಲೋಕವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿ ಇದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಪುನಃ ಸ್ವರ್ಗಕ್ಕೆ ಹಿಂತಿರುಗು.

English Translation.

(Indra) master of the family of heaven, come to us: do you, who are the sustainer of the universe, (come) for our protection : do you, ruling yonder heaven, O radiant with oblations, return thither.

|| ಸಂಹಿತಾಪಾಠಃ ||

ಆ ನೋ ಯಾಹಿ ಮಹೇಮತೇ ಸಹಸ್ರೋತೇ ಶತಾಮಘ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ || ೭ ||

|| ಪದಪಾಠಃ ||

ಆ । ನಃ । ಯಾಹಿ । ಮಹೇಽಮತೇ । ಸಹಸ್ರಽಊತೇ । ಶತಽಮಘ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾಽವಸೋ || ೭ ||

|| ಸಾಯಣಭಾಷ್ಯಂ ||

ಹೇ ಮಹೇಮತೇ ಮಹಾಬುದ್ಧೇ ಸಹಸ್ರೋತೇ ಸಹಸ್ರರಕ್ಷಣ ಶತಾಮಘ ಬಹುಧನೇಂದ್ರ ತ್ವಂ ನೋಽಸ್ಮಾನಾ ಯಾಹಿ । ಆಗಚ್ಛ । ಸಿದ್ಧಮನ್ಯತ್ ||

|| ಪ್ರತಿಪದಾರ್ಥ ||

**ಮಹೇಮತೇ**—ಪೂಜ್ಯವಾದ ಬುದ್ಧಿಯುಳ್ಳವನೂ । **ಸಹಸ್ರೋತೇ**—ಅನೇಕ ವಿಧವಾದ ರಕ್ಷಣೆಗಳಿಂದ ಕೂಡಿದವನೂ । **ಶತಮಘ**—ಪ್ರಭೂತವಾದ ಧನವುಳ್ಳವನೂ ಆದ ಎಲೈ ಇಂದ್ರನೇ । **ನಃ**—ನಮ್ಮಲ್ಲಿಗೆ । **ಆ ಯಾಹಿ**—ದಯಮಾಡು । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗವನ್ನು । **ಶಾಸತಃ**—ಆಳುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಂ**—ಸ್ವರ್ಗಕ್ಕೆ । **ಯಯ**—ಹಿಂತಿರುಗು.

|| ಭಾವಾರ್ಥ ||

ಪೂಜ್ಯವಾದ ಬುದ್ಧಿಯುಳ್ಳವನೂ, ಅನೇಕ ವಿಧವಾದ ರಕ್ಷಣೆಗಳಿಂದ ಕೂಡಿದವನೂ, ಪ್ರಭೂತವಾದ ಧನವುಳ್ಳವನೂ ಆದ ಎಲೈ ಇಂದ್ರನೇ, ನಮ್ಮಲ್ಲಿಗೆ ದಯಮಾಡು. ಈ ಇಂದ್ರನು ಸ್ವರ್ಗವನ್ನು ಆಳುವ ಕಾಲದಲ್ಲಿ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ಸ್ವರ್ಗಕ್ಕೆ ಹಿಂತಿರುಗು.

English Translation.

Sagacious (Indra) bestower of numerous protections, granter of infinite wealth, come unto us : do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಆ ತ್ವಾ ಹೋತಾ ಮನುರ್ಹಿತೋ ದೇವತ್ರಾ ವಕ್ಷದೀಡ್ಯಃ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೮ ॥

॥ ಪದಪಾಠಃ ॥

ಆ । ತ್ವಾ । ಹೋತಾ । ಮನುಃऽಹಿತಃ । ದೇವऽತ್ರಾ । ವಕ್ಷತ್ । ಈಡ್ಯಃ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾऽವಸೋ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ದೇವತ್ರಾ ದೇವಾನಾಂ ಮಧ್ಯ ಈಡ್ಯಃ ಸ್ತುತ್ಯೋ ಹೋತಾ ದೇವಾನಾಮಾಹ್ವಾತಾಗ್ನಿರ್ಮನುರ್ಹಿತೋ ಮನುಷ್ಯೈರ್ಗೃಹೇಷು ನಿಹಿತ ಆ ವಕ್ಷತ್ । ವಹತು । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ದೇವತ್ರಾ**—ದೇವತೆಗಳ ನಡುವೆ । **ಈಡ್ಯಃ**—ಪೂಜ್ಯನೂ । **ಹೋತಾ**—ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ । **ಮನುರ್ಹಿತಃ**—ಮಾನವರಿಗೆ ಹಿತಕಾರಿಯೂ ಆದ ಅಗ್ನಿಯು । **ತ್ವಾ**—ನಿನ್ನನ್ನು । **ಆ ವಕ್ಷತ್**—ನಮ್ಮ ಯಜ್ಞಕ್ಕೆ ಕರೆತರಲಿ । **ಅಮುಷ್ಯ**— ಈ ಇಂದ್ರನು । **ದಿವಃ**—ಸ್ವರ್ಗಲೋಕವನ್ನು । **ಶಾಸತಃ**—ರಕ್ಷಿಸುತ್ತಿರುವಾಗ (ನಾವು ಸುಖದಿಂದಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಂ**—ಸ್ವರ್ಗಕ್ಕೆ । **ಯಯ**—ಹಿಂತಿರುಗು.

॥ ಭಾವಾರ್ಥ ॥

ಎಲೈ ಇಂದ್ರನೇ, ದೇವತೆಗಳ ನಡುವೆ ಪೂಜ್ಯನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಮಾನವರಿಗೆ ಹಿತಕಾರಿಯೂ ಆದ ಅಗ್ನಿಯು ನಿನ್ನನ್ನು ಯಜ್ಞಕ್ಕೆ ಕರೆತರಲಿ. ಈ ಇಂದ್ರನು ಸ್ವರ್ಗಲೋಕವನ್ನು ರಕ್ಷಿಸುತ್ತಿರುವಾಗ ನಾವು ಸುಖದಿಂದಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಸ್ವರ್ಗಕ್ಕೆ ಹಿಂತಿರುಗು.

## English Translation.

May (Agni) the invoker, adorable among the gods, the benefactor of man, bring you hither : do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಆ ತ್ವಾ ಮದಚ್ಯುತಾ ಹರೀ ಶ್ಯೇನಂ ಪಕ್ಷೇವ ವಕ್ಷತಃ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೯ ॥

॥ ಪದಪಾಠಃ ॥

ಆ । ತ್ವಾ । ಮದಽಚ್ಯುತಾ । ಹರೀ ಇತಿ । ಶ್ಯೇನಂ । ಪಕ್ಷಾಽಇವ । ವಕ್ಷತಃ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾಽವಸೋ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಮದಚ್ಯುತಾ ಮದಚ್ಯುತೌ ಶತ್ರೂಣಾಂ ಮದಸ್ಯ ಚ್ಯಾವಯಿತಾರೌ ಹರೀ ಅಶ್ವೌ ಶ್ಯೇನಂ ಶ್ಯೇನಾಖ್ಯಂ ಪಕ್ಷಿಣಂ ಪಕ್ಷೇವಾತ್ಮೀಯೌಪಕ್ಷಾವಿವಾ ವಕ್ಷತಃ । ಆವಹತಾಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಶ್ಯೇನಂ**—ಶ್ಯೇನಪಕ್ಷಿಯನ್ನು । **ಪಕ್ಷೇವ**—ಅದರ ಎರಡು ರೆಕ್ಕೆಗಳೂ ಕರೆದುಕೊಂಡು ಬರುವಂತೆ । **ತ್ವಾ**—ನಿನ್ನನ್ನು । **ಮದಚ್ಯುತಾ**—ಶತ್ರುಗಳ ಗರ್ವವನ್ನು ನಾಶಪಡಿಸತಕ್ಕ । **ಹರೀ**—ನಿನ್ನ ಅಶ್ವಗಳೆರಡೂ । **ಆ ವಕ್ಷತಃ**—ನಮ್ಮಲ್ಲಿಗೆ ಕರೆತರಲಿ । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗವನ್ನು । **ಶಾಸತಃ**—ರಕ್ಷಿಸುತ್ತಿರುವ ಕಾಲದಲ್ಲಿ (ನಾವು ಸುಖದಿಂದಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಂ**—ಸ್ವರ್ಗಕ್ಕೆ । **ಯಯ**—ಹಿಂತಿರುಗಿ ಹೊರಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಶ್ಯೇನಪಕ್ಷಿಯನ್ನು ಅದರ ಎರಡು ರೆಕ್ಕೆಗಳೂ ಕರೆದುಕೊಂಡು ಬರುವಂತೆ ನಿನ್ನನ್ನು ಶತ್ರುಗಳ ಗರ್ವವನ್ನು ನಾಶಪಡಿಸುವ ನಿನ್ನ ಎರಡು ಅಶ್ವಗಳೂ ನಮ್ಮಲ್ಲಿಗೆ ಕರೆತರಲಿ. ಈ ಇಂದ್ರನು ಸ್ವರ್ಗವನ್ನು ರಕ್ಷಿಸುತ್ತಿರುವ ಕಾಲದಲ್ಲಿ ನಾವು ಸುಖದಿಂದಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಸ್ವರ್ಗಕ್ಕೆ ಹಿಂತಿರುಗಿ ಹೊರಡು.

## English Translation.

Let your two steeds, humiliators of the pride (of foes), bring you as (his) two wings (bear) along) the falcon : do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಆ ಯಾಹ್ಯರ್ಯ ಆ ಪರಿ ಸ್ವಾಹಾ ಸೋಮಸ್ಯ ಪೀತಯೇ ।

ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೧೦ ॥

॥ ಪದಪಾಠಃ ॥

ಆ । ಯಾಹಿ । ಅರ್ಯಃ । ಆ । ಪರಿ । ಸ್ವಾಹಾ । ಸೋಮಸ್ಯ । ಪೀತಯೇ ।

ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾऽವಸೋ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅರ್ಯೇಶ್ವರ ತ್ವಮಾ ಪರಿ ಸರ್ವತ ಆ ಯಾಹಿ । ಆಗಚ್ಛ । ಪೀತಯೇ ತವ ಪಾನಾರ್ಥಂ ಸೋಮಸ್ಯ ಸೋಮಂ ಸ್ವಾಹಾ ಕರೋಮಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ಅರ್ಯ—ಪೂಜ್ಯನಾದ ಎಲೈ ಇಂದ್ರನೇ । ಸ್ವಾಹಾ—ಸ್ವಾಹಾಕಾರಪೂರ್ವಕವಾಗಿ ಅರ್ಪಿಸುವ । ಸೋಮಸ್ಯ—ಸೋಮರಸದ । ಪೀತಯೇ—ಪಾನಾರ್ಥವಾಗಿ । ಆ ಪರಿ—ಸಕಲ ದಿಕ್ಕುಗಳಿಂದಲೂ । ಆ ಯಾಹಿ—ದಯಮಾಡು । ಅಮುಷ್ಯ—ಈ ಇಂದ್ರನು । ದಿವಃ—ಸ್ವರ್ಗವನ್ನು । ಶಾಸತಃ—ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) । ದಿವಾವಸೋ—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । ದಿವಂ—ಸ್ವರ್ಗಕ್ಕೆ । ಯಯ—ಹಿಂತಿರುಗಿ ಹೊರಡು.

ಭಾವಾರ್ಥ ॥

ಪೂಜ್ಯನಾದ ಎಲೈ ಇಂದ್ರನೇ, ಸ್ವಾಹಾಕಾರಪೂರ್ವಕವಾಗಿ ಅರ್ಪಿಸುವ ಸೋಮರಸದ ಪಾನಾರ್ಥವಾಗಿ ಸಕಲ ದಿಕ್ಕುಗಳಿಂದಲೂ ದಯಮಾಡು. ಈ ಇಂದ್ರನು ಸ್ವರ್ಗವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿದ್ದೇವೆ ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಸ್ವರ್ಗಕ್ಕೆ ಹಿಂತಿರುಗಿ ಹೊರಡು.

## English Translation.

Come, lord, from whatever direction, to drink the Soma offered with Swaha: do you, ruling yondr heaven, O radiant with oblations, return thither.

॥ ಸಂಹಿತಾಪಾಠಃ ॥

ಆ ನೋ ಯಾಹ್ಯುಪಶ್ರುತ್ಯುಕ್ಥೇಷು ರಣಯಾ ಇಹ ।

ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೧೧ ॥

॥ ಪದಪಾಠಃ ॥

ಆ । ನಃ । ಯಾಹಿ । ಉಪ೨ಶ್ರುತಿ । ಉಕ್ಥೇಷು । ರಣಯ । ಇಹ ।

ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾ೨ವಸೋ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ನೋಽಸ್ಮಾಕಮಿಹ ಯಜ್ಞ ಉಕ್ಥೇಷು ಶಸ್ತ್ರೇಷು ಪಠ್ಯಮಾನೇಷೂಪಶ್ರುತ್ಯು-ಪಶ್ರುತೌ ಸಮೀಪಮಾ ಯಾಹಿ । ಆಗಚ್ಛ । ಅಸ್ಮಾನ್ರಣಯ ಚ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ನಃ**—ನಮ್ಮ। **ಇಹ**—ಈ ಯಜ್ಞಕಾಲದಲ್ಲಿ। **ಉಕ್ಥೇಷು**—ಶಸ್ತ್ರಮಂತ್ರಗಳನ್ನು ಪಠಿಸುವ ಸಮಯದಲ್ಲಿ । **ಉಪಶ್ರುತಿ**—ಅವನ್ನು ಶ್ರವಣಮಾಡಲು ನಮ್ಮ ಸಮೀಪಕ್ಕೆ । **ಆ ಯಾಹಿ**—ದಯಮಾಡು । **ರಣಯ**—ನಮ್ಮನ್ನು ಸಂತೋಷಗೊಳಿಸು । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗವನ್ನು । **ಶಾಸತಃ**—ಆಳುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಂ**—ಸ್ವರ್ಗಕ್ಕೆ । **ಯಯ**—ಪುನಃ ಹಿಂತಿರುಗಿ ಹೋಗು

॥ ಭಾವಾರ್ಥ ॥

ಎಲೈ ಇಂದ್ರನೇ, ನಮ್ಮ ಈ ಯಜ್ಞಕಾಲದಲ್ಲಿ ಶಸ್ತ್ರಮಂತ್ರಗಳನ್ನು ಪಠಿಸುವ ಸಮಯದಲ್ಲಿ ಅವನ್ನು ಶ್ರವಣಮಾಡಲು ನಮ್ಮ ಸಮೀಪಕ್ಕೆ ದಯಮಾಡು. ನಮ್ಮನ್ನು ಸಂತೋಷಗೊಳಿಸು. ಈ ಇಂದ್ರನು ಸ್ವರ್ಗವನ್ನು ಆಳುವ ಕಾಲದಲ್ಲಿ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ಸ್ವರ್ಗಕ್ಕೆ ಪುನಃ ಹಿಂತಿರುಗಿ ಹೋಗು.

## English Translation.

Come to listen to our praises, when they are being recited,—bestow upon us delight: do you, ruling yondor heaven, O radiant with oblations, return thither·

॥ ಸಂಹಿತಾಪಾಠಃ ॥

ಸರೂಪೈರಾ ಸು ನೋ ಗಹಿ ಸಂಭೃತೈಃ ಸಂಭೃತಾಶ್ವಃ ।

ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೧೨ ॥

॥ ಪದಪಾಠಃ ॥

ಸ೨ರೂಪೈಃ । ಆ । ಸು । ನಃ । ಗಹಿ । ಸಂ೨ಭೃತೈಃ । ಸಂಭೃತ೨ಅಶ್ವಃ ।

ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾ೨ವಸೋ ॥ ೧೨ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ! ಸಂಭೃತಾಶ್ವಃ ಪುಷ್ಟಾಶ್ವಸ್ತ್ವಂ ಸು ಸಂಭೃತೈಃ ಸರೂಪೈಃ ಸಮಾನರೂಪೈರಶ್ವೈರ್ನೋಽಸ್ಮಾನಾ ಗಹಿ । ಆಗಚ್ಛ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಸಂಭೃತಾಶ್ವಃ**— ಪುಷ್ಟವಾದ ಅಶ್ವಗಳುಳ್ಳ ನೀನು । **ಸು ಸಂಭೃತೈಃ**— ಉತ್ತಮವಾಗಿ ಬೆಳೆಯಲ್ಪಟ್ಟವೂ । **ಸರೂಪೈಃ**— ಒಂದೇ ರೂಪವುಳ್ಳವೂ ಆದ ನಿನ್ನ ಅಶ್ವಗಳೊಡನೆ । **ನಃ**— ನಮ್ಮಲ್ಲಿಗೆ । **ಆ ಗಹಿ**— ದಯಮಾಡು । **ಅಮುಷ್ಯ**— ಈ ಇಂದ್ರನು । **ದಿವಃ**— ಸ್ವರ್ಗವನ್ನು । **ಶಾಸತಃ**— ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿರುತ್ತೇವೆ) । **ದಿವಾವಸೋ**— ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಂ**— ಸ್ವರ್ಗಕ್ಕೆ । **ಯಯ**— ಹಿಂತಿರುಗಿ ಹೊರಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಪುಷ್ಟವಾದ ಅಶ್ವಗಳನ್ನು ಹೊಂದಿರುವ ನೀನು ಉತ್ತಮವಾಗಿ ಬೆಳೆದಿರುವುವೂ, ಒಂದೇ ರೂಪವುಳ್ಳವೂ ಆದ ನಿನ್ನ ಅಶ್ವಗಳೊಡನೆ ನಮ್ಮಲ್ಲಿಗೆ ದಯಮಾಡು ಈ ಇಂದ್ರನು ಸ್ವರ್ಗವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿದ್ದೇವೆ ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ಸ್ವರ್ಗಕ್ಕೆ ಹಿಂತಿರುಗಿ ಹೊರಡು

English Translation.

Indra, you are possessed of cherished steeds, come to us with (your) well-fed and like-shaped horses: do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಆ ಯಾಹಿ ಪರ್ವತೇಭ್ಯಃ ಸಮುದ್ರಸ್ಯಾಧಿ ವಿಷ್ಟಪಃ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೧೩ ॥

॥ ಪದಪಾಠಃ ॥

ಆ । ಯಾಹಿ । ಪರ್ವತೇಭ್ಯಃ । ಸಮುದ್ರಸ್ಯ । ಅಧಿ । ವಿಷ್ಟಪಃ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾऽವಸೋ ॥ ೧೩ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಪರ್ವತೇಭ್ಯ ಆ ಯಾಹಿ । ಆಗಚ್ಛ । ಸಮುದ್ರಸ್ಯಾಂತರಿಕ್ಷಸ್ಯ ವಿಷ್ಟಪೋ ವಿಷ್ಟಪಾಚ್ಚಾಧ್ಯಾಯಾಹೀತ್ಯರ್ಥಃ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪರ್ವತೇಭ್ಯಃ**—ಪರ್ವತಪ್ರದೇಶಗಳಿಂದ । **ಆ ಯಾಹಿ**—ದಯಮಾಡು । **ಸಮುದ್ರಸ್ಯ**—ಅಂತರಿಕ್ಷಕ್ಕೆ ಸೇರಿದ । **ವಿಷ್ಟಪಃ ಅಧಿ**—ಮೇಲುಲೋಕದಿಂದಲೂ (ಇಲ್ಲಿಗೆ ಬಾ) । **ಅಮುಷ್ಯ**—ಈ ಇಂದ್ರನು । **ದಿವಃ**—ಸ್ವರ್ಗವನ್ನು । **ಶಾಸತಃ**—ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) । **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ । **ದಿವಂ**—ಸ್ವರ್ಗಕ್ಕೆ । **ಯಯ**—ಹಿಂತಿರುಗಿ ಹೊರಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಪರ್ವತಪ್ರದೇಶದಳಿಂದಲೂ, ಅಂತರಿಕ್ಷಕ್ಕೆ ಸೇರಿದ ಮೇಲುಲೋಕದಿಂದಲೂ ಇಲ್ಲಿಗೆ ದಯಮಾಡು. ಈ ಇಂದ್ರನು ಸ್ವರ್ಗವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ಸ್ವರ್ಗಕ್ಕೆ ಹಿಂತಿರುಗಿ ಹೊರಡು.

English Translation.

Come from the mountains, from above the region of the firmament: do you, ruling yonder heaven, O radiant with oblations, return hither·

॥ ಸಂಹಿತಾಪಾಠಃ ॥

ಆ ನೋ ಗವ್ಯಾನ್ಯಶ್ವ್ಯಾ ಸಹಸ್ರಾ ಶೂರ ದರ್ದೃಹಿ ।
ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ ॥ ೧೪ ॥

॥ ಪದಪಾಠಃ ॥

ಆ । ನಃ । ಗವ್ಯಾನಿ । ಅಶ್ವ್ಯಾ । ಸಹಸ್ರಾ । ಶೂರ । ದರ್ದೃಹಿ ।
ದಿವಃ । ಅಮುಷ್ಯ । ಶಾಸತಃ । ದಿವಂ । ಯಯ । ದಿವಾವಸೋ ಇತಿ ದಿವಾऽವಸೋ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಶೂರೇಂದ್ರ ತ್ವಂ ನೋऽಸ್ಮಭ್ಯಂ ಸಹಸ್ರಾ ಸಹಸ್ರಾಣಿ ಸಹಸ್ರಸಂಖ್ಯಾನಿ ಗವ್ಯಾನಿ ಗೋಹಿತಾನಿ ಗೋರೂಪಾಣಿ ವಾಶ್ವ್ಯಾನ್ಯಶ್ವಹಿತಾನ್ಯಶ್ವಾತ್ಮಕಾನಿ ವಾ ದರ್ದೃಹಿ । ಆವಿವೃಣು । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ನಃ**—ನಮಗೆ । **ಸಹಸ್ರಾ**—ಸಹಸ್ರಸಂಖ್ಯಾಕವಾದ । **ಗವ್ಯಾನಿ**—ಗೋವುಗಳನ್ನೂ (ತತ್ಸಂಬಂಧವಾದ) । **ಅಶ್ವ್ಯಾ**—ಅಶ್ವಾದಿಗಳನ್ನೂ । **ಆ ದರ್ದೃಹಿ**—ಒದಗಿಸಿ

**ಕೊಡು** | **ಅಮುಷ್ಯ**— ಈ ಇಂದ್ರನು | **ದಿವಃ**—ಸ್ವರ್ಗವನ್ನು | **ಶಾಸತಃ**—ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿರುತ್ತೇವೆ) | **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ | **ದಿವಂ**—ಸ್ವರ್ಗಕ್ಕೆ **ಯುಯ**—ಹಿಂತಿರುಗಿ ಹೋಗು.

|| ಭಾವಾರ್ಥ ||

ಪರಾಕ್ರಮಿಯಾದ ಎಲೈ ಇಂದ್ರನೇ, ನಮಗೆ ಸಹಸ್ರಸಂಖ್ಯಾಕವಾದ ಗೋವುಗಳನ್ನೂ, ಅಶ್ವಗಳನ್ನೂ ಒದಗಿಸಿ ಕೊಡು. ಈ ಇಂದ್ರನು ಸ್ವರ್ಗವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿರುತ್ತೇವೆ ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಸ್ವರ್ಗಕ್ಕೆ ಹಿಂತಿರುಗಿ ಹೋಗು

English Translation.

Bestow upon us, hero, thousands of herds of cattle and horses: do you, ruling yondr heaven, O radiant with oblations, return thither.

|| ಸಂಹಿತಾಪಾಠಃ ||

ಆ ನಃ ಸಹಸ್ರಶೋ ಭರಾಯುತಾನಿ ಶತಾನಿ ಚ |

ದಿವೋ ಅಮುಷ್ಯ ಶಾಸತೋ ದಿವಂ ಯಯ ದಿವಾವಸೋ || ೧೫ ||

|| ಪದಪಾಠಃ ||

ಆ | ನಃ | ಸಹಸ್ರಽಶಃ | ಭರ | ಅಯುತಾನಿ | ಶತಾನಿ | ಚ |

ದಿವಃ | ಅಮುಷ್ಯ | ಶಾಸತಃ | ದಿವಂ | ಯಯ | ದಿವಾವಸೋ ಇತಿ ದಿವಾಽವಸೋ || ೧೫ ||

|| ಸಾಯಣಭಾಷ್ಯಂ ||

ಹೇ ಇಂದ್ರ ನೋಽಸ್ಮಭ್ಯಂ ಸಹಸ್ರಶಃ ಸಹಸ್ರಧಾಯುತಾನಿ ಶತಾನಿ ಚಾಭೀಷ್ಟಾನಿ ವಸೂನ್ಯಾ ಭರ | ಆಹರ | ಸಿದ್ಧಮನ್ಯತ್ ||

| ಪ್ರತಿಪದಾರ್ಥ |

(ಎಲೈ ಇಂದ್ರನೇ) **ನಃ**—ನಮಗೆ | **ಸಹಸ್ರಶಃ**—ಸಹಸ್ರಸಂಖ್ಯಾಕವಾಗಿಯೂ | **ಅಯುತಾನಿ**—ದಶಸಹಸ್ರಸಂಖ್ಯಾಕವಾಗಿಯೂ | **ಶತಾನಿ ಚ**—ಶತಸಂಖ್ಯಾಕವಾಗಿಯೂ | **ಆ ಭರ**—ನಮ್ಮ ಇಷ್ಟಾರ್ಥಗಳನ್ನು ತಂದೊದಗಿಸು | **ಅಮುಷ್ಯ**—ಈ ಇಂದ್ರನು | **ದಿವಃ**—ಸ್ವರ್ಗವನ್ನು | **ಶಾಸತಃ**—ಆಳುತ್ತಿರುವ ಕಾಲದಲ್ಲಿ (ನಾವು ಸುಖವಾಗಿದ್ದೇವೆ) | **ದಿವಾವಸೋ**—ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ | **ದಿವಂ**—ಸ್ವರ್ಗಕ್ಕೆ **ಯಯ**—ಹೊರಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗೆ ಸಹಸ್ರಸಂಖ್ಯಾಕವಾಗಿಯೂ, ದಶಸಹಸ್ರಸಂಖ್ಯಾಕವಾಗಿಯೂ, ಶತಸಂಖ್ಯಾಕವಾಗಿಯೂ ನಮ್ಮ ಇಷ್ಟಾರ್ಥಗಳನ್ನು ತಂದೊಗಿಸು. ಈ ಇಂದ್ರನು ಸ್ವರ್ಗವನ್ನು ಆಳುತ್ತಿರುವ ಕಾಲದಲ್ಲಿ ನಾವು ಸುಖವಾಗಿದ್ದೇವೆ. ಹವಿಸ್ಸಿನಿಂದ ಪ್ರಕಾಶಿಸುವ ಎಲೈ ಇಂದ್ರನೇ, ನೀನು ಸ್ವರ್ಗಕ್ಕೆ ಹಿಂತಿರುಗಿ ಹೊರಡು.

English Translation.

Bring to us, by thousands, tens of thousands and hundreds (of good things): do you, ruling yonder heaven, O radiant with oblations, return thither.

॥ ಸಂಹಿತಾಪಾಠಃ ॥

ಆ ಯದಿಂದ್ರಶ್ಚ ದದ್ವಹೇ ಸಹಸ್ರಂ ವಸುರೋಚಿಷಃ ।

ಓಜಿಷ್ಠಮಶ್ವ್ಯಂ ಪಶುಂ ॥ ೧೬ ॥

॥ ಪದಪಾಠಃ ॥

ಆ । ಯತ್ । ಇಂದ್ರಃ । ಚ । ದದ್ವಹೇ ಇತಿ । ಸಹಸ್ರಂ । ವಸುऽರೋಚಿಷಃ ।

ಓಜಿಷ್ಠಂ । ಅಶ್ವ್ಯಂ । ಪಶುಂ ॥ ೧೬ ॥

॥ ಸಾಯಣಭಾಷ್ಯಂ ॥

ವಸುರೋಚಿಷೋ ವಸುದೀಪ್ತಯೋ ವಯಂ ಸಹಸ್ರಮಸ್ಮಾಕಂ ನೇತೇಂದ್ರಶ್ಚೌಜಿಷ್ಠಂ ಬಲವತ್ತರಮಶ್ವ್ಯಮಶ್ವಾತ್ಮಕಂ ಪಶುಂ ಚ ಯದ್ಯದಾ ದದ್ವಹೇ ಪಾರಾವತಾದಾದದ್ಮಹೇ । ಉತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

**ಸಹಸ್ರಂ**—ಸಹಸ್ರಸಂಖ್ಯಾಕರಾದವರೂ । **ವಸುರೋಚಿಷಃ**—ಧನದಿಂದ ಪ್ರಕಾಶಮಾನರಾದವರೂ (ವಸುರೋಚಿಷರೆಂದು ಪ್ರಖ್ಯಾತರಾದವರೂ) ಆದ ನಾವೂ । **ಇಂದ್ರಶ್ಚ**—ಇಂದ್ರನೂ । **ಓಜಿಷ್ಠಂ**—ಅತ್ಯಂತ ಶಕ್ತಿಯುತವಾದುದೂ । **ಅಶ್ವ್ಯಂ**—ಅಶ್ವಾತ್ಮಕವಾದುದೂ ಆದ । **ಪಶುಂ**—ಪಶುಸಂಘವನ್ನು । **ಯತ್**—ಯಾವಾಗ । **ಆ ದದ್ವಹೇ**—ಹೊಂದುವೆವೋ (ಆಗ).

॥ ಭಾವಾರ್ಥ ॥

ವಸುರೋಚಿಷರೆಂದು ಪ್ರಖ್ಯಾತರಾದ ನಾವು ಸಹಸ್ರಮಂದಿಯೂ ಮತ್ತು ಇಂದ್ರನೂ ಸಹ ಅತ್ಯಂತ ಶಕ್ತಿಯುತವಾದುದೂ ಅಶ್ವಾತ್ಮಕವಾದುದೂ ಆದ ಪಶುಸಂಘವನ್ನು ಯಾವಾಗ ಹೊಂದುವೆವೋ (ಆಗ ನಾವು ವನಕ್ಕೆ ಹೊರಟೆವು).

English Translation.

We, the thousand Vasurochishas, and Indra (our leader), **when we** obtain vigorous herds of horses,—

॥ ಸಂಹಿತಾಪಾಠಃ ॥

ಯ ಋಜ್ರಾ ವಾತರಂಹಸೋಽರುಷಾಸೋ ರಘುಷ್ಯದಃ ।

ಭ್ರಾಜಂತೇ ಸೂರ್ಯಾ ಇವ ॥ ೧೭ ॥

॥ ಪದಪಾಠಃ ॥

ಯೇ । ಋಜ್ರಾಃ । ವಾತಽರಂಹಸಃ । ಅರುಷಾಸಃ । ರಘುಽಸ್ಯದಃ ।

ಭ್ರಾಜಂತೇ । ಸೂರ್ಯಾಃಽಇವ ॥ ೧೭ ॥

॥ ಸಾಯಣಭಾಷ್ಯಂ ॥

ತದಾ ಯೆ ಋಜ್ರಾ ಋಜುಗಾಮಿನೋ ವಾತರಂಹಸೋ ವಾಯುಸದೃಶವೇಗಾ ಅರುಷಾಸ ಅರೋಚಮಾನಾ ರಘುಷ್ಯದೋ ಲಘು ಸ್ಯಂದಮಾನಾ ಅಶ್ವಾಃ ಸೂರ್ಯಾ ಇವ ಯಥಾ ಸೂರ್ಯಸ್ತಥಾ ಭ್ರಾಜಂತೇ ॥

॥ ಪ್ರತಿಪದಾರ್ಥ ॥

**ಯೇ**—ಯಾವ ಅಶ್ವಗಳು । **ಋಜ್ರಾಃ**—ಋಜುಗಾಮಿಗಳೂ । **ವಾತರಂಹಸಃ**—ವಾಯುವಿನಂತೆ ವೇಗಗಾಮಿಗಳೂ । **ಅರುಷಾಸಃ**—ಪ್ರಕಾಶಮಾನವಾದವೂ । **ರಘುಷ್ಯದಃ**—ಲಘುವಾದ ಪಾದಗತಿಯುಳ್ಳವೂ ಆದ । **ಸೂರ್ಯಾ ಇವ**—ಸೂರ್ಯನಂತೆ । **ಭ್ರಾಜಂತೇ**—ಪ್ರಕಾಶಿಸುವುವೋ.

॥ ಭಾವಾರ್ಥ ॥

ಯಾವ ಅಶ್ವಗಳು ಋಜುಗಾಮಿಗಳೂ, ವಾಯುವಿನಂತೆ ವೇಗಗಾಮಿಗಳೂ, ಪ್ರಕಾಶಮಾನವಾದವೂ, ಲಘುವಾದ ಪಾದಗತಿಯುಳ್ಳವೂ ಆಗಿ ಸೂರ್ಯನಂತೆ ಪ್ರಕಾಶಿಸುವವೋ (ಅಂತಹ ಅಶ್ವಗಳು ನಮಗೆ ದಾನ ಮಾಡಲ್ಪಟ್ಟಾಗ ನಾವು ವನಕ್ಕೆ ಹೊರಟೆವು).

English Translation.

Such as are straight-going, fleet as the wind, bright-coloured, **light-footed**, and shine like the sun,—

॥ ಸಂಹಿತಾಪಾಠಃ ॥

ಪಾರಾವತಸ್ಯ ರಾತಿಷು ದ್ರವಚ್ಚಕ್ರೇಷ್ವಾಶುಷು ।

ತಿಷ್ಠಂ ವನಸ್ಯ ಮಧ್ಯ ಆ ॥ ೧೮ ॥

॥ ಪದಪಾಠಃ ॥

**ಪಾರಾವತಸ್ಯ । ರಾತಿಷು । ದ್ರವತ್ऽಚಕ್ರೇಷು । ಆಶುಷು ।**

**ತಿಷ್ಠಂ । ವನಸ್ಯ । ಮಧ್ಯೇ । ಆ ॥ ೧೮ ॥**

॥ ಸಾಯಣಭಾಷ್ಯಂ ॥

**ಕೇಷು ಪಾರಾವತಸ್ಯ ರಾತಿಷು ದೇಯೇಷು ದ್ರವಚ್ಚಕ್ರೇಷು ದ್ರವದ್ರಥಚಕ್ರೇಷ್ವಾಶುಷ್ವಶ್ವೇಷು । ತಾರ್ಕ್ಷ್ಯ ಆಶುರಿತ್ಯಶ್ವನಾಮಸು ಪಾಠಾತ್ । ಪ್ರತಿಗೃಹೀತೇಷು ಸತ್ಸು ವನಸ್ಯ ಮಧ್ಯ ಆ ತಿಷ್ಠಮಿತಿ ವಸುರೋಚಿಷಾಂ ಸಹಸ್ರಂ ವದತಿ ॥**

॥ ಪ್ರತಿಪದಾರ್ಥ ॥

**ಪಾರಾವತಸ್ಯ**—ಅತ್ಯಂತ ದೂರದೇಶದಿಂದ । **ರಾತಿಷು**—ದಾನಮಾಡಲ್ಪಟ್ಟವೂ । **ದ್ರವಚ್ಚಕ್ರೇಷು**—ಸುಲಭವಾಗಿ ತಿರುಗುವ ರಥಚಕ್ರವುಳ್ಳವೂ ಆದ । **ಆಶುಷು**—ಅಶ್ವಗಳು ನಮ್ಮಿಂದ ಸ್ವೀಕೃತವಾದಾಗ । **ವನಸ್ಯ**—ವನದ । **ಮಧ್ಯೇ**—ಮಧ್ಯಭಾಗಕ್ಕೆ । **ಆ ತಿಷ್ಠಮ್**—ನಾವು ಹೊರಟೆವು.

॥ ಭಾವಾರ್ಥ ॥

ಅತ್ಯಂತ ದೂರದೇಶದಿಂದ ದಾನಮಾಡಲ್ಪಟ್ಟವೂ ಸುಲಭವಾಗಿ ತಿರುಗುವ ರಥಚಕ್ರವುಳ್ಳವೂ ಆದ ಅಶ್ವಗಳು ನಮ್ಮಿಂದ ಸ್ವೀಕೃತವಾದಾಗ ನಾವು ವನದ ಮಧ್ಯಭಾಗಕ್ಕೆ ಹೊರಟೆವು.

English Translation.

Then (having received) the horses, attached to the rolling-wheeled chariot, given from afar, we depart to the middle of the forest.



# ಮೂವತ್ತ್ಮೂರನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಗ್ನಿನೇಂದ್ರೇಣೇತಿ ಚತುರ್ವಿಂಶತ್ಯೃಚಂ ಪಂಚಮಂ ಸೂಕ್ತಂ ಶ್ಯಾವಾಶ್ವಸ್ಯಾತ್ರೇಯಸ್ಯಾರ್ಷಂ । ಅತ್ರಾನುಕ್ರಮಣಿಕಾ । ಅಗ್ನಿನಾ ಚತುರ್ವಿಂಶತಿಃ ಶ್ಯಾವಾಶ್ವ ಆಶ್ವಿನಮೌಪರಿಷ್ಟಾಜ್ಜ್ಯೋತಿಷಂ ಪಂಕ್ತಿ-ಮಹಾಬೃಹತೀಪಂಕ್ತ್ಯಂತಮಿತಿ । ಉಪರಿಷ್ಟಾಜ್ಜ್ಯೋತಿಶ್ಛಂದಃ ಚತುರ್ಥಪಾದಸ್ಯಾಷ್ಟಾಕ್ಷರತ್ವಾತ್ । ಯತೋಽಷ್ಟಕಸ್ತತೋ ಜ್ಯೋತಿಃ । ಅನು. ೯-೮ । ಇತಿ ತಲ್ಲಕ್ಷಣಂ । ದ್ವಾವಿಂಶೀ ಪಂಕ್ತಿಃ । ತ್ರಯೋವಿಂಶೀ ಮಹಾಬೃಹತೀ ಚತ್ವಾರೋಽಷ್ಟಕಾ ಜಾಗತಶ್ಚ ಮಹಾಬೃಹತೀ । ಅನು. ೯-೯ ।**

**ಇತ್ಯುಕ್ತಲಕ್ಷಣೋಪೇತತ್ವಾತ್ । ಚತುರ್ವಿಂಶೀ ಪಂಕ್ತಿಃ । ಅಶ್ವಿನೌ ದೇವತಾ ॥ ಅಶ್ವಿನೋರ್ಯಾಮೇ ಹೋತುರತಿರಿಕ್ತೋಕ್ಥೇಽಗ್ನಿನೇಂದ್ರೇಣೇತ್ಯೇತತ್ಸೂಕ್ತಂ । ಸೂತ್ರಿತಂ ಚ । ಅಗ್ನಿನೇಂದ್ರೇಣಾ ಭಾತ್ಯಗ್ನಿಃ । ಆ. ೯-೧೧ । ಇತಿ ॥**

ಅನುವಾದವು—**ಅಗ್ನಿನೇಂದ್ರೇಣ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಐದನೆಯ **ಸೂಕ್ತವು.** ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅತ್ರಿಗೋತ್ರಜನಾದ **ಶ್ಯಾವಾಶ್ವನೆಂಬುವನು** ಋಷಿಯು, ಅನುಕ್ರಮಣಿಕೆಯಲ್ಲಿ—**ಅಗ್ನಿನಾ ಚತುರ್ವಿಂಶತಿಃ ಶ್ಯಾವಾಶ್ವ ಆಶ್ವಿನಮೌಪರಿಷ್ಟಾಜ್ಜ್ಯೋತಿಷಂ ಪಂಕ್ತ್ಯಂತಂ ಮಹಾಬೃಹತೀಪಂಕ್ತ್ಯಂತಂ** ಎಂದು ಹೇಳಿರುವುದು. ಈ ಸೂಕ್ತದ ೧-೨೧ರ ವರೆಗಿನ **ಋಕ್ಕುಗಳು ಉಪರಿಷ್ಟಾಜ್ಜ್ಯೋತಿಃ** ಎಂಬ ಛಂದಸ್ಸಿನವು. ಈ ಛಂದಸ್ಸಿನ ಋಕ್ಕಿನಲ್ಲಿ ನಾಲ್ಕು ಪಾದಗಳಿದ್ದು ಎರಡನೆಯ ಪಾದದಲ್ಲಿ ಎಂಟು ಅಕ್ಷರಗಳೂ ಉಳಿದ ಮೂರು ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಇರುವವು ಎಂದು ಇದರ ಲಕ್ಷಣವು (ಛಂ. ಅನು ೯-೮); ಇಪ್ಪತ್ತೆರಡನೆಯ ಋಕ್ಕು ಪಂಕ್ತಿಚ್ಛಂದಸ್ಕವು. ಇಪ್ಪತ್ತಮೂರನೆಯ ಋಕ್ಕು ಮಹಾಬೃಹತೀಛಂದಸ್ಕವು. ಒಂದು ಋಕ್ಕಿನಲ್ಲಿ ಐದು ಪಾದಗಳಿದ್ದು ಮೊದಲಿನ ನಾಲ್ಕು ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ, ಕೊನೆಯ ಪಾದದಲ್ಲಿ ಜಗತೀಛಂದಸ್ಸಿನಂತೆ ಹನ್ನೆರಡಕ್ಷರಗಳೂ ಇದ್ದರೆ ಆ ಛಂದಸ್ಸು ಮಹಾಬೃಹತೀ ಛಂದಸ್ಸೆನಿಸುವುದು ಎಂದು ಇದರ ಲಕ್ಷಣವು (ಛಂ. ಅನು. ೯-೯); ಇಪ್ಪತ್ತನಾಲ್ಕನೆಯ ಋಕ್ಕು ಪಂಕ್ತಿಚ್ಛಂದಸ್ಕವು. ಅಶ್ವಿನೀದೇವತೆಗಳೇ ಈ ಸೂಕ್ತಕ್ಕೆ ದೇವತೆಯು, ಅಪ್ತೋರ್ಯಾಮೇಷ್ಟಿಯಲ್ಲಿ ಹೋತೃವು ಪಠಿಸಬೇಕಾದ ಅತಿರಿಕ್ತೋಕ್ಥ ಮಂತ್ರಗಳಿಗಾಗಿ **ಅಗ್ನಿನೇಂದ್ರೇಣ** ಎಂಬ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನಿನೇಂದ್ರೇಣಾ ಭಾತ್ಯಗ್ನಿಃ** ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು.

## ಸೂಕ್ತ—೩೫

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೫ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೧೪, ೧೫, ೧೬, ೧೭ ॥

**॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥**
**॥ ಋಷಿಃ—ಶ್ಯಾವಾಶ್ವಃ ॥**
**॥ ದೇವತಾ—ಅಶ್ವಿನೌ ॥**
**॥ ಛಂದಃ—೧-೨೧. ಉಪರಿಷ್ಟಾಜ್ಜ್ಯೋತಿಃ । ೨೨, ೨೪. ಪಂಕ್ತಿಃ । ೨೩. ಮಹಾಬೃಹತೀ ॥**

**॥ ಸಂಹಿತಾಪಾಠಃ ॥**

**ಅಗ್ನಿನೇಂದ್ರೇಣ ವರುಣೇನ ವಿಷ್ಣುನಾದಿತ್ಯೈ ರುದ್ರೈರ್ವಸುಭಿಃ ಸಚಾಭುವಾ ।**
**ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಪಿಬತಮಶ್ವಿನಾ ॥ ೧ ॥**

॥ ಪದಪಾಠಃ ॥

ಅಗ್ನಿನಾ । ಇಂದ್ರೇಣ । ವರುಣೇನ । ವಿಷ್ಣುನಾ । ಆದಿತ್ಯೈಃ । ರುದ್ರೈಃ । ವಸುಽಭಿಃ । ಸಚಾಽಭುವಾ ।

ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಸೋಮಂ । ಪಿಬತಂ । ಅಶ್ವಿನಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾಶ್ವಿನೌ ಅಗ್ನಿನೇಂದ್ರೇಣ ವರುಣೇನ ವಿಷ್ಣುನಾದಿತ್ಯೈ ರುದ್ರೈರ್ವಸುಭಿಶ್ಚ ಸಚಾಭುವಾ ಸಹಭೂತಾವುಷಸಾ ಸೂರ್ಯೇಣ ಚ ಸಜೋಷಸಾ ಸಂಗತೌ ಯುವಾಂ ಸೋಮಂ ಪಿಬತಂ ॥

॥ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಅಗ್ನಿನಾ**—ಅಗ್ನಿಯೊಡನೆಯೂ । **ಇಂದ್ರೇಣ**—ಇಂದ್ರನೊಡನೆಯೂ । **ವರುಣೇನ**—ವರುಣನೊಡನೆಯೂ । **ವಿಷ್ಣುನಾ**—ವಿಷ್ಣುವಿನೊಡನೆಯೂ । **ಆದಿತ್ಯೈಃ**—ಆದಿತ್ಯರೊಡನೆಯೂ । **ರುದ್ರೈಃ**—ರುದ್ರರೊಡನೆಯೂ । **ವಸುಭಿಃ**—ವಸುಗಳೊಡನೆಯೂ । **ಸಚಾಭುವಾ**—ಒಟ್ಟಿಗೆ ಕೂಡಿರುವವರಾಗಿ । **ಚ**—ಮತ್ತು । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ**—ಸೂರ್ಯನೊಡನೆಯೂ । **ಸಜೋಷಸಾ**—ಸಮಾನವಾದ ಪ್ರೀತಿಯುಳ್ಳವರಾಗಿಯೂ ಇದ್ದು । **ಸೋಮಂ**—ಸೋಮವನ್ನು । **ಪಿಬತಂ**—ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಗ್ನಿಯೊಡನೆಯೂ, ಇಂದ್ರನೊಡನೆಯೂ, ವರುಣನೊಡನೆಯೂ, ವಿಷ್ಣುವಿನೊಡನೆಯೂ, ಆದಿತ್ಯರೊಡನೆಯೂ, ರುದ್ರರೊಡನೆಯೂ, ವಸುಗಳೊಡನೆಯೂ ಒಟ್ಟಿಗೆ ಕೂಡಿದವರಾಗಿಯೂ, ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿ ಸಮಾನವಾದ ಪ್ರೀತಿಯುಳ್ಳವರಾಗಿಯೂ ಇದ್ದು ಸೋಮವನ್ನು ಪಾನಮಾಡಿರಿ.

English Translation.

Associated with Agni, with Indra, with Varuna, with Vishnu, with the Adityas, the Rudras, and the Vasus, and united with the dawn and with Surya, drink, Ashwins, the Soma.

॥ ವಿಶೇಷವಿಷಯಗಳು ॥

**ಸಚಾ**—**ಸಚಾ** ಎಂದರೆ **ಸಹ**,—ಸಹಿತವಾಗಿ ಎಂದರ್ಥವು. ಯಾಸ್ಕರು, **ಸಚಾ ಸಹೇತ್ಯರ್ಥಃ । ವಸುಭಿಃ ಸಚಾಭುವಾ । ವಸುಭಿಃ ಸಹ ಭವೌ** ಎಂದು ನಿರ್ವಚನವನ್ನು ಹೇಳಿರುವರು (೭. ೫-೫).

॥ ಸಂಹಿತಾಪಾಠಃ ॥

ವಿಶ್ವಾಭಿರ್ಧೀಭಿರ್ಭುವನೇನ ವಾಜಿನಾ ದಿವಾ ಪೃಥಿವ್ಯಾದ್ರಿಭಿಃ ಸಚಾಭುವಾ ।

ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಪಿಬತಮಶ್ವಿನಾ ॥ ೨ ॥

॥ ಪದಪಾಠಃ ॥

ವಿಶ್ವಾಭಿಃ । ಧೀಭಿಃ । ಭುವನೇನ । ವಾಜಿನಾ । ದಿವಾ । ಪೃಥಿವ್ಯಾ । ಅದ್ರಿಽಭಿಃ । ಸಚಾಽಭುವಾ ।

ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಸೋಮಂ । ಪಿಬತಂ । ಅಶ್ವಿನಾ ॥ ೨ ॥

॥ ಸಾಯಣಭಾಷ್ಯಂ ॥

ಹೇ ವಾಜಿನಾ ಬಲಿನಾವಶ್ವಿನೌ ವಿಶ್ವಾಭಿಃ ಸರ್ವಾಭಿರ್ಧೀಭಿಃ ಪ್ರಜ್ಞಾಭಿರ್ಭುವನೇನಾಖಿಲೇನ ಭೂತಜಾತೇನ ಚ ದಿವಾ ದ್ಯುಲೋಕೇನ ಚ ಪೃಥಿವ್ಯಾ ಚಾದ್ರಿಭಿಶ್ಚ ಸಚಾಭುವಾ ಸಹಭೂತಾವುಷಸಾ ಸೂರ್ಯೇಣ ಚ ಸಂಗತೌ ಯುವಾಂ ಸೋಮಂ ಪಿಬತಂ ॥

॥ ಪ್ರತಿಪದಾರ್ಥ ॥

**ವಾಜಿನಾ**—ಶಕ್ತಿಯುತರಾದ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ವಿಶ್ವಾಭಿಃ**—ಸಮಸ್ತವಾದ | **ಧೀಭಿಃ**—ಪ್ರಜ್ಞೆಗಳೊಡನೆಯೂ | **ಭುವನೇನ**—ಸಕಲ ಭೂತಜಾತಗಳೊಡನೆಯೂ | **ದಿವಾ**—ದ್ಯುಲೋಕದೊಡನೆಯೂ | **ಪೃಥಿವ್ಯಾ**—ಪೃಥ್ವಿಯೊಡನೆಯೂ | **ಅದ್ರಿಭಿಃ**—ಪರ್ವತಗಳೊಡನೆಯೂ | **ಸಚಾಭುವಾ**—ಒಟ್ಟುಗೂಡಿಯೂ | **ಉಷಸಾ**—ಉಷಸ್ಸಿನೊಡನೆಯೂ | **ಸೂರ್ಯೇಣ ಚ**-ಸೂರ್ಯನೊಡನೆಯೂ | **ಸಜೋಷಸಾ**—ಒಂದುಗೂಡಿ ಸಮಾನವಾದ ಪ್ರೀತಿಯುಳ್ಳವರಾಗಿಯೂ ಇದ್ದು | **ಸೋಮಂ**—ಸೋಮವನ್ನು | **ಪಿಬತಂ**—ಪಾನಮಾಡಿರಿ.

॥ ಭಾವಾರ್ಥ ॥

ಶಕ್ತಿಯುತರಾದ ಎಲೈ ಅಶ್ವಿನೀದೇವತೆಗಳೇ, ಸಮಸ್ತವಾದ ಪ್ರಜ್ಞೆಗಳೊಡನೆಯೂ, ಸಕಲಭೂತಜಾತಗಳೊಡನೆಯೂ, ದ್ಯುಲೋಕದೊಡನೆಯೂ, ಪೃಥ್ವಿಯೊಡನೆಯೂ, ಪರ್ವತಗಳೊಡನೆಯೂ, ಒಟ್ಟುಗೂಡಿದವರಾಗಿಯೂ, ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ, ಒಂದುಗೂಡಿ ಸಮಾನವಾದ ಪ್ರೀತಿಯುಳ್ಳವರಾಗಿಯೂ ಇದ್ದು ಸೋಮವನ್ನು ಪಾನಮಾಡಿರಿ.

## English Translation.

Powerful (Aswins), associated with all intelligences, with all beings, with heaven, with earth, with the mountains, united with the dawn and with Surya, drink, Aswins, the Soma.

॥ ಸಂಹಿತಾಪಾಠಃ ॥

ವಿಶ್ವೈರ್ದೇವೈಸ್ತ್ರಿಭಿರೇಕಾದಶೈರಿಹಾದ್ಭಿರ್ಮರುದ್ಭಿರ್ಭೃಗುಭಿಃ ಸಚಾಭುವಾ ।

ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಪಿಬತಮಶ್ವಿನಾ ॥ ೩ ॥

॥ ಪದಪಾಠಃ ॥

ವಿಶ್ವೈಃ । ದೇವೈಃ । ತ್ರಿಽಭಿಃ । ಏಕಾದಶೈಃ । ಇಹ । ಅತ್ಽಭಿಃ । ಮರುತ್ಽಭಿಃ । ಭೃಗುಽಭಿಃ ।
ಸಚಾಽಭುವಾ ।

ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಸೋಮಂ । ಪಿಬತಂ । ಅಶ್ವಿನಾ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ವಿಶ್ವೈರ್ದೇವೈಸ್ತ್ರಿಭಿರೇಕಾದಶೈಸ್ತ್ರಯಸ್ತ್ರಿಂಶೈರಿಹ ಯಜ್ಞೇಽದ್ಭಿರ್ಮರುದ್ಭಿರ್ಭೃಗುಭಿಶ್ಚ ಸಚಾಭುವಾ ಸಹಭೂತಾವುಷಸಾ ಸೂರ್ಯೇಣ ಚ ಸಂಗತೌ ಯುವಾಂ ಸೋಮಂ ಪಿಬತಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ಇಹ**— ಈ ಯಜ್ಞದಲ್ಲಿ । **ತ್ರಿಭಿಃ ಏಕಾದಶೈಃ**— ಮೂವತ್ತು ಮೂರು ಸಂಖ್ಯೆಯುಳ್ಳ । **ವಿಶ್ವೈಃ ದೇವೈಃ**— ಸಕಲ ದೇವತೆಗಳೊಡನೆಯೂ । **ಅದ್ಭಿಃ**— ಅಬ್ದೇವತೆಗಳೊಡನೆಯೂ । **ಮರುದ್ಭಿಃ**— ಮರುತ್ತುಗಳೊಡನೆಯೂ । **ಭೃಗುಭಿಃ**— ಭೃಗುಗಳೊಡನೆಯೂ । **ಸಚಾಭುವಾ**— ಒಟ್ಟುಗೂಡಿದವರಾಗಿಯೂ । **ಉಷಸಾ**— ಉಷಸ್ಸಿನೊಡನೆಯೂ । **ಸೂರ್ಯೇಣ ಚ**— ಸೂರ್ಯನೊಡನೆಯೂ । **ಸಜೋಷಸಾ**— ಒಂದುಗೂಡಿ ಸಮಾನವಾದ ಪ್ರೀತಿಯುಳ್ಳವರಾಗಿಯೂ ಇದ್ದು । **ಸೋಮಾ**— ಸೋಮವನ್ನು । **ಪಿಬತಂ**— ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಈ ಯಜ್ಞದಲ್ಲಿ ಮೂವತ್ತುಮೂರು ಸಂಖ್ಯೆಯುಳ್ಳ ಸಕಲ ದೇವತೆಗಳೊಡನೆಯೂ, ಅಬ್ದೇವತೆಗಳೊಡನೆಯೂ, ಮರುತ್ತುಗಳೊಡನೆಯೂ, ಭೃಗುಗಳೊಡನೆಯೂ ಒಟ್ಟುಗೂಡಿದವರಾಗಿಯೂ, ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿ ಸಮಾನವಾದ ಪ್ರೀತಿಯುಳ್ಳವರಾಗಿಯೂ ಇದ್ದು ಸೋಮವನ್ನು ಪಾನಮಾಡಿರಿ.

English Translation.

Associated with all the thrice-eleven deities at this ceremony, with the waters, with the Maruts, with the Bhrigus, united with the dawn and with Surya, drink, Aswins, the Soma.

॥ ಸಂಹಿತಾಪಾಠಃ ॥

ಜುಷೇಥಾಂ ಯಜ್ಞಂ ಬೋಧತಂ ಹವಸ್ಯ ಮೇ ವಿಶ್ವೇಹ ದೇವೌ ಸವನಾವ ಗಚ್ಛತಂ ।

ಸಜೋಷಸಾ ಉಷಸಾ ಸೂರ್ಯೇಣ ಚೇಷಂ ನೋ ವೋಳ್ಹಮಶ್ವಿನಾ ॥ ೪ ॥

॥ ಪದಪಾಠಃ ॥

ಜುಷೇಥಾಂ । ಯಜ್ಞಂ । ಬೋಧತಂ । ಹವಸ್ಯ । ಮೇ । ವಿಶ್ವಾ । ಇಹ । ದೇವೌ । ಸವನಾ । ಅವ । ಗಚ್ಛತಂ ।

ಸ್ಽಜೋಷಸೌ । ಉಷಸಾ । ಸೂರ್ಯೇಣ । ಚ । ಆ । ಇಷಂ । ನಃ । ವೋಳ್ಹಂ । ಅಶ್ವಿನಾ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯಜ್ಞಂ ಜುಷೇಥಾಂ । ಸೇವೇಥಾಂ । ಮೇ ಮಮ ಹವಸ್ಯ ಹವಂ ಬೋಧತಂ । ಜಾನೀತಂ । ಇಹ ಯಜ್ಞೇ ವಿಶ್ವಾ ಸರ್ವಾಣಿ ಸವನಾನ್ಯವ ಗಚ್ಛತಂ । ಪ್ರಾಪ್ನುತಂ । ಇಷಮನ್ನಂ ನ ಆ ವೋಳ್ಹಂ । ಪ್ರಾಪಯತಂ ॥

॥ ಪ್ರತಿಪದಾರ್ಥ ॥

ದೇವೌ—ದೇವತಾತ್ಮರಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯಜ್ಞಂ—ನಮ್ಮ ಯಜ್ಞವನ್ನು । ಜುಷೇಥಾಂ—ಸೇವಿಸಿರಿ । ಮೇ—ನನ್ನ । ಹವಸ್ಯ—ಪ್ರಾರ್ಥನೆಯನ್ನು । ಬೋಧತಂ—ತಿಳಿಯಿರಿ । ಇಹ—ಈ ಯಜ್ಞದಲ್ಲಿ । ವಿಶ್ವಾ—ಸಮಸ್ತವಾದ । ಸವನಾ—ಕರ್ಮಗಳನ್ನೂ । ಅವ ಗಚ್ಛತಂ—ತಿಳಿಯಿರಿ । ಉಷಸಾ—ಉಷಸ್ಸಿನೊಡನೆಯೂ । ಸೂರ್ಯೇಣ ಚ—ಸೂರ್ಯನೊಡನೆಯೂ । ಸಜೋಷಸಾ—ಒಂದುಗೂಡಿದವರಾಗಿದ್ದು । ನಃ—ನಮಗೆ । ಇಷಂ—ಅನ್ನವನ್ನು । ಆ ವೋಳ್ಹಂ—ಒದಗಿಸಿಕೊಡಿರಿ.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಅಶ್ವಿನೀದೇವತೆಗಳೇ, ನಮ್ಮ ಯಜ್ಞವನ್ನು ಸೇವಿಸಿರಿ. ನನ್ನ ಪ್ರಾರ್ಥನೆಯನ್ನು ತಿಳಿಯಿರಿ. ಈ ಯಜ್ಞದಲ್ಲಿ ಸಮಸ್ತವಾದ ಕರ್ಮಗಳನ್ನೂ ಅರಿಯಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದ್ದವರಾಗಿದ್ದು ನಮಗೆ ಅನ್ನವನ್ನು ಒದಗಿಸಿಕೊಡಿರಿ.

English Translation.

Be gratified by the sacrifice; hear my invocation; recognize, deites, all the offerings in this cermony; united with the dawn and with Surya, bring us, Aswins, food.

॥ ಸಂಹಿತಾಪಾಠಃ ॥

ಸ್ತೋಮಂ ಜುಷೇಥಾಂ ಯುವಶೇವ ಕನ್ಯನಾಂ ವಿಶ್ವೇಹ ದೇವೌ ಸವನಾವ ಗಚ್ಛತಂ ।

ಸಜೋಷಸಾ ಉಷಸಾ ಸೂರ್ಯೇಣ ಚೇಷಂ ನೋ ವೋಳ್ಹಮಶ್ವಿನಾ ॥ ೫ ॥

॥ ಪದಪಾಠಃ ॥

ಸ್ತೋಮಂ । ಜುಷೇಥಾಂ । ಯುವಶಾಽಇವ । ಕನ್ಯನಾಂ । ವಿಶ್ವಾ । ಇಹ । ದೇವೌ । ಸವನಾ । ಅವ । ಗಚ್ಛತಂ ।

ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಆ । ಇಷಂ । ನಃ । ವೋಳ್ಹಂ । ಅಶ್ವಿನಾ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ದೇವೌ ಯುವಾಮಿಹಾಸ್ಮಿನ್ಯಜ್ಞೇ ಸ್ತೋಮಂ ಜುಷೇಥಾಂ । ಸೇವೇಥಾಂ । ಯುವಶೇವ ಯಥಾ ಯುವಾನೌ ಕನ್ಯನಾಂ ಕನ್ಯಾನಾಮಾಹ್ವಾನಂ ಸೇವೇತೇ । ಕನ್ಯದಿತ್ಯರ್ಥಃ । ಇಹ ಯಜ್ಞೇ ವಿಶ್ವಾ ವಿಶ್ವಾನಿ ಸವನಾನ್ಯವ ಗಚ್ಛತಂ । ಪ್ರಾಪ್ನುತಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ದೇವೌ— ದೇವತಾತ್ಮರಾದ । **ಅಶ್ವಿನಾ** - ಎಲೈ ಅಶ್ವಿನೀದೇವತೆಗಳೇ । **ಕನ್ಯನಾಂ**— ಕನ್ಯೆಯರ ಆಹ್ವಾನವನ್ನು ಕೇಳಿ । **ಯುವಶೇವ**— ಯುವಕರು ಆಹ್ಲಾದವನ್ನು ಹೊಂದುವಂತೆ । **ಇಹ**— ಈ ಯಜ್ಞದಲ್ಲಿ । **ಸ್ತೋಮಂ**— ನಮ್ಮ ಸ್ತುತಿಯನ್ನು । **ಜುಷೇಥಾಂ** - ಸೇವಿಸಿರಿ । **ವಿಶ್ವಾ**— ಸಮಸ್ತವಾದ । **ಸವನಾ**— ಯಜ್ಞಕರ್ಮಗಳನ್ನು । **ಅವ ಗಚ್ಛತಂ** - ತಿಳಿದು ಸ್ವೀಕರಿಸಿರಿ । **ಉಷಸಾ**— ಉಷಸ್ಸಿನೊಡನೆಯೂ । **ಸೂರ್ಯೇಣ ಚ**— ಸೂರ್ಯನೊಡನೆಯೂ । **ಸಜೋಷಸಾ**— ಒಂದುಗೂಡಿದವರಾಗಿ । **ನಃ**— ನಮಗೆ । **ಇಷಃ**— ಅನ್ನವನ್ನು । **ಆ ವೋಳ್ಹಂ**— ತಂದೊದಗಿಸಿರಿ.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಅಶ್ವಿನೀದೇವತೆಗಳೇ, ಕನ್ಯೆಯರ ಆಹ್ವಾನವನ್ನು ಕೇಳಿ ಯುವಕರು ಆಹ್ಲಾದವನ್ನು ಹೊಂದುವಂತೆ ಈ ಯಜ್ಞದಲ್ಲಿ ನಮ್ಮ ಸ್ತುತಿಯನ್ನು ಸೇವಿಸಿರಿ. ಸಮಸ್ತವಾದ ಯಜ್ಞಕರ್ಮಗಳನ್ನೂ ಅರಿತು ಸ್ವೀಕರಿಸಿರಿ ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ನಮಗೆ ಅನ್ನವನ್ನು ತಂದೊದಗಿಸಿರಿ.

English Translation.

Be gratified by our praise as youths are delighted (by the voices) of maidens : recognize, deities, all the offering in th s cermony , united with the dawn and with Surya, bring us, As.vins, food.

॥ ಸಂಹಿತಾಪಾಠಃ ॥

ಗಿರೋ ಜುಷೇಥಾಮಧ್ವರಂ ಜುಷೇಥಾಂ ವಿಶ್ವೇಹ ದೇವೌ ಸವನಾವ ಗಚ್ಛತಂ ।

ಸಜೋಷಸಾ ಉಷಸಾ ಸೂರ್ಯೇಣಾ ಚೇಷಂ ನೋ ವೋಳ್ಹಮಶ್ವಿನಾ ॥ ೬ ॥

|| ಪದಪಾಠಃ ||

ಗಿರಃ | ಜುಷೇಥಾಂ | ಅಧ್ವರಂ | ಜುಷೇಥಾಂ | ವಿಶ್ವಾ | ಇಹ | ದೇವಾ | ಸವನಾ | ಅವ | ಗಚ್ಛತಂ |
ಸsಜೋಷಸಾ | ಉಷಸಾ | ಸೂರ್ಯೇಣ | ಚ | ಆ | ಇಷಂ | ನಃ | ವೋಳ್ಹಂ | ಅಶ್ವಿನಾ || ೬ ||

| ಸಾಯಣಭಾಷ್ಯಂ ||

ಹೇ ದೇವಾವಶ್ವಿನಾ ನೋऽಸ್ಮಾಕಂ ಗಿರಃ ಸ್ತುತೀರ್ಜುಷೇಥಾಂ | ಸೇವೇಥಾಂ | ತಥಾಧ್ವರಂ ಯಜ್ಞಂ ಚ ಜುಷೇಥಾಂ | ಇಹ ಯಜ್ಞೇ ವಿಶ್ವಾನಿ ಸವನಾನ್ಯವ ಗಚ್ಛತಂ | ಪ್ರಾಪ್ನುತಂ ||

|| ಪ್ರತಿಪದಾರ್ಥ ||

**ದೇವಾ**—ದೇವತಾತ್ಮರಾದ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಗಿರಃ**—ನಮ್ಮ ಸ್ತುತಿಗಳನ್ನು | **ಜುಷೇಥಾಂ**—ಸೇವಿಸಿರಿ | **ಅಧ್ವರಂ**—ನಮ್ಮ ಯಜ್ಞವನ್ನು | **ಜುಷೇಥಾಂ**—ಸೇವಿಸಿರಿ | **ಇಹ**—ಈ ಯಜ್ಞದಲ್ಲಿ | **ವಿಶ್ವಾ**—ಸಮಸ್ತವಾದ | **ಸವನಾ**—ನಮ್ಮ ಕರ್ಮಗಳನ್ನೂ | **ಅವ ಗಚ್ಛತಂ**—ಅರಿತು ಅವನ್ನು ಸ್ವೀಕರಿಸಿರಿ | **ಉಷಸಾ**—ಉಷಸ್ಸಿನೊಡನೆಯೂ | **ಸೂರ್ಯೇಣ ಚ**—ಸೂರ್ಯನೊಡನೆಯೂ | **ಸಜೋಷಸಾ**—ಒಂದುಗೂಡಿದವರಾಗಿ | **ನಃ**—ನಮಗೆ | **ಇಷಂ**-ಅನ್ನವನ್ನು | **ಆ ವೋಳ್ಹಂ**-ತಂದೊದಗಿಸಿರಿ.

|| ಭಾವಾರ್ಥ ||

ದೇವತಾತ್ಮರಾದ ಎಲೈ ಅಶ್ವಿನೀದೇವತೆಗಳೇ, ನಮ್ಮ ಸ್ತುತಿಗಳನ್ನು ಸೇವಿಸಿರಿ. ನಮ್ಮ ಯಜ್ಞವನ್ನು ಸೇವಿಸಿರಿ. ಈ ಯಜ್ಞದಲ್ಲಿ ಸಮಸ್ತವಾದ ನಮ್ಮ ಕರ್ಮಗಳನ್ನೂ ಅರಿತು ಅವನ್ನು ಸ್ವೀಕರಿಸಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ನಮಗೆ ಅನ್ನವನ್ನು ತಂದೊದಗಿಸಿರಿ.

## English Translation.

Be gratified, deities, by our praises, be gratified by the sacrifice, recognize, deities, all the offerings in this cermony ; united with the dawn and with Surya, bring us, Aswins, food.

|| ಸಂಹಿತಾಪಾಠಃ ||

ಹಾರಿದ್ರವೇವ ಪತಥೋ ವನೇದುಪ ಸೋಮಂ ಸುತಂ ಮಹಿಷೇವಾವ ಗಚ್ಛಥಃ |
ಸಜೋಷಸಾ ಉಷಸಾ ಸೂರ್ಯೇಣ ಚ ತ್ರಿರ್ವರ್ತಿರ್ಯಾತಮಶ್ವಿನಾ || ೭ ||

॥ ಪದಪಾಠಃ ॥

ಹಾರಿದ್ರವಾಽಇವ । ಪತಥಃ । ವನಾ । ಇತ್ । ಉಪ । ಸೋಮಂ । ಸುತಂ । ಮಹಿಷಾಽಇವ । ಅವ । ಗಚ್ಛಥಃ ॥

ಸಽಜೋಷಸೌ । ಉಷಸಾ । ಸೂರ್ಯೇಣ । ಚ । ತ್ರಿಃ । ವರ್ತಿಃ । ಯಾತಂ । ಅಶ್ವಿನಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಸುತಮಭಿಷುತಂ ಸೋಮಮುಪ ಪತಥೋ ಹಾರಿದ್ರವಾವಿವ ಯಥಾ ಹಾರಿದ್ರವೌ ಪಕ್ಷಿಣೌ ವನಾ ವನಾನ್ಯುದಕಾನಿ ವಾ । ವನಮಿತ್ಯುದಕನಾಮಸು ಪಾಠಾತ್ । ಉಪಪತತಃ । ತದ್ವದಿತ್ಯರ್ಥಃ । ಮಹಿಷಾವಿವ ಯಥಾ ಪಿಪಾಸಿತೌ ಮಹಿಷಾವುದಕಾನ್ಯುಪಗಚ್ಛತಃ ತಥಾ ಸುತಂ ಸೋಮಮವ ಗಚ್ಛಥಃ । ಉಷಸಾ ಸೂರ್ಯೇಣ ಚ ಸಂಗತೌ ತ್ರಿರ್ವರ್ತಿಸ್ತ್ರಿಮಾರ್ಗಂ ಯಾತಂ ಚ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವನಾ**—ಉದಕಾಭಿಮುಖವಾಗಿ । **ಹಾರಿದ್ರವಾವಿವ**—ನೀರುಕೋಳಿಗಳು ಓಡಿಬರುವಂತೆಯೂ । **ಮಹಿಷಾವಿವ**—ಬಿಸಿಲಿನಿಂದ ತಪ್ತವಾದ ಎಮ್ಮೆಗಳು ಉದಕಾಭಿಮುಖವಾಗಿ ಓಡಿಬರುವಂತೆಯೂ । (**ಯುವಾಂ**—ನೀವು) । **ಸುತಂ**—ಹಿಂಡಿರುವ । **ಸೋಮಂ ಇತ್**—ಸೋಮಕ್ಕೆ ಅಭಿಮುಖವಾಗಿ । **ಉಪ ಪತಥಃ**—ಓಡಿಬನ್ನಿರಿ । **ಅವ ಗಚ್ಛಥಃ**—ನಮ್ಮ ಅರ್ಪಣೆಯನ್ನು ಅರಿತು ಅದನ್ನು ಸ್ವೀಕರಿಸಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ತ್ರಿರ್ವರ್ತಿಃ**—ಮೂರು ಮಾರ್ಗಗಳಿಂದಲೂ । **ಯಾತಂ**—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಉದಕಾಭಿಮುಖವಾಗಿ ನೀರುಕೋಳಿಗಳು ಓಡಿಬರುವಂತೆಯೂ, ಬಿಸಿಲಿನಿಂದ ತಪ್ತವಾದ ಎಮ್ಮೆಗಳು ಉದಕಾಭಿಮುಖವಾಗಿ ಓಡಿಬರುವಂತೆಯೂ ನೀವು ನಮ್ಮಿಂದ ಹಿಂಡಿರುವ ಸೋಮಕ್ಕೆ ಅಭಿಮುಖವಾಗಿ ಓಡಿಬನ್ನಿರಿ ನಮ್ಮ ಅರ್ಪಣೆಯನ್ನು ಅರಿತು ಅದನ್ನು ಸ್ವೀಕರಿಸಿರಿ. ಉಷಸ್ಸಿನೊಡನೆಯೂ ಮತ್ತು ಸೂರ್ಯನೊಡನೆಯೂ ಒಂದುಗೂಡಿದವರಾಗಿ ಮೂರು ಮಾರ್ಗಗಳಿಂದಲೂ ಬನ್ನಿರಿ.

## English Translation.

You alight upon the effused Soma as the Haridrava plunges into the water: you fall upon it like two buffaloes (plunging into a pool); united with the dawn and with Surya, come, Aswins, by the triple path.

॥ ಸಂಹಿತಾಪಾಠಃ ॥

ಹಂಸಾವಿವ ಪತಥೋ ಅಧ್ವಗಾವಿವ ಸೋಮಂ ಸುತಂ ಮಹಿಷೇವಾವ ಗಚ್ಛಥಃ ।
ಸಜೋಷಸಾ ಉಷಸಾ ಸೂರ್ಯೇಣ ಚ ತ್ರಿರ್ವರ್ತಿರ್ಯಾತಮಶ್ವಿನಾ ॥ ೮ ॥

॥ ಪದಪಾಠಃ ॥

ಹಂಸೌಽಇವ । ಪತಥಃ । ಅಧ್ವಗೌಽಇವ । ಸೋಮಂ । ಸುತಂ । ಮಹಿಷಾಽಇವ । ಅವ । ಗಚ್ಛಥಃ ।
ಸಽಜೋಷಸೌ । ಉಷಸಾ । ಸೂರ್ಯೇಣ । ಚ । ತ್ರಿಃ । ವರ್ತಿಃ । ಯಾತಂ । ಅಶ್ವಿನಾ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಹಂಸಾವಿವ ಯಥಾ ಹಂಸಾವಧ್ವಗಾವಿವ ಯಥಾ ಚ ಪಥಿಕಾವುದಕಂ ಗಚ್ಛತಃ ತಥಾ ವೇಗೇನ ಸುತಂ ಸೋಮಂ ಪತಥಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಹಂಸಾವಿವ**—ಹಂಸಪಕ್ಷಿಗಳು ಉದಕಾಭಿಮುಖವಾಗಿ ಓಡಿಬರುವಂತೆಯೂ । **ಅಧ್ವಗಾವಿವ**—ಬಾಯಾರಿದ ಪ್ರಯಾಣಿಕರು ಉದಕಾಭಿಮುಖವಾಗಿ ಓಡಿಬರುವಂತೆಯೂ । **ಮಹಿಷಾ ಇವ**—ಬಿಸಿಲಿನಿಂದ ಬಳಲಿದ ಮಹಿಷಗಳು ಉದಕಾಭಿಮುಖವಾಗಿ ಓಡಿಬರುವಂತೆಯೂ । **ಸುತಂ**—ಹಿಂಡಿರುವ । **ಸೋಮಂ**—ನಮ್ಮ ಸೋಮಕ್ಕೆ ಅಭಿಮುಖವಾಗಿ । **ಪತಥಃ**—ಓಡಿಬನ್ನಿರಿ । **ಅವ ಗಚ್ಛಥಃ**—ನಮ್ಮ ಸೋಮಾರ್ಪಣೆಯನ್ನು ಅರಿತು ಅದನ್ನು ಸ್ವೀಕರಿಸಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ತ್ರಿರ್ವರ್ತಿಃ**—ಮೂರು ಮಾರ್ಗಗಳಿಂದಲೂ । **ಯಾತಂ**—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಹಂಸಪಕ್ಷಿಗಳು ಉದಕಾಭಿಮುಖವಾಗಿ ಓಡಿಬರುವಂತೆಯೂ, ಬಾಯಾರಿದ ಪ್ರಯಾಣಿಕರು ಉದಕಾಭಿಮುಖವಾಗಿ ಓಡಿಬರುವಂತೆಯೂ, ಬಿಸಿಲಿನಿಂದ ಬಳಲಿದ ಮಹಿಷಗಳು ಉದಕಾಭಿಮುಖವಾಗಿ ಓಡಿಬರುವಂತೆಯೂ ಹಿಂಡಿರುವ ನಮ್ಮ ಸೋಮಕ್ಕೆ ಅಭಿಮುಖವಾಗಿ ಓಡಿಬನ್ನಿರಿ. ನಮ್ಮ ಸೋಮಾರ್ಪಣೆಯನ್ನು ಅರಿತು ಅದನ್ನು ಸ್ವೀಕರಿಸಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಮೂರು ಮಾರ್ಗಗಳಿಂದಲೂ ಬನ್ನಿರಿ

## English Translation.

As two geese, as two travellers, as two buffalose (hasten to water) you alight, Aswins, upon the effused Soma ; united with the dawn and with Surya, come Aswins, by the triple path.

॥ ಸಂಹಿತಾಪಾಠಃ ॥

ಶ್ಯೇನಾವಿವ ಪತಥೋ ಹವ್ಯದಾತಯೇ ಸೋಮಂ ಸುತಂ ಮಹಿಷೇವಾವ ಗಚ್ಛಥಃ ।
ಸಜೋಷಸಾ ಉಷಸಾ ಸೂರ್ಯೇಣ ಚ ತ್ರಿರ್ವರ್ತಿರ್ಯಾತಮಶ್ವಿನಾ ॥ ೯ ॥

॥ ಪದಪಾಠಃ ॥

ಶ್ಯೇನೌಽಇವ । ಪತಥಃ । ಹವ್ಯಽದಾತಯೇ । ಸೋಮಂ । ಸುತಂ । ಮಹಿಷಾಽಇವ । ಅವ । ಗಚ್ಛಥಃ ।
ಸಽಜೋಷಸೌ । ಉಷಸಾ । ಸೂರ್ಯೇಣ । ಚ । ತ್ರಿಃ । ವರ್ತಿಃ । ಯಾತಂ । ಅಶ್ವಿನಾ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಶ್ಯೇನಾವಿವ ಯಥಾ ಶ್ಯೇನೌ ಗಗಣಂ ಗಚ್ಛತಃ ತಥಾ ವೇಗೇನ ಸುತಂ ಸೋಮಂ ಹವ್ಯದಾತಯೇ ಯಜಮಾನಾರ್ಥಂ ಪತಥಃ । ಗಚ್ಛಥಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಶ್ಯೇನಾವಿವ**—ಶ್ಯೇನಪಕ್ಷಿಗಳು ಅಂತರಿಕ್ಷಕ್ಕೆ ವೇಗವಾಗಿ ಹಾರಿಹೋಗುವಂತೆಯೂ । **ಮಹಿಷಾವಿವ**—ಮಹಿಷಗಳು ಉದಕಾಭಿಮುಖವಾಗಿ ಓಡಿಬರುವಂತೆಯೂ । **(ಯುವಾಂ**—ನೀವು) । **ಸುತಂ**—ಹಿಂಡಿರುವ । **ಸೋಮಂ**—ಸೋಮಕ್ಕೆ ಅಭಿಮುಖವಾಗಿ । **ಹವ್ಯದಾತಯೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಅನುಗ್ರಹಿಸಲು । **ಪತಥಃ**—ಶೀಘ್ರವಾಗಿ ಬನ್ನಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ತ್ರಿರ್ವರ್ತಿಃ**—ಮೂರು ಮಾರ್ಗಗಳಿಂದಲೂ । **ಯಾತಂ**—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಶ್ಯೇನಪಕ್ಷಿಗಳು ಅಂತರಿಕ್ಷಕ್ಕೆ ವೇಗವಾಗಿ ಹಾರಿಹೋಗುವಂತೆಯೂ, ಮಹಿಷಗಳು, ಉದಕಾಭಿಮುಖವಾಗಿ ಓಡಿಬರುವಂತೆಯೂ, ನೀವು ನಮ್ಮಿಂದ ಹಿಂಡಲ್ಪಟ್ಟಿರುವ ಸೋಮಕ್ಕೆ ಅಭಿಮುಖವಾಗಿ ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಅನುಗ್ರಹಿಸಲು ಶೀಘ್ರವಾಗಿ ಬನ್ನಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಮೂರು ಮಾರ್ಗಗಳಿಂದಲೂ ಬನ್ನಿರಿ.

## English Translation.

You hasten like two falcons to the offerer of the libation, you alight upon the effused Soma as two buffeloes (hasten to water); united with the dawn and with Surya come, Aswins, by the triple path.

॥ ಸಂಹಿತಾಪಾಠಃ ॥

ಪಿಬತಂ ಚ ತೃಪ್ಣುತಂ ಚಾ ಚ ಗಚ್ಛತಂ ಪ್ರಜಾಂ ಚ ಧತ್ತಂ ದ್ರವಿಣಂ ಚ ಧತ್ತಂ ।
ಸಜೋಷಸಾ ಉಷಸಾ ಸೂರ್ಯೇಣ ಚೋರ್ಜಂ ನೋ ಧತ್ತಮಶ್ವಿನಾ ॥೧೦॥

॥ ಪದಪಾಠಃ ॥

ಪಿಬತಂ । ಚ । ತೃಪ್ಣುತಂ । ಚ । ಆ । ಚ । ಗಚ್ಛತಂ । ಪ್ರಽಜಾಂ । ಚ । ಧತ್ತಂ । ದ್ರವಿಣಂ । ಚ । ಧತ್ತಂ ।
ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಊರ್ಜಂ । ನಃ । ಧತ್ತಂ । ಅಶ್ವಿನಾ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಸೋಮಂ ಪಿಬತಂ ಚ । ತೃಪ್ಣುತಂ ಚ । ತೃಪ್ಯತಂ ಚ । ಪಾನಾರ್ಥಂ ತೃಪ್ತ್ಯರ್ಥಂ ಚಾ ಗಚ್ಛತಂ । ಸೋಮಂ ಪೀತ್ವಾ ತೃಪ್ತೌ ಸಂತೌ ಯುವಾಮಸ್ಮಭ್ಯಂ ಪ್ರಜಾಂ ಚ ಧತ್ತಂ। ಧಾರಯತಂ । ದ್ರವಿಣಂ ಧನಂ ಚ ಧತ್ತಂ । ಉಷಸಾ ಸೂರ್ಯೇಣ ಚ ಸಂಗತೌ ನೋಽಸ್ಮಭ್ಯಮೂರ್ಜಂ ಬಲಂ ಚ ಧತ್ತಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಪಿಬತಂ ಚ**-ನಮ್ಮ ಸೋಮವನ್ನು ಪಾನಮಾಡಿರಿ । **ತೃಪ್ಣುತಂ ಚ**—ತೃಪ್ತಿಯನ್ನೂ ಪಡೆಯಿರಿ । **ಆ ಚ ಗಚ್ಛತಂ**—ನಮ್ಮ ಯಜ್ಞಕ್ಕೆ ಬನ್ನಿರಿ । **ಪ್ರಜಾಂ ಚ**—ನಮಗೆ ಪುತ್ರಾದಿಗಳನ್ನೂ । **ಧತ್ತ**—ಕೊಡಿರಿ । **ದ್ರವಿಣಂ ಚ**—ಧನವನ್ನೂ । **ಧತ್ತ**—ಕೊಡಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ನಃ**—ನಮಗೆ । **ಊರ್ಜಂ ಚ**—ಬಲವನ್ನೂ । **ಧತ್ತಂ**—ಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಮ್ಮ ಸೋಮವನ್ನು ಪಾನಮಾಡಿರಿ. ತೃಪ್ತಿಯನ್ನು ಪಡೆಯಿರಿ. ನಮ್ಮ ಯಜ್ಞಕ್ಕೆ ದಯಮಾಡಿರಿ. ನಮಗೆ ಪುತ್ರಾದಿಗಳನ್ನೂ ಕೊಡಿರಿ. ಧನವನ್ನೂ ಕೊಡಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ನಮಗೆ ಬಲವನ್ನೂ ಕೊಡಿರಿ.

English Translation.

Drink, Aswins, the Soma, and satiate yourselves ; come hither ; give us progeny ; give us wealth ; united with the dawn and with Surya, give us, Aswins, strength.

॥ ಸಂಹಿತಾಪಾಠಃ ॥

ಜಯತಂ ಚ ಪ್ರ ಸ್ತುತಂ ಚ ಪ್ರ ಚಾವತಂ ಪ್ರಜಾಂ ಚ ಧತ್ತಂ ದ್ರವಿಣಂ-
ಚ ಧತ್ತಂ ।
ಸಜೋಷಸಾ ಉಷಸಾ ಸೂರ್ಯೇಣ ಚೋರ್ಜಂ ನೋ ಧತ್ತಮಶ್ವಿನಾ ॥೧೧॥

॥ ಪದಪಾಠಃ ॥

ಜಯತಂ । ಚ । ಪ್ರ । ಸ್ತುತಂ । ಚ । ಪ್ರ । ಚ । ಅವತಂ । ಪ್ರಽಜಾಂ । ಚ । ಧತ್ತಂ । ದ್ರವಿಣಂ । ಚ ।
ಧತ್ತಂ ।
ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಊರ್ಜಂ । ನಃ । ಧತ್ತಂ । ಅಶ್ವಿನಾ ॥ ೧೧ ॥

। ಸಾಯಣಭಾಷ್ಯಂ ।

ಹೇ ಅಶ್ವಿನೌ ಯುವಾಂ ಜಯತಂ । ಶತ್ರೂಂಶ್ಚ ಜಯತಂ । ಪ್ರ ಸ್ತುತಂ ಸ್ತೋತೄಂಶ್ಚ ಪ್ರ ಚಾವತಮಸ್ಮಾಂಶ್ಚ ಪ್ರರಕ್ಷತಂ । ಅನ್ಯತ್ಸಿದ್ಧಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ। **ಜಯತಂ ಚ**—ನಿಮ್ಮ ಶತ್ರುಗಳನ್ನೂ ಜಯಿಸಿರಿ। **ಪ್ರ ಸ್ತುತಂ**—ನಿಮ್ಮ ಭಕ್ತರ ಭಕ್ತಿಗಳನ್ನು ಪ್ರಶಂಸಿಸಿರಿ। **ಪ್ರಾವತಂ ಚ**—ನಮ್ಮನ್ನು ಸಂರಕ್ಷಿಸಿರಿ। **ಪ್ರಜಾಂ ಚ**—ಪ್ರಜೆಗಳನ್ನೂ। **ಧತ್ತಂ**—ಕೊಡಿರಿ। **ದ್ರವಿಣಂ ಚ**—ಧನವನ್ನೂ। **ಧತ್ತ**—ಕೊಡಿರಿ। **ಉಷಸಾ**—ಉಷಸ್ಸಿನೊಡನೆಯೂ। **ಸೂರ್ಯೇಣ ಚ**—ಸೂರ್ಯನೊಡನೆಯೂ। **ಸಜೋಷಸಾ**—ಒಂದುಗೂಡಿದವರಾಗಿ। **ನಃ**—ನಮಗೆ। **ಊರ್ಜಂ**—ಬಲವನ್ನು। **ಧತ್ತಂ**—ಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಶತ್ರುಗಳನ್ನೂ ಜಯಿಸಿರಿ. ನಿಮ್ಮ ಭಕ್ತರ ಭಕ್ತಿಗಳನ್ನು ಪ್ರಶಂಸಿಸಿರಿ. ನಮ್ಮನ್ನು ಸಂರಕ್ಷಿಸಿರಿ. ನಮಗೆ ಪ್ರಜೆಗಳನ್ನೂ ಕೊಡಿರಿ ಧನವನ್ನೂ ಕೊಡಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ನಮಗೆ ಬಲವನ್ನು ಕೊಡಿರಿ.

## English Translation.

Conquer (Aswins) your foes; protect and praise (your worshipper), grant progeny, give wealth, and united with the dawn and with Surya, give us, Aswins strength.

॥ ಸಂಹಿತಾಪಾಠಃ ॥

ಹತಂ ಚ ಶತ್ರೂನ್ಯತತಂ ಚ ಮಿತ್ರಿಣಃ ಪ್ರಜಾಂ ಚ ಧತ್ತಂ ದ್ರವಿಣಂ ಚ-
ಧತ್ತಂ ।
ಸಜೋಷಸಾ ಉಷಸಾ ಸೂರ್ಯೇಣ ಚೋರ್ಜಂ ನೋ ಧತ್ತಮಶ್ವಿನಾ॥೧೨॥

॥ ಪದಪಾಠಃ ॥

ಹತಂ । ಚ । ಶತ್ರೂನ್ । ಯತತಂ । ಚ । ಮಿತ್ರಿಣಃ । ಪ್ರಽಜಾಂ । ಚ । ಧತ್ತಂ । ದ್ರವಿಣಂ । ಚ ।
ಧತ್ತಂ ।
ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಊರ್ಜಂ । ನಃ । ಧತ್ತಂ । ಅಶ್ವಿನಾ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಶತ್ರೂಂಶ್ಚ ಹತಂ। ಉತಾಪಿ ಚ ಯತತಂ ಮಿತ್ರಿಣಃ। ಮೈತ್ರೀಯುಕ್ತಾಂಶ್ಚ ಗಚ್ಛತಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಶತ್ರೂನ್** —ನಿಮ್ಮ ಶತ್ರುಗಳನ್ನು । **ಹತಂ ಚ**—ನಾಶಮಾಡಿರಿ । **ಮಿತ್ರಿಣಃ**—ನಿಮ್ಮ ಮಿತ್ರರಲ್ಲಿಗೆ । **ಯತತಂ ಚ**—ದಯಮಾಡಿರಿ । **ಪ್ರಜಾಂ ಚ**—ಪುತ್ರಾದಿಗಳನ್ನು । **ಧತ್ತ**—ಕೊಡಿರಿ । **ದ್ರವಿಣಂ ಚ**—ಧನವನ್ನೂ । **ಧತ್ತ**—ಕೊಡಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ನಃ**—ನಮಗೆ । **ಊರ್ಜಂ**—ಬಲವನ್ನು । **ಧತ್ತಂ**—ಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಶತ್ರುಗಳನ್ನು ನಾಶಮಾಡಿರಿ. ನಿಮ್ಮ ಮಿತ್ರರಲ್ಲಿಗೆ ಬನ್ನಿರಿ. ನಮಗೆ ಪುತ್ರಾದಿಗಳನ್ನೂ, ಧನವನ್ನೂ ಕೊಡಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ನಮಗೆ ಬಲವನ್ನು ಕೊಡಿರಿ.

## Eng'ish Translation.

Destroy your foes, repair to your friends, grant progeny, give wealth, and, united with the dawn and with Surya, give us, Aswins strength.

॥ ಸಂಹಿತಾಪಾಠಃ ॥

ಮಿತ್ರಾವರುಣವಂತಾ ಉತ ಧರ್ಮವಂತಾ ಮರುತ್ವಂತಾ ಜರಿತುರ್ಗಚ್ಛ-
ಥೋ ಹವಂ ।
ಸಜೋಷಸಾ ಉಷಸಾ ಸೂರ್ಯೇಣ ಚಾದಿತ್ಯೈರ್ಯಾತಮಶ್ವಿನಾ ॥ ೧೩ ॥

॥ ಪದಪಾಠಃ ॥

ಮಿತ್ರಾವರುಣಽವಂತಾ । ಉತ । ಧರ್ಮಽವಂತಾ । ಮರುತ್ವಂತಾ । ಜರಿತುಃ । ಗಚ್ಛಥಃ । ಹವಂ ।
ಸಽಜೋಷಸಾ । ಉಷಸಾ । ಸೂರ್ಯೇಣ । ಚ । ಆದಿತ್ಯೈಃ । ಯಾತಂ । ಅಶ್ವಿನಾ ॥ ೧೩ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಅಶ್ವಿನೌ ಯುವಾಂ ಮಿತ್ರಾವರುಣವಂತಾ ಮಿತ್ರಾವರುಣಯುಕ್ತೌ ಧರ್ಮವಂತಾ ಧರ್ಮಯುಕ್ತೌ ಚ ಮರುತ್ವಂತಾ ಮರುದ್ಭಿರ್ಯುಕ್ತೌ ಚ ಜರಿತುಃ ಸ್ತೋತುರ್ಹವಮಾಹ್ವಾನಂ ಗಚ್ಛಥಃ । ಅಗಚ್ಛತಂ । ಉಷಸಾ ಸೂರ್ಯೇಣ ಚಾದಿತ್ಯೈಶ್ಚ ಯಾತಂ । ಗಚ್ಛತಂ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಮಿತ್ರಾವರುಣವಂತಾ**—ಮಿತ್ರಾವರುಣರೊಡನೆ ಕೂಡಿದವರಾಗಿಯೂ । **ಉತ**—ಮತ್ತು । **ಧರ್ಮವಂತಾ**—ಧರ್ಮದೇವತೆಯೊಡನೆ ಕೂಡಿದವರಾಗಿಯೂ । **ಮರುತ್ವಂತಾ**—ಮರುತ್ತುಗಳೊಡನೆ ಕೂಡಿದವರಾಗಿಯೂ । **ಜರಿತುಃ**—ಸ್ತುತಿಕರ್ತನ । **ಹವಂ**—ಪ್ರಾರ್ಥನೆಯನ್ನು ಕೇಳಿ । **ಗಚ್ಛಥಃ**—ಅವನಲ್ಲಿಗೆ ಬನ್ನಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಆದಿತ್ಯೈಃ**—ಆದಿತ್ಯರೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ಯಾತಂ**—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಮಿತ್ರಾವರುಣರೊಡನೆ ಕೂಡಿದವರಾಗಿಯೂ, ಧರ್ಮದೇವತೆಯೊಡನೆ ಕೂಡಿದವರಾಗಿಯೂ, ಮರುತ್ತುಗಳೊಡಗೂಡಿದವರಾಗಿಯೂ ಸ್ತುತಿಕರ್ತನ ಪ್ರಾರ್ಥನೆಯನ್ನು ಕೇಳಿ ಅವನಲ್ಲಿಗೆ ಬನ್ನಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ, ಆದಿತ್ಯರೊಡನೆಯೂ ಒಂದುಗೂಡಿದವರಾಗಿ ಬನ್ನಿರಿ.

## English Translation.

Associated with Mitra and Varuna, with Dharma, with the Maruts, repair to the invocation of the adorer; repair (to him), Aswins, united with the dawn, with Surya, and with Adityas.

॥ ಸಂಹಿತಾಪಾಠಃ ॥

ಅಂಗಿರಸ್ವಂತಾ ಉತ ವಿಷ್ಣುವಂತಾ ಮರುತ್ವಂತಾ ಜರಿತುರ್ಗಚ್ಛಥೋ
ಹವಂ ।
ಸಜೋಷಸಾ ಉಷಸಾ ಸೂರ್ಯೇಣ ಚಾದಿತ್ಯೈರ್ಯಾತಮಶ್ವಿನಾ ॥ ೧೪ ॥

॥ ಪದಪಾಠಃ ॥

ಅಂಗಿರಸ್ವಂತಾ । ಉತ । ವಿಷ್ಣುಽವಂತಾ । ಮರುತ್ವಂತಾ । ಜರಿತುಃ । ಗಚ್ಛಥಃ । ಹವಂ ।
ಸಽಜೋಷಸಾ । ಉಷಸಾ । ಸೂರ್ಯೇಣ । ಚ । ಆದಿತ್ಯೈಃ । ಯಾತಂ । ಅಶ್ವಿನಾ ॥ ೧೪ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಅಶ್ವಿನೌ ಯುವಾಮಂಗಿರಸ್ವಂತಾವಂಗಿರೋಭಿರ್ಯುಕ್ತೌ ವಿಷ್ಣುವಂತಾ ವಿಷ್ಣುನಾ ಚ ಸಹಿತೌ ಮರುದ್ಭಿಶ್ಚ ಸಹಿತೌ ಸ್ತೋತುರಾಹ್ವಾನಂ ಗಚ್ಛತಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಅಶ್ವಿನಾ**— ಎಲೈ ಅಶ್ವಿನೀದೇವತೆಗಳೇ । **ಉತ**— ಮತ್ತು । **ಅಂಗಿರಸ್ವಂತಾ**— ಅಂಗಿರಸ್ಸುಗಳಿಂದ ಕೂಡಿದವರಾಗಿಯೂ । **ವಿಷ್ಣುವಂತಾ**— ವಿಷ್ಣುವಿನೊಡಗೂಡಿದವರಾಗಿಯೂ । **ಮರುತ್ವಂತಾ** – ಮರುತ್ತುಗಳೊಡಗೂಡಿದವರಾಗಿಯೂ । **ಜರಿತುಃ**— ಸ್ತುತಿಕರ್ತನ । **ಹವಂ**— ಆಹ್ವಾನವನ್ನು ಕೇಳಿ । **ಗಚ್ಛಥಃ**— ಅವನಲ್ಲಿಗೆ ಹೋಗಿರಿ । **ಉಷಸಾ**— ಉಷಸ್ಸಿನೊಡನೆಯೂ । **ಸೂರ್ಯೇಣ ಚ**– ಸೂರ್ಯನೊಡನೆಯೂ । **ಆದಿತ್ಯೈಃ**— ಆದಿತ್ಯರೊಡನೆಯೂ । **ಸಜೋಷಸಾ**— ಒಂದುಗೂಡಿದವರಾಗಿ । **ಯಾತಂ**— ಸ್ತುತಿಕರ್ತನ ಸಮೀಪಕ್ಕೆ ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಅಂಗಿರಸ್ಸುಗಳಿಂದ ಕೂಡಿದವರಾಗಿಯೂ, ವಿಷ್ಣುವಿನೊಡಗೂಡಿದವರಾಗಿಯೂ, ಮರುತ್ತುಗಳೊಡಗೂಡಿದವರಾಗಿಯೂ ಸ್ತುತಿಕರ್ತನ ಆಹ್ವಾನವನ್ನು ಕೇಳಿ ಅವನಲ್ಲಿಗೆ ಹೋಗಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ, ಆದಿತ್ಯರೊಡನೆಯೂ ಒಂದುಗೂಡಿದವರಾಗಿ ಸ್ತುತಿಕರ್ತನ ಸಮೀಪಕ್ಕೆ ಬನ್ನಿರಿ.

## English Translation.

Associated with the Angirasas, with Vishnu, with the Maruts, repair to the invocation of the adorer; repair (to him), Aswins, united with the dawn, with Surya, and with the Aditya.

॥ ಸಂಹಿತಾಪಾಠಃ ॥

ಋಭುಮಂತಾ ವೃಷಣಾ ವಾಜವಂತಾ ಮರುತ್ವಂತಾ ಜರಿತುರ್ಗಚ್ಛಥೋ ಹವಂ ।
ಸಜೋಷಸಾ ಉಷಸಾ ಸೂರ್ಯೇಣ ಚಾದಿತ್ಯೈರ್ಯಾತಮಶ್ವಿನಾ ॥ ೧೫ ॥

॥ ಪದಪಾಠಃ ॥

ಋಭುಽಮಂತಾ । ವೃಷಣಾ । ವಾಜಽವಂತಾ । ಮರುತ್ವಂತಾ । ಜರಿತುಃ । ಗಚ್ಛಥಃ । ಹವಂ ।
ಸಽಜೋಷಸಾ । ಉಷಸಾ । ಸೂರ್ಯೇಣ । ಚ । ಆದಿತ್ಯೈಃ । ಯಾತಂ । ಅಶ್ವಿನಾ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾವೃಭುಮಂತಾ ಋಭುಸಹಿತೌ ವೃಷಣಾ ಕಾಮಾನಾಂ ವರ್ಷಿತಾರೌ ವಾಜವಂತೌ ವಾಜಯುಕ್ತೌ ಮರುತ್ವಂತೌ ಚ ಸ್ತೋತುರಾಹ್ವಾನಂ ಗಚ್ಛತಂ । ಋಭುಮಂತಾ ವಾಜವಂತೇತಿ ಜ್ಯೇಷ್ಠಕನಿಷ್ಠಾಭ್ಯಾಂ ವ್ಯಪದೇಶಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ವೃಷಣಾ**—ಇಷ್ಟಾರ್ಥಪ್ರದರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಋಭುಮಂತಾ**—ಋಭುಗಳೊಡನೆ ಕೂಡಿದವರಾಗಿಯೂ । **ವಾಜವಂತಾ**—ಅನ್ನಯುಕ್ತರಾಗಿಯೂ । **ಮರುತ್ವಂತಾ**—ಮರುತ್ತುಗಳೊಡಗೂಡಿದವರಾಗಿಯೂ । **ಜರಿತುಃ**—ಸ್ತುತಿಕರ್ತನ । **ಹವಂ**—ಆಹ್ವಾನವನ್ನು ಕೇಳಿ । **ಗಚ್ಛಥಃ**—ಅವನಲ್ಲಿಗೆ ಹೋಗಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಆದಿತ್ಯೈಃ**—ಆದಿತ್ಯರೊಡನೆಯೂ । **ಸಜೋಷಸಾ**-ಒಂದುಗೂಡಿದವರಾಗಿ । **ಯಾತಂ**—ಸ್ತುತಿಕರ್ತನಲ್ಲಿಗೆ ಬನ್ನಿರಿ.

॥ ಭಾವಾರ್ಥ ॥

ಇಷ್ಟಾರ್ಥಪ್ರದರಾದ ಎಲೈ ಅಶ್ವಿನೀದೇವತೆಗಳೇ, ಋಭುಗಳೊಡನೆ ಕೂಡಿದವರಾಗಿಯೂ, ಅನ್ನಯುಕ್ತರಾಗಿಯೂ, ಮರುತ್ತುಗಳೊಡಗೂಡಿದವರಾಗಿಯೂ ಸ್ತುತಿಕರ್ತನ ಆಹ್ವಾನವನ್ನು ಕೇಳಿ ಅವನಲ್ಲಿಗೆ ಹೋಗಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ, ಆದಿತ್ಯರೊಡನೆಯೂ ಒಂದುಗೂಡಿದವರಾಗಿ ಸ್ತುತಿಕರ್ತನಲ್ಲಿಗೆ ಬನ್ನಿರಿ.

## English Translation.

Associated with the Ribhus, and with the Maruts, repair, showerers (of benefits), dispensers of food, to the invocation of the adorer; repair (to him), Aswins, united with the dawn, with Surya, and with the Adityas.

|| ಸಂಹಿತಾಪಾಠಃ ||

ಬ್ರಹ್ಮ ಜಿನ್ವತಮುತ ಜಿನ್ವತಂ ಧಿಯೋ ಹತಂ ರಕ್ಷಾಂಸಿ ಸೇಧತಮಮೀವಾಃ।
ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಸುನ್ವತೋ ಅಶ್ವಿನಾ ॥

|| ಪದಪಾಠಃ ||

ಬ್ರಹ್ಮ । ಜಿನ್ವತಂ । ಉತ । ಜಿನ್ವತಂ । ಧಿಯಃ । ಹತಂ । ರಕ್ಷಾಂಸಿ । ಸೇಧತಂ । ಅಮೀವಾಃ ।
ಸऽಜೋಷಸೌ । ಉಷಸಾ । ಸೂರ್ಯೇಣ । ಚ । ಸೋಮಂ । ಸುನ್ವತಃ । ಅಶ್ವಿನಾ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಯುವಾಂ ಬ್ರಹ್ಮ ಬ್ರಾಹ್ಮಣಂ ಜಿನ್ವತಂ । ಪ್ರೀಣಯತಂ । ಉತಾಪಿ ಚ ಧಿಯಃ ಕರ್ಮಾಣಿ ಜಿನ್ವತಂ । ಹಂತ ಚ ರಕ್ಷಾಂಸಿ । ಅಮೀವಾ ರಾಕ್ಷಸಾಂಶ್ಚ ಸೇಧತಂ । ಉಷಸಾ ಸೂರ್ಯೇಣ ಚ ಸಂಗತೌ ಸುನ್ವತೋ ಯಜಮಾನಸ್ಯ ಸೋಮಂ ಪಿಬತಮಿತ್ಯರ್ಥಃ ॥

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಬ್ರಹ್ಮ—ನಮ್ಮ ಸ್ತುತಿಗಳನ್ನು ಕೇಳಿ । ಜಿನ್ವತಂ—ತೃಪ್ತಿಗೊಳ್ಳಿರಿ । ಉತ—ಮತ್ತು । ಧಿಯಃ—ನಮ್ಮ ಕರ್ಮಗಳನ್ನು । ಜಿನ್ವತಂ—ಸಫಲಗೊಳಿಸಿರಿ । ರಕ್ಷಾಂಸಿ—ರಾಕ್ಷಸರನ್ನು । ಹತಂ—ನಾಶಪಡಿಸಿರಿ । ಅಮೀವಾಃ—ರೋಗಾದಿಗಳನ್ನು । ಸೇಧತಂ—ಹೋಗಲಾಡಿಸಿರಿ । ಉಷಸಾ—ಉಷಸ್ಸಿನೊಡನೆಯೂ । ಸೂರ್ಯೇಣ ಚ—ಸೂರ್ಯನೊಡನೆಯೂ । ಸಜೋಷಸಾ—ಒಂದುಗೂಡಿದವರಾಗಿ । ಸುನ್ವತಃ—ಸೋಮವನ್ನು ಹಿಂಡುವ ಯಜಮಾನನ । ಸೋಮಂ—ಸೋಮವನ್ನು ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಮ್ಮ ಸ್ತುತಿಗಳನ್ನೂ ಮತ್ತು ನಮ್ಮ ಕರ್ಮಗಳನ್ನೂ ಸಫಲಗೊಳಿಸಿರಿ. ರಾಕ್ಷಸರನ್ನು ನಾಶಪಡಿಸಿರಿ ರೋಗಾದಿಗಳನ್ನು ಹೋಗಲಾಡಿಸಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಸೋಮವನ್ನು ಹಿಂಡುವ ಯಜಮಾನನ ಸೋಮವನ್ನು ಪಾನಮಾಡಿರಿ.

English Translation.

Be propitious to prayer, be propitious to sacred rites, slay the Rakshasas, remedy diseases; united with the dawn and with Surya, (drink) Aswins, the Soma of the offerer.

|| ಸಂಹಿತಾಪಾಠಃ ||

ಕ್ಷತ್ರಂ ಜಿನ್ವತಮುತ ಜಿನ್ವತಂ ನೄನ್ ಹತಂ ರಕ್ಷಾಂಸಿ ಸೇಧತಮಮೀವಾಃ |
ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಸುನ್ವತೋ ಅಶ್ವಿನಾ ||

|| ಪದಪಾಠಃ ||

ಕ್ಷತ್ರಂ | ಜಿನ್ವತಂ | ಉತ | ಜಿನ್ವತಂ | ನೄನ್ | ಹತಂ | ರಕ್ಷಾಂಸಿ | ಸೇಧತಂ | ಅಮೀವಾಃ |
ಸ್ಽಜೋಷಸೌ | ಉಷಸಾ | ಸೂರ್ಯೇಣ | ಚ | ಸೋಮಂ | ಸುನ್ವತಃ | ಅಶ್ವಿನಾ || ೧೭ ||

|| ಸಾಯಣಭಾಷ್ಯಂ ||

ಹೇ ಅಶ್ವಿನೌ ಯುವಾಂ ಕ್ಷತ್ರಂ ಕ್ಷತ್ರಿಯಂ ಜಿನ್ವತಂ | ಉತಾಪಿ ಚ ನೄನ್ಯೋದ್ಧೄಞ್ಜಿನ್ವತಂ | ಸಿದ್ಧಮನ್ಯತ್ ||

|| ಪ್ರತಿಪದಾರ್ಥ ||

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ಕ್ಷತ್ರಂ**—ಕ್ಷಾತ್ರಶಕ್ತಿಯುಳ್ಳವನನ್ನು | **ಜಿನ್ವತಂ**—ತೃಪ್ತಿಗೊಳಿಸಿರಿ | **ಉತ**—ಮತ್ತು | **ನೄನ್**—ಯೋಧರನ್ನು | **ಜಿನ್ವತಂ**—ಸಂತೃಪ್ತರನ್ನಾಗಿ ಮಾಡಿರಿ | **ರಕ್ಷಾಂಸಿ**—ರಾಕ್ಷಸರನ್ನು | **ಹತಂ**—ನಾಶಪಡಿಸಿರಿ | **ಅಮೀವಾಃ**—ರೋಗಾದಿಗಳನ್ನು | **ಸೇಧತಂ**—ಹೋಗಲಾಡಿಸಿರಿ | **ಉಷಸಾ**—ಉಷಸ್ಸಿನೊಡನೆಯೂ | **ಸೂರ್ಯೇಣ ಚ**—ಸೂರ್ಯನೊಡನೆಯೂ | **ಸಜೋಷಸಾ**—ಒಂದುಗೂಡಿದವರಾಗಿ | **ಸುನ್ವತಃ**—ಯಜಮಾನನ | **ಸೋಮಂ**—ಸೋಮವನ್ನು ಪಾನಮಾಡಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಕ್ಷಾತ್ರಶಕ್ತಿಯುಳ್ಳ ಯಜಮಾನನನ್ನು ತೃಪ್ತಿಗೊಳಿಸಿರಿ. ಯೋಧರನ್ನು ತೃಪ್ತಿಗೊಳಿಸಿರಿ. ರಾಕ್ಷಸರನ್ನು ನಾಶಮಾಡಿರಿ. ರೋಗಾದಿಗಳನ್ನು ಹೋಗಲಾಡಿಸಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಯಜಮಾನನ ಸೋಮವನ್ನು ಪಾನಮಾಡಿರಿ.

English Translation.

Be propitious to the strong, be propitious to men, slay the Rakshasas, remedy disseases; united with the dawn and with Surya, (drink), Aswins, the Soma of the offerer.

|| ಸಂಹಿತಾಪಾಠಃ ||

ಧೇನೂರ್ಜಿನ್ವತಮುತ ಜಿನ್ವತಂ ವಿಶೋ ಹತಂ ರಕ್ಷಾಂಸಿ ಸೇಧತಮಮೀವಾಃ |
ಸಜೋಷಸಾ ಉಷಸಾ ಸೂರ್ಯೇಣ ಚ ಸೋಮಂ ಸುನ್ವತೋ ಅಶ್ವಿನಾ ||

॥ ಪದಪಾಠಃ ॥

ಧೇನೂಃ । ಜಿನ್ವತಂ । ಉತ । ಜಿನ್ವತಂ । ವಿಶಃ । ಹತಂ । ರಕ್ಷಾಂಸಿ । ಸೇಧತಂ । ಅಮೀವಾಃ ।

ಸ್ಽಜೋಷಸಾ । ಉಷಸಾ । ಸೂರ್ಯೇಣ । ಚ । ಸೋಮಂ । ಸುನ್ವತಃ । ಅಶ್ವಿನಾ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಧೇನೂರ್ಜಿನ್ವತಂ । ಉತಾಪಿ ಚ ವಿಶೋ ವೈಶ್ಯಾಂಶ್ಚ ಜಿನ್ವತಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಧೇನೂಃ**—ನಮ್ಮ ಧೇನುಗಳಿಗೆ । **ಜಿನ್ವತಂ**—ತೃಪ್ತಿಕಾರಕರಾಗಿರಿ । **ಉತ**—ಮತ್ತು । **ವಿಶಃ**—ನಮ್ಮ ಪ್ರಜೆಗಳನ್ನು । **ಜಿನ್ವತಂ**—ತೃಪ್ತಿಗೊಳಿಸಿರಿ । **ರಕ್ಷಾಂಸಿ**—ರಾಕ್ಷಸರನ್ನು । **ಹತಂ**—ನಾಶಪಡಿಸಿರಿ । **ಅಮೀವಾಃ**—ರೋಗಾದಿಗಳನ್ನು । **ಸೇಧತಂ**—ಹೋಗಲಾಡಿಸಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ಸುನ್ವತಃ**—ಯಜಮಾನನ । **ಸೋಮಂ**—ಸೋಮವನ್ನು ಪಾನಮಾಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಮ್ಮ ಧೇನುಗಳಿಗೆ ತೃಪ್ತಿಕಾರಕರಾಗಿರಿ. ನಮ್ಮ ಪ್ರಜೆಗಳನ್ನು ತೃಪ್ತಿಗೊಳಿಸಿರಿ. ರಾಕ್ಷಸರನ್ನು ನಾಶಪಡಿಸಿರಿ. ರೋಗಾದಿಗಳನ್ನು ಹೋಗಲಾಡಿಸಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಯಜಮಾನನ ಸೋಮವನ್ನು ಪಾನಮಾಡಿರಿ.

English Translation.

Be propitious to the cows, be propitious to the people, slay the Rakshasas, remedy diseases; united with the dawn and with Surya, (drink), Aswins, the Soma of the offerer,

॥ ಸಂಹಿತಾಪಾಠಃ ॥

ಅತ್ರೇರಿವ ಶೃಣುತಂ ಪೂರ್ವ್ಯಸ್ತುತಿಂ ಶ್ಯಾವಾಶ್ವಸ್ಯ ಸುನ್ವತೋ ಮದಚ್ಯುತಾ।

ಸಜೋಷಸಾ ಉಷಸಾ ಸೂರ್ಯೇಣ ಚಾಶ್ವಿನಾ ತಿರೋ ಅಹ್ನ್ಯಂ ॥ ೧೯ ॥

॥ ಪದಪಾಠಃ ॥

ಅತ್ರೇಃಽಇವ । ಶೃಣುತಂ । ಪೂರ್ವ್ಯಽಸ್ತುತಿಂ । ಶ್ಯಾವಽಅಶ್ವಸ್ಯ । ಸುನ್ವತಃ । ಮದಽಚ್ಯುತಾ ।

ಸ್ಽಜೋಷಸಾ । ಉಷಸಾ । ಸೂರ್ಯೇಣ । ಚ । ಅಶ್ವಿನಾ । ತಿರಃಽಅಹ್ನ್ಯಂ ॥ ೧೯ ॥

|| ಸಾಯಣಭಾಷ್ಯಂ ||

ಹೇ ಅಶ್ವಿನೌ ಮದಚ್ಯುತಾ ಶತ್ರೂಣಾಂ ಮದಸ್ಯ ಚ್ಯಾವಯಿತಾರೌ ಯುವಾಂ ಸುನ್ವತೋಽಭಿಷವಂ ಕುರ್ವತಃ ಶ್ಯಾವಾಶ್ವಸ್ಯ ಮಮ ಪಿತಾಮಹಸ್ಯಾತ್ರೇರಿವ ಪೂರ್ವ್ಯಸ್ತುತಿಂ ಮುಖ್ಯಾಂ ಸ್ತುತಿಂ ಶೃಣುತಂ । ಉಷಸಾ ಸೂರ್ಯೇಣ ಚ ಸಂಗತೌ ತಿರೋಅಹ್ನ್ಯಂ ಸೋಮಂ ಪಿಬತಂ । ತಿರೋಹಿತೇ ಪೂರ್ವಸ್ಮಿನ್ನಹನ್ಯಪರೇದ್ಯುಃ ಪ್ರಾತರಶ್ವಿನೋರ್ಯಾಗ ಇತಿ ||

|| ಪ್ರತಿಪದಾರ್ಥ ||

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಮದಚ್ಯುತಾ**—ಶತ್ರುಗಳ ಮದವನ್ನು ನಾಶಮಾಡುವ ನೀವು । **ಸುನ್ವತಃ**—ಸೋಮವನ್ನು ಹಿಂಡಿ ಅರ್ಪಿಸುವ । **ಶ್ಯಾವಾಶ್ವಸ್ಯ**—ಶ್ಯಾವಾಶ್ವನ । **ಪೂರ್ವ್ಯ ಸ್ತುತಿಂ**—ಮುಖ್ಯವಾದ ಸ್ತುತಿಯನ್ನು । **ಅತ್ರೇರಿವ**—ಅತ್ರಿಯ ಸ್ತುತಿಯನ್ನು ಕೇಳಿದಂತೆ । **ಶೃಣುತಂ**—ಕೇಳಿರಿ । **ಉಷಸಾ**—ಉಷಸ್ಸಿನೊಡನೆಯೂ । **ಸೂರ್ಯೇಣ ಚ**—ಸೂರ್ಯನೊಡನೆಯೂ । **ಸಜೋಷಸಾ**—ಒಂದುಗೂಡಿದವರಾಗಿ । **ತಿರೋಅಹ್ನ್ಯಂ**—ಪೂರ್ವದಿನದಲ್ಲಿ ಸಿದ್ಧಪಡಿಸಿದ ಸೋಮವನ್ನು ಪಾನಮಾಡಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ಶತ್ರುಗಳ ಮದವನ್ನು ನಾಶಮಾಡುವ ನೀವು ಸೋಮವನ್ನು ಹಿಂಡಿ ಅರ್ಪಿಸುವ ಶ್ಯಾವಾಶ್ವನ ಮುಖ್ಯವಾದ ಸ್ತುತಿಯನ್ನು, ಅತ್ರಿಯ ಸ್ತುತಿಯನ್ನು ಕೇಳಿದಂತೆ ಕೇಳಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಪೂರ್ವದಿನದಲ್ಲಿ ಸಿದ್ಧಪಡಿಸಿದ ಸೋಮವನ್ನು ಪಾನಮಾಡಿರಿ.

## English Translation.

Humblers of the pride (of your enemies), hear the earnest praise of Shyavashwa offering libations as (you did) that of Atri, and, united with the dawn and with Surya, (drink), Aswins, (the Soma) prepared the previous day.

|| ಸಂಹಿತಾಪಾಠಃ ||

ಸರ್ಗಾ ಇವ ಸೃಜತಂ ಸುಷ್ಟುತೀರುಪ ಶ್ಯಾವಾಶ್ವಸ್ಯ ಸುನ್ವತೋ ಮದಚ್ಯುತಾ ।
ಸಜೋಷಸಾ ಉಷಸಾ ಸೂರ್ಯೇಣ ಚಾಶ್ವಿನಾ ತಿರೋಅಹ್ನ್ಯಂ || ೨೦ ||

|| ಪದಪಾಠಃ ||

ಸರ್ಗಾನ್ಽಇವ । ಸೃಜತಂ । ಸುಽಸ್ತುತೀಃ । ಉಪ । ಶ್ಯಾವಽಅಶ್ವಸ್ಯ । ಸುನ್ವತಃ । ಮದಽಚ್ಯುತಾ ।
ಸಽಜೋಷಸಾ । ಉಷಸಾ । ಸೂರ್ಯೇಣ । ಚ । ಅಶ್ವಿನಾ । ತಿರಃಽಅಹ್ನ್ಯಂ || ೨೦ ||

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ಶ್ಯಾವಾಶ್ವಸ್ಯ ಮಮ ಸುಷ್ಟುತೀಃ ಶೋಭನಾಃ ಸ್ತುತೀಃ ಸರ್ಗಾನಿವ । ಆಭರಣಾನಿ ವಾ ಹವೀಂಷಿ ವಾ ಸರ್ಗಾಃ । ತಾನ್ಯಥಾ ತಥಾತ್ಮನ್ಯುಪ ಸೃಜತಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ಮದಚ್ಯುತಾ—ಶತ್ರುಗಳ ಗರ್ವವನ್ನು ನಾಶಪಡಿಸುವ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಸುನ್ವತಃ—ಸೋಮವನ್ನು ಹಿಂಡಿ ಅರ್ಪಿಸುವ । ಶ್ಯಾವಾಶ್ವಸ್ಯ—ಶ್ಯಾವಾಶ್ವನ । ಸುಷ್ಟುತೀಃ—ಉತ್ತಮವಾದ ಸ್ತುತಿಗಳನ್ನು । ಸರ್ಗಾನ್ ಇವ—ಆಭರಣಗಳನ್ನು ಧರಿಸುವಂತೆ । ಉಪ ಸೃಜತಂ—ನಿಮ್ಮಲ್ಲಿ ಅರ್ಪಣ ಮಾಡಿರಿ । ಉಷಸಾ—ಉಷಸ್ಸಿನೊಡನೆಯೂ । ಸೂರ್ಯೇಣ ಚ—ಸೂರ್ಯನೊಡನೆಯೂ । ಸಜೋಷಸಾ—ಒಂದುಗೂಡಿದವರಾಗಿ । ತಿರೋ ಅಹ್ನ್ಯಂ—ಹಿಂದಿನದಿನ ಸಿದ್ಧಪಡಿಸಿದ ಸೋಮವನ್ನು ಪಾನಮಾಡಿರಿ.

॥ ಭಾವಾರ್ಥ ॥

ಶತ್ರುಗಳ ಗರ್ವವನ್ನು ನಾಶಪಡಿಸುವ ಎಲೈ ಅಶ್ವಿನೀದೇವತೆಗಳೇ, ಸೋಮವನ್ನು ಹಿಂಡಿ ಅರ್ಪಿಸುವ ಶ್ಯಾವಾಶ್ವನ ಉತ್ತಮವಾದ ಸ್ತುತಿಗಳನ್ನು ನೀವು ಆಭರಣಗಳನ್ನು ಧರಿಸುವಂತೆ ನಿಮ್ಮಲ್ಲಿ ಅರ್ಪಣಮಾಡಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಹಿಂದಿನ ದಿನ ಸಿದ್ಧಪಡಿಸಿದ ಸೋಮವನ್ನು ಪಾನಮಾಡಿರಿ

English Translation

Humblers of the pride (of your enemies), accept the earnest praises of Shyavashwa offering you libations as if you were accepting oblations; and, united with the dawn and with Surya, (drink), Aswins, (the Soma) prepared the previous day.

॥ ಸಂಹಿತಾಪಾಠಃ ॥

ರಶ್ಮೀರಿವ ಯಚ್ಛತಮಧ್ವರಾँ ಉಪ ಶ್ಯಾವಾಶ್ವಸ್ಯ ಸುನ್ವತೋ ಮದಚ್ಯುತಾ ।
ಸಜೋಷಸಾ ಉಷಸಾ ಸೂರ್ಯೇಣ ಚಾಶ್ವಿನಾ ತಿರೋಅಹ್ನ್ಯಂ ॥ ೨೧ ॥

॥ ಪದಪಾಠಃ ॥

ರಶ್ಮೀನ್ऽಇವ । ಯಚ್ಛತಂ । ಅಧ್ವರಾನ್ । ಉಪ । ಶ್ಯಾವಽಅಶ್ವಸ್ಯ । ಸುನ್ವತಃ । ಮದಽಚ್ಯುತಾ ।
ಸಽಜೋಷಸೌ । ಉಷಸಾ । ಸೂರ್ಯೇಣ । ಚ । ಅಶ್ವಿನಾ । ತಿರಃಽಅಹ್ನ್ಯಂ ॥ ೨೧ ॥

॥ ಸಾಯಣಭಾಷ್ಯಂ ॥

**ಹೇ ಅಶ್ವಿನೌ ಶ್ಯಾವಾಶ್ವಸ್ಯ ಮದಮಾಧ್ವರಾನ್ರಶ್ಮೀನಿವ ಯಥಾಽಶ್ವಪ್ರಗ್ರಹಾಂಸ್ತದ್ವದುಪ ಯಚ್ಛತಂ। ಉಪಗಚ್ಛತಂ। ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ಮದುಚ್ಯುತಾ**—ಶತ್ರುಗಳ ಗರ್ವವನ್ನು ನಾಶಪಡಿಸುವ। **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ। **ಸುನ್ವತಃ**—ಯಜಮಾನನಾದ। **ಶ್ಯಾವಾಶ್ವಸ್ಯ**—ಶ್ಯಾವಾಶ್ವನಾಮಕನಾದ ನನ್ನ। **ಅಧ್ವರಾನ್**—ಯಜ್ಞಗಳನ್ನು। **ರಶ್ಮೀನಿವ**—ಅಶ್ವಗಳ ಕಡಿವಾಣಗಳನ್ನು ಹಿಡಿಯುವಂತೆ। **ಉಪ ಯಚ್ಛತಂ**—ಭದ್ರವಾಗಿ ಆಶ್ರಯಿಸಿ ಬನ್ನಿರಿ। **ಉಷಸಾ**—ಉಷಸ್ಸಿನೊಡನೆಯೂ। **ಸೂರ್ಯೇಣ ಚ**—ಸೂರ್ಯನೊಡನೆಯೂ। **ಸಜೋಷಸಾ**—ಒಂದುಗೂಡಿದವರಾಗಿ। **ತಿರೋ ಅಹ್ನ್ಯಂ**—ಹಿಂದಿನದಿನ ಸಿದ್ಧಪಡಿಸಿದ ಸೋಮವನ್ನು ಪಾನಮಾಡಿರಿ.

॥ ಭಾವಾರ್ಥ ॥

ಶತ್ರುಗಳ ಗರ್ವವನ್ನು ನಾಶಪಡಿಸುವ ಎಲೈ ಅಶ್ವಿನೀದೇವತೆಗಳೇ, ಯಜಮಾನನೂ ಶ್ಯಾವಾಶ್ವನಾಮಕನೂ ಆದ ನನ್ನ ಯಜ್ಞಗಳಿಗೆ ಅಶ್ವಗಳ ಕಡಿವಾಣವನ್ನು ಹಿಡಿಯುವಂತೆ ಭದ್ರವಾಗಿ ಆಶ್ರಯಿಸಿ ಬನ್ನಿರಿ. ಉಷಸ್ಸಿನೊಡನೆಯೂ, ಸೂರ್ಯನೊಡನೆಯೂ ಒಂದುಗೂಡಿದವರಾಗಿ ಹಿಂದಿನ ದಿನ ಸಿದ್ಧಪಡಿಸಿದ ಸೋಮವನ್ನು ಪಾನಮಾಡಿರಿ.

English Translation.

Humblers of the pride (of your enemies), seize the sacrifices of Shyavashwa offering libations as you seize your reins; and united with the dawn and with Surya, (drink), Aswins, (the Soma) prepared the previous day.

॥ ಸಂಹಿತಾಪಾಠಃ ॥

ಅರ್ವಾಗ್ರಥಂ ನಿ ಯಚ್ಛತಂ ಪಿಬತಂ ಸೋಮ್ಯಂ ಮಧು ।
ಆ ಯಾತಮಶ್ವಿನಾ ಗತಮವಸ್ಯುರ್ವಾಮಹಂ ಹುವೇ ಧತ್ತಂ ರತ್ನಾನಿ ದಾಶುಷೇ ॥ ೨೨ ॥

॥ ಪದಪಾಠಃ ॥

ಅರ್ವಾಕ್ । ರಥಂ । ನಿ । ಯಚ್ಛತಂ । ಪಿಬತಂ । ಸೋಮ್ಯಂ । ಮಧು ।
ಆ । ಯಾತಂ । ಅಶ್ವಿನಾ । ಆ । ಗತಂ । ಅವಸ್ಯುಃ । ವಾಂ । ಅಹಂ । ಹುವೇ । ಧತ್ತಂ । ರತ್ನಾನಿ । ದಾಶುಷೇ ॥ ೨೨ ॥

|| ಸಾಯಣಭಾಷ್ಯಂ ||

**ಹೇ ಅಶ್ವಿನೌ ವಾಂ ಸ್ವೀಯಂ ರಥಮರ್ವಾಗಸ್ಮದಭಿಮುಖಂ ನಿ ಯಚ್ಛತಂ । ಸೋಮ್ಯಂ ಸೋಮಮಯಂ ಮಧ್ವಮೃತಂ ಚ ಪಿಬತಂ ।· ಯಜ್ಞಮಾ ಯಾತಂ ಚ । ಸೋಮಂ ಪ್ರತ್ಯಾ ಗತಂ । ಆಗಚ್ಛತಂ ಚ । ಅವಸ್ಯೂ ರಕ್ಷಣಕಾಮೋಽಹಂ ಶ್ಯಾವಾಶ್ವೋ ವಾಂ ಹುವೇ । ಹ್ವಯಾಮಿ । ದಾಶುಷೇ ಹವೀಂಷಿ ಪ್ರಯಚ್ಛತೇ ಮಹ್ಯಂ ರತ್ನಾನಿ ಧತ್ತಂ । ಧಾರಯತಂ ||**

|| ಪ್ರತಿಪದಾರ್ಥ ||

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ರಥಂ**—ನಿಮ್ಮ ರಥವನ್ನು । **ಅರ್ವಾಕ್ ನಿ ಯಚ್ಛತಂ**—ನಮಗಭಿಮುಖವಾಗಿ ಕೆಳಭಾಗಕ್ಕೆ ಓಡಿಸಿರಿ । **ಸೋಮ್ಯಂ**—ಸೋಮಮಯವಾದ । **ಮಧು**—ಅಮೃತವನ್ನು । **ಪಿಬತಂ**—ಪಾನಮಾಡಿರಿ । **ಆ ಯಾತಂ**—ನಮ್ಮಲ್ಲಿಗೆ ಬನ್ನಿರಿ । **ಆ ಗತಂ**—ಸೋಮಾಭಿಮುಖವಾಗಿ ಬನ್ನಿರಿ । **ಅವಸ್ಯುಃ**—ನಿಮ್ಮ ರಕ್ಷಣೆಯನ್ನಪೇಕ್ಷಿಸಿದ । **ಅಹಂ**—ನಾನು । **ವಾಂ**—ನಿಮ್ಮನ್ನು । **ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ । **ದಾಶುಷೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ । **ರತ್ನಾನಿ**—ರತ್ನಗಳನ್ನು । **ಧತ್ತಂ**—ಕೊಡಿರಿ.

|| ಭಾವಾರ್ಥ ||

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥವನ್ನು ನಮಗಭಿಮುಖವಾಗಿ ಕೆಳಭಾಗಕ್ಕೆ ಓಡಿಸಿರಿ. ಸೋಮಮಯವಾದ ಅಮೃತವನ್ನು ಪಾನಮಾಡಿರಿ ನಮ್ಮಲ್ಲಿಗೆ ಬನ್ನಿರಿ. ನಮ್ಮ ಸೋಮಾಭಿಮುಖರಾಗಿ ಬನ್ನಿರಿ. ನಿಮ್ಮ ರಕ್ಷಣೆಯನ್ನಪೇಕ್ಷಿಸಿದ ನಾನು ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತೇನೆ. ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ರತ್ನಗಳನ್ನು ಕೊಡಿರಿ.

English Translation.

Direct your chariot downwards, drink the Soma nectar; come, Aswins, come (hither); desirous of your protection, I invoke you; give precious riches to the donor of the offering.

|| ಸಂಹಿತಾಪಾಠಃ ||

ನಮೋವಾಕೇ ಪ್ರಸ್ಥಿತೇ ಅಧ್ವರೇ ನರಾ ವಿವಕ್ಷಣಸ್ಯ ಪೀತಯೇ ।
ಆ ಯಾತಮಶ್ವಿನಾ ಗತಮವಸ್ಯುರ್ವಾಮಹಂ ಹುವೇ ಧತ್ತಂ ರತ್ನಾನಿ ದಾಶುಷೇ ॥ ೨೩ ॥

|| ಪದಪಾಠಃ ||

ನಮಃऽವಾಕೇ | ಪ್ರಽಸ್ಥಿತೇ | ಅಧ್ವರೇ | ನರಾ | ವಿವಕ್ಷಣಸ್ಯ | ಪೀತಯೇ |

ಆ | ಯಾತಂ | ಅಶ್ವಿನಾ | ಆ | ಗತಂ | ಅವಸ್ಯುಃ | ವಾಂ | ಅಹಂ | ಹುವೇ | ಧತ್ತಂ | ರತ್ನಾನಿ | ದಾಶುಷೇ || ೨೩ ||

|| ಸಾಯಣಭಾಷ್ಯಂ ||

ಹೇ ಅಶ್ವಿನೌ ನರಾ ನೇತಾರೌ ಯುವಾಂ ವಿವಕ್ಷಣಸ್ಯ ಹವನಶೀಲಸ್ಯ ಮಮ ಪ್ರಸ್ಥಿತೇ ನಮೋವಾಕೇ | ನಮಸ್ಕಾರಾಯ ಪ್ರೋಚ್ಯತೇ ಸ ನಮೋವಾಕಃ | ತಸ್ಮಿನ್ನಧ್ವರೇ ಯಜ್ಞೇ | ತಥಾ ಚ ಬ್ರಾಹ್ಮಣಂ | ಉಭಯಂ ಸಹ ವಾ ಏತದ್ಯಜ್ಞ ಏವ ಯತ್ಸೂಕ್ತವಾಕಶ್ಚ ನಮೋವಾಕಶ್ಚ | ಶತ. ೧-೯-೧-೪ | ಇತಿ | ಪೀತಯೇ ಸೋಮಪಾನಾಯ ಯಾತಂ | ಸಿದ್ಧಮನ್ಯತ್ ||

|| ಪ್ರತಿಪದಾರ್ಥ ||

ನರಾ - ನೇತೃಗಳಾದ | ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ | ವಿವಕ್ಷಣಸ್ಯ—ಸ್ತುತಿಕರ್ತನಾದ ನನ್ನ | ನಮೋವಾಕೇ—ನಮಸ್ಕಾರಪೂರ್ವಕವಾದ ಸ್ತುತಿವಾಕ್ಯವು | ಪ್ರಸ್ಥಿತೇ—ಪ್ರಾರಂಭವಾದಾಗ | ಅಧ್ವರೇ—ಯಜ್ಞದಲ್ಲಿ | ಪೀತಯೇ—ಸೋಮಪಾನಾರ್ಥವಾಗಿ | ಆ ಯಾತಂ—ದಯಮಾಡಿರಿ | ಆ ಗತಂ—ಸೋಮಾಭಿಮುಖವಾಗಿ ಬನ್ನಿರಿ | ಅವಸ್ಯುಃ—ನಿಮ್ಮ ರಕ್ಷಣೆಯನ್ನಪೇಕ್ಷಿಸಿದ | ಅಹಂ—ನಾನು | ವಾಂ—ನಿಮ್ಮನ್ನು | ಹುವೇ—ಪ್ರಾರ್ಥಿಸಿ ಕರೆಯುತ್ತೇನೆ | ದಾಶುಷೇ—ಹವಿಸ್ಸನ್ನರ್ಪಿಸುವ ನನಗೆ | ರತ್ನಾನಿ—ರತ್ನಗಳನ್ನು | ಧತ್ತಂ—ಕೊಡಿರಿ.

|| ಭಾವಾರ್ಥ ||

ನೇತೃಗಳಾದ ಎಲೈ ಅಶ್ವಿನೀದೇವತೆಗಳೇ, ಸ್ತುತಿಕರ್ತನಾದ ನನ್ನ ನಮಸ್ಕಾರಪೂರ್ವಕವಾದ ಸ್ತುತಿವಾಕ್ಯವು ಪ್ರಾರಂಭವಾದಾಗ ಯಜ್ಞದಲ್ಲಿ ಸೋಮಪಾನಾರ್ಥವಾಗಿ ದಯಮಾಡಿರಿ. ಸೋಮಾಭಿಮುಖರಾಗಿ ಬನ್ನಿರಿ. ನಿಮ್ಮ ರಕ್ಷಣೆಯನ್ನಪೇಕ್ಷಿಸಿದ ನಾನು ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತೇನೆ. ಹವಿಸ್ಸನ್ನರ್ಪಿಸುವ ನನಗೆ ರತ್ನಗಳನ್ನು ಕೊಡಿರಿ.

## English Translation.

Come, leaders of rites, when the sacrifice, at which your adoration is recited, is commenced, to drink of the Soma offered by me; come, Aswins, come (hither); desirous of protection, I invoke you; give precious riches to the donor of the offering.

॥ ಸಂಹಿತಾಪಾಠಃ ॥

ಸ್ವಾಹಾಕೃತಸ್ಯ ತೃಂಪತಂ ಸುತಸ್ಯ ದೇವಾವಂಧಸಃ ।
ಆ ಯಾತಮಶ್ವಿನಾ ಗತಮವಸ್ಯುರ್ವಾಮಹಂ ಹುವೇ ಧತ್ತಂ ರತ್ನಾನಿ ದಾಶುಷೇ ॥ ೨೪ ॥

॥ ಪದಪಾಠಃ ॥

ಸ್ವಾಹಾಽಕೃತಸ್ಯ । ತೃಂಪತಂ । ಸುತಸ್ಯ । ದೇವಾ । ಅಂಧಸಃ ।
ಆ । ಯಾತಂ । ಅಶ್ವಿನಾ । ಆ । ಗತಂ । ಅವಸ್ಯುಃ । ವಾಂ । ಅಹಂ । ಹುವೇ । ಧತ್ತಂ । ರತ್ನಾನಿ । ದಾಶುಷೇ ॥ ೨೪ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನೌ ದೇವೌ ಯುವಾಂ ಸುತಸ್ಯಾಭಿಷುತಸ್ಯ ಸ್ವಾಹಾಕೃತಸ್ಯ ಹುತಸ್ಯಾಂಧಸಃ ಸೋಮಸ್ಯ ತೃಂಪತಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ದೇವೌ**—ದೇವತಾತ್ಮರಾದ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ಸುತಸ್ಯ**— ಹಿಂಡಿ ಸಿದ್ಧವಾಗಿರುವುದೂ । **ಸ್ವಾಹಾಕೃತಸ್ಯ**—ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾಗುವುದೂ ಆದ । **ಅಂಧಸಃ**—ಸೋಮವನ್ನು । **ತೃಂಪತಂ**—ತೃಪ್ತಿಯಾಗುವವರೆಗೂ ಪಾನಮಾಡಿರಿ । **ಆ ಯಾತಂ**— ನಮ್ಮ ಯಜ್ಞಕ್ಕೆ ದಯಮಾಡಿರಿ । **ಆ ಗತಂ**—ನಮ್ಮ ಯಜ್ಞಕ್ಕೆ ದಯಮಾಡಿರಿ । **ಅವಸ್ಯುಃ**—ನಿಮ್ಮ ರಕ್ಷಣೆಯನ್ನು ಅಪೇಕ್ಷಿಸುವ । **ಅಹಂ**—ನಾನು । **ಹುವೇ**—ನಿಮ್ಮನ್ನು ಕರೆಯುತ್ತೇನೆ । **ದಾಶುಷೇ**—ಹವಿಸ್ಸನ್ನು ಅರ್ಪಿಸುವ ನನಗೆ । **ರತ್ನಾನಿ**—ರತ್ನಗಳನ್ನು । **ಧತ್ತಂ**—ಕೊಡಿರಿ

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಅಶ್ವಿನೀದೇವತೆಗಳೇ, ಹಿಂಡಿ ಸಿದ್ಧವಾಗಿರುವುದೂ, ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾಗುವುದೂ ಆದ ಸೋಮವನ್ನು ತೃಪ್ತಿಯಾಗುವವರೆಗೂ ಪಾನಮಾಡಿರಿ. ನಮ್ಮ ಯಜ್ಞಕ್ಕೆ ದಯಮಾಡಿರಿ. ನಿಮ್ಮ ರಕ್ಷಣೆಯನ್ನು ಅಪೇಕ್ಷಿಸುವ ನಾನು ನಿಮ್ಮನ್ನು ಕರೆಯುತ್ತೇನೆ. ಹವಿಸ್ಸನ್ನು ಅರ್ಪಿಸುವ ನನಗೆ ರತ್ನಗಳನ್ನು ಕೊಡಿರಿ.

## English Translation.

Divne (Aswins), partake to satiety of the sacrificial beverage, consecrated with the exclamation Swaha; come, Aswins, come (hither);

desirous of protection, I invoke you; give precious riches to the donor of the offering.



# ಮೂವತ್ತಾರನೆಯ ಸೂಕ್ತವು

|| ಸಾಯಣಭಾಷ್ಯಂ ||

**ಅವಿತಾಸೀತಿ ಸಪ್ತರ್ಚಂ೬ಷಷ್ಠಂ ಸೂಕ್ತಮಾತ್ರೇಯಸ್ಯ ಶ್ಯಾವಾಶ್ವಸ್ಯಾರ್ಷಂ । ಅತ್ರೇಯಮನುಕ್ರಮಣಿಕಾ । ಅವಿತಾ ಸಪ್ತ ಶಾಕ್ವರಂ ಮಹಾಪಂಕ್ತ್ಯಂತಮಿತಿ । ಷಟ್‌ಪಂಚಾಶದಕ್ಷರಾ ಶಕ್ವರೀ ಛಂದಃ। ಶ್ಯಾವಾಶ್ವಸ್ಯೇತಿ ಸಪ್ತಮೀ ಮಹಾಪಂಕ್ತಿಃ ಷಳಷ್ಟಕಾ ವಾ ಮಹಾಪಂಕ್ತಿಃ । ಅನು. ೧೦-೩ । ಇತಿ ಲಕ್ಷಣಸದ್ಭಾವಾತ್ ॥ ದಶರಾತ್ರೇ ಪಂಚಮೇಽಹನಿ ಮರುತ್ವತೀಯ ಇದಂ ಸೂಕ್ತಂ। ಸೂತ್ರಿತಂ ಚ। ಅವಿತಾಸೀತ್ಯಾ ಹಿ । ಆ. ೭-೧೨ । ಇತಿ ॥**

ಅನುವಾದವು— **ಅವಿತಾಸಿ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಶ್ಯಾವಾಶ್ವನು ಋಷಿಯು; ಅನುಕ್ರಮಣಿಕೆಯಲ್ಲಿ— **ಅವಿತಾ ಸಪ್ತ ಶಾಕ್ವರಂ ಮಹಾಪಂಕ್ತ್ಯಂತಂ** ಎಂದು ಹೇಳಿರುವುದು ಇಂದ್ರನು ದೇವತೆಯು; ಈ ಸೂಕ್ತದ ಮೊದಲಿನ ಆರು ಋಕ್ಕುಗಳು ಶಕ್ವರೀಛಂದಸ್ಸಿನವು. **ಶ್ಯಾವಾಶ್ವಸ್ಯ** ಎಂಬ ಏಳನೆಯ ಋಕ್ಕು ಮಹಾಪಂಕ್ತಿ ಎಂಬ ಛಂದಸ್ಸಿನದು. ಶಕ್ವರೀಛಂದಸ್ಸಿನ ಋಕ್ಕಿನಲ್ಲಿ ಎಂಟೆಂಟು ಅಕ್ಷರಗಳ ಏಳು ಪಾದಗಳಿರುವವು. ಮಹಾಪಂಕ್ತಿ ಎಂಬ ಛಂದಸ್ಸಿನಲ್ಲಿ ಎಂಟೆಂಟು ಅಕ್ಷರಗಳ ಆರು ಪಾದಗಳಿರುವವು ಎಂದು ಈ ಛಂದಸ್ಸುಗಳ ಲಕ್ಷಣವು. (ಛ. ಅನು. ೧೦-೩) ದಶರಾತ್ರವೆಂಬ ಯಾಗದ ಐದನೆಯ ದಿವಸ ಮರುತ್ವತೀಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಅವಿತಾಸೀತ್ಯಾ** ಹಿ ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು.

## ಸೂಕ್ತ—೩೬

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೬ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೧೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ಶ್ಯಾವಾಶ್ವಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧-೬. ಶಕ್ವರೀ । ೭. ಮಹಾಪಂಕ್ತಿಃ ॥

॥ ಸಂಹಿತಾಪಾಠಃ ॥

ಅವಿತಾಸಿ ಸುನ್ವತೋ ವೃಕ್ತಬರ್ಹಿಷಃ ಪಿಬಾ ಸೋಮಂ ಮದಾಯ ಕಂ ಶತಕ್ರತೋ ।

ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ
ಸಮಪ್ಸುಜಿನ್ಮರುತ್ವಾ ಇಂದ್ರ ಸತ್ಪತೇ ॥ ೧ ॥

॥ ಪದಪಾಠಃ ॥

ಅವಿತಾ । ಅಸಿ । ಸುನ್ವತಃ । ವೃಕ್ತಽಬರ್ಹಿಷಃ । ಪಿಬ । ಸೋಮಂ । ಮದಾಯ । ಕಂ । ಶತಕ್ರತೋ ಇತಿ ಶತಽಕ್ರತೋ ।
ಯಂ । ತೇ । ಭಾಗಂ । ಅಧಾರಯನ್ । ವಿಶ್ವಾಃ । ಸೇಹಾನಃ । ಪೃತನಾಃ । ಉರು । ಜ್ರಯಃ । ಸಂ । ಅಪ್ಸುಽಜಿತ್ । ಮರುತ್ವಾನ್ । ಇಂದ್ರ । ಸತ್ಽಪತೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಶತಕ್ರತೋ ಬಹುಕರ್ಮನ್ನಿಂದ್ರ ಸುನ್ವತಃ ಸೋಮಾಭಿಷವಂ ಕುರ್ವತೋ ವೃಕ್ತಬರ್ಹಿಷಃ ಸ್ತೀರ್ಣಬರ್ಹಿಷೋ ಯಜಮಾನಸ್ಯಾವಿತಾ ರಕ್ಷಿತಾಸಿ । ಭವಸಿ । ಮದಾಯ ಮದಾರ್ಥಂ ಸೋಮಂ ಪಿಬ । ಹೇ ಸತ್ಪತೇ ಸತಾಂ ಪತ ಇಂದ್ರ ತೇ ತುಭ್ಯಂ ಯಂ ಸೋಮಸ್ಯ ಭಾಗಮಧಾರಯನ್ ಸರ್ವೇ ದೇವಾ ಅಕಲ್ಪಯನ್ । ತಥಾ ಚ ಯಜುಬ್ರಾ೯ಹ್ಮಣಂ । ಸ ಏತಂ ಮಾಹೇಂದ್ರಮುದ್ಧಾರಮುದಹರತ ವೃತ್ರಂ ಹತ್ವಾನ್ಯಾಸು ದೇವತಾಸ್ವಧಿ । ತೈ. ಸಂ. ೬-೫-೫-೩ । ಇತಿ । ತಂ ಭಾಗಂ ವಿಶ್ವಾಃ ಪೃತನಾಃ ಶತ್ರೂಣಾಂ ಸರ್ವಾಃ ಸೇನಾ ಉರು ಬಹು ಜ್ರಯೋ ವೇಗಂ ಚ ಸಂ ಸೇಹಾನಃ ಸಮ್ಯಗಭಿಭವನ್ನಪ್ಸುಜಿದಪ್ಸುಜೇತಾ ಚ ಸನ್ ಪಿಬ ॥

॥ ಪ್ರತಿಪದಾರ್ಥ ॥

ಶತಕ್ರತೋ— ಅನೇಕ ಸಾಹಸಕಾರ್ಯಗಳನ್ನು ಮಾಡಿರುವ ಎಲೈ ಇಂದ್ರನೇ ನೀನು । ಸುನ್ವತಃ— ನಿನಗೆ ಅರ್ಪಿಸುವುದಕ್ಕಾಗಿ ಸೋಮರಸವನ್ನು ಹಿಂಡಿರುವವನೂ । ವೃಕ್ತಬರ್ಹಿಷಃ— ಆಸನಾರ್ಥವಾಗಿ ಕತ್ತರಿಸಿದ ದರ್ಭೆಗಳನ್ನು ಹರಡಿ ಸಿದ್ಧಪಡಿಸಿರುವವನೂ ಆದ ಯಜಮಾನನಿಗೆ । ಅವಿತಾ— ರಕ್ಷಕನಾಗಿ । ಅಸಿ— ಆಗಿದ್ದೀಯೇ । ಹೇ ಸತ್ಪತೇ— ಸಜ್ಜನರ ಪಾಲಕನಾದ । ಇಂದ್ರ— ಎಲೈ ಇಂದ್ರನೇ । ಮರುತ್ವಾನ್— ಮರುದ್ದೇವತೆಗಳೊಡನಿರುವವನೂ । ಪೃತನಾಃ— ಶತ್ರುಸೇನೆಗಳನ್ನೂ । ಉರು ಜ್ರಯಃ— ಅವುಗಳ ವೇಗವನ್ನೂ । ಸಂಸೇಹಾನಃ— ಚೆನ್ನಾಗಿ ಸೋಲಿಸುವವನೂ । ಅಪ್ಸುಜಿತ್— ಮೇಘಗಳ ನಿಯಾಮಕನೂ ಆದ ನೀನು । ತೇ— ನಿನಗಾಗಿ । ಯಂ ಭಾಗಂ— ದೇವತೆಗಳು ಯಾವ ಸೋಮಭಾಗವನ್ನು ಕಲ್ಪಿಸಿರುವರೋ । ಸೋಮಂ— ಆ ಸೋಮಭಾಗವನ್ನು । ಮದಾಯ— ನಿನ್ನ ಸಂತೋಷಾರ್ಥವಾಗಿ । ಪಿಬ— ಪಾನಮಾಡು.

॥ ಭಾವಾರ್ಥ ॥

ಅನೇಕ ಸಾಹಸಕಾರ್ಯಗಳನ್ನು ಮಾಡಿರುವ ಎಲೈ ಇಂದ್ರನೇ ನೀನು, ನಿನಗಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸಿರುವವನೂ, ಆಸನಾರ್ಥವಾಗಿ ಕತ್ತರಿಸಿದ ದರ್ಭೆಗಳನ್ನು ಹರಡಿ ಸಿದ್ಧಪಡಿಸಿರುವವನೂ ಆದ ಯಜಮಾನ

ನಿಗೆ ರಕ್ಷಕನಾಗಿದ್ದೀಯೆ. ಸಜ್ಜನರ ಪಾಲಕನಾದ ಎಲೈ ಇಂದ್ರನೇ, ಮರುದ್ದೇವತೆಗಳೊಡನಿರುವವನೂ, ಶತ್ರುಸೇನೆಗಳ ವೇಗವನ್ನು ಚೆನ್ನಾಗಿ ಸೋಲಿಸುವವನೂ, ಮೇಘಗಳ ನಿಯಾಮಕನೂ ಆದ ನೀನು ದೇವತೆಗಳು ನಿನಗಾಗಿ ಕಲ್ಪಿಸಿರುವ ಸೋಮಭಾಗವನ್ನು ನಿನ್ನ ಹರ್ಷಾರ್ಥವಾಗಿ ಪಾನಮಾಡು.

## English Translation.

You are the protector of the effuser of the libation, of the strewer of the clipped sacred grass; drink joyfully, Satakratu, the Soma for your exhilaration,—that portion which (the gods) assigned you, Indra, lord of the virtuous, who are the victor all (hostile) hosts, the conqueror of many, the subduer of the waters, the leaders of the Maruts.

। ಸಂಹಿತಾಪಾಠಃ ।

ಪ್ರಾವ ಸ್ತೋತಾರಂ ಮಘವನ್ನವ ತ್ವಾಂ ಪಿಬಾ ಸೋಮಂ ಮದಾಯ ಕಂ
ಶತಕ್ರತೋ ।
ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ
ಸಮಪ್ಸುಜಿನ್ಮರುತ್ವಾ ಇಂದ್ರ ಸತ್ಪತೇ ॥ ೨ ॥

॥ ಪದಪಾಠಃ ॥

ಪ್ರ । ಅವ । ಸ್ತೋತಾರಂ । ಮಘsವನ್ । ಅವ । ತ್ವಾಂ । ಪಿಬ । ಸೋಮಂ । ಮದಾಯ । ಕಂ ।
ಶತಕ್ರತೋ ಇತಿ ಶತsಕ್ರತೋ ।
ಯಂ । ತೇ । ಭಾಗಂ । ಅಧಾರಯನ್ । ವಿಶ್ವಾಃ । ಸೇಹಾನಃ । ಪೃತನಾಃ । ಉರು । ಜ್ರಯಃ । ಸಂ ।
ಅಪ್ಸುsಜಿತ್ । ಮರುತ್ವಾನ್ । ಇಂದ್ರ । ಸತ್sಪತೇ ॥ ೨ ॥

। ಸಾಯಣಭಾಷ್ಯಂ ।

ಹೇ ಮಘವನ್ ಸ್ತೋತಾರಂ ಪ್ರಾವ । ಪ್ರರಕ್ಷ । ತ್ವಾಂ ಚಾವ । ಸೋಮಪಾನೇನ ರಕ್ಷ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಹೇ ಮಘವನ್**—ಧನವಂತನಾದ ಎಲೈ ಇಂದ್ರನೇ | **ಸ್ತೋತಾರಂ**—ನಿನ್ನನ್ನು ಸ್ತೋತ್ರಮಾಡುವ ಯಜಮಾನನನ್ನು | **ಪ್ರಾವ**—ರಕ್ಷಿಸು | **ತ್ವಾಂ**—ನಿನ್ನನ್ನೂ ಸಹ | **ಅವ**—ಸೋಮಪಾನದಿಂದ ರಕ್ಷಿಸು (ತೃಪ್ತಿಪಡಿಸು) | **ಹೇ ಸತ್ಪತೇ**—ಸಜ್ಜನರ ಪಾಲಕನಾದ | **ಇಂದ್ರ**—ಎಲೈ ಇಂದ್ರನೇ | **ಮರುತ್ವಾನ್**—ಮರುದ್ದೇವತೆಗಳೊಡನಿರುವವನೂ | **ಪೃತನಾಃ**—ಶತ್ರುಸೇನೆಗಳನ್ನೂ | **ಉರು ಜ್ರಯಃ**—ಅವುಗಳ ವೇಗವನ್ನೂ | **ಸಂಸೇಹಾನಃ**—ಚೆನ್ನಾಗಿ ಸೋಲಿಸುವವನೂ | **ಅಪ್ಸುಜಿತ್**—ಮೇಘಗಳ ನಿಯಾಮಕನೂ ಆದ ನೀನು | **ತೇ**—ನಿನಗಾಗಿ | **ಯಂ ಭಾಗಂ**—ದೇವತೆಗಳು ಯಾವ ಸೋಮಭಾಗವನ್ನು ಕಲ್ಪಿಸಿರುವರೋ | **ಸೋಮಂ**—ಆ ಸೋಮಭಾಗವನ್ನು | **ಮದಾಯ**—ನಿನ್ನ ಸಂತೋಷಾರ್ಥವಾಗಿ | **ಪಿಬ**—ಪಾನಮಾಡು.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ನಿನ್ನನ್ನು ಸ್ತೋತ್ರಮಾಡುವ ಯಜಮಾನನನ್ನು ರಕ್ಷಿಸು. ನಿನ್ನನ್ನೂ ಸೋಮಪಾನದಿಂದ ತೃಪ್ತಿಪಡಿಸಿಕೋ. ಸಜ್ಜನರ ಪಾಲಕನಾದ ಎಲೈ ಇಂದ್ರನೇ, ಮರುದ್ದೇವತೆಗಳೊಡನಿರುವವನೂ, ಶತ್ರುಸೇನೆಗಳ ವೇಗವನ್ನು ಚೆನ್ನಾಗಿ ಸೋಲಿಸುವವನೂ, ಮೇಘಗಳ ನಿಯಾಮಕನೂ ಆದ ನೀನು ದೇವತೆಗಳು ನಿನಗಾಗಿ ಕಲ್ಪಿಸಿರುವ ಸೋಮಭಾಗವನ್ನು ನಿನ್ನ ಹರ್ಷಾರ್ಥವಾಗಿ ಪಾನಮಾಡು.

## English Translation.

Protect the worshipper, Maghavan, protect yourself ; drink joyfully, Satakratu, the Some for your exhilaration,—that portion which (the gods) assigned you, Indra, lord of the virtuous, who are the victor over all (hostile) hosts, the conqueror of many, the subdur of the waters, the leader of the Maruts.

॥ ಸಂಹಿತಾಪಾಠಃ ॥

ಊರ್ಜಂ ದೇವಾ ಅವಸ್ಯೋಜಸಾ ತ್ವಾಂ ಪಿಬಾ ಸೋಮಂ ಮದಾಯ ಕಂ
ಶತಕ್ರತೋ |
ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ
ಸಮಪ್ಸುಜಿನ್ಮರುತ್ವಾಂ ಇಂದ್ರ ಸತ್ಪತೇ || ೩ ||

॥ ಪದಪಾಠಃ ॥

ಊರ್ಜಾ । ದೇವಾನ್ । ಅವಸಿ । ಓಜಸಾ । ತ್ವಾಂ । ಪಿಬ । ಸೋಮಂ । ಮದಾಯ । ಕಂ । ಶತಕ್ರತೋ-

ಇತಿ ಶತऽಕ್ರತೋ ।

ಯಂ । ತೇ । ಭಾಗಂ । ಅಧಾರಯನ್ । ವಿಶ್ವಾಃ । ಸೇಹಾನಃ । ಪೃತನಾಃ । ಉರು । ಜ್ರಯಃ । ಸಂ ।

ಅಪ್ಸುऽಜಿತ್ । ಮರುತ್ವಾನ್ । ಇಂದ್ರ । ಸತ್ऽಪತೇ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ದೇವಾನೂರ್ಜಾನ್ನೇನ ಹವಿಷಾವಸಿ । ರಕ್ಷಸಿ । ತ್ವಾಮಪ್ಯೋಜಸಾ ಬಲೇನಾವಸಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ ನೀನು) **ದೇವಾನ್**—ದೇವತೆಗಳನ್ನು । **ಊರ್ಜಾ**—ಅನ್ನದಿಂದ ಎಂದರೆ ಹವಿಸ್ಸಿನಿಂದ । **ಅವಸಿ**—ರಕ್ಷಿಸುತ್ತೀಯೆ । **ತ್ವಾಂ (ಅಪಿ)**—ನಿನ್ನನ್ನೂ । **ಓಜಸಾ**—ಬಲದಿಂದ । **ಅವಸಿ**—ರಕ್ಷಿಸುತ್ತೀಯೆ । **ಹೇ ಸತ್ಪತೇ**—ಸಜ್ಜನರ ಪಾಲಕನಾದ । **ಇಂದ್ರ**—ಎಲೈ ಇಂದ್ರನೇ । **ಮರುತ್ವಾನ್**—ಮರುದ್ದೇವತೆಗಳೊಡನಿರುವವನೂ । **ಪೃತನಾಃ**—ಶತ್ರುಸೇನೆಗಳನ್ನೂ । **ಉರು ಜ್ರಯಃ**—ಅವುಗಳ ವೇಗವನ್ನೂ । **ಸಂಸೇಹಾನಃ**—ಚೆನ್ನಾಗಿ ಸೋಲಿಸುವವನೂ । **ಅಪ್ಸುಜಿತ್**—ಮೇಘಗಳ ನಿಯಾಮಕನೂ ಆದ ನೀನು । **ತೇ**--ನಿನಗಾಗಿ । **ಯಂ ಭಾಗಂ**—ದೇವತೆಗಳು ಯಾವ ಸೋಮಭಾಗವನ್ನು ಕಲ್ಪಿಸಿರುವರೋ । **ಸೋಮಂ**—ಆ ಸೋಮಭಾಗವನ್ನು । **ಮದಾಯ**—ನಿನ್ನ ಸಂತೋಷಾರ್ಥವಾಗಿ । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೆ ಇಂದ್ರನೇ, ನೀನು ಇತರ ದೇವತೆಗಳನ್ನು ಅನ್ನದಿಂದ ಅಥವಾ ಹವಿಸ್ಸಿನಿಂದ ರಕ್ಷಿಸುತ್ತೀಯೆ. ನಿನ್ನನ್ನು ಬಲದಿಂದ ರಕ್ಷಿಸಿಕೊಳ್ಳುತ್ತೀಯೆ. ಸಜ್ಜನರ ಪಾಲನಾದ ಎಲೈ ಇಂದ್ರನೇ, ಮರುದ್ದೇವತೆಗಳೊಡನಿರುವವನೂ ಶತ್ರುಸೇನೆಗಳ ವೇಗವನ್ನು ಚೆನ್ನಾಗಿ ಸೋಲಿಸುವವನೂ, ಮೇಘಗಳ ನಿಯಾಮಕನೂ ಆದ ನೀನು ದೇವತೆಗಳು ನಿನಗಾಗಿ ಕಲ್ಪಿಸಿರುವ ಸೋಮಭಾಗವನ್ನು ನಿನ್ನ ಹರ್ಷಾರ್ಥವಾಗಿ ಪಾನಮಾಡು.

## English Translation.

You, Maghavan, protect the gods with (sacrificial) food, and yourself by your might ; drink joyfully, Satakratu, the soma for your exhilaration,—that portion which (the gods) assigned you, Indra lord of the virtuous, who are the victor over all (hostile) hosts, the conqueror of many, the subduer of the waters, the leader of the Maruts.

। ಸಂಹಿತಾಪಾಠಃ ।

ಜನಿತಾ ದಿವೋ ಜನಿತಾ ಪೃಥಿವ್ಯಾಃ ಪಿಬಾ ಸೋಮಂ ಮದಾಯ ಕಂ ಶತಕ್ರತೋ ।
ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ ಸಮಪ್ಸುಜಿನ್ಮರುತ್ವಾँ ಇಂದ್ರ ಸತ್ಪತೇ ॥ ೪ ॥

। ಪದಪಾಠಃ ।

ಜನಿತಾ । ದಿವಃ । ಜನಿತಾ । ಪೃಥಿವ್ಯಾಃ । ಪಿಬ । ಸೋಮಂ । ಮದಾಯ । ಕಂ । ಶತಕ್ರತೋ ಇತಿ ಶತಽಕ್ರತೋ ।
ಯಂ । ತೇ । ಭಾಗಂ । ಅಧಾರಯನ್ । ವಿಶ್ವಾಃ । ಸೇಹಾನಃ । ಪೃತನಾಃ । ಉರು । ಜ್ರಯಃ । ಸಂ । ಅಪ್ಸುಽಜಿತ್ । ಮರುತ್ವಾನ್ । ಇಂದ್ರ । ಸತ್ಽಪತೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ದಿವೋ ದ್ಯುಲೋಕಸ್ಯ ಜನಿತಾ ಜನಕೋಽಸಿ । ಪೃಥಿವ್ಯಾಶ್ಚ ಜನಿತಾಸಿ । ಸಿದ್ಧಮನ್ಯತ್ ॥

। ಪ್ರತಿಪದಾರ್ಥ ।

(ಎಲೈ ಇಂದ್ರನೇ ನೀನು) **ದಿವಃ**—ಸ್ವರ್ಗಲೋಕದ । **ಜನಿತಾ**—ನಿರ್ಮಾಪಕನಾಗಿದ್ದೀಯೆ । **ಪೃಥಿವ್ಯಾಃ**—ಪೃಥಿವಿಯ । **ಜನಿತಾ**—ನಿರ್ಮಾಪಕನೂ ಆಗಿದ್ದೀಯೆ । **ಹೇ—ಸತ್ಪತೇ**—ಸಜ್ಜನರ ಪಾಲಕನಾದ । **ಇಂದ್ರ**—ಎಲೈ ಇಂದ್ರನೇ । **ಮರುತ್ವಾನ್**—ಮರುದ್ದೇವತೆಗಳೊಡನಿರುವವನೂ । **ಪೃತನಾಃ**—ಶತ್ರುಸೇನೆಗಳನ್ನೂ । **ಉರು ಜ್ರಯಃ**—ಅವುಗಳ ವೇಗವನ್ನೂ । **ಸಂಸೇಹಾನಃ**—ಚೆನ್ನಾಗಿ ಸೋಲಿಸುವವನೂ । **ಅಪ್ಸುಜಿತ್**—ಮೇಘಗಳ ನಿಯಾಮಕನೂ ಆದ ನೀನು । **ತೇ**—ನಿನಗಾಗಿ । **ಯಂ ಭಾಗಂ**—ದೇವತೆಗಳು ಯಾವ ಸೋಮ ಭಾಗವನ್ನು ಕಲ್ಪಿಸಿರುವರೋ । **ಸೋಮಂ**—ಆ ಸೋಮಭಾಗವನ್ನು । **ಮದಾಯ**—ನಿನ್ನ ಸಂತೋಷಾರ್ಥವಾಗಿ । **ಪಿಬ**—ಪಾನಮಾಡು.

। ಭಾವಾರ್ಥ ।

ಎಲೈ ಇಂದ್ರನೇ, ನೀನು ಸ್ವರ್ಗಲೋಕವನ್ನು ಸೃಷ್ಟಿಸಿದ್ದೀಯೆ. ಭೂಲೋಕವನ್ನು ಉತ್ಪತ್ತಿಮಾಡಿದವನೂ ನೀನೇ ಆಗಿರುವೆ. ಸಜ್ಜನರ ಪಾಲಕನಾದ ಎಲೈ ಇಂದ್ರನೇ, ಮರುದ್ದೇವತೆಗಳೊಡನಿರುವವನೂ ಶತ್ರುಸೇನೆಗಳ ವೇಗವನ್ನು ಚೆನ್ನಾಗಿ ಸೋಲಿಸುವವನೂ, ಮೇಘಗಳ ನಿಯಾಮಕನೂ ಆದ ನೀನು ದೇವತೆಗಳು ನಿನಗಾಗಿ ಕಲ್ಪಿಸಿರುವ ಸೋಮಭಾಗವನ್ನು ನಿನ್ನ ಹರ್ಷಾರ್ಥವಾಗಿ ಪಾನಮಾಡು

## English Translation.

You are the generator of heaven, the generator of earth ; drink **joyfully,** Satakratu, the Soma for your exhilaration,—that portion which **(the gods)** assigned you, Indra, lord of virtuous, who are the victor over **all (hostile)** hosts, the enqueror of many, the subduer of the waters, the **leaders of** the Maruts.

॥ ಸಂಹಿತಾಪಾಠಃ ॥

ಜನಿತಾಶ್ವಾನಾಂ ಜನಿತಾ ಗವಾಮಸಿ ಪಿಬಾ ಸೋಮಂ ಮದಾಯ ಕಂ ಶತಕ್ರತೋ ।
ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ ಸಮಪ್ಸುಜಿನ್ಮರುತ್ವಾ ಇಂದ್ರ ಸತ್ಪತೇ ॥ ೫ ॥

॥ ಪದಪಾಠಃ ॥

**ಜನಿತಾ । ಅಶ್ವಾನಾಂ । ಜನಿತಾ । ಗವಾಂ । ಅಸಿ । ಪಿಬ । ಸೋಮಂ । ಮದಾಯ । ಕಂ । ಶತಕ್ರತೋ ಇತಿ ಶತऽಕ್ರತೋ ।**
**ಯಂ । ತೇ । ಭಾಗಂ । ಅಧಾರಯನ್ । ವಿಶ್ವಾಃ । ಸೇಹಾನಃ । ಪೃತನಾಃ । ಉರು । ಜ್ರಯಃ । ಸಂ । ಅಪ್ಸುऽಜಿತ್ । ಮರುತ್ವಾನ್ । ಇಂದ್ರ । ಸತ್ऽಪತೇ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಮಶ್ವಾನಾಂ ಜನಿತಾ ಜನಕೋಽಸಿ । ಗವಾಂ ಚ ಜನಿತಾಸಿ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ ನೀನು) **ಅಶ್ವಾನಾಂ**—ಅಶ್ವಗಳ । **ಜನಿತಾ**—ಸೃಷ್ಟಿಕರ್ತನಾಗಿದ್ದೀಯೆ । **ಗವಾಂ**—ಗೋವುಗಳ । **ಜನಿತಾ**—ಸೃಷ್ಟಿಕರ್ತನೂ ಆಗಿದ್ದೀಯೆ । **ಹೇ ಸತ್ಪತೇ**—ಸಜ್ಜನರ ಪಾಲಕನಾದ । **ಇಂದ್ರ**—ಎಲೈ ಇಂದ್ರನೇ । **ಮರುತ್ವಾನ್**—ಮರುದ್ದೇವತೆಗಳೊಡನಿರುವವನೂ । **ಪೃತನಾಃ**—ಶತ್ರುಸೇನೆಗಳನ್ನೂ । **ಉರು ಜ್ರಯಃ**—ಅವುಗಳ ವೇಗವನ್ನೂ । **ಸಂಸೇಹಾನಃ**—ಚೆನ್ನಾಗಿ ಸೋಲಿಸುವವನೂ । **ಅಪ್ಸುಜಿತ್**—ಮೇಘಗಳ ನಿಯಾಮಕನೂ ಆದ ನೀನು । **ತೇ**—ನಿನಗಾಗಿ । **ಯಂ ಭಾಗಂ**—ದೇವತೆಗಳು ಯಾವ

ಸೋಮಭಾಗವನ್ನು ಕಲ್ಪಿಸಿರುವರೋ | **ಸೋಮಂ**— ಆ ಸೋಮಭಾಗವನ್ನು | **ಮದಾಯ**— ನಿನ್ನ ಸಂತೋಷಾರ್ಥವಾಗಿ | **ಪಿಬ**— ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅಶ್ವಗಳನ್ನೂ, ಗೋವುಗಳನ್ನೂ ಸೃಷ್ಟಿಮಾಡಿದ್ದೀಯೆ. ಸಜ್ಜನರ **ಪಾಲಕ** ನಾದ ಎಲೈ ಇಂದ್ರನೇ, ಮರುದ್ದೇವತೆಗಳೊಡನಿರುವವನೂ ಶತ್ರುಸೇನೆಗಳ ವೇಗವನ್ನು ಚೆನ್ನಾಗಿ **ಸೋಲಿಸು** ವವನೂ, ಮೇಘಗಳ ನಿಯಾಮಕನೂ ಆದ ನೀನು ದೇವತೆಗಳು ನಿನಗಾಗಿ ಕಲ್ಪಿಸಿರುವ ಸೋಮಭಾಗವನ್ನು ನಿನ್ನ ಹರ್ಷಾರ್ಥವಾಗಿ ಪಾನಮಾಡು.

English Translation.

You are the generator of horses, the generaler of cattle; **drink** joyfully, Shatakratu, the Soma for your exhilaration,—that portion **which** (the gods) assigned you, Indra, lord of the virtuous, who are the victor all (hostile) hosts, the conqueror of many, the subducr of the waters, the leader of the Maruts.

॥ ಸಂಹಿತಾಪಾಠಃ ॥

ಅಶ್ವೀಣಾಂ ಸ್ತೋಮಮದ್ರಿವೋ ಮಹಸ್ಕೃಧಿ ಪಿಬಾ ಸೋಮಂ ಮದಾಯ
ಕಂ ಶತಕ್ರತೋ ।
ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ
ಸಮಪ್ಸುಜಿನ್ಮರುತ್ವಾ ಇಂದ್ರ ಸತ್ಪತೇ ॥ ೬ ॥

॥ ಪದಪಾಠಃ ॥

ಅಶ್ವೀಣಾಂ । ಸ್ತೋಮಂ । ಅದ್ರಿsವಃ । ಮಹಃ । ಕೃಧಿ । ಪಿಬ । ಸೋಮಂ । ಮದಾಯ । ಕಂ । ಶತ-
ಕ್ರತೋ ಇತಿ ಶತsಕ್ರತೋ ।
ಯಂ । ತೇ । ಭಾಗಂ । ಅಧಾರಯನ್ । ವಿಶ್ವಾಃ । ಸೇಹಾನಃ । ಪೃತನಾಃ । ಉರು । ಜ್ರಯಃ । ಸಂ ।
ಅಪ್ಸುsಜಿತ್ । ಮರುತ್ವಾನ್ । ಇಂದ್ರ । ಸತ್sಪತೇ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಅದ್ರಿವೋಽದ್ರಿಮನ್ ಅತ್ರೀಣಾಂ ಸ್ತೋಮಂ ಮಹಸ್ಕೃಧಿ । ಪೂಜಿತಂ ಕುರು । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಅತ್ರೀಣಾಂ**—ಅತ್ರಿಋಷಿಗಳ । **ಸ್ತೋಮಂ**—ಈ ಸ್ತೋತ್ರವನ್ನು । **ಮಹಸ್ಕೃಧಿ**—ಗೌರವಿಸು ಎಂದರೆ ಆದರದಿಂದ ಕೇಳು । **ಹೇ ಸತ್ಪತೇ**—ಸಜ್ಜನರ ಪಾಲಕನಾದ । **ಇಂದ್ರ**—ಎಲೈ ಇಂದ್ರನೇ । **ಮರುತ್ವಾನ್**—ಮರುದ್ದೇವತೆಗಳೊಡನಿರುವವನೂ । **ಪೃತನಾಃ**—ಶತ್ರುಸೇನೆಗಳನ್ನೂ । **ಉರು ಜ್ರಯಃ**—ಅವುಗಳ ವೇಗವನ್ನೂ । **ಸಂಸೇಹಾನಃ**—ಚೆನ್ನಾಗಿ ಸೋಲಿಸುವವನೂ । **ಅಪ್ಸುಜಿತ್**—ಮೇಘಗಳ ನಿಯಾಮಕನೂ ಆದ ನೀನು । **ತೇ**—ನಿನಗಾಗಿ । **ಯಂ ಭಾಗಂ**—ದೇವತೆಗಳು ಯಾವ ಸೋಮಭಾಗವನ್ನು ಕಲ್ಪಿಸಿರುವರೋ । **ಸೋಮಂ**—ಆ ಸೋಮಭಾಗವನ್ನು । **ಮದಾಯ**—ನಿನ್ನ ಸಂತೋಷಾರ್ಥವಾಗಿ । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಅತ್ರಿಋಷಿಗಳು ನಿರ್ಮಿಸಿ ಪಠಿಸುತ್ತಿರುವ ಈ ಸ್ತೋತ್ರವನ್ನು ಗೌರವಿಸು ಎಂದರೆ ಆದರದಿಂದ ಶ್ರವಣಮಾಡು. ಸಜ್ಜನರ ಪಾಲಕನಾದ ಎಲೈ ಇಂದ್ರನೇ, ಮರುದ್ದೇವತೆಗಳೊಡನಿರುವವನೂ ಶತ್ರುಸೇನೆಗಳ ವೇಗವನ್ನು ಚೆನ್ನಾಗಿ ಸೋಲಿಸುವವನೂ, ಮೇಘಗಳ ನಿಯಾಮಕನೂ ಆದ ನೀನು ದೇವತೆಗಳು ನಿನಗಾಗಿ ಕಲ್ಪಿಸಿರುವ ಸೋಮಭಾಗವನ್ನು ನಿನ್ನ ಹರ್ಷಾರ್ಥವಾಗಿ ಪಾನಮಾಡು.

## English Translation.

Wielder of tho thurderbolt, reverence the praise of the Atris ; drink joyfully, Shatakratu, the Soma for your exhilaration,—that portion which (the gods) assigned you, Indra, lord of the virtuous, who are the victor over all (hostile) hosts, the conqueror of many, the subduer of the waters, the leader of the Maruts.

॥ ಸಂಹಿತಾಪಾಠಃ ॥

**ಶ್ಯಾವಾಶ್ವಸ್ಯ ಸುನ್ವತಸ್ತಥಾ ಶೃಣು ಯಥಾಶೃಣೋರತ್ರೇಃ ಕರ್ಮಾಣಿ ಕೃಣ್ವತಃ।**
**ಪ್ರ ತ್ರಸದಸ್ಯುಮಾವಿಥ ತ್ವಮೇಕ ಇನ್ನೃಷಾಹ್ಯ ಇಂದ್ರ ಬ್ರಹ್ಮಾಣಿ ವರ್ಧಯನ್ ॥ ೭ ॥**

॥ ಪದಪಾಠಃ ॥

ಶ್ಯಾವಽಅಶ್ವಸ್ಯ । ಸುನ್ವತಃ । ತಥಾ । ಶೃಣು । ಯಥಾ । ಅಶೃಣೋಃ । ಅತ್ರೇಃ । ಕರ್ಮಾಣಿ । ಕೃಣ್ವತಃ । ಪ್ರ । ತ್ರಸದಸ್ಯುಂ । ಆವಿಥ । ತ್ವಂ । ಏಕಃ । ಇತ್ । ನೃಽಸಹ್ಯೇ । ಇಂದ್ರ । ಬ್ರಹ್ಮಾಣಿ । ವರ್ಧಯನ್ ॥೭॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಸುನ್ವತಃ ಸೋಮಾಭಿಷವಂ ಕುರ್ವತಃ ಶ್ಯಾವಾಶ್ವಸ್ಯ ಮಮ ಸ್ತುತಿಂ ಕರ್ಮಾಣಿ ಕೃಣ್ವತಃ ಕುರ್ವತೋಽತ್ರೇರ್ಯಥಾಶೃಣೋಃ ಅಶ್ರೌಷೀಃ ತಥಾ ಶೃಣು । ಅಪಿ ಚ ತ್ವಮೇಕ ಇದೇಕ ಏವ ನೃಷಾಹ್ಯೇ ಯುದ್ಧೇ ಬ್ರಹ್ಮಾಣಿ ಸ್ತೋತ್ರಾಣಿ ಕಾಮ್ಯೈರ್ವರ್ಧಯಂಸ್ತ್ರಸದಸ್ಯುಂ ಪ್ರಾವಿಥ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ ನೀನು । **ಕರ್ಮಾಣಿ**—ನಿನ್ನನ್ನುದ್ದೇಶಿಸಿ ಯಜ್ಞಾದಿಕರ್ಮಗಳನ್ನು । **ಕೃಣ್ವತಃ**—ಮಾಡುತ್ತಿದ್ದ । **ಅತ್ರೇಃ**—ಅತ್ರಿಋಷಿಯ ಸ್ತೋತ್ರವನ್ನು । **ಯಥಾ ಅಶೃಣೋಃ**—ಯಾವ ರೀತಿ ಆದರದಿಂದ ಕೇಳಿದೆಯೋ । **ತಥಾ**—ಅದರಂತೆ । **ಸುನ್ವತಃ**—ನಿನಗರ್ಪಿಸುವುದಕ್ಕಾಗಿ ಸೋಮವನ್ನು ಹಿಂಡುತ್ತಿರುವ । **ಶ್ಯಾವಾಶ್ವಸ್ಯ**—ಶ್ಯಾವಾಶ್ವನಾಮಕನಾದ ನನ್ನ ಸ್ತೋತ್ರವನ್ನೂ । **ಶೃಣು**—ಕೇಳು (ಮತ್ತು) । **ತ್ವಮೇಕ ಇತ್**—ನೀನೊಬ್ಬನೇ (ಇತರರ ಸಹಾಯವಿಲ್ಲದೆ) । **ನೃಷಾಹ್ಯೇ**—ಯುದ್ಧದಲ್ಲಿ । **ಬ್ರಹ್ಮಾಣಿ**—ನಿನ್ನನ್ನುದ್ದೇಶಿಸಿ ಸ್ತೋತ್ರಗಳನ್ನು । **ವರ್ಧಯನ್**—ಪಠಿಸುತ್ತಿರುವ । **ತ್ರಸದಸ್ಯುಂ**—ತ್ರಸದಸ್ಯುವೆಂಬ ರಾಜನನ್ನು । **ಪ್ರ ಆವಿಥ**—ರಕ್ಷಿಸಿದೆಯಲ್ಲವೇ.

। ಭಾವಾರ್ಥ ।

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಯಜ್ಞಾದಿಕರ್ಮಗಳನ್ನು ಮಾಡುತ್ತಿದ್ದ ಅತ್ರಿಋಷಿಯ ಸ್ತೋತ್ರವನ್ನು ಯಾವ ರೀತಿ ಆದರದಿಂದ ಕೇಳಿದೆಯೋ ಅದರಂತೆ ಶ್ಯಾವಾಶ್ವನಾಮಕನಾದ ನನ್ನ ಸ್ತೋತ್ರವನ್ನೂ ಕೇಳು. ನೀನೊಬ್ಬನೇ ಹಿಂದೆ ಇತರರ ಸಹಾಯವಿಲ್ಲದೆ, ನಿನ್ನನ್ನು ಸ್ತೋತ್ರಗಳಿಂದ ಪ್ರಾರ್ಥಿಸುತ್ತಿದ್ದ ತ್ರಸದಸ್ಯುವೆಂಬ ರಾಜನನ್ನು ರಕ್ಷಿಸಿದೆಯಲ್ಲವೇ.

## English Translation.

Hear (the praises) of Syavashwa offering the libations, as you have heard (those) of Atri engaged in holy rites : you alone, Indra, have defended Trasadasyu in battle, animating his prayers.



# ಮೂವತ್ತೇಳನೆಯ ಸೂಕ್ತವು

। ಸಾಯಣಭಾಷ್ಯಂ ॥

**ಪ್ರೇದಂ ಬ್ರಹ್ಮೇತಿ ಸಪ್ತರ್ಚಂ ಸಪ್ತಮಂ ಸೂಕ್ತಮಾತ್ರೇಯಸ್ಯ ಶ್ಯಾವಾಶ್ವಸ್ಯಾರ್ಷಂ । ಆದ್ಯಾ ದ್ವಾಪಂಚಾಶದಕ್ಷರಾತಿಜಗತೀ । ಶಿಷ್ಟಾಃ ಷಡೃಚಃ ಷಡಷ್ಟಕಾ ಮಹಾಪಂಕ್ತಯಃ । ಇಂದ್ರೋ ದೇವತಾ। ತಥಾ ಚಾನುಕ್ರಾಂತಂ । ಪ್ರೇದಂ ಮಹಾಪಾಂಕ್ತಮಾದ್ಯಾತಿಜಗತೀತಿ ॥ ಮಹಾವ್ರತೇ ನಿಷ್ಕೇವಲ್ಯ ಏತತ್ಸೂಕ್ತಂ । ತಥಾ ಚ ಸೂತ್ರಂ । ಪ್ರೇದಂ ಬ್ರಹ್ಮೇಂದ್ರೋ ಮದಾಯ । ಆ. ೭-೧೨ । ಇತಿ ॥**

ಅನುವಾದವು—**ಪ್ರೇದಂ ಬ್ರಹ್ಮ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಏಳನೆಯ **ಸೂಕ್ತವು.** ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅತ್ರಿಗೋತ್ರೋದ್ಭವನಾದ ಶ್ಯಾವಾಶ್ವನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದ ಮೊದಲನೆಯ ಋಕ್ಕು ೫೨ ಅಕ್ಷರಗಳುಳ್ಳ ಅತಿಜಗತೀ ಎಂಬ ಛಂದಸ್ಸಿನದು. **ಉಳಿದ** ಆರು ಋಕ್ಕುಗಳೂ ಎಂಟು ಅಕ್ಷರಗಳ ಆರು ಪಾದಗಳುಳ್ಳ ಮಹಾಪಂಕ್ತಿ ಎಂಬ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—**ಪ್ರೇದಂ ಮಹಾಪಾಂಕ್ತಮಾದ್ಯಾತಿಜಗತೀ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರ ಮಂತ್ರಪಠನಮಾಡುವಾಗ ಈ ಸೂಕ್ತವನ್ನು ಪಠಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ—**ಪ್ರೇದಂ ಬ್ರಹ್ಮೇಂದ್ರೋ ಮದಾಯ** ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು.

## ಸೂಕ್ತ—೩೭

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೭ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೧೯ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
॥ ಋಷಿಃ—ಶ್ಯಾವಾಶ್ವಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧. ಅತಿಜಗತೀ । ೨-೭. ಮಹಾಪಂಕ್ತಿಃ ॥

। ಸಂಹಿತಾಪಾಠಃ ।

**ಪ್ರೇದಂ ಬ್ರಹ್ಮ ವೃತ್ರತೂರ್ಯೇಷ್ವಾವಿಥ ಪ್ರ ಸುನ್ವತಃ ಶಚೀಪತ ಇಂದ್ರ**
**ವಿಶ್ವಾಭಿರೂತಿಭಿಃ ।**
**ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್ನನೇದ್ಯ ಪಿಬಾ ಸೋಮಸ್ಯ ವಜ್ರಿವಃ ॥೧॥**

|| ಪದಪಾಠಃ ||

ಪ್ರ । ಇದಂ । ಬ್ರಹ್ಮ । ವೃತ್ರಽತೂರ್ಯೇಷು । ಆವಿಥ । ಪ್ರ । ಸುನ್ವತಃ । ಶಚೀಽಪತೇ । ಇಂದ್ರ । ವಿಶ್ವಾಭಿಃ । ಊತಿಽಭಿಃ ।

ಮಾಧ್ಯಂದಿನಸ್ಯ । ಸವನಸ್ಯ । ವೃತ್ರಽಹನ್ । ಅನೇದ್ಯ । ಪಿಬ । ಸೋಮಸ್ಯ । ವಜ್ರಿಽವಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಶಚೀಪತ ಇಂದ್ರ ತ್ವಂ ವೃತ್ರತೂರ್ಯೇಷು ಸಂಗ್ರಾಮೇಷ್ವಿದಂ ಬ್ರಹ್ಮೇಮಾನ್ ಬ್ರಾಹ್ಮಣಾನ್ವಿಶ್ವಾಭಿಃ ಸರ್ವಾಭಿರೂತಿಭೀ ರಕ್ಷಾಭಿಃ ಪ್ರಾವಿಥ । ಪ್ರರಕ್ಷ । ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಾಂಶ್ಚ ಪ್ರಾವಿಥ । ಅಪಿ ಚ ಹೇ ಅನೇದ್ಯಾನಿಂದ್ಯ ವಜ್ರಿವೋ ವಜ್ರಿನ್ ವೃತ್ರಹನ್ನಿಂದ್ರ ಮಾಧ್ಯಂದಿನಸ್ಯ ಸವನಸ್ಯ ಸಂಬಂಧಿನಂ ಸೋಮಸ್ಯ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

**ಶಚೀಪತೇ**—ಕರ್ಮಗಳಿಗೆಲ್ಲಾ ಪತಿಯಾದ । **ಇಂದ್ರ**—ಎಲೈ ಇಂದ್ರನೇ । **ವೃತ್ರತೂರ್ಯೇಷು**—ಶತ್ರುನಾಶಕವಾದ ಸಂಗ್ರಾಮಗಳಲ್ಲಿ । **ಇದಂ ಬ್ರಹ್ಮ**—ಈ ಬ್ರಾಹ್ಮಣರನ್ನು । **ವಿಶ್ವಾಭಿಃ**—ಸಮಸ್ತವಾದ । **ಊತಿಭಿಃ**—ರಕ್ಷಣೆಗಳೊಡನೆ । **ಪ್ರ ಆವಿಥ**—ಪೂರ್ಣವಾಗಿ ರಕ್ಷಿಸಿರುವೆ । **ಸುನ್ವತಃ**—ಸೋಮವನ್ನು ಅರ್ಪಿಸುವ ಯಜಮಾನನನ್ನೂ । **ಪ್ರ**—ರಕ್ಷಿಸಿರುವೆ । **ಅನೇದ್ಯ**—ನಿಂದಾರಹಿತನೂ । **ವಜ್ರಿವಃ**—ವಜ್ರಾಯುಧ ಧಾರಿಯೂ । **ವೃತ್ರಹನ್**—ವೃತ್ರಹಂತಕನೂ ಆದ । (**ಇಂದ್ರ**—ಎಲೈ ಇಂದ್ರನೇ) । **ಮಾಧ್ಯಂದಿನಸ್ಯ**—ಮಧ್ಯಾಹ್ನಕಾಲದಲ್ಲಿ ನೆರವೇರುವ । **ಸವನಸ್ಯ**—ಯಜ್ಞಸಂಬಂಧಿಯಾದ । **ಸೋಮಸ್ಯ**—ಸೋಮವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಕರ್ಮಗಳಿಗೆಲ್ಲಾ ಪತಿಯಾದ ಎಲೈ ಇಂದ್ರನೇ, ಶತ್ರುನಾಶಕವಾದ ಸಂಗ್ರಾಮಗಳಲ್ಲಿ ಈ ಬ್ರಾಹ್ಮಣರನ್ನು ನಿನ್ನ ಸಮಸ್ತವಾದ ರಕ್ಷಣೆಗಳೊಡನೆಯೂ ಪೂರ್ಣವಾಗಿ ರಕ್ಷಿಸಿರುವೆ. ಸೋಮವನ್ನು ಅರ್ಪಿಸಿರುವ ಯಜಮಾನನನ್ನೂ ರಕ್ಷಿಸಿರುವೆ. ನಿಂದಾರಹಿತನೂ, ವಜ್ರಾಯುಧಧಾರಿಯೂ, ವೃತ್ರಹಂತಕನೂ ಆದ ಎಲೈ ಇಂದ್ರನೇ, ಮಧ್ಯಾಹ್ನ ಕಾಲದಲ್ಲಿ ನೆರವೇರುವ ಯಜ್ಞದಲ್ಲಿ ಅರ್ಪಿತವಾಗುವ ಸೋಮವನ್ನು ಪಾನಮಾಡು.

## English Translation.

You protect, Indra, lord of rites, with all protections in combats with enemies, this sacrifice of him who offers you the libations : slayer of Vritra, irrproachable wielder of the thunderbolt, drink of the Soma at the mid-day solemnity.

। ಸಂಹಿತಾಪಾಠಃ ।

ಸೇಹಾನ ಉಗ್ರ ಪೃತನಾ ಅಭಿ ದ್ರುಹಃ ಶಚೀಪತ ಇಂದ್ರ ವಿಶ್ವಾಭಿರೂತಿಭಿಃ ।
ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್ನನೇದ್ಯ ಪಿಬಾ ಸೋಮಸ್ಯ ವಜ್ರಿವಃ ॥ ೨ ॥

॥ ಪದಪಾಠಃ ॥

ಸೇಹಾನಃ । ಉಗ್ರ । ಪೃತನಾಃ । ಅಭಿ । ದ್ರುಹಃ । ಶಚೀऽಪತೇ । ಇಂದ್ರ । ವಿಶ್ವಾಭಿಃ । ಊತಿऽಭಿಃ ।
ಮಾಧ್ಯಂದಿನಸ್ಯ । ಸವನಸ್ಯ । ವೃತ್ರऽಹನ್ । ಅನೇದ್ಯ । ಪಿಬ । ಸೋಮಸ್ಯ । ವಜ್ರಿऽವಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಶಚೀಪತೇ ಕರ್ಮಪತೇ ಉಗ್ರೋದ್ಗೂರ್ಣೇಂದ್ರ ಅಭಿ ದ್ರುಹೋ ದ್ರೋಗ್ಧ್ರೀಃ ಪೃತನಾಃ ಸೇನಾಃ ಸೇಹಾನೋऽಭಿಭವನ್ ಸರ್ವೈಃ ಪಾಲನೈರ್ಬ್ರಾಹ್ಮಣಾನ್ ಪ್ರಾವಿಥೇತ್ಯರ್ಥಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಶಚೀಪತೇ**—ಕರ್ಮಗಳಿಗೆಲ್ಲಾ ಪತಿಯಾದವನೂ । **ಉಗ್ರ**—ಅತ್ಯಧಿಕವಾದ ಬಲವುಳ್ಳವನೂ ಆದ । **ಇಂದ್ರ**—ಎಲೈ ಇಂದ್ರನೇ । **ಅಭಿ ದ್ರುಹಃ**—ನಮಗೆ ದ್ರೋಹಿಗಳಾದ । **ಪೃತನಾಃ**—ಸೇನೆಗಳನ್ನು । **ಸೇಹಾನಃ**—ಸೋಲಿಸುತ್ತಾ । **ವಿಶ್ವಾಭಿಃ**—ಸಮಸ್ತವಾದ । **ಊತಿಭಿಃ**—ರಕ್ಷಣೆಗಳೊಡನೆ (ನಮ್ಮನ್ನೆಲ್ಲಾ ರಕ್ಷಿಸಿರುವೆ) । **ಅನೇದ್ಯ**—ನಿಂದಾರಹಿತನೂ । **ವಜ್ರಿವಃ**—ವಜ್ರಾಯುಧಧಾರಿಯೂ । **ವೃತ್ರಹನ್**—ವೃತ್ರಹಂತಕನೂ ಆದ ಎಲೈ ಇಂದ್ರನೇ । **ಮಾಧ್ಯಂದಿನಸ್ಯ**—ಮಧ್ಯಾಹ್ನಕಾಲದಲ್ಲಿ ನೆರವೇರುವ । **ಸವನಸ್ಯ**—ಯಜ್ಞದಲ್ಲಿ ಹಿಂಡಲ್ಪಡುವ । **ಸೋಮಸ್ಯ**—ಈ ಸೋಮವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಕರ್ಮಗಳಿಗೆಲ್ಲಾ ಪತಿಯಾದವನೂ, ಅತ್ಯಧಿಕವಾದ ಬಲವುಳ್ಳವನೂ ಆದ ಎಲೈ ಇಂದ್ರನೇ, ನಮಗೆ ದ್ರೋಹಿಗಳಾದ ಸೇನೆಗಳನ್ನು ಸೋಲಿಸುತ್ತಾ ಸಮಸ್ತವಾದ ರಕ್ಷಣೆಗಳೊಡನೆ ನಮ್ಮನ್ನೆಲ್ಲಾ ರಕ್ಷಿಸಿರುವೆ. ನಿಂದಾರಹಿತನೂ, ವಜ್ರಾಯುಧಧಾರಿಯೂ, ವೃತ್ರಹಂತಕನೂ ಆದ ಎಲೈ ಇಂದ್ರನೇ, ಮಧ್ಯಾಹ್ನಕಾಲದಲ್ಲಿ ನೆರವೇರುವ ಯಜ್ಞದಲ್ಲಿ ಅರ್ಪಿಸುವ ಈ ಸೋಮವನ್ನು ಪಾನಮಾಡು.

## English Translation.

Fierce Indra, defeater of hostile armies, lord of rites, (you protect with all your protections; slayer of Vritra, irreproachable wielder of the thunderbolt, drink of the Soma at the mid-day solemnity.

॥ ಸಂಹಿತಾಪಾಠಃ ॥

ಏಕರಾಳಸ್ಯ ಭುವನಸ್ಯ ರಾಜಸಿ ಶಚೀಪತ ಇಂದ್ರ ವಿಶ್ವಾಭಿರೂತಿಭಿಃ ।
ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್ನನೇದ್ಯ ಪಿಬಾ ಸೋಮಸ್ಯ ವಜ್ರಿವಃ ॥೩॥

॥ ಪದಪಾಠಃ ॥

ಏಕಽರಾಟ್ । ಅಸ್ಯ । ಭುವನಸ್ಯ । ರಾಜಸಿ । ಶಚೀಽಪತೇ । ಇಂದ್ರ । ವಿಶ್ವಾಭಿಃ । ಊತಿಽಭಿಃ ।
ಮಾಧ್ಯಂದಿನಸ್ಯ । ಸವನಸ್ಯ । ವೃತ್ರಽಹನ್ । ಅನೇದ್ಯ । ಪಿಬ । ಸೋಮಸ್ಯ । ವಜ್ರಿಽವಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಶಚೀಪತ ಇಂದ್ರ ಭುವನಸ್ಯೈಕರಾಡೇಕ ಏವ ರಾಜಾ ಸನ್ ರಾಜಸಿ । ಭ್ರಾಜಸೇ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಶಚೀಪತೇ**—ಕರ್ಮಗಳಿಗೆಲ್ಲಾ ಪಾಲಕನಾದ । **ಇಂದ್ರ**—ಎಲೈ ಇಂದ್ರನೇ । (**ತ್ವಂ**—ನೀನು) । **ವಿಶ್ವಾಭಿಃ**—ಸಮಸ್ತವಾದ । **ಊತಿಭಿಃ**—ರಕ್ಷಣೆಗಳೊಡನೆ । **ಅಸ್ಯ ಭುವನಸ್ಯ**—ಈ ಸಕಲ ಲೋಕಕ್ಕೂ । **ಏಕರಾಟ್**—ಒಬ್ಬನೇ ಆದ ಪ್ರಭುವಾಗಿ । **ರಾಜಸಿ**—ಪ್ರಕಾಶಿಸುತ್ತೀಯೆ । **ಅನೇದ್ಯ**—ನಿಂದಾರಹಿತನೂ । **ವಜ್ರಿವಃ**—ವಜ್ರಾಯುಧಧಾರಿಯೂ । **ವೃತ್ರಹನ್**—ವೃತ್ರಹಂತಕನೂ ಆದ ಎಲೈ ಇಂದ್ರನೇ । **ಮಾಧ್ಯಂದಿನಸ್ಯ**—ಮಧ್ಯಾಹ್ನಕಾಲದಲ್ಲಿ ನೆರವೇರುವ । **ಸವನಸ್ಯ**—ಯಜ್ಞದಲ್ಲಿ ಅರ್ಪಿತವಾಗುವ । **ಸೋಮಸ್ಯ**—ಸೋಮವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಕರ್ಮಗಳಿಗೆಲ್ಲಾ ಪಾಲಕನಾದ ಎಲೈ ಇಂದ್ರನೇ, ನೀನು ಸಮಸ್ತವಾದ ರಕ್ಷಣೆಗಳೊಡನೆಯೂ, ಈ ಸಕಲ ಲೋಕಕ್ಕೂ ಒಬ್ಬನೇ ಆದ ಪ್ರಭುವಾಗಿ ಪ್ರಕಾಶಿಸುತ್ತೀಯೆ. ನಿಂದಾರಹಿತನೂ, ವಜ್ರಾಯುಧಧಾರಿಯೂ, ವೃತ್ರಹಂತಕನೂ ಆದ ಎಲೈ ಇಂದ್ರನೇ, ಮಧ್ಯಾಹ್ನಕಾಲದಲ್ಲಿ ನೆರವೇರುವ ಯಜ್ಞದಲ್ಲಿ ಅರ್ಪಿತವಾಗುವ ಸೋಮವನ್ನು ಪಾನಮಾಡು.

## English Translation.

You shine the sole sovereign of this world, Indra, lord of rites, with all your protections; slayer of Vritra, irreproachable wielder of the thunderbolt drink of the Soma at the mid-day solemnity.

॥ ಸಂಹಿತಾಪಾಠಃ ॥

ಸಸ್ಥಾನಾ ಯುವಯುಸಿ ತ್ವಮೇಕ ಇಚ್ಛಚೀಪತ ಇಂದ್ರ ವಿಶ್ವಾಭಿರೂತಿಭಿಃ ।
ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್ನನೇದ್ಯ ಪಿಬಾ ಸೋಮಸ್ಯ ವಜ್ರಿವಃ ॥ ೪ ॥

॥ ಪದಪಾಠಃ ॥

ಸ್ಽಸ್ಥಾನಾ । ಯುವಯುಸಿ । ತ್ವಂ । ಏಕಃ । ಇತ್ । ಶಚೀಽಪತೇ । ಇಂದ್ರ । ವಿಶ್ವಾಭಿಃ । ಊತಿಽಭಿಃ ।
ಮಾಧ್ಯಂದಿನಸ್ಯ । ಸವನಸ್ಯ । ವೃತ್ರಽಹನ್ । ಅನೇದ್ಯ । ಪಿಬ । ಸೋಮಸ್ಯ । ವಜ್ರಿಽವಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಶಚೀಪತ ಇಂದ್ರ ತ್ವಮೇಕ ಏವ ಸಸ್ಥಾನಾ ಸಮಾನಂ ತಿಷ್ಠಂತಾವಿಮೌ ಲೋಕೌ ಯುವಯುಸಿ । ಪೃಥಕ್ಕರೋಷಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಶಚೀಪತೇ**—ಕರ್ಮಪಾಲಕನಾದ । **ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಏಕ ಇತ್**—ಒಬ್ಬನೇ । **ವಿಶ್ವಾಭಿಃ**—ಸಮಸ್ತವಾದ । **ಊತಿಭಿಃ**—ರಕ್ಷಣೆಗಳೊಡನೆ । **ಸಸ್ಥಾನಾ**—ಒಟ್ಟಿಗೆ ಸೇರಿಕೊಂಡಿರುವ ದ್ಯಾವಾಪೃಥಿವಿಗಳೆರಡನ್ನೂ । **ಯುವಯುಸಿ**—ಬೇರೆ ಮಾಡುತ್ತೀಯೆ । **ಅನೇದ್ಯ**—ನಿಂದಾರಹಿತನೂ । **ವಜ್ರಿವಃ**—ವಜ್ರಾಯುಧಧಾರಿಯೂ । **ವೃತ್ರಹನ್**—ವೃತ್ರಹಂತಕನೂ ಆದ ಎಲೈ ಇಂದ್ರನೇ । **ಮಾಧ್ಯಂದಿನಸ್ಯ**—ಮಧ್ಯಾಹ್ನಕಾಲದಲ್ಲಿ ನೆರವೇರುವ । **ಸವನಸ್ಯ**—ಯಜ್ಞದಲ್ಲಿ ಅರ್ಪಿತವಾಗುವ । **ಸೋಮಸ್ಯ**—ಸೋಮವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಕರ್ಮಪಾಲಕನಾದ ಎಲೈ ಇಂದ್ರನೇ, ನೀನೊಬ್ಬನೇ ಒಟ್ಟಿಗೆ ಸೇರಿಕೊಂಡಿರುವ ದ್ಯಾವಾಪೃಥಿವಿಗಳೆರಡನ್ನೂ ನಿನ್ನ ಸಮಸ್ತ ರಕ್ಷಣೆಗಳೊಡನೆ ಬೇರೆ ಮಾಡುತ್ತೀಯೆ ನಿಂದಾರಹಿತನೂ, ವಜ್ರಾಯುಧಧಾರಿಯೂ, ವೃತ್ರಹಂತಕನೂ ಆದ ಎಲೈ ಇಂದ್ರನೇ, ಮಧ್ಯಾಹ್ನಕಾಲದಲ್ಲಿ ನೆರವೇರುವ ಯಜ್ಞದಲ್ಲಿ ಅರ್ಪಿತವಾಗುವ ಸೋಮವನ್ನು ಪಾನಮಾಡು.

## English Translation.

You alone, Indra, lord of rites, separate the combined worlds (heaven and earth) with all your protections; slayer of Vritra, irreproachable wielder of the thunderbolt, drink of the Soma at the mid-day solemnity.

॥ ಸಂಹಿತಾಪಾಠಃ ॥

ಕ್ಷೇಮಸ್ಯ ಚ ಪ್ರಯುಜಶ್ಚ ತ್ವಮೀಶಿಷೇ ಶಚೀಪತ ಇಂದ್ರ ವಿಶ್ವಾಭಿರೂತಿಭಿಃ ।
ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್ನನೇದ್ಯ ಪಿಬಾ ಸೋಮಸ್ಯ ವಜ್ರಿವಃ ॥೫॥

॥ ಪದಪಾಠಃ ॥

ಕ್ಷೇಮಸ್ಯ । ಚ । ಪ್ರಽಯುಜಃ । ಚ । ತ್ವಂ । ಈಶಿಷೇ । ಶಚೀಽಪತೇ । ಇಂದ್ರ । ವಿಶ್ವಾಭಿಃ । ಊತಿಽಭಿಃ ।
ಮಾಧ್ಯಂದಿನಸ್ಯ । ಸವನಸ್ಯ । ವೃತ್ರಽಹನ್ । ಅನೇದ್ಯ । ಪಿಬ । ಸೋಮಸ್ಯ । ವಜ್ರಿಽವಃ ॥ ೫ ॥

॥ ಸಾಯಣಭಾಷ್ಯಂ ॥

ಅಪಿ ಚ ಹೇ ಶಚೀಪತೇ ಇಂದ್ರ ಸರ್ವಸ್ಯ ಜಗತಃ ಕ್ಷೇಮಸ್ಯ ಪ್ರಯುಜಶ್ಚ ಪ್ರಯೋಗಸ್ಯ ಚ । ಯೋಗಕ್ಷೇಮಯೋರಿತ್ಯರ್ಥಃ । ಈಶಿಷೇ । ಈಶ್ವರೋ ಭವಸಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಶಚೀಪತೇ**—ಕರ್ಮಪಾಲಕನಾದ । **ಇಂದ್ರ**—ಎಲೈ ಇಂದ್ರನೇ । **ಕ್ಷೇಮಸ್ಯ**—ಕ್ಷೇಮಕ್ಕೂ । **ಪ್ರಯುಜಶ್ಚ**—ಅಭಿವೃದ್ಧಿಗೂ । **ವಿಶ್ವಾಭಿಃ**—ಸಮಸ್ತವಾದ । **ಊತಿಭಿಃ**—ರಕ್ಷಣೆಗಳೊಡನೆ । **ತ್ವಂ**—ನೀನೇ । **ಈಶಿಷೇ**—ಪ್ರಭುವಾಗಿದ್ದೀಯೆ । **ಅನೇದ್ಯ**—ನಿಂದಾರಹಿತನೂ । **ವೃತ್ರಹನ್**—ವೃತ್ರಹಂತಕನೂ । **ವಜ್ರಿವಃ**—ವಜ್ರಾಯುಧದಾರಿಯೂ ಆದ ಎಲೈ ಇಂದ್ರನೇ । **ಮಾಧ್ಯಂದಿನಸ್ಯ**—ಮಧ್ಯಾಹ್ನಕಾಲದಲ್ಲಿ ನೆರವೇರುವ । **ಸವನಸ್ಯ**—ಯಜ್ಞದಲ್ಲಿ ಅರ್ಪಿತವಾಗುವ । **ಸೋಮಸ್ಯ**—ಸೋಮವನ್ನು । **ಪಿಬ**—ಪಾನಮಾಡು

॥ ಭಾವಾರ್ಥ ॥

ಕರ್ಮಪಾಲಕನಾದ ಎಲೈ ಇಂದ್ರನೇ, ನಮ್ಮ ಕ್ಷೇಮಕ್ಕೂ, ಅಭಿವೃದ್ಧಿಗೂ ಸಹ ನಿನ್ನ ಸಮಸ್ತವಾದ ರಕ್ಷಣೆಗಳೊಡನೆ ನೀನೇ ಪ್ರಭುವಾಗಿದ್ದೀಯೆ. ನಿಂದಾರಹಿತನೂ, ವೃತ್ರಹಂತಕನೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, ಮಧ್ಯಾಹ್ನಕಾಲದಲ್ಲಿ ನೇರವೇರುವ ಯಜ್ಞದಲ್ಲಿ ಅರ್ಪಿತವಾಗುವ ಸೋಮವನ್ನು ಪಾನಮಾಡು.

## English Translation.

You, lord of rites, are sovereign over our prosperity and gains, with all your protections : slayer of Vritra, irrepoachable wielder of the thunder-bolt, drink of the Soma at mid-day solememnity.

|| ಸಂಹಿತಾಪಾಠಃ ||

ಕ್ಷತ್ರಾಯ ತ್ವಮವಸಿ ನ ತ್ವಮಾವಿಥ ಶಚೀಪತ ಇಂದ್ರ ವಿಶ್ವಾಭಿರೂತಿಭಿಃ |
ಮಾಧ್ಯಂದಿನಸ್ಯ ಸವನಸ್ಯ ವೃತ್ರಹನ್ನನೇದ್ಯ ಪಿಬಾ ಸೋಮಸ್ಯ ವಜ್ರಿವಃ ||೬||

|| ಪದಪಾಠಃ ||

ಕ್ಷತ್ರಾಯ | ತ್ವಂ | ಅವಸಿ | ನ | ತ್ವಂ | ಆವಿಥ | ಶಚೀऽಪತೇ | ಇಂದ್ರ | ವಿಶ್ವಾಭಿಃ | ಊತಿऽಭಿಃ |
ಮಾಧ್ಯಂದಿನಸ್ಯ | ಸವನಸ್ಯ | ವೃತ್ರऽಹನ್ | ಅನೇದ್ಯ | ಪಿಬ | ಸೋಮಸ್ಯ | ವಜ್ರಿऽವಃ || ೬ ||

|| ಸಾಯಣಭಾಷ್ಯಂ ||

ಹೇ ಶಚೀಪತೆ ಇಂದ್ರ ತ್ವಂ ಕ್ಷತ್ರಾಯ ಜಗತೋ ಬಲಾಯ ಭವಸಿ | ಅವಸಿ | ಆಶ್ರಿತಾನ್ರಕ್ಷಸಿ | ತ್ವಂ ನಾವಿಥ | ಕೇನಾಪಿ ನ ರಕ್ಷ್ಯಸೇ | ಸಿಷ್ಟಮನ್ಯತ್ ||

|| ಪ್ರತಿಪದಾರ್ಥ ||

**ಶಚೀಪತೇ**—ಕರ್ಮಪಾಲಕನಾದ | **ಇಂದ್ರ**—ಎಲೈ ಇಂದ್ರನೇ | **ಕ್ಷತ್ರಾಯ**—ಶಕ್ತಿಯನ್ನು ಪ್ರಕಟಿಸುವುದಕ್ಕೆ | **ತ್ವಂ**—ನೀನೊಬ್ಬನೇ ಸಮರ್ಥನಾಗಿದ್ದೀಯೆ | **ತ್ವಂ**—ನೀನೇ | **ವಿಶ್ವಾಭಿಃ**—ಸಮಸ್ತವಾದ | **ಊತಿಭಿಃ**—ರಕ್ಷಣೆಗಳೊಡನೆಯೂ | **ಅವಸಿ**—ಎಲ್ಲರನ್ನೂ ರಕ್ಷಿಸುತ್ತೀಯೆ | **ನ ಆವಿಥ**—ಆದರೆ ನಿನ್ನ ರಕ್ಷಣೆಗೆ ಯಾರ ಸಹಾಯವನ್ನು ಅಪೇಕ್ಷಿಸುವುದಿಲ್ಲ | **ಅನೇದ್ಯ**—ನಿಂದಾರಹಿತನೂ | **ವಜ್ರಿವಃ**—ವಜ್ರಾಯುಧಧಾರಿಯೂ | **ವೃತ್ರಹನ್**—ವೃತ್ರಹಂತಕನೂ ಆದ ಎಲೈ ಇಂದ್ರನೇ | **ಮಾಧ್ಯಂದಿನಸ್ಯ**—ಮಧ್ಯಾಹ್ನಕಾಲದಲ್ಲಿ ನೆರವೇರುವ | **ಸವನಸ್ಯ**—ಯಜ್ಞದಲ್ಲಿ ಅರ್ಪಿಸುವ | **ಸೋಮಸ್ಯ**—ಸೋಮವನ್ನು | **ಪಿಬ**—ಪಾನಮಾಡು.

|| ಭಾವಾರ್ಥ ||

ಕರ್ಮಪಾಲಕನಾದ ಎಲೈ ಇಂದ್ರನೇ, ನೀನೊಬ್ಬನು ಮಾತ್ರ ನಿಜವಾದ ಶಕ್ತಿಯನ್ನು ಪ್ರಕಟಿಸಬಲ್ಲೆ. ಸಮಸ್ತವಾದ ರಕ್ಷಣೆಗಳೊಡನೆಯೂ ನೀನೇ ಎಲ್ಲರನ್ನೂ ರಕ್ಷಿಸುತ್ತೀಯೆ. ಆದರೆ ನಿನ್ನ ರಕ್ಷಣೆಗೆ ನೀನು ಯಾರ ಸಹಾಯವನ್ನೂ ಅಪೇಕ್ಷಿಸುವುದಿಲ್ಲ. ನಿಂದಾರಹಿತನೂ, ವಜ್ರಾಯುಧಧಾರಿಯೂ, ವೃತ್ರಹಂತಕನೂ ಆದ ಎಲೈ ಇಂದ್ರನೇ, ಮಧ್ಯಾಹ್ನಕಾಲದಲ್ಲಿ ನೆರವೇರುವ ಯಜ್ಞದಲ್ಲಿ ಅರ್ಪಿಸುವ ಸೋಮವನ್ನು ಪಾನಮಾಡು.

## English Translation.

You are for the strength (of the world); you protect with all your protections, but you need no defender, Indra, lord of rites; slayer of Vritra, irreproachable wielder of the thunderbolt, drink of the Soma at the mid-day solemnity.

॥ ಸಂಹಿತಾಪಾಠಃ ॥

ಶ್ಯಾವಾಶ್ವಸ್ಯ ರೇಭತಸ್ತಥಾ ಶೃಣು ಯಥಾಶೃಣೋರತ್ರೇಃ ಕರ್ಮಾಣಿ ಕೃಣ್ವತಃ ।
ಪ್ರ ತ್ರಸದಸ್ಯುಮಾವಿಥ ತ್ವಮೇಕ ಇನ್ನೃಷಾಹ್ಯ ಇಂದ್ರ ಕ್ಷತ್ರಾಣಿ ವರ್ಧಯನ್ ॥ ೭ ॥

॥ ಪದಪಾಠಃ ॥

ಶ್ಯಾವಽಅಶ್ವಸ್ಯ । ರೇಭತಃ । ತಥಾ । ಶೃಣು । ಯಥಾ । ಅಶೃಣೋಃ । ಅತ್ರೇಃ । ಕರ್ಮಾಣಿ । ಕೃಣ್ವತಃ ।
ಪ್ರ । ತ್ರಸದಸ್ಯುಂ । ಆವಿಥ । ತ್ವಂ । ಏಕಃ । ಇತ್ । ನೃಽಸಹ್ಯೇ । ಇಂದ್ರ । ಕ್ಷತ್ರಾಣಿ । ವರ್ಧಯನ್ ॥೭॥

॥ ಸಾಯಣಭಾಷ್ಯಂ ॥

ಹೇ ಇಂದ್ರ ರೇಭತಃ ಸ್ತುವತಃ ಶ್ಯಾವಾಶ್ವಸ್ಯ ಮಮ ಸ್ತುತಿಂ ಕರ್ಮಾಣಿ ಕೃಣ್ವತೋಽತ್ರೇರ್ಯಥಾಶೃಣೋಸ್ತಥಾ ಶೃಣು । ಅಪಿ ಚ ಕ್ಷತ್ರಾಣಿ ಬಲಾನಿ ಕಾನ್ಯೈರ್ವರ್ಧಯನ್ ಯುದ್ಧೇ ತ್ವಮೇಕ ಏವ ತ್ರಸದಸ್ಯುಂ ಪ್ರಾವಿಥ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಕರ್ಮಾಣಿ**—ಉತ್ತಮವಾದ ಯಜ್ಞಕರ್ಮಗಳನ್ನು । **ಕೃಣ್ವತಃ**—ನೆರವೇರಿಸುವ । **ಅತ್ರೇಃ**—ಅತ್ರಿಮಹರ್ಷಿಯ ಸ್ತುತಿಗಳನ್ನು । **ಯಥಾ**—ಯಾವ ಪ್ರಕಾರವಾಗಿ । **ಅಶೃಣೋಃ**—ಹಿಂದೆಕೇಳಿದೆಯೋ । **ತಥಾ**—ಅದರಂತೆಯೇ । **ರೇಭತಃ**—ಸ್ತುತಿಸುತ್ತಿರುವ । **ಶ್ಯಾವಾಶ್ವಸ್ಯ**—ಶ್ಯಾವಾಶ್ವನೆಂದು ಪ್ರಸಿದ್ಧನಾದ ನನ್ನ ಸ್ತುತಿಗಳನ್ನು । **ಶೃಣು**—ಕೇಳು (ಮತ್ತು) । **ನೃಸಹ್ಯೇ**—ಯುದ್ಧದಲ್ಲಿ । **ಕ್ಷತ್ರಾಣಿ**—(ತ್ರಸದಸ್ಯುವಿನ) ಶಕ್ತಿಯನ್ನು । **ವರ್ಧಯನ್**—ಅಧಿಕವಾಗಿ ಬೆಳಸುತ್ತಾ । **ತ್ವಂ**—ನೀನು । **ಏಕ ಇತ್**—ಅದ್ವಿತೀಯನಾಗಿ । **ತ್ರಸದಸ್ಯಂ**—ತ್ರಸದಸ್ಯುವನ್ನು । **ಪ್ರಾವಿಥ**—ಪೂರ್ಣವಾಗಿ ರಕ್ಷಿಸಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಉತ್ತಮವಾದ ಯಜ್ಞಕರ್ಮಗಳನ್ನು ನೆರವೇರಿಸುವ ಅತ್ರಿಮಹರ್ಷಿಯ ಸ್ತುತಿಗಳನ್ನು ನೀನು ಯಾವ ಪ್ರಕಾರವಾಗಿ ಕೇಳಿದೆಯೋ ಅದರಂತೆಯೇ, ಸ್ತುತಿಕರ್ತನಾದ ಶ್ಯಾವಾಶ್ವಸಂಜ್ಞಕನಾದ ನನ್ನ ಸ್ತುತಿಗಳನ್ನೂ ಕೇಳು. ಮತ್ತು ಯುದ್ಧದಲ್ಲಿ ತ್ರಸದಸ್ಯುವಿನ ಶಕ್ತಿಯನ್ನು ಅಧಿಕವಾಗಿ ಬೆಳೆಸುತ್ತಾ ನೀನು ಅದ್ವಿತೀಯನಾಗಿ ಇತರರ ಸಹಾಯವಿಲ್ಲದೇ ತ್ರಸದಸ್ಯುವನ್ನು ಪೂರ್ಣವಾಗಿ ರಕ್ಷಿಸಿದೆ.

English Translation.

**Hear the praises of Shayavashwa eulogizing you, as you have heard those of Atri engaged in pious rites ; you alone have protected Trasadasyu in battle, augmenting his vigour.**



# ಮೂವತ್ತೆಂಟನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಯಜ್ಞಸ್ಯ ಹೀತಿ ದಶರ್ಚಮಷ್ಟಮಂ ಸೂಕ್ತಂ ಶ್ಯಾವಾಶ್ವಸ್ಯಾರ್ಷಂ ಪ್ರಾಗ್ವತ್ಸಪ್ರಪರಿಭಾಷಯಾ ಗಾಯತ್ರಮಿಂದ್ರಾಗ್ನಿದೇವತಾಕಂ । ತಥಾ ಚಾನುಕ್ರಾಂತಂ । ಯಜ್ಞಸ್ಯ ದಶೈಂದ್ರಾಗ್ನಮಿತಿ ॥ ಪೃಷ್ಠ್ಯಾ-ಭಿಪ್ಲವಷಡಹಯೋಃ ಪ್ರಾತಃಸವನೇಽಚ್ಛಾವಾಕಶಸ್ತ್ರ ಆವಾಪಾರ್ಥಮೇತತ್ಸೂಕ್ತಂ । ಸೂತ್ರಿತಂ ಚ । ಯಜ್ಞಸ್ಯ ಹಿ ಸ್ಥ ಇತ್ಯಚ್ಛಾವಾಕಸ್ಯ । ಆ. ೭-೫ । ಇತಿ ॥ ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ಯಜ್ಞಸ್ಯ ಹಿ ಸ್ಥ ಇತಿ ಷಳಹಸ್ತೋತ್ರಿಯಸಂಜ್ಞಕಸ್ತೃಚಃ । ಸೂತ್ರಿತಂ ಚ । ಇಂದ್ರಾಗ್ನೀ ಯುವಾಮಿಮೇ ಯಜ್ಞಸ್ಯ ಹಿ ಸ್ಥ ಋತ್ವಿಜೇತ್ಯಚ್ಛಾವಾಕಸ್ಯ । ಆ. ೭-೨ । ಇತಿ ॥ ಅಗ್ನಿಷ್ಟೋಮೇ ಪ್ರಾತಃಸವನೇಽಚ್ಛಾ-ವಾಕಸ್ಯ ಪ್ರಾತರ್ಯಾವಭಿರಿತಿ ಪ್ರಾತಃಸವನೀಯಸ್ಯ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಪ್ರಾತರ್ಯಾವ-ಭಿರಿತಿ ಯಜತಿ । ಆ. ೫-೭ । ಇತಿ ॥ ಚಾತುರ್ವಿಂಶಿಕೇ ಪ್ರಾತಃಸವನೇಽಚ್ಛಾವಾಕಶಸ್ತ್ರೇ ಶ್ಯಾವಾಶ್ವಸ್ಯೇ-ತ್ಯಯಂ ಪರ್ಯಾಸಸ್ತೃಚಃ । ಅನ್ಯತ್ರಾಪ್ಯಹರ್ಗಣೇಷು ದ್ವಿತೀಯಾದಿಷ್ವಹಃಸು । ಸೂತ್ರ್ಯತೇ ಹಿ । ಶ್ಯಾವಾಶ್ವಸ್ಯ ಸುನ್ವತ ಇತಿ ತೃಚಾಃ ಪರ್ಯಾಸಾಃ । ಆ. ೭-೨ । ಇತಿ ॥**

ಅನುವಾದವು—**ಯಜ್ಞಸ್ಯ ಹಿ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಹಿಂದಿನ ಸೂಕ್ತಗಳಂತೆಯೇ ಶ್ಯಾವಾಶ್ವನು ಋಷಿಯು ; ಇಂದ್ರಾಗ್ನಿಗಳು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಜ್ಞಸ್ಯ ದಶೈಂದ್ರಾಗ್ನಂ** ಎಂದು ಹೇಳಿರುವುದು. ಪೃಷ್ಠ್ಯ ಮತ್ತು ಅಭಿಪ್ಲವಷಡಹ ಎಂಬ ಯಾಗಗಳ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಸ್ತೋತ್ರಗಳ ಆವಾಪಾರ್ಥವಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯಜ್ಞಸ್ಯ ಹಿ ಸ್ಥ ಇತ್ಯಚ್ಛಾವಾಕಸ್ಯ** ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು. ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಸ್ಸವನಕಾಲದಲ್ಲಿ **ಯಜ್ಞಸ್ಯ ಹಿ ಸ್ಥಃ** ಎಂಬ ತೃಚವನ್ನು ಷಳಹಸ್ತೋತ್ರಿಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಇಂದ್ರಾಗ್ನೀ ಯುವಾಮಿಮೇ ಯಜ್ಞಸ್ಯ ಹಿ ಸ್ಥ ಋತ್ವಿಜೇತ್ಯಚ್ಛಾವಾಕಸ್ಯ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು. ಅಗ್ನಿಷ್ಟೋಮಯಾಗದಲ್ಲಿ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು **ಪ್ರಾತರ್ಯಾವಭಿಃ** ಎಂಬ ಈ ಸೂಕ್ತದ ಏಳನೆಯ ಋಕ್ಕನ್ನು ಪ್ರಾತಸ್ಸವನಸಂಬಂಧವಾದ ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—

**ಪ್ರಾತರ್ಯಾವಭಿರಿತಿ ಯಜತಿ** ಎಂಬ ಸೂತ್ರದಿಂದ (ಆ. ೫-೭) ವಿವೃತವಾಗಿರುವುದು. ಮತ್ತು **ಯಾಗದ** ಚಾತುರ್ವಿಂಶಕವೆಂಬ ದಿನದ ಪ್ರಾತಸ್ಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಶ್ಯಾವಾಶ್ವಸ್ಯ** ಎಂಬ ಈ ಸೂಕ್ತದ ಎಂಟನೆಯ ಋಕ್ಕನ್ನು ಪರ್ಯಾಸತೃಚವನ್ನಾಗಿ ಪಠಿಸಬೇಕು. **ಅಹರ್ಗಣವೇ** ಮೊದಲಾದ ಇತರ ಸ್ಥಳಗಳಲ್ಲಿಯೂ ಎರಡನೆಯ ದಿವಸದಿಂದ ಮುಂದಿನ ದಿನಗಳಲ್ಲಿ ಈ ಮಂತ್ರವನ್ನು **ಪರ್ಯಾಸತೃಚ**ವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಶ್ಯಾವಾಶ್ವಸ್ಯ ಸುನ್ವತ ಇತಿ ತೃಚಾಃ ಪರ್ಯಾಸಾಃ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು.

## ಸೂಕ್ತ—೩೮

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೮ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೨೦, ೨೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಶ್ಯಾವಾಶ್ವಃ ॥
॥ ದೇವತಾ—ಇಂದ್ರಾಗ್ನೀ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಯಜ್ಞಸ್ಯ ಹಿ ಸ್ಥ ಋತ್ವಿಜಾ ಸಸ್ನೀ ವಾಜೇಷು ಕರ್ಮಸು ।**
**ಇಂದ್ರಾಗ್ನೀ ತಸ್ಯ ಬೋಧತಂ ॥ ೧ ॥**

॥ ಪದಪಾಠಃ ॥

**ಯಜ್ಞಸ್ಯ । ಹಿ । ಸ್ಥಃ । ಋತ್ವಿಜಾ । ಸಸ್ನೀ ಇತಿ । ವಾಜೇಷು । ಕರ್ಮऽಸು ।**
**ಇಂದ್ರಾಗ್ನೀ ಇತಿ । ತಸ್ಯ । ಬೋಧತಂ ॥ ೧ ॥**

॥ ಸಾಯಣಭಾಷ್ಯಂ ॥

**ಹೇ ಇಂದ್ರಾಗ್ನೀ ಸಸ್ನೀ ಶುದ್ಧೌ ಯುವಾಂ ಯಜಸ್ಯರ್ತ್ವಿಜಾ ಋತ್ವಿಜೌ ಸ್ಥಃ । ಭವಥಃ । ವಾಜೇಷು ಕರ್ಮಸು ಯುದ್ಧೇಷು ವೋಽಪತಿಷ್ಠಂತಾವಿಂದ್ರಾಗ್ನೀ ತಸ್ಯ ತಂ ಮಾಂ ತಸ್ಯ ಮಮ ಸ್ತುತಿಂ ವಾ ಬೋಧತಂ । ಜಾನೀತಂ ॥**

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರಾಗ್ನಿಗಳೇ । **ಸಸ್ನೀ**—ಪರಿಶುದ್ಧರಾದ ನೀವು । **ಯಜ್ಞಸ್ಯ—ಯಜ್ಞಕ್ಕೆ** । **ಋತ್ವಿಜಾ**—ಋತ್ವಿಗ್ರೂಪದಲ್ಲಿ । **ಸ್ಥಃ ಹಿ**—ಇರುತ್ತೀರಲ್ಲವೇ । **ವಾಜೇಷು**—ಯುದ್ಧಗಳಲ್ಲಿಯೂ । **ಕರ್ಮಸು**—ಯಜ್ಞಕರ್ಮಗಳಲ್ಲಿಯೂ । **ತಸ್ಯ**—ನನ್ನ ಸ್ತುತಿಯನ್ನು । **ಬೋಧತಂ**—ತಿಳಿಯಿರಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ಪರಿಶುದ್ಧರಾದ ನೀವು ಯಜ್ಞಕ್ಕೆ ಋತ್ವಿಗ್ರೂಪದಲ್ಲಿರುತ್ತೀರಲ್ಲವೇ. ಯಜ್ಞ ಗಳಲ್ಲಿಯೂ ನನ್ನ ಸ್ತುತಿಯನ್ನು ತಿಳಿಯಿರಿ.

## English Translation

Indra and Agni, you are the pure ministrants,:(encouragers) in offerings and sacred rites,—hear (the praise) of this (your worshipper).

॥ ಸಂಹಿತಾಪಾಠಃ ॥

ತೋಶಾಸಾ ರಥಯಾವಾನಾ ವೃತ್ರಹಣಾಪರಾಜಿತಾ ।

ಇಂದ್ರಾಗ್ನೀ ತಸ್ಯ ಬೋಧತಂ ॥ ೨ ॥

॥ ಪದಪಾಠಃ ॥

ತೋಶಾಸಾ । ರಥಽಯಾವಾನಾ । ವೃತ್ರಽಹನಾ । ಅಪರಾಽಜಿತಾ ।

ಇಂದ್ರಾಗ್ನೀ ಇತಿ । ತಸ್ಯ । ಬೋಧತಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ತೋಶಾಸಾ ಶತ್ರೂನ್ ಹಿಂಸಂತೌ ರಥಯಾವಾನಾ ರಥೇನ ಗಚ್ಛಂತೌ ವೃತ್ರಹಣಾ ವೃತ್ರಸ್ಯ ಹಂತಾರಾಪರಾಜಿತಾ ಕೇನಾಪ್ಯಪರಾಜಿತೌ ತಸ್ಯ ತಂ ಮಾಂ ಬೋಧತಂ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರ ಮತ್ತು ಅಗ್ನಿ ದೇವತೆಗಳೇ । **ತೋಶಾಸಾ**—ಶತ್ರುಹಿಂಸಕರೂ । **ರಥಯಾವಾನಾ**—ರಥದಲ್ಲಿ ಸಂಚರಿಸುವವರೂ । **ವೃತ್ರಹಣಾ**—ಶತ್ರುಹಂತಕರೂ । **ಅಪರಾಜಿತಾ**—ಯಾರಿಂದಲೂ ಸೋಲಿಸಲ್ಪಡದವರೂ ಆದ ನೀವು । **ತಸ್ಯ**—ನನ್ನ ಈ ಸ್ತುತಿಯನ್ನು । **ಬೋಧತಂ**—ಅರಿಯಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಶತ್ರುಹಿಂಸಕರೂ, ರಥದಲ್ಲಿ ಸಂಚರಿಸುವವರೂ ವೃತ್ರ (ಶತ್ರು) ಹಂತಕರೂ, ಯಾರಿಂದಲೂ ಸೋಲಿಸಲ್ಪಡದವರೂ ಆದ ನೀವು ನನ್ನ ಈ ಸ್ತುತಿಯನ್ನು ಅರಿಯಿರಿ.

## English Translation.

Destroyers (of foes), riding in one chariot, slayers of Vritra, invincible; hear, Indra and Agni, (the praise) of this (your worshipper).

॥ ಸಂಹಿತಾಪಾಠಃ ॥

ಇದಂ ವಾಂ ಮದಿರಂ ಮಧ್ವಧುಕ್ಷನ್ನದ್ರಿಭಿರ್ನರಃ ।
ಇಂದ್ರಾಗ್ನೀ ತಸ್ಯ ಬೋಧತಂ ॥ ೩ ॥

॥ ಪದಪಾಠಃ ॥

ಇದಂ । ವಾಂ । ಮದಿರಂ । ಮಧು । ಅಧುಕ್ಷನ್ । ಅದ್ರಿಽಭಿಃ । ನರಃ ।
ಇಂದ್ರಾಗ್ನೀ ಇತಿ । ತಸ್ಯ । ಬೋಧತಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ವಾಂ ಯುವಾಮುದ್ದಿಶ್ಯ ನರೋ ಯಜ್ಞಸ್ಯ ನೇತಾರೋಽದ್ರಿಭಿರ್ಗ್ರಾವಭಿರ್ಮದಿರಂ ಮದಕರಂ ಮಧು ಸೋಮಾತ್ಮಕಮಮೃತಮಧುಕ್ಷನ್ । ಅಪೂರಯನ್ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಇಂದ್ರಾಗ್ನೀ**—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ವಾಂ**—ನಿಮ್ಮನ್ನುದ್ದೇಶಿಸಿ । **ನರಃ**—ಯಜ್ಞನೇತೃಗಳಾದ ಋತ್ವಿಕ್ಕುಗಳು । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಮದಿರಂ**—ಮದಕಾರಕವಾದ । **ಇದಂ ಮಧು**—ಈ ಸೋಮವನ್ನು । **ಅಧುಕ್ಷನ್**—ಹಿಂಡಿ ಸಿದ್ಧಪಡಿಸಿದ್ದಾರೆ । **ತಸ್ಯ**—ನಿಮ್ಮ ಈ ಆರಾಧಕನ ಸ್ತುತಿಯನ್ನು । **ಬೋಧತಂ**—ಅರಿಯಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ನಿಮ್ಮನ್ನುದ್ದೇಶಿಸಿ ಯಜ್ಞನೇತೃಗಳಾದ ಋತ್ವಿಕ್ಕುಗಳು ಹಿಂಡುವ ಕಲ್ಲುಗಳಿಂದ ಮದಕಾರಕವಾದ ಈ ಸೋಮವನ್ನು ಹಿಂಡಿ ಸಿದ್ಧಪಡಿಸಿದ್ದಾರೆ. ನನ್ನ ಈ ಸ್ತುತಿಯನ್ನು ಅರಿಯಿರಿ.

## English Translation.

The leaders of rites have effused by the stones this sweet exhilarating (beverage) for you ; hear, Indra and Agni, (the praise) of this (your worshipper).

॥ ಸಂಹಿತಾಪಾಠಃ ॥

ಜುಷೇಥಾಂ ಯಜ್ಞಮಿಷ್ಟಯೇ ಸುತಂ ಸೋಮಂ ಸಧಸ್ತುತೀ ।
ಇಂದ್ರಾಗ್ನೀ ಆ ಗತಂ ನರಾ ॥ ೪ ॥

|| ಪದಪಾಠಃ ||

ಜುಷೇಥಾಂ । ಯಜ್ಞಂ । ಇಷ್ಟಯೇ । ಸುತಂ । ಸೋಮಂ । ಸಧಸ್ತುತೀ ಇತಿ ಸಧಽಸ್ತುತೀ ।

ಇಂದ್ರಾಗ್ನೀ ಇತಿ । ಆ । ಗತಂ । ನರಾ ॥ ೪ ॥

|| ಸಾಯಣಭಾಷ್ಯಂ ||

ಹೇ ಸಧಸ್ತುತೀ ಸಹಭೂತಸ್ತುತೀ ನರಾ ನೇತಾರಾವಿಂದ್ರಾಗ್ನೀ ಯಜ್ಞಂ ಜುಷೇಥಾಂ । ಸೇವೇಥಾಂ । ಇಷ್ಟಯೇ ಯಾಗಾಯ ಸುತಮಭಿಷುತಂ ಸೋಮಂ ಚಾ ಗತಂ । ಆಗಚ್ಛತಂ ॥

|| ಪ್ರತಿಪದಾರ್ಥ ||

**ಸಧಸ್ತುತೀ**—ಒಟ್ಟಿಗೆ ಪ್ರಶಂಸಿತರಾಗತಕ್ಕವರೂ । **ನರಾ**—ಯಜ್ಞನೇತೃಗಳೂ ಆದ । **ಇಂದ್ರಾಗ್ನೀ**—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ಯಜ್ಞಂ**—ನಮ್ಮ ಯಜ್ಞವನ್ನು । **ಜುಷೇಥಾಂ**—ಸೇವಿಸಿರಿ । **ಇಷ್ಟಯೇ**—ಯಾಗಾರ್ಥವಾಗಿ । **ಸುತಂ**—ಹಿಂಡಿರುವ । **ಸೋಮಂ**—ಸೋಮಾಭಿಮುಖವಾಗಿ । **ಆ ಗತಂ**—ಬನ್ನಿರಿ.

|| ಭಾವಾರ್ಥ ||

ಒಟ್ಟಿಗೆ ಪ್ರಶಂಸಿತರಾಗತಕ್ಕವರೂ, ಯಜ್ಞನೇತೃಗಳೂ ಆದ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ನಮ್ಮ ಈ ಯಜ್ಞವನ್ನು ಸೇವಿಸಿರಿ. ಯಾಗಾರ್ಥವಾಗಿ ಹಿಂಡಿರುವ ಸೋಮಾಭಿಮುಖವಾಗಿ ಬನ್ನಿರಿ.

## English Translation.

Associated in praise, accept the sacrifice ; leaders of rites, Indra and Agni, come hither to the Soma effused for this solemnity.

|| ಸಂಹಿತಾಪಾಠಃ ||

ಇಮಾ ಜುಷೇಥಾಂ ಸವನಾ ಯೇಭಿರ್ಹವ್ಯಾನ್ಯೂಹಥುಃ ।

ಇಂದ್ರಾಗ್ನೀ ಆ ಗತಂ ನರಾ ॥ ೫ ॥

|| ಪದಪಾಠಃ ||

ಇಮಾ । ಜುಷೇಥಾಂ । ಸವನಾ । ಯೇಭಿಃ । ಹವ್ಯಾನಿ । ಊಹಥುಃ ।

ಇಂದ್ರಾಗ್ನೀ ಇತಿ । ಆ । ಗತಂ । ನರಾ ॥ ೫ ॥

|| ಸಾಯಣಭಾಷ್ಯಂ ||

ಹೇ ಇಂದ್ರಾಗ್ನೀ ನರಾ ನೇತಾರೌ ಯುವಾಂ ಯೇಭಿರ್ಯೈಃ ಸವನೈರ್ಹವ್ಯಾನ್ಯೂಹಥುಃ ವಹಥಃ ತಾನೀಮಾನಿ ಸವನಾ ಸವನಾನಿ ಜುಷೇಥಾಂ । ಸೇವೇಥಾಂ । ಆ ಗತಂ ಚ ॥

॥ ಪ್ರತಿಪದಾರ್ಥ ॥

ನರಾ—ಯಜ್ಞನೇತೃಗಳಾದ । ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ಯೇಭಿಃ**—ಯಾವ ಸವನಗಳಿಂದ । **ಹವ್ಯಾನಿ**—ಹವಿಸ್ಸುಗಳನ್ನು । **ಊಹಥುಃ**—ನೀವು ವಹಿಸುವಿರೋ । **ಇಮಾ ಸವನಾ**—ಅಂತಹ ಈ ಸವನಗಳನ್ನು । **ಜುಷೇಥಾಂ**—ಸೇವಿಸಿರಿ । **ಆ ಗತಂ**—ಇಲ್ಲಿಗೆ ಬನ್ನಿರಿ.

॥ ಭಾವಾರ್ಥ ॥

ಯಜ್ಞನೇತೃಗಳಾದ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಯಾವ ಸವನಗಳಿಂದ ನೀವು ಹವಿಸ್ಸುಗಳನ್ನು ವಹಿಸುವಿರೋ ಅಂತಹ ಈ ಸವನಗಳನ್ನು ಸೇವಿಸಿರಿ. ಇಲ್ಲಿಗೆ ಬನ್ನಿರಿ.

English Translation.

Accept these sacrifices whereby you have borne away the **oblations**; leaders of rites, Indra and Agni come hither.

|| ಸಂಹಿತಾಪಾಠಃ ||

ಇಮಾಂ ಗಾಯತ್ರವರ್ತನಿಂ ಜುಷೇಥಾಂ ಸುಷ್ಟುತಿಂ ಮಮ ।
ಇಂದ್ರಾಗ್ನೀ ಆ ಗತಂ ನರಾ ॥ ೬ ॥

॥ ಪದಪಾಠಃ ॥

ಇಮಾಂ । ಗಾಯತ್ರಽವರ್ತನಿಂ । ಜುಷೇಥಾಂ । ಸುಽಸ್ತುತಿಂ । ಮಮ ।
ಇಂದ್ರಾಗ್ನೀ ಇತಿ । ಆ । ಗತಂ । ನರಾ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ನರೌ ಯುವಾಂ ಮಮ ಗಾಯತ್ರವರ್ತನಿಂ ಗಾಯತ್ರಮಾರ್ಗಾಮಿಮಾಂ ಸುಷ್ಟುತಿಂ ಶೋಭನಾಂ ಸ್ತುತಿಂ ಜುಷೇಥಾಂ । ಸೇವೇಥಾಂ । ಆ ಗತಂ ಚ ॥

। ಪ್ರತಿಪದಾರ್ಥ ।

ನರಾ—ನೇತೃಗಳಾದ । ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ಮಮ**—ನನ್ನಿಂದ ಪಠಿತವಾಗುವುದೂ । **ಗಾಯತ್ರವರ್ತನಿಂ**—ಗಾಯತ್ರಿಯ ಪ್ರಮಾಣವನ್ನು ಅನುಸರಿಸುವುದೂ । **ಇಮಾಂ**

**ಸುಷ್ಟುತಿಂ**—ಶ್ರೇಷ್ಠವಾದುದೂ ಆದ ಈ ಸ್ತುತಿಯನ್ನು । **ಜುಷೇಥಾಂ**—ಸೇವಿಸಿರಿ । **ಆ ಗತಂ**—ಇಲ್ಲಿಗೆ **ದಯಮಾಡಿರಿ.**

॥ ಭಾವಾರ್ಥ ॥

ನೇತೃಗಳಾದ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ನನ್ನಿಂದ ಪಠಿತವಾಗುವುದೂ, ಗಾಯತ್ರಿಯ ಪ್ರಮಾಣವನ್ನು ಅನುಸರಿಸುವುದೂ, ಶ್ರೇಷ್ಠವಾದುದೂ ಆದ ಈ ಸ್ತುತಿಯನ್ನು ಸೇವಿಸಿರಿ. ಇಲ್ಲಿಗೆ ದಯಮಾಡಿರಿ

English Translation.

Accept this my earnest praise, following the path of the Gayatri ; leaders of rites, Indra and agni, come hither.

॥ ಸಂಹಿತಾಪಾಠಃ ॥

ಪ್ರಾತರ್ಯಾವಭಿರಾ ಗತಂ ದೇವೇಭಿರ್ಜೇನ್ಯಾವಸೂ ।

ಇಂದ್ರಾಗ್ನೀ ಸೋಮಪೀತಯೇ ॥ ೭ ॥

॥ ಪದಪಾಠಃ ॥

ಪ್ರಾತರ್ಯಾವಽಭಿಃ । ಆ । ಗತಂ । ದೇವೇಭಿಃ । ಜೇನ್ಯಾವಸೂ ಇತಿ ।

ಇಂದ್ರಾಗ್ನೀ ಇತಿ । ಸೋಮಽಪೀತಯೇ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಜೇನ್ಯಾವಸೂ ಜೇತವ್ಯಶತ್ರುಧನಾವಿಂದ್ರಾಗ್ನೀ ಪ್ರಾತರ್ಯಾವಭಿರ್ದೇವೈಃ ಸಹ ಸೋಮಪೀತಯೇ ಸೋಮಸ್ಯ ಪಾನಾಯಾ ಗತಂ । ಆಗಚ್ಛತಂ ॥**

॥ ಪ್ರತಿಪದಾರ್ಥ ॥

**ಜೇನ್ಯಾವಸೂ**—ಶತ್ರುಗಳಿಂದ ಅಪಹರಿಸಿದ ಧನವುಳ್ಳ । **ಇಂದ್ರಾಗ್ನೀ**—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ಪ್ರಾತರ್ಯಾವಭಿಃ**—ಪ್ರಾತಃಸವನಕ್ಕೆ ಬರುವ । **ದೇವೇಭಿಃ**—ದೇವತೆಗಳೊಡನೆ । **ಸೋಮಪೀತಯೇ**—ಸೋಮಪಾನಾರ್ಥವಾಗಿ । **ಆ ಗತಂ**—ದಯಮಾಡಿರಿ.

॥ ಭಾವಾರ್ಥ ॥

ಶತ್ರುಗಳಿಂದ ಅಪಹರಿಸಿದ ಧನವುಳ್ಳ ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಪ್ರಾತಃಸವನಕ್ಕೆ ಬರುವ ದೇವತೆಗಳೊಡನೆ ಸೋಮಪಾನಾರ್ಥವಾಗಿ ದಯಮಾಡಿರಿ.

## English Translation.

Rich with the spoils of victory, come, Indra and Agni, to **drink of the** Soma, with the deities astir in the morning.

॥ ಸಂಹಿತಾಪಾಠಃ ॥

ಶ್ಯಾವಾಶ್ವಸ್ಯ ಸುನ್ವತೋಽತ್ರೀಣಾಂ ಶೃಣುತಂ ಹವಂ ।
ಇಂದ್ರಾಗ್ನೀ ಸೋಮಪೀತಯೇ ॥ ೮ ॥

॥ ಪದಪಾಠಃ ॥

ಶ್ಯಾವಽಅಶ್ವಸ್ಯ । ಸುನ್ವತಃ । ಅತ್ರೀಣಾಂ । ಶೃಣುತಂ । ಹವಂ ।
ಇಂದ್ರಾಗ್ನೀ ಇತಿ । ಸೋಮಽಪೀತಯೇ ॥ ೮ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರಾಗ್ನೀ ಯುವಾಂ ಸುನ್ವತಃ ಸೋಮಾಭಿಷವಂ ಕುರ್ವತೋ ಯಜಮಾನಸ್ಯ ಶ್ಯಾವಾಶ್ವಸ್ಯ ಮಮಾತ್ರೀಣಾಮೃತ್ವಿಜಾಂ ಹವಂ ಹ್ವಾನಂ ಸೋಮಸ್ಯ ಪಾನಾಯ ಶೃಣುತಂ ॥**

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ಸುನ್ವತಃ**—ಸೋಮವನ್ನು ಹಿಂಡಿ **ಅರ್ಪಿಸುವ** । **ಶ್ಯಾವಾಶ್ವಸ್ಯ**—ಶ್ಯಾವಾಶ್ವನೆಂಬ ನನ್ನ । **ಹವಂ**—ಪ್ರಾರ್ಥನೆಯನ್ನೂ । **ಅತ್ರೀಣಾಂ**—ಋತ್ವಿಕ್ಕುಗಳಾದ ಅತ್ರಿ ವಂಶದವರ ಪ್ರಾರ್ಥನೆಯನ್ನೂ । **ಸೋಮಸ್ಯ**—ಸೋಮದ । **ಪೀತಯೇ**—ಪಾನಕ್ಕಾಗಿ । **ಶೃಣುತಂ**—ಕೇಳಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ಸೋಮವನ್ನು ಹಿಂಡಿ ಅರ್ಪಿಸುವ ಶ್ಯಾವಾಶ್ವನೆಂಬ ನನ್ನ ಪ್ರಾರ್ಥನೆಯನ್ನೂ, ಋತ್ವಿಕ್ಕುಗಳಾದ ಅತ್ರಿವಂಶದವರ ಪ್ರಾರ್ಥನೆಯನ್ನೂ ಸಹ ಸೋಮದ ಪಾನಕ್ಕಾಗಿ ಕೇಳಿರಿ.

## English Translation.

Hear the invocation, Indra and Agni, of Shyavasha pouring out the effused juice, (and) the Atris to drink of the Soma.

॥ ಸಂಹಿತಾಪಾಠಃ ॥

ಏವಾ ವಾಮಹ್ವ ಊತಯೇ ಯಥಾಹುವಂತ ಮೇಧಿರಾಃ ।
ಇಂದ್ರಾಗ್ನೀ ಸೋಮಪೀತಯೇ ॥ ೯ ॥

॥ ಪದಪಾಠಃ ॥

ಏವ । ವಾಂ । ಅಹ್ವೇ । ಊತಯೇ । ಯಥಾ । ಅಹುವಂತ । ಮೇಧಿರಾಃ ।

ಇಂದ್ರಾಗ್ನೀ ಇತಿ । ಸೋಮಪೀತಯೇ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ವಾಂ ಯುವಾಂ ಯಥಾ ಮೇಧಿರಾಃ ಪ್ರಾಜ್ಞಾ ಅಹುವಂತ ಆಹೂತವಂತಃ ಏವಮಹಮೂತಯೇ ರಕ್ಷಣಾಯ ಸೋಮಸ್ಯ ಪೀತಯೇ ಚಾಹ್ವೇ । ಹ್ವಯಾಮಿ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ವಾಂ**—ನಿಮ್ಮನ್ನು । **ಯಥಾ**—ಯಾವ ರೀತಿಯಲ್ಲಿ । **ಮೇಧಿರಾಃ**—ಪ್ರಾಜ್ಞರಾದ ಋಷಿಗಳೆಲ್ಲರೂ । **ಅಹುವಂತ**—ಕರೆದರೋ । **ಏವ**-ಅದೇ ರೀತಿ । **ಊತಯೇ**—ರಕ್ಷಣಾರ್ಥವಾಗಿಯೂ । **ಸೋಮಪೀತಯೇ**—ಸೋಮಪಾನಾರ್ಥವಾಗಿಯೂ । **ಅಹ್ವೇ**—ನಾನೂ ಕರೆಯುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ನಿಮ್ಮನ್ನು ಯಾವ ರೀತಿಯಲ್ಲಿ ಪ್ರಾಜ್ಞರಾದ ಋಷಿಗಳೆಲ್ಲರೂ ಕರೆದರೋ ಅದೇ ರೀತಿ ನಾನೂ ಸಹ ರಕ್ಷಣಾರ್ಥವಾಗಿಯೂ, ಸೋಮಪಾನಾರ್ಥವಾಗಿಯೂ ಕರೆಯುತ್ತೇನೆ.

## English Translation.

I invoke you both, Indra and Agni, as the sages have invoked you, for your protection, (and) to drink of the Soma.

॥ ಸಂಹಿತಾಪಾಠಃ ॥

ಅಹಂ ಸರಸ್ವತೀವತೋರಿಂದ್ರಾಗ್ನ್ಯೋರವೋ ವೃಣೇ ।

ಯಾಭ್ಯಾಂ ಗಾಯತ್ರಮೃಚ್ಯತೇ ॥ ೧೦ ॥

॥ ಪದಪಾಠಃ ॥

ಆ । ಅಹಂ । ಸರಸ್ವತೀಽವತೋಃ । ಇಂದ್ರಾಗ್ನ್ಯೋಃ । ಅವಃ । ವೃಣೇ ।

ಯಾಭ್ಯಾಂ । ಗಾಯತ್ರಂ । ಋಚ್ಯತೇ ॥ ೧೦ ॥

॥ ಸಾಯಣಭಾಷ್ಯಂ ॥

ಯಾಭ್ಯಾಂ ಯಯೋರಿಂದ್ರಾಗ್ನ್ಯೋರರ್ಥಂ ಗಾಯತ್ರಂ ಸಾಮರ್ಚ್ಯತೇ ಸ್ತೂಯತೇ ತಯೋಃ ಸರಸ್ವತೀವತೋಃ ಸ್ತುತಿಮತೋರಿಂದ್ರಾಗ್ನ್ಯೋಃ ಸಂಬಂಧ್ಯವೋ ರಕ್ಷಣಮಹಮಾ ವೃಣೇ ॥ ೨೧ ॥

॥ ಪ್ರತಿಪದಾರ್ಥ ॥

**ಸರಸ್ವತೀವತೋಃ**-ಸ್ತುತಿಯುಕ್ತರಾದ | **ಯಾಭ್ಯಾಂ**-ಯಾವ ಇಂದ್ರಾಗ್ನಿಗಳನ್ನುದ್ದೇಶಿಸಿ | **ಗಾಯತ್ರಂ**-ಗಾಯತ್ರರೂಪವಾದ ಸಾಮವು | **ಋಚ್ಯತೇ**--ಪಠಿತವಾಗುವುದೋ ಅಂತಹ | **ಇಂದ್ರಾಗ್ನ್ಯೋಃ**—ಇಂದ್ರ ಮತ್ತು ಅಗ್ನಿದೇವತೆಗಳ | **ಅವಃ**—ರಕ್ಷಣವನ್ನು | **ಅಹಂ**---ನಾನು | **ಆ ವೃಣೇ**—ಪ್ರಾರ್ಥಿಸುತ್ತೇನೆ.

॥ ಭಾವಾರ್ಥ ॥

ಸ್ತುತಿಯುಕ್ತರಾದ ಯಾವ ಇಂದ್ರಾಗ್ನಿಗಳನ್ನುದ್ದೇಶಿಸಿ ಗಾಯತ್ರರೂಪವಾದ ಸಾಮವು ಪಠಿತವಾಗುವುದೋ ಅಂತಹ ಇಂದ್ರ ಮತ್ತು ಅಗ್ನಿದೇವತೆಗಳ ರಕ್ಷಣವನ್ನು ನಾನು ಪ್ರಾರ್ಥಿಸುತ್ತೇನೆ.

English Translation.

I solicit the protection of Indra and Agni, associated with Saraswati, to whom this Gayatri hymn is addressed.



# ಮೂವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಗ್ನಿಮಸ್ತೋಷೀತಿ ದಶರ್ಚಂ ನವಮಂ ಸೂಕ್ತಂ ಕಾಣ್ವಸ್ಯ ನಾಭಾಕಸ್ಯಾರ್ಷಂ | ಷಡಷ್ಟಕಾ | ಮಹಾಪಂಕ್ತಿಶ್ಛಂದಃ | ಅಗ್ನಿರ್ದೇವತಾ | ಅನುಕ್ರಾಂತಂ ಚ | ಅಗ್ನಿಮಸ್ತೋಷಿ ನಾಭಾಕ ಆಗ್ನೇಯಂ ಮಹಾಪಾಂಕ್ತಂ ಹೀತಿ ॥ ವಿನಿಯೋಗೋ ಲೈಂಗಿಕಃ ॥

ಅನುವಾದವು—**ಅಗ್ನಿಮಸ್ತೋಷಿ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಗೋತ್ರೋದ್ಭವನಾದ ನಾಭಾಕನೆಂಬುವನು ಋಷಿಯು; ಅಗ್ನಿಯು ದೇವತೆಯು; ಎಂಟು ಅಕ್ಷರಗಳ ಆರು ಪಾದಗಳುಳ್ಳ ಮಹಾಪಂಕ್ತಿಶ್ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಅಗ್ನಿಮಸ್ತೋಷಿ ನಾಭಾಕ ಆಗ್ನೇಯಂ ಮಹಾಪಾಂಕ್ತಂ ಹಿ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೩೯

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೩೯ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೨೨, ೨೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ನಾಭಾಕಃ ಕಾಣ್ವಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ಮಹಾಪಂಕ್ತಿಃ ॥

॥ ಸಂಹಿತಾಪಾಠಃ ॥

ಅಗ್ನಿಮಸ್ತೋಷ್ಯೃಗ್ಮಿಯಮಗ್ನಿಮೀಳಾ ಯಜಧ್ಯೈ ।
ಅಗ್ನಿರ್ದೇವಾಁ ಅನಕ್ತು ನ ಉಭೇ ಹಿ ವಿದಥೇ ಕವಿರಂತಶ್ಚರತಿ ದೂತ್ಯಂ ೧
ನಭಂತಾಮನ್ಯಕೇ ಸಮೇ ॥ ೧ ॥

॥ ಪದಪಾಠಃ ॥

ಅಗ್ನಿಂ । ಅಸ್ತೋಷಿ । ಋಗ್ಮಿಯಂ । ಅಗ್ನಿಂ । ಈಳಾ । ಯಜಧ್ಯೈ ।
ಅಗ್ನಿಃ । ದೇವಾನ್ । ಅನಕ್ತು । ನಃ । ಉಭೇ ಇತಿ । ಹಿ । ವಿದಥೇ ಇತಿ । ಕವಿಃ । ಅಂತರಿತಿ । ಚರತಿ ।
ದೂತ್ಯಂ । ನಭಂತಾಂ । ಅನ್ಯಕೇ । ಸಮೇ ॥ ೧ ॥

॥ ಸಾಯಣಭಾಷ್ಯಂ ॥

ಋಗ್ಮಿಯಮೃಗರ್ಹಮಗ್ನಿಮಸ್ತೋಷಿ । ಸ್ತೌಮಿ । ಅಪಿ ಚಾಗ್ನಿಂ ಯಜಧ್ಯೈ ಯಷ್ಟುಮೀಳಾ ಸ್ತುತ್ಯಾ ಸ್ತೌಮೀತ್ಯರ್ಥಃ । ಅಪಿ ಚಾಗ್ನಿರ್ನೋಽಸ್ಮಾಕಂ ವಿದಥೇ ಯಜ್ಞೇ ದೇವಾನ್ ಹವಿರ್ಭಿರನಕ್ತು । ಕವಿಃ ಕ್ರಾಂತದರ್ಶ್ಯಗ್ನಿರುಭೇ ದ್ಯಾವಾಪೃಥಿವ್ಯಾವಂತರ್ದೂತ್ಯಂ ಹವಿರ್ವಹನಾದಿಲಕ್ಷಣಂ ದೂತಕರ್ಮ ಚರತಿ । ಅನ್ಯಕೇ ಶತ್ರವೋಽಪಿ ಸಮೇ ಸರ್ವೇ ನಭಂತಾಂ । ನಭತಿರ್ಹಿಂಸಾಕರ್ಮಾ । ಅಗ್ನಿನಾ ಹಿಂಸ್ಯಂತಾಂ ॥

॥ ಪ್ರತಿಪದಾರ್ಥ ॥

**ಋಗ್ಮಿಯಂ**—ಪೂಜಾರ್ಹನಾದ । **ಅಗ್ನಿಂ**—ಅಗ್ನಿಯನ್ನು । **ಅಸ್ತೋಷಿ**—ಸ್ತುತಿಸುತ್ತೇನೆ । **ಅಗ್ನಿಂ**—ಅಗ್ನಿಯನ್ನು । **ಯಜಧ್ಯೈ**—ಯಜ್ಞಮಾಡಲು । **ಈಳಾ**—ಸ್ತುತಿಯಿಂದ ಪ್ರಶಂಸಿಸುತ್ತೇನೆ । **ಅಗ್ನಿಃ**—ಅಗ್ನಿಯು । **ನಃ**—ನಮ್ಮ । **ವಿದಥೇ**—ಯಜ್ಞದಲ್ಲಿ । **ದೇವಾನ್**—ದೇವತೆಗಳನ್ನು । **ಅನಕ್ತು**—ಪ್ರಕಾಶಿಸುವಂತೆ ಮಾಡಲಿ । **ಕವಿಃ**—ಕ್ರಾಂತದರ್ಶಿಯಾದ ಅಗ್ನಿಯು । **ಉಭೇ ಹಿ**—ದ್ಯಾವಾಪೃಥಿವಿಗಳೆರಡರ ।

**ಅಂತಃ**--ಮಧ್ಯಭಾಗದಲ್ಲಿ ! **ದೂತ್ಯಂ**—ಹವಿಸ್ಸನ್ನು ವಹಿಸುವ ದೂತಕರ್ಮವನ್ನು | **ಚರತಿ**—ನೆರವೇರಿಸುತ್ತಾನೆ | **ಅನ್ಯಕೇ** – ನಮ್ಮ ಶತ್ರುಗಳೆಲ್ಲರೂ | **ಸಮೇ**—ಒಟ್ಟಿಗೆ | **ನಭಂತಾಂ**—ನಾಶವಾಡಲ್ಪಡಲಿ.

|| ಭಾವಾರ್ಥ ||

ಪೂಜಾರ್ಹನಾದ ಅಗ್ನಿಯನ್ನು ಸ್ತುತಿಸುತ್ತೇನೆ. ಯಜ್ಞಮಾಡಲು ಅಗ್ನಿಯನ್ನು ಸ್ತುತಿಯಿಂದ ಪ್ರಶಂಸಿಸುತ್ತೇನೆ. ಅಗ್ನಿಯು ನಮ್ಮ ಯಜ್ಞದಲ್ಲಿ ದೇವತೆಗಳನ್ನು ಪ್ರಕಾಶಿಸುವಂತೆ ಮಾಡಲಿ. ಕ್ರಾಂತದರ್ಶಿಯಾದ ಅಗ್ನಿಯು ದ್ಯಾವಾಪೃಥಿವಿಗಳೆರಡರ ಮಧ್ಯಭಾಗದಲ್ಲಿ ಹವಿಸ್ಸನ್ನು ವಹಿಸುವ ದೂತಕರ್ಮವನ್ನು ನೆರವೇರಿಸುತ್ತಾನೆ. ನಮ್ಮ ಶತ್ರುಗಳೆಲ್ಲರೂ ಒಟ್ಟಿಗೆ ನಾಶವಾಡಲ್ಪಡಲಿ.

## English Translation.

I glorify the adorable Agni, (I invite) Agni with praise to the acrifice, may Agni brighten the gods with the oblations at our sacrifice : the sage Agni traverses both (worlds, discharging his function) as messenger of the gods ; may all our adversaries perish.

|| ಸಂಹಿತಾಪಾಠಃ ||

ನ್ಯಗ್ನೇ ನವ್ಯಸಾ ವಚಸ್ತನೂಷು ಶಂಸಮೇಷಾಂ |
ನ್ಯರಾತೀ ರರಾವ್ಣಾಂ ವಿಶ್ವಾ ಅರ್ಯೋ ಅರಾತೀರಿತೋ ಯುಚ್ಛಂತ್ವಾ-
ಮುರೋ ನಭಂತಾಮನ್ಯಕೇ ಸಮೇ || ೨ ||

|| ಪದಪಾಠಃ ||

ನಿ | ಅಗ್ನೇ | ನವ್ಯಸಾ | ವಚಃ | ತನೂಷು | ಶಂಸಂ | ಏಷಾಂ |
ನಿ | ಅರಾತೀಃ | ರರಾವ್ಣಾಂ | ವಿಶ್ವಾಃ | ಅರ್ಯಃ | ಅರಾತೀಃ | ಇತಃ | ಯುಚ್ಛಂತು | ಆಽಮುರಃ |
ನಭಂತಾಂ | ಅನ್ಯಕೇ | ಸಮೇ || ೨ ||

|| ಸಾಯಣಭಾಷ್ಯಂ ||

ಹೇ ಅಗ್ನೇ ತನೂಷ್ವಸ್ಮಾಕಮಂಗೇಷು ನವ್ಯಸಾ ನವತರೇಣ ವಚೋ ವಚಸಾ ಸ್ತೋತ್ರೇಣೈಷಾಂ ಶತ್ರೂಣಾಂ ಶಂಸಂ ಶಂಸನಂ ನಿ ದಹೇತ್ಯರ್ಥಃ | ರರಾವ್ಣಾಂ ಹವಿಃ ಪ್ರಯಚ್ಛತಾಮರಾತೀಃ ಶತ್ರೂಂಶ್ಚ ನಿದಹ | ಅಪಿ ಚ ವಿಶ್ವಾಃ ಸರ್ವೇಽರ್ಯೋಽಭಿಗಚ್ಛಂತ ಆಮುರ ಆಮೂಢಾ ಅರಾತೀಃ ಶತ್ರವ ಇತೋ ಯುಚ್ಛಂತು | ಗಚ್ಛಂತು | ಸಿದ್ಧಮನ್ಯತ್ ||

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ | **ನವ್ಯಸಾ**—ನೂತನವಾದ | **ವಚಃ**—ನಮ್ಮ ಸ್ತೋತ್ರದಿಂದ (ಹರ್ಷಿತನಾಗಿ) | **ತನೂಷು**—ನಮ್ಮ ಮೇಲೆ ಕೈಮಾಡುವ | **ಏಷಾಂ**—ಈ ಶತ್ರುಗಳ | **ಶಂಸಂ**—ದುಷ್ಟನಾದ ಆಸೆಯನ್ನು | **ನಿ (ದಹ)**—ಪೂರ್ಣವಾಗಿ ನಾಶಪಡಿಸು | **ರರಾವ್ಣಾಂ**—ಹವಿಸ್ಸನ್ನು ಅರ್ಪಿಸುವವರ (ಯಜಮಾನರ) | **ಅರಾತೀಃ**—ಶತ್ರುಗಳನ್ನು | **ನಿ(ದಹ)**—ಪೂರ್ಣವಾಗಿ ನಾಶಮಾಡು | **ಅರ್ಯಃ**—ನಮ್ಮೆದುರು ಬೀಳುವವರೂ | **ಅಮುರಃ**—ಅವಿವೇಕಿಗಳೂ ಆದ | **ವಿಶ್ವಾಃ ಅರಾತೀಃ**—ನಮ್ಮ ಸಕಲ ಶತ್ರುಗಳೂ | **ಇತಃ**—ಈ ಪ್ರದೇಶದಿಂದ | **ಯುಚ್ಛಂತು**—ದೂರಕ್ಕೆ ಓಡಿಹೋಗಲಿ | **ಅಸ್ಮಕೇ**—ನಮ್ಮ ಶತ್ರುಗಳೆಲ್ಲ | **ಸಮೋ**—ಒಂದೇ ಕಾಲದಲ್ಲಿ | **ನಭಂತಾಂ**—ನಾಶಮಾಡಲ್ಪಡಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೂತನವಾದ ನಮ್ಮ ಸ್ತೋತ್ರದಿಂದ ಹರ್ಷಿತನಾಗಿ ನಮ್ಮ ಮೇಲೆ ಕೈಮಾಡುವ ಈ ಶತ್ರುಗಳ ದುಷ್ಟವಾದ ಆಸೆಯನ್ನು ಪೂರ್ಣವಾಗಿ ನಾಶಪಡಿಸು. ಹವಿಸ್ಸನ್ನು ಅರ್ಪಿಸುವ ಯಜಮಾನರ ಶತ್ರುಗಳನ್ನು ಪೂರ್ಣವಾಗಿ ನಾಶಪಡಿಸು. ನಮ್ಮೆದುರು ಬೀಳುವವರೂ, ಅವಿವೇಕಿಗಳೂ ಆದ ನಮ್ಮ ಸಕಲ ಶತ್ರುಗಳೂ ಈ ಪ್ರದೇಶದಿಂದ ದೂರಕ್ಕೆ ಓಡಿಹೋಗಲಿ ನಮ್ಮ ಶತ್ರುಗಳೆಲ್ಲ ಒಂದೇ ಕಾಲದಲ್ಲಿ ನಾಶಮಾಡಲ್ಪಡಲಿ.

## English Translation.

(Propitiated), Agni, by our new praise, baffle the hostile attempts of these against our persons, consume the enemies of those who are liberal (at sacred rites); may all our foolish assailants depart from hence, may all our adversaries perish.

॥ ಸಂಹಿತಾಪಾಠಃ ॥

ಅಗ್ನೇ ಮನ್ಮಾನಿ ತುಭ್ಯಂ ಕಂ ಘೃತಂ ನ ಜುಹ್ವ ಆಸನಿ |
ಸ ದೇವೇಷು ಪ್ರ ಚಿಕಿದ್ಧಿ ತ್ವಂ ಹ್ಯಸಿ ಪೂರ್ವ್ಯಃ ಶಿವೋ ದೂತೋ ವಿವಸ್ವತೋ
ನಭಂತಾಮನ್ಯಕೇ ಸಮೇ || ೩ ||

॥ ಪದಪಾಠಃ ॥

ಅಗ್ನೇ | ಮನ್ಮಾನಿ | ತುಭ್ಯಂ | ಕಂ | ಘೃತಂ | ಜುಹ್ವೇ | ಆಸನಿ |
ಸಃ | ದೇವೇಷು | ಪ್ರ | ಚಿಕಿದ್ಧಿ | ತ್ವಂ | ಹಿ | ಅಸಿ | ಪೂರ್ವ್ಯಃ | ಶಿವಃ | ದೂತಃ | ವಿವಸ್ವತಃ |
ನಭಂತಾಂ | ಅನ್ಯಕೇ | ಸಮೇ || ೩ ||

|| ಸಾಯಣಭಾಷ್ಯಂ ||

ಹೇ ಅಗ್ನೇ ತುಭ್ಯಂ ತ್ವದರ್ಥಮಾಸನ್ಯಾಸ್ಯೇ ಕಂ ಘೃತಂ ನ ಯಥಾ ಸುಖಕರಂ ಘೃತಂ ಜುಹ್ವತ್ಯನ್ಯೇ ತದ್ವದಹಮಪಿ ತವಾಸ್ಯೇ ಮನ್ಮಾನಿ ಮನನೀಯಾನಿ ಸ್ತೋತ್ರಾಣಿ ಜುಹ್ವೇ | ಜುಹೋಮಿ | ಸ ತ್ವಂ ದೇವೇಷು ದೇವಾನಾಂ ಮಧ್ಯೇ ಪ್ರ ಚಿಕಿದ್ಧಿ | ಅಸ್ಮದೀಯಾಃ ಸ್ತುತೀರ್ಜಾನೀಹಿ | ಅಪಿ ಚ ತ್ವಂ ಪೂರ್ವ್ಯಃ ಪ್ರತ್ನೋಽಸಿ | ಶಿವಃ ಸುಖಕರಶ್ಚಾಸಿ | ವಿವಸ್ವತೋ ದೂತಶ್ಚಾಸಿ | ಸಿದ್ಧಮನ್ಯತ್ ||

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ತುಭ್ಯಂ**—ನಿನ್ನನ್ನುದ್ದೇಶಿಸಿ | ಆಸನಿ—ನಿನ್ನ ಮುಖದಲ್ಲಿ | **ಕಂ**—ಸುಖಕರವಾದ | **ಘೃತಂ ನ**—ಆಜ್ಯವನ್ನು ಇತರರು ಅರ್ಪಿಸುವಂತೆ | **ಮನ್ಮಾನಿ**—ಧ್ಯಾನಾತ್ಮಕವಾದ ಸ್ತೋತ್ರಗಳನ್ನು | **ಜುಹ್ವೇ**—ನಾನು ಅರ್ಪಿಸುತ್ತೇನೆ | **ದೇವೇಷು**—ದೇವತೆಗಳ ನಡುವೆ | **ಸಃ**—ಪ್ರಸಿದ್ಧನಾದ ನೀನು | **ಪ್ರ ಚಿಕಿದ್ಧಿ**—ನಮ್ಮ ಸ್ತುತಿಗಳನ್ನು ಪೂರ್ಣವಾಗಿ ತಿಳಿ | **ತ್ವಂ ಹಿ**—ನೀನೇ | **ಪೂರ್ವ್ಯಃ**—ಪುರಾತನನಾಗಿ | **ಅಸಿ**—ಇದ್ದೀಯೆ | **ಶಿವಃ**—ಮಂಗಳಕರನೂ ಆಗಿದ್ದೀಯೆ | **ವಿವಸ್ವತಃ**—ವಿವಸ್ವಂತನಿಗೆ | **ದೂತಃ**—ದೂತನೂ ಆಗಿದ್ದೀಯೆ | **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ | **ಸಮೇ**—ಒಟ್ಟಿಗೆ | **ನಭಂತಾಂ**—ನಾಶಮಾಡಲ್ಪಡಲಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನಿನ್ನನ್ನುದ್ದೇಶಿಸಿ ನಿನ್ನ ಮುಖದಲ್ಲಿ ಸುಖಕರವಾದ ಆಜ್ಯವನ್ನು ಇತರರು ಅರ್ಪಿಸುವಂತೆ, ನಾನು ಧ್ಯಾನಾತ್ಮಕವಾದ ಸ್ತೋತ್ರಗಳನ್ನು ಅರ್ಪಿಸುತ್ತೇನೆ. ದೇವತೆಗಳ ನಡುವೆ ಪ್ರಸಿದ್ಧನಾದ ನೀನು ನಮ್ಮ ಸ್ತುತಿಗಳನ್ನು ಪೂರ್ಣವಾಗಿ ತಿಳಿ. ನೀನು ಪುರಾತನನಾಗಿದ್ದೀಯೆ. ಮಂಗಳಕರನೂ, ವಿವಸ್ವಂತನಿಗೆ ದೂತನೂ ಆಗಿದ್ದೀಯೆ. ನಮ್ಮ ಶತ್ರುಗಳೆಲ್ಲರೂ ಒಟ್ಟಿಗೆ ನಾಶಮಾಡಲ್ಪಡಲಿ.

## English Translation.

I pour into your mouth, Agni, praises as others (fill it) with delicious butter; do you amidst the gods acknowledge (them), for you are ancient, the giver of happiness, the messenger of Vivaswat; may all our enemies perish.

|| ಸಂಹಿತಾಪಾಠಃ ||

ತತ್ತದಗ್ನಿರ್ವಯೋ ದಧೇ ಯಥಾಯಥಾ ಕೃಪಣ್ಯತಿ |
ಊರ್ಜಾಹುತಿರ್ವಸೂನಾಂ ಶಂ ಚ ಯೋಶ್ಚ ಮಯೋ ದಧೇ ವಿಶ್ವಸ್ಯೈ
ದೇವಹೂತ್ಯೈ ನಭಂತಾಮನ್ಯಕೇ ಸಮೇ || ೪ ||

॥ ಪದಪಾಠಃ ॥

ತತ್ऽತತ್ । ಅಗ್ನಿಃ । ವಯಃ । ದಧೇ । ಯಥಾऽಯಥಾ । ಕೃಪಣ್ಯತಿ ।
ಊರ್ಜಾऽಆಹುತಿಃ । ವಸೂನಾಂ । ಶಂ । ಚ । ಯೋಃ । ಚ । ಮಯಃ । ದಧೇ । ವಿಶ್ವಸ್ಯೈ । ದೇವऽ-
ಹೂತ್ಯೈ । ನಭಂತಾಂ । ಅನ್ಯಕೇ । ಸಮೇ ॥ ೪ ॥

॥ ಸಾಯಣಭಾಷ್ಯಂ ॥

ಯಥಾ ಯಥಾ ಯದ್ಯದನ್ನಂ ಕೃಪಣ್ಯತಿ ಸ್ತೋತೃಭಿರ್ಯಾಚ್ಯತೇ ತತ್ತದ್ವಯೋऽಗ್ನಿರ್ದಧೇ । ಸ್ತೋತೃಭ್ಯಃ । ಪ್ರಯಚ್ಛತಿ । ಅಪಿ ಚೋರ್ಜಾಹುತಿರನ್ನೇನಾಹೂಯಮಾನೋऽಗ್ನಿರ್ವಸೂನಾಂ ಹವಿಷಾಂ ವಾಸಕಾನಾಂ ಯಜಮಾನಾನಾಂ ಶಂ ಶಾಂತಿನಿಮಿತ್ತಂ ಯೋರ್ವಿಷಯಯೋಗಜನಿತಂ ಚ ಮಯಃ ಸುಖಂ ದಧೇ । ಕರೋತಿ । ವಿಶ್ವಸ್ಯೈ ದೇವಹೂತ್ಯೈ ಸರ್ವಸ್ಯೈ ದೇವಾನಾಂ ಹ್ವಾನಾಯ ಚ ಭವತಿ । ಯಃ ಕಶ್ಚನಾಪಿ ದೇವೋ ಯದಿ ಹೂಯತೇ ಅಗ್ನಿರೇವ ಸರ್ವಂ ಕರೋತೀತ್ಯರ್ಥಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಯಥಾಯಥಾ**— ಯಾವ ಯಾವ ವಿಧದಲ್ಲಿ । **ಕೃಪಣ್ಯತಿ**—(ಅಗ್ನಿಯು) ಅನ್ನವನ್ನು ಯಾಚಿಸಲ್ಪಡುವನೋ । **ತತ್ತತ್**— ಅಂತಹ ಎಲ್ಲಾ ವಿಧವಾದ । **ವಯಃ**— ಅನ್ನವನ್ನೂ । **ಅಗ್ನಿಃ**—ಅಗ್ನಿಯು । **ದಧೇ**— ಸ್ತೋತೃಗಳಿಗೆ ಕೊಡುತ್ತಾನೆ । **ಊರ್ಜಾಹುತಿಃ**— ಅನ್ನವೇ ಆಹುತಿಯಾಗಿ ಉಳ್ಳ ಅಗ್ನಿಯು । **ವಸೂನಾಂ**— ಹವಿಸ್ಸನ್ನರ್ಪಿಸುವ ಯಜಮಾನರಿಗೆ । **ಶಂ ಚ**—ಶಾಂತಿನಿಮಿತ್ತವಾದುದೂ । **ಯೋಃ ಚ**—ದುಃಖನಿವಾರಕವಾದುದೂ ಆದ । **ಮಯಃ**—ಸುಖವನ್ನು । **ದಧೇ**— ಉಂಟುಮಾಡುತ್ತಾನೆ । **ವಿಶ್ವಸ್ಯೈ**—ಸಮಸ್ತವಾದ । **ದೇವಹೂತ್ಯೈ**—ದೇವತೆಗಳ ಆಹ್ವಾನಕ್ಕೂ ಸಾಧನನಾಗಿರುತ್ತಾನೆ । **ಅನ್ಯಕೇ**— ನಮ್ಮ ಶತ್ರುಗಳೆಲ್ಲರೂ । **ಸಮೇ**— ಒಂದೇ ಸಮನಾಗಿ । **ನಭಂತಾಂ**— ನಾಶಮಾಡಲ್ಪಡಲಿ.

॥ ಭಾವಾರ್ಥ ॥

ಯಾವ ಯಾವ ವಿಧದಲ್ಲಿ ಅಗ್ನಿಯು ಅನ್ನವನ್ನು ಯಾಚಿಸಲ್ಪಡುವನೋ ಅಂತಹ ಎಲ್ಲಾ ವಿಧವಾದ ಅನ್ನವನ್ನೂ ಅಗ್ನಿಯು ಸ್ತೋತೃಗಳಿಗೆ ಕೊಡುತ್ತಾನೆ. ಅನ್ನವೇ ಆಹುತಿಯಾಗಿ ಉಳ್ಳ ಅಗ್ನಿಯು ಹವಿಸ್ಸನ್ನರ್ಪಿಸುವ ಯಜಮಾನರಿಗೆ ಶಾಂತಿನಿಮಿತ್ತವಾದುದೂ, ದುಃಖನಿವಾರಕವಾದುದೂ ಆದ ಸುಖವನ್ನು ಉಂಟುಮಾಡುತ್ತಾನೆ. ಸಮಸ್ತವಾದ ದೇವತೆಗಳ ಆಹ್ವಾನಕ್ಕೂ ಸಾಧನನಾಗಿರುತ್ತಾನೆ. ನಮ್ಮ ಶತ್ರುಗಳೆಲ್ಲರೂ ಒಂದೇ ಸಮನಾಗಿ ನಾಶಮಾಡಲ್ಪಡಲಿ.

## English Translation.

Agni grants whatever food is solicited ; invoked with offerings, he bestows on the worshippers happiness springing from tranquillity and the

**enjoymet (of objects of sense) ; he is requisite for all invocation of the gods : may all our adversaries perish.**

॥ ಸಂಹಿತಾಪಾಠಃ ॥

**ಸ ಚಿಕೇತ ಸಹೀಯಸಾಗ್ನಿಶ್ಚಿತ್ರೇಣ ಕರ್ಮಣಾ ।**
**ಸ ಹೋತಾ ಶಶ್ವತೀನಾಂ ದಕ್ಷಿಣಾಭಿರಭೀವೃತ ಇನೋತಿ ಚ ಪ್ರತೀವ್ಯಂ೧**
**ನಭಂತಾಮನ್ಯಕೇ ಸಮೇ ॥ ೫ ॥**

॥ ಪದಪಾಠಃ ॥

**ಸಃ । ಚಿಕೇತ । ಸಹೀಯಸಾ । ಅಗ್ನಿಃ । ಚಿತ್ರೇಣ । ಕರ್ಮಣಾ ।**
**ಸಃ । ಹೋತಾ । ಶಶ್ವತೀನಾಂ । ದಕ್ಷಿಣಾಭಿಃ । ಅಭಿऽವೃತಃ । ಇನೋತಿ । ಚ । ಪ್ರತೀವ್ಯಂ । ನಭಂತಾಂ । ಅನ್ಯಕೇ । ಸಮೇ ॥ ೫ ॥**

॥ ಸಾಯಣಭಾಷ್ಯಂ ॥

**ಸೋಽಗ್ನಿಃ ಸಹೀಯಸಾಭಿಭಾವುಕೇನ ಚಿತ್ರೇಣ ನಾನಾವಿಧೇನ ಕರ್ಮಣಾ ವ್ಯಾಪಾರೇಣ ಚಿಕೇತ । ಜ್ಞಾಯತೇ । ಸೋಽಗ್ನಿಃ ಶಶ್ವತೀನಾಂ ಬಹ್ವೀನಾಂ ದೇವತಾನಾಂ ಹೋತಾ ಹ್ವಾತಾ ದಕ್ಷಿಣಾಭಿಃ ಪಶುಭಿಶ್ಚಾಭೀವೃತಃ ಪ್ರತೀವ್ಯಂ ಪ್ರತ್ಯೇತವ್ಯಂ ಶತ್ರುಮಿನೋತಿ ಚ । ಗಚ್ಛತಿ ಚ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ಸಃ ಅಗ್ನಿಃ**—ಅದೇ ಅಗ್ನಿಯು । **ಸಹೀಯಸಾ**—ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳದ್ದೂ । **ಚಿತ್ರೇಣ**—ನಾನಾವಿಧವಾದುದೂ ಆದ । **ಕರ್ಮಣಾ**—ವ್ಯಾಪಾರದಿಂದ । **ಚಿಕೇತ**—ಪ್ರಸಿದ್ಧನಾಗಿದ್ದಾನೆ । **ಸಃ**—ಅದೇ ಅಗ್ನಿಯು । **ಶಶ್ವತೀನಾಂ**—ಅನೇಕ ದೇವತೆಗಳಿಗೆ । **ಹೋತಾ**—ಆಹ್ವಾನವನ್ನು ಕೊಡುವವನಾಗಿದ್ದಾನೆ । **ದಕ್ಷಿಣಾಭಿಃ**—ಪಶುಗಳೊಡನೆ । **ಅಭೀವೃತಃ**—ಸುತ್ತುವರಿಯಲ್ಪಟ್ಟು । **ಪ್ರತೀವ್ಯಂ**—ಶತ್ರುವನ್ನು । **ಇನೋತಿ ಚ**—ಪ್ರತಿಭಟಿಸುತ್ತಾನೆ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಸಮನಾಗಿ । **ನಭಂತಾಂ**—ನಾಶಮಾಡಲ್ಪಡಲಿ.

॥ ಭಾವಾರ್ಥ ॥

ಪ್ರಸಿದ್ಧನಾದ ಅದೇ ಅಗ್ನಿಯು ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳದ್ದೂ, ನಾನಾವಿಧವಾದುದೂ ಆದ ವ್ಯಾಪಾರಗಳಿಂದ ಅರಿಯಲ್ಪಟ್ಟಿದ್ದಾನೆ. ಅದೇ ಅಗ್ನಿಯು ಅನೇಕ ದೇವತೆಗಳಿಗೆ ಆಹ್ವಾನವನ್ನು ಕೊಡುವವನಾಗಿದ್ದಾನೆ. ಪಶುಗಳೊಡನೆ ಸುತ್ತುವರಿಯಲ್ಪಟ್ಟು ಶತ್ರುಗಳನ್ನು ಪ್ರತಿಭಟಿಸುತ್ತಾನೆ. ನಮ್ಮ ಶತ್ರುಗಳೆಲ್ಲರೂ ಒಂದೇ ಸಮನಾಗಿ ನಾಶಮಾಡಲ್ಪಡಲಿ.

## English Translation.

Agni is known by his most powerful and manifold deeds : he is the **invoker** of the eternals ; surrounded by vitims, he proceeds against the foe ; **may all** our adversaries perish.

॥ ಸಂಹಿತಾಪಾಠಃ ॥

ಅಗ್ನಿರ್ಜಾತಾ ದೇವಾನಾಮಗ್ನಿರ್ವೇದ ಮರ್ತಾನಾಮಪೀಚ್ಯಂ ।
ಅಗ್ನಿಃ ಸ ದ್ರವಿಣೋದಾ ಅಗ್ನಿರ್ದ್ವಾರಾ ವ್ಯೂರ್ಣುತೇ ಸ್ವಾಹುತೋ
ನವೀಯಸಾ ನಭಂತಾಮನ್ಯಕೇ ಸಮೇ ॥ ೬ ॥

॥ ಪದಪಾಠಃ ॥

**ಅಗ್ನಿಃ । ಜಾತಾ । ದೇವಾನಾಂ । ಅಗ್ನಿಃ । ವೇದ । ಮರ್ತಾನಾಂ । ಅಪೀಚ್ಯಂ ।**
**ಅಗ್ನಿಃ । ಸಃ । ದ್ರವಿಣಃಽದಾಃ । ಅಗ್ನಿಃ । ದ್ವಾರಾ । ವಿ । ಊರ್ಣುತೇ । ಸುಽಆಹುತಃ । ನವೀಯಸಾ ।**
**ನಭಂತಾಂ । ಅನ್ಯಕೇ । ಸಮೇ ॥ ೬ ॥**

॥ ಸಾಯಣಭಾಷ್ಯಂ ॥

**ದೇವಾನಾಂ ಜಾತಾ ಜಾತಾನಿ ಜನ್ಮಾನ್ಯಗ್ನಿರ್ವೇತ್ತಿ ಮರ್ತಾನಾಂ ಮನುಷ್ಯಾಣಾಂ ಚಾಪೀಚ್ಯಂ ಗುಹ್ಯಮಗ್ನಿರ್ವೇದ । ವೇತ್ತಿ । ಸೋಽಗ್ನಿರ್ದ್ರವಿಣೋದಾ ಧನಸ್ಯ ದಾತಾ । ನವೀಯಸಾ ನವತರೇಣ ಹವಿಷಾ ಸ್ವಾಹುತಃ ಸಮ್ಯಗ್ಘುತೋಽಗ್ನಿರ್ದ್ವಾರಾ ಧನಸ್ಯ ದ್ವಾರಾಣಿ ವ್ಯೂರ್ಣುತೇ ಚ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ಅಗ್ನಿಃ**—ಅಗ್ನಿಯು । **ದೇವಾನಾಂ**—ದೇವತೆಗಳ । **ಜಾತಾ**—ಉತ್ಪತ್ತಿಸ್ವರೂಪಗಳನ್ನು । **ವೇದ**—ತಿಳಿಯುತ್ತಾನೆ । **ಮರ್ತಾನಾಂ**—ಮಾನವರ । **ಅಪೀಚ್ಯಂ**--ರಹಸ್ಯಗಳನ್ನೂ ಅರಿಯುತ್ತಾನೆ । **ಸಃ ಅಗ್ನಿಃ**—ಅದೇ ಅಗ್ನಿಯು । **ದ್ರವಿಣೋದಾಃ**—ಧನದ ದಾತೃವೂ ಆಗಿದ್ದಾನೆ । **ನವೀಯಸಾ**—ನೂತನವಾದ ಆಹುತಿಯಿಂದ । **ಸ್ವಾಹುತಃ**—ಉತ್ತಮವಾಗಿ ಪೂಜಿಸಲ್ಪಟ್ಟ । **ಅಗ್ನಿಃ**—ಅಗ್ನಿಯು । **ದ್ವಾರಾ**—ಧನದ ದ್ವಾರಗಳನ್ನು । **ವ್ಯೂರ್ಣುತೇ**—ಪೂರ್ಣವಾಗಿ ತೆರೆಯುತ್ತಾನೆ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಟ್ಟಿಗೆ । **ನಭಂತಾಂ**—ನಾಶಮಾಡಲ್ಪಡಲಿ.

॥ ಭಾವಾರ್ಥ ॥

ಅಗ್ನಿಯು ದೇವತೆಗಳ ಉತ್ಪತ್ತಿಸ್ವರೂಪಗಳನ್ನು ಅರಿಯುತ್ತಾನೆ. ಮಾನವರ ರಹಸ್ಯಗಳನ್ನೂ ಅರಿಯುತ್ತಾನೆ. ಅದೇ ಅಗ್ನಿಯು ಧನದ ದಾತೃವೂ ಆಗಿದ್ದಾನೆ. ನೂತನವಾದ ಆಹುತಿಯಿಂದ ಉತ್ತಮವಾಗಿ ಪೂಜಿಸಲ್ಪಟ್ಟ ಅಗ್ನಿಯು ಧನದ ದ್ವಾರಗಳನ್ನು ಪೂರ್ಣವಾಗಿ ತೆರೆಯುತ್ತಾನೆ. ನಮ್ಮ ಶತ್ರುಗಳೆಲ್ಲರೂ ಒಟ್ಟಿಗೆ ನಾಶಮಾಡಲ್ಪಡಲಿ.

English Translation.

Agni knows the births of the gods; Agni knows the secrets of mankind: Agni is the giver of riches; Agni, duly worshipped with a new (oblation), sets open the doors (of opulence): may all our adversaries perish.

॥ ಸಂಹಿತಾಪಾಠಃ ॥

ಅಗ್ನಿರ್ದೇವೇಷು ಸಂವಸುಃ ಸ ವಿಕ್ಷು ಯಜ್ಞಿಯಾಸ್ವಾ ।
ಸ ಮುದಾ ಕಾವ್ಯಾ ಪುರು ವಿಶ್ವಂ ಭೂಮೇವ ಪುಷ್ಯತಿ ದೇವೋ ದೇವೇಷು
ಯಜ್ಞಿಯೋ ನಭಂತಾಮನ್ಯಕೇ ಸಮೇ ॥ ೭ ॥

॥ ಪದಪಾಠಃ ॥

ಅಗ್ನಿಃ । ದೇವೇಷು । ಸಂऽವಸುಃ । ಸಃ । ವಿಕ್ಷು । ಯಜ್ಞಿಯಾಸು । ಆ ।
ಸಃ । ಮುದಾ । ಕಾವ್ಯಾ । ಪುರು । ವಿಶ್ವಂ । ಭೂಮऽಇವ । ಪುಷ್ಯತಿ । ದೇವಃ । ದೇವೇಷು । ಯಜ್ಞಿಯಃ ।
ನಭಂತಾಂ । ಅನ್ಯಕೇ । ಸಮೇ ॥ ೭ ॥

॥ ಸಾಯಣಭಾಷ್ಯಂ ॥

ದೇವೇಷು ಮಧ್ಯೇಽಗ್ನಿಃ ಸಂವಸುಃ । ಸಂವಸತಿ । ಸೋಽಗ್ನಿರ್ಯಜ್ಞಿಯಾಸು ಯಜ್ಞಾರ್ಹಾಸು ವಿಕ್ಷು ಪ್ರಜಾಸ್ವಪಿ ಸಂವಸುಃ । ಕಿಂಚ ಸೋಽಗ್ನಿಃ ಪುರು ಬಹೂನಿ ಕಾವ್ಯಾ ಕರ್ಮಾಣಿ ಭೂಮೇವ ಯಥಾ ಭೂಮಿರ್ವಿಶ್ವಂ ತಥಾ ಮುದಾ ಮೋದೇನ ಪುಷ್ಯತಿ । ದೇವೇಷು ಮಧ್ಯೇ ದೇವೋಽಗ್ನಿರ್ಯಜ್ಞಿಯೋ ಯಜ್ಞಾರ್ಹಶ್ಚ ಭವತಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ಅಗ್ನಿಃ—ಅಗ್ನಿಯು । ದೇವೇಷು—ದೇವತೆಗಳ ನಡುವೆ । ಸಂವಸುಃ—ಸುಖವಾಗಿ ವಾಸಿಸುತ್ತಾನೆ । ಸಃ—ಅದೇ ಅಗ್ನಿಯು । ಯಜ್ಞಿಯಾಸು—ಯಜ್ಞಾರ್ಹರಾದ । ವಿಕ್ಷು ಆ—ಪ್ರಜೆಗಳ ನಡುವೆ (ವಾಸಿಸುತ್ತಾನೆ । ಭೂಮೇವ ವಿಶ್ವಂ—ಪೃಥ್ವಿಯು ಸಕಲವನ್ನೂ ಪೋಷಿಸುವಂತೆ । ಸಃ—ಅದೇ ಅಗ್ನಿಯು । ಪುರು—ಅನೇಕ ವಿಧವಾದ । ಕಾವ್ಯಾ—ಕರ್ಮಗಳನ್ನೂ । ಮುದಾ—ಹರ್ಷದಿಂದ । ಪುಷ್ಯತಿ—ಪೋಷಿಸುತ್ತಾನೆ ।

**ದೇವೇಷು**—ದೇವತೆಗಳ ನಡುವೆ | **ದೇವಃ**—ದೇವತಾತ್ಮನಾದ ಅಗ್ನಿಯು | **ಯಜ್ಞಿಯಃ**—ಯಜ್ಞಾಕ
ದ್ದಾನೆ | **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ | **ಸಮೇ**- ಒಂದೇ ಕಾಲದಲ್ಲಿ | **ನಭಂತಾಂ**—ನಾಶವಾಡ

॥ ಭಾವಾರ್ಥ ॥

ಅಗ್ನಿಯು ದೇವತೆಗಳ ನಡುವೆ ಸುಖವಾಗಿ ವಾಸವಾಡುತ್ತಾನೆ. ಅದೇ ಅಗ್ನಿಯು ಯಜ್ಞಾಕ ಪ್ರಜೆಗಳ ನಡುವೆ ವಾಸಿಸುತ್ತಾನೆ. ಪೃಥ್ವಿಯು ಸಕಲವನ್ನೂ ಪೋಷಿಸುವಂತೆ ಅದೇ ಅಗ್ನಿಯು ಅನೇಕ ವಿ ಕರ್ಮಗಳನ್ನೂ ಹರ್ಷದಿಂದ ಪೋಷಿಸುತ್ತಾನೆ. ದೇವತಾತ್ಮನಾದ ಅಗ್ನಿಯು ದೇವತೆಗಳ ನಡುವೆ ಯ ನಾಗಿದ್ದಾನೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಡಲ್ಪಡಲಿ

## English Translation.

Agni has his abode among the gods, he (dwells) among pious pe he cherishes with pleasure many pious acts, as the earth all (beings); a adorable among the gods: may all our adversaries perish.

॥ ಸಂಹಿತಾಪಾಠಃ ॥

ಯೋ ಅಗ್ನಿಃ ಸಪ್ತಮಾನುಷಃ ಶ್ರಿತೋ ವಿಶ್ವೇಷು ಸಿಂಧುಷು |
ತಮಾಗನ್ಮ ತ್ರಿಪಸ್ತ್ಯಂ ಮಂಧಾತುರ್ದಸ್ಯುಹಂತಮುಮಗ್ನಿಂ ಯಜ್ಞೇ
ಪೂರ್ವ್ಯಂ ನಭಂತಾಮನ್ಯಕೇ ಸಮೇ ॥ ೮ ॥

॥ ಪದಪಾಠಃ ॥

ಯಃ | ಅಗ್ನಿಃ | ಸಪ್ತऽಮಾನುಷಃ | ಶ್ರಿತಃ | ವಿಶ್ವೇಷು | ಸಿಂಧುಷು |
ತಂ | ಆ | ಅಗನ್ಮ | ತ್ರಿऽಪಸ್ತ್ಯಂ | ಮಂಧಾತುಃ | ದಸ್ಯುಹನ್ऽತಮಂ | ಅಗ್ನಿಂ | ಯಜ್ಞೇ
ಪೂರ್ವ್ಯಂ | ನಭಂತಾಂ | ಅನ್ಯಕೇ | ಸಮೇ ॥ ೮ ॥

॥ ಸಾಯಣಭಾಷ್ಯಂ ॥

ಯೋऽಗ್ನಿಃ ಸಪ್ತಮಾನುಷೋ ವಿಶ್ವೇಷು ಸರ್ವೇಷು ಸಿಂಧುಷು ನದೀಷು ಶ್ರಿತಸ್ತ್ರಿಪ ತ್ರಿಸ್ಥಾನಂ ಮಂಧಾತುರ್ಯೌವನಾಶ್ವಸ್ಯ ಮಾಂಧಾತುರ್ದಸ್ಯುಹಂತಮಂ ದಸ್ಯೂನಾಂ ಹಂ ಯಜ್ಞೇಷು ಪೂರ್ವ್ಯಂ ಮುಖ್ಯಂ ತಮಗ್ನಿಂ ವಯಮಾಗನ್ಮ | ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಯಃ ಅಗ್ನಿಃ**—ಯಾವ ಅಗ್ನಿಯು | **ಸಪ್ತಮಾನುಷಃ**—ಏಳು ವಿಧವಾದ ಋತ್ವಿಕ್ಕುಗಳುಳ್ಳವನಾಗಿ | **ವಿಶ್ವೇಷು**—ಸಮಸ್ತವಾದ | **ಸಿಂಧುಷು**—ನದಿಗಳಲ್ಲಿಯೂ | **ಶ್ರಿತಃ**—ಆಶ್ರಯವನ್ನು ಪಡೆದಿರುವನೋ ಅಂತಹವನೂ | **ತ್ರಿಪಸ್ತ್ಯಂ**—ಮೂರು ಸ್ಥಾನವುಳ್ಳವನೂ | **ಮಾಂಧಾತುಃ**—ಮಾಂಧಾತೃವಿಗಾಗಿ | **ದಸ್ಯುಹಂತಮಂ**—ರಾಕ್ಷಸರನ್ನು ನಾಶಮಾಡಿದವನೂ | **ಯಜ್ಞೇಷು**—ಯಜ್ಞಗಳಲ್ಲಿ | **ಪೂರ್ವ್ಯಂ**—ಮುಖ್ಯನೂ ಆದ | **ತಂ ಅಗ್ನಿಂ**—ಅದೇ ಅಗ್ನಿಯನ್ನು | **ಆ ಅಗನ್ಮ**—ನಾವು ಸಮೀಪಿಸೋಣ | **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ | **ಸಮೇ**—ಒಂದೇ ಕಾಲದಲ್ಲಿ | **ನಭಂತಾಂ**—ನಾಶಮಾಡಲ್ಪಡಲಿ.

॥ ಭಾವಾರ್ಥ ॥

ಯಾವ ಅಗ್ನಿಯು ಏಳು ವಿಧವಾದ ಋತ್ವಿಕ್ಕುಗಳುಳ್ಳವನಾಗಿ ಸಮಸ್ತವಾದ ನದಿಗಳಲ್ಲಿಯೂ ಆಶ್ರಯವನ್ನು ಪಡೆದಿರುವನೋ ಅಂತಹವನೂ, ಮೂರು ಸ್ಥಾನವುಳ್ಳವನೂ, ಮಾಂಧಾತೃವಿಗಾಗಿ ರಾಕ್ಷಸರನ್ನು ನಾಶಮಾಡಿದವನೂ, ಯಜ್ಞಗಳಲ್ಲಿ ಮುಖ್ಯನೂ ಆದ ಅದೇ ಅಗ್ನಿಯನ್ನು ನಾವು ಸಮೀಪಿಸೋಣ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲ್ಪಡಲಿ.

English Translation.

Let us approach that Agni who is ministered to by seven priests: who takes refuge in all rivers, who has a triple dwelling place, the slayer of the Dasya for Mandhatri, who is foremost in sacrifices: may all our adversaries perish.

॥ ಸಂಹಿತಾಪಾಠಃ ॥

ಅಗ್ನಿಸ್ತ್ರೀಣಿ ತ್ರಿಧಾತೂನ್ಯಾ ಕ್ಷೇತಿ ವಿದಥಾ ಕವಿಃ ।
ಸ ತ್ರೀಁರೇಕಾದಶಾಁ ಇಹ ಯಕ್ಷಚ್ಚ ಪಿಪ್ರಯಚ್ಚ ನೋ ವಿಪ್ರೋ ದೂತಃ
ಪರಿಷ್ಕೃತೋ ನಭಂತಾಮನ್ಯಕೇ ಸಮೇ ॥ ೯ ॥

॥ ಪದಪಾಠಃ ॥

ಅಗ್ನಿಃ । ತ್ರೀಣಿ । ತ್ರಿಽಧಾತೂನಿ । ಆ । ಕ್ಷೇತಿ । ವಿದಥಾ । ಕವಿಃ ।
ಸಃ । ತ್ರೀನ್ । ಏಕಾದಶಾನ್ । ಇಹ । ಯಕ್ಷತ್ । ಚ । ಪಿಪ್ರಯತ್ । ಚ । ನಃ । ವಿಪ್ರಃ । ದೂತಃ ।
ಪರಿಽಕೃತಃ । ನಭಂತಾಂ । ಅನ್ಯಕೇ । ಸಮೇ ॥ ೯ ॥

। ಸಾಯಣಭಾಷ್ಯಂ ॥

ಕವಿಃ ಕ್ರಾಂತದರ್ಶ್ಯಗ್ನಿಸ್ತ್ರೀಣಿ ತ್ರಿಧಾತೂನಿ ತ್ರಿಬಂಧನಾದೀನಿ ಪೃಥಿವ್ಯಾದೀನಿ ವಿದಥಾ ವೇದನೀಯಾನಿ ಸ್ಥಾನಾನ್ಯಾ ಕ್ಷೇತಿ । ಆವಸತಿ । ಅಪಿ ಚ ಸೋಽಗ್ನಿರ್ದೂತೋ ದೇವಾನಾಂ ವಿಪ್ರಃ ಪ್ರಾಜ್ಞಃ ಪರಿಷ್ಕೃತೋಽಲಂಕೃತಶ್ಚ ಸನ್ನಿಹ ಯಜ್ಞೇ ತ್ರಿನೇಕಾದಶಾಂಸ್ತ್ರಯಸ್ತ್ರಿಂಶದ್ದೇವಾನ್ಯಕ್ಷತ್ । ಯಜತು । ನೋಽಸ್ಮಾನ್ ಪಿಪ್ರಯಚ್ಚ । ಕಾಮೈಃ ಪೂರಯತು ಚ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಕವಿಃ**— ಕ್ರಾಂತದರ್ಶಿಯಾದ । ಅಗ್ನಿಃ- ಅಗ್ನಿಯು । **ತ್ರೀಣಿ**— ಮೂರು ಬಗೆಯುಳ್ಳದ್ದೂ । **ತ್ರಿಧಾತೂನಿ**— ಪೃಥಿವ್ಯಾದಿ ಮೂರು ಲೋಕಗಳಲ್ಲಿರತಕ್ಕದ್ದೂ । **ವಿದಥಾ**— ಪ್ರಸಿದ್ಧವಾದುದೂ ಆದ ಸ್ಥಾನಗಳಲ್ಲಿ । **ಆ ಕ್ಷೇತಿ**— ವಾಸಮಾಡುತ್ತಾನೆ । **ಸಃ**— ಅದೇ ಅಗ್ನಿಯು । **ದೂತಃ**— ದೇವದೂತನಾಗಿಯೂ । **ವಿಪ್ರಃ**— ಪ್ರಾಜ್ಞನಾಗಿಯೂ **ಪರಿಷ್ಕೃತಃ**— ಅಲಂಕೃತನಾಗಿಯೂ ಇದ್ದು । **ಇಹ**— ಈ ಯಜ್ಞದಲ್ಲಿ । **ತ್ರೀನೇಕಾದಶಾನ್**— ಮೂವತ್ತುಮೂರು ಸಂಖ್ಯೆಯುಳ್ಳ ದೇವತೆಗಳನ್ನು । **ಯಕ್ಷತ್**— ಪೂಜಿಸಲಿ । **ನಃ**— ನಮ್ಮನ್ನು । **ಪಿಪ್ರಯಚ್ಚ**— ಇಷ್ಟಾರ್ಥಗಳಿಂದ ತುಂಬಿಸಲಿ । **ಅನ್ಯಕೇ**— ನಮ್ಮ ಶತ್ರುಗಳೆಲ್ಲರೂ । **ಸಮೇ**— ಒಂದೇ ಕಾಲದಲ್ಲಿ । **ನಭಂತಾಂ**— ನಾಶಮಾಡಲ್ಪಡಲಿ.

॥ ಭಾವಾರ್ಥ ॥

ಕ್ರಾಂತದರ್ಶಿಯಾದ ಅಗ್ನಿಯು ಮೂರು ಬಗೆಯುಳ್ಳದ್ದೂ, ಪೃಥಿವ್ಯಾದಿ ಮೂರು ಲೋಕಗಳಲ್ಲೂ ವ್ಯಾಪಿಸಿರುವುದೂ ಆದ ಮೂರು ಸ್ಥಾನಗಳಲ್ಲೂ ವಾಸಮಾಡುತ್ತಾನೆ. ಅದೇ ಅಗ್ನಿಯು ದೇವದೂತನಾಗಿಯೂ, ಪ್ರಾಜ್ಞನಾಗಿಯೂ, ಅಲಂಕೃತನಾಗಿಯೂ ಇದ್ದು ಈ ಯಜ್ಞದಲ್ಲಿ ಮೂವತ್ತುಮೂರು ಸಂಖ್ಯೆಯುಳ್ಳ ದೇವತೆಗಳನ್ನೂ ಪೂಜಿಸಲಿ. ನಮ್ಮನ್ನು ಇಷ್ಟಾರ್ಥಗಳಿಂದ ತುಂಬಿಸಲಿ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶಮಾಡಲ್ಪಡಲಿ.

## English Translation.

Agni, the sage, inhabits the three elementary regions; may he, intelligent, and richly decorated, the messenger (of the gods), here perform worship to the thrice eleven deties, and satisfy all our desires: may all our enemies perish.

। ಸಂಹಿತಾಪಾಠಃ ।

ತ್ವಂ ನೋ ಅಗ್ನ ಆಯುಷು ತ್ವಂ ದೇವೇಷು ಪೂರ್ವ್ಯ ವಸ್ವ ಏಕ ಇರಜ್ಯಸಿ ।
ತ್ವಾಮಾಪಃ ಪರಿಸ್ರುತಃ ಪರಿ ಯಂತಿ ಸ್ವಸೇತವೋ ನಭಂತಾಮನ್ಯಕೇ ಸಮೇ ॥

॥ ಪದಪಾಠಃ ॥

ತ್ವಂ । ನಃ । ಅಗ್ನೇ । ಆಯುಷು । ತ್ವಂ । ದೇವೇಷು । ಪೂರ್ವ್ಯ । ವಸ್ವಃ । ಏಕಃ । ಇರಜ್ಯಸಿ । ತ್ವಾಂ । ಆಪಃ । ಪರಿಽಸ್ರುತಃ । ಪರಿ । ಯಂತಿ । ಸ್ವಽಸೇತವಃ । ನಭಂತಾಂ । ಅನ್ಯಕೇ । ಸಮೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಪೂರ್ವ್ಯಾಗ್ನೇ ತ್ವಮೇಕ ಏವಾಯುಷು ಮನುಷ್ಯೇಷು । ದ್ರುಹ್ಯವ ಆಯವ ಇತಿ ಮನುಷ್ಯನಾಮಸು ಪಾಠಾತ್ । ನೋಽಸ್ಮಾಕಂ ವಸ್ವೋ ಧನಸ್ಯೇರಜ್ಯಸಿ । ಈಶಿಷೇ । ದೇವೇಷ್ವಪಿ ತ್ವಮೇಕ ಏವ ವಸ್ವ ಇರಜ್ಯಸಿ । ಅಪಿ ಚ ತ್ವಾಂ ಸ್ವಸೇತವಃ ಸ್ವಭೂತಸೇತವಃ ಪರಿಸ್ರುತಃ ಪರಿಸ್ರವಂತ್ಯ ಆಪಃ ಪರಿ ಯಂತಿ । ಪರಿಗಚ್ಛಂತಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಪೂರ್ವ್ಯ**—ಪುರಾತನನಾದ । **ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ಏಕಃ**—ಒಬ್ಬನೇ । **ಆಯುಷು**—ಮಾನವರಲ್ಲೆಲ್ಲಾ । **ನಃ**—ನಮ್ಮ । **ವಸ್ವಃ**—ಧನಕ್ಕೆ । **ಇರಜ್ಯಸಿ**—ಪ್ರಭುವಾಗಿದ್ದೀಯೆ । **ದೇವೇಷು**—ದೇವತೆಗಳಲ್ಲಿಯೂ । **ತ್ವಂ**—ನೀನೊಬ್ಬನೇ ಪ್ರಭುವಾಗಿದ್ದೀಯೆ । **ಸ್ವಸೇತವಃ**—ತಮ್ಮ ಪರಿಮಿತಿಯನ್ನು ತಾವೇ ಸಂಪಾದಿಸಿಕೊಂಡಿರುವುವೂ । **ಪರಿಸ್ರುತಃ**—ಪ್ರವಹಿಸುವವೂ ಆದ । **ಆಪಃ**—ಉದಕಗಳು । **ತ್ವಾಂ**—ನಿನ್ನನ್ನು । **ಪರಿ ಯಂತಿ**—ಸುತ್ತಿ ಪ್ರವಹಿಸುತ್ತವೆ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

। ಭಾವಾರ್ಥ ॥

ಪುರಾತನನಾದ ಎಲೈ ಅಗ್ನಿಯೇ, ಮಾನವರಲ್ಲೆಲ್ಲಾ ನಮ್ಮ ಧನಕ್ಕೆ ನೀನೊಬ್ಬನೇ ಪ್ರಭುವಾಗಿದ್ದೀಯೆ. ದೇವತೆಗಳಲ್ಲಿಯೂ ನೀನೊಬ್ಬನೇ ಪ್ರಭುವಾಗಿದ್ದೀಯೆ. ತಮ್ಮ ದಡಗಳನ್ನು ತಾವೇ ಸಂಪಾದಿಸಿಕೊಂಡಿರುವುವೂ, ಪ್ರವಹಿಸುವುವೂ ಆದ ಉದಕಗಳು ನಿನ್ನನ್ನು ಸುತ್ತಿ ಪ್ರವಹಿಸುತ್ತವೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

You, ancient Agni, among men and gods, are alone to us the lord of wealth; the flowing waters confined within their own banks flow around you: may all our enemies perish.



# ನಲವತ್ತನೆಯ ಸೂಕ್ತವು

। ಸಾಯಣಭಾಷ್ಯಂ ।

**ಇಂದ್ರಾಗ್ನೀ ಯುವಮಿತಿ ದ್ವಾದಶರ್ಚಂ ದಶಮಂ ಸೂಕ್ತಂ ನಾಭಾಕಸ್ಯಾರ್ಷಂ । ದ್ವಿತೀಯಾ ಷಟ್ಪಂಚಾಶದಕ್ಷರಾ ಶಕ್ವರೀ ದ್ವಾದಶೀ ತ್ರಿಷ್ಟುಪ್ ಶಿಷ್ಟಾ ಮಹಾಪಂಕ್ತಯಃ । ಇಂದ್ರಾಗ್ನೀ ದೇವತಾ । ತಥಾ ಚಾನುಕ್ರಾಂತಂ । ಇಂದ್ರಾಗ್ನೀ ದ್ವಾದಶೈಂದ್ರಾಗ್ನಂ ತ್ರಿಷ್ಟುಬಂತಂ ದ್ವಿತೀಯಾ ಶಕ್ವರೀತಿ ॥ ಮಹಾವ್ರತೇ ನಿಷ್ಕೇವಲ್ಯ ಊರುಭಾಗ ಏವ ಸೂಕ್ತಂ । ತಥಾ ಚ ಪಂಚಮಾರಣ್ಯಕೇ ಸೂತ್ರಿತಂ । ಊರೂ ಇಂದ್ರಾಗ್ನೀ ಯುವಂ ಸು ನಃ । ಐ. ಆ. ೫-೩-೧ । ಇತಿ ॥ ಚಾತುರ್ವಿಂಶಿಕೇಽಹನಿ ತೃತೀಯಸವನೇ ಮೈತ್ರಾವರುಣೋ ಯದಿ ಮಹಾವಾಲಭಿದಂ ಶಂಸೇತ್ತದಾನೀಂ ಮಾಧ್ಯಂದಿನಸವನೇ ಹೋತ್ರಕಾಃ ಸ್ವಶಸ್ತ್ರ ಆರಂಭಣೀಯಾಭ್ಯ ಊರ್ಧ್ವಂ ನಾಭಾಕತೃಚಾವಾಪೇರನ್ । ತತ್ರ ತಾ ಹಿ ಮಧ್ಯಮಿತ್ಯಚ್ಛಾ-ವಾಕಸ್ಯ ನಾಭಾಕತೃಚಃ । ಸೂತ್ರಿತಂ ಚ । ತಾ ಹಿ ಮಧ್ಯಂ ಭರಾಣಾಮಿತ್ಯಚ್ಛಾವಾಕಃ । ಆ. ೭-೨ । ಇತಿ ॥ ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇ ಬ್ರಾಹ್ಮಣಾಚ್ಛಂಸಿನಃ ಪೂರ್ವೀಷ್ಟ ಇಂದ್ರೇತಿ ನಾಭಾಕತೃಚಃ । ಸೂತ್ರಿತಂ ಚ । ಪೂರ್ವೀಷ್ಟ ಇಂದ್ರೋಪಮಾತಯ ಇತಿ ಬ್ರಾಹ್ಮಣಾಚ್ಛಂಸೀ । ಆ. ೭-೨ । ಇತಿ ॥**

ಅನುವಾದವು—**ಇಂದ್ರಾಗ್ನೀ ಯುವಂ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ನಾಭಾಕನೆಂಬವನು ಋಷಿಯು, ಇಂದ್ರಾಗ್ನಿಗಳು ದೇವತೆಯು; ಈ ಸೂಕ್ತದ ಎರಡನೆಯ ಋಕ್ಕು ಐವತ್ತಾರು ಅಕ್ಷರಗಳುಳ್ಳ ಶಕ್ವರೀ ಎಂಬ ಛಂದಸ್ಸಿನದು; ಹನ್ನೆರಡನೆಯ ಋಕ್ಕು ತ್ರಿಷ್ಟುಪ್ಛಂದಸ್ಕವು. ಉಳಿದ ಋಕ್ಕುಗಳು ಮಹಾಪಂಕ್ತಿಚ್ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಇಂದ್ರಾಗ್ನೀ ದ್ವಾದಶೈಂದ್ರಾಗ್ನಂ ತ್ರಿಷ್ಟುಬಂತಂ ದ್ವಿತೀಯಾ ಶಕ್ವರೀ** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ಪಠಿಸಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಊರೂ ಇಂದ್ರಾಗ್ನೀ ಯುವಂ ಸು ನಃ** ಎಂಬ ವಾಕ್ಯದಿಂದ (ಐ. ಆ. ೫-೩-೧) ನಿರ್ದಿಷ್ಟವಾಗಿರುವುದು. ಯಾಗದ ಚಾತುರ್ವಿಂಶಿಕವೆಂಬ ದಿನದ ತೃತೀಯಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಮಹಾವಾಲಭಿತ್ ಎಂಬ ಮಂತ್ರವನ್ನು ಪಠಿಸಿದಲ್ಲಿ ಆಗ ಮಾಧ್ಯಂದಿನಸವನಕಾಲದಲ್ಲಿ ಹೋತೃವರ್ಗದ ಋಕ್ಕುಗಳು ತಾವು ಪಠಿಸಬೇಕಾದ ಶಸ್ತ್ರಮಂತ್ರಗಳನ್ನು ಪ್ರಾರಂಭಿಸಿದನಂತರ ನಾಭಾಕತೃಚಗಳನ್ನು ಆವಾಪಾರ್ಥವಾಗಿ ಪಠಿಸಬೇಕು. ಅಲ್ಲಿ **ತಾ ಹಿ ಮಧ್ಯಂ** ಎಂದು ಮೊದಲಾಗುವ ಮೂರು ಋಕ್ಕುಗಳಿಗೆ (ಈ ಸೂಕ್ತದ ೩-೫ ಋಕ್ಕುಗಳು) ಅಚ್ಛಾವಾಕನು ಪಠಿಸಬೇಕಾದ ನಾಭಾಕತೃಚವೆಂದು ಹೆಸರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ—**ತಾ ಹಿ ಮಧ್ಯಂ ಭರಾಣಾಮಿತ್ಯಚ್ಛಾವಾಕಃ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು. ಮತ್ತು ಚಾತುರ್ವಿಂಶಿಕವೆಂಬ ದಿವಸದ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು **ಪೂರ್ವೀಷ್ಟ ಇಂದ್ರ** ಎಂದು ಪ್ರಾರಂಭವಾಗುವ ಈ ಸೂಕ್ತದ ೯-೧೧ ಋಕ್ಕುಗಳನ್ನು ನಾಭಾಕತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪೂರ್ವೀಷ್ಟ ಇಂದ್ರೋಪಮಾತಯ ಇತಿ ಬ್ರಾಹ್ಮಣಾಚ್ಛಂಸೀ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು.

## ಸೂಕ್ತ—೪೦

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೪೦ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೨೪, ೨೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
॥ ಋಷಿಃ—ನಾಭಾಕಃ ಕಾಣ್ವಃ ॥
॥ ದೇವತಾ—ಇಂದ್ರಾಗ್ನೀ ॥
॥ ಛಂದಃ—೧, ೪-೧೧. ಮಹಾಪಂಕ್ತಿಃ । ೨. ಶಕ್ವರೀ । ೧೨. ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಇಂದ್ರಾಗ್ನೀ ಯುವಂ ಸು ನಃ ಸಹಂತಾ ದಾಸಥೋ ರಯಿಂ ।
ಯೇನ ದೃಳ್ಹಾ ಸಮತ್ಸ್ವಾ ವೀಳು ಚಿತ್ಸಾಹಿಷೀಮಹ್ಯಗ್ನಿರ್ವನೇವ ವಾತ
ಇನ್ನಭಂತಾಮನ್ಯಕೇ ಸಮೇ ॥ ೧ ॥

॥ ಪದಪಾಠಃ ॥

ಇಂದ್ರಾಗ್ನೀ ಇತಿ । ಯುವಂ । ಸು । ನಃ । ಸಹಂತಾ । ದಾಸಥಃ । ರಯಿಂ ।
ಯೇನ । ದೃಳ್ಹಾ । ಸಮತ್ಽಸು । ಆ । ವೀಳು । ಚಿತ್ । ಸಹಿಷೀಮಹಿ । ಅಗ್ನಿಃ । ವನಾಽಇವ । ವಾತೇ ।
ಇತ್ । ನಭಂತಾಂ । ಅನ್ಯಕೇ । ಸಮೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರಾಗ್ನೀ ಸಹಂತಾ ಶತ್ರೂನಭಿಭವಂತೌ ಯುವಂ ಯುವಾಂ ನೋಽಸ್ಮಭ್ಯಂ ರಯಿಂ ಧನಂ ಸುಷ್ಠು ದಾಸಥಃ । ದತ್ತಂ । ತಂ ರಯಿಂ ವಿಶಿನಷ್ಟಿ । ಯೇನ ರಯಿಣಾ ಸಮತ್ಸು ಚಿತ್ ಸಂಗ್ರಾಮೇ ದೃಢಾ ಚಿದ್ದೃಢಾನಿ ಸ್ಥಿರಾಣ್ಯಪಿ ವೀಳು ಶತ್ರುಬಲಾನ್ಯಗ್ನಿರ್ವನೇವ ಯಥಾಗ್ನಿರ್ವನಾನಿ ವಾತೇ ಇದ್ವಾತೇನೈವಾಭಿಭವತಿ ತಥಾ ಸಹಿಷೀಮಹಿ ಅಭಿಭವಾಮ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ಇಂದ್ರಾಗ್ನೀ—ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ । **ಅಗ್ನಿಃ**—ಅಗ್ನಿಯು । **ವಾತೇ ಇತ್**—ವಾಯುವಿನಿಂದ ಪ್ರೇರಿತನಾಗಿ । **ವನೇವ**—ವನವನ್ನೆಲ್ಲಾ ದಹಿಸುವಂತೆ । **ಯೇನ**—ಯಾವ ಧನದ ಸಹಾಯದಿಂದ । **ಸಮತ್ಸು ಚಿತ್**—ಸಂಗ್ರಾಮಗಳಲ್ಲಿಯೂ । **ದೃಢಾಚಿತ್**—ಅತ್ಯಂತ ಶಕ್ತಿಯುತವಾಗಿದ್ದಾಗ್ಯೂ । **ವೀಳು**—ಶತ್ರುಬಲವನ್ನು । **ಸಹಿಷೀಮಹಿ**—ನಾವು ಸೋಲಿಸುವೆವೋ ಅಂತಹ । **ರಯಿಂ**—ಧನವನ್ನು ।

**ಸಹಂತಾ**—ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳ | **ಯುವಂ**—ನೀವು | **ನಃ**—ನಮಗೆ | **ಸು ದಾಸಥಃ**—ಪೂರ್ಣವಾಗಿ ಕೊಡಿರಿ | **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ | **ಸಮೇ**—ಒಂದೇಕಾಲದಲ್ಲಿ | **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ಅಗ್ನಿದೇವತೆಗಳೇ, ವಾಯುವಿನಿಂದ ಪ್ರೇರಿತನಾದ ಅಗ್ನಿಯು ವನವನ್ನೆಲ್ಲಾ ದಹಿಸುವಂತೆ, ಯಾವ ಧನದ ಸಹಾಯದಿಂದ ಸಂಗ್ರಾಮಗಳಲ್ಲಿ ಅತ್ಯಂತ ಶಕ್ತಿಯುತರಾಗಿದ್ದಾಗ್ಯೂ ಶತ್ರುಬಲಗಳನ್ನು ನಾವು ಸೋಲಿಸುವೆವೋ ಅಂತಹ ಧನವನ್ನು ಶತ್ರುನಾಶಕರಾದ ನೀವು ನಮಗೆ ಅತಿಶಯವಾಗಿ ಕೊಡಿರಿ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

English Translation.

Victorious Indra and Agni bestow upon us riches whereby we may destroy our powerful enemies in combats as fire fanned by the wind consumes the forests : may all our enemies perish.

॥ ಸಂಹಿತಾಪಾಠಃ ॥

ನಹಿ ವಾಂ ವವ್ರಯಾಮಹೇಽಥೇಂದ್ರಮಿದ್ಯಜಾಮಹೇ ಶವಿಷ್ಠಂ ನೃಣಾಂ ನರಂ ।
ಸ ನಃ ಕದಾ ಚಿದರ್ವತಾ ಗಮದಾ ವಾಜಸಾತಯೇ ಗಮದಾ ಮೇಧಸಾತಯೇ ನಭಂತಾಮನ್ಯಕೇ ಸಮೇ ॥ ೨ ॥

॥ ಪದಪಾಠಃ ॥

ನಹಿ । ವಾಂ । ವವ್ರಯಾಮಹೇ । ಅಥ । ಇಂದ್ರಂ । ಇತ್ । ಯಜಾಮಹೇ । ಶವಿಷ್ಠಂ । ನೃಣಾಂ । ನರಂ ।
ಸಃ । ನಃ । ಕದಾ । ಚಿತ್ । ಅರ್ವತಾ । ಗಮತ್ । ಆ । ವಾಜಸಾತಯೇ । ಗಮತ್ । ಆ । ಮೇಧಸಾತಯೇ । ನಭಂತಾಂ । ಅನ್ಯಕೇ । ಸಮೇ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರಾಗ್ನೀ ವಾಂ ಯುವಾಂ ನ ವವ್ರಯಾಮಹೇ । ವಯಂ ಧನಂ ನ ಯಾಚಾಮಹೇ । ಅಥ ಹ್ಯಪಿ ತರ್ಹಿ ಶವಿಷ್ಠಮತಿಶಯೇನ ಬಲವಂತಂ ನೃಣಾಂ ನರಂ ನೇತೄಣಾಮಪಿ ನೇತಾರಮಿಂದ್ರ-**

ಮಿದಿಂದ್ರಮೇವ ಯಜಾಮಹೇ । ಸ ಇಂದ್ರೋ ನೋಽಸ್ಮಾನರ್ವತಾಶ್ವೇನ ಕದಾ ಚಿದ್ವಾಜಸಾತಯೇಽನ್ನಲಾಭಾಯಾ ಗಮತ್ । ಆಗಚ್ಛತಿ । ಕದಾಚಿನ್ಮೇಧಸಾತಯೇ ಯಜ್ಞಭಜನಾಯಾ ಗಮತ್ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರಾಗ್ನಿಗಳೇ) **ವಾಂ**—ನಿಮ್ಮಿಬ್ಬರನ್ನು ಒಟ್ಟಿಗೆ । **ನಹಿ ವವ್ರಯಾಮಹೇ**—ನಾವು ಯಾಚಿಸುವುದಿಲ್ಲ । **ಅಥ ಹಿ**—ಆದರೆ । **ಶವಿಷ್ಠಂ**—ಅತ್ಯಂತ ಶಕ್ತಿಯುತನೂ । **ನೃಣಾಂ**—ಮಾನವರಿಗೆ । **ನರಂ**—ನೇತೃವಾದವನೂ ಆದ । **ಇಂದ್ರಮಿತ್**—ಇಂದ್ರನನ್ನೇ । **ಯಜಾಮಹೇ**—ಪೂಜಿಸುತ್ತೇವೆ । **ಸಃ**—ಆ ಇಂದ್ರನು । **ನಃ**—ನಮ್ಮಲ್ಲಿಗೆ । **ಅರ್ವತಾ**—ತನ್ನ ಅಶ್ವದೊಂದಿಗೆ । **ಕದಾಚಿತ್**—ಅನೇಕವೇಳೆ । **ವಾಜಸಾತಯೇ**—ಅನ್ನಲಾಭಾರ್ಥವಾಗಿ । **ಆ ಗಮತ್**—ಬರುತ್ತಾನೆ । **ಮೇಧಸಾತಯೇ**—ಯಜ್ಞನಿರ್ವಹಣಕ್ಕಾಗಿಯೂ । **ಆ ಗಮತ್**—ಬರುತ್ತಾನೆ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಎಲೈ ಇಂದ್ರಾಗ್ನಿಗಳೇ, ನಾವು ನಿಮ್ಮಿಬ್ಬರನ್ನು ಒಟ್ಟಿಗೆ ಯಾಚಿಸುವುದಿಲ್ಲ. ಆದರೆ, ಅತ್ಯಂತ ಶಕ್ತಿಯುತನೂ, ಮಾನವರಿಗೆ ನೇತೃವಾದವನೂ ಆದ ಇಂದ್ರನನ್ನೇ ಪೂಜಿಸುತ್ತೇವೆ. ಆ ಇಂದ್ರನು ನಮ್ಮಲ್ಲಿಗೆ ತನ್ನ ಅಶ್ವದೊಂದಿಗೆ ಅನೇಕವೇಳೆ ಅನ್ನಲಾಭಾರ್ಥವಾಗಿ ಬರುತ್ತಾನೆ. ಯಜ್ಞನಿರ್ವಹಣಕ್ಕಾಗಿಯೂ ಬರುತ್ತಾನೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

English Translation.

Do we not invoke you both ? we worship especially Indra, who is the strongest leader of men : he comes occasionally with his horses to bestow upon us food ; he comes to partake of the sacrifice : may all onr enemies perish.

॥ ಸಂಹಿತಾಪಾಠಃ ॥

ತಾ ಹಿ ಮಧ್ಯಂ ಭರಾಣಾಮಿಂದ್ರಾಗ್ನೀ ಅಧಿಕ್ಷಿತಃ ।
ತಾ ಉ ಕವಿತ್ವನಾ ಕವೀ ಪೃಚ್ಛ್ಯಮಾನಾ ಸಖೀಯತೇ ಸಂ ಧೀತಮಶ್ನುತಂ
ನರಾ ನಭಂತಾಮನ್ಯಕೇ ಸಮೇ ॥ ೩ ॥

॥ ಪದಪಾಠಃ ॥

ತಾ । ಹಿ । ಮಧ್ಯಂ । ಭರಾಣಾಂ । ಇಂದ್ರಾಗ್ನೀ ಇತಿ । ಅಧಿಽಕ್ಷಿತಃ ।
ತಾ । ಊಂ ಇತಿ । ಕವಿಽತ್ವನಾ । ಕವೀ ಇತಿ । ಪೃಚ್ಛ್ಯಮಾನಾ । ಸಖಿಽಯತೇ । ಸಂ । ಧೀತಂ । ಅಶ್ನುತಂ ।
ನರಾ । ನಭಂತಾಂ । ಅನ್ಯಕೇ । ಸಮೇ ॥ ೩ ॥

। ಸಾಯಣಭಾಷ್ಯಂ ॥

**ತಾ ತೌ ಪ್ರಸಿದ್ಧಾವಿಂದ್ರಾಗ್ನೀ ಭರಾಣಾಂ ಸಂಗ್ರಾಮಾಣಾಂ ಮಧ್ಯಮಧಿಕ್ಷಿತಃ । ಅಧಿನಿವಸತೋ ಹಿ । ಅಥ ಪ್ರತ್ಯಕ್ಷಸ್ತುತಿಃ । ಹೇ ನರಾ ನೇತಾರೌ ಕವಿತ್ವನಾ ಕವಿತ್ವೇನ ಕವೀ ಕ್ರಾಂತಕರ್ಮಾಣೌ ಪೃಚ್ಛ್ಯಮಾನಾ ಕವಿಜನೈಃ ಪೃಚ್ಛ್ಯಮಾನೌ ತಾ ಉ ತಾವೇವ ಯುವಾಂ ಸಖೀಯತೇ ಸಖಿತ್ವಮಿಚ್ಛತೇ ಯಜಮಾನಾಯ ಧೀತಂ ತತ್ಕೃತಂ ಕರ್ಮ ಸಮಶ್ನುತಂ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ತಾ**—ಪ್ರಸಿದ್ಧರಾದ । **ಇಂದ್ರಾಗ್ನೀ**-ಇಂದ್ರಾಗ್ನಿಗಳಿಬ್ಬರೂ । **ಭರಾಣಾಂ**-ಸಂಗ್ರಾಮಗಳ । **ಮಧ್ಯಂ**—ಮಧ್ಯಭಾಗದಲ್ಲಿ । **ಅಧಿಕ್ಷಿತಃ ಹಿ**—ಸ್ಥಿರವಾಗಿ ನಿಲ್ಲಬಲ್ಲರು । **ನರಾ**—ನೇತೃಗಳೂ । **ಕವಿತ್ವನಾ**—ತಮ್ಮ ಕಾವ್ಯಾತ್ಮಕವಾದ ಕರ್ಮಗಳಿಂದ । **ಕವೀ**—ಉತ್ತಮವಾದ ಕರ್ಮಕರ್ತರೂ । **ಪೃಚ್ಛ್ಯಮಾನಾ**—ಋತ್ವಿಕ್ಕುಗಳಿಂದ ಪ್ರಾರ್ಥಿತರಾಗುವವರೂ । **ತಾ ಉ**—ಪ್ರಸಿದ್ಧರೂ ಆದ ಎಲೈ ಇಂದ್ರಾಗ್ನಿಗಳೇ । **ಸಖೀಯತೇ**—ನಿಮ್ಮ ಸಖಿತ್ವವನ್ನು ಅಪೇಕ್ಷಿಸುವವನ । **ಧೀತಿಂ**—ಪ್ರಜ್ಞಾಯುತವಾದ ಕರ್ಮವನ್ನು । **ಸಮಶ್ನುತಂ**—ನೀವು ಸ್ವೀಕರಿಸುತ್ತೀರಿ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಟ್ಟಿಗೆ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಪ್ರಸಿದ್ಧರಾದ ಇಂದ್ರಾಗ್ನಿಗಳಿಬ್ಬರೂ ಸಂಗ್ರಾಮಗಳ ಮಧ್ಯಭಾಗದಲ್ಲಿ ಸ್ಥಿರವಾಗಿ ನಿಲ್ಲಬಲ್ಲರು. ನೇತೃಗಳೂ ತಮ್ಮ ಕಾವ್ಯಾತ್ಮಕವಾದ ಕರ್ಮಗಳಿಂದ ಉತ್ತಮವಾದ ಕರ್ಮಕರ್ತರೂ, ಋತ್ವಿಕ್ಕುಗಳಿಂದ ಪ್ರಾರ್ಥಿತರಾಗುವವರೂ, ಪ್ರಸಿದ್ಧರೂ ಆದ ಎಲೈ ಇಂದ್ರಾಗ್ನಿಗಳೇ, ನಿಮ್ಮ ಸಖಿತ್ವವನ್ನು ಅಪೇಕ್ಷಿಸುವವನ ಪ್ರಜ್ಞಾಯುತವಾದ ಕರ್ಮವನ್ನು ನೀವು ಸ್ವೀಕರಿಸುತ್ತೀರಿ. ನಮ್ಮ ಶತ್ರುಗಳೆಲ್ಲರೂ ಒಟ್ಟಿಗೆ ನಾಶವಾಗಲಿ.

## English Translation.

They two, Indra and Agni, are present in the midst of battles: do you two, leaders of rites, who are really sages, when solicited (by the wise), accept the offeriug (from him) who seeks your friendship: may all our enemies perish.

॥ ಸಂಹಿತಾಪಾಠಃ ॥

ಅಭ್ಯರ್ಚ ನಭಾಕವದಿಂದ್ರಾಗ್ನೀ ಯಜಸಾ ಗಿರಾ ।
ಯಯೋರ್ವಿಶ್ವಮಿದಂ ಜಗದಿಯಂ ದ್ಯೌಃ ಪೃಥಿವೀ ಮಹ್ಯುಪಸ್ಥೇ
ಬಿಭೃತೋ ವಸು ನಭಂತಾಮನ್ಯಕೇ ಸಮೇ ॥ ೪ ॥

॥ ಪದಪಾಠಃ ॥

ಅಭಿ । ಅರ್ಚ । ನಭಾಕವತ್ । ಇಂದ್ರಾಗ್ನೀ ಇತಿ । ಯಜಸಾ । ಗಿರಾ ।

ಯಯೋಃ । ವಿಶ್ವಂ । ಇದಂ । ಜಗತ್ । ಇಯಂ । ದ್ಯೌಃ । ಪೃಥಿವೀ । ಮಹೀ । ಉಪಸ್ಥೇ । ಬಿಭೃತಃ ।

ವಸು । ನಭಂತಾಂ । ಅನ್ಯಕೇ । ಸಮೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ನಾಭಾಕ ನಭಾಕವದಿಂದ್ರಾಗ್ನೀ ಯಜಸಾ ಯಾಗೇನ ಗಿರಾ ಸ್ತುತ್ಯಾ ಚಾಭ್ಯರ್ಚ । ಅಭಿಪೂಜಯ । ಯಯೋರಿಂದ್ರಾಗ್ನ್ಯೋರ್ವಿಶ್ವಂ ಸರ್ವಮಿದಂ ಜಗತ್ತಿಷ್ಠತಿ । ಯಯೋರಂಕ್ಯೋಃಪಸ್ಥೆ ಇಯಂ ದ್ಯೌರ್ಮಹೀ ಮಹತೀ ಪೃಥಿವೀ ಚ ದ್ಯಾವಾಪೃಥಿವ್ಯಾವುಭೇ ವಸು ಧನಂ ಬಿಭೃತಃ ಧಾರಯತಃ । ಸಿದ್ಧಮನ್ಯತ್ ।

॥ ಪ್ರತಿಪದಾರ್ಥ ॥

(ಎಲೈ ನಾಭಾಕನೇ) **ನಭಾಕವತ್**—ನಭಾಕನು ಪೂಜಿಸಿದಂತೆ । **ಯಯೋಃ**—ಯಾವ ಇಂದ್ರಾಗ್ನಿಗಳ ಆಧಾರದ ಮೇಲೆ । **ವಿಶ್ವಂ**—ಸಮಸ್ತವಾದ । **ಇದಂ ಜಗತ್**—ಈ ಜಗತ್ತೆಲ್ಲವೂ ನಿಂತಿದೆಯೋ । **ಉಪಸ್ಥೇ**—ಯಾವ ಇಂದ್ರಾಗ್ನಿಗಳ ತೊಡೆಯ ಮೇಲೆ । **ಇಯಂ ದ್ಯೌಃ**— ಈ ದ್ಯುಲೋಕವೂ । **ಮಹೀ**—ಮಹತ್ತಾದ । **ಪೃಥಿವೀ**—ಪೃಥಿವಿಯೂ। **ವಸು**—ಧನವನ್ನು। **ಬಿಭೃತಃ**—ಧರಿಸುವಂತೆ ಮಾಡುವುವೋ ಅಂತಹ। **ಇಂದ್ರಾಗ್ನೀ**—ಇಂದ್ರಾಗ್ನಿಗಳನ್ನು । **ಯಜಸಾ**—ಯಾಗದಿಂದಲೂ । **ಗಿರಾ**—ಸ್ತುತಿಯಿಂದಲೂ । **ಅಭ್ಯರ್ಚ**—ಪೂಜಿಸು । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಎಲೈ ನಾಭಾಕನೇ, ಯಾವ ಇಂದ್ರಾಗ್ನಿಗಳ ಆಧಾರದ ಮೇಲೆ ಸಮಸ್ತವಾದ ಈ ಜಗತ್ತೆಲ್ಲವೂ ನಿಂತಿದೆಯೋ ಯಾವ ಇಂದ್ರಾಗ್ನಿಗಳ ತೊಡೆಯ ಮೇಲೆ ಈ ದ್ಯುಲೋಕವೂ ಮಹತ್ತಾದ ಪೃಥಿವಿಯೂ ಧನವನ್ನು ಧರಿಸುವಂತೆ ಮಾಡುವುವೋ ಅಂತಹ ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

Worship, like Nabhaka, Indra and Agni with sacrifice and praise, of whom is this universe, upon whose lap this heaven and the spacious earth deposit their treasure: may all our enemies perish.

॥ ಸಂಹಿತಾಪಾಠಃ ॥

ಪ್ರ ಬ್ರಹ್ಮಾಣಿ ನಭಾಕವದಿಂದ್ರಾಗ್ನಿಭ್ಯಾಮಿರಜ್ಯತ ।

ಯಾ ಸಪ್ತಬುಧ್ನಮರ್ಣವಂ ಜಿಹ್ಮಬಾರಮಪೋರ್ಣುತ ಇಂದ್ರ ಈಶಾನ

ಓಜಸಾ ನಭಂತಾಮನ್ಯಕೇ ಸಮೇ ॥ ೫ ॥

॥ ಪದಪಾಠಃ ॥

ಪ್ರ । ಬ್ರಹ್ಮಾಣಿ । ನಭಾಕ್ಽವತ್ । ಇಂದ್ರಾಗ್ನಿಽಭ್ಯಾಂ । ಇರಜ್ಯತ ।

ಯಾ । ಸಪ್ತಽಬುಧ್ನಂ । ಅರ್ಣವಂ । ಜಿಹ್ಮಽಬಾರಂ । ಅಪಽಊರ್ಣುತಃ । ಇಂದ್ರಃ । ಈಶಾನಃ । ಓಜಸಾ ।

ನಭಂತಾಂ । ಅನ್ಯಕೇ । ಸಮೇ ॥ ೫ ॥

॥ ಸಾಯಣಭಾಷ್ಯಂ ॥

ಬ್ರಹ್ಮಾಣಿ ಸ್ತೋತ್ರಾಣೀಂದ್ರಾಗ್ನಿಭ್ಯಾಂ ನಭಾಕವತ್ಪ್ರೇರಜ್ಯತ । ನಾಭಾಕಃ ಪ್ರೇರಯತೇ । ಯಾ ಯಾವಿಂದ್ರಾಗ್ನೀ ಸಪ್ತಬುಧ್ನಂ ಸಪ್ತಮೂಲಂ ಜಿಹ್ಮಬಾರಂ ಪಿಹಿತದ್ವಾರಮರ್ಣವಮಪೋರ್ಣುತಃ ತೇಜೋಭಿರಾಚ್ಛಾದಯತಃ ತಯೋರ್ಮಧ್ಯ ಓಜಸಾ ಬಲೇನೇಂದ್ರ ಈಶಾನ ಈಶ್ವರೋ ಭವತಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಯಾ**—ಯಾವ ಇಂದ್ರಾಗ್ನಿಗಳು । **ಸಪ್ತಬುಧ್ನಂ**—ಸಪ್ತಸಂಖ್ಯಾಕವಾದ ಮೂಲವುಳ್ಳದ್ದೂ । **ಜಿಹ್ಮಬಾರಂ**—ಮುಚ್ಚಲ್ಪಟ್ಟ ದ್ವಾರವುಳ್ಳದ್ದೂ ಆದ । **ಅರ್ಣವಂ**—ಸಮುದ್ರವನ್ನು । **ಅಪೋರ್ಣುತಃ**—ತಮ್ಮ ತೇಜಸ್ಸುಗಳಿಂದ ಆಚ್ಛಾದಿಸುವರೋ । ಮತ್ತು (ಯಾರ ನಡುವೆ) **ಓಜಸಾ**—ಸ್ವವೀರ್ಯದಿಂದ । **ಇಂದ್ರಃ**—ಇಂದ್ರನು । **ಈಶಾನಃ**—ಪ್ರಭುವಾಗಿರುವನೋ ಅಂತಹ । **ಇಂದ್ರಾಗ್ನಿಭ್ಯಾಂ**—ಇಂದ್ರಾಗ್ನಿಗಳನ್ನುದ್ದೇಶಿಸಿ । **ಬ್ರಹ್ಮಾಣಿ**—ಸ್ತುತಿಗಳನ್ನು । **ನಭಾಕವತ್**—ನಭಾಕನು ಅರ್ಪಿಸಿದಂತೆ । **ಪ್ರ ಇರಜ್ಯತ**—ಅರ್ಪಿಸಿರಿ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಯಾವ ಇಂದ್ರಾಗ್ನಿಗಳು ಸಪ್ತಸಂಖ್ಯಾಕವಾದ ಮೂಲವುಳ್ಳದ್ದೂ, ಮುಚ್ಚಲ್ಪಟ್ಟ ದ್ವಾರವುಳ್ಳದ್ದೂ ಆದ ಸಮುದ್ರವನ್ನು ತಮ್ಮ ತೇಜಸ್ಸುಗಳಿಂದ ಆಚ್ಛಾದಿಸುವರೋ ಮತ್ತು ಯಾರ ನಡುವೆ ಇಂದ್ರನು ಸ್ವವೀರ್ಯದಿಂದ ಪ್ರಭುವಾಗಿರುವನೋ ಅಂತಹ ಇಂದ್ರಾಗ್ನಿಗಳನ್ನುದ್ದೇಶಿಸಿ ಸ್ತುತಿಗಳನ್ನು ನಭಾಕನು ಅರ್ಪಿಸಿದಂತೆ ಅರ್ಪಿಸಿರಿ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ

English Translation.

Address like Nabhaka your praises to Indra and Agni, who overspread (with their lustre) the seven-rooted ocean whose gates are hidden, and of whom Indra by his might is the lord : may all our enemies perish.

॥ ಸಂಹಿತಾಪಾಠಃ ॥

ಅಪಿ ವೃಶ್ಚ ಪುರಾಣವದ್ವ್ರತತೇರಿವ ಗುಷ್ಪಿತಮೋಜೋ ದಾಸಸ್ಯ ದಂಭಯ।

ವಯಂ ತದಸ್ಯ ಸಂಭೃತಂ ವಸ್ವಿಂದ್ರೇಣ ವಿ ಭಜೇಮಹಿ ನಭಂತಾಮನ್ಯಕೇ

ಸಮೇ ॥ ೬ ॥

|| ಪದಪಾಠಃ ||

ಅಪಿ । ವೃಶ್ಚ । ಪುರಾಣಽವತ್ । ವ್ರತತೇಃಽಇವ । ಗುಷ್ಪಿತಂ । ಓಜಃ । ದಾಸಸ್ಯ । ದಂಭಯ ।

ವಯಂ । ತತ್ । ಅಸ್ಯ । ಸಂಽಭೃತಂ । ವಸು । ಇಂದ್ರೇಣ । ವಿ । ಭಜೇಮಹಿ । ನಭಂತಾಂ । ಅನ್ಯಕೇ । ಸಮೇ ॥ ೬ ॥

|| ಸಾಯಣಭಾಷ್ಯಂ ||

ಅಪಿ ಚ ಹೇ ಇಂದ್ರ ಪುರಾಣವತ್ಪ್ರತ್ನೋ ಯಥಾ ವ್ರತತೇರಿವ ಯಥಾ ವಲ್ಲ್ಯಾ ಗುಷ್ಪಿತಂ ನಿರ್ಗತಾಂ ಶಾಖಾಂ ವೃಶ್ಚತಿ ತಥಾ ಶತ್ರೂಣಾಂ ವೃಶ್ಚ । ಛೇದಯ । ತದೇವಾಹ । ದಾಸಸ್ಯ ದಾಸನಾಮಕಸ್ಯ ಶತ್ರೋರೋಜೋ ಬಲಂ ದಂಭಯ । ನಾಶಯ । ಅಥ ಪರೋಕ್ಷಸ್ತುತಿಃ । ವಯಂ ನಾಭಾಕಾ ಅಸ್ಯ ದಾಸಸ್ಯ ಸಂಭೃತಂ ವಸ್ವಿಂದ್ರೇಣ ಹೇತುನಾ ವಿ ಭಜೇಮಹಿ । ಸಿದ್ಧಮನ್ಯತ್ ॥

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ವ್ರತತೇರಿವ**—ಬಳ್ಳಿಯಿಂದ । **ಗುಷ್ಪಿತಂ**—ಹೊರಕ್ಕೆ ಹೊರಟಿರುವ ಅಧಿಕವಾದ ಶಾಖಾಭಾಗವನ್ನು । **ಪುರಾಣವತ್**—ಹಳೆಯ ಕುಡುಗೋಲು ಕತ್ತರಿಸುವಂತೆ । **ವೃಶ್ಚ**—ಶತ್ರುಶಾಖೆಗಳನ್ನು ಛೇದಮಾಡು । **ದಾಸಸ್ಯ**—ಅಸುರನ । ಓಜಃ—ವೀರ್ಯವನ್ನು । **ದಂಭಯ**—ನಾಶಮಾಡು । **ವಯಂ**—ನಾಭಾಕರಾದ ನಾವು । **ಅಸ್ಯ**—ಈ ಅಸುರನಿಂದ । **ಸಂಭೃತಂ**— ಶೇಖರಿಸಲ್ಪಟ್ಟ । **ತತ್ ವಸು**—ಧನವನ್ನು । **ಇಂದ್ರೇಣ**—ಇಂದ್ರನ ಸಹಾಯದಿಂದ । **ವಿ ಭಜೇಮಹಿ**—ಅನುಭವಿಸುವಂತಾಗಲಿ । **ಅನ್ಯಕೇ**—ನಮ್ಮ ಶತ್ರುಗಳು । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

|| ಭಾವಾರ್ಥ ||

ಎಲೈ ಇಂದ್ರನೇ, ಬಳ್ಳಿಯಿಂದ ಹೊರಕ್ಕೆ ಹೊರಟುಬರುವ ಅಧಿಕವಾದ ಶಾಖಾಭಾಗವನ್ನು ಹಳೆಯ ಕುಡುಗೋಲು ಕತ್ತರಿಸುವಂತೆ, ಶತ್ರುಶಾಖೆಗಳನ್ನು ನೀನು ಛೇದಮಾಡು. ಅಸುರನ ವೀರ್ಯವನ್ನು ನಾಶಮಾಡು. ನಾಭಾಕರಾದ ನಾವು ಈ ಅಸುರನಿಂದ ಶೇಖರಿಸಲ್ಪಟ್ಟ ಧನವನ್ನು ಇಂದ್ರನ ಸಹಾಯದಿಂದ ಅನುಭವಿಸುವಂತಾಗಲಿ. ನಮ್ಮ ಶತ್ರುಗಳು ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

Cut off (the foe), Indra, as an old (pruner) the protruding (branch) of a creeper; humble the strength of the Dasa; may we divide his accumulated treasure (despoiled) by Indra : may all our enemies perish.

॥ ಸಂಹಿತಾಪಾಠಃ ॥

ಯದಿಂದ್ರಾಗ್ನೀ ಜನಾ ಇಮೇ ವಿಹ್ವಯಂತೇ ತನಾ ಗಿರಾ ।

ಅಸ್ಮಾಕೇಭಿರ್ನೃಭಿರ್ವಯಂ ಸಾಸಹ್ಯಾಮ ಪೃತನ್ಯತೋ ವನುಯಾಮ

ವನುಷ್ಯತೋ ನಭಂತಾಮನ್ಯಕೇ ಸಮೇ ॥ ೭ ॥

॥ ಪದಪಾಠಃ ॥

ಯತ್ । ಇಂದ್ರಾಗ್ನೀ ಇತಿ । ಜನಾಃ । ಇಮೇ । ವಿಽಹ್ವಯಂತೇ । ತನಾ । ಗಿರಾ ।

ಅಸ್ಮಾಕೇಭಿಃ । ನೃಽಭಿಃ । ವಯಂ । ಸಸಹ್ಯಾಮ । ಪೃತನ್ಯತಃ । ವನುಯಾಮ । ವನುಷ್ಯತಃ ।

ನಭಂತಾಂ । ಅನ್ಯಕೇ । ಸಮೇ ॥ ೭ ॥

॥ ಸಾಯಣಭಾಷ್ಯಂ ॥

ಯದ್ಯ ಇಮೇ ಜನಾಸ್ತನಾ ಧನೇನ ಗಿರಾ ಸ್ತುತ್ಯಾ ಚೇಂದ್ರಾಗ್ನೀ ವಿಹ್ವಯಂತೇ ವಿಶೇಷೇಣಾಹ್ವಯಂತಿ ತೇಷು ಮಧ್ಯೇ ವಯಂ ನಾಭಾಕಾಃ ಪೃತನ್ಯತಃ ಪೃತನಾಮಿಚ್ಛಂತೋಽಸ್ಮಾಕೇಭಿರಸ್ಮಾಕೀನೈರ್ನೃಭಿರ್ಮನುಷ್ಯೈಃ ಸಸಹ್ಯಾಮ । ಶತ್ರೂನಭಿಭವೇಮ । ವನುಷ್ಯತಃ । ಸ್ತುತಿಮಿಚ್ಛಂತಃ ಶತ್ರೂನ್ವನುಯಾಮ ಚ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಯತ್**—ಯಾವ । **ಇಮೇ ಜನಾಃ**—ಈ ಯಜಮಾನರು । **ತನಾ**—ಧನದಿಂದಲೂ । **ಗಿರಾ**—ಸ್ತುತಿಯಿಂದಲೂ । **ಇಂದ್ರಾಗ್ನೀ**—ಇಂದ್ರಾಗ್ನಿಗಳನ್ನು । **ವಿಹ್ವಯಂತೇ**—ವಿಶೇಷರೀತಿಯಲ್ಲಿ ಪ್ರಾರ್ಥಿಸುವರೋ (ಅವರ ನಡುವೆ ಇರುವ) । **ವಯಂ**—ನಾಭಾಕರಾದ ನಾವು । **ಪೃತನ್ಯತಃ**—ಶತ್ರುಗಳನ್ನು ಎದುರಿಸುತ್ತಾ । **ಅಸ್ಮಾಕೇಭಿಃ**—ನಮಗೆ ಸೇರಿದ । **ನೃಭಿಃ**—ವೀರಪುರುಷರೊಡನೆ । **ಸಸಹ್ಯಾಮ**—ಶತ್ರುಗಳನ್ನು ಸೋಲಿಸೋಣ । **ವನುಷ್ಯತಃ**—ಸ್ತುತಿಪ್ರಿಯರನ್ನು । **ವನುಯಾಮ**—ಸ್ತುತಿಸೋಣ । **ಅನ್ಯಕೇ**—ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಯಾವ ಈ ಯಜಮಾನರು ಧನದಿಂದಲೂ, ಸ್ತುತಿಯಿಂದಲೂ ಇಂದ್ರಾಗ್ನಿಗಳನ್ನು ವಿಶೇಷರೀತಿಯಲ್ಲಿ ಪ್ರಾರ್ಥಿಸುವರೋ ಅವರ ನಡುವೆ ಇರುವ ನಾಭಾಕರಾದ ನಾವು ಶತ್ರುಗಳನ್ನು ಎದುರಿಸುತ್ತಾ ನಮಗೆ ಸೇರಿದ ವೀರಪುರುಷರೊಡನೆ ಶತ್ರುಗಳನ್ನು ಸೋಲಿಸೋಣ. ಸ್ತುತಿಪ್ರಿಯರನ್ನು ಸ್ತುತಿಸೋಣ. ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

Inasmuch as these people honour Indra and Agni with gifts and with praises, so may we, defying hosts, overcome (our foes) with our warriors; let us praise those seeking praise: may all our enemies perish.

॥ ಸಂಹಿತಾಪಾಠಃ ॥

ಯಾ ನು ಶ್ವೇತಾವವೋ ದಿವ ಉಚ್ಚರಾತ ಉಪ ದ್ಯುಭಿಃ ।
ಇಂದ್ರಾಗ್ನ್ಯೋರನು ವ್ರತಮುಹಾನಾ ಯಂತಿ ಸಿಂಧವೋ ಯಾನ್ತ್ಸೀಂ
ಬಂಧಾದಮುಂಚತಾಂ ನಭಂತಾಮನ್ಯಕೇ ಸಮೇ ॥ ೮ ॥

॥ ಪದಪಾಠಃ ॥

ಯಾ । ನು । ಶ್ವೇತಾ । ಅವಃ । ದಿವಃ । ಉತ್ಽಚರಾತಃ । ಉಪ । ದ್ಯುಽಭಿಃ ।
ಇಂದ್ರಾಗ್ನ್ಯೋಃ । ಅನು । ವ್ರತಂ । ಉಹಾನಾಃ । ಯಂತಿ । ಸಿಂಧವಃ । ಯಾನ್ । ಸೀಂ । ಬಂಧಾತ್ ।
ಅಮುಂಚತಾಂ । ನಭಂತಾಂ । ಅನ್ಯಕೇ । ಸಮೇ ॥ ೮ ॥

॥ ಸಾಯಣಭಾಷ್ಯಂ ॥

ಯಾ ನು ಯಾವೇವೇಂದ್ರಾಗ್ನೀ ಶ್ವೇತಾ ಶ್ವೇತವರ್ಣೌ । ಸತ್ತ್ವಗುಣೋಪೇತಾವಿತ್ಯರ್ಥಃ । ಅವೋಽಧಸ್ತಾದ್ದ್ಯುಭಿರ್ದೀಪ್ತಿಭಿರ್ದಿವ ಉಪೋಚ್ಚರಾತಃ ಉಚ್ಚರತಃ ತಯೋರೇವೇಂದ್ರಾಗ್ನ್ಯೋರುಹಾನಾ ಹವಿರ್ವಹಂತೋ ಯಜಮಾನಾ ವ್ರತಂ ಕರ್ಮಾನು ಯಂತಿ । ಅಪಿ ಸೀಮಿಮಾವಿಂದ್ರಾಗ್ನೀ ಯಾನ್ಪ್ರಸಿದ್ಧಾನ್ ಸಿಂಧವಃ ಸಿಂಧೂನ್ ಬಂಧಾದ್ಬಂಧನಾದಮುಂಚತಾಂ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಯಾ ನು**—ಯಾವ ಇಂದ್ರಾಗ್ನಿಗಳು । **ಶ್ವೇತಾ**—ಶ್ವೇತವರ್ಣವುಳ್ಳವರಾಗಿ । **ಅವಃ**—ಅಧ[illegible]ದಿಂದ ಆವಿರ್ಭವಿಸಿ । **ದ್ಯುಭಿಃ**—ತಮ್ಮ ಕಾಂತಿಗಳೊಡನೆ । **ದಿವಃ ಉಪ**—ದ್ಯುಲೋಕಕ್ಕಭಿಮುಖವಾಗಿ । **ಉಚ್ಚರಾತಃ**—ಹಾರಿಹೋಗುವರೋ ಅಂತಹ । **ಇಂದ್ರಾಗ್ನ್ಯೋಃ**—ಇಂದ್ರಾಗ್ನಿಗಳಿಗೆ । **ಉಹಾನಾಃ**—ಹವಿಸ್ಸನ್ನು ವಹಿಸುವ ಯಜಮಾನರು । **ವ್ರತಂ**—ಕರ್ಮವನ್ನು । **ಅನು ಯಂತಿ**—ಆಚರಿಸುತ್ತಾರೆ । **ಸೀಂ**—ಇದೇ ಇಂದ್ರಾಗ್ನಿಗಳು । **ಯಾನ್**—ಪ್ರಸಿದ್ಧವಾದ । **ಸಿಂಧವಃ**—ನದಿಗಳನ್ನು । **ಬಂಧಾತ್**—ತಡೆಯಿಂದ । **ಅಮುಂಚತಾಂ**—ಬಿಡಿಸುತ್ತಾರೆ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಯಾವ ಇಂದ್ರಾಗ್ನಿಗಳು ಶ್ವೇತವರ್ಣವುಳ್ಳವರಾಗಿ ಅಧೋಭಾಗದಿಂದ ಆವಿರ್ಭವಿಸಿ ತಮ್ಮ ಕಾಂತಿಗಳೊಡನೆ ದ್ಯುಲೋಕಕ್ಕಭಿಮುಖರಾಗಿ ಹಾಂಹೋಗುವರೋ ಅಂತಹ ಇಂದ್ರಾಗ್ನಿಗಳಿಗೆ ಹವಿಸ್ಸನ್ನು ವಹಿಸುವ ಯಜಮಾನರು ಕರ್ಮವನ್ನು ಆಚರಿಸುತ್ತಾರೆ. ಇವೇ ಇಂದ್ರಾಗ್ನಿಗಳು ಪ್ರಸಿದ್ಧವಾದ ನದಿಗಳನ್ನು ತಡೆಯಿಂದ ಬಿಡಿಸುತ್ತಾರೆ. ನಮ್ಮ ಶತ್ರುಗಳು ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

Offering oblations, (the worshippers) approach to the worship of Indra and Agni, who are of a white complexion, and rise from below with bright rays to heaven: they verily have liberated the waters from bondage: may all our enemies perish.

॥ ಸಂಹಿತಾಪಾಠಃ ॥

ಪೂರ್ವೀಷ್ಟ ಇಂದ್ರೋಪಮಾತಯಃ ಪೂರ್ವೀರುತ ಪ್ರಶಸ್ತಯಃ ಸೂನೋ ಹಿನ್ವಸ್ಯ ಹರಿವಃ ।
ವಸ್ವೋ ವೀರಸ್ಯಾಪೃಚೋ ಯಾ ನು ಸಾಧಂತ ನೋ ಧಿಯೋ ನಭಂತಾಮನ್ಯಕೇ ಸಮೇ ॥ ೯ ॥

॥ ಪದಪಾಠಃ ॥

ಪೂರ್ವೀಃ । ತೇ । ಇಂದ್ರ । ಉಪऽಮಾತಯಃ । ಪೂರ್ವೀಃ । ಉತ । ಪ್ರऽಶಸ್ತಯಃ । ಸೂನೋ ಇತಿ । ಹಿನ್ವಸ್ಯ । ಹರಿऽವಃ ।
ವಸ್ವಃ । ವೀರಸ್ಯ । ಅऽಪೃಚಃ । ಯಾಃ । ನು । ಸಾಧಂತ । ನಃ । ಧಿಯಃ । ನಭಂತಾಂ । ಅನ್ಯಕೇ । ಸಮೇ ॥

॥ ಸಾಯಣಭಾಷ್ಯಂ ॥

ಹೇ ಹರಿವೋ ವಜ್ರಿನ್ ಸೂನೋ ಪ್ರೇರಯಿತರಿಂದ್ರ ಹಿನ್ವಸ್ಯ ಪ್ರೀಣಯಿತುರ್ವಸ್ವೋ ದೀಪಕಸ್ಯ ವೀರಸ್ಯಾಪೃಚೋ ಧನಾನ್ಯಪಯಚ್ಛತಸ್ತೇ ತವ ತಾ ಉಪಮಾತಯ ಉಪಮಾನಾನಿ ಪೂರ್ವೀರ್ಬಹೂನಿ । ಉತಾಪಿ ಚ ಪ್ರಶಸ್ತಯಃ ಪೂರ್ವೀಃ । ಯಾ ನೋ ಧಿಯಃ ಪ್ರಜ್ಞಾಂ ಸಾಧಂತ ಅಸಾಧಯನ್ । ಸಿದ್ಧಮನ್ಯತ್ ॥

‖ ಪ್ರತಿಪದಾರ್ಥ ‖

**ಹರಿವಃ**— ವಜ್ರಾಯುಧಧಾರಿಯೂ | **ಸೂನೋ**—ಪ್ರೇರಕನೂ ಆದ | **ಇಂದ್ರ**—ಎಲೈ ಇಂದ್ರನೇ | **ಹಿನ್ವಸ್ಯ**—ಪ್ರಿಯಕಾರಕನೂ | **ವಸ್ವಃ**—ಧನದಾತೃವೂ | **ವೀರಸ್ಯ**—ಶೂರನೂ | **ಅಪೃಚಃ**—ಉದಾರವಾದ ದಾನಿಯೂ ಆದ | **ತೇ**—ನಿನ್ನಿಂದ ಕೊಡಲ್ಪಡುವ | **ಯಾಃ ನು**—ಯಾವ ಧನಾದಿಗಳು | **ನಃ ಧಿಯಃ**—ನಮ್ಮ ಪ್ರಜ್ಞೆಯನ್ನು | **ಸಾಧಂತೆ**—ಸುಸಂಸ್ಕೃತವನ್ನಾಗಿ ಮಾಡುವುವೋ ಅಂತಹ | **ಉಪಮಾತಯಃ**—ಆದರ್ಶ ದಾನಗಳು | **ಪೂರ್ವೀಃ**—ಅಧಿಕವಾಗಿವೆ | **ಉತ**-ಮತ್ತು | **ಪ್ರಶಸ್ತಯಃ**-ಗುಣಾತಿಶಯಗಳೂ | **ಪೂರ್ವೀಃ**—ಅಧಿಕವಾಗಿವೆ | **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ | **ಸಮೇ**—ಒಂದೇ ಕಾಲದಲ್ಲಿ | **ನಭಂತಾಂ**—ನಾಶವಾಗಲಿ.

‖ ಭಾವಾರ್ಥ ‖

ವಜ್ರಾಯುಧಧಾರಿಯೂ ಪ್ರೇರಕನೂ ಆದ ಎಲೈ ಇಂದ್ರನೇ, ಪ್ರಿಯಕಾರಕನೂ, ಧನದಾತೃವೂ, ಶೂರನೂ, ಉದಾರವಾದ ದಾನಿಯೂ ಆದ ನಿನ್ನಿಂದ ಕೊಡಲ್ಪಡುವ ಯಾವ ಧನಾದಿಗಳು ನಮ್ಮ ಪ್ರಜ್ಞೆಯನ್ನು ಸುಸಂಸ್ಕೃತವನ್ನಾಗಿ ಮಾಡುವುವೋ ಅಂತಹ ಆದರ್ಶ ದಾನಗಳು ಅಧಿಕವಾಗಿವೆ. ಮತ್ತು ಗುಣಾತಿಶಯಗಳೂ ಅಧಿಕವಾಗಿವೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

Indra, wielder of the thunderbolt, instigator (of acts), may the numerous merits, the many excellences of you, who are the bestower of affluence and of male offspring, perfect our understandings; may all our enemies perish.

‖ ಸಂಹಿತಾಪಾಠಃ ‖

ತಂ ಶಿಶೀತಾ ಸುವೃಕ್ತಿಭಿಸ್ತ್ವೇಷಂ ಸತ್ವಾನಮೃಗ್ಮಿಯಂ |
ಉತೋ ನು ಚಿದ್ಯ ಓಜಸಾ ಶುಷ್ಣಸ್ಯಾಂಡಾನಿ ಭೇದತಿ ಜೇಷತ್ಸ್ವರ್ವತೀರ-
ಪೋ ನಭಂತಾಮನ್ಯಕೇ ಸಮೇ || ೧೦ ||

‖ ಪದಪಾಠಃ ‖

**ತಂ | ಶಿಶೀತ | ಸುವೃಕ್ತಿऽಭಿಃ | ತ್ವೇಷಂ | ಸತ್ವಾನಂ | ಋಗ್ಮಿಯಂ |**
**ಉತೋ ಇತಿ | ನು | ಚಿತ್ | ಯಃ | ಓಜಸಾ | ಶುಷ್ಣಸ್ಯ | ಆಂಡಾನಿ | ಭೇದತಿ | ಜೇಷತ್ | ಸ್ವಃऽವತೀಃ |**
**ಅಪಃ | ನಭಂತಾಂ | ಅನ್ಯಕೇ | ಸಮೇ || ೧೦ ||**

॥ ಸಾಯಣಭಾಷ್ಯಂ ॥

**ಹೇ ಸ್ತೋತಾರಃ ತ್ವೇಷಂ ದೀಪ್ತಂ ಸತ್ವಾನಂ ಸಂಭಕ್ತಾರಂ ಧನಾನಾಮೃಗ್ಮಿಯಮೃಗರ್ಹಮೃಗ್ಮಿಃ ಸ್ತೋತವ್ಯಂ ತಮಿಂದ್ರಂ ಸುವೃಕ್ತಿಭಿಃ ಸ್ತುತಿಭಿಃ ಶಿಶೀತ । ಸಂಸ್ಕುರುತ । ಉತೋ ನು ಚಿದಪಿ ಚ ಯ ಇಂದ್ರ ಓಜಸಾ ಬಲೇನ ಶುಷ್ಣಸ್ಯ ಶುಷ್ಣನಾಮಕಸ್ಯಾಸುರಸ್ಯಾಂಡಾನ್ಯಂಡಜಾತಾನ್ಯಪತ್ಯಾನಿ ಭೇದತಿ ಅಭಿನತ್ ಸ ಸ್ವರ್ವತೀರ್ದಿವ್ಯಾನ್ಯಪಃ ಸಲಿಲಾನಿ ಜೇಷತ್ । ಜಯತು । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) **ತ್ವೇಷಂ**—ಕಾಂತಿಯುತನೂ । **ಸತ್ವಾನಂ**—ಧನಪ್ರದಾತೃವೂ । **ಋಗ್ಮಿಯಂ**—ಋಕ್ಕುಗಳಿಂದ ಸ್ತುತ್ಯನೂ ಆದ । **ತಂ**—ಆ ಇಂದ್ರನನ್ನು । **ಸುವೃಕ್ತಿಭಿಃ**—ಉತ್ತಮವಾಗಿ ನಿರ್ಮಿತವಾದ ಸ್ತುತಿಗಳಿಂದ । **ಶಿಶೀತ**—ಸಂಸ್ಕರಿಸಿ ಪೂಜಿಸಿರಿ । **ಉತೋ ನು ಚಿತ್**—ಅದೂ ಅಲ್ಲದೇ । **ಯಃ**—ಯಾವ ಇಂದ್ರನು । **ಓಜಸಾ**—ತನ್ನ ಬಲದಿಂದ । **ಶುಷ್ಣಸ್ಯ**—ಶುಷ್ಣನೆಂಬ ಅಸುರನ । **ಅಂಡಾನಿ**—ಪುತ್ರಾದಿಗಳನ್ನು । **ಭೇದತಿ**—ಸೀಳಿಹಾಕುವನೋ ಆ ಇಂದ್ರನು । **ಸ್ವರ್ವತೀಃ**—ದಿವ್ಯಲೋಕಸಂಬಂಧಿಗಳಾದ । **ಅಪಃ**—ಉದಕಗಳನ್ನು । **ಜೇಷತ್**—ಜಯಿಸಲಿ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೋ**—ಒಂದೇ ಕಾಲದಲ್ಲಿ । **ನಭಂತಾಂ** – ನಾಶವಾಗಲಿ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಕಾಂತಿಯುತನೂ, ಧನಪ್ರದಾತೃವೂ, ಋಕ್ಕುಗಳಿಂದ ಸ್ತುತ್ಯನೂ ಆದ ಆ ಇಂದ್ರನನ್ನು ಉತ್ತಮವಾಗಿ ನಿರ್ಮಿತವಾದ ಸ್ತುತಿಗಳಿಂದ ಸಂಸ್ಕರಿಸಿ ಪೂಜಿಸಿರಿ. ಅದೂ ಅಲ್ಲದೇ, ಯಾವ ಇಂದ್ರನು ತನ್ನ ಬಲದಿಂದ ಶುಷ್ಣನೆಂಬ ಅಸುರನ ಪುತ್ರಾದಿಗಳನ್ನು (ಶುಷ್ಣನ ಮೊಟ್ಟೆಗಳನ್ನು) ಸೀಳಿಹಾಕುವನೋ ಅಂತಹ ಇಂದ್ರನು ದಿವ್ಯಲೋಕಸಂಬಂಧಿಗಳಾದ ಉದಕಗಳನ್ನು ಜಯಿಸಲಿ. ನಮ್ಮ ಶತ್ರುಗಳೆಲ್ಲರೂ ಒಂದೇಕಾಲದಲ್ಲಿ ನಾಶವಾಗಲಿ.

## English Translation.

Animate with praises that brilliant adorable Indra, the dlstributor (of riches), who by his might breaks the eggs of Sushna : may he conquer the celestial waters : may all our enemies perish.

॥ ಸಂಹಿತಾಪಾಠಃ ॥

**ತಂ ಶಿಶೀತಾ ಸ್ವಧ್ವರಂ ಸತ್ಯಂ ಸತ್ವಾನಮೃತ್ವಿಯಂ ।**

**ಉತೋ ನು ಚಿದ್ಯ ಓಹತ ಆಂಡಾ ಶುಷ್ಣಸ್ಯ ಭೇದತ್ಯಜೈಃ ಸ್ವರ್ವತೀರಪೋ**

**ನಭಂತಮನ್ಯಕೇ ಸಮೇ ॥ ೧೧ ॥**

॥ ಪದಪಾಠಃ ॥

ತಂ । ಶಿಶೀತ । ಸುऽಅಧ್ವರಂ । ಸತ್ಯಂ । ಸತ್ವಾನಂ । ಋತ್ವಿಯಂ ।

ಉತೋ ಇತಿ । ನು । ಚಿತ್ । ಯಃ । ಓಹತೇ । ಅಂಡಾ । ಶುಷ್ಣಸ್ಯ । ಭೇದತಿ । ಅಜೈಃ । ಸ್ವಃऽವತೀಃ ।

ಅಪಃ । ನಭಂತಾಂ । ಅನ್ಯಕೇ । ಸಮೇ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಾರಃ ಸ್ವಧ್ವರಂ ಸುಯಜ್ಞಂ ಸತ್ಯಮವಿನಾಶಂ ಸತ್ವಾನಂ ಸಂಭಕ್ತಾರಮೃತ್ವಿಯಮೃತೌ ಯಷ್ಟವ್ಯಂ ತಮಿಂದ್ರಂ ಶಿಶೀತ । ಸ್ತುತಿಭಿಃ ಸಂಸ್ಕುರುತ । ಅಥ ಪ್ರತ್ಯಕ್ಷಸ್ತುತಿಃ । ಉತೋ ನು ಚಿದಪಿ ಚ ಯ ಇಂದ್ರ ಓಹತೇ ಯಜ್ಞಂ ಪ್ರತಿ ಗಚ್ಛತಿ ಶುಷ್ಣಸ್ಯಾಂಡಾಂಡಾನ್ಯಂಡಜಾತಾನಿ ಚ ಭೇದತಿ ಭಿನತ್ತಿ ಸ ತ್ವಂ ಸ್ವರ್ವತೀರ್ದಿವ್ಯಾನ್ಯಪಃ ಸಲಿಲಾನ್ಯಜೈಃ । ಅಜೈಷೀಃ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃಗಳೇ) **ಸ್ವಧ್ವರಂ**—ಉತ್ತಮವಾದ ಯಜ್ಞವುಳ್ಳವನೂ । **ಸತ್ಯಂ**—ನಾಶರಹಿತನೂ । **ಸತ್ವಾನಂ**—ಧನಪ್ರದಾತೃವೂ । **ಋತ್ವಿಯಂ**—ಕಾಲಾನುಗುಣವಾಗಿ ಸ್ತುತ್ಯನೂ ಆದ । **ತಂ**—ಇಂದ್ರನನ್ನು । **ಶಿಶೀತ**—ಸ್ತುತಿಗಳಿಂದ ಅಲಂಕರಿಸಿರಿ । **ಉತೋ ನು ಚಿತ್**—ಅದೂ ಅಲ್ಲದೇ । (ಎಲೈ ಇಂದ್ರನೇ) **ಯಃ**—ಯಾವ ನೀನು । **ಓಹತೇ**—ಯಜ್ಞಾಭಿಮುಖವಾಗಿ ಹೋಗುವೆಯೋ । **ಶುಷ್ಣಸ್ಯ**—ಶುಷ್ಣನ । **ಅಂಡಾ**—ಪುತ್ರಾದಿಗಳನ್ನು । **ಭೇದತಿ**—ಸೀಳುವೆಯೋ ಅಂಥಹ ನೀನು । **ಸ್ವರ್ವತೀಃ**—ದಿವ್ಯಲೋಕದ । **ಅಪಃ**—ಉದಕಗಳನ್ನು । **ಅಜೈಃ**—ಜಯಿಸಿದ್ದೀಯೆ । **ಅನ್ಯಕೇ**—ನಮ್ಮ ಶತ್ರುಗಳು । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಉತ್ತಮವಾದ ಯಜ್ಞವುಳ್ಳವನೂ, ನಾಶರಹಿತನೂ, ಧನಪ್ರದಾತೃವೂ, ಕಾಲಾನುಗುಣವಾಗಿ ಸ್ತುತ್ಯನೂ ಆದ ಇಂದ್ರನನ್ನು ಸ್ತುತಿಗಳಿಂದ ಅಲಂಕರಿಸಿರಿ. ಅಲ್ಲದೇ, ಎಲೈ ಇಂದ್ರನೇ, ಯಾವ ನೀನು ಯಜ್ಞಾಭಿಮುಖವಾಗಿ ಹೋಗುವೆಯೋ, ಮತ್ತು ಶುಷ್ಣನ ಪುತ್ರಾದಿಗಳನ್ನು (ಮೊಟ್ಟೆಗಳನ್ನು) ಸೀಳುವೆಯೋ ಅಂಥಹ ನೀನು ದಿವ್ಯಲೋಕದ ಉದಕಗಳನ್ನು ಜಯಿಸಿದ್ದೀಯೆ. ನಮ್ಮ ಶತ್ರುಗಳು ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

Animate that Indra to whom sacrifice is due,—sincere, bountiful, adorable ; him who breaks the eggs of Shushna ; you have conquered the celestial waters : may all our enmies perish

॥ ಸಂಹಿತಾಪಾಠಃ ॥

ಏವೇಂದ್ರಾಗ್ನಿಭ್ಯಾಂ ಪಿತೃವನ್ನವೀಯೋ ಮಂಧಾತೃವದಂಗಿರಸ್ವದವಾಚಿ ।
ತ್ರಿಧಾತುನಾ ಶರ್ಮಣಾ ಪಾತಮಸ್ಮಾನ್ವಯಂ ಸ್ಯಾಮ ಪತಯೋ ರಯೀಣಾಂ ॥ ೧೨ ॥

॥ ಪದಪಾಠಃ ॥

ಏವ । ಇಂದ್ರಾಗ್ನಿಽಭ್ಯಾಂ । ಪಿತೃಽವತ್ । ನವೀಯಃ । ಮಂಧಾತೃಽವತ್ । ಅಂಗಿರಸ್ವತ್ । ಅವಾಚಿ ।
ತ್ರಿಽಧಾತುನಾ । ಶರ್ಮಣಾ । ಪಾತಂ । ಅಸ್ಮಾನ್ । ವಯಂ । ಸ್ಯಾಮ । ಪತಯಃ । ರಯೀಣಾಂ ॥ ೧೨ ॥

॥ ಸಾಯಣಭಾಷ್ಯಂ ॥

**ಏವೈವಂ ಯಾಭ್ಯಾಮಿಂದ್ರಾಗ್ನಿಭ್ಯಾಂ ಪಿತೃವನ್ಮಾಭಾಕವನ್ಮಂಧಾತೃವದ್ಯಾವನಾಶ್ವಮಾಂಧಾತೃವಚ್ಚಾಂಗಿರಸ್ವದಂಗಿರೋವಚ್ಚ ನವೀಯೋ ನವತರಮವಾಚಿ ನಾಭಾಕೇನ ಮಯಾ ಪಾಠಿತಾವಿಂದ್ರಾಗ್ನೀ ತ್ರಿಧಾತುನಾ ತ್ರಿಪರ್ವಣಾ ಶರ್ಮಣಾ ಗೃಹೇಣ ನೋಽಸ್ಮಾನ್ನಾಭಾಕಾನ್ಪಾತಂ । ರಕ್ಷತಂ । ವಯಂ ರಯೀಣಾಂ ಧನಾನಾಂ ಪತಯಃ ಸ್ವಾಮಿನಃ ಸ್ಯಾಮ । ಭವೇಮ ॥**

॥ ಪ್ರತಿಪದಾರ್ಥ ॥

**ಏವ**—ಇದೇ ರೀತಿಯಲ್ಲಿ । **ಇಂದ್ರಾಗ್ನಿಭ್ಯಾಂ** - ಯಾವ ಇಂದ್ರಾಗ್ನಿಗಳನ್ನುದ್ದೇಶಿಸಿ । **ಪಿತೃವತ್**—ನಮ್ಮ ಪಿತೃಗಳಂತೆಯೂ । **ಮಾಂಧಾತೃವತ್**—ಮಾಂಧಾತೃವಿನಂತೆಯೂ । **ಅಂಗಿರಸ್ವತ್**—ಅಂಗಿರಾಋಷಿಯಂತೆಯೂ । **ನವೀಯಃ**—ನೂತನವಾದ ಸ್ತುತಿಯು । **ಅವಾಚಿ**—ನನ್ನಿಂದಲೂ ಪಠಿತವಾಯಿತೋ ಅದೇ ಇಂದ್ರಾದಿಗಳು । **ತ್ರಿಧಾತುನಾ**—ಮೂರು ವಿಧವಾದ ರಕ್ಷಣೆಯುಳ್ಳ । **ಶರ್ಮಣಾ**—ಗೃಹದಿಂದ । **ಅಸ್ಮಾನ್**—ನಮ್ಮನ್ನು । **ಪಾತಂ**—ರಕ್ಷಿಸಲಿ । **ವಯಂ**—ನಾವು । **ರಯೀಣಾಂ**—ಧನಗಳಿಗೆ । **ಪತಯಃ**—ಒಡೆಯರಾಗಿ । **ಸ್ಯಾಮ** - ಆಗುವಂತಾಗಲಿ.

॥ ಭಾವಾರ್ಥ ॥

ಯಾವ ಇಂದ್ರಾಗ್ನಿಗಳನ್ನುದ್ದೇಶಿಸಿ ನಮ್ಮ ಪಿತೃಗಳಂತೆಯೂ, ಮಾಂಧಾತೃವಿನಂತೆಯೂ, ಅಂಗಿರಾ ಋಷಿಯಂತೆಯೂ ನೂತನವಾದ ಸ್ತುತಿಯು ನನ್ನಿಂದಲೂ ಪಠಿತವಾಯಿತೋ ಅದೇ ಇಂದ್ರಾಗ್ನಿಗಳು ಮೂರು ವಿಧವಾದ ರಕ್ಷಣೆಯುಳ್ಳ ಗೃಹವನ್ನು ಕೊಟ್ಟು ನಮ್ಮನ್ನು ರಕ್ಷಿಸಲಿ. ನಾವು ಧನಗಳಿಗೆ ಒಡೆಯರಾಗುವಂತಾಗಲಿ.

## English Translation

Thus has a new hymn been addressed to Indra and Agni, as was done by my father, by Mandhatri, by Angiras; cherish us with a triply defended dwelling, may we be the lords of riches.



# ನಲವತ್ತೊಂದನೆಯ ಸೂಕ್ತವು

|| ಸಾಯಣಭಾಷ್ಯಂ ||

ಅಸ್ಮಾ ಊ ಷ್ವಿತಿ ದಶರ್ಚಮೇಕಾದಶಂ ಸೂಕ್ತಂ। ಅತ್ರೇಯಮನುಕ್ರಮಣಿಕಾ। **ಅಸ್ಮಾ ಊ ಷು ದಶ ವಾರುಣಂ ತ್ವಿತಿ।** ನಾಭಾಕ ಋಷಿರನುವೃತ್ತತ್ವಾತ್। ಮಹಾಪಾಂಕ್ತಂ ಹೀತ್ಯುಕ್ತತ್ವಾದಿದಮಪಿ ಮಹಾಪಾಂಕ್ತಂ। ಇದಮಾದಿಕೇ ದ್ವೇ ಸೂಕ್ತೇ ವರುಣದೇವತ್ಯೇ॥ ವಿನಿಯೋಗೋ **ಲೈಂಗಿಕಃ॥** **ಚಾತುರ್ವಿಂಶಿಕೇಽಹನಿ** ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರ ಆರಂಭಣೀಯಾಯಾ **ಊರ್ಧ್ವಂ ಸ ಕ್ಷಪ** ಇತ್ಯಯಂ ನಾಭಾಕತೃಚಃ। ಸೂತ್ರಿತಂ ಚ। **ಸ ಕ್ಷಪಃ ಪರಿ ಷಸ್ವಜ ಇತಿ ಮೈತ್ರಾವರುಣಃ। ಆ. ೭–೨।** ಇತಿ॥ ಯಃ ಕಕುಭ ಇತ್ಯೇತತ್ಪ್ರಭೃತಿಕೋ ವಾ ನಾಭಾಕತೃಚಃ। ಸೂತ್ರಿತಂ ಚ। **ಯಃ ಕಕುಭೋ ನಿಧಾರಯ ಇತಿ ವಾ। ಆ. ೭–೨।** ಇತಿ॥

ಅನುವಾದವು—**ಅಸ್ಮಾ ಊ ಷು** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಅಸ್ಮಾ ಊ ಷು ದಶ ವಾರುಣಂ ತು** ಎಂದು ಹೇಳಿರುವುದು. ಈ ಸೂಕ್ತಕ್ಕೆ ನಾಭಾಕನು ಋಷಿಯು; ಈ ಸೂಕ್ತಕ್ಕೂ ಮುಂದಿನ ಸೂಕ್ತಕ್ಕೂ ವರುಣನು ದೇವತೆಯು; ಮಹಾಪಂಕ್ತಿಶ್ಛಂದಸ್ಸು. ವಿನಿಯೋಗವು ಲೈಂಗಿಕವು. ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲವಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳನ್ನು ಪ್ರಾರಂಭಮಾಡಿದನಂತರ **ಸ ಕ್ಷಪಃ** ಎಂದು ಮೊದಲಾಗುವ ಈ ಸೂಕ್ತದ ೩–೫ ಋಕ್ಕುಗಳನ್ನು ನಾಭಾಕತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸ ಕ್ಷಪಃ ಪರಿ ಷಸ್ವಜ ಇತಿ ಮೈತ್ರಾವರುಣಃ** ಎಂಬ ಸೂತ್ರದಿಂದ (ಆ. ೭–೨) ವಿವೃತವಾಗಿರುವುದು. ಅಥವಾ ಈ ವಿಷಯದಲ್ಲಿ **ಯಃ ಕಕುಭಃ** ಎಂಬ ತೃಚವನ್ನಾದರೂ (೪–೬ ಋಕ್ಕುಗಳು) ನಾಭಾಕತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯಃ ಕಕುಭೋ ನಿಧಾರಯ ಇತಿ ವಾ** ಎಂಬ ಸೂತ್ರದಿಂದ (ಆ. ೭–೨) ವಿವೃತವಾಗಿರುವುದು.

## ಸೂಕ್ತ—೪೧

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೪೧ ॥

ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೨೬, ೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ನಾಭಾಕಃ ಕಾಣ್ವಃ ॥

॥ ದೇವತಾ—ವರುಣಃ ॥

। ಛಂದಃ—ಮಹಾಪಂಕ್ತಿಃ ॥

॥ ಸಂಹಿತಾಪಾಠಃ ॥

ಅಸ್ಮಾ ಊ ಷು ಪ್ರಭೂತಯೇ ವರುಣಾಯ ಮರುದ್ಭ್ಯೋಽರ್ಚಾ ವಿದುಷ್ಟರೇಭ್ಯಃ ।
ಯೋ ಧೀತಾ ಮಾನುಷಾಣಾಂ ಪಶ್ವೋ ಗಾ ಇವ ರಕ್ಷತಿ ನಭಂತಾಮನ್ಯಕೇ ಸಮೇ ॥ ೧ ॥

॥ ಪದಪಾಠಃ ॥

ಅಸ್ಮೈ । ಊಂ ಇತಿ । ಸು । ಪ್ರಽಭೂತಯೇ । ವರುಣಾಯ । ಮರುತ್ಽಭ್ಯಃ । ಅರ್ಚ । ವಿದುಃಽತರೇಭ್ಯಃ । ಯಃ । ಧೀತಾ । ಮಾನುಷಾಣಾಂ । ಪಶ್ವಃ । ಗಾಃಽಇವ । ರಕ್ಷತಿ । ನಭಂತಾಂ । ಅನ್ಯಕೇ । ಸಮೇ ॥ ೧ ॥

॥ ಸಾಯಣಭಾಷ್ಯಂ ॥

ಹೇ ಸ್ತೋತಃ ಸು ಪ್ರಭೂತಯೇ ಪ್ರಕೃಷ್ಟಧನಾಯಾಸ್ಮೈ ವರುಣಾಯ ವಿದುಷ್ಟರೇಭ್ಯೋ ವಿದ್ವತ್ತರೇಭ್ಯೋ ಮರುದ್ಭ್ಯಶ್ಚಾರ್ಚ । ಸ್ತುಹಿ । ಯೋ ವರುಣೋ ಧೀತಾ ಕರ್ಮಣಾ ಮಾನುಷಾಣಾಂ ಮನುಷ್ಯಾಣಾಂ ಪಶ್ವಃ ಪಶೂನ್ ಗಾ ಇವ ರಕ್ಷತಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

(ಎಲೈ ಸ್ತುತಿಕರ್ತನೇ) **ಯಃ**— ಯಾವ ವರುಣನು । **ಧೀತಾ**— ತನ್ನ ಕರ್ಮದಿಂದ । **ಮಾನುಷಾಣಾಂ**— ಮಾನವರ । **ಪಶ್ವಃ**— ಪಶುಗಳನ್ನು । **ಗಾ ಇವ**— ಗೋಪಾಲಕನು ಗೋವುಗಳನ್ನು ಪಾಲಿಸುವಂತೆ । **ರಕ್ಷತಿ**— ರಕ್ಷಿಸುವನೋ ಅಂತಹವನೂ । **ಸು ಪ್ರಭೂತಯೇ**— ಅತ್ಯುತ್ತಮವಾದ ಧನವುಳ್ಳವನೂ ಆದ । **ಅಸ್ಮೈ ವರುಣಾಯ**— ಈ ವರುಣನನ್ನುದ್ದೇಶಿಸಿಯೂ । **ವಿದುಷ್ಟರೇಭ್ಯಃ**— ಅತ್ಯಂತ ಪ್ರಾಜ್ಞರಾದ । **ಮರುದ್ಭ್ಯಃ**— ಮರುತ್ತುಗಳನ್ನುದ್ದೇಶಿಸಿಯೂ । **ಅರ್ಚ**— ಸ್ತುತಿಯನ್ನರ್ಪಿಸು । **ಅನ್ಯಕೇ**— ನಮ್ಮ ಶತ್ರುಗಳೆಲ್ಲರೂ । **ಸಮೇ**— ಒಂದೇ ಕಾಲದಲ್ಲಿ । **ನಭಂತಾಂ**— ನಾಶವಾಗಲಿ.

॥ ಭಾವಾರ್ಥ ॥

ಎಲೈ ಸ್ತುತಿಕರ್ತನೇ, ಯಾವ ವರುಣನು ತನ್ನ ಕರ್ಮದಿಂದ ಮಾನವರ ಪಶುಗಳನ್ನು ಗೋಪಾಲಕನು ಗೋವುಗಳನ್ನು ಪಾಲಿಸುವಂತೆ ರಕ್ಷಿಸುವನೋ ಅಂತಹವನೂ ಮತ್ತು ಅತ್ಯುತ್ತಮವಾದ ಧನವುಳ್ಳವನೂ ಆದ ಈ ವರುಣನನ್ನುದ್ದೇಶಿಸಿಯೂ, ಅತ್ಯಂತ ಪ್ರಾಜ್ಞರಾದ ಮರುತ್ತುಗಳನ್ನುದ್ದೇಶಿಸಿಯೂ ಸ್ತುತಿಯನ್ನರ್ಪಿಸು. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

English Translation.

Offer praise to that opulent Varuna, and to the most sage Maruts; (Varuna) who protects men by his acts, as (the herdsman guards) the cattle: may all out enemies perish.

॥ ಸಂಹಿತಾಪಾಠಃ ॥

ತಮೂ ಷು ಸಮನಾ ಗಿರಾ ಪಿತೄಣಾಂ ಚ ಮನ್ಮಭಿಃ ।

ನಾಭಾಕಸ್ಯ ಪ್ರಶಸ್ತಿಭಿರ್ಯಃ ಸಿಂಧೂನಾಮುಪೋದಯೇ ಸಪ್ತಸ್ವಸಾ ಸ

ಮಧ್ಯಮೋ ನಭಂತಾಮನ್ಯಕೇ ಸಮೇ ॥ ೨ ॥

॥ ಪದಪಾಠಃ ॥

ತಂ । ಊಂ ಇತಿ । ಸು । ಸಮನಾ । ಗಿರಾ । ಪಿತೄಣಾಂ । ಚ । ಮನ್ಮಽಭಿಃ ।

ನಾಭಾಕಸ್ಯ । ಪ್ರಶಸ್ತಿಽಭಿಃ । ಯಃ । ಸಿಂಧೂನಾಂ । ಉಪ । ಉತ್ಽಅಯೇ । ಸಪ್ತಽಸ್ವಸಾ । ಸಃ ।

ಮಧ್ಯಮಃ । ನಭಂತಾಂ । ಅನ್ಯಕೇ । ಸಮೇ ॥ ೨ ॥

॥ ಸಾಯಣಭಾಷ್ಯಂ ॥

ತಮು ತಮೇವ ವರುಣಂ ಸಮನಾ ಸಮಾನಯಾ ಗಿರಾ ಸ್ತುತ್ಯಾ ಸ್ವಭಿಷ್ಟೌಮಿ । ಪಿತೄಣಾಂ ಮನ್ಮಭಿಃ ಸ್ತೋತ್ರೈಶ್ಚಾಭಿಷ್ಟೌಮಿ । ನಾಭಾಕಸ್ಯರ್ಷೇಃ ಪ್ರಶಸ್ತಿಭಿಃ ಸ್ತೋತ್ರೈಶ್ಚಾಭಿಷ್ಟೌಮಿ । ಸಿಂಧೂನಾಂ ಸ್ಯಂದಮಾನಾನಾಂ ನದೀನಾಮುಪ ಸಮೀಪೇ ಯ ಉದಯೇ ಉದ್ಗಚ್ಛತಿ ಯಶ್ಚ ಸಪ್ತಸ್ವಸಾ ಸ ಮಧ್ಯಮ ಇತಿ ವಾಗ್ಭಿರ್ನಿರುಚ್ಯತೇ । ಅನ್ಯಕೇ ದುರ್ಧಿಯಃ ಶತ್ರವಃ ಸಮೇ ಸರ್ವೇ ನಭಂತಾಂ । ಮಾ ಭೂವನ್ ॥ ತಥಾ ಚ ಯಾಸ್ಕಃ । ತಂ ಸ್ವಭಿಷ್ಟೌಮಿ ಸಮಾನಯಾ ಗಿರಾ ಗೀತ್ಯಾ ಸ್ತುತ್ಯಾ ಪಿತೄಣಾಂ ಚ ಮನನೀಯೈಃ ಸ್ತೋತ್ರೈರ್ನಾಭಾಕಸ್ಯ ಪ್ರಶಸ್ತಿಭಿಃ । ಋಷಿರ್ನಾಭಾಕೋ ಬಭೂವ । ಯಃ ಸ್ಯಂದಮಾನಾನಾಮಾಸಾಮಪಾಮುಪೋದಯೇ ಸಪ್ತಸ್ವಸಾರಮೇನಮಾಹ ವಾಗ್ಭಿಃ ಸ ಮಧ್ಯಮ ಇತಿ ನಿರುಚ್ಯತೇಽಥೈಷ ಏವ ಭವತಿ । ನಭಂತಾಮನ್ಯಕೇ ಸಮೇ ಮಾ ಭೂವನ್ನನ್ಯಕೇ ಸರ್ವೇ ಯೇ ನೋ ದ್ವಿಷಂತಿ ದುರ್ಧಿಯಃ ಪಾಪಧಿಯಃ ಪಾಪಸಂಕಲ್ಪಾಃ । ನಿ. ೧೦-೫ । ಇತಿ ॥

॥ ಪ್ರತಿಪದಾರ್ಥ ॥

**ತಮು**—ಆ ವರುಣನನ್ನೇ । **ಸಮನಾ**—ಒಂದೇ ವಿಧವಾದ । **ಗಿರಾ**—ಸ್ತುತಿಯಿಂದ। **ಸು**-ಸ್ತುತಿಸುತ್ತೇನೆ। **ಪಿತೃಣಾಂ**—ಪಿತೃಗಳಿಂದ ನಿರ್ಮಿತವಾದ । **ಮನ್ಮಭಿಃ ಚ**—ಸ್ತುತಿಗಳಿಂದಲೂ ಸ್ತುತಿಸುತ್ತೇನೆ । **ನಾಭಾಕಸ್ಯ**—

ನಾಭಕನಿಂದ ನಿರ್ಮಿತವಾದ | **ಪ್ರಶಸ್ತಿಭಿಃ**—ಉತ್ತಮವಾದ ಸ್ತುತಿಗಳಿಂದಲೂ ಸ್ತುತಿಸುತ್ತೇನೆ | **ಸಿಂಧೂನಾಂ**—ಪ್ರವಹಿಸುವ ನದಿಗಳ | **ಉಪ**—ಸಮೀಪದಲ್ಲಿ | **ಯಃ**—ಯಾರು | **ಉದಯೇ**—ಉದಯಿಸುವನೋ | **ಸಪ್ತಸ್ವಸಾ**—ಸಪ್ತಸಂಖ್ಯಾಕವಾದ ಸಹೋದರಿಯರುಳ್ಳ | **ಸಃ**—ಅವನೇ | **ಮಧ್ಯಮಃ**—ಮಧ್ಯಲೋಕದವನೆಂದು ವರ್ಣಿತನಾಗಿದ್ದಾನೆ | **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ | **ಸಮೇ**—ಒಂದೇ ಸಮನಾಗಿ | **ನಭಂತಾಂ**—ನಾಶವಾಗಲಿ.

|| ಭಾವಾರ್ಥ ||

ಸಮಾನವಾದ ಸ್ತುತಿಯಿಂದ ಆ ವರುಣನನ್ನೇ ಸ್ತುತಿಸುತ್ತೇನೆ. ಪಿತೃಗಳಿಂದ ನಿರ್ಮಿತವಾದ ಸ್ತುತಿಗಳಿಂದಲೂ ನಾಭಾಕನಿಂದ ನಿರ್ಮಿತವಾದ ಸ್ತುತಿಗಳಿಂದಲೂ ಸ್ತುತಿಸುತ್ತೇನೆ. ಪ್ರವಹಿಸುವ ನದಿಗಳ ಸಮೀಪದಲ್ಲಿ ಯಾರು ಉದಯಿಸುವನೋ, ಸಪ್ತಸಂಖ್ಯಾಕವಾದ ಸಹೋದರಿಯರುಳ್ಳ ಅವನೇ ಮಧ್ಯಮಲೋಕದವನೆಂದು ವರ್ಣಿತನಾಗಿದ್ದಾನೆ ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ

## English Translation.

(I praise) with a like praise, with the praises of (my progenitors, with the eulogies of Nabhaka, that Varuna who rises up in the vicinity of the rivers, and in the midst (of them) has seven sisters: may all our enemies perish.

|| ವಿಶೇಷವಿಷಯಗಳು ||

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ತಂ ಸ್ವಭಿಷ್ಟೌಮಿ ಸಮಾನಯಾ ಗಿರಾ ಗೀತ್ಯಾ ಸ್ತುತ್ಯಾ ಪಿತ್ರ್ಯಾಣಾಂ ಚ ಮನನೀಯೈಃ ಸ್ತೋಮೈರ್ನಾಭಾಕಸ್ಯ ಪ್ರಶಸ್ತಿಭಿಃ | ಋಷಿರ್ನಾಭಾಕೋ ಬಭೂವ ಯಃ ಸ್ಯಂದಮಾನಾನಾಮಾಸಾಮಪಾಮುಪೋದಯೇ ಸಪ್ತಸ್ವಸಾರಮೇನಮಾಹ ವಾಗ್ಭಿಃ ಸ ಮಧ್ಯಮ ಇತಿ ನಿರುಚ್ಯತೇಽಥೈಷ ಏವ ಭವತಿ | ನಭಂತಾಮನ್ಯಕೇ ಸಮೇ ಮಾ ಭೂವನ್ನ್ಯಕೇ ಸರ್ವೇ ಯೇ ನೋ ದ್ವಿಷಂತಿ ದುರ್ಧಿಯಃ ಪಾಪಧಿಯಃ ಪಾಪಸಂಕಲ್ಪಾಃ ||**

(ನಿ. ೧೦-೫)

ಈ ವರುಣದೇವನನ್ನು ಉತ್ತಮವಾದ ಸ್ತುತಿವಾಕ್ಯಗಳಿಂದ ಅಥವಾ ಗಾನಾರ್ಹವಾದ ವಾಕ್ಯಗಳಿಂದ ಪ್ರಶಂಸಿಸಿ ಸ್ತುತಿಸುತ್ತೇನೆ ಹೇಗೆಂದರೆ, ಹಿಂದೆ ನಮ್ಮ ಪಿತೃಗಳೇ ಮೊದಲಾದ ಹಿರಿಯರು ಯಾವ ರೀತಿ ವರುಣನನ್ನು ಸ್ತುತಿಸಿದರೋ ಅಂತಹ ವಾಕ್ಯಗಳಿಂದಲೇ, ಆ ಪಿತೃಗಳ ಸ್ತುತಿವಾಕ್ಯಗಳಿಗೆ ಸಮನಾದ ವಾಕ್ಯಗಳಿಂದಲೇ ಸ್ತುತಿಸುತ್ತೇನೆ. ಮತ್ತು ನಾಭಾಕನೆಂಬ ನನ್ನ ಪ್ರಶಂಸಾಪೂರ್ವಕವಾದ ವಾಕ್ಯಗಳಿಂದಲೂ ಸ್ತುತಿಸುತ್ತೇನೆ. ನಾಭಾಕನೆಂಬುವನು ಒಬ್ಬ ಮಂತ್ರದ್ರಷ್ಟೃವಾದ ಋಷಿಯು. ಆ ಋಷಿಯು, ನದಿಗಳಾಗಿ ಹರಿಯುವ ಉದಕಗಳಿಗೆ ಉದ್ಗಮಸ್ಥಾನವಾದ ಅಂತರಿಕ್ಷದಲ್ಲಿ ಏಳುಮಂದಿ ಭಗಿನಿಯರೊಡಗೂಡಿದ ವರುಣನನ್ನು ವಾಕ್ಯಗಳಿಂದ ಸ್ತುತಿಸುತ್ತಾನೆ. ಇಲ್ಲಿ ವರುಣನು

ಮಧ್ಯಮಸ್ಥಾನ (ಅಂತರಿಕ್ಷ) ದೇವತೆಯು. ಏಳು ಮಂದಿ ಭಗಿನಿಯರೆಂದರೆ ಏಳು ಮುಖ್ಯವಾದ ಗಂಗಾದಿ ನದಿಗಳು ಅಥವಾ ಸಪ್ತಾಶ್ವಗಳು. ವರುಣನೆಂದರೆ ಸೂರ್ಯನೆಂದೂ ಅರ್ಥವಾಗುವುದರಿಂದ ಸೂರ್ಯನ ಏಳು ಕುದುರೆಗಳು ಇಲ್ಲಿ ಸೂಚಿತವಾಗಿರಬಹುದು. ಅವುಗಳ ಮಧ್ಯದಲ್ಲಿರುವ ವರುಣನು ಎಂಬ ಅರ್ಥವು ಭಾಸವಾಗುವುದು. ಈ ಋಕ್ಕಿನ **ನಭಂತಾಮನ್ಯಕೇ ಸಮೇ** ಎಂಬ ಕೊನೆಯ ವಾಕ್ಯಕ್ಕೆ ಪಾಪಪ್ರವೃತ್ತಿಯುಳ್ಳ ಎಂದರೆ ಯಾವಾಗಲೂ ಕೆಟ್ಟಕೆಲಸದಲ್ಲಿಯೇ ಆಸಕ್ತರಾಗಿರುವ, ಮತ್ತೂ ನಮ್ಮನ್ನು ದ್ವೇಷಿಸುವ ದುಷ್ಟರು ಎಂದರೆ ಶತ್ರುಗಳೆಲ್ಲರೂ ಏಕಕಾಲದಲ್ಲಿ ನಾಶವಾಗಲಿ ಎಂದರ್ಥವು.

॥ ಸಂಹಿತಾಪಾಠಃ ॥

ಸಃ ಕ್ಷಪಃ ಪರಿ ಷಸ್ವಜೇ ನ್ಯ೧ಸ್ರೋ ಮಾಯಯಾ ದಧೇ ಸ ವಿಶ್ವಂ ಪರಿ ದರ್ಶತಃ ।
ತಸ್ಯ ವೇನೀರನು ವ್ರತಮುಷಸ್ತಿಸ್ರೋ ಅವರ್ಧಯನ್ನಭಂತಾಮನ್ಯಕೇ ಸಮೇ ॥ ೩ ॥

॥ ಪದಪಾಠಃ ॥

ಸಃ । ಕ್ಷಪಃ । ಪರಿ । ಸಸ್ವಜೇ । ನಿ । ಉಸ್ರಃ । ಮಾಯಯಾ । ದಧೇ । ಸಃ । ವಿಶ್ವಂ । ಪರಿ । ದರ್ಶತಃ ।
ತಸ್ಯ । ವೇನೀಃ । ಅನು । ವ್ರತಂ । ಉಷಃ । ತಿಸ್ರಃ । ಅವರ್ಧಯನ್ । ನಭಂತಾಂ । ಅನ್ಯಕೇ । ಸಮೇ ॥

॥ ಸಾಯಣಭಾಷ್ಯಂ ॥

**ಸ ವರುಣಃ ಕ್ಷಪೋ ರಾತ್ರೀಃ ಪರಿ ಷಸ್ವಜೇ । ಪರಿಷ್ವಜತೇ । ಅಪಿ ಚ ದರ್ಶತೋ ದರ್ಶನೀಯಃ ಸ ವರುಣ ಉಸ್ರ ಉತ್ಸರಣಶೀಲಃ ಸನ್ ವಿಶ್ವಂ ಮಾಯಯಾ ಕರ್ಮಣಾ ಪರಿ ಪರಿತೋ ನಿ ದಧೇ । ನಿದಧಾತಿ । ಕಿಂಚ ತಸ್ಯ ವರುಣಸ್ಯ ವ್ರತಂ ಕರ್ಮ ವೇನೀಃ ಕಾಮಯಮಾನಾಃ ಪ್ರಜಾಸ್ತಿಸ್ರ ಉಷಸ್ತ್ರಿಷು ಪ್ರಾತರ್ಮಾಧ್ಯಂದಿನಂ ಸಾಯಂ ಚಾನ್ವವರ್ಧಯನ್ । ಅನುವರ್ಧಯಂತಿ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ಸಃ**—ಅದೇ ವರುಣನು । **ಕ್ಷಪಃ**—ರಾತ್ರಿಗಳನ್ನು । **ಪರಿ ಷಸ್ವಜೇ**—ಆಲಿಂಗಿಸಿಕೊಳ್ಳುತ್ತಾನೆ । **ದರ್ಶತಃ**—ಆಕರ್ಷಕವಾದ ರೂಪವುಳ್ಳ । **ಸಃ**-ಅದೇ ವರುಣನು । **ಉಸ್ರಃ**-ವೇಗಗಾಮಿಯಾಗಿ । **ಮಾಯಯಾ**—ತನ್ನ ಅಸಾಧಾರಣವಾದ ಕರ್ಮದಿಂದ । **ವಿಶ್ವಂ**—ಸಮಸ್ತ ಜಗತ್ತನ್ನೂ । **ಪರಿ**—ಸುತ್ತಲೂ । **ನಿ ದಧೇ**—ಧರಿಸಿದ್ದಾನೆ । **ತಸ್ಯ**—ಆ ವರುಣನ । **ವ್ರತಂ**—ಕರ್ಮವನ್ನು । **ವೇನೀಃ**—ಅಪೇಕ್ಷಿಸುವ ಪ್ರಜೆಗಳು । **ತಿಸ್ರಃ ಉಷಃ**—ಮೂರು ಸವನಕಾಲಗಳಲ್ಲಿಯೂ । **ಅನು ಅವರ್ಧಯನ್**—ಪೂಜಾದಿಗಳಿಂದ ಸತ್ಕರಿಸುತ್ತಾರೆ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವನ್ನು ಹೊಂದಲಿ.

॥ ಭಾವಾರ್ಥ ॥

ವರುಣನು ರಾತ್ರಿಗಳನ್ನು ಆಲಿಂಗಿಸಿಕೊಳ್ಳುತ್ತಾನೆ. ಆಕರ್ಷಕವಾದ ರೂಪವುಳ್ಳ ಅದೇ ವರುಣನು ವೇಗಗಾಮಿಯಾಗಿ ತನ್ನ ಅಸಾಧಾರಣವಾದ ಕರ್ಮದಿಂದ ಸಮಸ್ತ ಜಗತ್ತನ್ನೂ ಸುತ್ತಲೂ ಧರಿಸಿದ್ದಾನೆ. ಆ ವರುಣನ ಕರ್ಮವನ್ನು ಅಪೇಕ್ಷಿಸುವ ಪ್ರಜೆಗಳು ಮೂರು ಸವನಕಾಲಗಳಲ್ಲಿಯೂ ಪೂಜಾದಿಗಳಿಂದ ಸತ್ಕರಿಸುತ್ತಾರೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವನ್ನು ಹೊಂದಲಿ.

English Translation.

He embraces the nights: of goodly aspect, and quick of movement he encompasses the universe by his acts all who are desirous (of his favour) diligently offer him worship at the three diurnal rites: may all our enemies perish.

॥ ಸಂಹಿತಾಪಾಠಃ ॥

ಯಃ ಕಕುಭೋ ನಿಧಾರಯಃ ಪೃಥಿವ್ಯಾಮಧಿ ದರ್ಶತಃ ।
ಸ ಮಾತಾ ಪೂರ್ವ್ಯಂ ಪದಂ ತದ್ವರುಣಸ್ಯ ಸಪ್ತ್ಯಂ ಸ ಹಿ ಗೋಪಾ ಇವೇ-
ರ್ಯೋ ನಭಂತಾಮನ್ಯಕೇ ಸಮೇ ॥ ೪ ॥

॥ ಪದಪಾಠಃ ॥

ಯಃ । ಕಕುಭಃ । ನಿऽಧಾರಯಃ । ಪೃಥಿವ್ಯಾಂ । ಅಧಿ । ದರ್ಶತಃ ।
ಸಃ । ಮಾತಾ । ಪೂರ್ವ್ಯಂ । ಪದಂ । ತತ್ । ವರುಣಸ್ಯ । ಸಪ್ತ್ಯಂ । ಸಃ । ಹಿ । ಗೋಪಾಃऽಇವ ।
ಇರ್ಯಃ । ನಭಂತಾಂ । ಅನ್ಯಕೇ । ಸಮೇ ॥ ೪ ॥

॥ ಸಾಯಣಭಾಷ್ಯಂ ॥

ಯೋ ವರುಣಃ ಪೃಥಿವ್ಯಾಮಧಿ ಪೃಥಿವ್ಯಾ ಉಪರಿ ದರ್ಶತೋ ದರ್ಶನೀಯಃ ಸನ್ ಕಕುಭೋ ದಿಶೋ ನಿಧಾರಯಃ ನಿಧಾರಯಿತಾ ಸ ವರುಣೋ ಮಾತಾ ನಿರ್ಮಾತಾ । ಪೂರ್ವ್ಯಂ ಪ್ರತ್ನಂ ಪದಂ ಸ್ವರ್ಗಾಖ್ಯಂ ಸ್ಥಾನಂ ಸಪ್ತ್ಯಮಸ್ಮಾಭಿಶ್ಚ ಸರ್ಪಣೀಯಂ ತದ್ವರುಣಸ್ಯ ಸ್ವಕೃತಂ । ಅಪಿ ಚ ಸ ಹಿ ಸ ಏವೇರ್ಯ ಈಶ್ವರಃ ಸನ್ ಗೋಪಾ ಇವ ಗೋಪಾಲ ಇವ ಪಶೂನಾಮಸ್ಮಾಕಂ ರಕ್ಷಿತಾ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

ಯಃ—ಯಾವ ವರುಣನು । ಪೃಥಿವ್ಯಾಂ ಅಧಿ—ಪೃಥ್ವಿಯ ಮೇಲೆ ನಿಂತು । ದರ್ಶತಃ—ಆಕರ್ಷಕವಾದ ರೂಪವುಳ್ಳವನಾಗಿ । ಕಕುಭಃ—ಸಕಲ ದಿಕ್ಕುಗಳನ್ನೂ । ನಿಧಾರಯಃ—ಧರಿಸುವನೋ । ಸಃ—ಅದೇ

ವರುಣನು | **ಮಾತಾ**—ಜಗನ್ನಿರ್ಮಾಪಕನಾಗಿದ್ದಾನೆ | **ಪೂರ್ವ್ಯಂ**—ಪುರಾತನವಾದುದೂ | **ಸಪ್ತ್ಯಂ**—ನಮಗೆ ಗವ್ಯವಾದುದೂ ಆದ | **ಪದಂ**–ಯಾವ ಸ್ವರ್ಗಸ್ಥಾನವಿದೆಯೋ | **ತತ್**—ಅದೂ ಸಹ | **ವರುಣಸ್ಯ**—ವರುಣನಿರ್ಮಿತವೇ ಆಗಿದೆ | **ಸ ಹಿ** ಅದೇ ವರುಣನು | **ಇರ್ಯಃ**—ಈಶ್ವರನಾಗಿ | **ಗೋಪಾ ಇವ**—ಗೋಪಾಲಕನು ಪಶುಗಳನ್ನು ರಕ್ಷಿಸುವಂತೆ ನಮ್ಮನ್ನು ರಕ್ಷಿಸುತ್ತಾನೆ | **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ | **ಸಮೇ**—ಒಂದೇ ಕಾಲದಲ್ಲಿ | **ನಭಂತಾಂ**—ನಾಶವಾಗಲಿ.

|| ಭಾವಾರ್ಥ ||

ಯಾವ ವರುಣನು ಪೃಥ್ವಿಯ ಮೇಲೆ ನಿಂತು ಆಕರ್ಷಕವಾದ ರೂಪವುಳ್ಳವನಾಗಿ ಸಕಲ ದಿಕ್ಕುಗಳನ್ನೂ ಧರಿಸುವನೋ ಅದೇ ವರುಣನು ಜಗನ್ನಿರ್ಮಾಪಕನಾಗಿದ್ದಾನೆ. ಪುರಾತನವಾದುದೂ, ನಮಗೆ ಗವ್ಯವಾದುದೂ ಆದ ಯಾವ ಸ್ಥಾನವಿದೆಯೋ ಅದೂ ಸಹ ವರುಣನಿರ್ಮಿತವೇ ಆಗಿದೆ. ಅದೇ ವರುಣನು ಈಶ್ವರನಾಗಿದ್ದು ಗೋಪಾಲಕನು ಪಶುಗಳನ್ನು ರಕ್ಷಿಸುವಂತೆ ನಮ್ಮನ್ನು ರಕ್ಷಿಸುತ್ತಾನೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವಾಗಲಿ.

English Translation.

He, who visible above the earth sustains the point of the horizon, is the measurer (of the universe); that is the ancient abode of Varuna, to which we have access; he is our lord, like the keeper of cattle: may all our enemies perish

| ಸಂಹಿತಾಪಾಠಃ ||

ಯೋ ಧರ್ತಾ ಭುವನಾನಾಂ ಯ ಉಸ್ರಾಣಾಮಪೀಚ್ಯಾ ವೇದ ನಾಮಾನಿ ಗುಹ್ಯಾ |
ಸ ಕವಿಃ ಕಾವ್ಯಾ ಪುರು ರೂಪಂ ದ್ಯೌರಿವ ಪುಷ್ಯತಿ ನಭಂತಾಮನ್ಯಕೇ ಸಮೇ ||

|| ಪದಪಾಠಃ ||

ಯಃ | ಧರ್ತಾ | ಭುವನಾನಾಂ | ಯಃ | ಉಸ್ರಾಣಾಂ | ಅಪೀಚ್ಯಾ | ವೇದ | ನಾಮಾನಿ | ಗುಹ್ಯಾ |
ಸಃ | ಕವಿಃ | ಕಾವ್ಯಾ | ಪುರು | ರೂಪಂ | ದ್ಯೌಃऽಇವ | ಪುಷ್ಯತಿ | ನಭಂತಾಂ | ಅನ್ಯಕೇ | ಸಮೇ || ೫ ||

| ಸಾಯಣಭಾಷ್ಯಂ ||

**ಯೋ ವರುಣೋ ಭುವನಾನಾಂ ಧರ್ತಾ ಧಾರಯಿತಾ ಯಶ್ಚೋಸ್ರಾಣಾಂ ದೇವಾಧಿಷ್ಠಾನಭೂತಾನಾಂ ರಶ್ಮೀನಾಮಪೀಚ್ಯಾಪೀಚ್ಯಾನ್ಯಂತರ್ಹಿತಾನಿ ಗುಹ್ಯಾ ಗುಹ್ಯಾನಿ ಗುಹ್ಯಾಯಾಂ ನಿಹಿತಾನಿ**

**ನಾಮಾನಿ ವೇದ ಜಾನಾತಿ ಸ ವರುಣಃ ಕವಿಃ ಪ್ರಾಜ್ಞಃ ಸನ್ ಕಾವ್ಯಾ ಕಾವ್ಯಾನಿ ಕವಿಕರ್ಮಾಣಿ ಪುರು ಬಹೂನಿ ರೂಪಂ ದ್ಯೌರಿವ ಪುಷ್ಯತಿ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ಯಃ**— ಯಾವ ವರುಣನು । **ಭುವನಾನಾಂ**— ಸಕಲ ಲೋಕಗಳಿಗೂ । **ಧರ್ತಾ**— ಧಾರಕನಾಗಿರುವನೋ । **ಯಃ**— ಯಾರು । **ಉಸ್ರಾಣಾಂ**— ದಿವ್ಯ ರಶ್ಮಿಗಳ । **ಅಪೀಚ್ಯಾ**— ಅಂತರ್ಹಿತವಾದವೂ । **ಗುಹ್ಯಾ**— ರಹಸ್ಯವಾದವೂ ಆದ । **ನಾಮಾನಿ**— ಹೆಸರುಗಳನ್ನು । **ವೇದ**— ಅರಿಯುವನೋ । **ಸಃ**— ಅದೇ ವರುಣನು । **ಕವಿಃ**— ಪ್ರಾಜ್ಞನಾಗಿದ್ದು । **ಕಾವ್ಯಾ**— ಕಾವ್ಯಾತ್ಮಕವಾದ ಸಕಲ ಕರ್ಮಗಳನ್ನೂ ನೆರವೇರಿಸುತ್ತಾ । **ದ್ಯೌರಿವ**— ಅಂತರಿಕ್ಷದಂತೆ । **ಪುರು**— ಬಹುವಿಧವಾದ । **ರೂಪಂ**— ರೂಪವನ್ನು । **ಪುಷ್ಯತಿ**— ಹೊಂದುತ್ತಾನೆ । **ಅನ್ಯಕೇ**— ನಮ್ಮ ಶತ್ರುಗಳೆಲ್ಲರೂ । **ಸಮೇ**— ಒಂದೇ ಕಾಲದಲ್ಲಿ । **ನಭಂತಾಂ**— ನಾಶವನ್ನು ಹೊಂದಲಿ

॥ ಭಾವಾರ್ಥ ॥

ಯಾವ ವರುಣನು ಸಕಲ ಲೋಕಗಳಿಗೂ ಧಾರಕನಾಗಿರುವನೋ, ಯಾರು ದಿವ್ಯ ರಶ್ಮಿಗಳ ಅಂತರ್ಹಿತವಾದವೂ ರಹಸ್ಯವಾದವೂ ಆದ ಸಕಲ ನಾಮಗಳನ್ನೂ ಅರಿತಿರುವನೋ ಅದೇ ವರುಣನು ಪ್ರಾಜ್ಞನಾಗಿದ್ದು ಕಾವ್ಯಾತ್ಮಕವಾದ ಸಕಲ ಕರ್ಮಗಳನ್ನೂ ನೆರವೇರಿಸುತ್ತಾ ಅಂತರಿಕ್ಷದಂತೆ ಬಹು ವಿಧವಾದ ರೂಪವನ್ನು ಹೊಂದುತ್ತಾನೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವನ್ನು ಹೊಂದಲಿ.

English Translation.

He who is the sustainer of the worlds, who knows the hidden and secret names of the (solar) rays, he is the sage who cherishes the acts of sages, as the heaven cherishes numorous forms: may all our enemies perish.

॥ ಸಂಹಿತಾಪಾಠಃ ॥

ಯಸ್ಮಿನ್ವಿಶ್ವಾನಿ ಕಾವ್ಯಾ ಚಕ್ರೇ ನಾಭಿರಿವ ಶ್ರಿತಾ ।
ತ್ರಿತಂ ಜೂತೀ ಸಪರ್ಯತ ವ್ರಜೇ ಗಾವೋ ನ ಸಂಯುಜೇ ಯುಜೇ
ಅಶ್ವಾँ ಅಯುಕ್ಷತ ನಭಂತಾಮನ್ಯಕೇ ಸಮೇ ॥ ೬ ॥

॥ ಪದಪಾಠಃ ॥

**ಯಸ್ಮಿನ್ । ವಿಶ್ವಾನಿ । ಕಾವ್ಯಾ । ಚಕ್ರೇ । ನಾಭಿಃऽಇವ । ಶ್ರಿತಾ ।**

**ತ್ರಿತಂ । ಜೂತೀ । ಸಪರ್ಯತ । ವ್ರಜೇ । ಗಾವಃ । ನ । ಸಂऽಯುಜೇ । ಯುಜೇ । ಅಶ್ವಾನ್ । ಅಯುಕ್ಷತ ।**

**ನಭಂತಾಂ । ಅನ್ಯಕೇ । ಸಮೇ ॥ ೬ ॥**

॥ ಸಾಯಣಭಾಷ್ಯಂ ॥

ಯಸ್ಮಿನ್ವರುಣೇ ವಿಶ್ವಾನಿ ಸರ್ವಾಣಿ ಕಾವ್ಯಾ ಕಾವ್ಯಾನಿ ಕವಿಕರ್ಮಾಣಿ ಚಕ್ರೇ ನಾಭಿರಿವ ಯಥಾ ರಥಸ್ಯ ಚಕ್ರೇ ನಾಭಿಸ್ತಥಾ ಶ್ರಿತಾ ಶ್ರಿತಾನಿ ತಂ ತ್ರಿತಂ ತ್ರಿಸ್ಥಾನಂ ವರುಣಂ ಜೂತೀ ಜೂತ್ಯಾ ಕ್ಷಿಪ್ರಂ ಸಪರ್ಯತ । ಹೇ ಮದೀಯಾ ಜನಾಃ ಪರಿಚರತ । ಕಿಮರ್ಥಮಿತ್ಯತ ಆಹ । ವ್ರಜೇ ಗೋಷ್ಠೇ ಗಾವೋ ನ ಯಥಾ ಗಾಃ ಸಂಯುಜೇ ಸಂಯೋಗಾರ್ಥಂ ಸಹ ಸ್ಥಾಪಯಿತುಂ ಯುಜೇ ಯುಂಜಂತಿ ತಥಾಸ್ಮಾಕ-ಮಭಿಯೋಗಾಯಾಶ್ವಾನಯುಕ್ಷತ । ಸಪತ್ನಾ ಯುಂಜಂತಿ । ಅತಸ್ತದುಪದ್ರವಪರಿಹಾರಾಯ ವರುಣಂ ಪರಿಚರತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಚಕ್ರೇ**—ಚಕ್ರದಲ್ಲಿ । **ನಾಭಿರಿವ**—ಅರಗಳೆಲ್ಲವೂ ಮಧ್ಯಭಾಗವಾದ ನಾಭಿಯನ್ನು ಆಶ್ರಯಿಸಿರುವಂತೆ । **ಯಸ್ಮಿನ್**—ಯಾವ ವರುಣನಲ್ಲಿ । **ವಿಶ್ವಾನಿ**—ಸಮಸ್ತವಾದ । **ಕಾವ್ಯಾ**—ಕವಿಕರ್ಮಗಳೂ । **ಶ್ರಿತಾ**—ಆಶ್ರಯಿಸಿವೆಯೋ । **ತ್ರಿತಂ**—ಮೂರು ಸ್ಥಾನಗಳನ್ನೂ ಆಕ್ರಮಿಸಿರುವ ಅದೇ ವರುಣನನ್ನು । **ಜೂತೀ**—ಕ್ಷಿಪ್ರವಾಗಿ । **ಸಪರ್ಯತ**—ಪೂಜಿಸಿರಿ । **ವ್ರಜೇ**—ಕೊಟ್ಟಿಗೆಯಲ್ಲಿ । **ಗಾವೋ ನ**—ಗೋವುಗಳೆಲ್ಲವೂ ಒಟ್ಟುಗೂಡಿರುವಂತೆ । **ಸಂಯುಜೇ**—ಒಟ್ಟಿಗೆ ಸೇರುವುದಕ್ಕಾಗಿ । **ಯುಜೇ**—ಕೂಡಿಹಾಕಿರುವರೋ ಹಾಗೆ । **ಅಶ್ವಾನ್**—ಅಶ್ವಗಳನ್ನು । **ಅಯುಕ್ಷತ**—ಶತ್ರುಗಳು ಶೇಖರಿಸಿದ್ದಾರೆ । **ಅನ್ಯಕೇ**—ನಮ್ಮ ಶತ್ರುಗಳೆಲ್ಲರೂ । **ಸಮೇ**—ಒಂದೇ ಕಾಲದಲ್ಲಿ । **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಚಕ್ರದಲ್ಲಿ ಅರಗಳೆಲ್ಲವೂ ಮಧ್ಯಭಾಗದ ನಾಭಿಯನ್ನು ಆಶ್ರಯಿಸಿರುವಂತೆ ಯಾವ ವರುಣನಲ್ಲಿ ಸಮಸ್ತವಾದ ಕವಿಕರ್ಮಗಳೂ ಆಶ್ರಯಿಸಿವೆಯೋ, ಮೂರು ಸ್ಥಾನಗಳನ್ನೂ ಆಕ್ರಮಿಸಿರುವ ಅದೇ ವರುಣನನ್ನು ಕ್ಷಿಪ್ರವಾಗಿ ಪೂಜಿಸಿರಿ. ಕೊಟ್ಟಿಗೆಯಲ್ಲಿ ಗೋವುಗಳೆಲ್ಲವೂ ಒಟ್ಟುಗೂಡಿರುವಂತೆ ಒಂದುಗೂಡಿದ ಅಶ್ವಗಳನ್ನು ಶತ್ರುಗಳು ಶೇಖರಿಸಿದ್ದಾರೆ. ನಮ್ಮ ಶತ್ರುಗಳೆಲ್ಲವೂ ಒಂದೇ ಕಾಲದಲ್ಲಿ ನಾಶವಾಗಲಿ.

## English Translation.

In whom all pious acts are concentrated, like the nave in the (centre of the) wheel, worship him quickly who abides in the three worlds; as men assemble the cattle in their pasture, so do (our foes) collect their horses (to assail us): may all our enemies perish.

|| ಸಂಹಿತಾಪಾಠಃ ||

ಯ ಆಸ್ವತ್ಕ ಆಶಯೇ ವಿಶ್ವಾ ಜಾತಾನ್ಯೇಷಾಂ |

ಪರಿ ಧಾಮಾನಿ ಮರ್ಮೃಶದ್ವರುಣಸ್ಯ ಪುರೋ ಗಯೇ ವಿಶ್ವೇ ದೇವಾ ಅನು

ವ್ರತಂ ನಭಂತಾಮನ್ಯಕೇ ಸಮೇ || ೭ ||

|| ಪದಪಾಠಃ ||

ಯಃ | ಆಸು | ಅತ್ಕಃ | ಆऽಶಯೇ | ವಿಶ್ವಾ | ಜಾತಾನಿ | ಏಷಾಂ |

ಪರಿ | ಧಾಮಾನಿ | ಮರ್ಮೃಶತ್ | ವರುಣಸ್ಯ | ಪುರಃ | ಗಯೇ | ವಿಶ್ವೇ | ದೇವಾಃ | ಅನು | ವ್ರತಂ |

ನಭಂತಾಂ | ಅನ್ಯಕೇ | ಸಮೇ || ೭ ||

|| ಸಾಯಣಭಾಷ್ಯಂ ||

...........ತ್ಪರಿಮೃಶತೋ ವರುಣಸ್ಯ ಪುರೋ ಗಯೇ ರಥಸ್ಯ ಪುರಸ್ತಾದ್ಭವತಿ ತಸ್ಯ ವರುಣಸ್ಯ ಪುರಸ್ತಾದ್ವಿಶ್ವೇ ಸರ್ವೇ ದೇವಾ ವ್ರತಂ ಕರ್ಮಾನುಗಚ್ಛಂತೀತ್ಯರ್ಥಃ | ಸಿದ್ಧಮನ್ಯತ್ ||

|| ಪ್ರತಿಪದಾರ್ಥ ||

**ಯಃ**——ಯಾವ ವರುಣನು | **ಆಸು**—ಸಕಲ ದಿಕ್ಕುಗಳಲ್ಲಿಯೂ | **ಅತ್ಕಃ**—ಸಂಚರಿಸುತ್ತಾ | **ಏಷಾಂ**— ಈ ಲೋಕಗಳ | **ವಿಶ್ವಾ ಜಾತಾನಿ**—ಸಮಸ್ತ ಪ್ರಾಣಿಗಳನ್ನೂ | **ಆ ಶಯೇ**—ಸ್ಥಿತಿಯನ್ನು ಹೊಂದುವಂತೆ ಮಾಡಿದನೋ (ಮತ್ತು) | **ಧಾಮಾನಿ**—ಸಕಲ ಲೋಕಗಳನ್ನೂ | **ಪರಿ**—ಸುತ್ತಲೂ | **ಮರ್ಮೃಶತ್**— ಸ್ಪರ್ಶಮಾಡುತ್ತಾ ಸುತ್ತುವನೋ | **ವರುಣಸ್ಯ**—ಅದೇ ವರುಣನ | **ಪುರೋ ಗಯೇ**—ರಥದ ಮುಂಭಾಗದಲ್ಲಿ | **ವಿಶ್ವೇ ದೇವಾಃ**—ಸಕಲ ದೇವತೆಗಳೂ | **ವ್ರತಂ**—ಕರ್ಮವನ್ನು | **ಅನು**—ನಿರ್ವಹಿಸುತ್ತಾರೆ | **ಅನ್ಯಕೇ**— ನಮ್ಮ ಶತ್ರುಗಳೆಲ್ಲರೂ | **ಸಮೇ**— ಒಂದೇ ಕಾಲದಲ್ಲಿ | **ನಭಂತಾಂ**—ನಾಶವನ್ನು ಹೊಂದಲಿ.

|| ಭಾವಾರ್ಥ ||

ಯಾವ ವರುಣನು ಸಕಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಾ ಈ ಲೋಕಗಳ ಸಕಲ ಭೂತಗಳನ್ನೂ ಸ್ಥಿತಿಯನ್ನು ಹೊಂದುವಂತೆ ಮಾಡಿದನೋ, ಮತ್ತು ಸಕಲ ಲೋಕಗಳನ್ನೂ ಸುತ್ತಲೂ ಸ್ಪರ್ಶಮಾಡುತ್ತಾ ಸುತ್ತುವನೋ ಅದೇ ವರುಣನ ರಥದ ಮುಂಭಾಗದಲ್ಲಿ ಸಕಲ ದೇವತೆಗಳೂ ಕರ್ಮವನ್ನು ನಿರ್ವಹಿಸುತ್ತಾರೆ. ನಮ್ಮ ಶತ್ರುಗಳೆಲ್ಲರೂ ಒಂದೇ ಕಾಲದಲ್ಲಿ ನಾಶವನ್ನು ಹೊಂದಲಿ

## English Translation.

He who, passing amidst those (regions of the firmament), gives refuge to all their races, and all the deities precede the chariot of Varuna when manifesting his glories to perform his worship : may all our enemies perish.

॥ ಸಂಹಿತಾಪಾಠಃ ॥

ಸ ಸಮುದ್ರೋ ಅಪೀಚ್ಯಸ್ತುರೋ ದ್ಯಾಮಿವ ರೋಹತಿ ನಿ ಯದಾಸು
ಯಜುರ್ದಧೇ ।
ಸ ಮಾಯಾ ಅರ್ಚಿನಾ ಪದಾಸ್ತೃಣಾನ್ನಾಕಮಾರುಹನ್ನಭಂತಾಮನ್ಯಕೇ
ಸಮೇ ॥ ೮ ॥

॥ ಪದಪಾಠಃ ॥

ಸಃ । ಸಮುದ್ರಃ । ಅಪೀಚ್ಯಃ । ತುರಃ । ದ್ಯಾಂಽಇವ । ರೋಹತಿ । ನಿ । ಯತ್ । ಆಸು । ಯಜುಃ ।
ದಧೇ ।

ಸಃ । ಮಾಯಾಃ । ಅರ್ಚಿನಾ । ಪದಾ । ಅಸ್ತೃಣಾತ್ । ನಾಕಂ । ಆ । ಅರುಹತ್ । ನಭಂತಾಂ । ಅನ್ಯಕೇ ।
ಸಮೇ ॥ ೮ ॥

। ಸಾಯಣಭಾಷ್ಯಂ ।

ಯಸ್ಮಾದಾಪಃ ಸಮುದ್ದ್ರವಂತಿ ಸ ವರುಣಃ ಸಮುದ್ರೋಽಪೀಚ್ಯೋಽಂತರ್ಹಿತಸ್ತುರಃ ಕ್ಷಿಪ್ರೋ ದ್ಯಾಮಿವ ಯಥಾದಿತ್ಯೋ ದ್ಯಾಂ ರೋಹತಿ ತಥಾ ನಾಕಂ ರೋಹತಿ । ಅಪಿ ಚ ಯದ್ಯೋ ವರುಣ ಆಸು ದಿಕ್ಷು ಯಜುಃ ಪ್ರಜಾಭ್ಯೋ ದಾನಂ ನಿ ದಧೇ ನಿದಧಾತಿ ಸ ವರುಣೋ ಮಾಯಾ ಆಸುರಾಣಾಂ ಮಾಯಾ ಅರ್ಚಿನಾರ್ಚಿಷ್ಮತಾ ಪದಾ ಸ್ಥಾನೇನ । ತೇಜಸೇತ್ಯರ್ಥಃ । ಅಸ್ತೃಣಾತ್ । ಸಮಂತಾದ್ಧಿನಸ್ತಿ । ನಾಕಂ ಸ್ವರ್ಗಮಾರುಹತ್ । ಆರೋಹತಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಸಃ**—ಅದೇ ವರುಣನು । **ಅಪೀಚ್ಯಃ**—ಅಂತರ್ಹಿತವಾದ । **ಸಮುದ್ರಃ**—ಸಮುದ್ರರೂಪನಾಗಿದ್ದಾನೆ । **ತುರಃ**—ಕ್ಷಿಪ್ರಗಾಮಿಯಾದ ಆದಿತ್ಯನು । **ದ್ಯಾಂ ಇವ**—ಅಂತರಿಕ್ಷವನ್ನು ಹತ್ತುವಂತೆ । **ರೋಹತಿ**—ವರುಣನೂ ದ್ಯುಲೋಕವನ್ನು ಹತ್ತುತ್ತಾನೆ । **ಯತ್**—ಯಾವ ವರುಣನು । **ಆಸು**—ಸಕಲ ದಿಕ್ಕುಗಳಲ್ಲಿಯೂ ।

**ಯಜುಃ**—ಯಜ್ಞಕರ್ಮವನ್ನು | **ನಿ ದಧೇ**—ಸ್ಥಾಪಿಸಿದನೋ | **ಸಃ**—ಅದೇ ವರುಣನು | **ಮಾಯಾಃ**—ಅಸುರರ ವಂಚಕ ಕರ್ಮಗಳನ್ನು | **ಅರ್ಚಿನಾ**—ತನ್ನ ಪ್ರಕಾಶಮಾನವಾದ | **ಪದಾ**—ಸ್ಥಾನದಿಂದಲೇ | **ಆ ಸ್ತೃಣಾತ್**—ಪೂರ್ಣವಾಗಿ ನಾಶಮಾಡುತ್ತಾನೆ | **ನಾಕಂ**—ಸ್ವರ್ಗವನ್ನು | **ಆರುಹತ್**—ಹತ್ತುತ್ತಾನೆ | **ಅನ್ಯಕೇ ಸಮೇ**—ನಮ್ಮ ಶತ್ರುಗಳೆಲ್ಲರೂ | **ನಭಂತಾಂ**—ನಾಶವಾಗಲಿ.

|| ಭಾವಾರ್ಥ ||

ಪ್ರಸಿದ್ಧನಾದ ಅದೇ ವರುಣನು ಅಂತರ್ಹಿತವಾದ ಸಮುದ್ರರೂಪನಾಗಿದ್ದಾನೆ. ಕ್ಷಿಪ್ರಗಾಮಿಯಾದ ಆದಿತ್ಯನು ಅಂತರಿಕ್ಷವನ್ನು ಹತ್ತುವಂತೆ ವರುಣನೂ ದ್ಯುಲೋಕವನ್ನು ಹತ್ತುತ್ತಾನೆ. ಯಾವ ವರುಣನು ಸಕಲ ದಿಕ್ಕುಗಳಲ್ಲಿಯೂ ಯಜ್ಞಕರ್ಮವನ್ನು ಸ್ಥಾಪಿಸಿದನೋ ಅದೇ ವರುಣನು ಅಸುರರ ವಂಚಕ ಕರ್ಮಗಳನ್ನು ತನ್ನ ಪ್ರಕಾಶಮಾನವಾದ ಸ್ಥಾನದಿಂದಲೇ ಪೂರ್ಣವಾಗಿ ನಾಶಮಾಡುತ್ತಾನೆ. ಮತ್ತು ಸ್ವರ್ಗವನ್ನೂ ಹತ್ತುತ್ತಾನೆ. ನಮ್ಮ ಶತ್ರುಗಳೆಲ್ಲರೂ ನಾಶವಾಗಲಿ.

English Translation.

He is the hidden ocean; swsft he mounts (the heaven) as (the sun) the sky; when he has placed the sacrifice in those (regions of the firmament) he demolishes with his brilliant radiance the devices (of the Asuras); he ascends to heaven: may all our enemies perish.

|| ಸಂಹಿತಾಪಾಠಃ ||

ಯಸ್ಯ ಶ್ವೇತಾ ವಿಚಕ್ಷಣಾ ತಿಸ್ರೋ ಭೂಮೀರಧಿಕ್ಷಿತಃ ।
ತ್ರಿರುತ್ತರಾಣಿ ಪಪ್ರತುರ್ವರುಣಸ್ಯ ಧ್ರುವಂ ಸದಃ ಸ ಸಪ್ತಾನಾಮಿರಜ್ಯತಿ
ನಭಂತಾಮನ್ಯಕೇ ಸಮೇ || ೯ ||

|| ಪದಪಾಠಃ ||

ಯಸ್ಯ । ಶ್ವೇತಾ । ವಿऽಚಕ್ಷಣಾ । ತಿಸ್ರಃ । ಭೂಮೀಃ । ಅಧಿऽಕ್ಷಿತಃ ।
ತ್ರಿಃ । ಉತ್ऽತರಾಣಿ । ಪಪ್ರತುಃ । ವರುಣಸ್ಯ । ಧ್ರುವಂ । ಸದಃ । ಸಃ । ಸಪ್ತಾನಾಂ । ಇರಜ್ಯತಿ ।
ನಭಂತಾಂ । ಅನ್ಯಕೇ । ಸಮೇ || ೯ ||

|| ಸಾಯಣಭಾಷ್ಯಂ ||

ಯಸ್ಯ ವರುಣಸ್ಯಾಧಿಕ್ಷಿತೋಂತರಿಕ್ಷೇऽಧಿ ವಸತಃ ಶ್ವೇತಾ ಶ್ವೇತಾನಿ ವಿಚಕ್ಷಣಾ ತೇಜಾಂಸಿ ತಿಸ್ರೋ ಭೂಮೀಸ್ತ್ರಿರುತ್ತರಾಣಿ ತಿಸೃಣಾಮುಪರಿಸ್ಥಿತಾನಿ ಭುವನಾನಿ ಪಪ್ರತುಃ ಪ್ರಥಯಂತಿ । ತಥಾ ಚ

**ಮಂತ್ರವರ್ಣಃ । ತಿಸ್ರೋ ಭೂಮೀರ್ಧಾರಯನ್ ತ್ರೀರುತ ದ್ಯೂನ್ । ಋ. ೨-೨೭-೮ । ಇತಿ । ತಸ್ಯ ವರುಣಸ್ಯ ಸದಃ ಸ್ಥಾನಂ ಧ್ರುವಮಚಲಮಿತಿ । ಕಿಂಚ ಸ ವರುಣಃ ಸಪ್ತಾನಾಂ ಸಿಂಧೂನಾಮಿರಜ್ಯತಿ । ಈಶ್ವರೋ ಭವತಿ । ಸಿದ್ಧಮನ್ಯತ್ ॥**

॥ ಪ್ರತಿಪದಾರ್ಥ ॥

**ಅಧಿಕ್ಷಿತಃ**—ಅಂತರಿಕ್ಷವಾಸಿಯಾದ । **ಯಸ್ಯ**—ಯಾವ ವರುಣನ । **ಶ್ವೇತಾ**—ಶ್ವೇತವರ್ಣವುಳ್ಳ । **ವಿಚಕ್ಷಣಾ**—ತೇಜಸ್ಸುಗಳು । **ತಿಸ್ರಃ ಭೂಮೀಃ**—ಮೂರು ಅಧೋಲೋಕಗಳನ್ನೂ । **ತ್ರೀಃ ಉತ್ತರಾಣಿ**—ಮೂರು ಊರ್ಧ್ವಲೋಕಗಳನ್ನೂ । **ಪಸ್ಪ್ರಶುಃ**—ವ್ಯಾಪಿಸಿವೆಯೋ । **ವರುಣಸ್ಯ**—ಅದೇ ವರುಣನ । **ಸದಃ**—ಸ್ಥಾನವು । **ಧ್ರುವಂ**—ಅಚಲವಾಗಿರುತ್ತದೆ । **ಸಃ**—ಅದೇ ವರುಣನು । **ಸಪ್ತಾನಾಂ**—ಸಪ್ತಸಿಂಧುಗಳಿಗೂ । **ಇರಜ್ಯತಿ**—ಈಶ್ವರನಾಗಿದ್ದಾನೆ । **ಅನ್ಯಕೇ ಸಮೇ**—ನಮ್ಮ ಶತ್ರುಗಳೆಲ್ಲರೂ । **ನಭಂತಾಂ**—**ನಾಶವಾಗಲಿ.**

॥ ಭಾವಾರ್ಥ ॥

ಅಂತರಿಕ್ಷವಾಸಿಯಾದ ಯಾವ ವರುಣನ ಶ್ವೇತವರ್ಣವುಳ್ಳ ತೇಜಸ್ಸುಗಳು ಮೂರು ಅಧೋಲೋಕಗಳನ್ನೂ, ಮೂರು ಊರ್ಧ್ವಲೋಕಗಳನ್ನೂ, ವ್ಯಾಪಿಸಿವೆಯೋ ಅದೇ ವರುಣನ ಸ್ಥಾನವು ಅಚಲವಾಗಿರುತ್ತದೆ. ಅದೇ ವರುಣನು ಸಪ್ತಸಿಂಧುಗಳಿಗೂ ಈಶ್ವರನಾಗಿದ್ದಾನೆ. ನಮ್ಮ ಶತ್ರುಗಳೆಲ್ಲರೂ ನಾಶವಾಗಲಿ.

## English Translation.

Of whom, present in the three worlds, the brilliant rays **pervade the** three realms beyond, the eternal dwelling of Varuna, **he is a lord of the** seven (rivers) : may all our enemies perish.

। ಸಂಹಿತಾಪಾಠಃ ।

ಯಃ ಶ್ವೇತಾँ ಅಧಿನಿರ್ಣಿಜಶ್ಚಕ್ರೇ ಕೃಷ್ಣಾँ ಅನು ವ್ರತಾ ।
ಸ ಧಾಮ ಪೂರ್ವ್ಯಂ ಮಮೇ ಯಃ ಸ್ಕಂಭೇನ ವಿ ರೋದಸೀ ಅಜೋ ನ
ದ್ಯಾಮಧಾರಯನ್ನಭಂತಾಮನ್ಯಕೇ ಸಮೇ ॥ ೧೦ ॥

॥ ಪದಪಾಠಃ ॥

ಯಃ । ಶ್ವೇತಾನ್ । ಅಧಿऽನಿರ್ನಿಜಃ । ಚಕ್ರೇ । ಕೃಷ್ಣಾನ್ । ಅನು । ವ್ರತಾ ।
ಸಃ । ಧಾಮ । ಪೂರ್ವ್ಯಂ । ಮಮೇ । ಯಃ । ಸ್ಕಂಭೇನ । ವಿ । ರೋದಸೀ ಇತಿ । ಅಜಃ । ನ । ದ್ಯಾಂ ।
ಅಧಾರಯತ್ । ನಭಂತಾಂ । ಅನ್ಯಕೇ । ಸಮೇ ॥ ೧೦ ॥

|| ಸಾಯಣಭಾಷ್ಯಂ ||

**ಯೋ ವರುಣೋ ನಿರ್ಣಿಜ ಆತ್ಮೀಯಾನ್ರಶ್ಮೀನ್ಸಿವಾ ಶ್ವೇತಾನಧಿ ಚಕ್ರೇ ಅಧಿಕರೋತಿ ತಥಾ ರಾತ್ರೌ ಕೃಷ್ಣಾಂಶ್ಚಕ್ರೇ ಸ ವರುಣೋऽನು ವ್ರತಾ ಕರ್ಮಾಣಿ ಲಕ್ಷೀಕೃತ್ಯೋಭಯವಿಧಕರ್ಮಾನುಗುಣಂ ಪೂರ್ವ್ಯಂ ಧಾಮಾಂತರಿಕ್ಷಂ ದಿವಂ ವಾ ಮಮೇ । ನಿರ್ಮಮೇ । ಅಪಿ ಚ ಯಃ ಸ್ಕಂಭೇನಾಂತರಿಕ್ಷೇಣಾಜೋ ನ ಯಥಾದಿತ್ಯೋ ದ್ಯಾಂ ಧಾರಯತಿ ತಥಾ ರೋದಸೀ ದ್ಯಾವಾಪೃಥಿವ್ಯಾವಧಾರಯತ್ ವಿಧಾರಯತಿ ಸ ವರುಣ ಇತ್ಯರ್ಥಃ । ಸಿದ್ಧಮನ್ಯತ್ ||**

|| ಪ್ರತಿಪದಾರ್ಥ ||

**ಯಃ**—ಯಾವ ವರುಣನು । **ಅಧಿನಿರ್ಣಿಜಃ**—ತನ್ನ ರಶ್ಮಿಗಳನ್ನು । **ಶ್ವೇತಾನ್**—ಹಗಲಿನಲ್ಲಿ ಶ್ವೇತ ವರ್ಣವುಳ್ಳವನ್ನಾಗಿ । **ಚಕ್ರೇ**—ಆವಿಷ್ಕರಿಸುತ್ತಲೂ । **ಕೃಷ್ಣಾನ್**—ರಾತ್ರಿಕಾಲದಲ್ಲಿ ಕೃಷ್ಣವರ್ಣವುಳ್ಳವನ್ನಾಗಿ ಮಾಡುತ್ತಲೂ ಇರುವನೋ (ಮತ್ತು) । **ಅಜಃ**—ಆದಿತ್ಯನು । **ದ್ಯಾಂ ನ**—ದ್ಯುಲೋಕವನ್ನು ಧರಿಸಿರುವಂತೆ । **ಯಃ**—ಯಾರು । **ಸ್ಕಂಭೇನ**—ಅಂತರಿಕ್ಷರೂಪವಾದ ಸ್ತಂಭದಿಂದ । **ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ವ್ಯಧಾರಯತ್**—ಧರಿಸಿರುವನೋ । **ಸಃ**—ಅದೇ ವರುಣನು । **ಅನು ವ್ರತಾ**—ತನ್ನ ಕರ್ಮಗಳಿಗನುಗುಣವಾಗಿ । **ಪೂರ್ವ್ಯಂ ಧಾಮ**—ಅಂತರಿಕ್ಷರೂಪವಾದ ತನ್ನ ನಿವಾಸಸ್ಥಾನವನ್ನು । **ಮಮೇ**—ನಿರ್ಮಿಸಿದನು । **ಅನ್ಯಕೇ ಸಮೇ**—ನಮ್ಮ ಶತ್ರುಗಳೆಲ್ಲರೂ । **ನಭಂತಾಂ**—ನಾಶವಾಗಲಿ.

|| ಭಾವಾರ್ಥ ||

**ಯಾವ** ವರುಣನು ತನ್ನ ರಶ್ಮಿಗಳನ್ನು ಹಗಲಿನಲ್ಲಿ ಶ್ವೇತವರ್ಣವುಳ್ಳವನ್ನಾಗಿ ಆವಿಷ್ಕರಿಸುತ್ತಲೂ, ರಾತ್ರಿ ಕಾಲದಲ್ಲಿ ಕೃಷ್ಣವರ್ಣವುಳ್ಳವನ್ನಾಗಿ ಮಾಡುತ್ತಲೂ, ಇರುವನೋ ಮತ್ತು ಆದಿತ್ಯನು ದ್ಯುಲೋಕವನ್ನು ಧರಿಸಿರುವಂತೆ ಯಾರು ಅಂತರಿಕ್ಷರೂಪವಾದ ಸ್ತಂಭದಿಂದ ದ್ಯಾವಾಪೃಥಿವಿಗಳೆರಡನ್ನೂ ಧರಿಸಿರುವನೋ ಅದೇ ವರುಣನು ತನ್ನ ಕರ್ಮಗಳಿಗನುಗುಣವಾಗಿ ಅಂತರಿಕ್ಷರೂಪವಾದ ತನ್ನ ನಿವಾಸಸ್ಥಾನವನ್ನು ನಿರ್ಮಿಸಿದ್ದಾನೆ. ನಮ್ಮ ಶತ್ರುಗಳೆಲ್ಲರೂ ನಾಶವಾಗಲಿ.

## English Translation.

**He who in his successive functions emits his bright rays or turns them dark, first made his residence (in the firmament), and, as the unborn sun the sky, supports with the pillar (of the firmament) both heaven and earth ; may all our enemies perish.**



# ನಲವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಅಸ್ತಭ್ನಾದಿತಿ ಷಡೃಚಂ ದ್ವಾದಶಂ ಸೂಕ್ತಂ। ಅರ್ಚನಾನಾ ಋಷಿಃ ಕಾಣ್ವೋ ನಾಭಾಕೋ ವಾ ಋಷಿಃ। ಉತ್ತರೇ ತ್ವರ್ಚನಾನಾಃ। ಆದ್ಯಸ್ತ್ರ್ಯೃಚಸ್ತ್ರಿಷ್ಟುಭೋ ವರುಣದೇವತ್ಯೋ ದ್ವಿತೀಯಸ್ತ್ರ್ಯೃಚ ಅನುಷ್ಟುಭೋಽಶ್ವಿದೇವತಾಕಃ। ತಥಾ ಚಾನುಕ್ರಾಂತಂ। ಅಸ್ತಭ್ನಾತ್ ಷಳರ್ಚನಾನಾ ವಾ ತ್ರೈಷ್ಟುಭಮಂತ್ಯಂ ವಾ ತೃಚಮಾಶ್ವಿನಮಾನುಷ್ಟುಭಮಪಶ್ಯದಿತಿ॥ ಸೂಕ್ತವಿನಿಯೋಗೋ ಲೈಂಗಿಕಃ॥ ವಾರುಣೇ ಪಶೌ ಹವಿಷೋ ಯಾಜ್ಯಾಸ್ತಭ್ನಾದಿತಿ। ಸೂತ್ರಿತಂ ಚ। ಅಸ್ತಭ್ನಾದ್ದ್ಯಾಮಸುರೋ ವಿಶ್ವವೇದಾ ಇತ್ಯೈಕಾದಶಿನಾಃ। ಆ. ೩-೭। ಇತಿ॥ ಅಗ್ನೀಷೋಮಪ್ರಣಯನೇಽಪ್ಯೇಷೋತ್ತರಾ ಪರಿಧಾನೀಯಾ। ತಥಾ ಸೂತ್ರಿತಂ। ಅಸ್ತಭ್ನಾದ್ದ್ಯಾಮಸುರೋ ವಿಶ್ವವೇದಾ ಇತಿ ಪರಿದಧ್ಯಾದುತ್ತರಯಾ ವಾ। ಆ. ೪-೧೦। ಇತಿ॥ ಏವಾ ವಂದಸ್ವೇತ್ಯೇಷಾ ವಾರುಣೇ ಪಶೌ ಹವಿಷೋಽನುವಾಕ್ಯಾ। ಸೂತ್ರಿತಂ ಚ। ಏವಾ ವಂದಸ್ವ ವರುಣಂ ಬೃಹಂತಂ ತತ್ವಾ ಯಾಮಿ ಬ್ರಹ್ಮಣಾ ವಂದಮಾನ ಇತಿ ದ್ವೇ। ಆ. ೩-೭। ಸೋಮಪ್ರವಹಣ ಇಮಾಂ ಧಿಯಮಿತ್ಯೇಷಾ ಪರಿಧಾನೀಯಾ। ಸೂತ್ರಿತಂ ಚ। ಇಮಾಂ ಧಿಯಂ ಶಿಕ್ಷಮಾಣಸ್ಯ ದೇವೇತಿ ನಿಹಿತೇ ಪರಿದಧ್ಯಾತ್। ಆ. ೪-೪। ಇತಿ॥**

ಅನುವಾದವು— **ಅಸ್ತಭ್ನಾತ್** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಹನ್ನೆರಡನೆಯ **ಸೂಕ್ತವು.** ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅರ್ಚನಾನಾ ಎಂಬುವನು ಋಷಿಯು ಅಥವಾ ಕಣ್ವಗೋತ್ರಜನಾದ ನಾಭಾಕನೆಂಬುವನು ಋಷಿಯು; ಅಥವಾ ಮೊದಲಿನ ಮೂರು ಋಕ್ಕುಗಳಿಗೆ ನಾಭಾಕಃ ಕಾಣ್ವನೂ, **ಕೊನೆಯ** ಮೂರು ಋಕ್ಕುಗಳಿಗೆ **ನಾಭಾಕಃ ಕಾಣ್ವ ಅರ್ಚನಾನಾ ವಾ** ಋಷಿಯು ಎಂದೂ ಹೇಳಬಹುದು. **ಸೂಕ್ತದ** ಮೊದಲ ಮೂರು ಋಕ್ಕುಗಳಿಗೆ ವರುಣನು ದೇವತೆಯು; ತ್ರಿಷ್ಟುಪ್‌ಛಂದಸ್ಸು; ಕೊನೆಯ ಮೂರು **ಋಕ್ಕುಗಳಿಗೆ** ಅಶ್ವಿನೀದೇವತೆಗಳು ದೇವತೆಯು, ಅನುಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— **ಅಸ್ತಭ್ನಾತ್ ಷಳರ್ಚನಾನಾ ವಾ ತ್ರೈಷ್ಟುಭಮಂತ್ಯಂ ವಾ ತೃಚಮಾಶ್ವಿನಮಾನುಷ್ಟುಭಮಪಶ್ಯತ್** ಎಂದು ಹೇಳಿರುವುದು. **ಸೂಕ್ತ ವಿನಿಯೋಗವು ಲೈಂಗಿಕವು.** ವರುಣದೇವತೆಯನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಹವಿಸ್ಸನ್ನು **ಹೋಮ** ಮಾಡುವಾಗ **ಅಸ್ತಭ್ನಾತ್** ಎಂಬ ಈ ಸೂಕ್ತದ ಮೊದಲನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸ**ಬೇಕೆಂದು** ಆಶ್ವಲಾಯನಶ್ರೌತಸೂತ್ರದ— **ಅಸ್ತಭ್ನಾದ್ದ್ಯಾಮಸುರೋ ವಿಶ್ವವೇದಾ ಇತ್ಯೈಕಾದಶಿನಾಃ** ಎಂಬ **ಸೂತ್ರದಿಂದ** (ಆ. ೩-೭) ವಿವೃತವಾಗಿರುವುದು. ಅಗ್ನಿಷ್ಟೋಮಪ್ರಣಯನವೆಂಬ ಯಜ್ಞಾಂಗಕರ್ಮದಲ್ಲಿಯೂ ಈ **ಋಕ್ಕನ್ನು** ಅಥವಾ ಮುಂದಿನ ಋಕ್ಕನ್ನು ಪರಿಧಾನೀಯಾ ಎಂದರೆ ಕೊನೆಯ ಮಂತ್ರವನ್ನಾಗಿ ಪಠಿಸಬೇಕೆಂದು **ಆಶ್ವಲಾಯನ** ಶ್ರೌತಸೂತ್ರದ— **ಅಸ್ತಭ್ನಾದ್ದ್ಯಾಮಸುರೋ ವಿಶ್ವವೇದಾ ಇತಿ ಪರಿದಧ್ಯಾದುತ್ತರಯಾ ವಾ** ಎಂಬ **ಸೂತ್ರದಿಂದ** (ಆ. ೪-೧೦) ವಿವೃತವಾಗಿರುವುದು. ವರುಣದೇವತೆಯನ್ನುದ್ದೇಶಿಸಿ ಮಾಡುವ ಪಶುಯಾಗದ ಹವಿಸ್ಸಿನ **ಹೋಮದಲ್ಲಿ** **ಏವಾ ವಂದಸ್ವ** ಎಂಬ ಈ ಸೂಕ್ತದ ಎರಡನೆಯ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಏವಾ ವಂದಸ್ವ ವರುಣಂ ಬೃಹಂತಂ ತತ್ವಾ ಯಾಮಿ ಬ್ರಹ್ಮಣಾ ವಂದಮಾನಾ**

**ಇತಿ ವೈ** ಎಂಬ ಸೂತ್ರದಿಂದ (ಆ. ೩-೬) ವಿವೃತವಾಗಿರುವುದು  ಸೋಮಪ್ರವಹಣವೆಂಬ ಯಜ್ಞಾಂಗಕರ್ಮದಲ್ಲಿ **ಇಮಾಂ ಧಿಯಂ** ಎಂಬ ಈ ಸೂಕ್ತದ ಮೂರನೆಯ ಋಕ್ಕನ್ನು ಕೊನೆಯ ಮಂತ್ರವನ್ನಾಗಿ ಪಠಿಸಬೇಕೆಂದು **ಆಶ್ವಲಾಯನ**ಶ್ರೌತಸೂತ್ರದ— **ಇಮಾಂ ಧಿಯಂ ಶಿಕ್ಷಮಾಣಸ್ಯ ದೇವೇತಿ ನಿಹಿತೇ ಪರಿದಧ್ಯಾತ್** ಎಂಬ **ಸೂತ್ರದಿಂದ** (ಆ ೪-೪) ವಿವೃತವಾಗಿರುವುದು.

## ಸೂಕ್ತ—೪೨

ಮಂಡಲ—೮ ॥ ಅನುವಾಕ—೫ ॥ ಸೂಕ್ತ—೪೨ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೨೮ ॥
॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೬** ॥
॥ ಋಷಿಃ—೧-೬. ನಾಭಾಕಃ ಕಾಣ್ವ ಅರ್ಚನಾನಾ ವಾ । ಅಥವಾ ೧-೩ ನಾಭಾಕಃ ಕಾಣ್ವಃ । ೪-೬. ನಾಭಾಕಃ ಕಾಣ್ವಃ ಅರ್ಚನಾನಾ ವಾ ॥
॥ ದೇವತಾ—೧-೩. ವರುಣಃ । ೪-೬. ಅಶ್ವಿನೌ ॥
॥ ಛಂದಃ—೧-೩. ತ್ರಿಷ್ಟುಪ್ । ೪-೬. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಅಸ್ತಭ್ನಾದ್ದ್ಯಾಮಸುರೋ ವಿಶ್ವವೇದಾ ಅಮಿಮೀತ ವರಿಮಾಣಂ ಪೃಥಿವ್ಯಾಃ ।
ಆಸೀದದ್ವಿಶ್ವಾ ಭುವನಾನಿ ಸಮ್ರಾಡ್ವಿಶ್ವೇತ್ತಾನಿ ವರುಣಸ್ಯ ವ್ರತಾನಿ ॥ ೧ ॥

॥ ಪದಪಾಠಃ ॥

**ಅಸ್ತಭ್ನಾತ್** । ದ್ಯಾಂ । ಅಸುರಃ । ವಿಶ್ವಽವೇದಾಃ । ಅಮಿಮೀತ । ವರಿಮಾಣಂ । ಪೃಥಿವ್ಯಾಃ ।
ಆ । ಅಸೀದತ್ । ವಿಶ್ವಾ । ಭುವನಾನಿ । ಸಂಽರಾಟ್ । ವಿಶ್ವಾ । ಇತ್ । ತಾನಿ । ವರುಣಸ್ಯ । ವ್ರತಾನಿ ॥ ೧ ॥

॥ ಸಾಯಣಭಾಷ್ಯಂ ॥

**ವಿಶ್ವವೇದಾ ವಿಶ್ವಧನೋಽಸುರೋ ಬಲವಾನ್ವರುಣೋ ದ್ಯಾಮಸ್ತಭ್ನಾತ್ । ತಥಾ ಪೃಥಿವ್ಯಾಶ್ಚ ವರಿಮಾಣಂ ಪರಿಮಾಣಮಮಿಮೀತ । ಚಕ್ರೇ । ಏವಂ ನಿರ್ಮಿತಾನಿ ವಿಶ್ವಾ ಸರ್ವಾಣಿ ಭುವನಾನಿ ಸಮ್ರಾಡ್ಭೂತ್ವಾಸೀದತ್ । ಅಧ್ಯತಿಷ್ಠತ್ । ವರುಣಸ್ಯ ತಾನ್ಯೇತಾನಿ ವ್ರತಾನಿ ಕರ್ಮಾಣಿ ವಿಶ್ವೇದ್ವಿಶ್ವಾನ್ಯೇವ । ಅತೋ ವರ್ಣಯಿತುಮಶಕ್ಯಾನೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ವಿಶ್ವವೇದಾಃ**—ಸಮಸ್ತ ಧನಕ್ಕೂ ಅಧಿಪತಿಯೂ । **ಅಸುರಃ**—ಶಕ್ತಿಯುತನೂ ಆದ ವರುಣನು **ದ್ಯಾಂ**—ಅಂತರಿಕ್ಷವನ್ನು । **ಅಸ್ತಭ್ನಾತ್**—ಸ್ಥಿರವಾಗಿ ನಿಲ್ಲಿಸಿದ್ದಾನೆ । **ಪೃಥಿವ್ಯಾಃ**—ಪೃಥ್ವಿಯ । **ವರಿಮಾಣಂ**—ಪರಿಮಾಣವನ್ನು । **ಅಮಿಮೀತ**—ನಿರ್ಮಿಸಿದ್ದಾನೆ । **ಸಮ್ರಾಟ್**—ಸಾರ್ವಭೌಮನಾದ ವರುಣನು

**ವಿಶ್ವಾ**—ಸಮಸ್ತವಾದ । **ಭುವನಾನಿ**—ಲೋಕಗಳನ್ನೂ । **ಆಸೀದತ್**—ಆಕ್ರಮಿಸಿ ನಿಂತಿದ್ದಾನೆ । **ವಿಶ್ವೇತ್**—ಸಮಸ್ತವಾದ । **ತಾನಿ ವ್ರತಾನಿ**—ಪ್ರಸಿದ್ಧವಾದ ಕರ್ಮಗಳೆಲ್ಲವೂ । **ವರುಣಸ್ಯ**—ವರುಣನ ಮಹಿಮೆಯೇ ಆಗಿವೆ.

॥ ಭಾವಾರ್ಥ ॥

ಸಮಸ್ತ ಧನಕ್ಕೂ ಅಧಿಪತಿಯೂ, ಶಕ್ತಿಯುತನೂ ಆದ ವರುಣನು ಅಂತರಿಕ್ಷವನ್ನು ಸ್ಥಿರವಾಗಿ ನಿಲ್ಲಿಸಿದ್ದಾನೆ. ಪೃಥ್ವಿಯ ಪರಿಮಾಣವನ್ನು ನಿರ್ಮಿಸಿದ್ದಾನೆ. ಸಾರ್ವಭೌಮನಾದ ವರುಣನು ಸಮಸ್ತವಾದ ಲೋಕಗಳನ್ನೂ ಆಕ್ರಮಿಸಿ ನಿಂತಿದ್ದಾನೆ. ಪ್ರಸಿದ್ಧವಾದ ಸಮಸ್ತ ಕರ್ಮಗಳೂ ವರುಣನ ಮಹಿಮೆಯೇ ಆಗಿವೆ.

## English Translation.

The possessor of all wealth, the powerful Varuna has fixed the heaven , he has meted the measure of the earth ; he presides as supreme monarch over all worlds ; these all are the functions of Varuna.

॥ ಸಂಹಿತಾಪಾಠಃ ॥

ಏವಾ ವಂದಸ್ವ ವರುಣಂ ಬೃಹಂತಂ ನಮಸ್ಯಾ ಧೀರಮಮೃತಸ್ಯ ಗೋಪಾಂ।
ಸ ನಃ ಶರ್ಮ ತ್ರಿವರೂಥಂ ವಿ ಯಂಸತ್ಪಾತಂ ನೋ ದ್ಯಾವಾಪೃಥಿವೀ
ಉಪಸ್ಥೇ ॥ ೨ ॥

॥ ಪದಪಾಠಃ ॥

ಏವ । ವಂದಸ್ವ । ವರುಣಂ । ಬೃಹಂತಂ । ನಮಸ್ಯ । ಧೀರಂ । ಅಮೃತಸ್ಯ । ಗೋಪಾಂ ।
ಸಃ । ನಃ । ಶರ್ಮ । ತ್ರಿಽವರೂಥಂ । ವಿ । ಯಂಸತ್ । ಪಾತಂ । ನಃ । ದ್ಯಾವಾಪೃಥಿವೀ ಇತಿ ।
ಉಪಽಸ್ಥೇ ॥ ೨ ॥

। ಸಾಯಣಭಾಷ್ಯಂ ।

ಹೇ ಸ್ತೋತಃ ಬೃಹಂತಂ ಮಹಾಂತಂ ವರುಣಮೇವೈವಂ ವಂದಸ್ವ । ಸ್ತುಹಿ । ಅಮೃತಸ್ಯ ಗೋಪಾಂ ಗೋಪಯಿತಾರಂ ಧೀರಂ ಪ್ರಾಜ್ಞಂ ವರುಣಂ ನಮಸ್ಯ । ನಮಸ್ಕುರು ಚ । ಸ ವರುಣೋ ನೋಽಸ್ಮಭ್ಯಂ ತ್ರಿವರೂಥಂ ತ್ರಿಸ್ಥಾನಂ ಶರ್ಮ ಗೃಹಂ ವಿ ಯಂಸತ್। ಪ್ರಯಚ್ಛತು । ಉಪಸ್ಥೇ ಉಪಸ್ಥಾನೇ ವರ್ತಮಾನಾನ್ನೋಽಸ್ಮಾನ್ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಪಾತಂ । ರಕ್ಷತಂ ॥

॥ ಪ್ರತಿಪದಾರ್ಥ ॥

(ಎಲೈ ಸ್ತೋತೃವೇ) **ಬೃಹಂತಂ**—ಮಹಾತ್ಮನಾದ । **ವರುಣಂ ಏವ**—ವರುಣನನ್ನೇ । **ವಂದಸ್ವ**—ಸ್ತುತಿಸು । **ಅಮೃತಸ್ಯ**—ಅಮೃತಕ್ಕೆ । **ಗೋಪಾಂ**—ರಕ್ಷಕನಾದವನೂ । **ಧೀರಂ**—ಪ್ರಾಜ್ಞನೂ ಆದ ವರುಣನನ್ನೇ । **ನಮಸ್ಯ**—ನಮಸ್ಕರಿಸು । **ಸಃ**—ಅದೇ ವರುಣನು । **ನಃ**—ನಮಗೆ । **ತ್ರಿವರೂಥಂ**—ಮೂರು ಸ್ಥಾನದಲ್ಲಿರುವ ಮೂರು ವಿಧವಾದ ರಕ್ಷಣೆಯುಳ್ಳ । **ಶರ್ಮ**—ಗೃಹವನ್ನು । **ವಿ ಯಂಸತ್**—ಒದಗಿಸಿ ಕೊಡಲಿ । **ಉಪಸ್ಥೇ**—ಸಮೀಪದಲ್ಲಿಯೇ ಇರುವ । **ನಃ**—ನಮ್ಮನ್ನು । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳೆರಡೂ । **ಪಾತಂ**—ರಕ್ಷಿಸಲಿ.

॥ ಭಾವಾರ್ಥ ॥

ಎಲೈ ಸ್ತೋತೃವೇ, ಮಹಾತ್ಮನಾದ ವರುಣನನ್ನೇ ಸ್ತುತಿಸು. ಅಮೃತಕ್ಕೆ ರಕ್ಷಕನಾದವನೂ, ಪ್ರಾಜ್ಞನೂ ಆದ ವರುಣನನ್ನೇ ನಮಸ್ಕರಿಸು. ಅದೇ ವರುಣನು ನಮಗೆ ಮೂರು ವಿಧವಾದ ರಕ್ಷಣೆಯುಳ್ಳ ಗೃಹವನ್ನು ಒದಗಿಸಿ ಕೊಡಲಿ. ಸಮೀಪದಲ್ಲಿಯೇ ಇರುವ ನಮ್ಮನ್ನು ದ್ಯಾವಾಪೃಥಿವಿಗಳೆರಡೂ ರಕ್ಷಿಸಲಿ.

English Translation.

Glorify then the mighty Varuna : reverence the wise guardian of ambrosia ; may he bestow upon us a thrice sheltering habitation : may heaven and earth preserve us abiding in their proximity

॥ ಸಂಹಿತಾಪಾಠಃ ॥

ಇಮಾಂ ಧಿಯಂ ಶಿಕ್ಷಮಾಣಸ್ಯ ದೇವ ಕ್ರತುಂ ದಕ್ಷಂ ವರುಣ ಸಂ ಶಿಶಾಧಿ ।
ಯಯಾತಿ ವಿಶ್ವಾ ದುರಿತಾ ತರೇಮ ಸುತರ್ಮಾಣಮಧಿ ನಾವಂ ರುಹೇಮ ॥

॥ ಪದಪಾಠಃ ॥

ಇಮಾಂ । ಧಿಯಂ । ಶಿಕ್ಷಮಾಣಸ್ಯ । ದೇವ । ಕ್ರತುಂ । ದಕ್ಷಂ । ವರುಣ । ಸಂ । ಶಿಶಾಧಿ ।
ಯಯಾ । ಅತಿ । ವಿಶ್ವಾ । ದುಃऽಇತಾ । ತರೇಮ । ಸುऽತರ್ಮಾಣಂ । ಅಧಿ । ನಾವಂ । ರುಹೇಮ ॥ ೩ ॥

॥ ಸಾಯಣಭಾಷ್ಯಂ ॥

ಹೇ ದೇವ ದ್ಯೋತಮಾನ ವರುಣ ಇಮಾಂ ಧಿಯಮಿದಂ ಕರ್ಮ ಶಿಕ್ಷಮಾಣಸ್ಯಾನುತಿಷ್ಠತೋ ಮಮ ಕ್ರತುಂ ಪ್ರಜ್ಞಾನಂ ದಕ್ಷಂ ಚ ಸಂ ಶಿಶಾಧಿ । ತೀಕ್ಷ್ಣೀಕುರು । ಯಯಾ ನಾವಾ ಯಜ್ಞರೂಪಯಾ ವಿಶ್ವಾ ಸರ್ವಾಣಿ ದುರಿತಾ ದುರಿತಾನ್ಯತಿ ತರೇಮ ತಾಂ ಸುತರ್ಮಾಣಂ ಸುಷ್ಠು ತಾರಯಿತ್ರೀಂ ಯಜ್ಞರೂಪಾಂ ನಾವಮಧಿ ರುಹೇಮ । ವಯಮಾರುಹೇಮ । ದುಃಖಸಾಗರತರಣೇ ಹೇತುತ್ವಾದ್ಯಜ್ಞೋ ನೌರಿತ್ಯತ್ರ ವ್ಯಪದಿಶ್ಯತೇ ॥

॥ ಪ್ರತಿಪದಾರ್ಥ ॥

**ದೇವ**— ಪ್ರಕಾಶಮಾನನಾದ | **ವರುಣ**—ಎಲೈ ವರುಣನೇ | **ಇಮಾಂ ಧಿಯಂ**—ಈ ಕರ್ಮವನ್ನು | **ಶಿಕ್ಷಮಾಣಸ್ಯ**—ನೆರವೇರಿಸುತ್ತಿರುವ ನನ್ನ | **ಕ್ರತುಂ**--ಜ್ಞಾನವನ್ನೂ | **ದಕ್ಷಂ**—ಬಲವನ್ನೂ | **ಸಂ ಶಿಶಾಧಿ**—ಚೈತನ್ಯಯುಕ್ತನಾಗುವಂತೆ ಮಾಡು | **ಯಯಾ**—ಯಾವುದರಿಂದ | **ವಿಶ್ವಾ**—ಸಮಸ್ತವೂ | **ದುರಿತಾ**—ದುಃಖಕಾರಕವೂ ಆದ ಕ್ಲೇಶಗಳನ್ನೂ | **ಅತಿ ತರೇಮ**—ನಾವು ದಾಟಬಲ್ಲೆವೋ ಅಂತಹ | **ಸುತರ್ಮಾಣಂ**—ಸುರಕ್ಷಿತವಾಗಿ ದಡವನ್ನು ಸೇರಿಸತಕ್ಕ | **ನಾವಂ**—ಯಜ್ಞರೂಪವಾದ ಈ ನೌಕೆಯನ್ನು | **ಅಧಿ ರುಹೇಮ**—ಹತ್ತುವಂತೆ (ನೆರವೇರಿಸುವಂತೆ) ಸಹಾಯಮಾಡು.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ವರುಣನೇ, ಈ ಯಜ್ಞಕರ್ಮವನ್ನು ನೆರವೇರಿಸುತ್ತಿರುವ ನನ್ನ ಜ್ಞಾನವನ್ನೂ, ಬಲವನ್ನೂ ಚೈತನ್ಯಯುಕ್ತವಾಗುವಂತೆ ಮಾಡು. ಯಾವುದರಿಂದ ದುಃಖಕಾರಕವಾದ ಸಮಸ್ತ ಕ್ಲೇಶಗಳನ್ನೂ ನಾವು ದಾಟಬಲ್ಲೆವೋ ಅಂತಹ ಸುರಕ್ಷಿತವಾಗಿ ದಡವನ್ನು ಸೇರಿಸತಕ್ಕ ಯಜ್ಞರೂಪವಾದ ಈ ನೌಕೆಯನ್ನು ಹತ್ತುವಂತೆ (ನಿರ್ವಹಿಸುವಂತೆ) ಸಹಾಯಮಾಡು.

English Translation.

Divine Varuna, animate the sacred acts of me engaging in this your worship : may we ascend the safebearing vessel by which we may cross over all difficulties.

॥ ಸಂಹಿತಾಪಾಠಃ ॥

ಆ ವಾಂ ಗ್ರಾವಾಣೋ ಅಶ್ವಿನಾ ಧೀಭಿರ್ವಿಪ್ರಾ ಅಚುಚ್ಯವುಃ ।
ನಾಸತ್ಯಾ ಸೋಮಪೀತಯೇ ನಭಂತಾಮನ್ಯಕೇ ಸಮೇ ॥ ೪ ॥

॥ ಪದಪಾಠಃ ॥

ಆ । ವಾಂ । ಗ್ರಾವಾಣಃ । ಅಶ್ವಿನಾ । ಧೀಭಿಃ । ವಿಪ್ರಾಃ । ಅಚುಚ್ಯವುಃ ।
ನಾಸತ್ಯಾ । ಸೋಮऽಪೀತಯೇ । ನಭಂತಾಂ । ಅನ್ಯಕೇ । ಸಮೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ನಾಸತ್ಯಾ ಸತ್ಯೌ ಸತ್ಯಸ್ಯ ಪ್ರಣೇತಾರೌ ವಾ । ತಥಾ ಚ ಯಾಸ್ಕಃ । ಸತ್ಯಾವೇವ ನಾಸತ್ಯಾವಿತ್ಯೌರ್ಣವಾಭಃ ಸತ್ಯಸ್ಯ ಪ್ರಣೇತಾರೌ । ನಿ. ೬-೧೩ । ಇತಿ । ಅಶ್ವಿನಾಶ್ವಿನೌ ವಾಂ ಯುವಾಂ ಸೋಮಪೀತಯೇ ಸೋಮಸ್ಯ ಪಾನಾಯ ವಿಪ್ರಾಃ ಪ್ರಾಜ್ಞಾ ಋತ್ವಿಜೋ ಗ್ರಾವಾಣಃ ಸೋಮಾಭಿಷವಪಾಷಾಣಾಶ್ಚ ಧೀಭಿಃ ಕರ್ಮಭಿಃ ಸ್ವಸ್ವವ್ಯಾಪಾರೈರಚುಚ್ಯವುಃ । ಅಭಿಗಚ್ಛಂತಿ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ನಾಸತ್ಯಾ**—ಸತ್ಯಪ್ರೇರಕರಾದ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ವಾಂ**—ನಿಮ್ಮ | **ಸೋಮಪೀತಯೇ**—ಸೋಮಪಾನಾರ್ಥವಾಗಿ | **ವಿಪ್ರಾಃ**—ಪ್ರಾಜ್ಞರಾದ ಋತ್ವಿಕ್ಕುಗಳೂ | **ಗ್ರಾವಾಣಃ**—ಹಿಂಡುವ ಕಲ್ಲುಗಳೂ | **ಧೀಭಿಃ**—ತಮ್ಮ ತಮ್ಮ ನಿಯತವಾದ ಕರ್ಮಗಳೊಡನೆ | **ಆ ಅಚುಚ್ಯವು**—ಸೇರಿಕೊಳ್ಳುತ್ತಾರೆ (ನಿರತರಾಗುತ್ತಾರೆ) | **ಅನ್ಯಕೇ ಸಮೇ**—ನಮ್ಮ ಶತ್ರುಗಳೆಲ್ಲರೂ | **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಸತ್ಯಪ್ರೇರಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮ ಸೋಮಪಾನಾರ್ಥವಾಗಿ ಪ್ರಾಜ್ಞರಾದ ಋತ್ವಿಕ್ಕುಗಳೂ, ಹಿಂಡುವ ಕಲ್ಲುಗಳೂ ಸಹ ತಮ್ಮ ತಮ್ಮ ನಿಯತವಾದ ಕರ್ಮಗಳಲ್ಲಿ ನಿರತರಾಗುತ್ತಾರೆ. ನಮ್ಮ ಶತ್ರುಗಳೆಲ್ಲರೂ ನಾಶವಾಗಲಿ.

English Translation.

The sacred stones, Aswins, the pious worshippers, Nasatyas, have fallen upon their sacred functions, (to induce you) to drink the Soma : may all our enemies perish.

॥ ಸಂಹಿತಾಪಾಠಃ ॥

ಯಥಾ ವಾಮತ್ರಿರಶ್ವಿನಾ ಗೀರ್ಭಿರ್ವಿಪ್ರೋ ಅಜೋಹವೀತ್ ।
ನಾಸತ್ಯಾ ಸೋಮಪೀತಯೇ ನಭಂತಾಮನ್ಯಕೇ ಸಮೇ ॥ ೫ ॥

॥ ಪದಪಾಠಃ ॥

ಯಥಾ । ವಾಂ । ಅತ್ರಿಃ । ಅಶ್ವಿನಾ । ಗೀಃऽಭಿಃ । ವಿಪ್ರಃ । ಅಜೋಹವೀತ್ ।
ನಾಸತ್ಯಾ । ಸೋಮऽಪೀತಯೇ । ನಭಂತಾಂ । ಅನ್ಯಕೇ । ಸಮೇ ॥ ೫ ॥

॥ ಸಾಯಣಭಾಷ್ಯಂ ॥

**ಹೇ ನಾಸತ್ಯಾವಶ್ವಿನೌ ವಾಂ ಯುವಾಂ ವಿಪ್ರಃ ಪ್ರಾಜ್ಞೋऽತ್ರಿರ್ಯಥಾ ಗೀರ್ಭಿಃ ಸ್ತುತಿಭಿಃ ಸೋಮಪೀತಯೇऽಜೋಹವೀತ್ ತಥಾಹಮಪಿ ಜೋಹವೀಮಿ ॥**

॥ ಪ್ರತಿಪದಾರ್ಥ ॥

**ನಾಸತ್ಯಾ**—ಸತ್ಯಸ್ವರೂಪರಾದ | **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ | **ವಿಪ್ರಃ**—ಪ್ರಾಜ್ಞನಾದ | **ಅತ್ರಿಃ**—ಅತ್ರಿಋಷಿಯು | **ವಾಂ**—ನಿಮ್ಮನ್ನು | **ಸೋಮಪೀತಯೇ**—ಸೋಮಪಾನಾರ್ಥವಾಗಿ | **ಯಥಾ**—

ಯಾವ ರೀತಿ | **ಗೀರ್ಭಿಃ**—ಸ್ತುತಿಗಳಿಂದ | **ಅಜೋಹವೀತ್**— ಪ್ರಾರ್ಥಿಸಿ ಕರೆದನೋ (ಅದೇ ರೀತಿ ನಾನೂ ಕರೆಯುತ್ತೇನೆ) | **ಅನ್ಯಕೇ ಸಮೇ**—ನಮ್ಮ ಶತ್ರುಗಳೆಲ್ಲರೂ | **ನಭಂತಾಂ**—ನಾಶವಾಗಲಿ.

॥ ಭಾವಾರ್ಥ ॥

ಸತ್ಯಸ್ವರೂಪನಾದ ಎಲೈ ಅಶ್ವಿನೀದೇವತೆಗಳೇ, ಪ್ರಾಜ್ಞನಾದ ಅತ್ರಿಋಷಿಯು ನಿಮ್ಮನ್ನು ಸೋಮಪಾನಾರ್ಥವಾಗಿ ಯಾವರೀತಿ ಸ್ತುತಿಗಳಿಂದ ಪ್ರಾರ್ಥಿಸಿ ಕರೆದನೋ, ಅದೇ ರೀತಿ ನಾನೂ ಕರೆಯುತ್ತೇನೆ. ನಮ್ಮ ಶತ್ರುಗಳೆಲ್ಲರೂ ನಾಶವಾಗಲಿ.

English Translation.

In like manner as the pious Atri Aswins, invoked you with hymns, so (I invoke you), Nasatyas, to drink the Soma: may all our enemies perish.

॥ ಸಂಹಿತಾಪಾಠಃ ॥

ಏವಾ ವಾಮಹ್ವ ಊತಯೇ ಯಥಾಹುವಂತ ಮೇಧಿರಾಃ ।
ನಾಸತ್ಯಾ ಸೋಮಪೀತಯೇ ನಭಂತಾಮನ್ಯಕೇ ಸಮೇ ॥ ೬ ॥

॥ ಪದಪಾಠಃ ॥

**ಏವ । ವಾಂ । ಅಹ್ವೇ । ಊತಯೇ । ಯಥಾ । ಅಹುವಂತ । ಮೇಧಿರಾಃ ।**
**ನಾಸತ್ಯಾ । ಸೋಮಽಪೀತಯೇ । ನಭಂತಾಂ । ಅನ್ಯಕೇ । ಸಮೇ ॥ ೬ ॥**

॥ ಸಾಯಣಭಾಷ್ಯಂ ॥

**(ಇಯಂ ವ್ಯಾಖ್ಯಾತಚರಾ ॥) ಹೇ ನಾಸತ್ಯಾ ವಾಂ ಯುವಾಂ ಯಥಾ ಮೇಧಿರಾಃ ಪ್ರಾಜ್ಞಾ ಅಹುವಂತ ಆಹೂತವಂತಃ ಏವಮಹಮಪ್ಯೂತಯೇ ರಕ್ಷಣಾಯ ಸೋಮಸ್ಯ ಪೀತಯೇ ಚಾಹ್ವೇ । ಹ್ವಯಾಮಿ ।**

॥ ಪ್ರತಿಪದಾರ್ಥ ॥

**ನಾಸತ್ಯಾ**—ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ | **ಯಥಾ**—ಯಾವ ರೀತಿ | **ಮೇಧಿರಾಃ**—ಪ್ರಾಜ್ಞರಾದ ಋಷಿಗಳು | **ವಾಂ**—ನಿಮ್ಮನ್ನು | **ಊತಯೇ**—ರಕ್ಷಣಾರ್ಥವಾಗಿ | **ಅಹುವಂತ**—ಕರೆದರೋ | **ಏವ**—ಅದೇ ರೀತಿಯಲ್ಲಿ | **(ಅಹಂ**—ನಾನು) | **ಸೋಮಪೀತಯೇ**—ನಿಮ್ಮ ಸೋಮಪಾನಾರ್ಥವಾಗಿ | **(ವಾಂ**—ನಿಮ್ಮನ್ನು) | **ಅಹ್ವೇ**—ಕರೆಯುತ್ತೇನೆ | **ಅನ್ಯಕೇ ಸಮೇ**—ನಮ್ಮ ಶತ್ರುಗಳೆಲ್ಲರೂ | **ನಭಂತಾಂ**—ನಾಶವಾಗಲಿ.

|| ಭಾವಾರ್ಥ ||

ಸತ್ಯಸ್ವರೂಪರಾದ ಎಲೈ ಅಶ್ವಿನೀದೇವತೆಗಳೇ, ಯಾವ ರೀತಿ ಪ್ರಾಜ್ಞರಾದ ಋಷಿಗಳು ನಿಮ್ಮನ್ನು ರಕ್ಷಣಾರ್ಥವಾಗಿ ಕರೆದರೋ, ಅದೇ ರೀತಿ ನಾನೂ ಸಹ ಸೋಮಪಾನಾರ್ಥವಾಗಿ ನಿಮ್ಮನ್ನು ಕರೆಯುತ್ತೇನೆ. ನಮ್ಮ ಶತ್ರುಗಳೆಲ್ಲರೂ ನಾಶವಾಗಲಿ.

English Translation.

In like manner as the wise invoke you for protection, so do I invoke you, Nasatyas, to drink the Soma : may all our enemies perish.



# ನಲವತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

ಷಷ್ಠೇಽನುವಾಕೇ ಷಟ್ ಸೂಕ್ತಾನಿ । ತತ್ರೇಮೇ ವಿಪ್ರಸ್ಯೇತಿ ತ್ರಯಸ್ತ್ರಿಂಶದೃಚಂ ಪ್ರಥಮಂ ಸೂಕ್ತಮಾಂಗಿರಸಸ್ಯ ವಿರೂಪಸ್ಯಾರ್ಷಂ ಗಾಯತ್ರಮಗ್ನಿದೇವತಾಕಂ । ತಥಾ ಚಾನುಕ್ರಾಂತಂ । ಇಮೇ ತ್ರಯಸ್ತ್ರಿಂಶದ್ವಿರೂಪ ಆಂಗಿರಸ ಆಗ್ನೇಯಂ ತ್ವಿತಿ ॥ ಪ್ರಾತರನುವಾಕ ಆಗ್ನೇಯೇ ಕ್ರತೌ ಗಾಯತ್ರೇ ಛಂದಸ್ಯಾಶ್ವಿನಶಸ್ತ್ರೇ ಚೈತದಾದಿಕೇ ದ್ವೇ ಸೂಕ್ತೇ ॥ ಸೂತ್ರಿತಂ ಚ । ಇಮೇ ವಿಪ್ರಸ್ಯೇತಿ ಸೂಕ್ತೇ । ಆ. ೪-೧೩ । ಇತಿ ॥ ಕಾರೀರ್ಯವಭೃಥೇಷ್ಟ್ಯೋಃ ಪ್ರಥಮಾಜ್ಯಭಾಗಸ್ಯಾಪ್ಸ್ವಗ್ನ ಇತ್ಯನುವಾಕ್ಯಾ । ತಥಾ ಸೂತ್ರಿತಂ । ಅಪ್ಸುಮಂತಾವಾಜ್ಯಭಾಗಾವಪ್ಸ್ವಗ್ನೇ ಸಧಿಷ್ಟವ । ಆ. ೨-೧೩ । ಇತಿ ॥ ಅಗ್ನೀಧ್ರಸ್ಯ ಪಾತಃಸವನೇ ಪ್ರಸ್ಥಿತಯಾಜ್ಯಾ । ಶ್ರೂಯತೇ ಚ । ಉಕ್ಷಾನ್ನಾಯ ವಶಾನ್ನಾಯೇತ್ಯಾಗ್ನೀಧ್ರೋ ಯಜತಿ । ಐ. ಬ್ರಾ. ೬-೧೦ । ಇತಿ ॥ ಅಗ್ನಿವತೀಷ್ಟೌ ತ್ವಂ ಹ್ಯಗ್ನ ಇತ್ಯೇಷಾ ಯಾಜ್ಯಾ । ಸೂತ್ರಿತಂ ಚ । ತ್ವಂ ಹ್ಯಗ್ನೇ ಅಗ್ನಿನಾಗ್ನೇ ತ್ವಮಸ್ಮದ್ಯುಯೋಧ್ಯಮೀವಾಃ । ಆ. ೩-೧೩ । ಇತಿ ॥ ಅಗ್ನಿಮಂಥನೇಽಪ್ಯೇಷಾ । ಸೂತ್ರಿತಂ ಚ । ತ್ವಂ ಹ್ಯಗ್ನೇ ಅಗ್ನಿನಾ ತಂ ಮರ್ಜಯಂತ ಸುಕ್ರತುಂ । ಆ. ೨-೧೬ । ಇತಿ ॥ ಅಗ್ನಯೇ ಕಾಮಾಯೇಷ್ಟ್ಯಾಕಪಾಲೇಷ್ಟೌ ತುಭ್ಯಂ ತಾ ಅಂಗಿರಸ್ತಮೇತ್ಯೇಷಾನುವಾಕ್ಯಾ । ಸೂತ್ರಿತಂ ಚ । ತುಭ್ಯಂ ತಾ ಅಂಗಿರಸ್ತಮಾಶ್ಯಾಮ ತಂ ಕಾಮಮಗ್ನೇ ತವೋತೀತಿ ಕಾಮಾಯ । ಆ. ೨-೧೦ । ಇತಿ ॥ ಅನ್ವಾಹಿತಾಗ್ನೇಃ ಪ್ರಯಾಣೇ ಸಮಾರೋಪಣಪಕ್ಷೇಽನಯೈಕಾಹುತಿಃ ಕರ್ತವ್ಯಾ । ತಥಾ ಸೂತ್ರಿತಂ । ತುಭ್ಯಂ ತಾ ಅಂಗಿರಸ್ತಮೇತಿ ವಾಜ್ಯಾಹುತಿಂ ಹುತ್ವಾ ಸಮಾರೋಪಯೇತ್ । ಆ. ೩-೧೦ । ಇತಿ ॥ ವೈದ್ಯುತಾಗ್ನಿನಾಗ್ನೀನಾಂ ಸಂಸರ್ಗೇಽಗ್ನಯೇಽಪ್ಸುಮತೀಷ್ಟಿಃ । ತತ್ರ ಯದಗ್ನೇ ದಿವಿಜಾ ಇತಿ ಯಾಜ್ಯಾ । ಯದಗ್ನೇ ದಿವಿಜಾ ಅಸ್ಯಗ್ನಿರ್ಹೋತಾ ನ್ಯಸೀದದ್ಯಜೀಯಾನ್ । ಆ ೩-೧೩ । ಇತಿ ॥

ಎಂಟನೆಯ ಮಂಡಲದ ಆರನೆಯ ಅನುವಾಕದಲ್ಲಿ ಆರು ಸೂಕ್ತಗಳಿರುವವು. ಅವುಗಳಲ್ಲಿ ಇಮೇ ವಿಪ್ರಸ್ಯ ಎಂಬ ಸೂಕ್ತವು ಮೊದಲನೆಯದು. ಇದರಲ್ಲಿ ಮೂವತ್ತಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿರೂಪ

**ಆಂಗಿರಸಃ** ಎಂಬುವನು ಋಷಿಯು; ಅಗ್ನಿಯು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಇಮೇ ತ್ರಯಸ್ತ್ರಿಂಶದ್ವಿರೂಪ ಆಂಗಿರಸ ಆಗ್ನೇಯಂ ತು** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತ ಮತ್ತು ಇದರ ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಇಮೇ ವಿಪ್ರಸ್ಯೇತಿ ಸೂಕ್ತೇ** ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು. ಕಾರೀರಿ ಮತ್ತು ಅವಭೃಥೇಷ್ಟಿಗಳಲ್ಲಿ ಪ್ರಥಮಾಜ್ಯಭಾಗಕ್ಕಾಗಿ **ಅಪ್ಸ್ವಗ್ನೇ** ಎಂಬ ಈ ಸೂಕ್ತದ ಒಂಭತ್ತನೆಯ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಪ್ಸುಮಂತಾವಾಜ್ಯಭಾಗಾವಪ್ಸ್ವಗ್ನೇ ಸಧಿಷ್ಟವ** ಎಂಬ ಸೂತ್ರದಿಂದ (ಆ. ೨-೧೩) ವಿವೃತವಾಗಿರುವುದು. ಮತ್ತು ಆಗ್ನೀಧ್ರನೆಂಬ ಋತ್ವಿಜನು ಈ ಋಕ್ಕನ್ನು ಪ್ರಾತಸ್ಸವನಕಾಲದಲ್ಲಿ ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಐತರೇಯಬ್ರಾಹ್ಮಣದ-**ಉಕ್ಷಾನ್ನಾಯ ವಶಾನ್ನಾಯೇತ್ಯಾಗ್ನೀಧ್ರೋ ಯಜತಿ** ಎಂಬ ವಾಕ್ಯದಿಂದ (ಐ. ಬ್ರಾ. ೬-೧೦) ನಿರ್ದಿಷ್ಟವಾಗಿರುವುದು. ಅಗ್ನಿವತೀಷ್ಟಿಯಲ್ಲಿ **ತ್ವಂ ಹ್ಯಗ್ನೇ** ಎಂಬ ಈ ಸೂಕ್ತದ ಹದಿನಾಲ್ಕನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ವಂ ಹ್ಯಗ್ನೇ ಅಗ್ನಿನಾಗ್ನೇ ತ್ವಮಸ್ಮದ್ಯುಯೋಧ್ಯಮೀವಾಃ** ಎಂಬ ಸೂತ್ರದಿಂದ (ಆ. ೩-೧೩) ವಿವೃತವಾಗಿರುವುದು. ಅಗ್ನಿಮಂಥನವೆಂಬ ಯಜ್ಞಾಂಗಕರ್ಮದಲ್ಲಿಯೂ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ವಂ ಹ್ಯಗ್ನೇ ಅಗ್ನಿನಾ ತಂ ಮರ್ಜಯಂತ ಸುಕ್ರತುಂ** ಎಂಬ ಸೂತ್ರದಿಂದ (ಆ. ೨-೧೬) ವಿವೃತವಾಗಿರುವುದು. **ಅಗ್ನಯೇ ಕಾಮಾಯ** ಎಂದು ಅಗ್ನಿಯನ್ನುದ್ದೇಶಿಸಿ ಮಾಡುವ ಅಷ್ಟಾಕಪಾಲೇಷ್ಟಿಯಲ್ಲಿ **ತುಭ್ಯಂ ತಾ ಅಂಗಿರಸ್ತಮ** ಎಂಬ ಈ ಸೂಕ್ತದ ಹದಿನೆಂಟನೆಯ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತುಭ್ಯಂ ತಾ ಅಂಗಿರಸ್ತಮಾಶ್ಯಾಮ ತಂ ಕಾಮಮಗ್ನೇ ತವೋತೀತಿ ಕಾಮಾಯ** ಎಂಬ ಸೂತ್ರದಿಂದ (ಆ. ೨-೧೦) ವಿವೃತವಾಗಿರುವುದು. ಅನ್ವಾಹಿತಾಗ್ನಿಯು ಎಂದರೆ ಅಗ್ನಿಹೋತ್ರಾಗ್ನಿಯನ್ನಿಟ್ಟಿರುವವನು ಪ್ರಯಾಣಮಾಡುವ ಸಂದರ್ಭದಲ್ಲಿ ಸಮಾರೋಪಣಮಾಡುವಾಗ ಈ ಋಕ್ಕಿನಿಂದ ಆಹುತಿಯನ್ನರ್ಪಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತುಭ್ಯಂ ತಾ ಅಂಗಿರಸ್ತಮೇತಿ ವಾಜ್ಯಾಹುತಿಂ ಹುತ್ವಾ ಸಮಾರೋಪಯೇತ್** ಎಂಬ ಸೂತ್ರದಿಂದ (ಆ. ೩-೧೦) ವಿವೃತವಾಗಿರುವುದು. ವೈದ್ಯುತಾಗ್ನಿಯೊಡನೆ ಇತರ ಅಗ್ನಿಗಳ ಸಂಸರ್ಗವಾದಲ್ಲಿ **ಅಗ್ನಯೇಽಪ್ಸುಮತೀಷ್ಟಿ** ಎಂಬ ಇಷ್ಟಿಯನ್ನು ಮಾಡಬೇಕು. ಆ ಇಷ್ಟಿಯಲ್ಲಿ **ಯದಗ್ನೇ ದಿವಿಜಾಃ** ಎಂಬ ಈ ಸೂಕ್ತದ ಇಪ್ಪತ್ತೆಂಟನೆಯ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯದಗ್ನೇ ದಿವಿಜಾ ಅಸ್ಯಗ್ನಿರ್ಹೋತಾ ನ್ಯಸೀದದ್ಯಜೀಯಾನ್** ಎಂಬ ಸೂತ್ರದಿಂದ (ಆ. ೩-೧೩) ವಿವೃತವಾಗಿರುವುದು.

## ಸೂಕ್ತ—೪೩

ಮಂಡಲ—೮ ‖ ಅನುವಾಕ—೬ ‖ **ಸೂಕ್ತ—೪೩** ‖

ಅಷ್ಟಕ—೬ ‖ ಅಧ್ಯಾಯ—೩ ‖ ವರ್ಗ—೨೯, ೩೦, ೩೧, ೩೨, ೩೩, ೩೪, ೩೫ ‖

‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೩ ‖

‖ ಋಷಿಃ—ವಿರೂಪ ಆಂಗಿರಸಃ ‖

‖ ದೇವತಾ—ಅಗ್ನಿಃ ‖

‖ ಛಂದಃ—ಗಾಯತ್ರೀ ‖

॥ ಸಂಹಿತಾಪಾಠಃ ॥

ಇಮೋ ವಿಪ್ರಸ್ಯ ವೇಧಸೋಽಗ್ನೇರಸ್ತೃತಯಜ್ವನಃ ।

ಗಿರಃ ಸ್ತೋಮಾಸ ಈರತೇ ॥ ೧ ॥

॥ ಪದಪಾಠಃ ॥

ಇಮೇ । ವಿಪ್ರಸ್ಯ । ವೇಧಸಃ । ಅಗ್ನೇಃ । ಅಸ್ತೃತಽಯಜ್ವನಃ ।

ಗಿರಃ । ಸ್ತೋಮಾಸಃ । ಈರತೇ ॥ ೧ ॥

॥ ಸಾಯಣಭಾಷ್ಯಂ ॥

ಇಮೇಽಸ್ಮದೀಯಾಃ ಸ್ತೋಮಾಸಃ ಸ್ತೋತಾರೋ ವಿಪ್ರಸ್ಯ ಮೇಧಾವಿನೋ ವೇಧಸೋ ವಿಧಾತುರಸ್ತೃತಯಜ್ವನೋಽಹಿಂಸಿತಯಜಮಾನಸ್ಯಾಗ್ನೇರ್ಗಿರಃ ಸ್ತುತೀರೀರತೇ । ಪ್ರೇರಯಂತಿ ॥

॥ ಪ್ರತಿಪದಾರ್ಥ ॥

ಇಮೇ—ನಮ್ಮ ಸಂಬಂಧಿಗಳಾದ । ಸ್ತೋಮಾಸಃ—ಸ್ತುತಿಕರ್ತರು । ವಿಪ್ರಸ್ಯ—ಮೇಧಾವಿಯಾದವನೂ । ವೇಧಸಃ—ಸೃಷ್ಟಿಕರ್ತನೂ । ಅಸ್ತೃತಯಜ್ವನಃ—ಅಹಿಂಸಿತನಾದ ಯಜಮಾನನೂ ಆದ । ಅಗ್ನೇಃ—ಅಗ್ನಿಯನ್ನುದ್ದೇಶಿಸಿದ । ಗಿರಃ—ಸ್ತುತಿಪಾಠಗಳನ್ನು । ಈರತೇ—ಪಠಿಸುತ್ತಾರೆ.

॥ ಭಾವಾರ್ಥ ॥

ನಮ್ಮ ಸಂಬಂಧಿಗಳಾದ ಸ್ತುತಿಕರ್ತರು ಮೇಧಾವಿಯೂ, ಸೃಷ್ಟಿಕರ್ತನೂ, ಅಹಿಂಸಿತನಾದ ಯಜಮಾನನೂ ಆದ ಅಗ್ನಿಯನ್ನುದ್ದೇಶಿಸಿದ ಸ್ತುತಿಗಳನ್ನು ಪಠಿಸುತ್ತಾರೆ.

English Translation.

These repeaters of laudations recite the praises of the wise creative Agni, the uninterrupted sacrificer.

॥ ಸಂಹಿತಾಪಾಠಃ ॥

ಅಸ್ಮೈ ತೇ ಪ್ರತಿಹರ್ಯತೇ ಜಾತವೇದೋ ವಿಚರ್ಷಣೇ ।

ಅಗ್ನೇ ಜನಾಮಿ ಸುಷ್ಟುತಿಂ ॥ ೨ ॥

॥ ಪದಪಾಠಃ ॥

ಅಸ್ಮೈ । ತೇ । ಪ್ರತಿऽಹರ್ಯತೇ । ಜಾತऽವೇದಃ । ವಿऽಚರ್ಷಣೇ ।

ಅಗ್ನೇ । ಜನಾಮಿ । ಸುऽಸ್ತುತಿಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಜಾತವೇದೋ ಜಾತಧನ ವಿಚರ್ಷಣೇ ವಿದ್ರಷ್ಟರಗ್ನೇ ಅಸ್ಮೈ ಪ್ರತಿಹರ್ಯತೇ ಪ್ರಯಚ್ಛತೇ ತೇ ತುಭ್ಯಂ ಸುಷ್ಟುತಿಂ ಶೋಭನಾಂ ಸ್ತುತಿಂ ಜನಾಮಿ । ಅಂಗಿರಸೋಽಹಂ ಜನಯಾಮಿ ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜಾತವೇದೋರೂಪನೂ । **ವಿಚರ್ಷಣೇ**—ಸೂಕ್ಷ್ಮವಾದ ದೃಷ್ಟಿಯುಳ್ಳವನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಅಸ್ಮೈ**—ಯಜಮಾನನಾದ ನನಗೆ । **ಪ್ರತಿಹರ್ಯತೇ**—ಉತ್ತಮವಾದ ದಾನವನ್ನು ಕೊಡುವ । **ತೇ**—ನಿನ್ನನ್ನುದ್ದೇಶಿಸಿ । **ಸುಷ್ಟುತಿಂ**—ಉತ್ತಮವಾದ ಸ್ತುತಿಯನ್ನು । **ಜನಾಮಿ**—ನಿರ್ಮಿಸುತ್ತೇನೆ.

॥ ಭಾವಾರ್ಥ ॥

ಜಾತವೇದೋರೂಪನೂ, ಸೂಕ್ಷ್ಮವಾದ ದೃಷ್ಟಿಯುಳ್ಳವನೂ ಆದ ಎಲೈ ಅಗ್ನಿಯೇ, ಯಜಮಾನನಾದ ನನಗೆ ಉತ್ತಮವಾದ ದಾನವನ್ನು ಕೊಡುವ ನಿನ್ನನ್ನುದ್ದೇಶಿಸಿ ಉತ್ತಮವಾದ ಸ್ತುತಿಯನ್ನು ನಿರ್ಮಿಸುತ್ತೇನೆ.

## English Translation.

Agni, Jatavedas, to you, the liberal offerer (of the oblation), the all-beholding, I repeat earnest praise.

॥ ಸಂಹಿತಾಪಾಠಃ ॥

ಆರೋಕಾ ಇವ ಘೇದಹ ತಿಗ್ಮಾ ಅಗ್ನೇ ತವ ತ್ವಿಷಃ ।

ದದ್ಭಿರ್ವನಾನಿ ಬಪ್ಸತಿ ॥ ೩ ॥

॥ ಪದಪಾಠಃ ॥

ಆರೋಕಾಃऽಇವ । ಘ । ಇತ್ । ಅಹ । ತಿಗ್ಮಾಃ । ಅಗ್ನೇ । ತವ । ತ್ವಿಷಃ ।

ದತ್ऽಭಿಃ । ವನಾನಿ । ಬಪ್ಸತಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತವ ತಿಗ್ಮಾಸ್ತೀಕ್ಷ್ಣಾಸ್ತ್ವಿಷೋ ದೀಪ್ತಯ ಆರೋಕಾ ಇವಾರೋಚಮಾನಾಃ ಪಶವ ಇವ ದದ್ಭಿರ್ದಂತೈರ್ವನಾನ್ಯರಣ್ಯಾನಿ ಬಪ್ಸಂತಿ । ಭಕ್ಷಯಂತಿ । ಘೇದಹೇತಿ ತ್ರಯಂ ಪೂರಕಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ। **ಅರೋಕಾ ಇವ**—ಕ್ರೂರವಾದ ವನ್ಯಪಶುಗಳು। **ದದ್ಭಿಃ**—ತಮ್ಮ ದಂತಗಳಿಂದ। **ವನಾನಿ**—ಸಸ್ಯಗಳನ್ನು ಕಬಳಿಸುವಂತೆ। **ತವ**–ನಿನ್ನ। **ತಿಗ್ಮಾಃ**—ತೀಕ್ಷ್ಣವಾದ। **ತ್ವಿಷಃ**—ಜ್ವಾಲೆಗಳು। **ಬಪ್ಸತಿ**—ಸಕಲವನ್ನೂ ಭಕ್ಷಿಸುತ್ತವೆ। **ಘೋದಹ**—ಇದು ಖಂಡಿತ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಕ್ರೂರವಾದ ವನ್ಯಪಶುಗಳು ತಮ್ಮ ದಂತಗಳಿಂದ ತೃಣಾದಿ ಸಸ್ಯಗಳನ್ನೆಲ್ಲಾ ಭಕ್ಷಿಸುವಂತೆ, ನಿನ್ನ ತೀಕ್ಷ್ಣವಾದ ಜ್ವಾಲೆಗಳು ಸಕಲವನ್ನೂ ಭಕ್ಷಿಸುತ್ತವೆ. ಇದು ಖಂಡಿತ.

English Translation.

Your fierce flames, Agni, consume the forest, as wild animals destroy (the plants) with their teeth.

॥ ಸಂಹಿತಾಪಾಠಃ ॥

ಹರಯೋ ಧೂಮಕೇತವೋ ವಾತಜೂತಾ ಉಪ ದ್ಯವಿ।
ಯತಂತೇ ವೃಥಗಗ್ನಯಃ ॥ ೪ ॥

॥ ಪದಪಾಠಃ ॥

ಹರಯಃ। ಧೂಮऽಕೇತವಃ। ವಾತऽಜೂತಾಃ। ಉಪ। ದ್ಯವಿ।
ಯತಂತೇ। ವೃಥಕ್। ಅಗ್ನಯಃ ॥ ೪ ॥

॥ ಸಾಯಣಭಾಷ್ಯಂ ॥

**ಹರಯೋ ಹರಣಶೀಲಾ ವಾತಜೂತಾ ವಾತಪ್ರೇರಿತಾ ಧೂಮಕೇತವೋ ಧೂಮಧ್ವಜಾ ಅಗ್ನಯ ಉಪ ದ್ಯವ್ಯಂತರಿಕ್ಷೇ ವೃಥಕ್ ಪೃಥಗ್ಯತಂತೇ। ಗಚ್ಛಂತಿ। ಪೃಥಗಿತ್ಯನೇನ ಸಮಮುವ್ಯಯಂ ವೃಥಗಿತಿ। ಪೃಥಗಿತ್ಯೇವ ವಾಜಸನೇಯಿನಃ ಪಠಂತಿ। ವಾ. ಸಂ. ೩೩-೨ ॥**

॥ ಪ್ರತಿಪದಾರ್ಥ ॥

**ಹರಯಃ**—ಸಕಲವನ್ನೂ ಅಪಹರಿಸುವ ವೇಗವುಳ್ಳವೂ। **ವಾತಜೂತಾಃ**—ವಾಯುವಿನಿಂದ ಪ್ರೇರಿತವಾದವೂ। **ಧೂಮಕೇತವಃ**—ಧೂಮರೂಪವಾದ ಧ್ವಜವುಳ್ಳವೂ ಆದ। **ಅಗ್ನಯಃ**—ಅಗ್ನಿಯ ರೂಪಾಂತರಗಳು। **ಉಪ ದ್ಯವಿ**—ಅಂತರಿಕ್ಷದಲ್ಲಿ। **ವೃಥಕ್**—ತಮ್ಮ ವೈಯಕ್ತಿಕವಾದ ರೂಪದಿಂದ। **ಯತಂತೇ**—ಸಂಚರಿಸುತ್ತವೆ.

॥ ಭಾವಾರ್ಥ ॥

ಸಕಲವನ್ನು ಅಪಹರಿಸುವ ವೇಗವುಳ್ಳವೂ, ವಾಯುವಿನಿಂದ ಪ್ರೇರಿತವಾದವೂ, ಧೂಮರೂಪವಾದ ಧ್ವಜವುಳ್ಳವೂ ಆದ ಅಗ್ನಿಯ ರೂಪಾಂತರಗಳು ಅಂತರಿಕ್ಷದಲ್ಲಿ ತಮ್ಮ ವೈಯಕ್ತಿಕವಾದ ರೂಪದಿಂದ ಸಂಚರಿಸುತ್ತವೆ.

## English Translation.

The consuming smoke-bannered fires, borne by the wind, spread diversely in the firmament.

॥ ಸಂಹಿತಾಪಾಠಃ ॥

ಏತೇ ತ್ಯೇ ವೃಥಗಗ್ನಯ ಇದ್ಧಾಸಃ ಸಮದೃಕ್ಷತ ।
ಉಷಸಾಮಿವ ಕೇತವಃ ॥ ೫ ॥

॥ ಪದಪಾಠಃ ॥

ಏತೇ । ತ್ಯೇ । ವೃಥಕ್ । ಅಗ್ನಯಃ । ಇದ್ಧಾಸಃ । ಸಂ । ಅದೃಕ್ಷತ ।
ಉಷಸಾಂಽಇವ । ಕೇತವಃ ॥ ೫ ॥

॥ ಸಾಯಣಭಾಷ್ಯಂ ॥

ಏತೇ ತ್ಯೇ ಏತೇಽಗ್ನಯೋ ವೃಥಕ್ ಪೃಥಗಿದ್ಧಾಸೋಽಗ್ನಿಹೋತ್ರೈಭಿಃ ಸಮಿದ್ಧಾಃ ಸಂತೆ ಉಷಸಾಮಿವ ಕೇತವ ಉಷಸಾಂ ಪ್ರಜ್ಞಾಪಕಾ ಇವ ಸಮದೃಕ್ಷತ । ಸಮ್ಯಗ್ದೃಶ್ಯಂತೇ ॥

॥ ಪ್ರತಿಪದಾರ್ಥ ॥

**ತ್ಯೇ**—ಪ್ರಸಿದ್ಧವಾದವೂ । **ಏತೇ**—ಮುಂಭಾಗದಲ್ಲಿರುವುವೂ ಆದ । **ಅಗ್ನಯಃ**—ಅಗ್ನಿಯ ರೂಪಾಂತರಗಳು । **ವೃಥಕ್**—ಬೇರೆ ಬೇರೆಯಾಗಿ । **ಇದ್ಧಾಸಃ**—ಪ್ರಜ್ವಲಿತಗಳಾಗಿ । **ಉಷಸಾಂ**—ಉಷಸ್ಸುಗಳ । **ಕೇತವ ಇವ**—ಪ್ರಭಾರೂಪವಾದ ಧ್ವಜಗಳಂತೆ । **ಸಮದೃಕ್ಷತ**—ಕಂಗೊಳಿಸುತ್ತಾ ಗೋಚರವಾಗುತ್ತವೆ.

॥ ಭಾವಾರ್ಥ ॥

ಪ್ರಸಿದ್ಧವೂ ಮುಂಭಾಗದಲ್ಲಿರುವುವೂ ಆದ ಅಗ್ನಿಯ ರೂಪಾಂತರಗಳು ಬೇರೆ ಬೇರೆಯಾಗಿ ಪ್ರಜ್ವಲಿತಗಳಾಗಿ ಉಷಸ್ಸುಗಳ ಪ್ರಭಾರೂಪವಾದ ಧ್ವಜಗಳಂತೆ ಕಂಗೊಳಿಸುತ್ತಾ ಗೋಚರವಾಗುತ್ತವೆ.

## English Translation.

These fires seperately kindled are beheld like the tokens of the dawn.

॥ ಸಂಹಿತಾಪಾಠಃ ॥

ಕೃಷ್ಣಾ ರಜಾಂಸಿ ಪತ್ಸುತಃ ಪ್ರಯಾಣೇ ಜಾತವೇದಸಃ ।
ಅಗ್ನಿರ್ಯದ್ರೋಧತಿ ಕ್ಷಮಿ ॥ ೬ ॥

॥ ಪದಪಾಠಃ ॥

ಕೃಷ್ಣಾ । ರಜಾಂಸಿ । ಪತ್ಸುತಃ । ಪ್ರಽಯಾನೇ । ಜಾತಽವೇದಸಃ ।
ಅಗ್ನಿಃ । ಯತ್ । ರೋಧತಿ । ಕ್ಷಮಿ ॥ ೬ ॥

॥ ಸಾಯಣಭಾಷ್ಯಂ ॥

ಜಾತವೇದಸೋಽಗ್ನೇಃ ಪ್ರಯಾಣೇ ಪತ್ಸುತಃ ಪತ್ತ್ರೋ ರಜಾಂಸಿ ಪಾಂಸವಃ ಕೃಷ್ಣಾನಿ ಭವಂತಿ । ಕದೇತ್ಯತ ಆಹ । ಕ್ಷಮಿ ಕ್ಷಮಾಯಾಂ ಯದ್ಯದಾಗ್ನಿಃ ರೋಧತಿ ಶುಷ್ಕಾನ್ವನಸ್ಪತೀನ್ನಿರುಣದ್ಧಿ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಅಗ್ನಿಃ**—ಅಗ್ನಿಯು । **ಕ್ಷಮಿ**—ಪೃಥ್ವಿಯ ಮೇಲೆ । **ರೋಧತಿ**—ಶುಷ್ಕವಾದ ವನಸ್ಪತಿಗಳನ್ನು ಆವರಿಸುವನೋ ಆಗ । **ಜಾತವೇದಸಃ**—ಜಾತವೇದೋರೂಪನಾದ ಈ ಅಗ್ನಿಯ । **ಪ್ರಯಾಣೇ**—ಸಂಚಾರಕಾಲದಲ್ಲಿ । **ಪತ್ಸುತಃ**—ಮೇಲೆದ್ದಂಥ । **ರಜಾಂಸಿ**—ಧೂಳುಗಳು । **ಕೃಷ್ಣಾ**—ಕಪ್ಪುಬಣ್ಣದ್ದಾಗಿರುತ್ತವೆ.

॥ ಭಾವಾರ್ಥ ॥

ಯಾವಾಗ ಈ ಅಗ್ನಿಯು ಪೃಥ್ವಿಯ ಮೇಲೆ ಸಂಚರಿಸುತ್ತಾ ಶುಷ್ಕವಾದ ವನಸ್ಪತಿಗಳನ್ನು ಆವರಿಸುವನೋ ಎಂದರೆ ದಹಿಸುವನೋ ಆಗ ಜಾತವೇದೋರೂಪನಾದ ಈ ಅಗ್ನಿಯ ಸಂಚಾರಕಾಲದಲ್ಲಿ ಮೇಲೆದ್ದಂಥ ಧೂಳುಗಳು ಕಪ್ಪುಬಣ್ಣದ್ದಾಗಿರುತ್ತದೆ.

## English Translation.

Black dust is raised by the feet of Jathavedas when he moves, when Agni spreads on the earth.

॥ ಸಂಹಿತಾಪಾಠಃ ॥

ಧಾಸಿಂ ಕೃಣ್ವಾನ ಓಷಧೀರ್ಬಪ್ಸದಗ್ನಿರ್ನ ವಾಯತಿ ।
ಪುನರ್ಯಂತರುಣೀರಪಿ ॥ ೭ ॥

|| ಪದಪಾಠಃ ||

ಧಾಸಿಂ । ಕೃಣ್ವಾನಃ । ಓಷಧೀಃ । ಬಪ್ಸತ್ । ಅಗ್ನಿಃ । ನ । ವಾಯತಿ ।
ಪುನಃ । ಯನ್ । ತರುಣೀಃ । ಅಪಿ ॥ ೭ ॥

|| ಸಾಯಣಭಾಷ್ಯಂ ||

ಅಗ್ನಿರೋಷಧೀರ್ಧಾಸಿಮನ್ನಂ । ಕ್ಷುದ್ಧಾಸೀತ್ಯನ್ನನಾಮಸು ಪಾಠಾತ್ । ಕೃಣ್ವಾನಃ ಕುರ್ವನ್ ಬಪ್ಸದ್ಭಕ್ಷಯನ್ನ ವಾಯತಿ । ನ ಶಾಮ್ಯತಿ । ಪುನಶ್ಚ ತರುಣೀರೋಷಧೀರಪಿ ಯನ್ ಗಚ್ಛನ್ ಭವತಿ । ಭಕ್ಷಯಿತುಮಿತಿ ಶೇಷಃ ॥

|| ಪ್ರತಿಪದಾರ್ಥ ||

ಅಗ್ನಿಃ—ಅಗ್ನಿಯು । ಓಷಧೀಃ—ಓಷಧಿಗಳನ್ನು । ಧಾಸಿಂ—ತನ್ನ ಅನ್ನರೂಪದಲ್ಲಿ । ಕೃಣ್ವಾನಃ—ಒದಗಿಸಿಕೊಂಡು । ಬಪ್ಸನ್—ಅವುಗಳನ್ನು ಭಕ್ಷಿಸಿದರೂ । ನ ವಾಯತಿ—ತೃಪ್ತಿಯಿಂದ ಶಮನವನ್ನು ಹೊಂದುವುದಿಲ್ಲ । ಪುನಃ—ತಿರುಗಿಯೂ । ತರುಣೀಃ—ಎಳೆಯ ಲತೆಗಳನ್ನೂ । ಅಪಿ ಯನ್—ಭಕ್ಷಿಸಲು ಆವರಿಸುತ್ತಾನೆ.

|| ಭಾವಾರ್ಥ ||

ಅಗ್ನಿಯು ಓಷಧಿಗಳನ್ನು ತನ್ನ ಅನ್ನರೂಪದಲ್ಲಿ ಒದಗಿಸಿಕೊಂಡು ಅವುಗಳನ್ನೆಲ್ಲಾ ಭಕ್ಷಿಸಿದರೂ ತೃಪ್ತಿಯಿಂದ ಶಮನವನ್ನು ಹೊಂದುವುದಿಲ್ಲ. ತಿರುಗಿಯೂ ಎಳೆಯ ಲತೆಗಳನ್ನೂ ಆವರಿಸುತ್ತಾನೆ.

## English Translation.

Making the plants his food, Agni devouring them is never satiated, but falls again upon the young (shrubs).

|| ಸಂಹಿತಾಪಾಠಃ ||

ಜಿಹ್ವಾಭಿರಹ ನಂನಮದರ್ಚಿಷಾ ಜಂಜಣಾಭವನ್ ।
ಅಗ್ನಿರ್ವನೇಷು ರೋಚತೇ ॥ ೮ ॥

|| ಪದಪಾಠಃ ||

ಜಿಹ್ವಾಭಿಃ । ಅಹ । ನಂನಮತ್ । ಅರ್ಚಿಷಾ । ಜಂಜಣಾऽಭವನ್ ।
ಅಗ್ನಿಃ । ವನೇಷು । ರೋಚತೇ ॥ ೮ ॥

॥ ಸಾಯಣಭಾಷ್ಯಂ ॥

ಅಗ್ನಿರ್ಜಿಹ್ವಾಭಿರವ ಜ್ವಾಲಾಭಿರೇವ ನಂನಮದ್ವನಸ್ಪತೀನತ್ಯಂತಂ ನಮಯನ್ನರ್ಚಿಷಾ ತೇಜಸಾ ಜಂಜಣಾಭವಜ್ಜ್ವಲನ್ । ಜಂಜಣಾಭವನ್ ಮಲ್ಮಲಾಭವನ್ನಿತಿ ಜ್ವಲತಿಕರ್ಮಸು ಪಾಠಾತ್ । ವನೇಷ್ವರಣ್ಯೇಷು ರೋಚತೇ । ಪ್ರಕಾಶತೇ ॥

॥ ಪ್ರತಿಪದಾರ್ಥ ॥

ಅಗ್ನಿಃ—ಅಗ್ನಿಯು । ಜಿಹ್ವಾಭಿರಹ—ತನ್ನ ಜ್ವಾಲಾರೂಪವಾದ ನಾಲಿಗೆಗಳಿಂದಲೇ । ನಂನಮತ್—ವೃಕ್ಷಾದಿಗಳನ್ನು ಬಗ್ಗಿಸುತ್ತಲೂ । ಅರ್ಚಿಷಾ—ತೇಜಸ್ಸಿನೊಡನೆ । ಜಂಜಣಾಭವನ್—ಜ್ವಲಿಸುತ್ತಲೂ । ವನೇಷು—ಅರಣ್ಯಗಳಲ್ಲಿ । ರೋಚತೇ—ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಅಗ್ನಿಯು ತನ್ನ ಜ್ವಾಲಾರೂಪವಾದ ನಾಲಿಗೆಗಳಿಂದಲೇ ವೃಕ್ಷಾದಿಗಳನ್ನು ಬಗ್ಗಿಸುತ್ತಲೂ, ತೇಜಸ್ಸಿನೊಡನೆ ಜ್ವಲಿಸುತ್ತಲೂ ಅರಣ್ಯಗಳಲ್ಲಿ ಪ್ರಕಾಶಿಸುತ್ತಾನೆ.

English Translation.

Bowing down (the trees) with his tongues (of flame). and blazing with splendour, Agni shines in the forests.

॥ ಸಂಹಿತಾಪಾಠಃ ॥

ಅಪ್ಸ್ವ॒ಗ್ನೇ ಸಧಿಷ್ಟವ ಸೌಷಧೀರನು ರುಧ್ಯಸೇ ।
ಗರ್ಭೇ ಸಞ್ಜಾಯಸೇ ಪುನಃ ॥ ೯ ॥

॥ ಪದಪಾಠಃ ॥

ಅಪ್ಽಸು । ಅಗ್ನೇ । ಸಧಿಃ । ತವ । ಸಃ । ಓಷಧೀಃ । ಅನು । ರುಧ್ಯಸೇ ।
ಗರ್ಭೇ । ಸನ್ । ಜಾಯಸೇ । ಪುನರಿತಿ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಸ್ಯ ತವಾಪ್ಸು ಸಧಿಃ ಪ್ರವೇಶಸ್ಥಾನಂ ಸ ತ್ವಮೋಷಧೀರನು ರುಧ್ಯಸೇ । ಅನುರುಣತ್ಸಿ । ಪುನಶ್ಚ ತಾಸಾಂ ಭೂಮಿಷ್ಠಾನಾಂ ಗರ್ಭೇ ಸನ್ ಭವಞ್ಜಾಯಸೇ । ಪ್ರಾದುರ್ಭವಸಿ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ತವ—ನಿನ್ನ । ಸಧಿ—ಪ್ರವೇಶಸ್ಥಾನವು । ಅಪ್ಸು—ಉದಕಗಳಲ್ಲಿರುತ್ತದೆ । ಸಃ—ಅಂತಹ ನೀನು । ಓಷಧೀಃ—ಲತಾದಿಗಳನ್ನು । ಅನು ರುಧ್ಯಸೇ—ಆವರಿಸುತ್ತೀಯೆ ।

**ಪುನಃ**—ತಿರುಗಿಯೂ | **ಗರ್ಭೇ ಸನ್**—ಅವುಗಳ ಗರ್ಭರೂಪದಲ್ಲಿದ್ದು | **ಜಾಯಸೇ—ಪೃಥ್ವಿಯ ಮೇಲೆ** ಉತ್ಪನ್ನನಾಗುತ್ತೀಯೆ.

|| ಭಾವಾರ್ಥ ||

ಎಲೈ ಅಗ್ನಿಯೇ, ನಿನ್ನ ಪ್ರವೇಶಸ್ಥಾನವು ಉದಕಗಳಲ್ಲಿರುತ್ತದೆ. ಅಂತಹ ನೀನು **ಲತಾದಿಗಳನ್ನು** ಆವರಿಸುತ್ತೀಯೆ (ದಹಿಸುತ್ತೀಯೆ) ತಿರುಗಿಯೂ ಅವುಗಳ ಗರ್ಭರೂಪದಲ್ಲಿದ್ದು ಪೃಥ್ವಿಯ ಮೇಲೆ **ಉತ್ಪನ್ನನಾಗುತ್ತೀಯೆ.**

English Translation.

Your station, Agni, is in the waters: you cling to the **plants,** and becoming their embroy, are born again

|| ಸಂಹಿತಾಪಾಠಃ ||

ಉದಗ್ನೇ ತವ ತದ್ಘೃತಾದರ್ಚೀ ರೋಚತ ಆಹುತಂ |
ನಿಂಸಾನಂ ಜುಹ್ವೋ೭ ಮುಖೇ || ೧೦ ||

|| ಪದಪಾಠಃ ||

**ಉತ್ | ಅಗ್ನೇ | ತವ | ತತ್ | ಘೃತಾತ್ | ಅರ್ಚಿಃ | ರೋಚತೇ | ಆऽಹುತಂ |**
**ನಿಂಸಾನಂ | ಜುಹ್ವಃ | ಮುಖೇ || ೧೦ ||**

|| ಸಾಯಣಭಾಷ್ಯಂ ||

**ಹೇ ಅಗ್ನೇ ತವ ಘೃತಾದಾಹುತಂ ಜುಹ್ವೋ ಹೋಮಸಾಧನಭೂತಾಯಾಃ ಸ್ರುಚೋ ಮುಖೇ ನಿಂಸಾನಂ ಲಿಹಾನಂ ತದರ್ಚಿರುದ್ರೋಚತೇ | ಪ್ರಕಾಶತೇ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ಘೃತಾತ್**—ಘೃತರೂಪದ ಹವಿಸ್ಸಿನಿಂದ | **ಆಹುತಂ—ಆಹುತಿಯು**ನ್ನರ್ಪಿಸಲ್ಪಟ್ಟಿದ್ದೂ | **ಜುಹ್ವಃ**—ಹೋಮಸಾಧನವಾದ ಜುಹೂಪಾತ್ರೆಯ | **ಮುಖೇ—ಅಗ್ರಭಾಗದಲ್ಲಿ** **ನಿಂಸಾನಂ**—ಅಂಟಿಕೊಂಡು ಕಂಗೊಳಿಸುವುದೂ ಆದ | **ತವ**—ನಿನ್ನ | **ತತ್ ಅರ್ಚಿಃ—ಪ್ರಸಿದ್ಧ**ವಾದ ಜ್ವಾಲೆಯು | **ಉತ್ ರೋಚತೇ**—ಮೇಲೆದ್ದು ಪ್ರಕಾಶಿಸುತ್ತದೆ.

|| ಭಾವಾರ್ಥ ||

ಎಲೈ ಅಗ್ನಿಯೇ, ಘೃತರೂಪವಾದ ಹವಿಸ್ಸಿನಿಂದ ಆಹುತಿಯನ್ನರ್ಪಿಸಲ್ಪಟ್ಟಿದ್ದೂ, **ಹೋಮಸಾಧನವಾದ** ಜುಹೂಪಾತ್ರೆಯ ಅಗ್ರಭಾಗದಲ್ಲಿ ಅಂಟಿಕೊಂಡು ಕಂಗೊಳಿಸುವುದೂ ಆದ ನಿನ್ನ ಪ್ರಸಿದ್ಧವಾದ **ಜ್ವಾಲೆಯು** ಮೇಲೆದ್ದು ಪ್ರಕಾಶಿಸುತ್ತದೆ.

## English Translation.

**You** lustre, Agni lambent in the mouth of the ladle, shines when **offered from** (the oblation of) butter.

॥ ಸಂಹಿತಾಪಾಠಃ ॥

ಉಕ್ಷಾನ್ನಾಯ ವಶಾನ್ನಾಯ ಸೋಮಪೃಷ್ಠಾಯ ವೇಧಸೇ ।
ಸ್ತೋಮೈರ್ವಿಧೇಮಾಗ್ನಯೇ ॥ ೧೧ ॥

॥ ಪದಪಾಠಃ ॥

**ಉಕ್ಷಽಅನ್ನಾಯ । ವಶಾಽಅನ್ನಾಯ । ಸೋಮಽಪೃಷ್ಠಾಯ । ವೇಧಸೇ ।**
**ಸ್ತೋಮೈಃ । ವಿಧೇಮ । ಅಗ್ನಯೇ ॥ ೧೧ ॥**

॥ ಸಾಯಣಭಾಷ್ಯಂ ॥

**ಉಕ್ಷಾನ್ನಾಯ । ಉಕ್ಷಾನ್ನಮದನೀಯಂ ಹವಿರ್ಯಸ್ಯಾಸಾವುಕ್ಷಾನ್ನಃ । ತಸ್ಮೈ ವಶಾನ್ನಾಯ । ವಶಾನ್ನಂ ಯಸ್ಯಾಸೌ ವಶಾನ್ನಃ । ತಸ್ಮೈ ಸೋಮಪೃಷ್ಠಾಯ ಸೋಮಘೃತಪೃಷ್ಠಾಯ ವೇಧಸೇ ವಿಧಾತ್ರೇ ಕಾಮಾನಾಮಗ್ನಯೇ ಸ್ತೋಮೈರ್ವಿಧೇಮ । ಪರಿಚರೇಮ ॥**

॥ ಪ್ರತಿಪದಾರ್ಥ ॥

**ಉಕ್ಷಾನ್ನಾಯ**— ಹವಿಸ್ಸಿನ ರೂಪದಲ್ಲಿ ಅರ್ಪಿಸಿದ ವೃಷಭವೇ ಅನ್ನವಾಗಿ ಉಳ್ಳವನೂ । **ವಶಾನ್ನಾಯ**— ಅಂತಹ **ಪಶುವೇ** ಅನ್ನವಾಗಿ ಉಳ್ಳವನೂ । **ಸೋಮಪೃಷ್ಠಾಯ**— ಘೃತದಿಂದ ತೊಯ್ಯಲ್ಪಟ್ಟ ಪೃಷ್ಠಭಾಗವುಳ್ಳವನೂ । **ವೇಧಸೇ**— ಇಷ್ಟಾರ್ಥಪ್ರದನೂ ಆದ । **ಅಗ್ನಯೇ**— ಅಗ್ನಿಯನ್ನುದ್ದೇಶಿಸಿ । **ಸ್ತೋಮೈಃ**— ಸ್ತುತಿಗಳಿಂದ । **ವಿಧೇಮ**— ಪೂಜಿಸೋಣ.

॥ ಭಾವಾರ್ಥ ॥

ಹವಿಸ್ಸಿನ ರೂಪದಲ್ಲಿ ಅರ್ಪಿತವಾದ ವೃಷಭವೂ, ಪಶುವೂ ಅನ್ನವಾಗಿ ಉಳ್ಳವನೂ, ಘೃತದಿಂದ ತೊಯ್ಯಲ್ಪಟ್ಟ ಪೃಷ್ಠಭಾಗವುಳ್ಳವನೂ, ಇಷ್ಟಾರ್ಥಪ್ರದನೂ ಆದ ಅಗ್ನಿಯನ್ನು ಉದ್ದೇಶಿಸಿ ಸ್ತುತಿಗಳಿಂದ ಪೂಜಿಸೋಣ.

## English Translation.

**Let us** adore with hymns Agni, the granter (of desires), the eater of **the ox**, **the** eater of the marrow, on whose back **the libation** is poured.

॥ ಸಂಹಿತಾಪಾಠಃ ॥

ಉತ ತ್ವಾ ನಮಸಾ ವಯಂ ಹೋತರ್ವರೇಣ್ಯಕ್ರತೋ ।
ಅಗ್ನೇ ಸಮಿದ್ಭಿರೀಮಹೇ ॥ ೧೨ ॥

॥ ಪದಪಾಠಃ ॥

ಉತ । ತ್ವಾ । ನಮಸಾ । ವಯಂ । ಹೋತರಿತಿ । ವರೇಣ್ಯಕ್ರತೋ ಇತಿ ವರೇಣ್ಯಕ್ರತೋ ।
ಅಗ್ನೇ । ಸಮಿತ್ಽಭಿಃ । ಈಮಹೇ ॥ ೧೨ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಹೋತರ್ದೇವಾನಾಂ ಹ್ವಾತರ್ವರೇಣ್ಯಕ್ರತೋ ವರಣೀಯಪ್ರಜ್ಞಾಗ್ನೇ ತ್ವಾ ತ್ವಾಂ ವಯಮಾಂಗಿರಸಾ ನಮಸಾನ್ನೇನ ಹವಿಷಾ ಸಮಿದ್ಭಿಶ್ಚೇಮಹೇ । ಯಾಚಾಮಹೇ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಹೋತಃ**—ದೇವತೆಗಳನ್ನು ಯಜ್ಞಕ್ಕೆ ಕರೆತರುವವನೂ । **ವರೇಣ್ಯಕ್ರತೋ**—ಪ್ರಶಂಸನೀಯವಾದ ಪ್ರಜ್ಞೆಯುಳ್ಳವನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ತ್ವಾ**—ನಿನ್ನನ್ನು । **ವಯಂ**—ನಾವು । **ನಮಸಾ**—ಹವಿಸ್ಸಿನ ರೂಪದ ಅನ್ನದೊಡನೆಯೂ । **ಸಮಿದ್ಭಿಃ**—ಸಮಿತ್ತುಗಳೊಡನೆಯೂ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ದೇವತೆಗಳನ್ನು ಯಜ್ಞಭೂಮಿಗೆ ಕರೆತರುವವನೂ, ಪ್ರಶಂಸನೀಯವಾದ ಪ್ರಜ್ಞೆಯುಳ್ಳವನೂ ಆದ ಎಲೆ ಅಗ್ನಿಯೇ, ನಿನ್ನನ್ನು ನಾವು ಹವಿಸ್ಸಿನ ರೂಪದ ಅನ್ನದೊಡನೆಯೂ, ಸಮಿತ್ತುಗಳೊಡನೆಯೂ ಪೂಜಿಸಿ ಯಾಚಿಸುತ್ತೇವೆ.

English Translation.

We solicit you, Agni, invoker of the gods, performer of sacred rites with oblations and with fuel.

॥ ಸಂಹಿತಾಪಾಠಃ ॥

ಉತ ತ್ವಾ ಭೃಗುವಚ್ಛುಚೇ ಮನುಷ್ವದಗ್ನ ಆಹುತ ।
ಅಂಗಿರಸ್ವದ್ಧವಾಮಹೇ ॥ ೧೩ ॥

॥ ಪದಪಾಠಃ ॥

ಉತ । ತ್ವಾ । ಭೃಗುಽವತ್ । ಶುಚೇ । ಮನುಷ್ವತ್ । ಅಗ್ನೇ । ಆಽಹುತ ।
ಅಂಗಿರಸ್ವತ್ । ಹವಾಮಹೇ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಶುಚೇ ಸ್ವಭಾವತಃ ಶುದ್ಧಾಹುತಾಗ್ನೇ ತ್ವಾ ತ್ವಾಂ ಭೃಗುವದ್ಯಥಾ ಭೃಗುಸ್ತಥಾ ಮನುಷ್ವ-ದ್ಯಥಾ ಚ ಮನುಸ್ತಥಾಂಗಿರೋವಚ್ಚ ಹವಾಮಹೇ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಶುಚೇ**—ಪರಿಶುದ್ಧನಾದವನೂ । **ಆಹುತ**—ಆಹುತಿಯನ್ನರ್ಪಿಸಲ್ಪಟ್ಟವನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ತ್ವಾ**—ನಿನ್ನನ್ನು । **ಭೃಗುವತ್**—ಹಿಂದೆ ಭೃಗುಗಳು ಪೂಜಿಸಿದಂತೆಯೂ । **ಮನುಷ್ವತ್**—ಮನುವು ಪೂಜಿಸಿದಂತೆಯೂ । **ಅಂಗಿರಸ್ವತ್**—ಅಂಗಿರಾಋಷಿಯು ಪೂಜಿಸಿದಂತೆಯೂ । **ಹವಾಮಹೇ**—ಪೂಜಿಸಿ ನಿನ್ನನ್ನು ಸಹಾಯಕ್ಕಾಗಿ ಕರೆಯುತ್ತೇವೆ.

॥ ಭಾವಾರ್ಥ ॥

ಪರಿಶುದ್ಧನಾದವನೂ, ಆಹುತಿಯನ್ನು ಸ್ವೀಕರಿಸುವವನೂ ಆದ ಎಲೈ ಅಗ್ನಿಯೇ, ಹಿಂದೆ ಭೃಗುಗಳು ಪೂಜಿಸಿದಂತೆಯೂ, ಮನುವು ಪೂಜಿಸಿದಂತೆಯೂ, ಅಂಗಿರಾಋಷಿಯು ಪೂಜಿಸಿದಂತೆಯೂ ನಾವು ಈಗ ನಿನ್ನನ್ನು ಪೂಜಿಸಿ ನಿನ್ನನ್ನು ಸಹಾಯಕ್ಕಾಗಿ ಕರೆಯುತ್ತೇವೆ.

## English Translation.

Holy Agni, to whom oblations are offered, we worship you in like manner (as you have been worshipped) by Bhrigu, by Manus, by Angiras.

॥ ಸಂಹಿತಾಪಾಠಃ ॥

ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತಾ ।
ಸಖಾ ಸಖ್ಯಾ ಸಮಿಧ್ಯಸೇ ॥ ೧೪ ॥

॥ ಪದಪಾಠಃ ॥

ತ್ವಂ । ಹಿ । ಅಗ್ನೇ । ಅಗ್ನಿನಾ । ವಿಪ್ರಃ । ವಿಪ್ರೇಣ । ಸನ್ । ಸತಾ ।
ಸಖಾ । ಸಖ್ಯಾ । ಸಂಽಇಧ್ಯಸೇ ॥ ೧೪ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವಿಪ್ರೋ ಮೇಧಾವೀ ಸನ್ ವಿದ್ಯಮಾನಃ ಸಖಾ ಚ ತ್ವಂ ವಿಪ್ರೇಣ ಸತಾ ಸಖ್ಯಾಗ್ನಿನಾ ಸಮಿಧ್ಯಸೇ । ತಥಾ ಚ ಬ್ರಾಹ್ಮಣಂ । ತ್ವಂ ಹ್ಯಗ್ನೇ ಅಗ್ನಿನಾ ವಿಪ್ರೋ ವಿಪ್ರೇಣ ಸನ್ತ್ಸತೇತಿ ವಿಪ್ರ ಇತರೋ ವಿಪ್ರ ಇತರಃ ಸನ್ನಿತರಃ ಸನ್ನಿತರಃ ಸಖಾ ಸಖ್ಯಾ ಸಮಿಧ್ಯಸ ಇತ್ಯೇಷ ಹ ವಾ ಅಸ್ಯ ಸ್ವಃ ಸಖಾ । ಐ. ಬ್ರಾ. ೧–೧೬ । ಇತಿ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು । **ವಿಪ್ರಃ**—ಮೇಧಾವಿಯಾಗಿಯೂ । **ಸಖಾ ಚ**—ಮಿತ್ರನಾಗಿಯೂ । **ಸನ್**—ಇರುತ್ತಾ । **ವಿಪ್ರೇಣ**—ಮೇಧಾವಿಯೂ । **ಸಖ್ಯಾ**—ಮಿತ್ರಭೂತನೂ । **ಸತಾ**—ಆಗಿರುವ । **ಅಗ್ನಿನಾ**—ಬೇರೊಂದು ಅಗ್ನಿಯಿಂದ । **ಸಮಿಧ್ಯಸೇ ಹಿ**—ಪ್ರಜ್ವಲಿತನಾಗುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಮೇಧಾವಿಯಾಗಿಯೂ, ಮಿತ್ರನಾಗಿಯೂ ಇರುತ್ತಾ, ಮೇಧಾವಿಯೂ, ಮಿತ್ರಭೂತನೂ ಆಗಿರುವ ಬೇರೊಂದು ಅಗ್ನಿಯಿಂದ ಪ್ರಜ್ವಲಿತನಾಗುತ್ತೀಯೆ.

## English Translation.

You, Agni, are kindled by Agni: a sage by a sage, a saint by a saint, a friend by a friend.

॥ ಸಂಹಿತಾಪಾಠಃ ॥

ಸ ತ್ವಂ ವಿಪ್ರಾಯ ದಾಶುಷೇ ರಯಿಂ ದೇಹಿ ಸಹಸ್ರಿಣಂ ।
ಅಗ್ನೇ ವೀರವತೀಮಿಷಂ ॥ ೧೫ ॥

॥ ಪದಪಾಠಃ ॥

ಸಃ । ತ್ವಂ । ವಿಪ್ರಾಯ । ದಾಶುಷೇ । ರಯಿಂ । ದೇಹಿ । ಸಹಸ್ರಿಣಂ ।
ಅಗ್ನೇ । ವೀರऽವತೀಂ । ಇಷಂ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಸ ಪ್ರಸಿದ್ಧಸ್ತ್ವಂ ವಿಪ್ರಾಯ ಮೇಧಾವಿನೇ ದಾಶುಷೇ ಹವಿಷಾಂ ಪ್ರದಾತ್ರೇ ಯಜಮಾನಾಯ ಸಹಸ್ರಿಣಂ ಸಹಸ್ರಸಂಖ್ಯಾಕಮಪರಿಮಿತಂ ರಯಿಂ ಧನಂ ವೀರವತೀಂ ಪುತ್ರಪೌತ್ರಾದಿಸಹಿತಮಿಷಮನ್ನಂ ಚ ದೇಹಿ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಸಃ**—ಪ್ರಸಿದ್ಧನಾದ । **ತ್ವಂ**—ನೀನು । **ವಿಪ್ರಾಯ**—ಮೇಧಾವಿಯೂ । **ದಾಶುಷೇ**—ಹವಿಸ್ಸನ್ನರ್ಪಿಸುವವನೂ ಆದ ಯಜಮಾನನಿಗೆ । **ಸಹಸ್ರಿಣಂ**—ಸಹಸ್ರಸಂಖ್ಯಾಕವಾದ । **ರಯಿಂ**—ಧನವನ್ನೂ । **ವೀರವತೀಂ** - ವೀರ್ಯಯುತರಾದ ಪುತ್ರರಿಂದ ಕೂಡಿದ । **ಇಷಂ**—ಅನ್ನವನ್ನೂ । **ದೇಹಿ**—ಕೊಡು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ಮೇಧಾವಿಯೂ, ಹವಿಸ್ಸನ್ನರ್ಪಿಸುವವನೂ ಆದ ಯಜಮಾನನಿಗೆ ಸಹಸ್ರಸಂಖ್ಯಾಕವಾದ ಧನವನ್ನೂ, ವೀರ್ಯಯುತರಾದ ಪುತ್ರರಿಂದ ಕೂಡಿದ ಅನ್ನವನ್ನೂ ಕೊಡು.

English Translation.

Do you, Agni, bestow upon the pious donor (of the oblation) infinite riches and food with male progany.

॥ ಸಂಹಿತಾಪಾಠಃ ॥

ಅಗ್ನೇ ಭ್ರಾತಃ ಸಹಸ್ಕೃತ ರೋಹಿದಶ್ವ ಶುಚಿವ್ರತ ।
ಇಮಂ ಸ್ತೋಮಂ ಜುಷಸ್ವ ಮೇ ॥ ೧೬ ॥

॥ ಪದಪಾಠಃ ॥

ಅಗ್ನೇ । ಭ್ರಾತರಿತಿ । ಸಹಃऽಕೃತ । ರೋಹಿತ್ऽಅಶ್ವ । ಶುಚಿऽವ್ರತ ।
ಇಮಂ । ಸ್ತೋಮಂ । ಜುಷಸ್ವ । ಮೇ ॥ ೧೬ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಭ್ರಾತರ್ಭ್ರಾತೃವದ್ಯಜಮಾನಾನಾಂ ಮಿತ್ರಭೂತ ಸಹಸ್ಕೃತ ಸಹಸಾ ಬಲೇನ ಕೃತ ರೋಹಿದಶ್ವ ಲೋಹಿತವರ್ಣಾಶ್ವ ಶುಚಿವ್ರತ ಶುದ್ಧಕರ್ಮನ್ನಗ್ನೇ ಮ ಆಂಗಿರಸಸ್ಯ ಮಮೇಮಂ ಸ್ತೋಮಂ ಜುಷಸ್ವ । ಸೇವಸ್ವ ॥**

॥ ಪ್ರತಿಪದಾರ್ಥ ॥

**ಭ್ರಾತಃ**—ಸಹೋದರನಂತೆ ಪ್ರೀತಿಯುತನೂ । **ಸಹಸ್ಕೃತ**—ಶಕ್ತಿಯಿಂದ ಉತ್ಪನ್ನನಾದವನೂ । **ರೋಹಿದಶ್ವ**—ಹೊಂಬಣ್ಣದ ಅಶ್ವವುಳ್ಳವನೂ । **ಶುಚಿವ್ರತ**—ಶುದ್ಧವಾದ ಕರ್ಮವುಳ್ಳವನೂ ಆದ ! **ಅಗ್ನೇ**—ಎಲೈ ಅಗ್ನಿಯೇ । **ಮೇ**—ಅಂಗಿರಾನಾಮಕನಾದ ನನ್ನ । **ಇಮಂ** **ಸ್ತೋಮಂ**—ಈ ಸ್ತೋತ್ರವನ್ನು । **ಜುಷಸ್ವ**—ಸೇವಿಸು.

॥ ಭಾವಾರ್ಥ ॥

ಸಹೋದರನಂತೆ ಪ್ರೀತಿಯುತನೂ, ಶಕ್ತಿಯಿಂದ ಉತ್ಪನ್ನನಾದವನೂ, ಹೊಂಬಣ್ಣದ ಅಶ್ವವುಳ್ಳವನೂ, ಶುದ್ಧವಾದ ಕರ್ಮವುಳ್ಳವನೂ ಆದ ಎಲೈ ಅಗ್ನಿಯೇ, ಅಂಗಿರಾನಾಮಕನಾದ ನನ್ನ ಈ ಸ್ತೋತ್ರವನ್ನು ಕೇಳು.

## English Translation.

Agni, (our) brother, who are elicited by strength, who have red horses, and are (the performer) of pure rites, be propitiated by this my praise.

॥ ಸಂಹಿತಾಪಾಠಃ ॥

ಉತ ತ್ವಾಗ್ನೇ ಮಮ ಸ್ತುತೋ ವಾಶ್ರಾಯ ಪ್ರತಿಹರ್ಯತೇ ।
ಗೋಷ್ಠಂ ಗಾವ ಇವಾಶತ ॥ ೧೭ ॥

॥ ಪದಪಾಠಃ ॥

ಉತ । ತ್ವಾ । ಅಗ್ನೇ । ಮಮ । ಸ್ತುತಃ । ವಾಶ್ರಾಯ । ಪ್ರತಿಽಹರ್ಯತೇ ।
ಗೋಽಸ್ಥಂ । ಗಾವಃಽಇವ । ಆಶತ ॥ ೧೭ ॥

॥ ಸಾಯಣಭಾಷ್ಯಂ ॥

**ಉತಾಪಿ ಚ ಹೇ ಅಗ್ನೇ ತ್ವಾ ತ್ವಾಂ ಮಮಾಂಗಿರಸಸ್ಯ ಸ್ತುತಃ ಸ್ತುತಯೋ ವಾಶ್ರಾಯ ವಾಶನಶೀಲಾಯ ವತ್ಸಾಯ ಪ್ರತಿಹರ್ಯತೇ ಪಯಃ ಕಾಮಯಮಾನಾಯ ದೋಗ್ಧುಂ ಗೋಷ್ಠಂ ಗಾವ ಇವ ಯಥಾ ಗಾವಃ ಪ್ರವಿಶಂತಿ ತಥಾಶತ । ಪ್ರಾಪ್ನುವಂತಿ ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ಅಗ್ನೇ**—ಎಲೈ ಅಗ್ನಿಯೇ । **ವಾಶ್ರಾಯ**—ಹಸಿವಿನಿಂದ ಅರಚುತ್ತಿರುವ ಕರುಗಳಿಗೆ । **ಪ್ರತಿಹರ್ಯತೇ**—ಕ್ಷೀರವನ್ನು ಕೊಡಲು । **ಗಾವಃ**—ಪಶುಗಳು । **ಗೋಷ್ಠಂ ಇವ**—ಕೊಟ್ಟಿಗೆಯನ್ನು ಆತುರದಿಂದ ಪ್ರವೇಶಿಸುವಂತೆ । **ಮಮ**—ನನ್ನ । **ಸ್ತುತಃ**—ಸ್ತುತಿಗಳು । **ತ್ವಾ**—ನಿನ್ನನ್ನು । **ಆಶತ**—(ನಿನಗೆ ತೃಪ್ತಿಯನ್ನುಂಟುಮಾಡಲು) ಸಮೀಪಿಸುತ್ತವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಹಸಿವಿನಿಂದ ಅರಚುತ್ತಿರುವ ಕರುಗಳಿಗೆ ಕ್ಷೀರವನ್ನು ಕೊಡಲು ಪಶುಗಳು ಕೊಟ್ಟಿಗೆಯನ್ನು ಆತುರದಿಂದ ಪ್ರವೇಶಿಸುವಂತೆ, ನನ್ನ ಸ್ತುತಿಗಳು ನಿನಗೆ ತೃಪ್ತಿಯನ್ನುಂಟುಮಾಡಲು ನಿನ್ನನ್ನು ಸಮೀಪಿಸುತ್ತವೆ.

English Translation.

My praises hasten to you, Agni, as cows enter their stalls (to give milk) to the thirsting calves.

॥ ಸಂಹಿತಾಪಾಠಃ ॥

ತುಭ್ಯಂ ತಾ ಅಂಗಿರಸ್ತಮ ವಿಶ್ವಾಃ ಸುಕ್ಷಿತಯಃ ಪೃಥಕ್ ।
ಅಗ್ನೇ ಕಾಮಾಯ ಯೇಮಿರೇ ॥ ೧೮ ॥

॥ ಪದಪಾಠಃ ॥

ತುಭ್ಯಂ । ತಾಃ । ಅಂಗಿರಃऽತಮ । ವಿಶ್ವಾಃ । ಸುऽಕ್ಷಿತಯಃ । ಪೃಥಕ್ ।
ಅಗ್ನೇ । ಕಾಮಾಯ । ಯೇಮಿರೇ ॥ ೧೮ ॥

॥ ಸಾಯಣಭಾಷ್ಯಂ ॥

ಹೇ ಅಂಗಿರಸ್ತಮಾಂಗಿರಸಾಂ ಶ್ರೇಷ್ಠಾಗ್ನೇ ತುಭ್ಯಂ ವಿಶ್ವಾಃ ಸರ್ವಾಸ್ತಾಃ ಪ್ರಸಿದ್ಧಾಃ ಸುಕ್ಷಿತಯಃ ಪ್ರಜಾಃ ಕಾಮಾಯಾತ್ಮನಃ ಕಾಮಸಿದ್ಧ್ಯರ್ಥಂ ಪೃಥಗ್ಯೇಮಿರೇ । ನಿಯಚ್ಛಂತಿ ।

॥ ಪ್ರತಿಪದಾರ್ಥ ॥

**ಅಂಗಿರಸ್ತಮ**—ಅಂಗಿರಸ್ಸುಗಳಲ್ಲೆಲ್ಲಾ ಶ್ರೇಷ್ಠನಾದ । **ಅಗ್ನೇ**—ಎಲೈ ಅಗ್ನಿಯೇ । **ತಾಃ**—ಪ್ರಸಿದ್ಧರೂ । **ವಿಶ್ವಾಃ**—ಸಮಸ್ತರೂ ಆದ । **ಸುಕ್ಷಿತಯಃ**—ಪ್ರಜೆಗಳೆಲ್ಲರೂ । **ಕಾಮಾಯ**—ತಮ್ಮ ಇಷ್ಟಾರ್ಥಸಿದ್ಧಿಗಾಗಿ । **ತುಭ್ಯಂ**—ನಿನಗೆ । **ಪೃಥಕ್**—ಬೇರೆಬೇರೆಯಾಗಿ । **ಯೇಮಿರೇ**—ಪೂಜೆಯನ್ನರ್ಪಿಸಿ ನಿನ್ನನ್ನು ಆಶ್ರಯಿಸುತ್ತಾರೆ.

॥ ಭಾವಾರ್ಥ ॥

ಅಂಗಿರಸ್ಸುಗಳಲ್ಲೆಲ್ಲಾ ಶ್ರೇಷ್ಠನಾದ ಎಲೈ ಅಗ್ನಿಯೇ, ಪ್ರಸಿದ್ಧರಾದ ಸಮಸ್ತ ಪ್ರಜೆಗಳೂ ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ನಿನಗೆ ಬೇರೆಬೇರೆಯಾಗಿ ಪೂಜೆಯನ್ನರ್ಪಿಸಿ ನಿನ್ನನ್ನು ಆಶ್ರಯಿಸುತ್ತಾರೆ.

English Translation.

To you, Agni, who are the chief of the Angirasa, all people have severally recourse for the attainment of their desires.

॥ ಸಂಹಿತಾಪಾಠಃ ॥

ಅಗ್ನಿಂ ಧೀಭಿರ್ಮನೀಷಿಣೋ ಮೇಧಿರಾಸೋ ವಿಪಶ್ಚಿತಃ ।
ಅದ್ಮಸದ್ಯಾಯ ಹಿನ್ವಿರೇ ॥ ೧೯ ॥

॥ ಪದಪಾಠಃ ॥

ಅಗ್ನಿಂ । ಧೀಭಿಃ । ಮನೀಷಿಣಃ । ಮೇಧಿರಾಸಃ । ವಿಪಃऽಚಿತಃ ।

ಅದ್ಮऽಸದ್ಯಾಯ । ಹಿನ್ವಿರೇ ॥ ೧೯ ॥

॥ ಸಾಯಣಭಾಷ್ಯಂ ॥

ಮನೀಷಿಣೋ ಮನಸ ಈಶ್ವರಾ ಮೇಧಿರಾಸೋ ಮೇಧಾವಿನೋ ವಿಪಶ್ಚಿತಃ ಪ್ರಾಜ್ಞಾ ಯಜಮಾನಾ ಧೀಭಿಃ ಕರ್ಮಭಿರದ್ಮಸದ್ಯಾಯಾನ್ನಸ್ಯ ಭಜನಾಯಾಗ್ನಿಂ ಹಿನ್ವಿರೇ । ಪ್ರೀಣಯಂತಿ ॥

॥ ಪ್ರತಿಪದಾರ್ಥ ॥

**ಮನೀಷಿಣಃ**—ಸ್ಥಿರಸಂಕಲ್ಪವುಳ್ಳವರೂ । **ಮೇಧಿರಾಸಃ**—ಮೇಧಾವಿಗಳೂ । **ವಿಪಶ್ಚಿತಃ**—ಪ್ರಾಜ್ಞರೂ ಆದ ಯಜಮಾನರು । **ಧೀಭಿಃ**—ತಮ್ಮ ಕರ್ಮಗಳಿಂದ । **ಅದ್ಮಸದ್ಯಾಯ**—ಅನ್ನಪ್ರಾಪ್ತಿಗಾಗಿ । **ಅಗ್ನಿಂ**—ಅಗ್ನಿಯನ್ನು । **ಹಿನ್ವಿರೇ**—ಪೂಜಿಸಿ ತೃಪ್ತಿಪಡಿಸುತ್ತಾರೆ.

॥ ಭಾವಾರ್ಥ ॥

ಸ್ಥಿರಸಂಕಲ್ಪವುಳ್ಳವರೂ, ಮೇಧಾವಿಗಳೂ, ಪ್ರಾಜ್ಞರೂ ಆದ ಯಜಮಾನರು ತಮ್ಮ ಕರ್ಮಗಳಿಂದ ಅನ್ನಪ್ರಾಪ್ತಿಗಾಗಿ ಅಗ್ನಿಯನ್ನು ಪೂಜಿಸಿ ತೃಪ್ತಿಪಡಿಸುತ್ತಾರೆ.

English Translation.

The wise, the intelligent, the sagacious, propitiate Agni with sacrifices for the attainment of food.

॥ ಸಂಹಿತಾಪಾಠಃ ॥

ತಂ ತ್ವಾಮಜ್ಮೇಷು ವಾಜಿನಂ ತನ್ವಾನಾ ಅಗ್ನೇ ಅಧ್ವರಂ ।

ವಹ್ನಿಂ ಹೋತಾರಮೀಳತೇ ॥ ೨೦ ॥

॥ ಪದಪಾಠಃ ॥

ತಂ । ತ್ವಾಂ । ಅಜ್ಮೇಷು । ವಾಜಿನಂ । ತನ್ವಾನಾಃ । ಅಗ್ನೇ । ಅಧ್ವರಂ ।

ವಹ್ನಿಂ । ಹೋತಾರಂ । ಈಳತೇ ॥ ೨೦ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವಾಜಿನಂ ಬಲಿನಂ ವಹ್ನಿಂ ಹವಿಷಾಂ ವೋಢಾರಂ ಹೋತಾರಂ ದೇವಾನಾಮಾಹ್ವಾತಾರಂ ತಂ ಪ್ರಸಿದ್ಧಂ ತ್ವಾಮಜ್ಮೇಷು ಗೃಹೇಷ್ವಧ್ವರಂ ಯಜ್ಞಂ ತನ್ವಾನಾ ವಿಸ್ತಾರಯಂತೋ ಯಜಮಾನಾ ಈಳತೇ । ಸ್ತುವಂತಿ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಅಧ್ವರಂ**—ಯಜ್ಞವನ್ನು । **ತನ್ವಾನಾಃ**—ವಿಸ್ತಾರವಾಗಿ ನೆರವೇರಿಸುವ ಯಜಮಾನರು । **ವಾಜಿನಂ**—ಶಕ್ತಿಯುತನೂ । **ವಹ್ನಿಂ**—ಹವಿಸ್ಸನ್ನು ವಹಿಸುವವನೂ । **ಹೋತಾರಂ**—ದೇವತೆಗಳನ್ನೂ ಯಜ್ಞಕ್ಕೆ ಕರೆಯುವವನೂ । **ತಂ**—ಪ್ರಸಿದ್ಧನೂ ಆದ । **ತ್ವಾಂ**—ನಿನ್ನನ್ನು । **ಅಜ್ಮೇಷು**—ಯಜ್ಞಗೃಹಗಳಲ್ಲಿ । **ಈಳತೇ**—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಜ್ಞವನ್ನು ವಿಸ್ತಾರವಾಗಿ ನೆರವೇರಿಸುವ ಯಜಮಾನರು ಶಕ್ತಿಯುತನೂ, ಹವಿಸ್ಸನ್ನು ವಹಿಸುವವನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಪ್ರಸಿದ್ಧನೂ ಆದ ನಿನ್ನನ್ನು ಯಜ್ಞಗೃಹಗಳಲ್ಲಿ ಸ್ತುತಿಸುತ್ತಾರೆ.

English Translation.

Preparing the sacrifice in their mansions, (the worshippers) adore you, Agni, the powerful, the bearer (of the obation), the invoker of the gods.

॥ ಸಂಹಿತಾಪಾಠಃ ॥

ಪುರುತ್ರಾ ಹಿ ಸದೃಙ್ಙಸಿ ವಿಶೋ ವಿಶ್ವಾ ಅನು ಪ್ರಭುಃ ।
ಸಮತ್ಸು ತ್ವಾ ಹವಾಮಹೇ ॥ ೨೧ ॥

॥ ಪದಪಾಠಃ ॥

ಪುರುऽತ್ರಾ । ಹಿ । ಸऽದೃಙ್ । ಅಸಿ । ವಿಶಃ । ವಿಶ್ವಾಃ । ಅನು । ಪ್ರऽಭುಃ ।
ಸಮತ್ऽಸು । ತ್ವಾ । ಹವಾಮಹೇ ॥ ೨೧ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಂ ಹಿ ಯತಃ ಪ್ರಭು ಪ್ರಭುಃ । ಸುಲೋಪಶ್ಛಾಂದಸಃ ॥ ಪುರುತ್ರಾ ಬಹುಷು ಪ್ರದೇಶೇಷು ವಿಶ್ವಾಃ ಸರ್ವಾ ವಿಶಃ ಪ್ರಜಾ ಅನು ಸದೃಙ್ ಸಮಾನದರ್ಶನೋಽಸಿ ಅತಸ್ತ್ವಾಂ ತ್ವಾಂ ಸಮತ್ಸು ಸಂಗ್ರಾಮೇಷು ಹವಾಮಹೇ । ಹ್ವಯಾಮಃ ॥**

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) ಹಿ—ಯಾವ ನಿನ್ನ ಪ್ರಭಾವದಿಂದ | **ಪ್ರಭುಃ**—ನೀನೇ ಸರ್ವೇಶ್ವರನಾಗಿಯೂ | **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ | **ವಿಶ್ವಾಃ**—ಸಮಸ್ತವಾದ | **ವಿಶಃ**—ಪ್ರಜೆಗಳನ್ನು | **ಅನು ಸದೃಙ್**—ಒಂದೇ ಸಮನಾಗಿ ನೋಡುವವನಾಗಿಯೂ | **ಅಸಿ**—ಆಗಿದ್ದೀಯೋ (ಅದುದರಿಂದಲೇ) | **ತ್ವಾ**—ನಿನ್ನನ್ನು | **ಸಮತ್ಸು**—ಸಂಗ್ರಾಮಗಳಲ್ಲಿ | **ಹವಾಮಹೇ**—ನಾವೂ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಯಾವ ನಿನ್ನ ಪ್ರಭಾವದಿಂದ ನೀನೇ ಸರ್ವೇಶ್ವರನಾಗಿಯೂ, ಅನೇಕ ಪ್ರದೇಶಗಳಲ್ಲಿ ಸಮಸ್ತವಾದ ಪ್ರಜೆಗಳನ್ನೂ ಒಂದೇ ಸಮನಾಗಿ ನೋಡುವವನಾಗಿಯೂ ಆಗಿದ್ದೀಯೋ ಆದುದರಿಂದಲೇ, ನಿನ್ನನ್ನು ಸಂಗ್ರಾಮಗಳಲ್ಲಿ ನಾವೂ ಕರೆಯುತ್ತೇವೆ.

## English Translation.

You are the lord, you behold all people alike in many places: we therefore invoke you in battles.

॥ ಸಂಹಿತಾಪಾಠಃ ॥

ತಮೀಳಿಷ್ವ ಯ ಆಹುತೋಽಗ್ನಿರ್ವಿಭ್ರಾಜತೇ ಘೃತೈಃ ।
ಇಮಂ ನಃ ಶೃಣವದ್ಧವಂ ॥ ೨೨ ॥

॥ ಪದಪಾಠಃ ॥

**ತಂ । ಈಳಿಷ್ವ । ಯಃ । ಆಽಹುತಃ । ಅಗ್ನಿಃ । ವಿಽಭ್ರಾಜತೇ । ಘೃತೈಃ ।**
**ಇಮಂ । ನಃ । ಶೃಣವತ್ । ಹವಂ ॥ ೨೨ ॥**

॥ ಸಾಯಣಭಾಷ್ಯಂ ॥

**ಯೋಽಗ್ನಿರ್ಘೃತೈಃ ಸಹಾಹುತೋ ವಿಭ್ರಾಜತೇ ಯಶ್ಚ ನೋಽಸ್ಮಾಕಮಿಮಂ ಹವಮಾಹ್ವಾನಂ ಶೃಣವತ್ ಶೃಣೋತಿ ತಮಗ್ನಿಮೀಳಿಷ್ವ । ಸ್ತುಹಿ ॥**

॥ ಪ್ರತಿಪದಾರ್ಥ ॥

**ಯಃ ಅಗ್ನಿಃ**—ಯಾವ ಅಗ್ನಿಯು | **ಘೃತೈಃ**—ಆಜ್ಯರೂಪವಾದ ಹವಿಸ್ಸುಗಳಿಂದ | **ಆಹುತಃ**—ಆಹುತಿಯನ್ನರ್ಪಿಸಲ್ಪಟ್ಟು | **ವಿಭ್ರಾಜತೇ**—ಪ್ರಕಾಶಿಸುವನೋ ಮತ್ತು | **ಯಃ**—ಯಾರು | **ನಃ**—ನಮ್ಮ |

**ಇಮಂ ಹವಂ**—ಈ ಆಹ್ವಾನವನ್ನು । **ಶೃಣವತ್**—ಕೇಳುವನೋ । **ತಂ**—ಆ ಅಗ್ನಿಯನ್ನು । **ಈಳಿಷ್ವ**—ಸ್ತುತಿಸು.

॥ ಭಾವಾರ್ಥ ॥

ಯಾವ ಅಗ್ನಿಯು ಆಜ್ಯರೂಪವಾದ ಹವಿಸ್ಸುಗಳಿಂದ ಆಹುತಿಯನ್ನರ್ಪಿಸಲ್ಪಟ್ಟು ಪ್ರಕಾಶಿಸುವನೋ ಮತ್ತು ಯಾರು ನಮ್ಮ ಈ ಆಹ್ವಾನವನ್ನು ಕೇಳುವನೋ ಆ ಅಗ್ನಿಯನ್ನು ಸ್ತುತಿಸು.

English Translation.

Adore that Agni who shines brightly when fed with offerings of butter, who hears this our invocation.

॥ ಸಂಹಿತಾಪಾಠಃ ॥

ತಂ ತ್ವಾ ವಯಂ ಹವಾಮಹೇ ಶೃಣ್ವಂತಂ ಜಾತವೇದಸಂ ।

ಅಗ್ನೇ ಘ್ನಂತಮಪ ದ್ವಿಷಃ ॥ ೨೩ ॥

॥ ಪದಪಾಠಃ ॥

ತಂ । ತ್ವಾ । ವಯಂ । ಹವಾಮಹೇ । ಶೃಣ್ವಂತಂ । ಜಾತऽವೇದಸಂ ।

ಅಗ್ನೇ । ಘ್ನಂತಂ । ಅಪ । ದ್ವಿಷಃ ॥ ೨೩ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಜಾತವೇದಸಂ ಜಾತಧನಂ ಜಾತಪ್ರಜ್ಞಂ ವಾ ದ್ವಿಷಃ ಶತ್ರೂನಪ ಘ್ನಂತಂ ಹಿಂಸಂತಂ ಶೃಣ್ವಂತಮಸ್ಮದೀಯಮಾಹ್ವಾನಂ ಶೃಣ್ವಂತಂ ಚ ತ್ವಾಂ ವಯಮಾಂಗಿರಸಾ ಹವಾಮಹೇ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಜಾತವೇದಸಂ**—ಜಾತವೇದೋರೂಪನೂ । **ದ್ವಿಷಃ**—ಶತ್ರುಗಳನ್ನು । **ಅಪ ಘ್ನಂತಂ**—ನಾಶಮಾಡುವವನೂ । **ಶೃಣ್ವಂತಂ**—ನಮ್ಮ ಸ್ತುತಿಗಳನ್ನು ಕೇಳುವವನೂ ಆದ । **ತಂ ತ್ವಾ**—ಅದೇ ನಿನ್ನನ್ನು । **ವಯಂ**—ನಾವು । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಜಾತವೇದೋರೂಪನೂ, ಶತ್ರುಗಳನ್ನು ನಾಶಮಾಡುವವನೂ, ನಮ್ಮ ಸ್ತುತಿಗಳನ್ನು ಕೇಳುವವನೂ ಆದ ಅದೇ ಪ್ರಸಿದ್ಧನಾದ ನಿನ್ನನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

We invoke you, Agni, who are Jatavedas, listening (to our praises), exterminating our foes

|| ಸಂಹಿತಾಪಾಠಃ ||

ವಿಶಾಂ ರಾಜಾನಮದ್ಭುತಮಧ್ಯಕ್ಷಂ ಧರ್ಮಣಾಮಿಮಂ ।
ಅಗ್ನಿಮೀಳೇ ಸ ಉ ಶ್ರವತ್ || ೨೪ ||

|| ಪದಪಾಠಃ ||

ವಿಶಾಂ । ರಾಜಾನಂ । ಅದ್ಭುತಂ । ಅಧಿಽಅಕ್ಷಂ । ಧರ್ಮಣಾಂ । ಇಮಂ ।
ಅಗ್ನಿಂ । ಈಳೇ । ಸಃ । ಊಂ ಇತಿ । ಶ್ರವತ್ || ೨೪ ||

|| ಸಾಯಣಭಾಷ್ಯಂ ||

**ವಿಶಾಂ ಪ್ರಜಾನಾಂ ರಾಜಾನಮೀಶ್ವರಮದ್ಭುತಂ ಮಹಾಂತಂ ಧರ್ಮಣಾಂ ಕರ್ಮಣಾಮಧ್ಯಕ್ಷ-ಮನುಸಂಧಾತಾರಮಿಮಮಗ್ನಿಮೀಳೇ । ಸ್ತೌಮಿ । ಸ ಉ ಸ ಏವಾಗ್ನಿಃ ಶ್ರವತ್ । ಅಸ್ಮದೀಯಾಂ ಸ್ತುತಿಂ ಶೃಣೋತು ||**

|| ಪ್ರತಿಪದಾರ್ಥ ||

**ವಿಶಾಂ**—ಪ್ರಜೆಗಳಿಗೆಲ್ಲಾ । **ರಾಜಾನಂ**—ಈಶ್ವರನೂ । **ಅದ್ಭುತಂ**—ಮಹತ್ಸ್ವರೂಪವುಳ್ಳವನೂ । **ಧರ್ಮಣಾಂ**—ಸಕಲ ಕರ್ಮಗಳಿಗೂ । **ಅಧ್ಯಕ್ಷಂ**—ಪ್ರೇರಕನಾದ ನೇತೃವೂ ಆದ । **ಇಮಂ ಅಗ್ನಿಂ**—ಈ ಅಗ್ನಿಯನ್ನೇ । **ಈಳೇ**—ಸ್ತುತಿಸುತ್ತೇನೆ । **ಸ ಉ**—ಅದೇ ಅಗ್ನಿಯು । **ಶ್ರವತ್**—ನಮ್ಮ ಸ್ತುತಿಯನ್ನು ಕೇಳಲಿ.

|| ಭಾವಾರ್ಥ ||

ಪ್ರಜೆಗಳಿಗೆಲ್ಲಾ ಒಡೆಯನೂ, ಮಹತ್ಸ್ವರೂಪವುಳ್ಳವನೂ, ಸಕಲ ಕರ್ಮಗಳಿಗೂ ಪ್ರೇರಕನಾದ ನೇತೃವೂ ಆದ ಈ ಅಗ್ನಿಯನ್ನೇ ಸ್ತುತಿಸುತ್ತೇನೆ. ಅದೇ ಅಗ್ನಿಯು ನಮ್ಮ ಸ್ತುತಿಗಳನ್ನು ಕೇಳಲಿ.

## English Translations.

I praise this Agni, the severign of men, the wonderful, the superintendent of holy acts : may he bear me.

|| ಸಂಹಿತಾಪಾಠಃ ||

ಅಗ್ನಿಂ ವಿಶ್ವಾಯುವೇಪಸಂ ಮರ್ಯಂ ನ ವಾಜಿನಂ ಹಿತಂ ।
ಸಪ್ತಿಂ ನ ವಾಜಯಾಮಸಿ || ೨೫ ||

॥ ಪದಪಾಠಃ ॥

ಅಗ್ನಿಂ । ವಿಶ್ವಾಯುಽವೇಪಸಂ । ಮರ್ಯಂ । ನ । ವಾಜಿನಂ । ಹಿತಂ ।

ಸಪ್ತಿಂ । ನ । ವಾಜಯಾಮಸಿ ॥ ೨೫ ॥

॥ ಸಾಯಣಭಾಷ್ಯಂ ॥

ವಿಶ್ವಾಯುವೇಪಸಂ ಸರ್ವಗತಬಲಮಗ್ನಿಂ ವಾಜಿನಂ ಬಲಿನಂ ಮರ್ಯಂ ನ ಮನುಷ್ಯಮಿವ ಹಿತಂ ಸಪ್ತಿಂ ನಾಶ್ವಮಿವ ವಾಜಯಾಮಸಿ । ಸ್ತುತಿಭಿರ್ಹವಿರ್ಭಿಶ್ಚ ಬಲಿನಂ ಕುರ್ಮಃ ॥

॥ ಪ್ರತಿಪದಾರ್ಥ ॥

**ಮರ್ಯಂ ನ**—ಮಾನವನಂತೆ । **ಹಿತಂ**—ಹಿತಕಾರಕನೂ । **ಸಪ್ತಿಂ ನ**—ಅಶ್ವದಂತೆ । **ವಾಜಿನಂ**—ಶಕ್ತಿಯುತನೂ । **ವಿಶ್ವಾಯುವೇಪಸಂ**—ಸರ್ವತ್ರವ್ಯಾಪ್ತವಾದ ಶಕ್ತಿಯುಳ್ಳವನೂ ಆದ । **ಅಗ್ನಿಂ**—ಅಗ್ನಿಯನ್ನು । **ವಾಜಯಾಮಸಿ**—ಹವಿಸ್ಸುಗಳಿಂದಲೂ ಸ್ತುತಿಗಳಿಂದಲೂ ಚೈತನ್ಯಯುಕ್ತನಾಗುವಂತೆ ಮಾಡುತ್ತೇವೆ.

॥ ಭಾವಾರ್ಥ ॥

ಮಾನವನಂತೆ ಹಿತಕಾರಕನೂ, ಅಶ್ವದಂತೆ ಶಕ್ತಿಯುತನೂ, ಸರ್ವತ್ರವ್ಯಾಪ್ತವಾದ ಶಕ್ತಿಯುಳ್ಳವನೂ ಆದ ಅಗ್ನಿಯನ್ನು ಹವಿಸ್ಸುಗಳಿಂದಲೂ, ಸ್ತುತಿಗಳಿಂದಲೂ ನಾವು ಚೈತನ್ಯಯುಕ್ತನಾಗುವಂತೆ ಮಾಡುತ್ತೇವೆ.

English Translation.

We invigorate like a horse that (Agni) whose might is everywhere present; who is noble, strong, and benevolent.

॥ ಸಂಹಿತಾಪಾಠಃ ॥

ಘ್ನನ್ಮೃಧ್ರಾಣ್ಯಪ ದ್ವಿಷೋ ದಹನ್ರಕ್ಷಾಂಸಿ ವಿಶ್ವಹಾ ।

ಅಗ್ನೇ ತಿಗ್ಮೇನ ದೀದಿಹಿ ॥ ೨೬ ॥

॥ ಪದಪಾಠಃ ॥

ಘ್ನನ್ । ಮೃಧ್ರಾಣಿ । ಅಪ । ದ್ವಿಷಃ । ದಹನ್ । ರಕ್ಷಾಂಸಿ । ವಿಶ್ವಹಾ ।

ಅಗ್ನೇ । ತಿಗ್ಮೇನ । ದೀದಿಹಿ ॥ ೨೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಮೃಧ್ರಾಣಿ ಹಿಂಸಕಾನ್ ದ್ವಿಷೋ ದ್ವೇಷ್ಟೄನಪ ಘ್ನನ್ ಹಿಂಸನ್ ವಿಶ್ವಹಾ ಸರ್ವದಾ ರಕ್ಷಾಂಸಿ ಚ ದಹಂಸ್ತಿಗ್ಮೇನ ತೀಕ್ಷ್ಣೇನ ತೇಜಸಾ ದೀದಿಹಿ । ದೀಪ್ಯಸ್ವ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ | **ಮೃಧ್ರಾಣಿ**—ಹಿಂಸಕರಾದ | **ದ್ವಿಷಃ**—ಶತ್ರುಗಳನ್ನು | **ಅಪ ಘ್ನನ್**—ನಾಶಮಾಡುತ್ತಲೂ | **ವಿಶ್ವಹಾ**—ಯಾವಾಗಲೂ | **ರಕ್ಷಾಂಸಿ**—ರಾಕ್ಷಸರನ್ನು | **ದಹನ್**—**ದಹಿಸುತ್ತಲೂ** | **ತಿಗ್ಮೇನ**—ನಿನ್ನ ತೀಕ್ಷ್ಣವಾದ ತೇಜಸ್ಸಿನಿಂದ | **ದೀದಿಹಿ**—ಪ್ರಕಾಶಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಹಿಂಸಕರಾದ ಶತ್ರುಗಳನ್ನು ನಾಶಮಾಡುತ್ತಲೂ, ಯಾವಾಗಲೂ **ರಾಕ್ಷಸರನ್ನು** ದಹಿಸುತ್ತಲೂ, ನಿನ್ನ ತೀಕ್ಷ್ಣವಾದ ತೇಜಸ್ಸಿನಿಂದ ಪ್ರಕಾಶಿಸು

English Translation.

Slaying the malignant, (driving away) our enemies, **everywhere** the Rakshasas, do you, Agni, blaze forth with bright (radiance).

॥ ಸಂಹಿತಾಪಾಠಃ ॥

ಯಂ ತ್ವಾ ಜನಾಸ ಇಂಧತೇ ಮನುಷ್ವದಂಗಿರಸ್ತಮ ।

ಅಗ್ನೇ ಸ ಬೋಧಿ ಮೇ ವಚಃ ॥ ೨೭ ॥

॥ ಪದಪಾಠಃ ॥

**ಯಂ । ತ್ವಾ । ಜನಾಸಃ । ಇಂಧತೇ । ಮನುಷ್ವತ್ । ಅಂಗಿರಃऽತಮ ।**

**ಅಗ್ನೇ । ಸಃ । ಬೋಧಿ । ಮೇ । ವಚಃ ॥ ೨೭ ॥**

॥ ಸಾಯಣಭಾಷ್ಯಂ ॥

**ಹೇ ಅಂಗಿರಸ್ತಮಾಗ್ನೇ ಯಂ ತ್ವಾ ತ್ವಾಂ ಜನಾಸೋ ಜನಾ ಮನುಷ್ವದ್ಯಥಾ ಮನುಸ್ತಥೇಂಧತೇ ದೀಪಯಂತಿ ಸ ತ್ವಂ ಮೇ ಮದೀಯಂ ವಚಃ ಸ್ತುತಿಂ ಬೋಧಿ । ಬುಧ್ಯಸ್ವ ॥**

॥ ಪ್ರತಿಪದಾರ್ಥ ॥

**ಅಂಗಿರಸ್ತಮ**—ಅಂಗಿರಸ್ಸುಗಳಲ್ಲೆಲ್ಲಾ ಶ್ರೇಷ್ಠನಾದ | **ಅಗ್ನೇ**—ಎಲೈ ಅಗ್ನಿಯೇ | **ಯಂ**—**ಯಾವ** | **ತ್ವಾ**—ನಿನ್ನನ್ನು | **ಜನಾಸಃ**—ಮಾನವರೆಲ್ಲ | **ಮನುಷ್ವತ್**—ಮನುವು ಮಾಡಿದಂತೆಯೇ | **ಇಂಧತೇ**—ಪ್ರಜ್ವಲಿಸುವಂತೆ ಮಾಡುವರೋ | **ಸಃ**—ಅಂತಹ ನೀನು | **ಮೇ**—ನನ್ನ | **ವಚಃ**—ಸ್ತುತಿಯನ್ನು | **ಬೋಧಿ**—**ತಿಳಿ.**

॥ ಭಾವಾರ್ಥ ॥

ಅಂಗಿರಸ್ಸುಗಳಲ್ಲೆಲ್ಲಾ ಶ್ರೇಷ್ಠನಾದ ಎಲೈ ಅಗ್ನಿಯೇ, ಯಾವ ನಿನ್ನನ್ನು ಮಾನವರೆಲ್ಲ **ಮನುವು ಹಿಂದೆ** ಮಾಡಿದಂತೆಯೇ ಪ್ರಜ್ವಲಿಸುವಂತೆ ಮಾಡುವರೋ ಅಂತಹ ನೀನು ನನ್ನ ಸ್ತುತಿಯನ್ನು ತಿಳಿ.

## English Translation.

Chief of the Angirasas, whom men kindle as did Manus ; Agni, hear my words.

|| ಸಂಹಿತಾಪಾಠಃ ||

ಯದಗ್ನೇ ದಿವಿಜಾ ಅಸ್ಯಪ್ಸುಜಾ ವಾ ಸಹಸ್ಕೃತ ।

ತಂ ತ್ವಾ ಗೀರ್ಭಿರ್ಹವಾಮಹೇ ॥ ೨೮ ॥

|| ಪದಪಾಠಃ ||

ಯತ್ । ಅಗ್ನೇ । ದಿವಿऽಜಾಃ । ಅಸಿ । ಅಪ್ಸುऽಜಾಃ । ವಾ । ಸಹಃऽಕೃತ ।

ತಂ । ತ್ವಾ । ಗೀಃऽಭಿಃ । ಹವಾಮಹೇ ॥ ೨೮ ॥

|| ಸಾಯಣಭಾಷ್ಯಂ ||

**ಹೇ ಅಗ್ನೇ ಯದ್ಯಸ್ತ್ವಂ ದಿವಿಜಾ ದಿವಿಭವೋऽಸಿ ಭವಸಿ ಅಪ್ಸುಜಾ ವಾಂತರಿಕ್ಷಜಾತಶ್ಚ ಭವಸಿ ಸಹಸ್ಕೃತಃ ಸಹಸಾ ಬಲೇನ ಕೃತಶ್ಚಾಸಿ ತಂ ತ್ವಾ ತ್ವಾಮಗ್ನಿಂ ಗೀರ್ಭಿಃ ಸ್ತುತಿಭಿರ್ಹವಾಮಹೇ । ಹ್ವಯಾಮಃ ॥**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ಯತ್**—ಯಾವ ನೀನು । **ದಿವಿಜಾಃ**—ದೇವಲೋಕದಲ್ಲಿ ಉತ್ಪನ್ನನಾಗಿ । **ಅಸಿ**—ಆಗಿದ್ದೀಯೋ । **ಅಪ್ಸುಜಾ ವಾ**—ಅಂತರಿಕ್ಷದಲ್ಲಿ ಉತ್ಪನ್ನನಾಗಿದ್ದೀಯೋ । **ಸಹಸ್ಕೃತಃ**—ಶಕ್ತಿಯಿಂದ:ಉತ್ಪನ್ನನಾಗಿದ್ದೀಯೋ । **ತಂ ತ್ವಾ**—ಅಂತಹ ನಿನ್ನನ್ನು । **ಗೀರ್ಭಿಃ**—ಸ್ತುತಿಗಳಿಂದ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ಎಲೈ ಅಗ್ನಿಯೇ, ಯಾವ ನೀನು ದೇವಲೋಕದಲ್ಲಿ ಉತ್ಪನ್ನನಾಗಿದ್ದೀಯೋ, ಅಂತರಿಕ್ಷದಲ್ಲಿ ಉತ್ಪನ್ನನಾಗಿದ್ದೀಯೋ, ಶಕ್ತ್ಯುತ್ಪನ್ನನಾಗಿದ್ದೀಯೋ ಅಂತಹ ನಿನ್ನನ್ನು ಸ್ತುತಿಗಳಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

We worship with praises you, Agni, who are born in heaven or in the waters, elicited by strength.

|| ಸಂಹಿತಾಪಾಠಃ ||

ತುಭ್ಯಂ ಘೇತ್ತೇ ಜನಾ ಇಮೇ ವಿಶ್ವಾಃ ಸುಕ್ಷಿತಯಃ ಪೃಥಕ್ ।
ಧಾಸಿಂ ಹಿನ್ವಂತ್ಯತ್ತವೇ ॥ ೨೯ ॥

|| ಪದಪಾಠಃ ||

ತುಭ್ಯಂ । ಘ । ಇತ್ । ತೇ । ಜನಾಃ । ಇಮೇ । ವಿಶ್ವಾಃ । ಸುಽಕ್ಷಿತಯಃ । ಪೃಥಕ್ ।
ಧಾಸಿಂ । ಹಿನ್ವಂತಿ । ಅತ್ತವೇ ॥ ೨೯ ॥

|| ಸಾಯಣಭಾಷ್ಯಂ ||

**ಹೇ ಅಗ್ನೇ ತುಭ್ಯಂ ಘ ತ್ವದರ್ಥಮೇವ ತ ಇಮೇ ಮಯಾ ದೃಶ್ಯಮಾನಾ ಜನಾ ವಿಶ್ವಾಃ ಸರ್ವಾಃ ಸುಕ್ಷಿತಯಃ ಪ್ರಜಾಶ್ಚ ಧಾಸಿಮನ್ನಂ ಹವಿರತ್ತವೇಽದನಾಯ ಪೃಥಗ್ಘಿನ್ವಂತಿ । ಪ್ರೇರಯಂತಿ ॥**

|| ಪ್ರತಿಪದಾರ್ಥ ||

(ಎಲೈ ಅಗ್ನಿಯೇ) । **ವಿಶ್ವಾಃ**—ಸಮಸ್ತರೂ । **ಸುಕ್ಷಿತಯಃ**—ಪೃಥ್ವಿಯ ಮೇಲೆ ವಾಸಿಸುವವರೂ । **ತೇ**—ಪ್ರಸಿದ್ಧರೂ ಆದ । **ಇಮೇ ಜನಾಃ**—ಈ ಮಾನವ ಜನರೆಲ್ಲಾ । **ತುಭ್ಯಂ ಘೇತ್**—ನಿನ್ನನ್ನೇ ಉದ್ದೇಶಿಸಿ । **ಅತ್ತವೇ**—ನಿನ್ನ ಭಕ್ಷಣಾರ್ಥವಾಗಿ । **ಧಾಸಿಂ**—ಅನ್ನವನ್ನು । **ಪೃಥಕ್**—ಬೇರೆ ಬೇರೆಯಾಗಿ । **ಹಿನ್ವಂತಿ**—ಅರ್ಪಿಸುತ್ತಾರೆ.

|| ಭಾವಾರ್ಥ ||

ಎಲೈ ಅಗ್ನಿಯೇ, ನಮ್ಮ ಮುಂಭಾಗದಲ್ಲಿರುವವರೂ, ಪೃಥ್ವೀನಿವಾಸಿಗಳೂ ಆದ ಈ ಎಲ್ಲಾ ಮಾನವರೂ ಸಹ ನಿನ್ನನ್ನೇ ಉದ್ದೇಶಿಸಿ ನಿನ್ನ ಭಕ್ಷಣಾರ್ಥವಾಗಿ ನಿನಗೆ ಅನ್ನವನ್ನು ವೈಯಕ್ತಿಕವಾಗಿ ಅರ್ಪಿಸುತ್ತಾರೆ.

## English Translation.

All these people, the inhabitants (of the earth), offer severally to you (sacrificial) food for your eating and enjoyment.

॥ ಸಂಹಿತಾಪಾಠಃ ॥

ತೇ ಘೇದಗ್ನೇ ಸ್ವಾಧ್ಯೋಽಹಾ ವಿಶ್ವಾ ನೃಚಕ್ಷಸಃ ।
ತರಂತಃ ಸ್ಯಾಮ ದುರ್ಗಹಾ ॥ ೩೦ ॥

|| ಪದಪಾಠಃ ||

**ತೇ । ಘ । ಇತ್ । ಅಗ್ನೇ । ಸುಽಆಧ್ಯಃ । ಅಹಾ । ವಿಶ್ವಾ । ನೃಽಚಕ್ಷಸಃ ।**

**ತರಂತಃ । ಸ್ಯಾಮ । ದುಃಽಗಹಾ ॥ ೩೦ ॥**

|| ಸಾಯಣಭಾಷ್ಯಂ ||

**ಹೇ ಅಗ್ನೇ ತೇ ಘೇತ್ತ್ವದರ್ಥಮೇವ ಖಲು ವಯಂ ಸ್ವಾಧ್ಯಃ ಸುಕರ್ಮಾಣಃ ಸಂತೋ ವಿಶ್ವಾ ವಿಶ್ವಾನ್ಯಹಾಹಾನಿ ನೃಚಕ್ಷಸೋ ದ್ರಷ್ಟಾರಶ್ಚ ದುರ್ಗಹಾ ದುಃಖೇನ ಗಾಹಯಿತವ್ಯಾನಿ ತರಂತಃ ಸ್ಯಾಮ । ಭವೇಮ ॥**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ತೇ ಘೇತ್**—ನಿನ್ನ ಪೂಜಾರ್ಥವಾಗಿಯೇ । (**ವಯಂ**—ನಾವು) । **ಸ್ವಾಧ್ಯಃ**—ಉತ್ತಮವಾದ ಕರ್ಮವುಳ್ಳವರಾಗಿಯೂ । **ವಿಶ್ವಾ**—ಸಮಸ್ತವಾದ । **ಅಹಾ**—ಅಹಸ್ಸುಗಳಲ್ಲಿಯೂ । **ನೃ ಚಕ್ಷಸಃ**—ಉತ್ತಮವಾದ ಮಾನವದೃಷ್ಟಿಶಕ್ತಿಯುಳ್ಳವರಾಗಿಯೂ । **ದುರ್ಗಹಾ**—ಕಠಿನವಾದ ದುಃಖಸನ್ನಿವೇಶಗಳನ್ನು । **ತರಂತಃ**—ದಾಟುತ್ತಾ । **ಸ್ಯಾಮ**—ಇರುವಂತಾಗಲಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನಿನ್ನ ಪೂಜಾರ್ಥವಾಗಿಯೇ, ನಾವು ಉತ್ತಮವಾದ ಕರ್ಮವುಳ್ಳವರಾಗಿಯೂ, ಸಮಸ್ತವಾದ ಅಹಸ್ಸುಗಳಲ್ಲಿಯೂ ಉತ್ತಮವಾದ ಮಾನವದೃಷ್ಟಿಶಕ್ತಿಯುಳ್ಳವರಾಗಿಯೂ, ಕಠಿನವಾದ ದುಃಖಸನ್ನಿವೇಶಗಳನ್ನು ದಾಟುತ್ತಾ ಇರುವಂತಾಗಲಿ.

## English Translation.

Agni, through you, may we, skilled in sacrifices and beholding men all our days, pass through (all) difficulties.

। ಸಂಹಿತಾಪಾಠಃ ।

**ಅಗ್ನಿಂ ಮಂದ್ರಂ ಪುರುಪ್ರಿಯಂ ಶೀರಂ ಪಾವಕಶೋಚಿಷಂ ।**

**ಹೃದ್ಭಿರ್ಮಂದ್ರೇಭಿರೀಮಹೇ ॥ ೩೧ ॥**

॥ ಪದಪಾಠಃ ॥

**ಅಗ್ನಿಂ । ಮಂದ್ರಂ । ಪುರುಽಪ್ರಿಯಂ । ಶೀರಂ । ಪಾವಕಽಶೋಚಿಷಂ ।**

**ಹೃತ್ಽಭಿಃ । ಮಂದ್ರೇಭಿಃ । ಈಮಹೇ ॥ ೩೧ ॥**

॥ ಸಾಯಣಭಾಷ್ಯಂ ॥

ಮಂದ್ರಂ ಮಾದನಂ ಪುರುಪ್ರಿಯಂ ಬಹುಪ್ರಿಯಂ ಶೀರಂ ಯಜ್ಞೇಷು ಶಯನಶೀಲಂ ಪಾವಕಶೋಚಿಷಂ ಪಾವಕದೀಪ್ತಿಮಗ್ನಿಂ ಹೃದ್ಭಿರ್ಮನೋಹರೈರ್ಮಂದ್ರೈರ್ಮಾದನೈಃ ಸ್ತೋತ್ರೈರೀಮಹೇ । ಯಚಾಮಹೇ ॥

॥ ಪ್ರತಿಪದಾರ್ಥ ॥

**ಮಂದ್ರಂ**—ಹರ್ಷಕಾರಕನೂ । **ಪುರುಪ್ರಿಯಂ**—ಅನೇಕರಿಗೆ ಪ್ರಿಯನೂ । **ಶೀರಂ**—ಯಜ್ಞಪ್ರದೇಶಗಳಲ್ಲಿ ವ್ಯಾಪಿಸಿರುವವನೂ । **ಪಾವಕಶೋಚಿಷಂ**—ಶುದ್ಧಿಕಾರಕವಾದ ಪ್ರಭೆಯುಳ್ಳವನೂ ಆದ । **ಅಗ್ನಿಂ**—ಅಗ್ನಿಯನ್ನು । **ಹೃದ್ಭಿಃ**—ಮನಃಪೂರ್ವಕವಾಗಿ ಪಠಿತವಾದವೂ । **ಮಂದ್ರೇಭಿಃ**—ಹರ್ಷವನ್ನುಂಟುಮಾಡುವುವೂ ಆದ ಸ್ತುತಿಗಳಿಂದ । **ಈಮಹೇ**—ಸ್ತುತಿಸುತ್ತೇವೆ.

॥ ಭಾವಾರ್ಥ ॥

ಹರ್ಷಕಾರಕನೂ, ಅನೇಕರಿಗೆ ಪ್ರಿಯನೂ, ಯಜ್ಞಪ್ರದೇಶಗಳಲ್ಲಿ ವ್ಯಾಪಿಸಿರುವವನೂ, ಶುದ್ಧಿಕಾರಕವಾದ ಪ್ರಭೆಯುಳ್ಳವನೂ ಆದ ಅಗ್ನಿಯನ್ನು ಮನಃಪೂರ್ವಕವಾಗಿ ಪಠಿತವಾದವೂ, ಹರ್ಷವನ್ನುಂಟುಮಾಡುವುವೂ ಆದ ಸ್ತುತಿಗಳಿಂದ ಸ್ತುತಿಸುತ್ತೇವೆ.

English Translation.

We invoke with cheerful and delightful (hymns) the gladdening Agni, dear to many, who abides in the sacrifice with purifying brilliance.

॥ ವಿಶೇಷವಿಷಯಗಳು ॥

**ಶೀರಂ ಪಾವಕಶೋಚಿಷಂ**—ಈ ಶಬ್ದಗಳ ಅರ್ಥವಿವರಣೆಯನ್ನು ಮಾಡುತ್ತಾ ಯಾಸ್ಕರು ತಮ್ಮ ನಿರುಕ್ತದಲ್ಲಿ—

**ಶೀರಂ ಪಾವಕಶೋಚಿಷಂ । ಪಾವಕದೀಪ್ತಿಂ । ಅನುಶಾಯಿನಮಿತಿ ವಾಶಿನಮಿತಿ ವಾ ॥**

(ನೈ ೪-೧೪)

ಇಲ್ಲಿ ಶೀರಂ ಎಂದರೆ ಅಗ್ನಿಯ ಹೆಸರು ಎಂದರೆ, ಅಗ್ನಿಯ ಗುಣಗಳನ್ನು ವಿವರಿಸುವುದರಿಂದ ಶೀರಂ ಎಂದು ಅಗ್ನಿಯನ್ನು ಸೂಚಿಸುವುದಕ್ಕಾಗಿ ಉಪಯೋಗಿಸುವ ಶಬ್ದವಾಗಿದೆ. ಸರ್ವಭೂತಜಾತ(ಪ್ರಾಣಿ)ಗಳಲ್ಲಿಯೂ ಪ್ರವೇಶಮಾಡಿ ಔಷ್ಣ್ಯರೂಪದಿಂದ ಇರುವವನು ಅಥವಾ ಸಕಲ ಪ್ರಾಣಿಗಳನ್ನೂ ವ್ಯಾಪಿಸಿ ಇರುವವನಾದ್ದರಿಂದ ಅಗ್ನಿಯನ್ನು ಶೀರಂ ಎಂಬ ಶಬ್ದದಿಂದ ನಿರ್ದೇಶಿಸುವುದು ಸಹಜವಾಗಿದೆ. **ಪಾವಕಶೋಚಿಷಂ** ಎಂದರೆ **ಪಾವಕದೀಪ್ತಿಂ** ಅತ್ಯಂತ ಪ್ರಕಾಶಮಾನವಾದ ಕಾಂತಿಯಿಂದ ಬೆಳಗುತ್ತಿರುವವನು ಎಂದರ್ಥವು.

॥ ಸಂಹಿತಾಪಾಠಃ ॥

**ಸ ತ್ವಮಗ್ನೇ ವಿಭಾವಸುಃ ಸೃಜನ್ತ್ಸೂರ್ಯೋ ನ ರಶ್ಮಿಭಿಃ ।**

**ಶರ್ಧನ್ತಮಾಂಸಿ ಜಿಘ್ನಸೇ ॥ ೩೨ ॥**

॥ ಪದಪಾಠಃ ॥

ಸಃ । ತ್ವಂ । ಅಗ್ನೇ । ವಿಭಾऽವಸುಃ । ಸೃಜನ್ । ಸೂರ್ಯಃ । ನ । ರಶ್ಮಿऽಭಿಃ ।

ಶರ್ಧನ್ । ತಮಾಂಸಿ । ಜಿಘ್ನಸೇ ॥ ೩೨ ॥

|| ಸಾಯಣಭಾಷ್ಯಂ ||

ಹೇ ಅಗ್ನೇ ವಿಭಾವಸುರ್ದೀಪ್ತಿರೋಚನಃ ಸ ಪ್ರಸಿದ್ಧಸ್ತ್ವಂ ಸೃಜನ್ನುದ್ಯನ್ ಸೂರ್ಯೋ ನ ಯಥಾ ಸೂರ್ಯಸ್ತಥಾ ರಶ್ಮಿಭಿಃ ಶರ್ಧನ್ ಬಲಂ ಕುರ್ವಂಸ್ತಮಾಂಸಿ ಜಿಘ್ನಸೇ । ನಾಶಯಸಿ ॥

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ವಿಭಾವಸುಃ**—ಪ್ರಭೆಯೇ ಧನವಾಗಿ ಉಳ್ಳವನೂ । **ಸಃ**—ಪ್ರಸಿದ್ಧನೂ ಆದ । **ತ್ವಂ**—ನೀನು । **ಸೂರ್ಯೋ ನ**—ಸೂರ್ಯನಂತೆ । **ಸೃಜನ್**—ಉದಯವನ್ನು ಹೊಂದುತ್ತಾ । **ರಶ್ಮಿಭಿಃ**—ನಿನ್ನ ಕಿರಣಗಳಿಂದ । **ಶರ್ಧನ್**—ಶಕ್ತಿಯನ್ನು ಹೊಂದಿ । **ತಮಾಂಸಿ**—ಕತ್ತಲೆಗಳನ್ನು । **ಜಿಘ್ನಸೇ**—ನಾಶಪಡಿಸುತ್ತೀಯೆ.

|| ಭಾವಾರ್ಥ ||

ಎಲೈ ಅಗ್ನಿಯೇ, ಪ್ರಭೆಯೇ ಧನವಾಗಿ ಉಳ್ಳವನೂ, ಪ್ರಸಿದ್ಧನೂ ಆದ ನೀನು ಸೂರ್ಯನಂತೆ ಉದಯವನ್ನು ಹೊಂದುತ್ತಾ ನಿನ್ನ ಕಿರಣಗಳಿಂದ ಶಕ್ತಿಯನ್ನು ಹೊಂದಿ ಕತ್ತಲೆಗಳನ್ನು ನಾಶಪಡಿಸುತ್ತೀಯೆ.

English Translation.

Shining forth, Agni, like the rising sun displaying your strength by your beams, you destroy the darkeess.

॥ ಸಂಹಿತಾಪಾಠಃ ॥

ತತ್ತೇ ಸಹಸ್ವ ಈಮಹೇ ದಾತ್ರಂ ಯನ್ನೋಪದಸ್ಯತಿ ।

ತ್ವದಗ್ನೇ ವಾರ್ಯಂ ವಸು ॥ ೩೩ ॥

|| ಪದಪಾಠಃ ||

ತತ್ । ತೇ । ಸಹಸ್ವಃ । ಈಮಹೇ । ದಾತ್ರಂ । ಯತ್ । ನ । ಉಪऽದಸ್ಯತಿ ।

ತ್ವತ್ । ಅಗ್ನೇ । ವಾರ್ಯಂ । ವಸು ॥ ೩೩ ॥

॥ ಸಾಯಣಭಾಷ್ಯಂ ॥

ಹೇ ಸಹಸ್ವೋ ಬಲವನ್ನಗ್ನೇ ತೇ ತವ ಯದ್ವಸು ನೋಪದಸ್ಯತಿ ನೋಪಕ್ಷೀಯತೇ ತದ್ದಾತ್ರಂ ದಾತವ್ಯಂ ವಾರ್ಯಂ ವರಣೀಯಂ ಚ ವಸು ಧನಂ ತ್ವತ್ತ್ವತ್ತ ಈಮಹೇ । ಯಾಚಾಮಹೇ ॥

॥ ಪ್ರತಿಪದಾರ್ಥ ॥

**ಸಹಸ್ವಃ**—ಶಕ್ತಿಯುತನಾದ । **ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **ಯತ್**—ಯಾವ ಧನವು । **ನೋಪದಸ್ಯತಿ**—ನಾಶವನ್ನು ಹೊಂದುವುದಿಲ್ಲವೋ । **ತತ್**—ಅಂತಹ । **ದಾತ್ರಂ**—ದಾನಮಾಡಲು ಯೋಗ್ಯವಾದುದೂ । **ವಾರ್ಯಂ**—ಅಪೇಕ್ಷಿತವಾದುದೂ ಆದ । **ವಸು**—ಧನವನ್ನು । **ತ್ವತ್**—ನಿನ್ನಿಂದ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಶಕ್ತಿಯುತನಾದ ಎಲೈ ಅಗ್ನಿಯೇ, ನಿನ್ನ ಯಾವ ಧನವು ನಾಶವನ್ನು ಹೊಂದುವುದಿಲ್ಲವೋ, ಅಂತಹ ದಾನಮಾಡಲು ಯೋಗ್ಯವಾದುದೂ, ಅಪೇಕ್ಷಿತವಾದುದೂ ಆದ ಧನವನ್ನು ನಿನ್ನಿಂದ ಯಾಚಿಸುತ್ತೇವೆ.

English Translation.

We solicit from you, strong Agni, that desirable wealth which is in your gift and which decays not.



## ನಲವತ್ತನಾಲ್ಕನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಸಮಿಧಾಗ್ನಿಮಿತಿ ತ್ರಿಂಶದೃಚಂ ದ್ವಿತೀಯಂ ಸೂಕ್ತಮಾಂಗಿರಸಸ್ಯ ವಿರೂಪಸ್ಯಾರ್ಷಂ ಪ್ರಾಗ್ವತ್ಸ್ವ-ಪ್ರಪರಿಭಾಷಯಾ ಗಾಯತ್ರಮಾಗ್ನೇಯಂ । ತಥಾ ಚಾನುಕ್ರಮ್ಯತೇ । ಸಮಿಧಾಗ್ನಿಂ ತ್ರಿಂಶದಿತಿ ॥ ಪ್ರಾತರನುವಾಕೇ ಗಾಯತ್ರೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ವಿನಿಯುಕ್ತಂ ॥ ಮಹಾವ್ರತೇ ಸಮಿಧಾಗ್ನಿ-ಮಿತ್ಯಾದ್ಯಾಸ್ತಿಸ್ರಃ ಸಾಮಿಧೇನ್ಯಃ । ತಥಾ ಚ ಪಂಚಮಾರಣ್ಯಕೇ ಸೂತ್ರಿತಂ । ಸಮಿಧಾಗ್ನಿಮಿತಿ ಚತಸ್ರೋ ವೈಶ್ವಕರ್ಮಣ ಋಷಭಃ । ಐ. ಆ. ೫-೧-೧ । ಇತಿ ॥ ಆತಿಥ್ಯಾಯಾಂ ಸಮಿಧಾಗ್ನಿಮಿತ್ಯೇಷಾ ಪ್ರಥಮಾಜ್ಯಭಾಗಸ್ಯಾನುವಾಕ್ಯಾ । ಸೂತ್ರಿತಂ ಚ । ಸಮಿಧಾಗ್ನಿಂ ದುವಸ್ಯತಾ ಪ್ಯಾಯಸ್ವ ಸಮೇತು ತೇ । ಆ. ೪-೫ । ಇತಿ ॥ ಅಮಾವಾಸ್ಯಾಯಾಂ ಪ್ರಥಮಾಜ್ಯಭಾಗಸ್ಯಾನುವಾಕ್ಯಾ । ಸೂತ್ರಿತಂ ಚ । ವೃಧನ್ವಂತಾವಮಾವಾಸ್ಯಾಯಾಮಗ್ನಿಃ ಪ್ರತ್ನೇನ ಮನ್ಮನಾ । ಆ ೧-೫ । ಇತಿ ॥ ದರ್ಶಪೂರ್ಣಮಾಸಯೋ-ರಾಗ್ನೇಯಸ್ಯಾನುವಾಕ್ಯಾಗ್ನಿರ್ಮೂರ್ಧೇತ್ಯೇಷಾ । ಸೂತ್ರಿತಂ ಚ । ಅಗ್ನಿರ್ಮೂರ್ಧಾ ಭುವೋ ಯಜ್ಞಸ್ಯ ।

**ಆ. ೧-೬ । ಇತಿ ॥ ಮೂರ್ಧನ್ವದ್ಗುಣಸ್ಯಾಗ್ನೇರಪ್ಯೇಷೈವಾನುವಾಕ್ಯಾ । ಸೂತ್ರಿತಂ ಚ । ನಿತ್ಯೇ ಮೂರ್ಧನ್ವ ಇತಿ ॥ ಪವಮಾನೇಷ್ಟಿಷು ದ್ವಿತೀಯಸ್ಯಾಮಿಷ್ಟಾವಗ್ನೇಃ ಶುಚೇರನುವಾಕ್ಯಾಗ್ನಿಃ ಶುಚಿವ್ರತತಮ ಇತ್ಯೇಷಾ । ಸೂತ್ರಿತಂ ಚ । ಅಗ್ನಿಃ ಶುಚಿವ್ರತತಮ ಉದಗ್ನೇ ಶುಚಯಸ್ತವ । ಆ. ೨-೧ । ಇತಿ ॥**

ಅನುವಾದವು—**ಸಮಿಧಾಗ್ನಿಂ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಮೂವತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ **ವಿರೂಪ ಆಂಗಿರಸಃ** ಎಂಬುವನು ಋಷಿಯು; ಅಗ್ನಿಯು ದೇವತೆಯು; ಗಾಯತ್ರೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಸಮಿಧಾಗ್ನಿಂ ತ್ರಿಂಶತ್** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದು. ಮಹಾವ್ರತೇಷ್ಟಿಯಲ್ಲಿ **ಸಮಿಧಾಗ್ನಿಂ** ಎಂಬ ಈ ಸೂಕ್ತದ ಪ್ರಾರಂಭದ ನಾಲ್ಕು ಋಕ್ಕುಗಳನ್ನು ಸಾಮಿಧೇನೀಮಂತ್ರಗಳನ್ನಾಗಿ ಪಠಿಸಬೇಕೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ಸಮಿಧಾಗ್ನಿಮಿತಿ ಚತಸ್ರೋ ವೈಶ್ವಕರ್ಮಣ ಋಷಭಃ** ಎಂಬ ವಾಕ್ಯದಿಂದ (ಐ. ಆ. ೫-೧-೧) ನಿರ್ದಿಷ್ಟವಾಗಿರುವುದು. ಆತಿಥ್ಯೇಷ್ಟಿಯಲ್ಲಿ **ಸಮಿಧಾಗ್ನಿಂ** ಎಂಬ ಋಕ್ಕನ್ನೂ ಪ್ರಥಮಾಜ್ಯಭಾಗದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸಮಿಧಾಗ್ನಿಂ ದುವಸ್ಯತಾಪ್ಯಾಯಸ್ವ ಸಮೇತು ತೇ ಎಂಬ** ಸೂತ್ರದಿಂದ (ಆ. ೪-೫) ವಿವೃತವಾಗಿರುವುದು. ಅಮಾವಾಸ್ಯೇಷ್ಟಿಯಲ್ಲಿಯೂ (ದರ್ಶೇಷ್ಟಿಯಲ್ಲಿ) ಈ ಋಕ್ಕನ್ನು ಪ್ರಥಮಾಜ್ಯಭಾಗದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ವೃಧನ್ವಂತಾವಮಾವಾಸ್ಯಾಯಾಮಗ್ನಿಃ ಪ್ರತ್ನೇನ ಮನ್ಮನಾ** ಎಂಬ ಸೂತ್ರದಿಂದ (ಆ. ೧-೫) ವಿವೃತವಾಗಿರುವುದು. ದರ್ಶಪೂರ್ಣಮಾಸೇಷ್ಟಿಗಳಲ್ಲಿಯೂ **ಅಗ್ನಿರ್ಮೂರ್ಧಾ** ಎಂಬ ಈ ಸೂಕ್ತದ ೧೬ ನೇ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನಿರ್ಮೂರ್ಧಾ ಭುವೋ ಯಜ್ಞಸ್ಯ**—ಎಂಬ ಸೂತ್ರದಿಂದ (ಆ. ೧-೬) ವಿವೃತವಾಗಿರುವುದು. ಮೂರ್ಧನ್ವದ್ಗುಣಾಗ್ನಿಯನ್ನುದ್ದೇಶಿಸಿ ಮಾಡುವ ಹೋಮದಲ್ಲಿಯೂ ಈ ಋಕ್ಕನ್ನೂ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು **ನಿತ್ಯೇ ಮೂರ್ಧನ್ವ** ಎಂಬ ಸೂತ್ರದಿಂದ ವಿವೃತವಾಗಿರುವುದು. ಪವಮಾನೇಷ್ಟಿಗಳಲ್ಲಿ ಎರಡನೇ ಇಷ್ಟಿಯಲ್ಲಿ **ಅಗ್ನಿಃ ಶುಚಿಃ** ಎಂಬ ದೇವತೆಯನ್ನುದ್ದೇಶಿಸಿ ಮಾಡುವ ಹೋಮದಲ್ಲಿ **ಅಗ್ನಿಃ ಶುಚಿವ್ರತತಮಃ** ಎಂಬ ಈ ಸೂಕ್ತದ ೨೧ ನೇ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಗ್ನಿಃ ಶುಚಿವ್ರತತಮ ಉದಗ್ನೇ ಶುಚಯಸ್ತವ** ಎಂಬ ಸೂತ್ರದಿಂದ (ಆ. ೨-೧) ವಿವೃತವಾಗಿರುವುದು.

## ಸೂಕ್ತ—೪೪

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೪೪ ॥
ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೩೬, ೩೭, ೩೮, ೩೯, ೪೦, ೪೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೦ ॥
॥ ಋಷಿಃ—ವಿರೂಪ ಆಂಗಿರಸಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಸಮಿಧಾಗ್ನಿಂ ದುವಸ್ಯತ ಘೃತೈರ್ಬೋಧಯತಾತಿಥಿಂ ।
ಆಸ್ಮಿನ್ಹವ್ಯಾ ಜುಹೋತನ ॥ ೧ ॥

॥ ಪದಪಾಠಃ ॥

ಸಂಽಇಧಾ । ಅಗ್ನಿಂ । ದುವಸ್ಯತ । ಘೃತೈಃ । ಬೋಧಯತ । ಅತಿಥಿಂ ।
ಆ । ಅಸ್ಮಿನ್ । ಹವ್ಯಾ । ಜುಹೋತನ ॥ ೧ ॥

॥ ಸಾಯಣಭಾಷ್ಯಂ ॥

**ಹೇ ಋತ್ವಿಜಃ ಅತಿಥಿಮತಿಥಿವತ್ಪ್ರಿಯಮಗ್ನಿಂ ಸಮಿಧಾ ದುವಸ್ಯತ । ಪರಿಚರತ । ಘೃತೈರ್ದೀಪ್ತಿಸಾಧನೈರಾಜ್ಯೈರ್ಬೋಧಯತ ಚ । ಅಸ್ಮಿನ್ಸಮಿದ್ಧೇಽಗ್ನೌ ಹವ್ಯಾ ಹವೀಂಷ್ಯಾ ಜುಹೋತನ । ಆಜುಹುತ ಚ ॥**

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಅತಿಥಿಂ**—ಅತಿಥಿಯಂತೆ ಪೂಜ್ಯನಾದ । **ಅಗ್ನಿಂ**—ಅಗ್ನಿಯನ್ನು । **ಸಮಿಧಾ**—ಸಮಿತ್ತುಗಳಿಂದ । **ದುವಸ್ಯತ**—ಪೂಜಿಸಿರಿ । **ಘೃತೈಃ**—ಪ್ರಜ್ವಲಸಾಧನವಾದ ಆಜ್ಯಗಳಿಂದ । **ಬೋಧಯತ**—ಪ್ರಜ್ವಲಿಸುವಂತೆ ಮಾಡಿರಿ । **ಅಸ್ಮಿನ್**—ಪ್ರಜ್ವಲಿತನಾದ ಈ ಅಗ್ನಿಯಲ್ಲಿ । **ಹವ್ಯಾ**—ಹವಿಸ್ಸುಗಳನ್ನು । **ಆ ಜುಹೋತನ**—ಅರ್ಪಿಸಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಅತಿಥಿಯಂತೆ ಪೂಜ್ಯನಾದ ಅಗ್ನಿಯನ್ನು ಸಮಿತ್ತುಗಳಿಂದ ಪೂಜಿಸಿರಿ. ಪ್ರಜ್ವಲನ ಸಾಧನವಾದ ಆಜ್ಯಗಳಿಂದ ಪ್ರಜ್ವಲಿಸುವಂತೆ ಮಾಡಿರಿ. ಪ್ರಜ್ವಲಿತನಾದ ಈ ಅಗ್ನಿಯಲ್ಲಿ ಹವಿಸ್ಸುಗಳನ್ನು ಅರ್ಪಿಸಿರಿ.

## English Translation.

Honour Agni with fuel, awaken him, the guest, with (libations of) butter ; offer the oblations in him·

॥ ಸಂಹಿತಾಪಾಠಃ ॥

ಅಗ್ನೇ ಸ್ತೋಮಂ ಜುಷಸ್ವ ಮೇ ವರ್ಧಸ್ವಾನೇನ ಮನ್ಮನಾ ।
ಪ್ರತಿ ಸೂಕ್ತಾನಿ ಹರ್ಯ ನಃ ॥ ೨ ॥

|| ಪದಪಾಠಃ ||

ಅಗ್ನೇ । ಸ್ತೋಮಂ । ಜುಷಸ್ವ । ಮೇ । ವರ್ಧಸ್ವ । ಅನೇನ । ಮನ್ಮನಾ ।
ಪ್ರತಿ । ಸುಽಉಕ್ತಾನಿ । ಹರ್ಯ । ನಃ ॥ ೨ ॥

। ಸಾಯಣಭಾಷ್ಯಂ ।

ಹೇ ಅಗ್ನೇ ಮ ಆಂಗಿರಸಸ್ಯ ಮಮ ಸ್ತೋಮಂ ಸ್ತೋತ್ರಂ ಜುಷಸ್ವ । ಸೇವಸ್ವ । ಅನೇನ ಮನ್ಮನಾ ಮನನೀಯೇನ ಸ್ತೋತ್ರೇಣ ವರ್ಧಸ್ವ ಚ । ನೋಽಸ್ಮಾಕಂ ಸೂಕ್ತಾನಿ ಪ್ರತಿ ಹರ್ಯ । ಕಾಮಯ ಚ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಮೇ—ನನ್ನ । ಸ್ತೋಮಂ—ಸ್ತೋತ್ರವನ್ನು । ಜುಷಸ್ವ—ಸೇವಿಸು । ಅನೇನ ಮನ್ಮನಾ—ಧ್ಯಾನಾತ್ಮಕವಾದ ಈ ಸ್ತೋತ್ರದಿಂದ । ವರ್ಧಸ್ವ—ವೃದ್ಧಿಯನ್ನು ಹೊಂದು । ನಃ—ನಮ್ಮ । ಸೂಕ್ತಾನಿ—ಸೂಕ್ತಗಳನ್ನು । ಪ್ರತಿ ಹರ್ಯ—ಅಪೇಕ್ಷಿಸು.

|| ಭಾವಾರ್ಥ ||

ಎಲೈ ಅಗ್ನಿಯೇ, ನನ್ನ ಸ್ತೋತ್ರವನ್ನು ಸೇವಿಸು ಧ್ಯಾನಾತ್ಮಕವಾದ ಈ ಸ್ತೋತ್ರದಿಂದ ವೃದ್ಧಿಯನ್ನು ಹೊಂದು. ನಮ್ಮ ಸೂಕ್ತಗಳನ್ನು ಅಪೇಕ್ಷಿಸು.

English Translation.

Agni, accept my praise, be invigorated by this prayer; be favourable to our hymns.

। ಸಂಹಿತಾಪಾಠಃ ।

ಅಗ್ನಿಂ ದೂತಂ ಪುರೋ ದಧೇ ಹವ್ಯವಾಹಮುಪ ಬ್ರುವೇ ।
ದೇವಾँ ಆ ಸಾದಯಾದಿಹ ॥ ೩ ॥

। ಪದಪಾಠಃ ।

ಅಗ್ನಿಂ । ದೂತಂ । ಪುರಃ । ದಧೇ । ಹವ್ಯಽವಾಹಂ । ಉಪ । ಬ್ರುವೇ ।
ದೇವಾನ್ । ಆ । ಸಾದಯಾತ್ । ಇಹ ॥ ೩ ॥

॥ ಸಾಯಣಭಾಷ್ಯಂ ॥

**ದೂತಂ ದೇವಾನಾಂ ಹವ್ಯವಾಹಂ ಹವಿಷಾಂ ವೋಢಾರಂ ಚಾಗ್ನಿಂ ಪುರೋ ದಧೇ । ಪುರಸ್ಕರೋಮಿ । ಉಪ ಬ್ರುವೇ । ಉಪಸ್ತೌಮಿ ಚ । ಸೋಽಗ್ನಿರಿಹ ಯಜ್ಞೇ ದೇವಾನಾ ಸಾದಯಾತ್ । ಆಸಾದಯತು ॥**

॥ ಪ್ರತಿಪದಾರ್ಥ ॥

**ದೂತಂ**—ದೇವದೂತನೂ । **ಹವ್ಯವಾಹಂ**—ಹವಿಸ್ಸನ್ನು ವಹಿಸುವವನೂ ಆದ । **ಅಗ್ನಿಂ**—ಅಗ್ನಿಯನ್ನು । **ಪುರಃ**—ಮುಂಭಾಗದಲ್ಲಿ । **ದಧೇ**—ಸ್ಥಾಪಿಸುತ್ತೇನೆ । **ಉಪ ಬ್ರುವೇ**—ಪ್ರಶಂಸಿಸುತ್ತೇನೆ । **ಸಃ**—ಅದೇ ಅಗ್ನಿಯು । **ಇಹ**—ನಮ್ಮ ಈ ಯಜ್ಞದಲ್ಲಿ । **ದೇವಾನ್**—ದೇವತೆಗಳನ್ನು । **ಆ ಸಾದಯಾತ್**—ಕುಳಿತುಕೊಳ್ಳುವಂತೆ ಮಾಡಲಿ.

॥ ಭಾವಾರ್ಥ ॥

ದೇವದೂತನೂ, ಹವಿಸ್ಸನ್ನು ವಹಿಸುವವನೂ ಆದ ಅಗ್ನಿಯನ್ನು ಮುಂಭಾಗದಲ್ಲಿ ಸ್ಥಾಪಿಸುತ್ತೇನೆ. ಮತ್ತು ಪ್ರಶಂಸಿಸುತ್ತೇನೆ. ಅದೇ ಅಗ್ನಿಯು ನಮ್ಮ ಈ ಯಜ್ಞದಲ್ಲಿ ದೇವತೆಗಳನ್ನು ಕುಳಿತುಕೊಳ್ಳುವಂತೆ ಮಾಡಲಿ.

## English Translation.

I set Agni in the front as the messager, I adore him as the bearer of the oblations; may he cause the gods to sit down here.

॥ ಸಂಹಿತಾಪಾಠಃ ॥

ಉತ್ತೇ ಬೃಹಂತೋ ಅರ್ಚಯಃ ಸಮಿಧಾನಸ್ಯ ದೀದಿವಃ ।
ಅಗ್ನೇ ಶುಕ್ರಾಸ ಈರತೇ ॥ ೪ ॥

॥ ಪದಪಾಠಃ ॥

**ಉತ್ । ತೇ । ಬೃಹಂತಃ । ಅರ್ಚಯಃ । ಸಂಽಇಧಾನಸ್ಯ । ದೀದಿಽವಃ ।**
**ಅಗ್ನೇ । ಶುಕ್ರಾಸಃ । ಈರತೇ ॥ ೪ ॥**

॥ ಸಾಯಣಭಾಷ್ಯಂ ॥

**ಹೇ ದೀದಿವೋ ದೀಪ್ತಾಗ್ನೇ ಸಮಿಧಾನಸ್ಯ ಸಮಿಧ್ಯಮಾನಸ್ಯ ತೇ ತವ ಬೃಹಂತೋ ಮಹಾಂತಃ ಶುಕ್ರಾಸೋ ಜ್ವಲಂತೋಽರ್ಚಯೋ ದೀಪ್ತಯ ಉದೀರತೇ ॥**

॥ ಪ್ರತಿಪದಾರ್ಥ ॥

**ದೀದಿವಃ**— ಪ್ರಭಾಯುತನಾದ | **ಅಗ್ನೇ**—ಎಲೈ ಅಗ್ನಿಯೇ | **ಸಮಿಧಾನಸ್ಯ**—ಪ್ರಜ್ವಲಿತನಾದ | **ತೇ**—ನಿನ್ನ | **ಬೃಹಂತಃ**—ಮಹತ್ಸ್ವರೂಪವುಳ್ಳವೂ | **ಶುಕ್ರಾಸಃ**—ಕಾಂತಿಯುತವಾದವೂ ಆದ | **ಅರ್ಚಯಃ**—ಜ್ವಾಲೆಗಳು | **ಉದೀರತೇ**—ಮೇಲಕ್ಕೇಳುತ್ತವೆ.

॥ ಭಾವಾರ್ಥ ॥

ಪ್ರಭಾಯುತನಾದ ಎಲೈ ಅಗ್ನಿಯೇ, ಪ್ರಜ್ವಲಿತನಾದ ನಿನ್ನ ಮಹತ್ಸ್ವರೂಪವುಳ್ಳವೂ ಕಾಂತಿಯುತವಾದವೂ ಆದ ಜ್ವಾಲೆಗಳು ಮೇಲಕ್ಕೇಳುತ್ತವೆ.

English Translation.

Brilliant Agni, as you are kindled, your great flames start blazing up.

॥ ಸಂಹಿತಾಪಾಠಃ ॥

ಉಪ ತ್ವಾ ಜುಹ್ವೋ೩ ಮಮ ಘೃತಾಚೀರ್ಯಂತು ಹರ್ಯತ |

ಅಗ್ನೇ ಹವ್ಯಾ ಜುಷಸ್ವ ನಃ ॥ ೫ ॥

॥ ಪದಪಾಠಃ ॥

**ಉಪ | ತ್ವಾ | ಜುಹ್ವಃ | ಮಮ | ಘೃತಾಚೀಃ | ಯಂತು | ಹರ್ಯತ |**

**ಅಗ್ನೇ | ಹವ್ಯಾ | ಜುಷಸ್ವ | ನಃ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಹರ್ಯತ ಕಾಮಯಮಾನಾಗ್ನೇ ಮಮ ಮದೀಯಾ ಘೃತಾಚೀರ್ಘೃತಮಂಚಂತ್ಯೋ ಜುಹ್ವಃ ಸ್ರುಚಸ್ತ್ವಾ ತ್ವಾಮುಪ ಯಂತು | ನೋಽಸ್ಮಾಕಂ ಹವ್ಯಾ ಹವ್ಯಾನಿ ಜುಷಸ್ವ | ಸೇವಸ್ವ ಚ ॥**

॥ ಪ್ರತಿಪದಾರ್ಥ ॥

**ಹರ್ಯತ**—ಮಂಗಳಕರನಾದ | **ಅಗ್ನೇ**—ಎಲೈ ಅಗ್ನಿಯೇ | **ಮಮ**—ನನ್ನ | **ಘೃತಾಚೀಃ**—ಘೃತವನ್ನು ಅರ್ಪಿಸತಕ್ಕ | **ಜುಹ್ವಃ**—ಸ್ರುಕ್ಪಾತ್ರೆಗಳು | **ತ್ವಾ**—ನಿನ್ನನ್ನು | **ಉಪ ಯಂತು**—ಸಮೀಪಿಸಲಿ | **ನಃ**—ನಮ್ಮ | **ಹವ್ಯಾ**—ಹವಿಸ್ಸುಗಳನ್ನು | **ಜುಷಸ್ವ**—ಸೇವಿಸು.

॥ ಭಾವಾರ್ಥ ॥

ಮಂಗಳಕರನಾದ ಎಲೈ ಅಗ್ನಿಯೇ, ನನ್ನ ಘೃತವನ್ನು ಅರ್ಪಿಸತಕ್ಕ ಸ್ರುಕ್ಪಾತ್ರೆಗಳು ನಿನ್ನನ್ನು ಸಮೀಪಿಸಲಿ. ನಮ್ಮ ಹವಿಸ್ಸುಗಳನ್ನು ಸೇವಿಸು.

### English Translation.

Let my ladles, filled with butter, come near you, O propitious one; Agni, recive our oblations.

॥ ಸಂಹಿತಾಪಾಠಃ ॥

ಮಂದ್ರಂ ಹೋತಾರಮೃತ್ವಿಜಂ ಚಿತ್ರಭಾನುಂ ವಿಭಾವಸುಂ ।
ಅಗ್ನಿಮೀಳೇ ಸ ಉ ಶ್ರವತ್ ॥ ೬ ॥

॥ ಪದಪಾಠಃ ॥

ಮಂದ್ರಂ । ಹೋತಾರಂ । ಋತ್ವಿಜಂ । ಚಿತ್ರಽಭಾನುಂ । ವಿಭಾಽವಸುಂ ।
ಅಗ್ನಿಂ । ಈಳೇ । ಸಃ । ಊಂ ಇತಿ । ಶ್ರವತ್ ॥ ೬ ॥

॥ ಸಾಯಣಭಾಷ್ಯಂ ॥

**ಮಂದ್ರಂ ಮಾದನಂ ಹೋತಾರಂ ದೇವಾನಾಮಾಹ್ವಾತಾರಮೃತ್ವಿಜಮೃತೌ ಯಷ್ಟವ್ಯಂ ಚಿತ್ರಭಾನುಂ ಚಿತ್ರದೀಪ್ತಿಂ ವಿಭಾವಸುಂ ದೀಪ್ತಿಧನಮಗ್ನಿಮೀಳೇ । ಸ್ತೌಮಿ । ಸೋಽಗ್ನಿಃ ಶ್ರವತ್ । ಅಸ್ಮದೀಯಾಂ ಸ್ತುತಿಂ ಶೃಣೋತ್ವೇವ ॥**

॥ ಪ್ರತಿಪದಾರ್ಥ ॥

**ಮಂದ್ರಂ**—ಹರ್ಷವನ್ನುಂಟುಮಾಡುವವನೂ । **ಹೋತಾರಂ**—ದೇವತೆಗಳನ್ನು ಕರೆಯುವವನೂ । **ಋತ್ವಿಜಂ**—ಯಜ್ಞಕಾಲಗಳಲ್ಲಿ ಪೂಜಾರ್ಹನೂ । **ಚಿತ್ರಭಾನುಂ**—ಆಕರ್ಷಕವಾದ ಕಾಂತಿಯುಳ್ಳವನೂ । **ವಿಭಾವಸುಂ**—ಪ್ರಭಾರೂಪವಾದ ಧನವುಳ್ಳವನೂ ಆದ । **ಅಗ್ನಿಂ**—ಅಗ್ನಿಯನ್ನು । **ಈಳೇ**—ಸ್ತುತಿಸುತ್ತೇನೆ । **ಸಃ**—ಅದೇ ಅಗ್ನಿಯು । **ಶ್ರವತ್**—ನಮ್ಮ ಸ್ತುತಿಯನ್ನು ಕೇಳಲಿ.

॥ ಭಾವಾರ್ಥ ॥

ಹರ್ಷವನ್ನುಂಟುಮಾಡುವವನೂ, ದೇವತೆಗಳನ್ನು ಕರೆಯುವವನೂ, ಯಜ್ಞಕಾಲಗಳಲ್ಲಿ ಪೂಜಾರ್ಹನೂ, ಆಕರ್ಷಕವಾದ ಕಾಂತಿಯುಳ್ಳವನೂ, ಪ್ರಭಾರೂಪವಾದ ಧನವುಳ್ಳವನೂ ಆದ ಅಗ್ನಿಯನ್ನು ಸ್ತುತಿಸುತ್ತೇನೆ. ಅದೇ ಅಗ್ನಿಯು ನಮ್ಮ ಸ್ತುತಿಯನ್ನು ಕೇಳಲಿ.

### English Translation.

I worship Agni, the exhilarating invoker (of the gods), the priest, him who shines forth with various lustre, and is rich in brillance; may he give ear.

॥ ಸಂಹಿತಾಪಾಠಃ ॥

ಪ್ರತ್ನಂ ಹೋತಾರಮೀಡ್ಯಂ ಜುಷ್ಟಮಗ್ನಿಂ ಕವಿಕ್ರತುಂ ।
ಅಧ್ವರಾಣಾಮಭಿಶ್ರಿಯಂ ॥ ೭ ॥

॥ ಪದಪಾಠಃ ॥

ಪ್ರತ್ನಂ । ಹೋತಾರಂ । ಈಡ್ಯಂ । ಜುಷ್ಟಂ । ಅಗ್ನಿಂ । ಕವಿऽಕ್ರತುಂ ।
ಅಧ್ವರಾಣಾಂ । ಅಭಿऽಶ್ರಿಯಂ ॥ ೩ ॥

॥ ಸಾಯಣಭಾಷ್ಯಂ ॥

ಪ್ರತ್ನಂ ಪುರಾಣಂ ಹೋತಾರಂ ದೇವಾನಾಮಾಹ್ವಾತಾರಮೀಡ್ಯಂ ಸ್ತುತ್ಯಂ ಜುಷ್ಟಂ ಪ್ರೀತಂ ಸೇವಿತಂ ವಾ ಕವಿಕ್ರತುಂ ಕ್ರಾಂತಕರ್ಮಾಣಮಧ್ವರಾಣಾಂ ಯಜ್ಞಾನಾಮಭಿಶ್ರಿಯಮಭಿಶ್ರಯಿತಾರಮೀಡ್ಯಮಗ್ನಿಮೀಳೇ । ಸ್ತೌಮಿ ॥

॥ ಪ್ರತಿಪದಾರ್ಥ ॥

**ಪ್ರತ್ನಂ**—ಪುರಾತನನೂ । **ಹೋತಾರಂ**—ಹೋತೃರೂಪನೂ । **ಈಡ್ಯಂ**—ಸ್ತುತ್ಯನೂ । **ಜುಷ್ಟಂ**—ಪ್ರೀತಿಯುತನೂ । **ಕವಿಕ್ರತುಂ**—ಮೇಧಾಯುತವಾದ ಕರ್ಮವುಳ್ಳವನೂ । **ಅಧ್ವರಾಣಾಂ**—ಯಜ್ಞಗಳಿಗೆ । **ಅಭಿಶ್ರಿಯಂ**—ಮುಖ್ಯವಾದ ಅತಿಥಿಯೂ ಆದ (ಪೂಜ್ಯನೂ) । **ಅಗ್ನಿಂ**—ಅಗ್ನಿಯನ್ನು (ಸ್ತುತಿಸುತ್ತೇನೆ).

॥ ಭಾವಾರ್ಥ ॥

ಪುರಾತನನೂ, ಹೋತೃರೂಪನೂ, ಸ್ತುತ್ಯನೂ, ಪ್ರೀತಿಯುತನೂ, ಮೇಧಾಯುತವಾದ ಕರ್ಮವುಳ್ಳವನೂ, ಯಜ್ಞಗಳಿಗೆ ಮುಖ್ಯವಾದ ಅತಿಥಿಯೂ ಆದ ಅಗ್ನಿಯನ್ನು ಸ್ತುತಿಸುತ್ತೇನೆ.

## English Translation.

(I worship) the beloved Agni, the ancient adorable invoker (of the gods), the wise, the frequenter of sacrifices.

॥ ಸಂಹಿತಾಪಾಠಃ ॥

ಜುಷಾಣೋ ಅಂಗಿರಸ್ತಮೇಮಾ ಹವ್ಯಾನ್ಯಾನುಷಕ್ ।
ಅಗ್ನೇ ಯಜ್ಞಂ ನಯ ಋತುಥಾ ॥ ೮ ॥

॥ ಪದಪಾಠಃ ॥

ಜುಷಾಣಃ । ಅಂಗಿರಃऽತಮ । ಇಮಾ । ಹವ್ಯಾನಿ । ಆನುಷಕ್ ।

ಅಗ್ನೇ । ಯಜ್ಞಂ । ನಯ । ಋತುऽಥಾ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಂಗಿರಸ್ತಮಾಂಗಿರಸಾಂ ಶ್ರೇಷ್ಠಾಗ್ನೇ ಇಮಾನ್ಯಸ್ಮದೀಯಾನಿ ಹವ್ಯಾನಿ ಹವೀಂಷ್ಯಾನುಷಗನುಷಕ್ತಂ ಯಥಾ ಭವತಿ ತಥಾ ಜುಷಾಣಃ ಸೇವಮಾನೋ ಭವ । ಋತುಥಾ ಕಾಲೇ ಕಾಲೇ ಯಜ್ಞಂ ಚ ನಯ ॥

॥ ಪ್ರತಿಪದಾರ್ಥ ॥

**ಅಂಗಿರಸ್ತಮ**—ಅಂಗಿರಸ್ಸುಗಳೆಲ್ಲಾ ಶ್ರೇಷ್ಠನಾದ । **ಅಗ್ನೇ**— ಎಲೈ ಅಗ್ನಿಯೇ । **ಇಮಾ ಹವ್ಯಾನಿ**— ನಮ್ಮ ಈ ಹವಿಸ್ಸುಗಳನ್ನು । **ಆನುಷಕ್**— ಅನುಸ್ಯೂತವಾಗಿ । **ಜುಷಾಣಃ**—ಸೇವಿಸುತ್ತಾ । **ಋತುಥಾ**— ಆಯಾ ಕಾಲಗಳಲ್ಲಿ । **ಯಜ್ಞಂ**—ಯಜ್ಞವನ್ನು । **ನಯ**—ನಿರ್ವಹಿಸಲು ಸಹಾಯಕನಾಗು.

॥ ಭಾವಾರ್ಥ ॥

ಅಂಗಿರಸ್ಸುಗಳಲ್ಲೆಲ್ಲಾ ಶ್ರೇಷ್ಠನಾದ ಎಲೈ ಅಗ್ನಿಯೇ, ನಮ್ಮ ಈ ಹವಿಸ್ಸುಗಳನ್ನು ಅನುಸ್ಯೂತವಾಗಿ ಸೇವಿಸುತ್ತಾ ಆಯಾ ಕಾಲಗಳಲ್ಲಿ ಯಜ್ಞವನ್ನು ನಿರ್ವಹಿಸಲು ಸಹಾಯಕನಾಗು.

## English Translation.

Agni, best of the Angirasas, do you, continually accepting these our oblations, conduct the sacrifice at the due seasons.

॥ ಸಂಹಿತಾಪಾಠಃ ॥

ಸಮಿಧಾನ ಉ ಸಂತ್ಯ ಶುಕ್ರಶೋಚ ಇಹಾ ವಹ ।

ಚಿಕಿತ್ವಾನ್ದೈವ್ಯಂ ಜನಂ ॥ ೯ ॥

॥ ಪದಪಾಠಃ ॥

ಸಂऽಇಧಾನಃ । ಊಂ ಇತಿ । ಸಂತ್ಯ । ಶುಕ್ರऽಶೋಚೇ । ಇಹ । ಆ । ವಹ ।

ಚಿಕಿತ್ವಾನ್ । ದೈವ್ಯಂ । ಜನಂ ॥ ೯ ॥

॥ ಸಾಯಣಭಾಷ್ಯಂ ॥

ಹೇ ಸಂತ್ಯ ಭಜನಶೀಲ ಶುಕ್ರಶೋಚೇ ಜ್ವಲದೀಪ್ತೇ ತ್ವಂ ಸಮಿಧಾನ ಉ ಸಮಿಧ್ಯಮಾನ ಏವ ದೈವ್ಯಂ ದೇವಸಂಬಂಧಿನಂ ಜನಂ ಚಿಕಿತ್ವಾಞ್ಜಾನನ್ನಿಹ ಯಜ್ಞ ಆ ವಹ ॥

॥ ಪ್ರತಿಪದಾರ್ಥ ॥

**ಸಂತ್ಯ**—ಪೂಜಾಯೋಗ್ಯನಾದವನೂ | **ಶುಕ್ರಶೋಚೇ**—ಪ್ರಕಾಶವಾದ ಕಾಂತಿಯುಳ್ಳವನೂ ಆದ ಎಲೈ ಅಗ್ನಿಯೇ | **ಸಮಿಧಾನ ಉ**—ನೀನು ಪ್ರಜ್ವಲಿತನಾದೊಡನೆಯೇ | **ದೈವ್ಯಂ**—ದೇವಪೂಜಾನಿರತರಾದ | **ಜನಂ**—ಯಜಮಾನಾದಿಗಳನ್ನು | **ಚಿಕಿತ್ವಾನ್**—ಅರಿತವನಾಗಿ | **ಇಹ**—ನಮ್ಮ ಈ ಯಜ್ಞದಲ್ಲಿ | **ಆ ವಹ**- ದೇವತೆಗಳನ್ನು ಕರೆತಂದು ಸೇರಿಸು.

॥ ಭಾವಾರ್ಥ ॥

ಪೂಜಾಯೋಗ್ಯನೂ, ಪ್ರಕಾಶವಾದ ಕಾಂತಿಯುಳ್ಳವನೂ ಆದ ಎಲೈ ಅಗ್ನಿಯೇ, ನೀನು ಪ್ರಜ್ವಲಿತನಾದೊಡನೆಯೇ, ದೇವಪೂಜಾನಿರತರಾದ ಯಜಮಾನಾದಿಗಳನ್ನು ಅರಿತವನಾಗಿ ನಮ್ಮ ಈ ಯಜ್ಞದಲ್ಲಿ ದೇವತೆಗಳನ್ನು ತಂದು ಸೇರಿಸು.

English Translation.

**Brilliant-flamed giver ef good, do you, the knower, when kindled, bring the host of the gods hither.**

॥ ಸಂಹಿತಾಪಾಠಃ ॥

ವಿಪ್ರಂ ಹೋತಾರಮದ್ರುಹಂ ಧೂಮಕೇತುಂ ವಿಭಾವಸುಂ ।
ಯಜ್ಞಾನಾಂ ಕೇತುಮೀಮಹೇ ॥ ೧೦ ॥

॥ ಪದಪಾಠಃ ॥

**ವಿಪ್ರಂ । ಹೋತಾರಂ । ಅದ್ರುಹಂ । ಧೂಮऽಕೇತುಂ । ವಿಭಾऽವಸುಂ ।**
**ಯಜ್ಞಾನಾಂ । ಕೇತುಂ । ಈಮಹೇ** ॥ ೧೦ ॥

॥ ಸಾಯಣಭಾಷ್ಯಂ ॥

**ವಿಪ್ರಂ ಮೇಧಾವಿನಂ ಹೋತಾರಂ ದೇವಾನಾಮಾಹ್ವಾತಾರಮದ್ರುಹಮದ್ರೋಗ್ಧಾರಂ ಧೂಮಕೇತುಂ ಧೂಮಧ್ವಜಂ ವಿಭಾವಸುಂ ದೀಪ್ತಿಧನಂ ಯಜ್ಞಾನಾಂ ಕೇತುಂ ಪತಾಕಸ್ಥಾನೀಯಮಗ್ನಿಮೀಮಹೇ । ಅಭೀಷ್ಟಂ ಯಾಚಾಮಹೇ ॥**

॥ ಪ್ರತಿಪದಾರ್ಥ ॥

**ವಿಪ್ರಂ**—ಮೇಧಾವಿಯೂ | **ಹೋತಾರಂ**—ಹೋತೃರೂಪನೂ | **ಅದ್ರುಹಂ**—ದ್ರೋಹರಹಿತನೂ | **ಧೂಮಕೇತುಂ**—ಧೂಮರೂಪವಾದ ಧ್ವಜವುಳ್ಳವನೂ | **ವಿಭಾವಸುಂ**—ಪ್ರಭಾಯುತವಾದ ಧನವುಳ್ಳವನೂ | **ಯಜ್ಞಾನಾಂ**—ಯಜ್ಞಗಳಿಗೆ | **ಕೇತುಂ**—ಧ್ವಜರೂಪನೂ ಆದ ಅಗ್ನಿಯನ್ನು | **ಈಮಹೇ**—ನಮ್ಮ ಇಷ್ಟಾರ್ಥಗಳನ್ನು ಯಾಚಿಸುತ್ತೇವೆ.

॥ ಭಾವಾರ್ಥ ॥

ಮೇಧಾವಿಯೂ, ಹೋತೃರೂಪನೂ, ದ್ರೋಹರಹಿತನೂ, ಧೂಮರೂಪವಾದ ಧ್ವಜವುಳ್ಳವನೂ, ಪ್ರಭಾರೂಪವಾದ ಧನವುಳ್ಳವನೂ, ಯಜ್ಞಗಳಿಗೆ ಧ್ವಜರೂಪನೂ ಆದ ಅಗ್ನಿಯನ್ನು (ಅಗ್ನಿಯಿಂದ) ನಮ್ಮ ಇಷ್ಟಾರ್ಥಗಳನ್ನು ಯಾಚಿಸುತ್ತೇವೆ.

## English Translation.

We solicit the wise invoker (of the gods), the beneficent, the smoke-bannered, the resplendent, the banner of the sacrifices.

॥ ಸಂಹಿತಾಪಾಠಃ ॥

ಅಗ್ನೇ ನಿ ಪಾಹಿ ನಸ್ತ್ವಂ ಪ್ರತಿ ಷ್ಮ ದೇವ ರೀಷತಃ ।
ಭಿಂಧಿ ದ್ವೇಷಃ ಸಹಸ್ಕೃತ ॥ ೧೧ ॥

॥ ಪದಪಾಠಃ ॥

ಅಗ್ನೇ । ನಿ । ಪಾಹಿ । ನಃ । ತ್ವಂ । ಪ್ರತಿ । ಸ್ಮ । ದೇವ । ರಿಷತಃ ।
ಭಿಂಧಿ । ದ್ವೇಷಃ । ಸಹಃऽಕೃತ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಸಹಸ್ಕೃತ ಬಲೇನ ಕೃತ ದೇವ ದೀಪ್ತಾಗ್ನೇ ರಿಷತೋ ಹಿಂಸಕಾನ್ನೋऽಸ್ಮಾನ್ ಪ್ರತಿ ನಿ ಪಾಹಿ । ಪ್ರತಿರಕ್ಷ । ಸ್ಮೇತಿ ಪೂರಣಃ । ದ್ವೇಷೋ ದ್ವಿಷಃ ಶತ್ರೂಂಶ್ಚ ಭಿಂಧಿ । ವಿದಾರಯ ॥

॥ ಪ್ರತಿಪದಾರ್ಥ ॥

ಸಹಸ್ಕೃತ—ಶಕ್ತ್ಯುತ್ಪನ್ನನಾದವನೂ । ದೇವ—ಪ್ರಕಾಶಮಾನನೂ ಆದ । ಅಗ್ನೇ—ಎಲೈ ಅಗ್ನಿಯೇ । ನಃ—ನಮ್ಮನ್ನು । ತ್ವಂ—ನೀನು । ರಿಷತಃ ಪ್ರತಿ—ಹಿಂಸಕರಾದ ಶತ್ರುಗಳಿಂದ । ನಿ ಪಾಹಿ—ಪೂರ್ಣವಾಗಿ ರಕ್ಷಿಸು । ದ್ವೇಷಃ—ನಮ್ಮ ಶತ್ರುಗಳನ್ನು । ಭಿಂಧಿ—ನಾಶಪಡಿಸು.

॥ ಭಾವಾರ್ಥ ॥

ಶಕ್ತ್ಯುತ್ಪನ್ನನಾದವನೂ, ಪ್ರಕಾಶಮಾನನೂ ಆದ ಎಲೈ ಅಗ್ನಿಯೇ, ನಮ್ಮ ಹಿಂಸಕರಾದ ಶತ್ರುಗಳಿಂದ ಪೂರ್ಣವಾಗಿ ರಕ್ಷಿಸು. ನಮ್ಮ ಶತ್ರುಗಳನ್ನು ನಾಶಪಡಿಸು.

## English Translation.

Divine Agni, produced by strength, protect us from the injurer, tear asunder our enemies.

॥ ಸಂಹಿತಾಪಾಠಃ ॥

ಅಗ್ನಿಃ ಪ್ರತ್ನೇನ ಮನ್ಮನಾ ಶುಂಭಾನಸ್ತನ್ವಂ೧ ಸ್ವಾಂ ।
ಕವಿರ್ವಿಪ್ರೇಣ ವಾವೃಧೇ ॥ ೧೨ ॥

॥ ಪದಪಾಠಃ ॥

ಅಗ್ನಿಃ । ಪ್ರತ್ನೇನ । ಮನ್ಮನಾ । ಶುಂಭಾನಃ । ತನ್ವಂ । ಸ್ವಾಂ ।
ಕವಿಃ । ವಿಪ್ರೇಣ । ವವೃಧೇ ॥ ೧೨ ॥

॥ ಸಾಯಣಭಾಷ್ಯಂ ॥

**ಕವಿಃ** ಕ್ರಾಂತಕರ್ಮಾಗ್ನಿಃ **ಪ್ರತ್ನೇನ** ಪುರಾಣೇನ **ಮನ್ಮನಾ** ಮನನೀಯೇನ ಸ್ತೋತ್ರೇಣ **ಸ್ವಾಂ** ಸ್ವಕೀಯಾಂ **ತನ್ವಂ** ತನುಮಂಗಂ **ಶುಂಭಾನಃ** ಶೋಭಯನ್ **ವಿಪ್ರೇಣ** ಮೇಧಾವಿನಾ ಸ್ತೋತ್ರಾ **ವಾವೃಧೇ** । ಪ್ರವೃದ್ಧೋ ಭವತಿ ॥

॥ ಪ್ರತಿಪದಾರ್ಥ ॥

**ಕವಿಃ**— ಮೇಧಾಯುತವಾದ ಪ್ರಜ್ಞೆಯುಳ್ಳ । **ಅಗ್ನಿಃ**— ಅಗ್ನಿಯು । **ಪ್ರತ್ನೇನ**— ಪುರಾತನವಾದುದೂ । **ಮನ್ಮನಾ**-ಧ್ಯಾನಾತ್ಮಕವಾದುದೂ ಆದ ಸ್ತೋತ್ರದಿಂದ । **ಸ್ವಾಂ**—ತನ್ನ । **ತನ್ವಂ**—ದೇಹವನ್ನು । **ಶುಂಭಾನಃ**—ಅಲಂಕರಿಸುತ್ತಾ । **ವಿಪ್ರೇಣ**—ಮೇಧಾವಿಯಾದ ಸ್ತುತಿಕರ್ತನ ಸಹಾಯದಿಂದ । **ವವೃಧೇ**—ವೃದ್ಧಿಯನ್ನು ಹೊಂದುತ್ತಾನೆ.

॥ ಭಾವಾರ್ಥ ॥

ಮೇಧಾಯುತವಾದ ಪ್ರಜ್ಞೆಯುಳ್ಳ ಅಗ್ನಿಯು ಪುರಾತನವಾದುದೂ, ಧ್ಯಾನಾತ್ಮಕವಾದುದೂ ಆದ ಸ್ತೋತ್ರದಿಂದ ತನ್ನ ದೇಹವನ್ನು ಅಲಂಕರಿಸುತ್ತಾ ಮೇಧಾವಿಯಾದ ಸ್ತುತಿಕರ್ತನ ಸಹಾಯದಿಂದ ವೃದ್ಧಿಯನ್ನು ಹೊಂದುತ್ತಾನೆ.

## English Translation.

The wise Agni, beautifying his body with the ancient hymn has grown in might through the intelligent hymner.

॥ ಸಂಹಿತಾಪಾಠಃ ॥

ಊರ್ಜೋ ನಪಾತಮಾ ಹುವೇಽಗ್ನಿಂ ಪಾವಕಶೋಚಿಷಂ ।
ಅಸ್ಮಿನ್ಯಜ್ಞೇ ಸ್ವಧ್ವರೇ ॥ ೧೩ ॥

॥ ಪದಪಾಠಃ ॥

ಊರ್ಜಃ । ನಪಾತಂ । ಆ । ಹುವೇ । ಅಗ್ನಿಂ । ಪಾವಕಽಶೋಚಿಷಂ ।
ಅಸ್ಮಿನ್ । ಯಜ್ಞೇ । ಸುಽಅಧ್ವರೇ ॥ ೧೩ ॥

॥ ಸಾಯಣಭಾಷ್ಯಂ ॥

ಊರ್ಜೋಽನ್ನಸ್ಯ ನಪಾತಂ ಪುತ್ರಂ ಪಾವಕಶೋಚಿಷಂ ಶೋಧಕದೀಪ್ತಿಮಗ್ನಿಂ ಸ್ವಧ್ವರೇಽಸುರೈರತ್ಯಂತಮಹಿಂಸ್ಯೇಽಸ್ಮಿನ್ಯಜ್ಞ ಆ ಹುವೇ । ಆಹ್ವಯಾಮಿ ॥

॥ ಪ್ರತಿಪದಾರ್ಥ ॥

**ಊರ್ಜಃ**—ಅನ್ನಕ್ಕೆ । **ನಪಾತಂ**—ಪುತ್ರನೂ । **ಪಾವಕಶೋಚಿಷಂ**—ಶುದ್ಧಿಕಾರಕವಾದ ಕಾಂತಿಯುಳ್ಳವನೂ ಆದ । **ಅಗ್ನಿಂ**—ಅಗ್ನಿಯನ್ನು । **ಸ್ವಧ್ವರೇ**—ಅಸುರರ ಹಿಂಸೆಯಿಂದ ರಹಿತವಾದ । **ಅಸ್ಮಿನ್ ಯಜ್ಞೇ**—ಈ ಯಜ್ಞದಲ್ಲಿ । **ಆ ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ.

॥ ಭಾವಾರ್ಥ ॥

ಅನ್ನಪುತ್ರನೂ, ಶುದ್ಧಿಕಾರಕವಾದ ಪ್ರಭೆಯುಳ್ಳವನೂ ಆದ ಅಗ್ನಿಯನ್ನು ಅಸುರರ ಹಿಂಸೆಗೆ ಒಳಗಾಗದ ಈ ಯಜ್ಞದಲ್ಲಿ ಪ್ರಾರ್ಥಿಸಿ ಕರೆಯುತ್ತೇನೆ.

English Translation.

I invoke Agni of purifying lustre, the son of (sacrificial) food in this inviolable sacrifice.

॥ ಸಂಹಿತಾಪಾಠಃ ॥

ಸ ನೋ ಮಿತ್ರಮಹಸ್ತ್ವಮಗ್ನೇ ಶುಕ್ರೇಣ ಶೋಚಿಷಾ ।
ದೇವೈರಾ ಸತ್ಸಿ ಬರ್ಹಿಷಿ ॥ ೧೪ ॥

॥ ಪದಪಾಠಃ ॥

ಸಃ । ನಃ । ಮಿತ್ರಽಮಹಃ । ತ್ವಂ । ಅಗ್ನೇ । ಶುಕ್ರೇಣ । ಶೋಚಿಷಾ ।
ದೇವೈಃ । ಆ । ಸತ್ಸಿ । ಬರ್ಹಿಷಿ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಮಿತ್ರಮಹೋ ಮಿತ್ರಾಣಾಂ ಪೂಜನೀಯಾಗ್ನೇ ಸ ತ್ವಂ ಶುಕ್ರೇಣ ಜ್ವಲತಾ ಶೋಚಿಷಾ ತೇಜಸಾ ದೇವೈಃ ಸಹ ಬರ್ಹಿಷಿ ಯಜ್ಞ ಆ ಸತ್ಸಿ । ಆಸೀದ ॥

॥ ಪ್ರತಿಪದಾರ್ಥ ॥

**ಮಿತ್ರಮಹಃ**—ಮಿತ್ರರಿಗೆ ಪೂಜ್ಯನಾದ । **ಅಗ್ನೇ**—ಎಲೈ ಅಗ್ನಿಯೇ । **ಸಃ ತ್ವಂ**- ಪ್ರಸಿದ್ಧನಾದ ನೀನು । **ಶುಕ್ರೇಣ**—ಜ್ವಲಿಸುತ್ತಿರುವ । **ಶೋಚಿಷಾ**—ತೇಜಸ್ಸಿನಿಂದ । **ದೇವೈಃ**—ದೇವತೆಗಳೊಡನೆ । **ನಃ ಬರ್ಹಿಷಿ**—ನಮ್ಮ ಯಜ್ಞದಲ್ಲಿ । **ಆ ಸತ್ಸಿ**—ಕುಳಿತುಕೊ.

॥ ಭಾವಾರ್ಥ ॥

ಮಿತ್ರರಿಗೆ ಪೂಜ್ಯನಾದ ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ಜ್ವಲಿಸುತ್ತಿರುವ ತೇಜಸ್ಸಿನಿಂದ ಕೂಡಿ **ದೇವತೆಗಳೊಡನೆ** ನಮ್ಮ ಯಜ್ಞದಲ್ಲಿ ಕುಳಿತುಕೊ.

## English Translation.

**O** Agni, adorable to your friends, sit down with the gods on our sacred grass with your resplendent radiance.

॥ ಸಂಹಿತಾಪಾಠಃ ॥

**ಯೋ ಅಗ್ನಿಂ ತನ್ವೋ೩ ದಮೇ ದೇವಂ ಮರ್ತಃ ಸಪರ್ಯತಿ ।**
**ತಸ್ಮಾ ಇದ್ದೀದಯದ್ವಸು ॥ ೧೫ ॥**

॥ ಪದಪಾಠಃ ॥

**ಯಃ । ಅಗ್ನಿಂ । ತನ್ವಃ । ದಮೇ । ದೇವಂ । ಮರ್ತಃ । ಸಪರ್ಯತಿ ।**
**ತಸ್ಮೈ । ಇತ್ । ದೀದಯತ್ । ವಸು ॥ ೧೫ ॥**

॥ ಸಾಯಣಭಾಷ್ಯಂ ॥

**ಯೋ ಮರ್ತೋ ಮನುಷ್ಯೋ ದಮೇ ಗೃಹೇಽಗ್ನಿಂ ದೇವಂ ತನ್ವೋ ಧನಸ್ಯ ಪ್ರಾಪ್ತ್ಯರ್ಥಮಿತಿ ಶೇಷಃ । ಭೋಜನಂ ತನೇತಿ ಧನನಾಮಸು ಪಾಠಾತ್ । ಸಪರ್ಯತಿ ಪರಿಚರತಿ ತಸ್ಮಾ ಇತ್ತಸ್ಮಾ ಏವ ವಸು ಧನಂ ದೀದಯತ್ । ಸೋಽಗ್ನಿಃ ಪ್ರಯಚ್ಛತಿ ॥**

। ಪ್ರತಿಪದಾರ್ಥ ।

**ಯಃ ಮರ್ತಃ**—ಯಾವ ಮಾನವನು । **ದಮೇ**—ತನ್ನ ಗೃಹದಲ್ಲಿ । **ದೇವಂ**—ದೇವತಾತ್ಮನಾದ **ಅಗ್ನಿಂ**—ಅಗ್ನಿಯನ್ನು । **ತನ್ವಃ**—ಧನದ ಪ್ರಾಪ್ತಿಗಾಗಿ । **ಸಪರ್ಯತಿ**—ಪೂಜಿಸುವನೋ । **ತಸ್ಮೈ ಇತ್**— ಆ ಯಜಮಾನನಿಗೆ ಮಾತ್ರ । **ವಸು**—ಧನವನ್ನು । **ದೀದಯತ್**—ಅಗ್ನಿಯು ಕೊಡುತ್ತಾನೆ.

॥ ಭಾವಾರ್ಥ ॥

ಯಾವ ಮಾನವನು ತನ್ನ ಗೃಹದಲ್ಲಿ ದೇವತಾತ್ಮನಾದ ಅಗ್ನಿಯನ್ನು ಧನದ ಪ್ರಾಪ್ತಿಗಾಗಿ **ಪೂಜಿಸುವನೋ,** ಆ ಯಜಮಾನನಿಗೆ ಮಾತ್ರ ಅಗ್ನಿಯು ಧನವನ್ನು ಕೊಡುತ್ತಾನೆ.

English Translation.

Whatsoever mortal worships the divine Agni in his house **(for the** attainment) of wealth, to him he gives riches.

॥ ಸಂಹಿತಾಪಾಠಃ ॥

ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಂ ।

ಅಪಾಂ ರೇತಾಂಸಿ ಜಿನ್ವತಿ ॥ ೧೬ ॥

॥ ಪದಪಾಠಃ ॥

**ಅಗ್ನಿಃ । ಮೂರ್ಧಾ । ದಿವಃ । ಕಕುತ್ । ಪತಿಃ । ಪೃಥಿವ್ಯಾಃ । ಅಯಂ ।**

**ಅಪಾಂ । ರೇತಾಂಸಿ । ಜಿನ್ವತಿ ॥ ೧೬ ॥**

॥ ಸಾಯಣಭಾಷ್ಯಂ ॥

**ಮೂರ್ಧಾ ದೇವಾನಾಂ ಶ್ರೇಷ್ಠೋ ದಿವೋ ದ್ಯುಲೋಕಸ್ಯ ಕಕುದುಚ್ಛ್ರಿತಃ ಪೃಥಿವ್ಯಾಶ್ಚ ಪತಿರಯಮಗ್ನಿರಪಾಂ ರೇತಾಂಸಿ ಸ್ಥಾವರಜಂಗಮಾತ್ಮಕಾನಿ ಭೂತಾನಿ ಜಿನ್ವತಿ । ಪ್ರೀಣಯತಿ ॥**

॥ ಪ್ರತಿಪದಾರ್ಥ ॥

**ಮೂರ್ಧಾ**—ದೇವತೆಗಳಲ್ಲೆಲ್ಲಾ ಶ್ರೇಷ್ಠನೂ । **ದಿವಃ**—ದ್ಯುಲೋಕದಲ್ಲಿ । **ಕಕುತ್**—ಉನ್ನತವಾದ ಸ್ಥಿತಿಯಲ್ಲಿರುವವನೂ । **ಪೃಥಿವ್ಯಾಃ**—ಪೃಥ್ವಿಯ । **ಪತಿಃ**—ಒಡೆಯನೂ ಆದ । **ಅಯಂ ಅಗ್ನಿಃ**—ಈ ಅಗ್ನಿಯು । **ಅಪಾಂ**—ಉದಕಗಳ । **ರೇತಾಂಸಿ**—ಬೀಜರೂಪಗಳಾದ ಸಕಲ ಭೂತಗಳನ್ನೂ । **ಜಿನ್ವತಿ**—ತೃಪ್ತಿಪಡಿಸುತ್ತಾನೆ.

॥ ಭಾವಾರ್ಥ ॥

ದೇವತೆಗಳಲ್ಲೆಲ್ಲಾ ಶ್ರೇಷ್ಠನೂ, ದ್ಯುಲೋಕದಲ್ಲಿ ಉನ್ನತವಾದ ಸ್ಥಿತಿಯಲ್ಲಿರುವವನೂ, ಪೃಥ್ವಿಯ ಒಡೆಯನೂ ಆದ ಈ ಅಗ್ನಿಯು ಉದಕಗಳ ಬೀಜರೂಪಗಳಾದ ಸಕಲ ಭೂತಗಳನ್ನೂ ತೃಪ್ತಿಪಡಿಸುತ್ತಾನೆ.

English Translation.

Agni, the head (of the gods), the summit of heaven,—he **the lord of** the earth,—gladdens the seed of the waters.

|| ಸಂಹಿತಾಪಾಠಃ ||

ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ |
ತವ ಜ್ಯೋತೀಂಷ್ಯರ್ಚಯಃ || ೧೭ ||

|| ಪದಪಾಠಃ ||

**ಉತ್ | ಅಗ್ನೇ | ಶುಚಯಃ | ತವ | ಶುಕ್ರಾಃ | ಭ್ರಾಜಂತಃ | ಈರತೇ |**
**ತವ | ಜ್ಯೋತೀಂಷಿ | ಅರ್ಚಯಃ || ೧೭ ||**

|| ಸಾಯಣಭಾಷ್ಯಂ ||

**ಹೇ ಅಗ್ನೇ ತೇ ತವ ಶುಚಯೋ ನಿರ್ಮಲಾಃ ಶುಕ್ರಾಃ ಶುಕ್ಲವರ್ಣಾ ಭ್ರಾಜಂತೋ ದೀಪ್ಯಮಾನಾ ಅರ್ಚಯಃ ಪ್ರಭಾಸ್ತವ ಜ್ಯೋತೀಂಷಿ ತೇಜಾಂಸ್ಯುದೀರತೇ | ಪ್ರೇರಯಂತಿ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ತವ**—ನಿನ್ನ | **ಶುಚಯಃ**—ನಿರ್ಮಲವಾದವೂ | **ಶುಕ್ರಾಃ**—ಶುಭ್ರವರ್ಣವಾದವೂ | **ಭ್ರಾಜಂತಃ**—ಪ್ರಕಾಶಮಾನವಾದವೂ ಆದ | **ಅರ್ಚಯಃ**—ಪ್ರಭೆಗಳು | **ತವ**—ನಿನ್ನ | **ಜ್ಯೋತೀಂಷಿ**—ತೇಜಸ್ಸುಗಳನ್ನು | **ಉದೀರತೇ**—ಪ್ರಸರಿಸುವಂತೆ ಮಾಡುತ್ತವೆ.

|| ಭಾವಾರ್ಥ ||

ಎಲೈ ಅಗ್ನಿಯೇ, ನಿನ್ನ ನಿರ್ಮಲವಾದವೂ, ಶುಭ್ರವರ್ಣವುಳ್ಳವೂ, ಪ್ರಕಾಶಮಾನವಾದವೂ ಆದ ಪ್ರಭೆಗಳು ನಿನ್ನ ತೇಜಸ್ಸುಗಳನ್ನು ಪ್ರಸರಿಸುವಂತೆ ಮಾಡುತ್ತವೆ.

## English Translation.

Agni, your pure, bright, shining flames send forth your splendours.

|| ಸಂಹಿತಾಪಾಠಃ ||

ಈಶಿಷೇ ವಾರ್ಯಸ್ಯ ಹಿ ದಾತ್ರಸ್ಯಾಗ್ನೇ ಸ್ವರ್ಪತಿಃ |
ಸ್ತೋತಾ ಸ್ಯಾಂ ತವ ಶರ್ಮಣಿ || ೧೮ ||

|| ಪದಪಾಠಃ ||

**ಈಶಿಷೇ | ವಾರ್ಯಸ್ಯ | ಹಿ | ದಾತ್ರಸ್ಯ | ಅಗ್ನೇ | ಸ್ವಃಽಪತಿಃ |**
**ಸ್ತೋತಾ | ಸ್ಯಾಂ | ತವ | ಶರ್ಮಣಿ || ೧೮ ||**

|| ಸಾಯಣಭಾಷ್ಯಂ ||

ಹೇ ಅಗ್ನೇ ಸ್ವರ್ಪತಿಃ ಸ್ವರ್ಗಸ್ಯ ಸ್ವಾಮೀ ತ್ವಂ ವಾರ್ಯಸ್ಯ ವರಣೀಯಸ್ಯ ದಾತ್ರಸ್ಯ ದಾತವ್ಯಸ್ಯ ಧನಸ್ಯೇಶಿಷೇ | ಈಶ್ವರೋಽಸಿ | ಶರ್ಮಣಿ ಸುಖೇ ನಿಮಿತ್ತೇ ತವ ಸ್ತೋತಾ ಸ್ಯಾಂ | ಭವೇಯಂ ||

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ಸ್ವರ್ಪತಿಃ**—ಸ್ವರ್ಗಕ್ಕೆ ಒಡೆಯನಾದ ನೀನು | **ವಾರ್ಯಸ್ಯ**—ಅಪೇಕ್ಷಿತವಾದವೂ | **ದಾತ್ರಸ್ಯ**—ದಾನಾರ್ಹನಾದವೂ ಆದ ಧನಕ್ಕೆಲ್ಲಾ | **ಈಶಿಷೇ ಹಿ**—ಒಡೆಯನಾಗಿದ್ದೀಯೆ | **ಶರ್ಮಣಿ**—ನಮ್ಮ ಸುಖನಿಮಿತ್ತವಾಗಿ | **ತವ**—ನಿನ್ನ | **ಸ್ತೋತಾ**—ಪ್ರಶಂಸಕನಾಗಿ | **ಸ್ಯಾಂ**—ಆಗುತ್ತೇನೆ.

|| ಭಾವಾರ್ಥ ||

ಎಲೈ ಅಗ್ನಿಯೇ, ಸ್ವರ್ಗಪತಿಯಾದ ನೀನು ಎಲ್ಲರಿಂದಲೂ ಅಪೇಕ್ಷಿತವಾದವೂ, ದಾನಾರ್ಹವಾದವೂ ಆದ ಧನಕ್ಕೆಲ್ಲಾ ಒಡೆಯನಾಗಿದ್ದೀಯೆ. ನಮ್ಮ ಸುಖನಿಮಿತ್ತವಾಗಿ ನಿನ್ನ ಪ್ರಶಂಸಕನಾಗಿ ಆಗುತ್ತೇನೆ.

## English Translation.

Agni, lord of heaven, you preside over (all) that is to be desired or given ; may I be your eulogist for happiness.

|| ಸಂಹಿತಾಪಾಠಃ ||

ತ್ವಾಮಗ್ನೇ ಮನೀಷಿಣಸ್ತ್ವಾಂ ಹಿನ್ವಂತಿ ಚಿತ್ತಿಭಿಃ |
ತ್ವಾಂ ವರ್ಧಂತು ನೋ ಗಿರಃ || ೧೯ ||

|| ಪದಪಾಠಃ ||

ತ್ವಾಂ | ಅಗ್ನೇ | ಮನೀಷಿಣಃ | ತ್ವಾಂ | ಹಿನ್ವಂತಿ | ಚಿತ್ತಿಽಭಿಃ |
ತ್ವಾಂ | ವರ್ಧಂತು | ನಃ | ಗಿರಃ || ೧೯ ||

|| ಸಾಯಣಭಾಷ್ಯಂ ||

ಹೇ ಅಗ್ನೇ ತ್ವಾಂ ಮನೀಷಿಣೋ ಮನಸ ಈಶ್ವರಾಃ ಸ್ತೋತಾರಃ ಸ್ತುತಿಭಿಃ ಸ್ತುವಂತೀತಿ ಶೇಷಃ | ಕಿಂಚ ತ್ವಾಮೇವ ಚಿತ್ತಿಭಿಃ ಕರ್ಮಭಿರ್ಹಿನ್ವಂತಿ | ಪ್ರೀಣಯಂತಿ | ನೋಽಸ್ಮಾಕಂ ಗಿರಃ ಸ್ತುತಯಸ್ತ್ವಾಮೇವ ವರ್ಧಂತು | ವರ್ಧಯಂತು ||

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಾಂ**—ನಿನ್ನನ್ನು । **ಮನೀಷಿಣಃ**—ಸ್ಥಿರಸಂಕಲ್ಪವುಳ್ಳ ಸ್ತೋತೃಗಳು ಸ್ತುತಿಸುತ್ತಾರೆ । **ತ್ವಾಂ**—ನಿನ್ನನ್ನು । **ಚಿತ್ತಿಭಿಃ**—ಉತ್ತಮವಾದ ಕರ್ಮಗಳಿಂದ । **ಹಿನ್ವಂತಿ**—ತೃಪ್ತಿಪಡಿಸುತ್ತಾರೆ । **ನಃ**—ನಮ್ಮ । **ಗಿರಃ**—ಸ್ತುತಿಗಳು । **ತ್ವಾಂ**—ನಿನ್ನನ್ನು । **ವರ್ಧಂತು**—ಬೆಳೆಸಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನನ್ನು ಮನೋನಿಗ್ರಹವುಳ್ಳ ಸ್ತೋತೃಗಳು ಸ್ತುತಿಸುತ್ತಾರೆ. ನಿನ್ನನ್ನು ಉತ್ತಮವಾದ ಕರ್ಮಗಳಿಂದ ತೃಪ್ತಿಪಡಿಸುತ್ತಾರೆ. ನಮ್ಮ ಸ್ತುತಿಗಳು ನಿನ್ನನ್ನು ಬೆಳೆಸಲಿ.

English Translations.

You, Agni, the wise (praise), you they rejoice with (pious) rites; may our praises invigorate you.

॥ ಸಂಹಿತಾಪಾಠಃ ॥

ಅದಬ್ಧಸ್ಯ ಸ್ವಧಾವತೋ ದೂತಸ್ಯ ರೇಭತಃ ಸದಾ ।
ಅಗ್ನೇಃ ಸಖ್ಯಂ ವೃಣೀಮಹೇ ॥ ೨೦ ॥

॥ ಪದಪಾಠಃ ॥

**ಅದಬ್ಧಸ್ಯ । ಸ್ವಧಾಽವತಃ । ದೂತಸ್ಯ । ರೇಭತಃ । ಸದಾ ।**
**ಅಗ್ನೇಃ । ಸಖ್ಯಂ । ವೃಣೀಮಹೇ ॥ ೨೦ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಅದಬ್ಧಸ್ಯ ಕೇನಾಪ್ಯಹಿಂಸಿತಸ್ಯ ಸ್ವಧಾವತೋ ಬಲವತೋ ದೂತಸ್ಯ ದೇವಾನಾಂ ರೇಭತೋ ದೇವಾನ್ ಸ್ತುವತಸ್ತವ ಸಖ್ಯಂ ಸದಾ ವಯಂ ವೃಣೀಮಹೇ ॥**

॥ ಪ್ರತಿಪದಾರ್ಥ ॥

**ಅದಬ್ಧಸ್ಯ**—ಅಹಿಂಸಿತನಾದವನೂ । **ಸ್ವಧಾವತಃ**—ಶಕ್ತಿಯುತನೂ । **ದೂತಸ್ಯ**—ದೇವದೂತನೂ । **ರೇಭತಃ**—ದೇವತೆಗಳನ್ನು ಸ್ತುತಿಸುವವನೂ ಆದ । **ಅಗ್ನೇಃ**—ಅಗ್ನಿಯ । **ಸಖ್ಯಂ**—ಸಖ್ಯವನ್ನು । **ಸದಾ**—ಯಾವಾಗಲೂ । **ವೃಣೀಮಹೇ**—ನಾವು ಆಶಿಸುತ್ತೇವೆ.

॥ ಭಾವಾರ್ಥ ॥

ಅಹಿಂಸಿತನಾದವನೂ, ಶಕ್ತಿಯುತನೂ, ದೇವದೂತನೂ, ದೇವತೆಗಳನ್ನು ಸ್ತುತಿಸುವವನೂ ಆದ ಅಗ್ನಿಯ ಸಖ್ಯವನ್ನು ನಾವು ಯಾವಾಗಲೂ ಆಶಿಸುತ್ತೇವೆ.

## English Translation.

We ever choose the friendship of Agni, the unharmed, the strong, the messenger, the praiser (of the gods).

॥ ಸಂಹಿತಾಪಾಠಃ ॥

ಅಗ್ನಿಃ ಶುಚಿವ್ರತತಮಃ ಶುಚಿರ್ವಿಪ್ರಃ ಶುಚಿಃ ಕವಿಃ ।
ಶುಚೀ ರೋಚತ ಆಹುತಃ ॥ ೨೧ ॥

॥ ಪದಪಾಠಃ ॥

ಅಗ್ನಿಃ । ಶುಚಿವ್ರತಽತಮಃ । ಶುಚಿಃ । ವಿಪ್ರಃ । ಶುಚಿಃ । ಕವಿಃ ।
ಶುಚಿಃ । ರೋಚತೇ । ಆಽಹುತಃ ॥ ೨೧ ॥

॥ ಸಾಯಣಭಾಷ್ಯಂ ॥

ಶುಚಿವ್ರತತಮೋಽತಿಶಯೇನ ಶುದ್ಧಕರ್ಮಾ ಶುಚಿಃ ಶುದ್ಧ ಏವ ವಿಪ್ರೋ ಮೇಧಾವೀ ಶುಚಿಃ ಶುದ್ಧಃ ಸನ್ನೇವ ಕವಿಃ ಕ್ರಾಂತಕರ್ಮಾ ಶುಚಿರೇವಾಹುತೋಽಗ್ನೀ ರೋಚತೇ । ಪ್ರಕಾಶತೇ ॥

॥ ಪ್ರತಿಪದಾರ್ಥ ॥

**ಶುಚಿವ್ರತತಮಃ**—ಪರಿಶುದ್ಧವಾದ ಕರ್ಮವುಳ್ಳವನೂ । **ಶುಚಿಃ**—ಶುದ್ಧನಾದ । **ವಿಪ್ರಃ**—ಮೇಧಾವಿಯೂ । **ಶುಚಿಃ**—ಶುದ್ಧವಾದ । **ಕವಿಃ**—ಕ್ರಾಂತಕರ್ಮವುಳ್ಳವನೂ । **ಶುಚೀ**—ಪರಿಶುದ್ಧವಾಗಿ । **ಆಹುತಃ**—ಆಹುತಿಯನ್ನ ಪಿಸಲ್ಪಡತಕ್ಕವನೂ ಆದ । **ಅಗ್ನಿಃ**—ಅಗ್ನಿಯು । **ರೋಚತೇ**—ಪ್ರಕಾಶಿಸುತ್ತಾನೆ.

॥ ಭಾವಾರ್ಥ ॥

ಪರಿಶುದ್ಧವಾದ ಕರ್ಮವುಳ್ಳವನೂ, ಶುದ್ಧನಾದ ಮೇಧಾವಿಯೂ, ಶುದ್ಧವಾದ ಕ್ರಾಂತಕರ್ಮವುಳ್ಳವನೂ, ಪರಿಶುದ್ಧವಾಗಿ ಆಹುತಿಯನ್ನ ಪಿಸಲ್ಪಡತಕ್ಕವನೂ ಆದ ಅಗ್ನಿಯು ಪ್ರಕಾಶಿಸುತ್ತಾನೆ.

## English Translation.

The pure Agni shines forth when worshipped,—the purest offerer, the pure priest, the pure sage.

॥ ಸಂಹಿತಾಪಾಠಃ ॥

ಉತ ತ್ವಾ ಧೀತಯೋ ಮಮ ಗಿರೋ ವರ್ಧಂತು ವಿಶ್ವಹಾ ।
ಅಗ್ನೇ ಸಖ್ಯಸ್ಯ ಬೋಧಿ ನಃ ॥ ೨೨ ॥

|| ಪದಪಾಠಃ ||

ಉತ । ತ್ವಾ । ಧೀತಯಃ । ಮಮ । ಗಿರಃ । ವರ್ಧಂತು । ವಿಶ್ವಹಾ ।

ಅಗ್ನೇ । ಸಖ್ಯಸ್ಯ । ಬೋಧಿ । ನಃ || ೨೨ ||

|| ಸಾಯಣಭಾಷ್ಯಂ ||

ಉತಾಪಿ ಚ ಹೇ ಅಗ್ನೇ ತ್ವಾ ತ್ವಾಂ ಮಮ ಧೀತಯಃ ಕರ್ಮಾಣಿ ಗಿರಃ ಸ್ತುತಯಶ್ಚ ವಿಶ್ವಹಾ ಸರ್ವದಾ ವರ್ಧಂತು । ವರ್ಧಯಂತು । ನೋಽಸ್ಮಾಕಂ ಸಖ್ಯಸ್ಯ ಸಖ್ಯಂ ಸಖಿಕರ್ಮ ಸ್ತುತ್ಯಾದಿಕಂ ಬೋಧಿ । ಬುಧ್ಯಸ್ವ ||

|| ಪ್ರತಿಪದಾರ್ಥ ||

ಉತ—ಮತ್ತು । ಅಗ್ನೇ—ಎಲೈ ಅಗ್ನಿಯೇ । ಮಮ—ನನ್ನ । ಧೀತಯಃ—ಕರ್ಮಗಳೂ । ಗಿರಃ—ಸ್ತುತಿಗಳೂ । ತ್ವಾ—ನಿನ್ನನ್ನು । ವಿಶ್ವಹಾ—ಯಾವಾಗಲೂ । ವರ್ಧಂತು—ಬೆಳೆಸಲಿ । ನಃ—ನಮ್ಮ । ಸಖ್ಯಸ್ಯ—ಮಿತ್ರತ್ವವನ್ನು । ಬೋಧಿ—ತಿಳಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನನ್ನ ಕರ್ಮಗಳೂ, ಸ್ತುತಿಗಳೂ ನಿನ್ನನ್ನು ಯಾವಾಗಲೂ ಬೆಳೆಸಲಿ. ನಮ್ಮ ಮಿತ್ರತ್ವವನ್ನು ನೀನು ತಿಳಿ.

## English Translation.

May my rites also and my praises ever invigorate you: Agni, take thought of our friendship.

|| ಸಂಹಿತಾಪಾಠಃ ||

ಯದಗ್ನೇ ಸ್ಯಾಮಹಂ ತ್ವಂ ತ್ವಂ ವಾ ಘಾ ಸ್ಯಾ ಅಹಂ ।

ಸ್ಯುಷ್ಟೇ ಸತ್ಯಾ ಇಹಾಶಿಷಃ || ೨೩ ||

|| ಪದಪಾಠಃ ||

ಯತ್ । ಅಗ್ನೇ । ಸ್ಯಾಂ । ಅಹಂ । ತ್ವಂ । ತ್ವಂ । ವಾ । ಘ । ಸ್ಯಾಃ । ಅಹಂ ।

ಸ್ಯುಃ । ತೇ । ಸತ್ಯಾಃ । ಇಹ । ಆಽಶಿಷಃ || ೨೩ ||

|| ಸಾಯಣಭಾಷ್ಯಂ ||

ಹೇ ಅಗ್ನೇ ಯದ್ಯದ್ಯಹಂ ತ್ವಂ ಬಹುಧನಃ ಸ್ಯಾಂ ಭವೇಯಂ ತ್ವಂ ವಾ ಘ ತ್ವಂ ವಾ ಖಲ್ವಹಂ ದರಿದ್ರಃ ಸ್ತೋತಾ ಸ್ಯಾಃ ಭವೇಃ ತತಸ್ತವಾಶಿಷ ಆಶಾಸನಾನೀಹಾಸ್ಮದ್ವಿಷಯೇ ಸತ್ಯಾಃ ಸತ್ಯಾನಿ ಸ್ಯುಃ । ಭವೇಯುಃ ||

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ। **ಯತ್**—ಒಂದು ವೇಳೆ। **ಅಹಂ**—ನಾನು। **ತ್ವಂ**—ಸಂಪದ್ಯುಕ್ತನಾದ ನೀನೇ। **ಸ್ಯಾಂ**—ಆಗಿದ್ದರೂ। **ವಾ**—ಅಥವಾ। **ತ್ವಂ ಘ**—ನೀನೇ। **ಅಹಂ**—ದರಿದ್ರನಾದ ನನ್ನ ರೂಪದಲ್ಲಿ। **ಸ್ಯಾಃ**—ಇದ್ದದ್ದೇ ಆದರೂ (ಆಗ)। **ಇಹ**—ಈ ವಿಷಯದಲ್ಲಿ। **ತೇ ಆಶಿಷಃ**—ನಿನ್ನ ಇಷ್ಟಾರ್ಥಗಳೆಲ್ಲವೂ। **ಸತ್ಯಾಃ**—ನೆರವೇರಲ್ಪಡುವುದಾಗಿ। **ಸ್ಯುಃ**—ಖಂಡಿತ ಆಗುತ್ತಿದ್ದವು.

|| ಭಾವಾರ್ಥ ||

ಎಲೈ ಅಗ್ನಿಯೇ, ಒಂದು ವೇಳೆ ನಾನೇ ನಿನ್ನ ರೂಪದಲ್ಲಿದ್ದು ಧನಕ್ಕೆ ಒಡೆಯನಾಗಿದ್ದರೂ ಅಥವಾ ನೀನೂ ದರಿದ್ರನಾದ ನನ್ನ ರೂಪದಲ್ಲಿದ್ದದ್ದೇ ಆದರೂ ಆಗ ಖಂಡಿತವಾಗಿ ನಿನ್ನ ಇಷ್ಟಾರ್ಥವು ನೆರವೇರುತ್ತಲೇ ಇದ್ದಿತು.

English Translation.

Agni, if I were you or you were I, your wishes here should come true.

॥ ಸಂಹಿತಾಪಾಠಃ ॥

**ವಸುರ್ವಸುಪತಿರ್ಹಿ ಕಮಸ್ಯಗ್ನೇ ವಿಭಾವಸುಃ ।**
**ಸ್ಯಾಮ ತೇ ಸುಮತಾವಪಿ ॥ ೨೪ ॥**

|| ಪದಪಾಠಃ ||

**ವಸುಃ । ವಸುಽಪತಿಃ । ಹಿ । ಕಂ । ಅಸಿ । ಅಗ್ನೇ । ವಿಭಾಽವಸುಃ ।**
**ಸ್ಯಾಮ । ತೇ । ಸುಽಮತೌ । ಅಪಿ ॥ ೨೪ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಂ ವಿಭಾವಸುರ್ದೀಪ್ತಿಧನೋ ವಸುಪತಿರ್ಧನಪತಿರ್ವಸುರ್ವಾಸಯಿತಾ ಚಾಸಿ ಭವಸಿ ಹಿ ಯಸ್ಮಾತ್ ಅತೋ ವಯಮಪಿ ತೇ ತವ ಸುಮತಾವನುಗ್ರಹಬುದ್ಧೌ ಸ್ಯಾಮ । ಭವೇಮ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ। (**ತ್ವಂ**—ನೀನು)। **ವಿಭಾವಸುಃ**—ಕಾಂತಿಯೇ ಧನವಾಗಿ ಉಳ್ಳವನೂ। **ವಸುಪತಿಃ**—ಧನಕ್ಕೆ ಒಡೆಯನೂ। **ವಸುಃ**—ವಸತಿದಾಯಕನೂ ಆಗಿ। **ಅಸಿ**—ಆಗಿದ್ದೀಯೆ। **ಹಿ**—ಆದುದರಿಂದಲೇ। (**ವಯಂ**) **ಅಪಿ**—ನಾವೂ ಸಹ। **ತೇ**—ನಿನ್ನ। **ಸುಮತೌ**—ಅನುಗ್ರಹಬುದ್ಧಿಯಲ್ಲಿ। **ಸ್ಯಾಮ**—ಇರುವಂತಾಗಲಿ.

|| ಭಾವಾರ್ಥ ||

ಎಲೈ ಅಗ್ನಿಯೇ, ನೀನು ಪ್ರಭಾರೂಪನಾದ ಧನವುಳ್ಳವನೂ, ಧನಕ್ಕೆ ಒಡೆಯನೂ ಆಗಿದ್ದೀಯೆ. ಆದುದರಿಂದಲೇ ನಾವೂ ಸಹ ನಿನ್ನ ಅನುಗ್ರಹಕ್ಕೆ ಪಾತ್ರರಾಗುವಂತಾಗಲಿ.

English Translation.

Agni, you are rich in splendour, the lord of wealth, and the giver of dwellings; may we too abide in your favour.

|| ಸಂಹಿತಾಪಾಠಃ ||

ಅಗ್ನೇ ಧೃತವ್ರತಾಯ ತೇ ಸಮುದ್ರಾಯೇವ ಸಿಂಧವಃ ।

ಗಿರೋ ವಾಶ್ರಾಸ ಈರತೇ || ೨೫ ||

|| ಪದಪಾಠಃ ||

ಅಗ್ನೇ । ಧೃತಽವ್ರತಾಯ । ತೇ । ಸಮುದ್ರಾಯಽಇವ । ಸಿಂಧವಃ ।

ಗಿರಃ । ವಾಶ್ರಾಸಃ । ಈರತೇ || ೨೫ ||

|| ಸಾಯಣಭಾಷ್ಯಂ ||

**ಹೇ ಅಗ್ನೇ ಧೃತವ್ರತಾಯ ಧೃತಕರ್ಮಣೇ ತೇ ತುಭ್ಯಂ ವಾಶ್ರಾಸೋ ವಾಶನಶೀಲಾ ಗಿರೋ ಮಮ ಸ್ತುತಯಃ ಸಿಂಧವೋ ನದ್ಯಃ ಸಮುದ್ರಾಯೇವ ಯಥಾ ಸಮುದ್ರಾಯ ತಥೇರತೇ । ಪ್ರವರ್ತಂತೇ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ಸಿಂಧವಃ**—ನದಿಗಳು । **ಸಮುದ್ರಾಯ ಇವ**—ಸಮುದ್ರಾಭಿಮುಖವಾಗಿ ಪ್ರವಹಿಸುವಂತೆ । **ವಾಶ್ರಾಸಃ**—ಶಬ್ದಮಾಡತಕ್ಕ । **ಗಿರಃ**—ನನ್ನ ಸ್ತುತಿಗಳು । **ಧೃತವ್ರತಾಯ**—ವ್ರತಧಾರಿಯಾದ । **ತೇ**—ನಿನ್ನ ಅಭಿಮುಖವಾಗಿ । **ಈರತೇ**—ಚಲಿಸುತ್ತವೆ.

|| ಭಾವಾರ್ಥ ||

ಎಲೈ ಅಗ್ನಿಯೇ, ನದಿಗಳು ಸಮುದ್ರಾಭಿಮುಖವಾಗಿ ಪ್ರವಹಿಸುವಂತೆ ಶಬ್ದಮಾಡತಕ್ಕ ನನ್ನ ಸ್ತುತಿಗಳು ವ್ರತಧಾರಿಯಾದ (ಕರ್ಮಾನುಷ್ಠಾನಗಳಿಗೆ ಸಾಧನನಾದ) ನಿನಗಭಿಮುಖವಾಗಿ ಚಲಿಸುತ್ತವೆ.

English Translation.

Agni, my loud praises proceed to you, observant of pious rites, as rivers to the sea.

॥ ಸಂಹಿತಾಪಾಠಃ ॥

ಯುವಾನಂ ವಿಶ್ಪತಿಂ ಕವಿಂ ವಿಶ್ವಾದಂ ಪುರುವೇಪಸಂ ।
ಅಗ್ನಿಂ ಶುಂಭಾಮಿ ಮನ್ಮಭಿಃ ॥ ೨೬ ॥

॥ ಪದಪಾಠಃ ॥

ಯುವಾನಂ । ವಿಶ್ಪತಿಂ । ಕವಿಂ । ವಿಶ್ವಽಅದಂ । ಪುರುಽವೇಪಸಂ ।
ಅಗ್ನಿಂ । ಶುಂಭಾಮಿ । ಮನ್ಮಽಭಿಃ ॥ ೨೬ ॥

॥ ಸಾಯಣಭಾಷ್ಯಂ ॥

ಯುವಾನಂ ನಿತ್ಯತರುಣಂ ವಿಶ್ಪತಿಂ ವಿಶಾಂ ಪತಿಂ ಕವಿಂ ಕ್ರಾಂತಕರ್ಮಾಣಂ ವಿಶ್ವಾದಂ ಸರ್ವಸ್ಯ ಹವಿಷೋಽತ್ತಾರಂ ಪುರುವೇಪಸಂ ಬಹುಕರ್ಮಾಣಂ । ವೇಶೋ ವೇಪ ಇತಿ ಕರ್ಮನಾಮಸು ಪಾಠಾತ್। ಅಗ್ನಿಂ ಮನ್ಮಭಿರ್ಮನನೀಯೈಃ ಸ್ತೋತ್ರೈಃ ಶುಂಭಾಮಿ । ಶೋಭಯಾಮಿ ॥

॥ ಪ್ರತಿಪದಾರ್ಥ ॥

ಯುವಾನಂ— ನಿತ್ಯತರುಣನೂ । ವಿಶ್ಪತಿಂ— ಪ್ರಜೆಗಳ ಪಾಲಕನೂ । ಕವಿಂ— ಕ್ರಾಂತಕರ್ಮವುಳ್ಳವನೂ । ವಿಶ್ವಾದಂ—ಸಕಲ ಹವಿಸ್ಸುಗಳನ್ನು ಭಕ್ಷಿಸುವವನೂ । ಪುರುವೇಪಸಂ—ಅನೇಕ ವಿಧವಾದ ಕರ್ಮವುಳ್ಳವನೂ ಆದ । ಅಗ್ನಿಂ—ಅಗ್ನಿಯನ್ನು । ಮನ್ಮಭಿಃ—ಧ್ಯಾನಾತ್ಮಕವಾದ ಸ್ತುತಿಗಳಿಂದ । ಶುಂಭಾಮಿ— ಅಲಂಕರಿಸುತ್ತೇನೆ ಎಂದರೆ ಸ್ತುತಿಸುತ್ತೇನೆ.

॥ ಭಾವಾರ್ಥ ॥

ನಿತ್ಯತರುಣನೂ, ಪ್ರಜೆಗಳ ಪಾಲಕನೂ, ಕ್ರಾಂತಕರ್ಮವುಳ್ಳವನೂ ಆದ ಅಗ್ನಿಯನ್ನು ।ಧ್ಯಾನಾತ್ಮಕವಾದ ಸ್ತುತಿಗಳಿಂದ ಅಲಂಕರಿಸುತ್ತೇನೆ ಎಂದರೆ ಸ್ತುತಿಸುತ್ತೇನೆ.

English Translation.

I glorify with hymns the ever-young Agni, the lord of men, the wise the all-devouring, the performer of many acts.

॥ ಸಂಹಿತಾಪಾಠಃ ॥

ಯಜ್ಞಾನಾಂ ರಥ್ಯೇ ವಯಂ ತಿಗ್ಮಜಂಭಾಯ ವೀಳವೇ ।
ಸ್ತೋಮೈರಿಷೇಮಾಗ್ನಯೇ ॥ ೨೭ ॥

॥ ಪದಪಾಠಃ ॥

ಯಜ್ಞಾನಾಂ । ರಥ್ಯೇ । ವಯಂ । ತಿಗ್ಮSಜಂಭಾಯ । ವೀಳವೇ ।

ಸ್ತೋಮೈಃ । ಇಷೇಮ । ಅಗ್ನಯೇ ॥ ೨೭ ॥

॥ ಸಾಯಣಭಾಷ್ಯಂ ॥

ಯಜ್ಞಾನಾಂ ರಥ್ಯೇ ನೇತ್ರೇ ತಿಗ್ಮಜಂಭಾಯ ತೀಕ್ಷ್ಣಜ್ವಾಲಾಯ ವೀಳವೇ ಬಲವತೇಽಗ್ನಯೇ ಸ್ತೋಮೈಃ ಸ್ತೋತ್ರೈರ್ವಯಮಾಂಗಿರಸಾ ಇಷೇಮ । ಸ್ತುತಿಂ ಕರ್ತುಮಿಚ್ಛೇಮ ॥

॥ ಪ್ರತಿಪದಾರ್ಥ ॥

ಯಜ್ಞಾನಾಂ—ಯಜ್ಞಗಳಿಗೆ । ರಥ್ಯೇ—ನೇತೃವಾದವನೂ । ತಿಗ್ಮಜಂಭಾಯ—ತೀಕ್ಷ್ಣವಾದ ಜ್ವಾಲೆಯುಳ್ಳವನೂ । ವೀಳವೇ—ಶಕ್ತಿಯುತನೂ ಆದ । ಅಗ್ನಯೇ—ಅಗ್ನಿಯನ್ನು ಕುರಿತು । ಸ್ತೋಮೈಃ—ಸ್ತೋತ್ರಗಳಿಂದ । ವಯಂ—ನಾವು । ಇಷೇಮ—ಪ್ರಶಂಸಿಸಲಿಚ್ಛಿಸುತ್ತೇವೆ.

॥ ಭಾವಾರ್ಥ ॥

ಯಜ್ಞಗಳಿಗೆ ನೇತೃವಾದವನೂ, ತೀಕ್ಷ್ಣವಾದ ಜ್ವಾಲೆಯುಳ್ಳವನೂ, ಶಕ್ತಿಯುತನೂ ಆದ ಅಗ್ನಿಯನ್ನು ಕುರಿತು ನಾವು ಸ್ತುತಿಗಳಿಂದ ಪ್ರಶಂಸಿಸಲಿಚ್ಛಿಸುತ್ತೇವೆ.

## English Translation.

Let us seek with our hymns Agni, the conductor of the sacrifices, the mighty, the sharp-jawed.

॥ ಸಂಹಿತಾಪಾಠಃ ॥

ಅಯಮಗ್ನೇ ತ್ವೇ ಅಪಿ ಜರಿತಾ ಭೂತು ಸಂತ್ಯ ।

ತಸ್ಮೈ ಪಾವಕ ಮೃಳಯ ॥ ೨೮ ॥

॥ ಪದಪಾಠಃ ॥

ಅಯಂ । ಅಗ್ನೇ । ತ್ವೇ ಇತಿ । ಅಪಿ । ಜರಿತಾ । ಭೂತು । ಸಂತ್ಯ ।

ತಸ್ಮೈ । ಪಾವಕ । ಮೃಳಯ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ಪಾವಕ ಶೋಧಕ ಸಂತ್ಯ ಭಜನೀಯಾಗ್ನೇ ತ್ವೇ ಅಪಿ ತ್ವಯ್ಯೇವಾಯಮಸ್ಮದೀಯೋ ಜನೋ ಜರಿತಾ ಸ್ತೋತಾ ಭೂತು । ಭವತು ।, ತಸ್ಮೈ ಜರಿತ್ರೇ ಮೃಳಯ । ಸುಖಮುತ್ಪಾದಯ । ಶಂ ಸುಖಯ ವಾ ॥

|| ಪ್ರತಿಪದಾರ್ಥ ||

**ಪಾವಕ**—ಶುದ್ಧಿಕಾರನೂ | **ಸಂತ್ಯ**—ಪೂಜ್ಯನೂ ಆದ | **ಅಗ್ನೇ**—ಎಲೈ ಅಗ್ನಿಯೇ | **ಅಯಂ**—ನಮ್ಮ ಈ ಜನವು | **ತ್ವೇ ಅಪಿ**—ನಿನ್ನನ್ನೂ ಸಹ | **ಜರಿತಾ**—ಸ್ತುತಿಸುವ ಜನರಾಗಿ | **ಭೂತು**—ಆಗಲಿ | **ತಸ್ಮೈ**—ನಿನ್ನನ್ನು ಸ್ತುತಿಸುವ ನಮ್ಮ ಜನರಿಗೂ | **ಮೃಳಯ**—ಸುಖವನ್ನುಂಟುಮಾಡು.

|| ಭಾವಾರ್ಥ ||

ಶುದ್ಧಿಕಾರಕನೂ ಪೂಜ್ಯನೂ, ಆದ ಎಲೈ ಅಗ್ನಿಯೇ, ನಮ್ಮ ಈ ಜನವು ನಿನ್ನನ್ನೂ ಸಹ ಸ್ತುತಿಸುವ ಜನರಾಗಲಿ. ನಿನ್ನನ್ನು ಸ್ತುತಿಸುವ ನಮ್ಮ ಜನರಿಗೂ ಸುಖವನ್ನುಂಟುಮಾಡು.

## English Translation.

May this (my family) also be your worshippers adorable Agni; O purifier, give them happiness.

|| ಸಂಹಿತಾಪಾಠಃ ||

ಧೀರೋ ಹ್ಯಸ್ಯದ್ಮಸದ್ವಿಪ್ರೋ ನ ಜಾಗೃವಿಃ ಸದಾ |
ಅಗ್ನೇ ದೀದಯಸಿ ದ್ಯವಿ || ೨೯ ||

|| ಪದಪಾಠಃ ||

ಧೀರಃ | ಹಿ | ಅಸಿ | ಅದ್ಮಸತ್ | ವಿಪ್ರಃ | ನ | ಜಾಗೃವಿಃ | ಸದಾ |
ಅಗ್ನೇ | ದೀದಯಸಿ | ದ್ಯವಿ || ೨೯ ||

|| ಸಾಯಣಭಾಷ್ಯಂ ||

**ಹೇ ಅಗ್ನೇ ತ್ವಂ ಧೀರೋಽಸಿ ಹಿ | ಭವಸಿ ಖಲು | ಅದ್ಮಸದ್ಧವಿಷಿ ಸೀದನ್ವಿಪ್ರೋ ನ ಮೇಧಾವೀವ ಜಾಗೃವಿಃ ಪ್ರಜಾನಾಂ ಹಿತಕರಣೇ ಜಾಗರಣಶೀಲೋಽಸಿ | ಸದಾ ದ್ಯವ್ಯಂತರಿಕ್ಷೇ ದೀದಯಸಿ | ದೀವ್ಯಸಿ ಚ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | (**ತ್ವಂ**—ನೀನು) | **ಧೀರಃ**—ಸ್ಥಿರಚಿತ್ತವುಳ್ಳವನಾಗಿ | **ಅಸಿ ಹಿ**—ಆಗಿದ್ದೀಯೆ | **ಅದ್ಮಸತ್**—ಹವಿಸ್ಸನ್ನು ಭಕ್ಷಿಸುತ್ತಾ | **ವಿಪ್ರೋ ನ**—ಮೇಧಾವಿಯಾಗಿದ್ದು | **ಜಾಗೃವಿಃ**—ಪ್ರಜೆಗಳಿಗೆ ಹಿತವನ್ನುಂಟುಮಾಡುವುದಕ್ಕೆ ಎಚ್ಚರವುಳ್ಳವನಾಗಿದ್ದೀಯೆ | **ಸದಾ**—ಯಾವಾಗಲೂ | **ದ್ಯವಿ**—ಅಂತರಿಕ್ಷದಲ್ಲಿ | **ದೀದಯಸಿ**—ಪ್ರಕಾಶಿಸುತ್ತೀಯೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಸ್ಥಿರಚಿತ್ತವುಳ್ಳವನಾಗಿದ್ದೀಯೆ. ಹವಿಸ್ಸನ್ನು ಭಕ್ಷಿಸುತ್ತಾ ಮೇಧಾವಿಯಾಗಿದ್ದು ಪ್ರಜೆಗಳಿಗೆ ಹಿತವನ್ನುಂಟುಮಾಡುವುದಕ್ಕೆ ಸದಾ ಎಚ್ಚರವುಳ್ಳವನಾಗಿರುತ್ತೀಯೆ. ಯಾವಾಗಲೂ ಅಂತರಿಕ್ಷದಲ್ಲಿ ಪ್ರಕಾಶಿಸುತ್ತೀಯೆ.

English Translation.

You verily are wise, seated at the oblation, wakeful as the seer (for the welfare of living beings); Agni, you ever shine in the sky.

॥ ಸಂಹಿತಾಪಾಠಃ ॥

ಪುರಾಗ್ನೇ ದುರಿತೇಭ್ಯಃ ಪುರಾ ಮೃಧ್ರೇಭ್ಯಃ ಕವೇ ।
ಪ್ರ ಣ ಆಯುರ್ವಸೋ ತಿರ ॥ ೩೦ ॥

॥ ಪದಪಾಠಃ ॥

ಪುರಾ । ಅಗ್ನೇ । ದುಃऽಇತೇಭ್ಯಃ । ಪುರಾ । ಮೃಧ್ರೇಭ್ಯಃ । ಕವೇ ।
ಪ್ರ । ನಃ । ಆಯುಃ । ವಸೋ ಇತಿ । ತಿರ ॥ ೩೦ ॥

॥ ಸಾಯಣಭಾಷ್ಯಂ ॥

ಹೇ ವಸೋ ವಾಸಕ ಕವೇ ಕ್ರಾಂತಕರ್ಮನ್ನಗ್ನೇ ದುರಿತೇಭ್ಯಃ ಪಾಪೇಭ್ಯಃ ಪುರಾ ಮೃಧ್ರೇಭ್ಯೋ ಹಿಂಸಕೇಭ್ಯಶ್ಚ ಪುರಾ । ಯದಾ ದುರಿತಾನಿ ಶತ್ರವಶ್ಚಾಸ್ಮಾನ್ ಹಿಂಸಿತುಮುದ್ಯುಂಜತೇ ತತಃ ಪ್ರಾಗೇವೇತ್ಯರ್ಥಃ । ನೋऽಸ್ಮಾಕಮಾಯುಃ ಪ್ರ ತಿರ । ವರ್ಧಯ ॥

॥ ಪ್ರತಿಪದಾರ್ಥ ॥

**ವಸೋ**—ವಸತಿದಾಯಕನೂ । **ಕವೇ**—ಕ್ರಾಂತದರ್ಶಿಯೂ ಆದ । **ಅಗ್ನೇ**—ಎಲೈ ಅಗ್ನಿಯೇ । **ದುರಿತೇಭ್ಯಃ ಪುರಾ**—ನಮ್ಮ ಪಾಪಕರ್ಮಗಳಿಂದ ತೊಂದರೆಯಾಗುವುದಕ್ಕೆ ಮೊದಲೇ । **ಮೃಧ್ರೇಭ್ಯಃ ಪುರಾ**—ನಮ್ಮ ಶತ್ರುಗಳಿಂದ ಹಿಂಸೆಯಾಗುವುದಕ್ಕೆ ಮೊದಲೇ । **ನಃ**—ನಮ್ಮ । **ಆಯುಃ**—ಆಯುಸ್ಸನ್ನು । **ಪ್ರ ತಿರ**—ವೃದ್ಧಿಗೊಳಿಸು.

॥ ಭಾವಾರ್ಥ ॥

ವಸತಿದಾಯಕನೂ, ಕ್ರಾಂತದರ್ಶಿಯೂ ಆದ ಎಲೈ ಅಗ್ನಿಯೇ, ನಮ್ಮ ಪಾಪಕರ್ಮಗಳಿಂದ ತೊಂದರೆಯಾಗುವುದಕ್ಕೆ ಮೊದಲೇ, ನಮ್ಮ ಶತ್ರುಗಳಿಂದ ಹಿಂಸೆಯಾಗುವುದಕ್ಕೆ ಮೊದಲೇ ನಮ್ಮ ಆಯುಸ್ಸನ್ನು ವೃದ್ಧಿಗೊಳಿಸು.

## English Translation.

Wise Agni, giver of dwellings, extend our lives, before **sins** or assailants (destroy us.)



# ನಲವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಆ ಘಾ ಯೇ ಇತಿ ದ್ವಿಚತ್ವಾರಿಂಶದೃಚಂ ತೃತೀಯಂ **ಸೂಕ್ತಂ** । **ಆತ್ರೇಯಮನುಕ್ರಮಣಿಕಾ** । ಆ ಘ ದ್ವಿಚತ್ವಾರಿಂಶತ್ತ್ರಿಶೋಕ ಆದ್ಯಾಗ್ನೇಂದ್ರೀ । ಅನುಕ್ತಗೋತ್ರತ್ವಾತ್ಕಾಣ್ವಸ್ತ್ರಿಶೋಕ **ಋಷಿಃ** । ಪರಂ ಗಾಯತ್ರಂ ಪ್ರಾಗ್ಗ್ವತ್ಸಪ್ರೇರಿತಿ ಪರಿಭಾಷಯಾ ಗಾಯತ್ರೀ ಛಂದಃ । ಅನುಕ್ತತ್ವಾದಿಂದ್ರೋ **ದೇವತಾ** । ಆದ್ಯಾಯಾಸ್ತ್ವಗ್ನಿಶ್ಚೇಂದ್ರಶ್ಚ ॥ ಮಹಾವ್ರತೇ ನಿಷ್ಕೇವಲ್ಯೇ ಗಾಯತ್ರತೃಚಾಶೀತಾವೇತತ್ಸೂಕ್ತಂ । **ತಥೈವ ಪಂಚಮಾರಣ್ಯಕೇ ಸೂತ್ರಿತಂ** । ಆ ಘಾ ಯೇ ಅಗ್ನಿಮಿಂಧತ ಆ ತೂ ನ ಇಂದ್ರ ಕ್ಷುಮಂತಮಿತಿ **ಸೂಕ್ತೇ** । **ಐ. ಆ. ೫-೨-೩ । ಇತಿ ॥ ತೃತೀಯೇ ಪರ್ಯಾಯೇಽಚ್ಛಾವಾಕಶಸ್ತ್ರ ಆದಿತಃ ಸಪ್ತದಶರ್ಚಃ । ತಥೈವಾತಿರಾತ್ರ ಇತಿ ಖಂಡೇ ಸೂತ್ರ್ಯತೇ । ಆ ಘಾ ಯೇ ಅಗ್ನಿಮಿಂಧತ ಇತಿ ಸಪ್ತದಶ । ಆ. ೬-೪ । ಇತಿ ॥ ಆಗ್ರಯಣ ಆಗ್ನೇಂದ್ರಸ್ಯ ಹವಿಷ ಆ ಘಾ ಯ ಇತ್ಯೇಷಾನುವಾಕ್ಯಾ । ಸೂತ್ರಿತಂ ಚ । ಆ ಘಾ ಯೇ ಅಗ್ನಿಮಿಂಧತೇ ಸುಕರ್ಮಾಣಃ ಸುರುಚೋ ದೇವಯಂತ ಇತಿ ಸ್ತೋತ್ರಂ । ಆ. ೨-೯ । ಇತಿ ॥ ಮೈತ್ರಾವರುಣಾತಿರಿಕ್ತೋಕ್ಥ್ಯೇ ಸ್ತೋತ್ರಮಿಂದ್ರಾಯೇತ್ಯಾದ್ಯಾಃ ಷಡೃಚೋ ವಿಕಲ್ಪೇನ ಸ್ತೋತ್ರಿಯಾನುರೂಪಾಃ । ಸೂತ್ರಿತಂ ಚ । ತದ್ವೋ ಗಾಯ ಸುತೇ ಸಚಾ ಸ್ತೋತ್ರಮಿಂದ್ರಾಯ ಗಾಯತ । ಆ. ೯-೧೧ । ಇತಿ ॥ ದ್ವಿತೀಯೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿನೋಽಭಿ ತ್ವಾ ವೃಷಭೇತಿ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಅಭಿ ತ್ವಾ ವೃಷಭಾ ಸುತೇಽಭಿ ಪ್ರ ಗೋಪತಿಂ ಗಿರಾ । ಆ. ೬-೪ । ಇತಿ ॥ ಚಾತುರ್ವಿಂಶಿಕೇಽಹನಿ ಪ್ರಾತಃಸವನೇ ಭಿಂಧಿ ವಿಶ್ವಾ ಇತಿ ಬ್ರಾಹ್ಮಣಾಚ್ಛಂಸಿನಃ ಷಳಹಸ್ತೋತ್ರಿಯಃ । ತಥಾ ಚ ಸೂತ್ರಿತಂ । ಭಿಂಧಿ ವಿಶ್ವಾ ಅಪ ದ್ವಿಷ ಇತಿ ಬ್ರಾಹ್ಮಣಾಚ್ಛಂಸಿನಃ । ಆ. ೭-೨ । ಇತಿ ॥**

ಅನುವಾದವು— **ಆ ಘಾ ಯೇ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಮೂರನೆಯ **ಸೂಕ್ತವು.** ಇದರಲ್ಲಿ ನಲವತ್ತೆರಡು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— ಆ ಘ **ದ್ವಿಚತ್ವಾರಿಂಶತ್ತ್ರಿಶೋಕ ಆದ್ಯಾಗ್ನೇಂದ್ರೀ** ಎಂದು ಹೇಳಿರುವುದು. ಈ ಸೂಕ್ತಕ್ಕೆ ತ್ರಿಶೋಕಃ ಕಾಣ್ವಃ ಎಂಬುವನು ಋಷಿಯು; **ಇಂದ್ರನು ದೇವತೆಯು**; ಮೊದಲನೆಯ ಋಕ್ಕಿಗೆ ಮಾತ್ರ ಅಗ್ನಿ ಮತ್ತು ಇಂದ್ರ ಈ ಇಬ್ಬರೂ ದೇವತೆಗಳು. ಗಾಯತ್ರೀ **ಛಂದಸ್ಸು.** ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿ **ಈ ಸೂಕ್ತದ** ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ— **ಆ ಘಾ ಯೇ ಅಗ್ನಿಮಿಂಧತ ಆ ತೂ ನ** ಇಂದ್ರ **ಕ್ಷುಮಂತಮಿತಿ ಸೂಕ್ತೇ** ಎಂಬ ವಾಕ್ಯದಿಂದ (ಐ. ಆ. ೫-೨-೩) ನಿರ್ದಿಷ್ಟವಾಗಿರುವುದು. **ತೃತೀಯ**

**ಪರ್ಯಾಯದಲ್ಲಿ** ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲಿನ ಹದಿನೇಳು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅತಿರಾತ್ರೇ** ಎಂಬ ಖಂಡದಲ್ಲಿ—**ಆ ಘಾ ಯೇ ಅಗ್ನಿಮಿಂಧತ ಇತಿ ಸಪ್ತದಶ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು. ಆಗ್ರಯಣೇಷ್ಟಿಯಲ್ಲಿ ಅಗ್ನೀಂದ್ರದೇವತೆಗಳನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ **ಆ ಘಾ ಯೇ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಆ ಘಾ ಯೇ ಅಗ್ನಿಮಿಂಧತೇ ಸುಕರ್ಮಾಣಃ ಸುರುಚೋ ದೇವಯಂತ ಇತಿ ಸ್ತೋತ್ರಂ** ಎಂಬ ಸೂತ್ರದಿಂದ (ಆ. ೨-೯) ವಿವೃತವಾಗಿರುವುದು. **ಮೈತ್ರಾವರುಣನೆಂಬ** ಋತ್ವಿಜನು ಪಠಿಸಬೇಕಾದ ಅತಿರಿಕ್ತೋಕ್ಥಮಂತ್ರಗಳಲ್ಲಿ ಈ ಸೂಕ್ತದ **ಸ್ತೋತ್ರಮಿಂದ್ರಾಯ** ಎಂಬ ೨೧ನೆಯ ಋಕ್ಕಿನಿಂದ ಮುಂದಿನ ಆರು ಋಕ್ಕುಗಳನ್ನು ವಿಕಲ್ಪವಾಗಿ ಸ್ತೋತ್ರಿಯಾನುರೂಪಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತದ್ವೋ ಗಾಯ ಸುತೇ ಸಚಾ ಸ್ತೋತ್ರಮಿಂದ್ರಾಯ ಗಾಯತ** ಎಂಬ **ಸೂತ್ರದಿಂದ** (ಆ. ೯-೧೧) ವಿವೃತವಾಗಿರುವುದು. ಎರಡನೆಯ ಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ **ಋತ್ವಿಜನು ಅಭಿ ತ್ವಾ ವೃಷಭ** ಎಂದು ಮೊದಲಾಗುವ ಈ ಸೂಕ್ತದ ೨೨-೨೪ನೆಯ ಋಕ್ಕುಗಳನ್ನು ಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಭಿ ತ್ವಾ ವೃಷಭಾ ಸುತೇಽಭಿ ಪ್ರಗೋಪತಿಂ** ಗಿರಾ ಎಂಬ **ಸೂತ್ರದಿಂದ** (ಆ. ೬-೪) ವಿವೃತವಾಗಿರುವುದು. ಯಾಗದ ಚಾತುರ್ವಿಂಶಿಕವೆಂಬ ದಿನದ ಪ್ರಾತಸ್ಸವನ **ಕಾಲದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ** ಋತ್ವಿಜನು **ಭಿಂಧಿ ವಿಶ್ವಾ** ಎಂದು ಮೊದಲಾಗುವ ಈ ಸೂಕ್ತದ ೪೦-೪೨ನೆಯ **ಋಕ್ಕುಗಳನ್ನು** ಷಳಹಸ್ತೋತ್ರಿಯತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಭಿಂಧಿ ವಿಶ್ವಾ ಅಪ ದ್ವಿಷ ಇತಿ ಬ್ರಾಹ್ಮಣಾಚ್ಛಂಸಿನಃ** ಎಂಬ ಸೂತ್ರದಿಂದ (ಆ. ೭-೨) ವಿವೃತವಾಗಿರುವುದು.

## ಸೂಕ್ತ—೪೫

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೪೫ ॥

ಅಷ್ಟಕ—೬ ॥ ಅಧ್ಯಾಯ—೩ ॥ ವರ್ಗ—೪೨, ೪೩, ೪೪, ೪೫, ೪೬, ೪೭, ೪೮, ೪೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೪೨ ॥

॥ ಋಷಿಃ—ತ್ರಿಶೋಕಃ ಕಾಣ್ವಃ ॥

॥ ದೇವತಾ—೧. ಇಂದ್ರಾಗ್ನೀ । ೨-೪೨. ಇಂದ್ರಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

**ಆ ಘಾ ಯೇ ಅಗ್ನಿಮಿಂಧತೇ ಸ್ತೃಣಂತಿ ಬರ್ಹಿರಾನುಷಕ್ ।**

**ಯೇಷಾಮಿಂದ್ರೋ ಯುವಾ ಸಖಾ ॥ ೧ ॥**

॥ ಪದಪಾಠಃ ॥

**ಆ । ಘ । ಯೇ । ಅಗ್ನಿಂ । ಇಂಧತೇ । ಸ್ತೃಣಂತಿ । ಬರ್ಹಿಃ । ಅನುಷಕ್ ।**

**ಯೇಷಾಂ । ಇಂದ್ರಃ । ಯುವಾ । ಸಖಾ ॥ ೧ ॥**

॥ ಸಾಯಣಭಾಷ್ಯಂ ॥

**ಯೆ ಋಷಯೆ ಆ ಘಾಭಿಮುಖ್ಯೇನ ಖಲ್ವಗ್ನಿಮಿಂಧತೇ ದೀಪಯಂತಿ ಯೇಷಾಂ ಚ ಯುವಾ ನಿತ್ಯತರುಣ ಇಂದ್ರಃ ಸಖಾ ಭವತಿ ತ ಆನುಷಗಾನುಪೂರ್ವ್ಯೇಣ ಬರ್ಹಿಃ ಸ್ತೃಣಂತಿ ॥**

॥ ಪ್ರತಿಪದಾರ್ಥ ॥

**ಯೇ**—ಯಾವ ಋಷಿಗಳು । **ಆ ಘ**—ತಮಗೆ ಅಭಿಮುಖವಾಗಿಯೇ । **ಅಗ್ನಿಂ**—**ಅಗ್ನಿಯನ್ನು** । **ಇಂಧತೇ**—ಪ್ರಜ್ವಲಿಸುವಂತೆ ಮಾಡುವರೋ । **ಯೇಷಾಂ**—ಯಾರಿಗೆ । **ಯುವಾ**—ನಿತ್ಯ **ತರುಣನಾದ** । **ಇಂದ್ರಃ**—ಇಂದ್ರನು । **ಸಖಾ**—ಮಿತ್ರನಾಗಿರುವನೋ ಅವರು । **ಆನುಷಕ್**—ಯಥಾಕ್ರಮವಾಗಿ । **ಬರ್ಹಿಃ**—ಯಜ್ಞಕ್ಕಾಗಿ ದರ್ಭಾಸನವನ್ನು । **ಸ್ತೃಣಂತಿ**—ಹರಡುತ್ತಾರೆ.

॥ ಭಾವಾರ್ಥ ॥

ಯಾವ ಋಷಿಗಳು ತಮಗೆ ಅಭಿಮುಖವಾಗಿಯೇ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ**ರೋ, ಯಾರಿಗೆ** ನಿತ್ಯತರುಣನಾದ ಇಂದ್ರನು ಮಿತ್ರನಾಗಿರುವನೋ, ಅವರು ಯಥಾಕ್ರಮವಾಗಿ ಯಜ್ಞಕ್ಕಾಗಿ **ದರ್ಭಾಸನವನ್ನು** ಹರಡುತ್ತಾರೆ ಎಂದರೆ ಯಜ್ಞವನ್ನು ಮಾಡುತ್ತಾರೆ.

English Translation.

Those (sages) who kindle Agni, those of whom the ever-**young Indra is the friend,** continually spread the sacred grass.

॥ ವಿಶೇಷವಿಷಯಗಳು ॥

**ಆನುಷಕ್**—ಈ ಶಬ್ದಕ್ಕೆ ಯಾಸ್ಕರು—**ಆನುಷಗಿತಿ ನಾಮಾನುಪೂರ್ವಸ್ಯಾನುಷಕ್ತಂ ಭವತಿ । ಸ್ತೃಣಂತಿ ಬರ್ಹಿರಾನುಷಕ್ ಇತ್ಯಪಿ ನಿಗಮೋ ಭವತಿ** (ನಿ. ೬-೧೪) ಎಂದು ನಿರ್ವಚನವನ್ನು **ಹೇಳಿ**ದಾರೆ. **ಆನುಷಕ್** ಎಂದರೆ ಅನುಷಕ್ತಂ ಎಂದರ್ಥವು. ಎಂದರೆ, ಅನೇಕ ವಸ್ತುಗಳಿರುವಾಗ **ಅವುಗಳಲ್ಲಿ** ಒಂದು ಮತ್ತೊಂದನ್ನು ಎಡೆಬಿಡದೆ ಅನುಸರಿಸಿರುವುದು. ಒಂದರ ಪಕ್ಕದಲ್ಲಿ ಅದಕ್ಕೆ ಸೇರಿದಂತೆ ಮತ್ತೊಂದಿರುವುದು ಎಂ-ದರ್ಥವು. ಉದಾಹರಣೆಗಾಗಿ ಕೊಟ್ಟಿರುವ **ಸ್ತೃಣಂತಿ ಬರ್ಹಿರಾನುಷಕ್** ಎಂಬ ಶ್ರುತಿವಾಕ್ಯಕ್ಕೆ—**ಬರ್ಹಿಷಿ** ಎಂಬ ಆಸನಾರ್ಥವಾಗಿ ಉಪಯೋಗಿಸುವ ಕತ್ತರಿಸಿದ ದರ್ಭೆಗಳನ್ನು ಅನುಕ್ರಮವಾಗಿ ಎಂದರೆ ದರ್ಭೆಗಳು ಒಂದಕ್ಕೊಂದು **ಸೇರಿರುವಂತೆ** ಒಂದರ ಪಕ್ಕದಲ್ಲಿ ಮತ್ತೊಂದು ಎಡಬಿಡದೆ ಅನುಸರಿಸಿರುವಂತೆ ವತ್ತಾಗಿ ಹರಡುತ್ತಾರೆ ಎಂದರ್ಥವು. ಇಲ್ಲಿ ದರ್ಭೆಗಳಲ್ಲಿ ಪ್ರತಿಯೊಂದೂ ಅದರ ಪಕ್ಕದಲ್ಲಿರುವ ದರ್ಭೆಗೆ ಸ್ಪರ್ಶಮಾಡುತ್ತಾ ಎಡಬಿಡದೆ ವತ್ತಾಗಿ ಹೊಂದಿಕೊಂಡಿರುವುದು. ಇಂತಹ ಅರ್ಥವನ್ನು ಸೂಚಿಸುವುದಕ್ಕಾಗಿ **ಆನುಷಕ್** ಎಂಬ ಪದವನ್ನು ಉಪಯೋಗಿಸುವುದು ವಿಹಿತವಾಗಿದೆ

॥ ಸಂಹಿತಾಪಾಠಃ ॥

**ಬೃಹನ್ನಿದಿಧ್ಮ ಏಷಾಂ ಭೂರಿ ಶಸ್ತಂ ಪೃಥುಃ ಸ್ವರುಃ ।**

**ಯೇಷಾಮಿಂದ್ರೋ ಯುವಾ ಸಖಾ ॥ ೨ ॥**

॥ ಪದಪಾಠಃ ॥

ಬೃಹನ್ । ಇತ್ । ಇಧ್ಮಃ । ಏಷಾಂ । ಭೂರಿ । ಶಸ್ತಂ । ಪೃಥುಃ । ಸ್ವರುಃ ।
ಯೇಷಾಂ । ಇಂದ್ರಃ । ಯುವಾ । ಸಖಾ ॥ ೨ ॥

॥ ಸಾಯಣಭಾಷ್ಯಂ ॥

ಏಷಾಮೃಷೀಣಾಮಿಧ್ಮೋ ಬೃಹನ್ನಿನ್ಮಹಾನ್ ಖಲು ಭೂರಿ ಬಹು ಚ ಶಸ್ತಂ ಸ್ತೋತ್ರಂ ಸ್ವರುಶ್ಚ ಪೃಥುರ್ಮಹಾನ್ । ಸಿದ್ಧಮನ್ಯತ್ ॥

॥ ಪ್ರತಿಪದಾರ್ಥ ॥

**ಯುವಾ**—ನಿತ್ಯತರುಣನಾದ । **ಇಂದ್ರಃ**—ಇಂದ್ರನು । **ಯೇಷಾಂ**—ಯಾವ ಋಷಿಗಳಿಗೆ । **ಸಖಾ**—ಮಿತ್ರನಾಗಿದ್ದಾನೆಯೋ । **ಏಷಾಂ**—ಅಂತಹ ಈ ಋಷಿಗಳ । **ಇಧ್ಮಃ**—ಸಮಿತ್ತು । **ಬೃಹನ್ನಿತ್**—ಅತ್ಯಧಿಕವಾಗಿಯೇ ಇದೆ । **ಶಸ್ತ್ರಂ**—ಅವರ ಸ್ತುತಿಯೂ । **ಭೂರಿ**—ಅಧಿಕವಾಗಿದೆ । **ಸ್ವರುಃ**—ಅವರ ಯೂಪಸ್ತಂಭವು । **ಪೃಥುಃ**—ವಿಸ್ತೃತವಾಗಿದೆ.

॥ ಭಾವಾರ್ಥ ॥

ನಿತ್ಯತರುಣನಾದ ಇಂದ್ರನು ಯಾವ ಋಷಿಗಳಿಗೆ ಮಿತ್ರನಾಗಿದ್ದಾನೆಯೋ ಅಂತಹ ಈ ಋಷಿಗಳ ಸಮಿತ್ತು ಅತ್ಯಧಿಕವಾಗಿಯೇ ಇದೆ. ಅವರ ಸ್ತುತಿಯೂ ಅಧಿಕವಾಗಿದೆ. ಅವರ ಯೂಪಸ್ತಂಭವು ಬಹು ದೊಡ್ಡದಾಗಿರುತ್ತದೆ.

English Translation.

Ample is their fuel, many their hymns, broad their sacred shaving,-whose frieno is the ever-young Indra.

॥ ಸಂಹಿತಾಪಾಠಃ ॥

ಅಯುದ್ಧ ಇದ್ಯುಧಾ ವೃತಂ ಶೂರ ಆಜತಿ ಸತ್ವಭಿಃ ।
ಯೇಷಾಮಿಂದ್ರೋ ಯುವಾ ಸಖಾ ॥ ೩ ॥

॥ ಪದಪಾಠಃ ॥

ಅಯುದ್ಧಃ । ಇತ್ । ಯುಧಾ । ವೃತಂ । ಶೂರಃ । ಆ । ಅಜತಿ । ಸತ್ವಽಭಿಃ ।
ಯೇಷಾಂ । ಇಂದ್ರಃ । ಯುವಾ । ಸಖಾ ॥ ೩ ।

॥ ಸಾಯಣಭಾಷ್ಯಂ ॥

ತೇಷ್ವಂತರ್ಭೂತಃ ಕಶ್ಚಿದಯುದ್ಧ ಇತ್ಪ್ರಾಗಯೋದ್ಧೈವ ಸನ್ ಯುಧಾ ವೃತಂ ಯೋದ್ಧೃಭಿರ್ಭಟೈರಾವೃತಂ ಶತ್ರುಂ ಸತ್ವಭಿರಾತ್ಮೀಯೈರ್ಬಲೈಃ ಶೂರಃ ಸನ್ನಾಜತಿ । ನಮಯತಿ ॥

॥ ಪ್ರತಿಪದಾರ್ಥ ॥

**ಯುವಾ**—ನಿತ್ಯತರುಣನಾದ | **ಇಂದ್ರಃ**—ಇಂದ್ರನು | **ಯೇಷಾಂ**—ಯಾರಿಗೆ | **ಸಖಾ**—ಮಿತ್ರನಾಗಿರುವನೋ ಅಂತಹ ಋಷಿಗಳ ಗುಂಪು | **ಅಯುದ್ಧ ಇತ್**—ಹಿಂದೆ ಯುದ್ಧಮಾಡಲಶಕ್ತವಾಗಿದ್ದಾಗ್ಯೂ | **ಶೂರಃ**—ಈಗ ಇಂದ್ರನ ಸಹಾಯದಿಂದ ಶಕ್ತಿಯನ್ನು ಹೊಂದಿ | **ಯುಧಾ**—ಯೋಧೃಗಳಿಂದ | **ವೃತಂ**—ಆವೃತನಾದ ಶತ್ರುವನ್ನು | **ಸತ್ವಭಿಃ**—ತನ್ನ ಶಕ್ತಿಗಳಿಂದ | **ಅಜತಿ**—ಕುಗ್ಗುವಂತೆ ಮಾಡುತ್ತದೆ.

॥ ಭಾವಾರ್ಥ ॥

ನಿತ್ಯತರುಣನಾದ ಇಂದ್ರನು ಯಾರಿಗೆ ಮಿತ್ರನಾಗಿರುವನೋ ಅಂತಹ ಋಷಿಗಳ ಗುಂಪು ಹಿಂದೆ ಯುದ್ಧಮಾಡಲಶಕ್ತವಾಗಿದ್ದರೂ ಈಗ ಇಂದ್ರನ ಸಹಾಯದಿಂದ ಶಕ್ತಿಯನ್ನು ಹೊಂದಿ ಯೋಧೃಗಳಿಂದ ಆವೃತನಾದ ಶತ್ರುವನ್ನು ತನ್ನ ಶಕ್ತಿಗಳಿಂದ ಕುಗ್ಗುವಂತೆ ಮಾಡುತ್ತದೆ.

English Translation.

Though before powerless to combat, the hero by his might now subdues one surrounded by allies, (if helped by those) of whom the ever-young Indra is the friend.

॥ ಸಂಹಿತಾಪಾಠಃ ॥

ಆ ಬುಂದಂ ವೃತ್ರಹಾ ದದೇ ಜಾತಃ ಪೃಚ್ಛದ್ವಿ ಮಾತರಂ ।
ಕ ಉಗ್ರಾಃ ಕೇ ಹ ಶೃಣ್ವಿರೇ ॥ ೪ ॥

॥ ಪದಪಾಠಃ ॥

ಆ । ಬುಂದಂ । ವೃತ್ರಽಹಾ । ದದೇ । ಜಾತಃ । ಪೃಚ್ಛತ್ । ವಿ । ಮಾತರಂ ।
ಕೇ । ಉಗ್ರಾಃ । ಕೇ । ಹ । ಶೃಣ್ವಿರೇ ॥ ೪ ॥

॥ ಸಾಯಣಭಾಷ್ಯಂ ॥

**ಜಾತ ಉತ್ಪನ್ನೋ ವೃತ್ರಹೇಂದ್ರೋ ಬುಂದಮಿಷುಂ । ಕಥಾ ಚ ಯಾಸ್ಕಃ । ಬುಂದ ಇಷುರ್ಭವತಿ । ನಿ. ೬-೩೨ । ಇತಿ । ಆ ದದೇ । ಆದಾಯ ಚೇಷುಮುಗ್ರಾ ಉದ್ಗೂರ್ಣಬಲಾಃ ಕೇ ಕೇ ಚ ಶೃಣ್ವಿರೇ ವೀರ್ಯೇಣ ವಿಶ್ರುತಾ ಇತಿ ಸ್ವಮಾತರಂ ವಿ ಪೃಚ್ಛತ್ । ಅಪ್ರಾಕ್ಷೀತ್ ॥**

॥ ಪ್ರತಿಪದಾರ್ಥ ॥

**ವೃತ್ರಹಾ**—ವೃತ್ರಹಂತಕನಾದ ಇಂದ್ರನು | **ಜಾತಃ**—ಉತ್ಪನ್ನನಾದೊಡನೆಯೇ | **ಬುಂದಂ**—ತನ್ನ ಬಾಣವನ್ನು | **ಆ ದದೇ**—ಕೈಯಲ್ಲಿ ಹಿಡಿದನು | “ **ಉಗ್ರಾಃ**—ಅತ್ಯಧಿಕವಾದ ಬಲವುಳ್ಳವರು | **ಕೇ**—

ಯಾರಿರುವರು? | **ಕೇ ಹ**— ಯಾರು ಯಾರು | **ಶೃಣ್ವಿರೇ**— ಆ ರೀತಿ ಪ್ರಸಿದ್ಧರಾಗಿದ್ದಾರೆ ಎಂಬುದಾಗಿ| **ಮಾತರಂ**— ತನ್ನ ತಾಯಿಯನ್ನು | **ವಿ ಪೃಚ್ಛತ್**—ಕೇಳಿದನು

|| ಭಾವಾರ್ಥ ||

ವೃತ್ರಹಂತಕನಾದ ಇಂದ್ರನು ಉತ್ಪನ್ನನಾದೊಡನೆಯೇ ತನ್ನ ಬಾಣವನ್ನು ಕೈಯಲ್ಲಿ ಹಿಡಿದು, "**ಅತ್ಯಧಿಕವಾದ** ಬಲವುಳ್ಳವರು ಯಾರು? ಯಾರು ಯಾರು ಈ ರೀತಿ ಪ್ರಸಿದ್ಧರಾಗಿದ್ದಾರೆ" ಎಂಬುದಾಗಿ ತನ್ನ ತಾಯಿಯನ್ನು ಕೇಳಿದನು.

English Translation.

The slayer of Vritra, as soon as he was born, seized his arrow, and asked his mother, " who are the terrible, who are renowned ?"

|| ಸಂಹಿತಾಪಾಠಃ ||

ಪ್ರತಿ ತ್ವಾ ಶವಸೀ ವದದ್ಗಿರಾವಪ್ಸೋ ನ ಯೋಧಿಷತ್ |
ಯಸ್ತೇ ಶತ್ರುತ್ವಮಾಚಕೇ || ೫ ||

|| ಪದಪಾಠಃ ||

**ಪ್ರತಿ | ತ್ವಾ | ಶವಸೀ | ವದತ್ | ಗಿರೌ | ಅಪ್ಸಃ | ನ | ಯೋಧಿಷತ್ |**
**ಯಃ | ತೇ | ಶತ್ರುऽತ್ವಂ | ಆऽಚಕೇ || ೫ ||**

|| ಸಾಯಣಭಾಷ್ಯಂ ||

**ಹೇ ಇಂದ್ರ ತ್ವಾ ತ್ವಾಂ ಶವಸೀ ಬಲವತೀ ಮಾತಾ ಪ್ರತಿ ವದತ್ | ಪ್ರತ್ಯವೋಚತ್ | ಯಸ್ತೇ ಶತ್ರುತ್ವಮಾಚಕೇ ಕಾಮಯತೇ ಸ ಗಿರೌ ಪರ್ವತೇऽಪ್ಸೋ ನ ದರ್ಶನೀಯೋ ಗಜ ಇವ ಯೋಧಿಷತ್ | ಯೋಧಯತಿ ||**

|| ಪ್ರತಿಪದಾರ್ಥ ||

**(ಎಲೈ ಇಂದ್ರನೇ) ಶವಸೀ**— ಶಕ್ತಿಯುತಳಾದ ನಿನ್ನ ಮಾತೆಯು | **ತ್ವಾ**— ನಿನಗೆ | **ಪ್ರತಿ ವದತ್**— ಈ **ರೀತಿ** ಪ್ರತ್ಯುತ್ತರವನ್ನು ಕೊಟ್ಟಳು ಅದೇನೆಂದರೆ— | **ಯಃ**— ಯಾರು | **ತೇ**— ನಿನ್ನೊಡನೆ | **ಶತ್ರುತ್ವಂ**— ದ್ವೇಷವನ್ನು | **ಆ ಚಕ್ರೇ**— ಬೆಳೆಸುವನೋ ಅವನು | **ಗಿರೌ**— ಪರ್ವತದಲ್ಲಿರುವ | **ಅಪ್ಸೋ ನ**— ಆಕರ್ಷಕವಾದ ಆನೆಯಂತೆ | **ಯೋಧಿಷತ್**— ಯುದ್ಧಮಾಡುತ್ತಾನೆ.

|| ಭಾವಾರ್ಥ ||

ಎಲೈ ಇಂದ್ರನೇ, ಶಕ್ತಿಯುತಳಾದ ನಿನ್ನ ಮಾತೆಯು ನಿನಗೆ ಈ ರೀತಿ ಪ್ರತ್ಯುತ್ತರವನ್ನು ಕೊಟ್ಟಳು. "**ಯಾರು** ನಿನ್ನೊಡನೆ ದ್ವೇಷವನ್ನು ಬೆಳೆಸುವನೋ ಅವನು ಪರ್ವತದಲ್ಲಿರುವ ಆಕರ್ಷಕವಾದ ಆನೆಯಂತೆ ಯುದ್ಧಮಾಡುತ್ತಾನೆ" ಎಂದಳು.

## English Translation.

The strong mother answered you, "he who wishes your enmity fights as the elephant in the mountain."

॥ ಸಂಹಿತಾಪಾಠಃ ॥

ಉತ ತ್ವಂ ಮಘವಞ್ಛೃಣು ಯಸ್ತೇ ವಷ್ಟಿ ವವಕ್ಷಿ ತತ್ ।
ಯದ್ವೀಳಯಾಸಿ ವೀಳು ತತ್ ॥ ೬ ॥

॥ ಪದಪಾಠಃ ॥

ಉತ । ತ್ವಂ । ಮಘsವನ್ । ಶೃಣು । ಯಃ । ತೇ । ವಷ್ಟಿ । ವವಕ್ಷಿ । ತತ್ ।
ಯತ್ । ವೀಳಯಾಸಿ । ವೀಳು । ತತ್ ॥ ೬ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಮಘವನ್ ತ್ವಂ ಶೃಣ್ವಸ್ಮದೀಯಾಂ ಸ್ತುತಿಂ । ತೇ ತ್ವತ್ತೋ ಯದ್ವಷ್ಟಿ ಕಾಮಯತೇ ಸ್ತೋತಾ ತದ್ವವಕ್ಷಿ । ತಸ್ಮೈ ತದ್ವಹಸಿ । ಕಿಂಚ ತ್ವಂ ಯದ್ವೀಳಯಾಸಿ ದೃಢೀಕರೋಷಿ ತದ್ವೀಳು ತದ್ದೃಢಮೇವ ಸರ್ವತ್ರ ಭವತಿ ॥

॥ ಪ್ರತಿಪದಾರ್ಥ ॥

**ಉತ**—ಮತ್ತು । **ಮಘವನ್**—ಧನವಂತನಾದ ಎಲೈ ಇಂದ್ರನೇ । **ತ್ವಂ**—ನೀನು । **ಶೃಣು**—ನಮ್ಮ ಸ್ತುತಿಯನ್ನು ಕೇಳು । **ತೇ**—ನಿನ್ನಿಂದ । **ಯಃ ವಷ್ಟಿ**—ಸ್ತೋತೃವು ಯಾವುದನ್ನು ಅಪೇಕ್ಷಿಸುವನೋ । **ತತ್**—ಅದನ್ನು । **ವವಕ್ಷಿ**—ಅವನಿಗೆ ವಹಿಸಿಕೊಡು । **ಯತ್**—ಯಾವುದನ್ನು । **ವೀಳಯಾಸಿ**—ನೀನು ಬಲಪಡಿಸುವೆಯೋ । **ತತ್**—ಅದು । **ವೀಳು**—ದೃಢವಾಗಿಯೇ ಇರುತ್ತದೆ.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ನೀನು ನಮ್ಮ ಸ್ತುತಿಯನ್ನು ಕೇಳು. ನಿನ್ನಿಂದ ಸ್ತೋತೃವು ಯಾವುದನ್ನು ಅಪೇಕ್ಷಿಸುವನೋ ಅದನ್ನು ಅವನಿಗೆ ವಹಿಸಿಕೊಡು. ಯಾವುದನ್ನು ನೀನು ಬಲಪಡಿಸುವೆಯೋ ಅದು ದೃಢವಾಗಿಯೇ ಇರುತ್ತದೆ.

## English Translation.

O Maghavan, hear (our praise); whoever desires of you, your bear to him his request; what you fix is sure.

॥ ಸಂಹಿತಾಪಾಠಃ ॥

ಯದಾಜಿಂ ಯಾತ್ಯಾಜಿಕೃದಿಂದ್ರಃ ಸ್ವಶ್ವಯುರುಪ ।
ರಥೀತಮೋ ರಥೀನಾಂ ॥ ೭ ॥

॥ ಪದಪಾಠಃ ॥

ಯತ್ । ಆಜಿಂ । ಯಾತಿ । ಆಜಿಽಕೃತ್ । ಇಂದ್ರಃ । ಸ್ವಶ್ವಽಯುಃ । ಉಪ ।
ರಥಿಽತಮಃ । ರಥಿನಾಂ ॥ ೭ ॥

॥ ಸಾಯಣಭಾಷ್ಯಂ ॥

ಯದ್ಯದಾಜಿಕೃದ್ಯುದ್ಧಕೃದಿಂದ್ರಃ ಸ್ವಶ್ವಯುಃ ಕಲ್ಯಾಣಮಶ್ವಮಿಚ್ಛನ್ನಾಜಿಂ ಯುದ್ಧಮುಪ ಯಾತಿ ತದಾ ರಥೀತಮೋಽತಿಶಯೇನ ರಥೀ ಭವತಿ। ರಥೀನಾಂ ಸರ್ವಾನ್ರಥಿನಶ್ಚ ಜಯತೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಯತ್**—ಯಾವಾಗ । **ಆಜಿಕೃತ್**—ಯುದ್ಧನಿರತನಾದ । **ಇಂದ್ರಃ**—ಇಂದ್ರನು । **ಸ್ವಶ್ವಯುಃ**—ಉತ್ತಮವಾದ ಅಶ್ವವನ್ನು ಅಪೇಕ್ಷಿಸುತ್ತಾ । **ಆಜಿಂ**—ಯುದ್ಧವನ್ನು । **ಉಪ ಯಾತಿ**—ಸಮೀಪಿಸುವನೋ ಆಗ । **ರಥೀತಮಃ**—ಉತ್ತಮವಾದ ರಥವುಳ್ಳವನಾಗಿ ಆಗುತ್ತಾನೆ । **ರಥೀನಾಂ**—ರಥಿಕರನ್ನೆಲ್ಲಾ ಜಯಿಸುತ್ತಾನೆ.

॥ ಭಾವಾರ್ಥ ॥

ಯುದ್ಧನಿರತನಾದ ಇಂದ್ರನು, ಉತ್ತಮವಾದ ಅಶ್ವವನ್ನು ಅಪೇಕ್ಷಿಸುತ್ತಾ, ಯಾವಾಗ ಯುದ್ಧಕ್ಕೆ ಹೋಗಿ ಯುದ್ಧವನ್ನು ಆರಂಭಿಸುವನೋ, ಆಗ ಉತ್ತಮವಾದ ರಥವನ್ನು ಹೊಂದುತ್ತಾನೆ. ರಥಿಕರನ್ನೆಲ್ಲಾ ಜಯಿಸುತ್ತಾನೆ.

## English Translation.

When Indra, the warrior, goes to battle, desirous of gallant steeds, he is the foremost of the lords of chariots.

॥ ಸಂಹಿತಾಪಾಠಃ ॥

ವಿ ಷು ವಿಶ್ವಾ ಅಭಿಯುಜೋ ವಜ್ರಿನ್ವಿಷ್ವಗ್ಯಥಾ ವೃಹ ।
ಭವಾ ನಃ ಸುಶ್ರವಸ್ತಮಃ ॥ ೮ ॥

॥ ಪದಪಾಠಃ ॥

ವಿ । ಸು । ವಿಶ್ವಾಃ । ಅಭಿऽಯುಜಃ । ವಜ್ರಿನ್ । ವಿಷ್ವಕ್ । ಯಥಾ । ವೃಹ ।

ಭವ । ನಃ । ಸುಶ್ರವಃऽತಮಃ ॥ ೮ ॥

॥ ಸಾಯಣಭಾಷ್ಯಂ ॥

ಯೋ ವಜ್ರಿನ್ ತ್ವಂ ವಿಶ್ವಾಃ ಸರ್ವಾ ಅಭಿಯುಜೋऽಭಿಯೋಕ್ತ್ರೀಃ ಪ್ರಜಾ ಯಥಾ ವಿಷ್ವಗ್ಭವಂತಿ ತಥಾ ಸು ಸುಷ್ಠು ವಿ ವೃಹ । ನೋऽಸ್ಮಾಕಂ ಸುಶ್ರವಸ್ತಮಃ ಶೋಭನಾನ್ನವತ್ತಮಶ್ಚ ಭವ ॥

॥ ಪ್ರತಿಪದಾರ್ಥ ॥

**ವಜ್ರಿನ್**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ವಿಶ್ವಾಃ**—ಸಮಸ್ತರಾದ । **ಅಭಿಯುಜಃ**—ಎದುರುಬೀಳುವ ಶತ್ರುಗಳನ್ನೂ । **ಯಥಾ**—ಯಾವ ರೀತಿ ! **ವಿಷ್ವಕ್**—ಅವರು ಬೇರೆ ಬೇರೆಯಾಗುವರೋ ಹಾಗೆ । **ಸು**—ಚೆನ್ನಾಗಿ । **ವಿ ವೃಹ**—ಅವರನ್ನು ಚದುರಿಸು । **ನಃ**—ನಮಗೆ । **ಸುಶ್ರವಸ್ತಮಃ**—ಉತ್ತಮವಾದ ಅನ್ನದಾತನಾಗಿ । **ಭವ**—ಆಗು.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನಮಗೆ ಎದುರುಬೀಳುವ ಸಮಸ್ತ ಶತ್ರುಗಳನ್ನೂ ಸಹ ಅವರೆಲ್ಲರೂ ಬೇರೆಬೇರೆಯಾಗಿ ಓಡುವಂತೆ ಪೂರ್ಣವಾಗಿ ಚದುರಿಸು. ನಮಗೆ ಉತ್ತಮವಾದ ಅನ್ನದಾತನಾಗು.

## English Translation.

Thunderer, smite all your enemies that they may be scattered,—be to us a most abundant benefactor.

॥ ಸಂಹಿತಾಪಾಠಃ ॥

ಅಸ್ಮಾಕಂ ಸು ರಥಂ ಪುರ ಇಂದ್ರಃ ಕೃಣೋತು ಸಾತಯೇ ।

ನ ಯಂ ಧೂರ್ವಂತಿ ಧೂರ್ತಯಃ ॥ ೯ ॥

॥ ಪದಪಾಠಃ ॥

ಅಸ್ಮಾಕಂ । ಸು । ರಥಂ । ಪುರಃ । ಇಂದ್ರಃ । ಕೃಣೋತು । ಸಾತಯೇ ।

ನ । ಯಂ । ಧೂರ್ವಂತಿ । ಧೂರ್ತಯಃ ॥ ೯ ॥

॥ ಸಾಯಣಭಾಷ್ಯಂ ॥

ಯಮಿಂದ್ರಂ ಧೂರ್ತಯೋ ಹಿಂಸಕಾ ನ ಧೂರ್ವಂತಿ ನ ಹಿಂಸಂತಿ ಸ ಇಂದ್ರೋಽಸ್ಮಾಕಂ ಸಾತಯೇಽಭೀಷ್ಟಲಾಭಾಯ ಸು ರಥಂ ಕಲ್ಯಾಣಂ ರಥಂ ಪುರಃ ಕೃಣೋತು । ಪುರಸ್ಕರೋತು ॥

॥ ಪ್ರತಿಪದಾರ್ಥ ॥

**ಯಂ**—ಯಾವ ಇಂದ್ರನನ್ನು । **ಧೂರ್ತಯಃ**—ಹಿಂಸಕರಾದ ಶತ್ರುಗಳು । **ನ ಧೂರ್ವಂತಿ**—ಹಿಂಸಿಸಲಾರರೋ । **ಇಂದ್ರಃ**—ಅದೇ ಇಂದ್ರನು । **ಅಸ್ಮಾಕಂ**—ನಮ್ಮ । **ಸಾತಯೇ**—ಇಷ್ಟಾರ್ಥಲಾಭಕ್ಕಾಗಿ । **ಸು**—ಉತ್ತಮವಾದ । **ರಥಂ**—ರಥವನ್ನು । **ಪುರಃ**—ನಮ್ಮ ಮುಂದೆ । **ಕೃಣೋತು**—ಸಿದ್ಧಪಡಿಸಲಿ.

॥ ಭಾವಾರ್ಥ ॥

ಹಿಂಸಕರಾದ ಶತ್ರುಗಳು ಯಾವ ಇಂದ್ರನನ್ನು ಹಿಂಸಿಸಲಾರರೋ ಅದೇ ಇಂದ್ರನು ನಮ್ಮ ಇಷ್ಟಾರ್ಥ ಲಾಭಕ್ಕಾಗಿ ಉತ್ತಮವಾದ ರಥವನ್ನು ನಮ್ಮ ಮುಂದೆ ಸಿದ್ಧಪಡಿಸಲಿ.

English Translation.

May Indra, whom no foes can harm, send before us a beautiful chariot for the acquision (of our desires).

॥ ಸಂಹಿತಾಪಾಠಃ ॥

ವೃಜ್ಯಾಮ ತೇ ಪರಿ ದ್ವಿಷೋಽರಂ ತೇ ಶಕ್ರ ದಾವನೇ ।
ಗಮೇಮೇದಿಂದ್ರ ಗೋಮತಃ ॥ ೧೦ ॥

॥ ಪದಪಾಠಃ ॥

ವೃಜ್ಯಾಮ । ತೇ । ಪರಿ । ದ್ವಿಷಃ । ಅರಂ । ತೇ । ಶಕ್ರ । ದಾವನೇ ।
ಗಮೇಮ । ಇತ್ । ಇಂದ್ರ । ಗೋಽಮತಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಶಕ್ರೇಂದ್ರ ಯಾಚಮಾನಾ ವಯಂ ತೇ ತವ ದ್ವಿಷೋ ದ್ವೇಷ್ಟ್ರ್ಯಾನ್ ಪರಿ ವೃಜ್ಯಾಮ । ನೋಪಗಚ್ಛೇಮ । ಕಿಂಚ ತೇ ತವ ಗೋಮತಃ ಪಶುಮತೋ ದಾವನೇಽಭೀಷ್ಟದಾನಾಯಾರಂ ಪರ್ಯಾಪ್ತಂ ಗಮೇಮೇತ್ । ಗಚ್ಛೇಮೈವ ॥

॥ ಪ್ರತಿಪದಾರ್ಥ ॥

**ಶಕ್ರ**—ಶಕ್ತನಾದ । **ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನ । **ದ್ವಿಷಃ**—ಶತ್ರುಗಳನ್ನು । **ಪರಿ ವೃಜ್ಯಾಮ**—ನಾವು ತಪ್ಪಿಸಿಕೊಳ್ಳುವಂತಾಗಲಿ । **ತೇ**—ನಿನ್ನ । **ಗೋಮತಃ**—ಗೋವುಗಳಿಂದ ಕೂಡಿದ । **ದಾವನೇ**—ದಾನವನ್ನು ಸ್ವೀಕರಿಸಲು । **ಅರಂ**—ತೃಪ್ತಿಯಾಗುವಷ್ಟು । **ಗಮೇಮೇತ್**—ನಿನ್ನಲ್ಲಿಗೇ ಬರುತ್ತೇವೆ.

॥ ಭಾವಾರ್ಥ ॥

ಶಕ್ತನಾದ ಎಲೈ ಇಂದ್ರನೇ, ನಿನ್ನ ಶತ್ರುಗಳನ್ನು ನಾವು ತಪ್ಪಿಸಿಕೊಳ್ಳುವಂತಾಗಲಿ. ಗೋವುಗಳಿಂದ ಕೂಡಿದ ನಿನ್ನ ದಾನವನ್ನು ಸ್ವೀಕರಿಸಲು ನಿನ್ನಲ್ಲಿಗೇ ಅತ್ಯಧಿಕವಾಗಿ ಬರುತ್ತೇವೆ.

English Translation.

Strong Indra, may we escape your enemies; may we come to you abundantly for your gifts, rich in cattle.

॥ ಸಂಹಿತಾಪಾಠಃ ॥

ಶನೈಶ್ಚಿದ್ಯಂತೋ ಅದ್ರಿವೋಽಶ್ವಾವಂತಃ ಶತಗ್ವಿನಃ ।
ವಿವಕ್ಷಣಾ ಅನೇಹಸಃ ॥ ೧೧ ॥

॥ ಪದಪಾಠಃ ॥

ಶನೈಃ । ಚಿತ್ । ಯಂತಃ । ಅದ್ರಿಽವಃ । ಅಶ್ವಽವಂತಃ । ಶತಽಗ್ವಿನಃ ।
ವಿವಕ್ಷಣಾಃ । ಅನೇಹಸಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಅದ್ರಿವೋ ವಜ್ರಿನ್ ವಯಂ ಶನೈರ್ಮಂದಂ ಮಂದಂ ಯಂತೋ ಗಚ್ಛಂತೋಽಶ್ವಾವಂತೋಽಶ್ವವಂತಃ ಶತಗ್ವಿನೋ ಬಹುಧನಾ ವಿವಕ್ಷಣಾ ವೋಢವ್ಯಂ ವಹಂತೋಽನೇಹಸ ಉಪದ್ರವರಹಿತಾಶ್ಚ ಸಂತೋ ಗಮೇಮೇದಿತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಶನೈಃ**—ಮೆಲ್ಲಮೆಲ್ಲಗೆ । **ಯಂತಃ**—ನಿನ್ನನ್ನು ಸಮೀಪಿಸುವ ನಾವು । **ಅಶ್ವಾವಂತಃ**—ಅಶ್ವಗಳುಳ್ಳವರಾಗಿಯೂ । **ಶತಗ್ವಿನಃ**—ಅತ್ಯಧಿಕವಾದ ಧನವುಳ್ಳವರಾಗಿಯೂ । **ವಿವಕ್ಷಣಾಃ**—ಧನವನ್ನು ವಹಿಸುವವರಾಗಿಯೂ । **ಅನೇಹಸಃ**—ಉಪದ್ರವರಹಿತರಾಗಿಯೂ ಇರುವಂತಾಗಲಿ.

|| ಭಾವಾರ್ಥ ||

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಮೆಲ್ಲಮೆಲ್ಲಗೆ ನಿನ್ನನ್ನು ಸಮೀಪಿಸುವ ನಾವು ಅಶ್ವಗಳುಳ್ಳವರಾಗಿಯೂ, ಅತ್ಯಧಿಕವಾದ ಧನವುಳ್ಳವರಾಗಿಯೂ, ಧನವನ್ನು ವಹಿಸುವವರಾಗಿಯೂ, ಉಪದ್ರವರಹಿತರಾಗಿಯೂ ಇರುವಂತಾಗಲಿ.

English Translation.

(May we come), thunderer, slowly approaching you,—may we be rich in horses, possessed of abundant treasure, ready to offer, and unharmed (by calamity).

|| ಸಂಹಿತಾಪಾಠಃ ||

ಊರ್ಧ್ವಾ ಹಿ ತೇ ದಿವೇದಿವೇ ಸಹಸ್ರಾ ಸೂನೃತಾ ಶತಾ |
ಜರಿತೃಭ್ಯೋ ವಿಮಂಹತೇ || ೧೨ ||

|| ಪದಪಾಠಃ ||

ಊರ್ಧ್ವಾ | ಹಿ | ತೇ | ದಿವೇಽದಿವೇ | ಸಹಸ್ರಾ | ಸೂನೃತಾ | ಶತಾ |
ಜರಿತೃಽಭ್ಯಃ | ವಿಽಮಂಹತೇ || ೧೨ ||

|| ಸಾಯಣಭಾಷ್ಯಂ ||

**ಹೇ ಇಂದ್ರ ತೇ ತವ ಜರಿತೃಭ್ಯಃ ಸ್ತೋತೃಭ್ಯಃ ಸಹಸ್ರಾ ಸಹಸ್ರಾಣಿ ಶತಾ ಶತಾನಿ ಚೋರ್ಧ್ವಾ ಊರ್ಧ್ವಾನಿ ಮುಖ್ಯಾನಿ ಸೂನೃತಾ ಸೂನೃತಾನಿ ಸಾಧನಾನಿ ದಿವೇ ದಿವೇಽನ್ವಹಂ ವಿಮಂಹತೇ | ಯಜಮಾನಃ ಪ್ರಯಚ್ಛತಿ | ಮಂಹತಿರ್ದಾನಕರ್ಮಾ ||**

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ತೇ**—ನಿನ್ನ | **ಜರಿತೃಭ್ಯಃ**—ಸ್ತೋತೃಗಳಿಗೆ | **ಸಹಸ್ರಾ**—ಸಹಸ್ರಸಂಖ್ಯಾಕವಾದವೂ | **ಶತಾ**—ಶತಸಂಖ್ಯಾಕವಾದವೂ | **ಊರ್ಧ್ವಾ**—ಅತಿಮುಖ್ಯವಾದವೂ | **ಸೂನೃತಾ**—ಮಂಗಳಕರವಾದವೂ ಆದ ಭೋಗ್ಯವಸ್ತುಗಳನ್ನು | **ದಿವೇ ದಿವೇ**—ಪ್ರತಿನಿತ್ಯವೂ | **ವಿಮಂಹತೇ**—ಯಜಮಾನನು ಕೊಡುತ್ತಾನೆ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಸ್ತೋತೃಗಳಿಗೆ ಸಹಸ್ರಸಂಖ್ಯಾಕವಾದವೂ, ಶತಸಂಖ್ಯಾಕವಾದವೂ, ಅತಿಮುಖ್ಯವಾದವೂ, ಮಂಗಳಕರವಾದವೂ ಆದ ಭೋಗ್ಯವಸ್ತುಗಳನ್ನು ಪ್ರತಿನಿತ್ಯವೂ ಯಜಮಾನನು ಕೊಡುತ್ತಾನೆ.

English Translation.

(The sacrificer) gives to your praisers day by day hundreds and thousands of excellent and auspicious gifts.

॥ ಸಂಹಿತಾಪಾಠಃ ॥

ವಿದ್ಮಾ ಹಿ ತ್ವಾ ಧನಂಜಯಮಿಂದ್ರ ದೃಳ್ಹಾ ಚಿದಾರುಜಂ ।
ಆದಾರಿಣಂ ಯಥಾ ಗಯಂ ॥ ೧೩ ॥

॥ ಪದಪಾಠಃ ॥

ವಿದ್ಮ । ಹಿ । ತ್ವಾ । ಧನಂऽಜಯಂ । ಇಂದ್ರ । ದೃಳ್ಹಾ । ಚಿತ್ । ಆऽರುಜಂ ।
ಆऽದಾರಿಣಂ । ಯಥಾ । ಗಯಂ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಧನಂಜಯಂ ಧನಾನಾಂ ಜೇತಾರಂ ದೃಢಾ ಚಿದ್ದೃಢಾನಾಮಪಿ ಶತ್ರೂಣಾಮಾರುಜಮಾಭಿಮುಖ್ಯೇನ ಭಂಕ್ತಾರಮಾದಾರಿಣಮಾದರ್ತಾರಂ ಚ ಯಥಾ ಗಯಂ ಗೃಹಮಿವೋಪದ್ರವೇಭ್ಯೋ ರಕ್ಷಕಂ ಚ ವಿದ್ಮ । ಜಾನೀಮ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ತ್ವಾ**—ನಿನ್ನನ್ನು । **ಧನಂಜಯಂ**—ಧನಗಳನ್ನು ಶತ್ರುಗಳಿಂದ ಹೊಂದುವವನನ್ನಾಗಿಯೂ । **ದೃಢಾ ಚಿತ್**—ಅತಿಪ್ರಬಲರಾದ ಶತ್ರುಗಳನ್ನೂ । **ಅರುಜಂ**—ಹಿಂಸಿಸುವವನನ್ನಾಗಿಯೂ । **ಆದಾರಿಣಂ**—ದಾರಿಮಾಡಿ ಕೊಡುವವನನ್ನಾಗಿಯೂ । **ಯಥಾ ಗಯಂ**—ಗೃಹದಂತೆ ಆಪದ್ರಕ್ಷಕನನ್ನಾಗಿಯೂ । **ವಿದ್ಮ ಹಿ**—ಅರಿತಿದ್ದೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನು ಧನಜೇತೃವೆಂದೂ, ಅತ್ಯಂತ ಶಕ್ತಿಯುತರಾದ ಶತ್ರುಗಳನ್ನೂ ನಿಗ್ರಹಿಸುವವನೆಂದೂ, ನಮಗೆ ದಾರಿಮಾಡಿ ಕೊಡುವವನೆಂದೂ, ಗೃಹದಂತೆ ಆಪದ್ರಕ್ಷಕನೆಂದೂ ನಾವು ಅರಿತಿದ್ದೇವೆ.

English Translation.

We know you, Indra, as the conqueror of wealth, the breaker of firm obstacles, the opener, and (guarding from harm) as a house.

|| ಸಂಹಿತಾಪಾಠಃ ||

ಕಕುಹಂ ಚಿತ್ತ್ವಾ ಕವೇ ಮಂದಂತು ಧೃಷ್ಣವಿಂದವಃ |
ಆ ತ್ವಾ ಪಣಿಂ ಯದೀಮಹೇ || ೧೪ ||

|| ಪದಪಾಠಃ ||

ಕಕುಹಂ | ಚಿತ್ | ತ್ವಾ | ಕವೇ | ಮಂದಂತು | ಧೃಷ್ಣೋ ಇತಿ | ಇಂದವಃ |
ಆ | ತ್ವಾ | ಪಣಿಂ | ಯತ್ | ಈಮಹೇ || ೧೪ ||

|| ಸಾಯಣಭಾಷ್ಯಂ ||

ಹೇ ಕವೇ ಕ್ರಾಂತಕರ್ಮನ್ ಧೃಷ್ಣೋ ಧರ್ಷಕೇಂದ್ರ ಯದ್ಯದಾ ಪಣಿಂ ಪಣಮಾನಂ ತ್ವಾ ತ್ವಾಮಾ ಆಭಿಮುಖ್ಯೇನೇಮಹೇ ಅಭೀಷ್ಟಂ ಯಾಚಾಮಹೇ ತದಾ ಕಕುಹಮುಚ್ಛ್ರಿತಂ ತ್ವಾ ತ್ವಾಮಿಂದವಶ್ಚಿತ್ ಸೋಮಾ ಅಪಿ ಮಂದಂತು | ಮಾದಯಂತು ||

|| ಪ್ರತಿಪದಾರ್ಥ ||

**ಕವೇ**—ಕ್ರಾಂತಕರ್ಮವುಳ್ಳವನೂ | **ಧೃಷ್ಣೋ**—ಶತ್ರುಧರ್ಷಕನೂ ಆದ ಎಲೈ ಇಂದ್ರನೇ | **ಯತ್**—ಯಾವಾಗ | **ಪಣಿಂ**—ವಿನಿಮಯರೂಪನಾದ | **ತ್ವಾ**—ನಿನ್ನನ್ನು | **ಆ**—ನಿನಗಭಿಮುಖರಾಗಿದ್ದು | **ಈಮಹೇ**—ಯಾಚಿಸುವೆವೋ ಆಗ | **ಕಕುಹಂ**—ಉಚ್ಛ್ರಿತವಾದ ಸ್ಥಾನದಲ್ಲಿರುವ | **ತ್ವಾ**—ನಿನ್ನನ್ನು | **ಇಂದವಃ ಚಿತ್**—ಸೋಮರಸಗಳೂ | **ಮಂದಂತು**—ತೃಪ್ತಿಪಡಿಸಲಿ.

|| ಭಾವಾರ್ಥ ||

ಕ್ರಾಂತಕರ್ಮವುಳ್ಳವನೂ, ಶತ್ರುಧರ್ಷಕನೂ ಆದ ಎಲೈ ಇಂದ್ರನೇ, ವಿನಿಮಯರೂಪನಾದ ನಿನ್ನನ್ನು ಸಮೀಪಿಸಿ ಯಾವಾಗ ನಿನ್ನನ್ನು ಯಾಚಿಸುವೆವೋ ಆಗ ಉಚ್ಛ್ರಿತವಾದ ಸ್ಥಾನದಲ್ಲಿರುವ ನಿನ್ನನ್ನು ಸೋಮರಸಗಳು ತೃಪ್ತಿಪಡಿಸಲಿ.

### English Translation.

Wise (Indra), overcomer enemies, when we solicit you the barterer, may the drops of the Soma exhilarate you the exalted one.

|| ಸಂಹಿತಾಪಾಠಃ ||

ಯಸ್ತೇ ರೇವಾಁ ಅದಾಶುರಿಃ ಪ್ರಮಮರ್ಷ ಮಘತ್ತಯೇ |
ತಸ್ಯ ನೋ ವೇದ ಆ ಭರ || ೧೫ ||

॥ ಪದಪಾಠಃ ॥

ಯಃ । ತೇ । ರೇವಾನ್ । ಅದಾಶುರಿಃ । ಪ್ರಽಮಮರ್ಷ । ಮಘತ್ತಯೇ ।

ತಸ್ಯ । ನಃ । ವೇದಃ । ಆ । ಭರ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಮಘತ್ತಯೇ ಧನದಾನಾಯ ತೇ ತುಭ್ಯಂ ಯಃ ಪುಮಾನ್ರೇವಾನ್ ಧನವಾನ್ ಸನ್ನದಾಶುರಿರದಾನಶೀಲಃ ಪ್ರಮಮರ್ಷ ಅಭ್ಯಸೂಯತಿ ತಸ್ಯ ಪುಂಸೋ ವೇದೋ ಧನಂ ನೋಽಸ್ಮಭ್ಯಮಾ ಭರ । ಆಹರ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಯಃ**—ಯಾವ ಪುರುಷನು । **ರೇವಾನ್**—ಧನವಂತನಾಗಿದ್ದರೂ । **ಅದಾಶುರಿಃ**—ಉದಾರಶೂನ್ಯನಾಗಿ । **ತೇ**—ನಿನಗೆ । **ಮಘತ್ತಯೇ**—ಧನವನ್ನು ಅರ್ಪಿಸಲು । **ಪ್ರಮಮರ್ಷ**—ಅಸಹನೆಯನ್ನು ತೋರಿಸುವನೋ । **ತಸ್ಯ**—ಅಂತಹ ಮಾನವನ । **ವೇದಃ**—ಧನವನ್ನು । **ನಃ**—ನಮಗೆ । **ಆ ಭರ**—ಒದಗಿಸಿಕೊಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಮಾನವನು ತಾನು ಧನವಂತನಾಗಿದ್ದರೂ ಉದಾರಶೂನ್ಯನಾಗಿ ನಿನಗೆ ಧನವನ್ನು ಅರ್ಪಿಸಲು ಅಸಹನೆಯನ್ನು ತೋರಿಸುವನೋ ಅಂತಹ ಮಾನವನ ಧನವನ್ನು ನಮಗೆ ಒದಗಿಸಿಕೊಡು.

## English Translation.

Grant to us the possessions of that rich man who, through his niggardliness, reviles you as to your bestowal of wealth.

॥ ಸಂಹಿತಾಪಾಠಃ ॥

ಇಮ ಉ ತ್ವಾ ವಿ ಚಕ್ಷತೇ ಸಖಾಯ ಇಂದ್ರ ಸೋಮಿನಃ ।

ಪುಷ್ಟಾವಂತೋ ಯಥಾ ಪಶುಂ ॥ ೧೬ ॥

॥ ಪದಪಾಠಃ ॥

ಇಮೇ । ಊಂ ಇತಿ । ತ್ವಾ । ವಿ । ಚಕ್ಷತೇ । ಸಖಾಯಃ । ಇಂದ್ರ । ಸೋಮಿನಃ ।

ಪುಷ್ಟಽವಂತಃ । ಯಥಾ । ಪಶುಂ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಸೋಮಿನೋಽಭಿಷುತಸೋಮಾಃ ಸಖಾಯಃ ಇಮ ಉ ಇಮ ಏವ ಋತ್ವಿಕ್ಪ್ರಭೃತಯೋ ಜನಾಃ ಪುಷ್ಟಾವಂತಃ ಸಂಭೃತಘಾಸಾ ಯಥಾ ಪಶುಂ ಪಶುಮಿವ ವಿ ಚಕ್ಷತೇ । ವಿಪಶ್ಯಂತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯಥಾ—ಯಾವ ರೀತಿ । ಪುಷ್ಟಾವಂತಃ—ಹುಲ್ಲನ್ನು ಹಿಡಿದಿರುವ ಗೋಪಾಲಕರು । ಪಶುಂ—ಪಶುವನ್ನು । ವಿ ಚಕ್ಷತೇ—ಆದರದಿಂದ ದೃಷ್ಟಿಸಿ ನೋಡುವರೋ ಅದರಂತೆಯೇ । ಸೋಮಿನಃ—ಸೋಮವನ್ನು ಹಿಡಿದಿರುವವರೂ । ಸಖಾಯಃ—ನಿನ್ನ ಮಿತ್ರಭೂತರೂ ಆದ । ಇಮೇ ಉ—ಈ ಯಜ್ಞಕರ್ತರು । ತ್ವಾ—ನಿನ್ನನ್ನು ವೀಕ್ಷಿಸುತ್ತಿದ್ದಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಹುಲ್ಲನ್ನು ಹಿಡಿದಿರುವ ಗೋಪಾಲಕರು ತಮ್ಮ ಪಶುವನ್ನು ಯಾವ ರೀತಿ ಆದರದಿಂದ ದೃಷ್ಟಿಸಿ ನೋಡುವರೋ ಅದರಂತೆಯೇ, ಸೋಮವನ್ನು ಹಿಡಿದಿರುವವರೂ, ನಿನ್ನ ಮಿತ್ರಭೂತರೂ ಆದ ಈ ಯಜ್ಞಕರ್ತರು ನಿನ್ನನ್ನು ವೀಕ್ಷಿಸುತ್ತಿದ್ದಾರೆ.

## English Translation.

These friends, effusing the Soma, look on you· Indra, as men with their fodder ready (look) on their cattle.

॥ ಸಂಹಿತಾಪಾಠಃ ॥

ಉತ ತ್ವಾಬಧಿರಂ ವಯಂ ಶ್ರುತ್ಕರ್ಣಂ ಸಂತಮೂತಯೇ ।
ದೂರಾದಿಹ ಹವಾಮಹೇ ॥ ೧೭ ॥

॥ ಪದಪಾಠಃ ॥

ಉತ । ತ್ವಾ । ಅಬಧಿರಂ । ವಯಂ । ಶ್ರುತ್ಽಕರ್ಣಂ । ಸಂತಂ । ಊತಯೇ ।
ದೂರಾತ್ । ಇಹ । ಹವಾಮಹೇ ॥ ೧೭ ॥

॥ ಸಾಯಣಭಾಷ್ಯಂ ॥

ಉತಾಪಿ ಚ ಹೇ ಇಂದ್ರ ಅಬಧಿರಮನುಪಹತಶ್ರೋತ್ರೇಂದ್ರಿಯಂ ಅತ ಏವ ಶ್ರುತ್ಕರ್ಣಂ ಶ್ರವಣಪರಕರ್ಣಂ ಸಂತಂ ತ್ವಾ ತ್ವಾಂ ವಯಂ ತ್ರಿಶೋಕಾ ಇಹ ಯಜ್ಞ ಊತಯೇ ರಕ್ಷಣಾಯ ದೂರಾದ್ಧವಾಮಹೇ । ಹ್ವಯಾಮಃ ॥

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಉತ**—ಮತ್ತು | **ಅಬಧಿರಂ**—ದೋಷರಹಿತವಾದ ಕಿವಿಯುಳ್ಳವನೂ | **ಶ್ರುತ್ಕರ್ಣಂ ಸಂತಂ**—ನಮ್ಮ ಸ್ತುತಿಯನ್ನು ಕೇಳತಕ್ಕ ಕಿವಿಯುಳ್ಳವನೂ ಆದ | **ತ್ವಾ**—ನಿನ್ನನ್ನು | **ವಯಂ**—ನಾವು | **ಇಹ**—ಈ ಯಜ್ಞದಲ್ಲಿ | **ಊತಯೇ**—ರಕ್ಷಣಾರ್ಥವಾಗಿ | **ದೂರಾತ್**—ಅತಿದೂರದಿಂದಲೇ | **ಹವಾಮಹೇ**—ಯಾಚಿಸಿ ಕರೆಯುತ್ತೇವೆ.

|| ಭಾವಾರ್ಥ ||

ಎಲೈ ಇಂದ್ರನೇ, ದೋಷರಹಿತವಾದ ಕಿವಿಯುಳ್ಳವನೂ, ನಮ್ಮ ಸ್ತುತಿಗಳನ್ನು ಕೇಳುವ ಕಿವಿಯುಳ್ಳವನೂ ಆದ ನಿನ್ನನ್ನು ನಾವು ಈ ಯಜ್ಞದಲ್ಲಿ ರಕ್ಷಣಾರ್ಥವಾಗಿ ಅತಿದೂರದಿಂದಲೇ ಯಾಚಿಸಿ ಕರೆಯುತ್ತೇವೆ.

English Translation.

We invoke you here from afar for our protection, who are never deaf, and whose ears are always open to hear.

|| ಸಂಹಿತಾಪಾಠಃ ||

**ಯಚ್ಛುಶ್ರೂಯಾ ಇಮಂ ಹವಂ ದುರ್ಮರ್ಷಂ ಚಕ್ರಿಯಾ ಉತ |**
**ಭವೇರಾಪಿರ್ನೋ ಅಂತಮಃ ||೧೮||**

|| ಪದಪಾಠಃ ||

**ಯತ್ | ಶುಶ್ರೂಯಾಃ | ಇಮಂ | ಹವಂ | ದುಃऽಮರ್ಷಂ | ಚಕ್ರಿಯಾಃ | ಉತ |**
**ಭವೇಃ | ಆಪಿಃ | ನಃ | ಅಂತಮಃ ||೧೮||**

|| ಸಾಯಣಭಾಷ್ಯಂ ||

ಹೇ ಇಂದ್ರ ಯದ್ಯದೀಮಮಸ್ಮದೀಯಂ ಹವಮಾಹ್ವಾನಂ ಶುಶ್ರೂಯಾಃ ಶೃಣುಯಾಃ ತರ್ಹಿ ದುರ್ಮರ್ಷಂ ಶತ್ರೂಣಾಂ ದುಃಸಹಂ ಬಲಂ ಚಕ್ರಿಯಾಃ | ಕುರ್ಯಾಃ | ಉತಾಪಿ ಚ ನೋಽಸ್ಮಾಕಮಂತಮೋಽಂತಿಕತಮ ಆಪಿರ್ಬಂಧುರ್ಭವೇಃ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಯತ್**—ಒಂದುವೇಳೆ | **ಇಮಂ ಹವಂ**—ನಮ್ಮ ಈ ಆಹ್ವಾನವನ್ನು | **ಶುಶ್ರೂಯಾಃ**—ನೀನು ಕೇಳಿದ್ದೇ ಆದರೆ | (ಆಗ) **ದುರ್ಮರ್ಷಂ**—ಶತ್ರುಗಳ ಏಟಿಗೆ ಸಿಲುಕದ ನಿನ್ನ ಶಕ್ತಿಯನ್ನು | **ಚಕ್ರಿಯಾಃ**—ಪ್ರಕಟಿಸು | **ಉತ**—ಮತ್ತು | **ನಃ**—ನಮಗೆ | **ಅಂತಮಃ**—ಅತ್ಯಂತ ಸಮೀಪಸ್ಥನಾದ | **ಆಪಿಃ**—ಬಂಧುವಾಗಿ | **ಭವೇಃ**—ಆಗು.

|| ಭಾವಾರ್ಥ ||

ಎಲೈ ಇಂದ್ರನೇ, ಒಂದು ವೇಳೆ ನಮ್ಮ ಆಹ್ವಾನವನ್ನು ನೀನು ಕೇಳಿದ್ದೇ ಆದರೆ, ಆಗ ಶತ್ರುಗಳ ಹಿಡಿಗೆ ಸಿಲುಕದ ನಿನ್ನ ಶಕ್ತಿಯನ್ನು ಪ್ರಕಟಿಸು. ಮತ್ತು ನಮಗೆ ಅತ್ಯಂತ ಸಮೀಪಸ್ಥನಾದ ಬಂಧುವಾಗು.

English Translation.

If you hear this our prayer, then display your invincible power and be our nearest kinsman.

|| ಸಂಹಿತಾಪಾಠಃ ||

ಯಚ್ಚಿದ್ಧಿ ತೇ ಅಪಿ ವ್ಯಥಿರ್ಜಗನ್ವಾಂಸೋ ಅಮನ್ಮಹಿ ।
ಗೋದಾ ಇದಿಂದ್ರ ಬೋಧಿನಃ || ೧೯ ||

|| ಪದಪಾಠಃ ||

ಯತ್ । ಚಿತ್ । ಹಿ । ತೇ । ಅಪಿ । ವ್ಯಥಿಃ । ಜಗನ್ವಾಂಸಃ । ಅಮನ್ಮಹಿ ।
ಗೋಽದಾಃ । ಇತ್ । ಇಂದ್ರ । ಬೋಧಿ । ನಃ || ೧೯ ||

|| ಸಾಯಣಭಾಷ್ಯಂ ||

ಅಪಿ ಚಿದಪಿ ಚ ಹೇ ಇಂದ್ರ ತೇ ತುಭ್ಯಂ ಯದ್ಯದಾ ಹಿ ವ್ಯಥಿರ್ದಾರಿದ್ರ್ಯೇಣ ವ್ಯಥಿತಾ ಜಗನ್ವಾಂಸೋ ಗಂತಾರೋ ವಯಮಮನ್ಮಹಿ ವಿಷ್ಟುಮಃ ತದಾ ನೋಽಸ್ಮಾಕಂ ಗೋದಾ ಇದ್ಗವಾಂ ದಾತೈವ ಭವಾಮೀತಿ ಬೋಧಿ । ಬುಧ್ಯಸ್ವ ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಅಪಿ ಚಿತ್**—ಅದೂ ಅಲ್ಲದೇ । **ತೇ**—ನಿನ್ನನ್ನು । **ಯತ್ ಹಿ**—ಯಾವ ಯಾವ ಕಾಲದಲ್ಲಿ । **ವ್ಯಥಿಃ**—ದಾರಿದ್ರ್ಯದಿಂದ ಪೀಡಿತರೂ । **ಜಗನ್ವಾಂಸಃ**—ನಿನ್ನನ್ನು ಸಮೀಪಿಸುವವರೂ ಆದ ನಾವು । **ಅಮನ್ಮಹಿ**—ಸ್ತುತಿಸುವೆವೋ ಆಗ । **ನಃ**—ನಮಗೆ । **ಗೋದಾ ಇತ್**—ಖಂಡಿತ ಗೋವುಗಳನ್ನು ಕೊಡಬೇಕೆಂದು । **ಬೋಧಿ**—ತಿಳಿ.

|| ಭಾವಾರ್ಥ ||

ಎಲೈ ಇಂದ್ರನೇ, ದಾರಿದ್ರ್ಯದಿಂದ ಪೀಡಿತರಾದ ನಾವು ಯಾವ ಯಾವ ಕಾಲದಲ್ಲಿ ನಿನ್ನನ್ನು ಸಮೀಪಿಸಿ ನಿನಗೆ ಸ್ತುತಿಯನ್ನರ್ಪಿಸುವೆವೋ ಆಯಾ ಕಾಲಗಳಲ್ಲೆಲ್ಲಾ ನಮಗೆ ಖಂಡಿತ ಗೋವುಗಳನ್ನು ಕೊಡಬೇಕೆಂದು ತಿಳಿ.

English Translation.

Whenever, repairing to you in our distress, we offer our praises, attend to us, Indra as a giver of cattle.

॥ ಸಂಹಿತಾಪಾಠಃ ॥

ಆ ತ್ವಾ ರಂಭಂ ನ ಜಿವ್ರಯೋ ರರಂಭಾ ಶವಸಸ್ಪತೇ ।

ಉಶ್ಮಸಿ ತ್ವಾ ಸಧಸ್ಥ ಆ ॥ ೨೦ ॥

॥ ಪದಪಾಠಃ ॥

ಆ । ತ್ವಾ । ರಂಭಂ । ನ । ಜಿವ್ರಯಃ । ರರಂಭ । ಶವಸಃ । ಪತೇ ।

ಉಶ್ಮಸಿ । ತ್ವಾ । ಸಧಽಸ್ಥೇ । ಆ ॥ ೨೦ ॥

॥ ಸಾಯಣಭಾಷ್ಯಂ ॥

ಹೇ ಶವಸಸ್ಪತೇ ಬಲಸ್ಯ ಪತೇ ತ್ವಾ ತ್ವಾಂ ವಯಂ ಜಿವ್ರಯೋ ಕ್ಷೀಣಾ ವೃದ್ಧಾ ರಂಭಂ ನ ದಂಡಮಿವ ರರಂಭ । ರಭಾಮಹೇ । ತಥಾ ಚ ಯಾಸ್ಕಃ । ಆರಭಾಮಹೇ ತ್ವಾ ಜೀರ್ಣಾ ಇವ ದಂಡಂ । ನಿ. ೩-೨೧ । ಅಪಿ ಚ ತ್ವಾ ತ್ವಾಂ ಸಧಸ್ಥೇ ಯಜ್ಞ ಉಶ್ಮಸಿ । ಕಾಮಯಾಮಹೇ ॥

॥ ಪ್ರತಿಪದಾರ್ಥ ॥

**ಶವಸಸ್ಪತೇ**—ಶಕ್ತಿಪಾಲಕನಾದ ಎಲೈ ಇಂದ್ರನೇ । **ಜಿವ್ರಯಃ**—ವೃದ್ಧರು । **ರಂಭಂ ನ**—ಕೋಲನ್ನು ಆಶ್ರಯಿಸುವಂತೆ । **(ವಯಂ**—ನಾವು) । **ತ್ವಾ**—ನಿನ್ನನ್ನು । **ರರಂಭ**—ಆಶ್ರಯಿಸುತ್ತೇವೆ । **ಸಧಸ್ಥೇ**—ಈ ಯಜ್ಞದಲ್ಲಿ । **ತ್ವಾ**—ನಿನ್ನನ್ನು । **ಉಶ್ಮಸಿ**—ಅಪೇಕ್ಷಿಸುತ್ತೇವೆ.

॥ ಭಾವಾರ್ಥ ॥

ಶಕ್ತಿಗೆಲ್ಲಾ ಪ್ರಭುವಾದ ಎಲೈ ಇಂದ್ರನೇ, ವೃದ್ಧರು ಕೋಲನ್ನು ಹಿಡಿದುಕೊಳ್ಳುವಂತೆ, ನಾವು ನಿನ್ನನ್ನು ಆಶ್ರಯಿಸುತ್ತೇವೆ. ಈ ಯಜ್ಞದಲ್ಲಿ ನಿನ್ನನ್ನು ಅಪೇಕ್ಷಿಸುತ್ತೇವೆ

## English Translation.

Lord of might, we lean on you as the aged on a staff; we long for you in the sacrifice.

॥ ವಿಶೇಷವಿಷಯಗಳು ॥

ಯಾಸ್ಕರು ರಂಭ ಶಬ್ದಕ್ಕೆ ಅರ್ಥವನ್ನು ವಿವರಿಸುತ್ತಾ ಈ ರೀತಿ ನಿರ್ವಚನವನ್ನು ಹೇಳಿದ್ದಾರೆ—

**ರಂಭಃ ಪಿನಾಕಮಿತಿ ದಂಡಸ್ಯ । ರಂಭ ಆರಭಂತ ಏನಂ । ಆ ತ್ವಾ ರಂಭಂ ನ ಜಿವ್ರಯೋ ರರಂಭ ಇತ್ಯಪಿ ನಿಗಮೋ ಭವತಿ । ಆರಭಾಮಹೇ ತ್ವಾ ಜೀರ್ಣಾ ಇವ ದಂಡಂ ॥**

(ನಿ. ೩-೨೧)

**ರಂಭಃ, ಪಿನಾಕಂ** ಎಂಬ ಎರಡು ಶಬ್ದಗಳೂ ದಂಡ ಎಂಬ ಅರ್ಥವನ್ನು ಸೂಚಿಸುವ ಪರ್ಯಾಯ ಪದಗಳು. **ಈ ಎರಡು** ಶಬ್ದಗಳಿಗೂ ದಂಡ ಎಂಬ ಒಂದೇ ಅರ್ಥವಿರುವುದು. ಈ ದಂಡವನ್ನು (ಕೋಲನ್ನು) ಜನರು ಊರಿ **ನಡೆಯುವುದ**ಕ್ಕಾಗಿ ಹಿಡಿದುಕೊಳ್ಳುವರು. ಆದ್ದರಿಂದ ಈ ದಂಡಕ್ಕೆ ರಂಭವೆಂದು ಹೆಸರು. **ಆ ತ್ವಾ ರಂಭಂ ನ ಜಿವ್ರಯೋ ರರಂಭ** ಎಂಬುದು ಈ ಅರ್ಥವನ್ನು ಸಮರ್ಥಿಸುವ ಶ್ರುತಿವಾಕ್ಯದ ಉದಾಹರಣೆಯು. ಎಲೈ ಇಂದ್ರನೇ, ವೃದ್ಧರಾದವರು ಊರಿಕೊಂಡು ನಡೆಯುವುದಕ್ಕಾಗಿ ಕೋಲನ್ನು ಯಾವ ರೀತಿ ಆಶ್ರಯಿಸುವರೋ ಅದರಂತೆ ನಾವು ನಿನ್ನನ್ನು ಆಶ್ರಯಿಸುವೆವು ಎಂದು ಈ ವಾಕ್ಯದ ಅರ್ಥವು.

॥ ಸಂಹಿತಾಪಾಠಃ ॥

ಸ್ತೋತ್ರಮಿಂದ್ರಾಯ ಗಾಯತ ಪುರುನೃಮ್ಣಾಯ ಸತ್ವನೇ ।
ನಕಿರ್ಯಂ ವೃಣ್ವತೇ ಯುಧಿ ॥ ೨೧ ॥

॥ ಪದಪಾಠಃ ॥

**ಸ್ತೋತ್ರಂ** । ಇಂದ್ರಾಯ । **ಗಾಯತ** । **ಪುರುಽನೃಮ್ಣಾಯ** । **ಸತ್ವನೇ** ।
**ನಕಿಃ । ಯಂ । ವೃಣ್ವತೇ । ಯುಧಿ** ॥ ೨೧ ॥

॥ ಸಾಯಣಭಾಷ್ಯಂ ॥

**ಯಮಿಂದ್ರಂ ಯುಧಿ ಯುದ್ಧೇ ನಕಿರ್ವೃಣ್ವತೇ ಕೇಽಪಿ ನ ವಾರಯಂತಿ ತಸ್ಮೈ ಸತ್ವನೇ ದಾನಶೀಲಾಯ ಪುರುನೃಮ್ಣಾಯ ಬಹುಧನಾಯೇಂದ್ರಾಯ ಸ್ತೋತ್ರಂ ಗಾಯತ । ಪಠತ ॥**

॥ ಪ್ರತಿಪದಾರ್ಥ ॥

**ಯಂ**—ಯಾವ ಇಂದ್ರನನ್ನು । **ಯುಧಿ**—ಯುದ್ಧದಲ್ಲಿ । **ನಕಿಃ ವೃಣ್ವತೇ**—ಯಾರೂ ತಡೆಯಲಾರರೋ ಅಂತಹ। **ಸತ್ವನೇ**—ದಾನಶೀಲನೂ। **ಪುರುನೃಮ್ಣಾಯ**—ಬಹುಧನವುಳ್ಳವನೂ ಆದ। **ಇಂದ್ರಾಯ**—ಇಂದ್ರನನ್ನುದ್ದೇಶಿಸಿ । **ಸ್ತೋತ್ರಂ**—ಸ್ತೋತ್ರವನ್ನು । **ಗಾಯತ**—ಪಠಿಸಿರಿ.

॥ ಭಾವಾರ್ಥ ॥

ಯಾವ ಇಂದ್ರನನ್ನು ಯುದ್ಧದಲ್ಲಿ ಯಾರೂ ತಡೆಯಲಾರರೋ ಅಂತಹ ದಾನಶೀಲನೂ, ಬಹುವಾದ ಧನವುಳ್ಳವನೂ ಆದ ಇಂದ್ರನನ್ನುದ್ದೇಶಿಸಿ ಸ್ತೋತ್ರವನ್ನು ಪಠಿಸಿರಿ.

## English Translation.

Sing the praise to Indra, who is rich in wealth and bountiful, whom none can stay in battle.

॥ ಸಂಹಿತಾಪಾಠಃ ॥

ಅಭಿ ತ್ವಾ ವೃಷಭಾ ಸುತೇ ಸುತಂ ಸೃಜಾಮಿ ಪೀತಯೇ ।
ತೃಂಪಾ ವ್ಯಶ್ನುಹೀ ಮದಂ ॥ ೨೨ ॥

॥ ಪದಪಾಠಃ ॥

ಅಭಿ । ತ್ವಾ । ವೃಷಭ । ಸುತೇ । ಸುತಂ । ಸೃಜಾಮಿ । ಪೀತಯೇ ।
ತೃಂಪ । ವಿ । ಅಶ್ನುಹಿ । ಮದಂ ॥ ೨೨ ॥

॥ ಸಾಯಣಭಾಷ್ಯಂ ॥

ಹೇ ವೃಷಭೇಂದ್ರ ತ್ವಾ ತ್ವಾಂ ಸುತೇ ಸೋಮೇಽಭಿಷುತೇ ಸತಿ ಸುತಮಭಿಷುತಂ **ಸೋಮಂ** ಪೀತಯೇ ಪಾನಾಯಾಭಿ ಸೃಜಾಮಿ । ತೃಂಪ । ತೃಪ್ಯ । ಮದಂ ಮದಕರಂ ವ್ಯಶ್ನುಹಿ ಚ ॥

॥ ಪ್ರತಿಪದಾರ್ಥ ॥

**ವೃಷಭ**—ಕಾಮವರ್ಷಕನಾದ ಎಲೈ ಇಂದ್ರನೇ । **ತ್ವಾ**—ನಿನಗಾಗಿ । **ಸುತೇ—ಸೋಮವು** ಹಿಂಡಲ್ಪಟ್ಟಾಗ । **ಸುತಂ**—ಹಿಂಡಿದ ಸೋಮವನ್ನು । **ಪೀತಯೇ**—ನಿನ್ನ ಪಾನಾರ್ಥವಾಗಿ । **ಅಭಿ ಸೃಜಾಮಿ**—ಅರ್ಪಿಸುತ್ತೇನೆ । **ತೃಂಪ**—ತೃಪ್ತಿಯನ್ನು ಹೊಂದು । **ಮದಂ**—ಹರ್ಷಕಾರಕವಾದ ಸೋಮವನ್ನು । **ವ್ಯಶ್ನುಹಿ**—ತುಂಬಿಸಿಕೋ.

॥ ಭಾವಾರ್ಥ ॥

ಕಾಮವರ್ಷಕನಾದ ಎಲೈ ಇಂದ್ರನೇ, ನಿನಗಾಗಿ ಸೋಮವು ಹಿಂಡಲ್ಪಟ್ಟಾಗ ಹಿಂಡಿದ ಸೋಮವನ್ನು ನಿನ್ನ ಪಾನಾರ್ಥವಾಗಿ ಅರ್ಪಿಸುತ್ತೇನೆ. ತೃಪ್ತಿಯನ್ನು ಹೊಂದು. ಹರ್ಷಕರವಾದ ಸೋಮವನ್ನು ನಿನ್ನಲ್ಲಿ ತುಂಬಿಸಿಕೋ.

English Translation.

When the Soma is effused, I pour out the libation to you, Showerer (of blessings), for your drinking; satiate yourself, enjoy the exilarating draught.

॥ ಸಂಹಿತಾಪಾಠಃ ॥

ಮಾ ತ್ವಾ ಮೂರಾ ಅವಿಷ್ಯವೋ ಮೋಪಹಸ್ವಾನ ಆ ದಭನ್ ।
ಮಾಕೀಂ ಬ್ರಹ್ಮದ್ವಿಷೋ ವನಃ ॥ ೨೩ ॥

॥ ಪದಪಾಠಃ ॥

ಮಾ । ತ್ವಾ । ಮೂರಾಃ । ಅವಿಷ್ಯವಃ । ಮಾ । ಉಪऽಹಸ್ವಾನಃ । ಆ । ದಭನ್ ।

ಮಾಕೀಂ । ಬ್ರಹ್ಮऽದ್ವಿಷಃ । ವನಃ ॥ ೨೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಮೂರಾ ಮೂರಕಾ ಮೂಢಾ ಮನುಷ್ಯಾ ಅವಿಷ್ಯವಃ ಪಾಲನಕಾಮಾ ಮಾ ದಭನ್ । ಮಾ ಹಿಂಸಂತು । ಉಪಹಸ್ವಾನ ಉಪಹಸನಪರಾಶ್ಚ ಮಾ ಭವಂತು । ಬ್ರಹ್ಮದ್ವಿಷೋ ಬ್ರಾಹ್ಮಣಾನಾಂ ದ್ವೇಷ್ಟ್ರೂನ್ ಮಾಕೀಂ ವನಃ । ಮಾ ಭಜೇಥಾಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತ್ವಾ**—ನಿನ್ನನ್ನು । **ಅವಿಷ್ಯವಃ**—ರಕ್ಷಣೆಯನ್ನಪೇಕ್ಷಿಸುವ । **ಮೂರಾಃ**—ಅವಿವೇಕಿಗಳು । **ಮಾ ಆ ದಭನ್**—ಹಿಂಸಿಸದಿರಲಿ । **ಉಪಹಸ್ವಾನಃ**—ನಿನ್ನನ್ನು ಅಪಹಾಸ್ಯ ಮಾಡತಕ್ಕವರೂ । **ಮಾ**—ಹಿಂಸಿಸದಿರಲಿ । **ಬ್ರಹ್ಮದ್ವಿಷಃ**—ಬ್ರಹ್ಮದ್ವೇಷಿಗಳಾದ ಅಸುರರನ್ನು । **ಮಾಕೀಂ ವನಃ**—ಖಂಡಿತ ಅನುಗ್ರಹಿಸಬೇಡ.

॥ ಭಾವಾರ್ಥ ॥

ಎಲೈ ಇಂದ್ರನೇ, ರಕ್ಷಣೆಯನ್ನಪೇಕ್ಷಿಸುವ ಅವಿವೇಕಿಗಳು ನಿನ್ನನ್ನು ಹಿಂಸಿಸದಿರಲಿ. ಅಪಹಾಸ್ಯ ಮಾಡತಕ್ಕವರೂ ಹಿಂಸಿಸದಿರಲಿ. ಬ್ರಹ್ಮದ್ವೇಷಿಗಳಾದ ಅಸುರರನ್ನು ಖಂಡಿತ ಅನುಗ್ರಹಿಸಬೇಡ.

English Translation.

Let not fools, seeking protection, nor mockers trouble you ; favour not the enemies of the Brahmans.

॥ ಸಂಹಿತಾಪಾಠಃ ॥

ಇಹ ತ್ವಾ ಗೋಪರೀಣಸಾ ಮಹೇ ಮಂದಂತು ರಾಧಸೇ ।

ಸರೋ ಗೌರೋ ಯಥಾ ಪಿಬ ॥ ೨೪ ॥

॥ ಪದಪಾಠಃ ॥

ಇಹ । ತ್ವಾ । ಗೋऽಪರೀಣಸಾ । ಮಹೇ । ಮಂದಂತು । ರಾಧಸೇ ।

ಸರಃ । ಗೌರಃ । ಯಥಾ । ಪಿಬ ॥ ೨೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಮಿಹ ಯಜ್ಞೇ ಗೋಪರೀಣಸಾ ಗವ್ಯೇನ ಪಯಸಾ ಸಂಮಿಶ್ರಿತೇನ ಸೋಮೇನ ಮಹೇ ಮಹತೇ ರಾಧಸೇ ಧನಾಯ ಮಂದಂತು । ಮನುಷ್ಯಾ ಮಾದಯಂತು । ತ್ವಂ ಚ ತಂ ಸೋಮಂ ಯಥಾ ಗೌರೋ ಮೃಗಃ ಸರಃ ಪಿಬತಿ ತಥಾ ಪಿಬ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಇಹ—ಈ ಯಜ್ಞದಲ್ಲಿ । ಮಹೇ—ಮಹತ್ತಾದ । ರಾಧಸೇ—ಧನಕ್ಕಾಗಿ । ತ್ವಾ—ನಿನ್ನನ್ನು । ಗೋಪರೀಣಸಾ—ಕ್ಷೀರಮಿಶ್ರಿತವಾದ ಸೋಮದಿಂದ । ಮಂದಂತು—ಯಜಮಾನರು ತೃಪ್ತಿಪಡಿಸಲಿ । ಯಥಾ—ಯಾವ ರೀತಿ । ಗೌರಃ—ಗೌರಮೃಗವು । ಸರಃ—ಸರೋವರದ ನೀರನ್ನು ಬಾಯಾರಿಕೆಯಿಂದ ಪಾನಮಾಡುವುದೋ ಹಾಗೆ । ಪಿಬ—ಈ ಸೋಮವನ್ನು ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಮಹತ್ತಾದ ಧನಲಾಭಕ್ಕಾಗಿ ಈ ಯಜ್ಞದಲ್ಲಿ ನಿನ್ನನ್ನು ಕ್ಷೀರಮಿಶ್ರಿತವಾದ ಸೋಮದಿಂದ ಯಜಮಾನರು ತೃಪ್ತಿಪಡಿಸಲಿ. ಯಾವ ರೀತಿ ಗೌರಮೃಗವು ಸರೋವರದ ನೀರನ್ನು ಬಾಯಾರಿಕೆಯಿಂದ ಪಾನಮಾಡುವುದೋ ಹಾಗೆ ಈ ಸೋಮವನ್ನು ಪಾನಮಾಡು.

English Translation.

Let (the worshippers) gladden you here with the Soma mixed with milk, for the attainment of great wealth; drink it as the buffalo a lake.

॥ ಸಂಹಿತಾಪಾಠಃ ॥

ಯಾ ವೃತ್ರಹಾ ಪರಾವತಿ ಸನಾ ನವಾ ಚ ಚುಚ್ಯುವೇ ।
ತಾ ಸಂಸತ್ಸು ಪ್ರ ವೋಚತ ॥ ೨೫ ॥

॥ ಪದಪಾಠಃ ॥

ಯಾ । ವೃತ್ರಽಹಾ । ಪರಾಽವತಿ । ಸನಾ । ನವಾ । ಚ । ಚುಚ್ಯುವೇ ।
ತಾ । ಸಂಸತ್ಽಸು । ಪ್ರ । ವೋಚತ ॥ ೨೫ ॥

॥ ಸಾಯಣಭಾಷ್ಯಂ ॥

ವೃತ್ರಹೇಂದ್ರಃ ಪರಾವತಿ ದೂರೇ ಯಾ ಯಾನಿ ಸನಾ ಸನಾತನಾನಿ ನವಾ ನವಾನಿ ನೂತನಾನಿ ಚ ಧನಾನಿ ಚುಚ್ಯುವೇ ಪ್ರೇರಿತವಾನ್ ತಾನಿ ಧನಾನಿ ಸಂಸತ್ಸು ಯಜ್ಞೇಷು ಸಭಾಸು ವಾ ಪ್ರ ವೋಚತ । ಪ್ರಬ್ರೂತ ಹೇ ವಿದ್ವಜ್ಜನಾಃ ॥

॥ ಪ್ರತಿಪದಾರ್ಥ ॥

**ವೃತ್ರಹಾ**—ವೃತ್ರಹಂತಕನಾದ ಇಂದ್ರನು | **ಪರಾವತಿ**—ಅತ್ಯಂತ ದೂರದೇಶದಿಂದ | **ಯಾ**—ಯಾವ | **ಸನಾ**—ಪುರಾತನವಾದವೂ | **ನವಾ ಚ**—ನೂತನವಾದವೂ ಆದ ಧನಗಳನ್ನು | **ಚುಚ್ಯುವೇ**—ಕಳುಹಿಸಿ ಕೊಡುವನೋ | **ತಾ**--ಅಂತಹ ಧನಗಳನ್ನು | **ಸಂಸತ್ಸು**—ಯಜ್ಞಸಭೆಗಳಲ್ಲಿ ! **ಪ್ರ ವೋಚತ**—ಪ್ರಶಂಸಿಸಿರಿ.

॥ ಭಾವಾರ್ಥ ॥

ವೃತ್ರಹಂತಕನಾದ ಇಂದ್ರನು ಅತ್ಯಂತ ದೂರದೇಶದಿಂದ ಯಾವ ಪುರಾತನವಾದವೂ, ನೂತನವಾದವೂ ಆದ ಧನಗಳನ್ನು ಕಳುಹಿಸಿ ಕೊಡುವನೋ ಅಂತಹ ಧನಗಳನ್ನು ಯಜ್ಞಸಭೆಗಳಲ್ಲಿ ಪ್ರಶಂಸಿಸಿರಿ.

English Translation.

Proclaim in our assemblies those perpetual and ever new riches which the slayer of Vritra sends from afar.

॥ ಸಂಹಿತಾಪಾಠಃ ॥

ಅಪಿಬತ್ಕದ್ರುವಃ ಸುತಮಿಂದ್ರಃ ಸಹಸ್ರಬಾಹ್ವೇ ।
ಅತ್ರಾದೇದಿಷ್ಟ ಪೌಂಸ್ಯಂ ॥ ೨೬ ॥

॥ ಪದಪಾಠಃ ॥

**ಅಪಿಬತ್ । ಕದ್ರುವಃ । ಸುತಂ । ಇಂದ್ರಃ । ಸಹಸ್ರಽಬಾಹ್ವೇ ।**
**ಅತ್ರ । ಅದೇದಿಷ್ಟ । ಪೌಂಸ್ಯಂ ॥ ೨೬ ॥**

॥ ಸಾಯಣಭಾಷ್ಯಂ ॥

**ಇಂದ್ರಃ ಕದ್ರುವಃ ಕದ್ರುನಾಮಕಸ್ಯರ್ಷೇಃ ಸಂಬಂಧಿನಂ ಸುತಮಭಿಷುತಂ ಸೋಮಮಪಿಬತ್ ಪೀತವಾನ್ । ಸಹಸ್ರಬಾಹ್ವೇ ಸಹಸ್ರಬಾಹೋಃ ಶತ್ರೂಂಶ್ಚಾಹನ್ನಿತಿಶೇಷಃ । ಅತ್ರಾಸ್ಮಿನ್ನವಸರೇ ಪೌಂಸ್ಯಮಿಂದ್ರಸ್ಯ ವೀರ್ಯಮದೇದಿಷ್ಟ । ಅದೀಪ್ಯತ ॥**

॥ ಪ್ರತಿಪದಾರ್ಥ ॥

**ಇಂದ್ರಃ**—ಇಂದ್ರನು | **ಕದ್ರುವಃ**—ಕದ್ರುವೆಂಬ ಋಷಿಯಿಂದ | **ಸುತಂ**—ಹಿಂಡಲ್ಪಟ್ಟ ಸೋಮವನ್ನು | **ಅಪಿಬತ್**—ಪಾನಮಾಡಿದನು | **ಸಹಸ್ರಬಾಹ್ವೇ**— ಸಹಸ್ರಬಾಹುಗಳುಳ್ಳ ಅಸುರನನ್ನು ನಾಶಮಾಡಿದನು | **ಅತ್ರ**—ಈ ಸಂದರ್ಭದಲ್ಲಿ | **ಪೌಂಸ್ಯಂ**—ಇಂದ್ರನ ವೀರ್ಯವು | **ಅದೇದಿಷ್ಟ**—ಪ್ರಕಾಶಿಸಿತು.

|| ಭಾವಾರ್ಥ ||

ಕದ್ರುವೆಂಬ ಋಷಿಯಿಂದ ಹಿಂಡಲ್ಪಟ್ಟ ಸೋಮವನ್ನು ಇಂದ್ರನು ಪಾನಮಾಡಿದನು. ಸಹಸ್ರ ಬಾಹುಗಳುಳ್ಳ ಅಸುರನನ್ನು ನಾಶಮಾಡಿದನು. ಈ ಸಂದರ್ಭದಲ್ಲಿ ಇಂದ್ರನ ವೀರ್ಯವು ಪ್ರಕಾಶಿಸಿತು.

## English Translation.

Indra drank the Soma offering of Kadru, (he smote the enemies) of the thousand-armed ; there did his might shine forth.

|| ಸಂಹಿತಾಪಾಠಃ ||

ಸತ್ಯಂ ತತ್ತುರ್ವಶೇ ಯದೌ ವಿದಾನೋ ಅಹ್ನವಾಯ್ಯಂ ।
ವ್ಯಾನಟ್ ತುರ್ವಣೇ ಶಮಿ || ೨೭ ||

|| ಪದಪಾಠಃ ||

ಸತ್ಯಂ । ತತ್ । ತುರ್ವಶೇ । ಯದೌ । ವಿದಾನಃ । ಅಹ್ನವಾಯ್ಯಂ ।
ವಿ । ಆನಟ್ । ತುರ್ವಣೇ । ಶಮಿ || ೨೭ ||

|| ಸಾಯಣಭಾಷ್ಯಂ ||

**ತುರ್ವಶೇ ರಾಜ್ಞಿ ಯದೌ ಚ ಯದುನಾಮಕೇ ಚ ರಾಜ್ಞಿ ತತ್ಪ್ರಸಿದ್ಧಂ ಯಾಗಾದಿಲಕ್ಷಣಂ ಶಮಿ ಕರ್ಮ । ಶಚೀ ಶಮೀತಿ ಕರ್ಮನಾಮಸು ಪಾಠಾತ್ । ಸತ್ಯಂ ಪರಮಾರ್ಥಂ ವಿದಾನೋ ಜಾನಂಸ್ತಯೋಃ ಪ್ರೀತ್ಯರ್ಥಮಹ್ನವಾಯ್ಯಮಹ್ನವಾಯ್ಯನಾಮಕಂ ತಯೋಃ ಶತ್ರುಂ ತುರ್ವಣೇ ಸಂಗ್ರಾಮೇ ವ್ಯಾನಟ್ । ವ್ಯಾಪ್ತವಾನ್ ||**

|| ಪ್ರತಿಪದಾರ್ಥ ||

**ತುರ್ವಶೇ**—ತುರ್ವಶನೆಂಬ ರಾಜನಲ್ಲಿಯೂ | **ಯದೌ**—ಯದುವೆಂಬ ರಾಜನಲ್ಲಿಯೂ | **ತತ್**—ಪ್ರಸಿದ್ಧವಾದ | **ಶಮಿ**—ಯಜ್ಞಕರ್ಮವನ್ನೂ | **ಸತ್ಯಂ**-ಸತ್ಯಾತ್ಮಕವಾದ ವ್ಯವಹಾರವನ್ನೂ | **ವಿದಾನಃ**—ಅರಿತ ಇಂದ್ರನು | **ಅಹ್ನವಾಯ್ಯಂ**— ಅಹ್ನವಾಯ್ಯನೆಂಬ ಅವರ ಶತ್ರುವನ್ನು | **ತುರ್ವಣೇ**— ಸಂಗ್ರಾಮದಲ್ಲಿ | **ವ್ಯಾನಟ್**—ನಾಶಮಾಡಿದನು.

|| ಭಾವಾರ್ಥ ||

ತುರ್ವಶನೆಂಬ ರಾಜನಲ್ಲಿಯೂ, ಯದುವೆಂಬ ರಾಜನಲ್ಲಿಯೂ ಪ್ರಸಿದ್ಧವಾದ ಯಜ್ಞಕರ್ಮವನ್ನೂ, ಸತ್ಯಾತ್ಮಕವಾದ ವ್ಯವಹಾರವನ್ನೂ ಅರಿತ ಇಂದ್ರನು ಅಹ್ನವಾಯ್ಯನೆಂಬ ಅವರ ಶತ್ರುವನ್ನು ಸಂಗ್ರಾಮದಲ್ಲಿ ನಾಶ ಮಾಡಿದನು.

## English Translation.

Well knowing those (sacrificial) deeds of Turvasa and Yadu, he overcame Ahnavayya in battle.

॥ ಸಂಹಿತಾಪಾಠಃ ॥

ತರಣಿಂ ವೋ ಜನಾನಾಂ ತ್ರದಂ ವಾಜಸ್ಯ ಗೋಮತಃ ।
ಸಮಾನಮು ಪ್ರ ಶಂಸಿಷಂ ॥ ೨೮ ॥

॥ ಪದಪಾಠಃ ॥

ತರಣಿಂ । ವಃ । ಜನಾನಾಂ । ತ್ರದಂ । ವಾಜಸ್ಯ । ಗೋಽಮತಃ ।
ಸಮಾನಂ । ಊಂ ಇತಿ । ಪ್ರ । ಶಂಸಿಷಂ ॥ ೨೮ ॥

॥ ಸಾಯಣಭಾಷ್ಯಂ ॥

ಹೇ ಅಸ್ಮದೀಯಾಃ ಪುರುಷಾಃ ವೋ ಯುಷ್ಮಾಕಂ ಜನಾನಾಂ ಪುತ್ರಪೌತ್ರಾದೀನಾಂ ತರಣಿಂ ತಾರಕಂ ತ್ರದಂ ಶತ್ರೂಣಾಂ ತರ್ದಯಿತಾರಂ ಗೋಮತಃ ಪಶುಮತೋಽನ್ನಸ್ಯ ದಾತಾರಂ ಚೇಂದ್ರಂ ಸಮಾನಮು ಸಾಧಾರಣಮೇವ ಪ್ರ ಶಂಸಿಷಂ । ಸ್ತೌಮಿ ॥

॥ ಪ್ರತಿಪದಾರ್ಥ ॥

(ಎಲೈ ಯಜಮಾನಾದಿಗಳೇ) **ವಃ**—ನಿಮ್ಮ । **ಜನಾನಾಂ**—ಪುತ್ರಪೌತ್ರಾದಿಗಳಿಗೆ । **ತರಣಿಂ**—ರಕ್ಷಕನಾದವನೂ । **ತ್ರದಂ**—ಶತ್ರುನಾಶಕನೂ । **ಗೋಮತಃ**—ಗೋವುಗಳಿಂದ ಕೂಡಿದ । **ವಾಜಸ್ಯ**—ಅನ್ನದ ದಾತೃವೂ । **ಸಮಾನಂ ಉ**—ನಮಗೆಲ್ಲಾ ಸಮಾನವಾದ ಬಂಧುವೂ ಆದ ಇಂದ್ರನನ್ನು । **ಪ್ರ ಶಂಸಿಷಂ**—ಸ್ತುತಿಸುತ್ತೇನೆ.

॥ ಭಾವಾರ್ಥ ॥

ಎಲೈ ಯಜಮಾನಾದಿಗಳೇ, ನಿಮ್ಮ ಪುತ್ರಪೌತ್ರಾದಿಗಳಿಗೆ ರಕ್ಷಕನಾದವನೂ, ಶತ್ರುನಾಶಕನೂ, ಗೋವುಗಳಿಂದ ಕೂಡಿದ ಅನ್ನದ ದಾತೃವೂ, ನಮಗೆಲ್ಲಾ ಸಮಾನವಾದ ಬಂಧುವೂ ಆದ ಇಂದ್ರನನ್ನು ಸ್ತುತಿಸುತ್ತೇನೆ.

## English Translation.

I praise our common (Indra), the deliverer of your families, the (of your enemies, the bestower) of riches in cattle.

|| ಸಂಹಿತಾಪಾಠಃ ||

ಋಭುಕ್ಷಣಂ ನ ವರ್ತವ ಉಕ್ಥೇಷು ತುಗ್ರ್ಯಾವೃಧಂ ।

ಇಂದ್ರಂ ಸೋಮೇ ಸಚಾ ಸುತೇ || ೨೯ ||

|| ಪದಪಾಠಃ ||

ಋಭುಕ್ಷಣಂ । ನ । ವರ್ತವೇ । ಉಕ್ಥೇಷು । ತುಗ್ರ್ಯಽವೃಧಂ ।

ಇಂದ್ರಂ । ಸೋಮೇ । ಸಚಾ । ಸುತೇ || ೨೯ ||

|| ಸಾಯಣಭಾಷ್ಯಂ ||

ಋಭುಕ್ಷಣಂ ಮಹಾಂತಂ ತುಗ್ರ್ಯಾವೃಧಮುದಕಸ್ಯ ವರ್ಧಯಿತಾರಂ । ತುಗ್ರ್ಯಾ ಬುಬುರ-ಮಿತ್ಯುದಕನಾಮಸು ಪಾಠಾತ್ । ಇಂದ್ರಂ ಸೋಮೇ ಸಚಾ ಸ್ತೋತ್ರೇಣ ಸಹ ಸುತೇಽಭಿಷುತೇ ಸತ್ಯುಕ್ಥೇಷು ಶಸ್ತ್ರೇಷು ವರ್ತವೇ ಧನಂ ವರಿತುಂ ಪ್ರಶಂಸಾಮೀತಿ ಶೇಷಃ । ನೇತಿ ಸಂಪ್ರತ್ಯರ್ಥೇ ||

|| ಪ್ರತಿಪದಾರ್ಥ ||

**ಋಭುಕ್ಷಣಂ**—ಮಹಾತ್ಮನೂ । **ತುಗ್ರ್ಯಾವೃಧಂ**—ಉದಕಕ್ಕೆ ವೃದ್ಧಿಕಾರಕನೂ ಆದ । **ಇಂದ್ರಂ**—ಇಂದ್ರನನ್ನು । **ಸೋಮೇ**—ಸೋಮರಸವು । **ಸಚಾ**—ಸ್ತೋತ್ರದೊಡನೆ । **ಸುತೇ**—ಹಿಂಡಲ್ಪಟ್ಟಾಗ । **ವರ್ತವೇ**—ಧನಪ್ರಾಪ್ತಿಗಾಗಿ । **ಉಕ್ಥೇಷು**—ಶಸ್ತ್ರಮಂತ್ರಗಳಲ್ಲಿ । **ನ**—ಈಗ ಪ್ರಶಂಶಿಸಿಸುತ್ತೇನೆ.

|| ಭಾವಾರ್ಥ ||

ಮಹಾತ್ಮನೂ, ಉದಕಕ್ಕೆ ವೃದ್ಧಿಕಾರಕನೂ ಆದ ಇಂದ್ರನನ್ನು, ಸೋಮರಸವು ಸ್ತೋತ್ರದೊಡನೆ ಹಿಂಡಲ್ಪಟ್ಟಾಗ ಧನಪ್ರಾಪ್ತಿಗಾಗಿ ಶಸ್ತ್ರಮಂತ್ರಗಳಿಂದ ಪ್ರಶಂಸಿಸುತ್ತೇನೆ.

## English Translation.

(I praise) in hymns the mighty Indra, the augmenter of waters, for the attainment of wealth, when the Soma is effused with (song).

|| ಸಂಹಿತಾಪಾಠಃ ||

ಯಃ ಕೃಂತದಿದ್ವಿ ಯೋನ್ಯಂ ತ್ರಿಶೋಕಾಯ ಗಿರಿಂ ಪೃಥುಂ ।

ಗೋಭ್ಯೋ ಗಾತುಂ ನಿರೇತವೇ || ೩೦ ||

|| ಪದಪಾಠಃ ||

ಯಃ । ಕೃಂತತ್ । ಇತ್ । ವಿ । ಯೋನ್ಯಂ । ತ್ರಿಽಶೋಕಾಯ । ಗಿರಿಂ । ಪೃಥುಂ ।
ಗೋಭ್ಯಃ । ಗಾತುಂ । ನಿಃಽಏತವೇ ॥ ೩೦ ॥

॥ ಸಾಯಣಭಾಷ್ಯಂ ॥

ಯ ಇದ್ಯ ಏವೇಂದ್ರೋ ಯೋನ್ಯಮುದಕನಿರ್ಗಮನದ್ವಾರಂ ಪೃಥುಂ ವಿಸ್ತೀರ್ಣಂ ಗಿರಿಂ ಮೇಘಂ । ಗಿರಿರ್ವ್ರಜ ಇತಿ ಮೇಘನಾಮಸು ಪಾಠಾತ್ । ತ್ರಿಶೋಕಾಯ ತ್ರಿಶೋಕನಾಮರ್ಷ್ಯರ್ಥಂ ವಿ ಕೃಂತತ್ ವ್ಯಚ್ಛಿನತ್ ಸ ಗೋಭ್ಯೋ ಗಮನವದ್ಭ್ಯ ಉದಕೇಭ್ಯೋ ನಿರೇತವೇ ನಿರ್ಗಮನಾಯ ಗಾತುಂ ಭೂಮಿಂ । ಭೂಮಿರ್ಗಾತುರಿತಿ ತನ್ನಾಮಸು ಪಾಠಾತ್ । ಮಾರ್ಗಮಿತ್ಯರ್ಥಃ । ಕರೋತೀತಿ ಶೇಷಃ ॥

॥ ಪ್ರತಿಪದಾರ್ಥ ॥

ಯಃ ಇತ್—ಯಾವ ಅದೇ ಇಂದ್ರನು । **ಯೋನ್ಯಂ**—ಉದಕಗಳಿಗೆ ಗರ್ಭಸ್ಥಾನವೂ । **ಪೃಥುಂ**—ವಿಸ್ತೃತವಾದುದೂ ಆದ । **ಗಿರಿಂ**—ಮೇಘವನ್ನು । **ತ್ರಿಶೋಕಾಯ**—ತ್ರಿಶೋಕನೆಂಬ ಋಷಿಗಾಗಿ । **ವಿ ಕೃಂತತ್**—ಸೀಳಿದನು । **ಗೋಭ್ಯಃ**—ಉದಕಗಳಿಗೆ । **ನಿರೇತವೇ**—ಹೊರಕ್ಕೆ ಪ್ರವಾಹಾರ್ಥವಾಗಿ । **ಗಾತುಂ**—ಅವಕಾಶವನ್ನೂ ಮಾಡಿದನು.

॥ ಭಾವಾರ್ಥ ॥

ಪ್ರಸಿದ್ಧನಾದ ಅದೇ ಇಂದ್ರನು ಉದಕಗಳಿಗೆ ಗರ್ಭಸ್ಥಾನವೂ, ವಿಸ್ತೃತವಾದುದೂ ಆದ ಮೇಘವನ್ನು ತ್ರಿಶೋಕನೆಂಬ ಋಷಿಗಾಗಿ ಸೀಳಿ ಉದಕಗಳ ಪ್ರವಾಹಕ್ಕೆ ಮಾರ್ಗವನ್ನು ಕಲ್ಪಿಸಿದನು.

## English Translation.

Who clove for Trishoka the broad womb-like cloud, (and made) a path for the cows to issue forth.

॥ ಸಂಹಿತಾಪಾಠಃ ॥

ಯದ್ದಧಿಷೇ ಮನಸ್ಯಸಿ ಮಂದಾನಃ ಪ್ರೇದಿಯಕ್ಷಸಿ ।
ಮಾ ತತ್ಕರಿಂದ್ರ ಮೃಳಯ ॥ ೩೧ ॥

॥ ಪದಪಾಠಃ ॥

ಯತ್ । ದಧಿಷೇ । ಮನಸ್ಯಸಿ । ಮಂದಾನಃ । ಪ್ರ । ಇತ್ । ಇಯಕ್ಷಸಿ ।
ಮಾ । ತತ್ । ಕಃ । ಇಂದ್ರ । ಮೃಳಯ ॥ ೩೧ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಮಂದಾನೋ ಮೋದಮಾನಸ್ತ್ವಂ ಯಚ್ಛುಭಂ ವಸ್ತು ದಧಿಷೇ ಧಾರಯಸಿ ಯಚ್ಚ ಮನಸ್ಯಸಿ ಪೂಜಯಸಿ ಯದಪಿ ಚ ಪ್ರೇದಿಯಕ್ಷಸಿ ಪ್ರಯಚ್ಛಸ್ಯೇವ ತತ್ಸರ್ವಂ ಮಾ ಕಃ । ಕಿಂ ನಾಕಾರ್ಷೀಃ । ಅಸ್ಮಾಕಂ ಕೃತವಾನೇವ । ಕಿಂಚಾಸ್ಮಾನ್ಮೃಳಯ । ಸುಖಯ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ಮಂದಾನಃ**—ಹರ್ಷವನ್ನು ಹೊಂದಿರುವ ನೀನು । **ಯತ್**—ಯಾವ ಭಾವವನ್ನು । **ದಧಿಷೇ**—ಹೊಂದಿರುವೆಯೋ । **ಮನಸ್ಯಸಿ**—ಯಾವ ಮನಃಸಂಕಲ್ಪವನ್ನು ಹೊಂದಿರುವೆಯೋ । **ಪ್ರೇದಿಯಕ್ಷಸಿ**—ಯಾವುದನ್ನು ಕೊಡಬೇಕೆಂದಿಚ್ಛಿಸುವೆಯೋ । **ತತ್**—ಆ ಎಲ್ಲವನ್ನೂ । **ಮಾ ಕಃ**—ನಮಗೆ ಕೊಡಬೇಕಾಗಿಲ್ಲ । **ಮೃಳಯ**—ನಮ್ಮನ್ನು ಕೇವಲ ಸುಖಪಡಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಹರ್ಷವನ್ನು ಹೊಂದಿರತಕ್ಕ ನೀನು ಯಾವ ಭಾವವನ್ನು ಮನಸ್ಸಿನಲ್ಲಿ ಹೊಂದಿರುವೆಯೋ, ಯಾವ ಮನಃಸಂಕಲ್ಪವನ್ನು ಹೊಂದಿರುವೆಯೋ ಯಾವುದನ್ನು ಕೊಡಬೇಕೆಂದಿಚ್ಛಿಸುವೆಯೋ ಆ ಎಲ್ಲವನ್ನೂ ನಮಗೆ ಕೊಡಬೇಕಾಗಿಲ್ಲ. ನಮ್ಮನ್ನು ಕೇವಲ ಸುಖಪಡಿಸು.

## English Translation.

Whatever you undertake in your exhilaration, whatever you purpose in your mind or are thinking to bestow,—O Indra, do it not but bless us.

॥ ಸಂಹಿತಾಪಾಠಃ ॥

ದಭ್ರಂ ಚಿದ್ಧಿ ತ್ವಾವತಃ ಕೃತಂ ಶೃಣ್ವೇ ಅಧಿ ಕ್ಷಮಿ ।
ಜಿಗಾತ್ವಿಂದ್ರ ತೇ ಮನಃ ॥ ೩೨ ॥

॥ ಪದಪಾಠಃ ॥

ದಭ್ರಂ । ಚಿತ್ । ಹಿ । ತ್ವಾಽವತಃ । ಕೃತಂ । ಶೃಣ್ವೇ । ಅಧಿ । ಕ್ಷಮಿ ।
ಜಿಗಾತು । ಇಂದ್ರ । ತೇ । ಮನಃ ॥ ೩೨ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಾವತಸ್ತ್ವತ್ಸದೃಶಸ್ಯ ದಭ್ರಂ ಚಿದಲ್ಪಮಪಿ ಕೃತಂ ಕರ್ಮಾಧಿ ಕ್ಷಮಿ ಕ್ಷಮಾಯಾಂ ॥ ಅಧೀತಿ ಸಪ್ತಮ್ಯರ್ಥಾನುವಾದಃ ॥ ಶೃಣ್ವೇ । ವಿಶ್ರುತಂ ಭವತಿ ಹಿ । ತಥಾ ಸತಿ ತೇ ತವ ಮನೋ ಜಿಗಾತು । ಮಯಿ ಗಚ್ಛತು ॥**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ತ್ವಾವತಃ**—ನಿನ್ನಂತಹ ಮಹಾಪುರುಷನ | **ಕೃತಂ**—ಕರ್ಮವು | **ದಭ್ರಂ ಚಿತ್**—ಅಲ್ಪವಾದರೂ ಸಹ | **ಅಧಿ ಕ್ಷಮಿ**—ಪೃಥ್ವಿಯ ಮೇಲೆ | **ಶೃಣ್ವೇ ಹಿ**—ಪ್ರಖ್ಯಾತವಾಗಿರುತ್ತದೆ | **ತೇ**—ನಿನ್ನ | **ಮನಃ**—ಅನುಗ್ರಹಪೂರ್ವಕವಾದ ಮನಸ್ಸು | **ಜಿಗಾತು**—ನನ್ನ ಕಡೆ ತಿರುಗಲಿ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನಂತಹ ಮಹಾತ್ಮನಿಂದ ಮಾಡಲ್ಪಟ್ಟ ಕರ್ಮವು ಸಣ್ಣದಾಗಿದ್ದರೂ ಅದು ಪೃಥ್ವಿಯ ಮೇಲೆ ಪ್ರಖ್ಯಾತವಾಗಿರುತ್ತದೆ. ನಿನ್ನ ಅನುಗ್ರಹಪೂರ್ವಕವಾದ ಮನಸ್ಸು ನನ್ನ ಕಡೆ ತಿರುಗಲಿ.

## English Translation.

Indra, the least deeds of one like you are renowned in the earth; may your care visit me.

|| ಸಂಹಿತಾಪಾಠಃ ||

ತವೇದು ತಾಃ ಸುಕೀರ್ತಯೋಽಸನ್ನುತ ಪ್ರಶಸ್ತಯಃ |
ಯದಿಂದ್ರ ಮೃಳಯಾಸಿ ನಃ || ೩೩ ||

|| ಪದಪಾಠಃ ||

ತವ | ಇತ್ | ಊಂ ಇತಿ | ತಾಃ | ಸುಽಕೀರ್ತಯಃ | ಅಸನ್ | ಉತ | ಪ್ರಽಶಸ್ತಯಃ |
ಯತ್ | ಇಂದ್ರ | ಮೃಳಯಾಸಿ | ನಃ || ೩೩ ||

|| ಸಾಯಣಭಾಷ್ಯಂ ||

**ಹೇ ಇಂದ್ರ ತ್ವಂ ನೋಽಸ್ಮಾನ್ಯದ್ಯಾಭಿರ್ಮೃಳಯಾಸಿ ಸುಖಯಸಿ ತಾಃ ಸುಕೀರ್ತಯಃ ಶೋಭನಾಖ್ಯಾತಯಸ್ತವೇತ್ತವೈವಾಸನ್ | ಭವೇಯುಃ | ಉತಾಪಿ ಚ ತಾಃ ಪ್ರಶಸ್ತಯಃ ಸ್ತುತಯಶ್ಚ ತವೈವ ಭವೇಯುಃ ||**

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ನಃ**—ನಮ್ಮನ್ನು | **ಯತ್**—ಯಾವ ಸ್ತುತಿಗಳಿಂದ ತೃಪ್ತನಾಗಿ | **ಮೃಳಯಾಸಿ**—ಸುಖಪಡಿಸುವೆಯೋ | **ತಾಃ**—ಅಂತಹ | **ಸುಕೀರ್ತಯಃ**—ಉತ್ತಮವಾದ ಸ್ತುತಿಕರ್ಮಗಳು | **ತವೇತ್**—ನಿನಗೆ ಅರ್ಪಿತವಾಗಿಯೇ | **ಅಸನ್**—ಆಗಿರುತ್ತವೆ | **ಉತ**—ಮತ್ತು | **ಪ್ರಶಸ್ತಯಃ**—ಉತ್ತಮವಾದ ಆ ಸ್ತುತಿಗಳು ನಿನಗಾಗಿಯೇ ನಿರ್ಮಿತವಾದವು.

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವ ಸ್ತುತಿಗಳಿಂದ ತೃಪ್ತನಾಗಿ ನೀನು ನಮ್ಮನ್ನು ಸುಖಪಡಿಸುವೆಯೋ ಅಂತಹ ಉತ್ತಮವಾದ ಸ್ತುತಿಕರ್ಮಗಳು ನಿನಗೆ ಅರ್ಪಿತವಾಗಿಯೇ ಇರುತ್ತವೆ ಉತ್ತಮವಾದ ಆ ಸ್ತುತಿಗಳು ನಿನಗಾಗಿಯೇ ನಿರ್ಮಿತವಾದವು.

English Translation.

Yours be those ascriptions of praise, yours those hymns, through which Indra, you bless us.

॥ ಸಂಹಿತಾಪಾಠಃ ॥

ಮಾ ನ ಏಕಸ್ಮಿನ್ನಾಗಸಿ ಮಾ ದ್ವಯೋರುತ ತ್ರಿಷು ।
ವಧೀರ್ಮಾ ಶೂರ ಭೂರಿಷು ॥ ೩೪ ॥

॥ ಪದಪಾಠಃ ॥

ಮಾ । ನಃ । ಏಕಸ್ಮಿನ್ । ಆಗಸಿ । ಮಾ । ದ್ವಯೋಃ । ಉತ । ತ್ರಿಷು ।
ವಧೀಃ । ಮಾ । ಶೂರ । ಭೂರಿಷು ॥ ೩೪ ॥

॥ ಸಾಯಣಭಾಷ್ಯಂ ॥

**ಹೇ ಶೂರೇಂದ್ರ ನೋಽಸ್ಮಾನೇಕಸ್ಮಿನ್ನಾಗಸ್ಯಪರಾಧೇ ಮಾ ವ[illegible] ಮಾ ಹಿಂಸೀಃ । ದ್ವಯೋರಾಗಸೋರಪಿ ಮಾ ವಧೀಃ । ಉತಾಪಿ ಚ ತ್ರಿಷ್ವಾಗಃಸ್ವಪಿ ಮಾ ಹಿಂಸೀಃ । ಭೂರಿಷ್ವಸ್ಯಸಂಖ್ಯಾತೇಷ್ವಾಗಃಸು ಮಾ ಚ ವಧೀಃ ॥**

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ನಃ**—ನಮ್ಮನ್ನು । **ಏಕಸ್ಮಿನ್ ಆಗಸಿ**—ಒಂದು ತಪ್ಪಿಗಾಗಿ । **ಮಾ ವಧೀಃ**—ಹಿಂಸಿಸಬೇಡ । **ದ್ವಯೋಃ**—ಎರಡು ತಪ್ಪಿಗಾಗಿಯೂ । **ಮಾ**—ಹಿಂಸಿಸಬೇಡ । **ಉತ**—ಮತ್ತು । **ತ್ರಿಷು**—ಮೂರು ತಪ್ಪಿಗಾಗಿಯೂ । **ಮಾ**—ಹಿಂಸಿಸಬೇಡ । **ಭೂರಿಷು**—ಒಂದುವೇಳೆ ಅತ್ಯಧಿಕವಾದ ಪಾಪಗಳಿಗಾಗಿಯಾದರೂ ನಮ್ಮನ್ನು ಹಿಂಸಿಸಬೇಡ.

॥ ಭಾವಾರ್ಥ ॥

ಪರಾಕ್ರಮಿಯಾದ ಎಲೈ ಇಂದ್ರನೇ, ನಮ್ಮನ್ನು ಒಂದು ತಪ್ಪಿಗಾಗಿ ಹಿಂಸಿಸಬೇಡ. ಎರಡು ಅಥವಾ ಮೂರು ತಪ್ಪಿಗಾಗಿಯೂ ಹಿಂಸಿಸಬೇಡ. ಒಂದು ವೇಳೆ ನಾವು ಅತ್ಯಧಿಕವಾದ ತಪ್ಪನ್ನು ಮಾಡಿದ್ದರೂ ನಮ್ಮನ್ನು ಹಿಂಸಿಸಬೇಡ.

## English Translation.

Slay us not for one sin, not for two, not for three ; O hero, slay us not for many.

|| ಸಂಹಿತಾಪಾಠಃ ||

ಬಿಭಯಾ ಹಿ ತ್ವಾವತ ಉಗ್ರಾದಭಿಪ್ರಭಂಗಿಣಃ ।
ದಸ್ಮಾದಹಮೃತೀಷಹಃ || ೩೫ ||

|| ಪದಪಾಠಃ ||

**ಬಿಭಯ** । ಹಿ । **ತ್ವಾऽವತಃ** । **ಉಗ್ರಾತ್** । **ಅಭಿऽಪ್ರಭಂಗಿನಃ** ।
**ದಸ್ಮಾತ್** । **ಅಹಂ** । **ಋತಿऽಸಹಃ** || ೩೫ ||

|| ಸಾಯಣಭಾಷ್ಯಂ ||

**ಹೇ ಇಂದ್ರ ತ್ವಾವತಸ್ತ್ವತ್ಸದೃಶಾದುಗ್ರಾದುದ್ಗೂರ್ಣಾದಭಿಪ್ರಭಂಗಿಣಃ ಶತ್ರೂಣಾಮಭಿಪ್ರಹರ್ತುರ್ದಸ್ಮಾತ್ಪಾಪಾನಾಮುಪಕ್ಷಪಯಿತುರ್ಋತೀಷಹಃ ಶತ್ರುಕೃತಾಂ ಹಿಂಸಾಂ ಸಹತೋऽಹಂ ಬಿಭಯ ಹಿ ||**

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಉಗ್ರಾತ್**—ಅತ್ಯಧಿಕವಾದ ಬಲವುಳ್ಳವನೂ । **ಅಭಿಪ್ರಭಂಗಿಣಃ**—ಶತ್ರುಗಳ ಸದೆಬಡಿಯುವವನೂ । **ದಸ್ಮಾತ್**—ಪಾಪನಾಶಕನೂ । **ಋತೀಷಹಃ**—ಶತ್ರುಗಳ ಹಿಂಸೆಯನ್ನು ತಡೆಯ ಬಲ್ಲವನೂ ಆದ । **ತ್ವಾವತಃ**—ನಿನ್ನಂತಹ ಮಹಾತ್ಮನಿಗೆ । **ಅಹಂ**—ನಾನು । **ಬಿಭಯ ಹಿ**—ಖಂಡಿತ ಬೆದರುತ್ತೇನೆ.

|| ಭಾವಾರ್ಥ ||

ಎಲೈ ಇಂದ್ರನೇ, ಅತ್ಯಧಿಕವಾದ ಬಲವುಳ್ಳವನೂ, ಶತ್ರುಗಳ ಸದೆಬಡಿಯುವವನೂ, ಪಾಪನಾಶಕನೂ ಶತ್ರುಗಳ ಹಿಂಸೆಯನ್ನು ತಡೆಯಬಲ್ಲವನೂ ಆದ ನಿನ್ನಂತಹ ಮಹಾತ್ಮನಿಗೆ ನಾನು ಖಂಡಿತ ಬೆದರುತ್ತೇನೆ.

## English Translations.

I am afraid of one like you, terrible, the smiter of enemies, the destroyer, who endures hostile attacks.

|| ಸಂಹಿತಾಪಾಠಃ ||

ಮಾ ಸಖ್ಯುಃ ಶೂನಮಾ ವಿದೇ ಮಾ ಪುತ್ರಸ್ಯ ಪ್ರಭೂವಸೋ ।
ಆವೃತ್ವದ್ಭೂತು ತೇ ಮನಃ || ೩೬ ||

|| ಪದಪಾಠಃ ||

ಮಾ | ಸಖ್ಯುಃ | ಶೂನಂ | ಆ | ವಿದೇ | ಮಾ | ಪುತ್ರಸ್ಯ | ಪ್ರಭುವಸೋ ಇತಿ ಪ್ರಭುsವಸೋ |

ಆsವೃತ್ವತ್ | ಭೂತು | ತೇ | ಮನಃ || ೩೬ ||

|| ಸಾಯಣಭಾಷ್ಯಂ ||

ಹೇ ಪ್ರಭೂವಸೋ ಪ್ರಭೂತಧನೇಂದ್ರ ತೇ ತವ ಸಖ್ಯುಃ ಶೂನಂ ವೃದ್ಧಂ ಮಾ ವಿದೇ | ಮಾವೇದಯೋಮಿ | ಪುತ್ರಸ್ಯಾಪಿ ಶೂನಂ ಮಾ ವಿದೇ | ತವ ಮನೋsಸ್ಮಾಸ್ವಾವೃತ್ವೈದಾವರ್ತನವದ್ಭೂತು | ಭವತು | ಪುನಃಪುನಃ ಸುಖಂ ಕರೋತ್ವಿತ್ಯರ್ಥಃ ||

|| ಪ್ರತಿಪದಾರ್ಥ ||

**ಪ್ರಭೂವಸೋ**—ಅತ್ಯಧಿಕವಾದ ಧನವುಳ್ಳ ಎಲೈ ಇಂದ್ರನೇ | **ತೇ**—ನಿನ್ನ | **ಸಖ್ಯುಃ**—ಮಿತ್ರನ | **ಶೂನಂ**—ಆಪತ್ತನ್ನು | **ಮಾ ಆ ವಿದೇ**—ನಾನು ಅರಿಯೆನು | **ಪುತ್ರಸ್ಯ**—ಪುತ್ರನ ಆಪತ್ತನ್ನೂ | **ಮಾ**—ನಾನು ಅರಿಯೆನು | **ಮನಃ**—ನಿನ್ನ ಅನುಗ್ರಹಾತ್ಮಕವಾದ ಮನಸ್ಸು | **ಆವೃತ್ವತ್**—ನಮ್ಮ ಕಡೆ ತಿರುಗಿದುದಾಗಿ | **ಭೂತು**—ಆಗಲಿ.

|| ಭಾವಾರ್ಥ ||

ಅತ್ಯಧಿಕವಾದ ಧನವುಳ್ಳ ಎಲೈ ಇಂದ್ರನೇ, ನಿನ್ನ ಮಿತ್ರನಿಗೆ ಆಪತ್ತೆಂಬುದನ್ನೇ ನಾನು ಅರಿಯೆನು. ಅವನ ಪುತ್ರನ ಆಪತ್ತನ್ನೂ ನಾನು ಅರಿಯೆನು. ನಿನ್ನ ಅನುಗ್ರಹಾತ್ಮಕವಾದ ಮನಸ್ಸು ನಮ್ಮ ಕಡೆ ತಿರುಗಿದುದಾಗಿ ಆಗಲಿ.

## English Translation.

Wealthy (Indra), may I never have to tell you of the destitution of my friend or my son; may your mind be favourable towards me.

|| ಸಂಹಿತಾಪಾಠಃ ||

ಕೋ ನು ಮರ್ಯಾ ಅಮಿಥಿತಃ ಸಖಾ ಸಖಾಯಮಬ್ರವೀತ್ |

ಜಹಾ ಕೋ ಅಸ್ಮದೀಷತೇ || ೩೭ ||

| ಪದಪಾಠಃ |

ಕಃ | ನು | ಮರ್ಯಾಃ | ಅಮಿಥಿತಃ | ಸಖಾ | ಸಖಾಯಂ | ಅಬ್ರವೀತ್ |

ಜಹಾ | ಕಃ | ಅಸ್ಮತ್ | ಈಷತೇ || ೩೭ ||

॥ ಸಾಯಣಭಾಷ್ಯಂ ॥

**ಕೋ ನು ಕಃ ಖಲು ಹೇ ಮರ್ಯಾ ಮನುಷ್ಯಾಃ** ಅಮಿಥಿತಃ । **ಮೇಥತಿರಾಕ್ರೋಶಕರ್ಮಾ । ಅನಾಕ್ರುಷ್ಟ** ಇಂದ್ರಾದನ್ಯಃ **ಸಖಾ ಸಖಾಯಂ ಪ್ರತಿ ಜಹಾ** ಆಹಂ **ಕಂ ಜಘಾನ ಕಃ ಕೋ ವಾಸ್ಮದಸ್ಮತ್ತೋ ಭೀತ ಈಷತೇ ಪಲಾಯತ ಇತ್ಯಬ್ರವೀತ್** । ವದತಿ । ಇಂದ್ರ ಏವೈತಾದೃಶಸ್ಯ ವಚನಸ್ಯ ವಕ್ತೇತ್ಯಭಿಪ್ರಾಯಃ । ತಥಾ ಚ ಯಾಸ್ಕಃ । ಮೇಥತಿರಾಕ್ರೋಶಕರ್ಮಾ । ಅಪಾಪಕಂ ಜಘಾನ ಕಮಹಂ ಜಾತು **ಕೋಽಸ್ಮದ್ಭೀತಃ ಪಲಾಯತೇ** । ನಿ. ೪-೨ । ಇತಿ । ಮಾ ನ ಏಕಸ್ಮಿನ್ನಾಗಸೀತ್ಯಾದಿಕಯಾ ಋತ್ವಾ ನೂನಮೃಷಿಮಿಂದ್ರ ಆಜಹಾರೇತ್ಯಕ್ರಷಿರ್ವಿಸ್ಮಯತ ಇತಿ ॥

॥ ಪ್ರತಿಪದಾರ್ಥ ॥

**ಮರ್ಯಾಃ**—ಎಲೈ ಮಾನವರೇ । **ಅಮಿಥಿತಃ**—ಕ್ರೋಧವಶನಾಗದ । **ಕೋ ನು ಸಖಾ**—ಯಾವ ಮಿತ್ರನು ತಾನೇ । **ಸಖಾಯಂ**—ತನ್ನ ಮಿತ್ರನನ್ನು । **ಜಹಾ**—ಕೊಂದಿದ್ದಾನೆ । **ಕಃ**—ಯಾರು ತಾನೇ । **ಅಸ್ಮತ್**—ನನ್ನಿಂದ ಭೀತನಾಗಿ । **ಈಷತೇ**—ಓಡಿಹೋಗಿದ್ದಾನೆ (ಎಂಬುದಾಗಿ) । **ಅಬ್ರವೀತ್**—ಇಂದ್ರನು ಹೇಳಿದನು.

॥ ಭಾವಾರ್ಥ ॥

"ಎಲೈ ಮಾನವರೇ, ಕ್ರೋಧವಶನಾಗದ ಯಾವ ಮಿತ್ರನು ತಾನೇ ತನ್ನ ಮಿತ್ರನನ್ನು ಕೊಂದಿದ್ದಾನೆ? ಯಾರುತಾನೇ ನನ್ನಿಂದ ಭೀತನಾಗಿ ಓಡಿಹೋಗಿದ್ದಾನೆ?" ಎಂಬುದಾಗಿ ಇಂದ್ರನು ಪ್ರಶ್ನಿಸಿದ್ದಾನೆ. ಆವನಿಂದ ಅವನ ಮಿತ್ರರಿಗಾರಿಗೂ ಭಯವಿಲ್ಲವೆಂದು ತಾತ್ಪರ್ಯವು.

## English Translation.

"Who, O mortals," said (Indra), "unprovoked, has ever, as a friend, slain his friend? Who flees from me?"

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿದಾರೆ—

**ಮರ್ಯಾ ಇತಿ ಮನುಷ್ಯನಾಮ । ಮರ್ಯಾದಾಭಿಧಾನಂ ವಾ ಸ್ಯಾತ್ । ಮರ್ಯಾದಾ ಮರ್ಯೈರ್ಮ್ರಾದೀಯತೇ । ಮರ್ಯಾದಾಮರ್ಯಾದಿನೋರ್ವಿಭಾಗಃ ॥ ಮೇಥತಿರಾಕ್ರೋಶಕರ್ಮಾ । ಅಪಾಪಕಂ ಜಘಾನ ಕಮಹಂ ಜಾತು । ಕೋಽಸ್ಮದ್ಭೀತಃ ಪಲಾಯತೇ ॥**

(ನಿ. ೪-೨)

**ಮರ್ಯಾಃ** ಎಂದರೆ ಮನುಷ್ಯರು. ಮರ್ಯಾ ಎಂಬ ಶಬ್ದಕ್ಕೆ ಮೇರೆ, ಗಡಿ ಎಂದೂ ಅರ್ಥವಾಗುವುದು. ಒಂದು ಪ್ರದೇಶಕ್ಕೂ ಇನ್ನೊಂದು ಪ್ರದೇಶಕ್ಕೂ ಇರುವ ಗೆರೆಯು. ಎರಡು ಬೇರೆ ಬೇರೆ ಭಾಗಗಳನ್ನು ಪ್ರತ್ಯೇಕಿಸಿ ಬೇರೆ ಬೇರೆಯಾಗಿ ವಿಭಾಗಿಸುವ ಗೆರೆಗೆ ಮರ್ಯಾ (Boundary) ಎಂದು ಹೆಸರು. ಮೇಥತಿ ಧಾತುವಿಗೆ ಕೋಪಮಾಡುವುದು

ಎಂಬರ್ಥವಿರುವುದು. ಪ್ರಸ್ತುತ ವಾಕ್ಯದಲ್ಲಿ—ಇಂದ್ರನು ಪ್ರಶ್ನಿಸುತ್ತಾನೆ, ಪಾಪಮಾಡದಿರುವ ಯಾವ ಪುರುಷನನ್ನು ತಾನೇ ನಾನು ಯಾವ ಕಾಲದಲ್ಲಾಗಲಿ ಕೊಂದಿರುವೆನು? ಯಾವ ಮನುಷ್ಯನುತಾನೇ ನನ್ನನ್ನು ಕಂಡು ಭಯದಿಂದ ಓಡಿಹೋಗುವನು? ಎಂದು ಇಂದ್ರನ ವಾಕ್ಯದ ಅಭಿಪ್ರಾಯವು. ಎಂದರೆ ಇಂದ್ರನು ಪಾಪಮಾಡದಿರುವ ಯಾವ ಮನುಷ್ಯನನ್ನೂ ಕೊಲ್ಲುವುದಿಲ್ಲ. ಇಂದ್ರನ ಕೋಪವು ದುಷ್ಟರ ಮತ್ತು ಪಾಪಮಾಡುವವರ ವಿಷಯದಲ್ಲಿ ಮಾತ್ರ ಪ್ರವರ್ತಿಸುತ್ತದೆ. ಆದ್ದರಿಂದ ಇಂದ್ರನನ್ನು ಕಂಡು ಯಾರುತಾನೇ ಭಯದಿಂದ ಓಡಿಹೋಗುವರು? ಯಾರೂ ಓಡಿಹೋಗುವುದಿಲ್ಲ ಪಾಪಿಷ್ಠರಲ್ಲದವರು ಇಂದ್ರನಿಗೆ ಅಥವಾ ಇಂದ್ರನ ಕೋಪಕ್ಕೆ ಭಯಪಡಬೇಕಾದ ಅವಶ್ಯಕತೆ ಇರುವುದಿಲ್ಲ ಎಂದು ಮುಖ್ಯಾಭಿಪ್ರಾಯವು.

॥ ಸಂಹಿತಾಪಾಠಃ ॥

ಏವಾರೇ ವೃಷಭಾ ಸುತೇಽಸಿನ್ವನ್ಭೂರ್ಯಾವಯಃ ।
ಶ್ವಘ್ನೀವ ನಿವತಾ ಚರನ್ ॥ ೩೮ ॥

॥ ಪದಪಾಠಃ ॥

ಏವಾರೇ । ವೃಷಭ । ಸುತೇ । ಅಸಿನ್ವನ್ । ಭೂರಿ । ಆವಯಃ ।
ಶ್ವಘ್ನೀಽಇವ । ನಿऽವತಾ । ಚರನ್ ॥ ೩೮ ॥

॥ ಸಾಯಣಭಾಷ್ಯಂ ॥

**ಹೇ ವೃಷಭ ಕಾಮಾನಾಂ ವರ್ಷಕೇಂದ್ರ ಏವಾರೇ । ಏವಾರೋ ನಾಮ ಕಶ್ಚಿತ್ । ತಸ್ಮಿನ್ ಸುತೇಽಭಿಷುತೇ ಸೋಮೇ ಸತಿ ಭೂರಿ ಬಹೂನಿ ಧನಾನ್ಯಸಿನ್ವನ್ನ ಬಧ್ನಞ್ಛ್ವಘ್ನೀ । ಶ್ವಘ್ನೀ ಕಿತವಃ । ತಥಾ ಚ ಯಾಸ್ಕಃ । ಶ್ವಘ್ನೀ ಕಿತವೋ ಭವತಿ ಸ್ವಂ ಹಂತಿ.... । ನಿ. ೫-೨೨.... ॥**

॥ ಪ್ರತಿಪದಾರ್ಥ ॥

**ವೃಷಭ**—ಕಾಮವರ್ಷಕನಾದ ಎಲೈ ಇಂದ್ರನೇ । ಏವಾರೇ—ಏವಾರಋಷಿಯು । **ಸುತೇ**—ಸೋಮವನ್ನು ಹಿಂಡಿದಾಗ । **ಭೂರಿ**—ಅತ್ಯಧಿಕವಾದ ಸೋಮವು । **ಶ್ವಘ್ನೀವ**—ಬೇಟೆಗಾರನಂತೆ । **ಅಸಿನ್ವನ್**—ನಿನ್ನನ್ನೇ ಸೇರಿತು । **ಆವಯಃ**—ಅಲ್ಲಿದ್ದ ಉಳಿದ ದೇವತೆಗಳೆಲ್ಲರೂ । **ನಿವತಾ**—ಅಧೋಮುಖರಾಗಿ । **ಚರನ್**—ಹೊರಕ್ಕೆ ಹೊರಟುಹೋದರು.

॥ ಭಾವಾರ್ಥ ॥

ಕಾಮವರ್ಷಕನಾದ ಎಲೈ ಇಂದ್ರನೇ, ಏವಾರಋಷಿಯು ಸೋಮವನ್ನು ಹಿಂಡಿದಾಗ, ಅತ್ಯಧಿಕವಾದ ಸೋಮವು ಬೇಟೆಗಾರನಂತೆ ನಿನ್ನನ್ನೇ ಸೇರಿತು. ಅಲ್ಲಿದ್ದ ಉಳಿದ ದೇವತೆಗಳೆಲ್ಲರೂ ಅಧೋಮುಖರಾಗಿ ಹೊರಕ್ಕೆ ಹೊರಟುಹೋದರು.

## English Translation.

Showerer (of benefits), when the ready Soma was effused, you devoured much, without stint, rushing down like a gamester.

|| ಸಂಹಿತಾಪಾಠಃ ||

ಆ ತೇ ಏತಾ ವಚೋಯುಜಾ ಹರೀ ಗೃಭ್ಣೇ ಸುಮದ್ರಥಾ ।
ಯದೀಂ ಬ್ರಹ್ಮಭ್ಯ ಇದ್ದದಃ || ೩೯ ||

|| ಪದಪಾಠಃ ||

ಆ । ತೇ । ಏತಾ । ವಚಃಽಯುಜಾ । ಹರೀ ಇತಿ । ಗೃಭ್ಣೇ । ಸುಮತ್ಽರಥಾ ।
ಯತ್ । ಈಂ । ಬ್ರಹ್ಮಽಭ್ಯಃ । ಇತ್ । ದದಃ || ೩೯ ||

|| ಸಾಯಣಭಾಷ್ಯಂ ||

ತೇ ತವ ಸುಮದ್ರಥಾ ಕಲ್ಯಾಣರಥೌ ವಚೋಯುಜಾ ಮಂತ್ರೇಣ ಯುಜ್ಯಮಾನಾವೇತೌ ಹರೀ ಅಶ್ವಾವಾ ಗೃಭ್ಣೇ । ಅಸ್ಮದಭಿಮುಖಂ ಯಾತುಂ ಹಸ್ತಾಭ್ಯಾಮಾಕರ್ಷಾಮೀತ್ಯರ್ಥಃ । ಯದ್ಯಸ್ಮಾತ್ತ್ವಂ ಬ್ರಹ್ಮಭ್ಯ ಇದ್ಬ್ರಾಹ್ಮಣೇಭ್ಯ ಏವೇಮಿದಂ ಧನಂ ದದಃ ದದಾಸಿ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಯತ್**—ಯಾವ ನಿಮಿತ್ತವಾಗಿ । **ಬ್ರಹ್ಮಭ್ಯಃ ಇತ್**—ಬ್ರಾಹ್ಮಣರಿಗೆ ಮಾತ್ರ । **ಈಂ**—ಧನವನ್ನು । **ದದಃ**—ನೀನು ಕೊಡುವೆಯೋ ಆದುದರಿಂದಲೇ । **ತೇ**—ನಿನ್ನ । **ಸುಮದ್ರಥಾ**—ಕಲ್ಯಾಣಾತ್ಮಕವಾದ ರಥವುಳ್ಳವೂ । **ವಚೋಯುಜಾ**—ಮಂತ್ರಗಳಿಂದ ಸೇರಿಸಲ್ಪಡುವುವೂ । **ಏತಾ**—ಪ್ರಸಿದ್ಧವಾದವೂ ಆದ । **ಹರೀ**—ಅಶ್ವಗಳನ್ನು । **ಆ ಗೃಭ್ಣೇ**—ನಾನು ಈ ಕಡೆ ಎಳೆಯುತ್ತೇನೆ.

|| ಭಾವಾರ್ಥ ||

ಎಲೈ ಇಂದ್ರನೇ, ಯಾವ ನಿಮಿತ್ತವಾಗಿ ಬ್ರಹ್ಮವಿತ್ತುಗಳಿಗೆ ಮಾತ್ರ ನೀನು ಧನವನ್ನು ಕೊಡುವೆಯೋ ಆದುದರಿಂದಲೇ ನಿನ್ನ ಕಲ್ಯಾಣಾತ್ಮಕವಾದ ರಥವುಳ್ಳವೂ, ಮಂತ್ರಗಳಿಂದ ಸೇರಿಸಲ್ಪಡುವುವೂ, ಪ್ರಸಿದ್ಧವಾದವೂ ಆದ ಅಶ್ವಗಳನ್ನು ನಾನು ಈ ಕಡೆ ಎಳೆಯುತ್ತೇನೆ.

## English Translation

I draw hither your two steeds, harnessed to a beautiful chariot and yoked by hymns, since you give wealth to the Brahmans.

|| ಸಂಹಿತಾಪಾಠಃ ||

ಭಿಂಧಿ ವಿಶ್ವಾ ಅಪ ದ್ವಿಷಃ ಪರಿ ಬಾಧೋ ಜಹೀ ಮೃಧಃ ।
ವಸು ಸ್ಪಾರ್ಹಂ ತದಾ ಭರ || ೪೦ ||

|| ಪದಪಾಠಃ ||

ಭಿಂಧಿ । ವಿಶ್ವಾಃ । ಅಪ । ದ್ವಿಷಃ । ಪರಿ । ಬಾಧಃ । ಜಹಿ । ಮೃಧಃ ।

ವಸು । ಸ್ಪಾರ್ಹಂ । ತತ್ । ಆ । ಭರ || ೪೦ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ವಿಶ್ವಾಃ ಸರ್ವಾ ದ್ವಿಷೋ ದ್ವೇಷ್ಟ್ರೀಃ ಶತ್ರುಸೇನಾ ಅಪ ಭಿಂಧಿ । ವಿದಾರಯ । ಬಾಧೋ ಹಿಂಸಿತ್ರೀರ್ಮೃಧಃ ಸಂಗ್ರಾಮಾನ್ । ಸ್ಪೃಧೋ ಮೃಧ ಇತಿ ಸಂಗ್ರಾಮನಾಮಸು ಪಾಠಾತ್ । ಪರಿ ಜಹಿ । ಹಿಂಧಿ । ಅತೆಸ್ತಾಸಾಂ ಸ್ಪಾರ್ಹಂ ಸ್ಪೃಹಣೀಯಂ ತತ್ಪ್ರಸಿದ್ಧಂ ವಸ್ವಾ ಭರ । ಅಸ್ಮಭ್ಯಮಾಹರ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ವಿಶ್ವಾಃ**—ಸಮಸ್ತವಾದ । **ದ್ವಿಷಃ**—ಶತ್ರುಸೇನೆಗಳನ್ನೂ । **ಅಪ ಭಿಂಧಿ**—ನಾಶ ಪಡಿಸು । **ಬಾಧಃ**—ಹಿಂಸಕವಾದ । **ಮೃಧಃ**—ಅವರ ಸಂಗ್ರಾಮಾದಿಕೃತ್ಯಗಳನ್ನು । **ಪರಿ ಜಹಿ**—ಪೂರ್ಣ ವಾಗಿ ನಾಶಪಡಿಸು । **ಸ್ಪಾರ್ಹಂ**—ಆಕರ್ಷಕವಾದುದೂ । **ತತ್**—ಪ್ರಸಿದ್ಧವಾದುದೂ ಆದ । **ವಸು**—ಧನವನ್ನು । **ಆ ಭರ**—ತಂದೊದಗಿಸು.

|| ಭಾವಾರ್ಥ ||

ಎಲೈ ಇಂದ್ರನೇ, ಸಮಸ್ತವಾದ ಶತ್ರುಸೇನೆಗಳನ್ನೂ ನಾಶಪಡಿಸು. ಹಿಂಸಕವಾದ ಅವರ ಸಂಗ್ರಾಮಾದಿ ಕೃತ್ಯಗಳನ್ನು ಪೂರ್ಣವಾಗಿ ನಾಶಪಡಿಸು. ಆಕರ್ಷಕವಾದುದೂ, ಪ್ರಸಿದ್ಧವಾದುದೂ ಆದ ಧನವನ್ನು ನಮಗೆ ಒದಗಿಸು.

English Translation.

Cleave asunder all the hostile hosts, frustrate their destructive attacks, and bestow on us their desirable wealth.

|| ಸಂಹಿತಾಪಾಠಃ ||

ಯದ್ವೀಳಾವಿಂದ್ರ ಯತ್ಸ್ಥಿರೇ ಯತ್ಪರ್ಶಾನೇ ಪರಾಭೃತಂ ।
ವಸು ಸ್ಪಾರ್ಹಂ ತದಾ ಭರ || ೪೧ ||

|| ಪದಪಾಠಃ ||

ಯತ್ । ವೀಳೌ । ಇಂದ್ರ । ಯತ್ । ಸ್ಥಿರೇ । ಪರ್ಶಾನೇ । ಪರಾಽಭೃತಂ ।

ವಸು । ಸ್ಪಾರ್ಹಂ । ತತ್ । ಆ । ಭರ || ೪೧ ||

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಯಾ ಚ ವೀಳೌ ದೃಢೇ ಪರೈಃ ಕಂಪಯಿತುಮಶಕ್ಯೇ ಯದ್ಧನಂ ಪರಾಭೃತಂ ವಿನ್ಯಸ್ತಂ ಯಚ್ಚ ಸ್ಥಿರ ಸ್ವಯಮಚಲೇ ಪರಾಭೃತಂ ಯಚ್ಚಾಪಿ ಪರ್ಶಾನೇ ವಿಮರ್ಶನಕ್ಷಮೇ ಪರಾಭೃತಂ ತತ್ಸ್ಪಾರ್ಹಂ ವಸ್ವಾ ಭರ ॥

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ। **ವೀಳೌ**—ದೃಢವಾದ ಗುಪ್ತಸ್ಥಾನದಲ್ಲಿ। **ಯತ್**—ಯಾವ ಧನವು। **ಪರಾಭೃತಂ**—ವಿನ್ಯಸ್ತವಾಗಿದೆಯೋ। **ಯತ್**—ಯಾವ ಧನವು। **ಸ್ಥಿರೇ**—ಅಚಲವಾದ ಪ್ರದೇಶದಲ್ಲಿ ರಕ್ಷಿತವಾಗಿರುವುದೋ। **ಯತ್**—ಯಾವ ಧನವು। **ಪರ್ಶಾನೇ**—ಪ್ರತಿಭಟನೆಗೆ ಸಿಲುಕದ ಸ್ಥಾನದಲ್ಲಿ ಇರುವುದೋ। **ತತ್**—ಅಂತಹ। **ಸ್ಪಾರ್ಹಂ**—ಆಕರ್ಷಕವಾದ। **ವಸು**—ಧನವನ್ನು। **ಆ ಭರ**—ನಮಗೆ ಒದಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ದೃಢವಾದ ಗುಪ್ತಸ್ಥಾನದಲ್ಲಿ ಯಾವ ಧನವು ನಿಕ್ಷಿಪ್ತವಾಗಿದೆಯೋ, ಯಾವ ಧನವು ಅಚಲವಾದ ಪ್ರದೇಶದಲ್ಲಿ ರಕ್ಷಿತವಾಗಿರುವುದೋ, ಯಾವ ಧನವು ಪ್ರತಿಭಟನೆಗೆ ಸಿಲುಕದ ಸ್ಥಾನದಲ್ಲಿ ಇರುವುದೋ ಅಂತಹ ಆಕರ್ಷಕವಾದ ಧನವನ್ನು ನಮಗೆ ಒದಗಿಸು.

English Translation.

Bestow on us, Indra, that desirable wealth, which is deposited in strongholds, in fastnesses, and in places which stand an attack.

॥ ಸಂಹಿತಾಪಾಠಃ ॥

ಯಸ್ಯ ತೇ ವಿಶ್ವಮಾನುಷೋ ಭೂರೇರ್ದತ್ತಸ್ಯ ವೇದತಿ ।
ವಸು ಸ್ಪಾರ್ಹಂ ತದಾ ಭರ ॥ ೪೨ ॥

॥ ಪದಪಾಠಃ ॥

**ಯಸ್ಯ । ತೇ । ವಿಶ್ವऽಮಾನುಷಃ । ಭೂರೇಃ । ದತ್ತಸ್ಯ । ವೇದತಿ ।**
**ವಸು । ಸ್ಪಾರ್ಹಂ । ತತ್ । ಆ । ಭರ ॥ ೪೨ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತ್ವಯಾ ॥ ವಿಭಕ್ತಿವ್ಯತ್ಯಯಃ ॥ ದತ್ತಸ್ಯ ದತ್ತಂ ಭೂರೇರ್ಬಹು ಯಸ್ಯ ಯದ್ಧನಂ ॥ ಕರ್ಮಣಿ ಷಷ್ಠೀ ॥ ವಿಶ್ವಮಾನುಷಃ ಸರ್ವೋ ಮನುಷ್ಯೋ ವೇದತಿ ಜಾನಾತಿ ತತ್ಸ್ಪಾರ್ಹಂ ಸ್ಪೃಹಣೀಯಂ ವಸ್ವಾ ಭರ ॥

॥ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತೇ**—ನಿನ್ನಿಂದ । **ದತ್ತಸ್ಯ**—ದಾನವಮಾಡಲ್ಪಟ್ಟ । **ಭೂರೇಃ**—**ಅತ್ಯಧಿಕವಾದ** । **ಯಸ್ಯ**—ಯಾವ ಧನವನ್ನು। **ವಿಶ್ವಮಾನುಷಃ**—ಸಕಲ ಮಾನವರೂ । **ವೇದತಿ**—ಅರಿಯುವರೋ । **ತತ್**—ಅಂತಹ । **ಸ್ಪಾರ್ಹಂ**—ಆಕರ್ಷಕವಾದ । **ವಸು**—ಧನವನ್ನು । **ಆ ಭರ**—ನಮಗೆ ಒದಗಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನಿಂದ ದಾನವಮಾಡಲ್ಪಟ್ಟ ಅತ್ಯಧಿಕವಾದ ಯಾವ ಧನವನ್ನು ಸಕಲ ಮಾನವರೂ ಅರಿಯುವರೋ ಅಂತಹ ಆಕರ್ಷಕವಾದ ಧನವನ್ನು ನಮಗೆ ಒದಗಿಸು.

English Translation.

Bestow on us, Indra, that desirable wealth which all men recognize as given abundantly by you.

---

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಷಷ್ಠಾಷ್ಟಕೇ ತೃತೀಯೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯಲ್ಲಿ ಆರನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥



॥ ಶ್ರೀಃ ॥

॥ ಶ್ರೀ ಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದಸಂಹಿತಾ

(ಕರ್ನಾಟಕಭಾಷಾರ್ಥಾನುವಾದವಿವರಣೆ ಸಹಿತವಾಗಿ)

## ॥ ಷಷ್ಠಾಷ್ಟಕೇ ಚತುರ್ಥೋಽಧ್ಯಾಯಃ ॥

ಆರನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು

## ಎಂಟನೆಯ ಮಂಡಲದಲ್ಲಿ ನಲವತ್ತಾರನೆಯ ಸೂಕ್ತವು.

### ಪೀಠಿಕೆ.

॥ ಸಾಯಣಭಾಷ್ಯಂ ॥

ತತ್ರ ತ್ವಾವತ ಇತಿ ತ್ರಯಸ್ತ್ರಿಂಶದೃಚಂ ಚತುರ್ಥಂ ಸೂಕ್ತಮಶ್ವಪುತ್ರಸ್ಯ ವಶಾಖ್ಯಸ್ಯಾರ್ಷಂ । ಪ್ರಾಗ್ಗತ್ವಪ್ರಪರಿಭಾಷಯಾದ್ಯಾಶ್ಚತಸ್ರೋ ಗಾಯತ್ರ್ಯಃ । ತತ್ರಾದ್ಯಾ ಪಾದನಿಚೃತ್ ತ್ರಯಃ ಸಪ್ತಕಾಃ ಪಾದನಿಚೃತ್ । ಅನು. ೪-೪ । ಇತ್ಯುಕ್ತಲಕ್ಷಣೋಪೇತತ್ವಾತ್ । ದಧಾನೋ ಗೋಮದಶ್ವವದಿತ್ಯೇಷಾ ಪಂಚಮೀ ಕಕುಬಷ್ಟಕದ್ವಾದಶಾಷ್ಟಕೈಃ ಪಾದೈರುಪೇತತ್ವಾತ್ । ಮಧ್ಯಮಶ್ಚೇತ್ಕಕುಪ್ । ಅನು. ೫-೩ । ಇತಿ ಹಿ ತಲ್ಲಕ್ಷಣಂ । ತಮಿಂದ್ರಮಿತಿ ಷಷ್ಠೀ ಗಾಯತ್ರೀ । ತಸ್ಮಿನ್ ಹಿ ಸಂತೀತಿ ಸಪ್ತಮೀ ಬೃಹತೀ । ಯಸ್ತೇ ಮದ ಇತ್ಯೈಷ್ಟಮ್ಯನುಷ್ಟುಪ್ । ಯೋ ದುಷ್ಟರ ಇತಿ ನವಮೀ ಸತೋಬೃಹತೀ । ಅಯುಜಾ ಜಾಗತಾ ಸತೋಬೃಹತೀ । ಅನು. ೮-೪ । ಇತಿ ಹ್ಯುಕ್ತಂ । ಗವ್ಯೋ ಷು ಣ ಇತಿ ದಶಮೀ ಗಾಯತ್ರೀ । ನಹಿ ತೇ ಶೂರೇತ್ಯೇಕಾದಶೀ ಬೃಹತೀ । ಯ ಋಷ್ವ ಇತಿ ದ್ವಾದಶೀ ವಿಪರೀತಾ ಸತೋಬೃಹತೀ ಪ್ರಥಮತೃತೀಯಯೋರಷ್ಟಾಕ್ಷರಾ ದ್ವಿತೀಯಚತುರ್ಥಯೋರ್ದ್ವಾದಶಾಕ್ಷರಾ ಚ । ಯುಜಾ ಚೇದ್ವಿಪ-

**ರೀತಾ । ಅನು. ೮-೫ । ಇತ್ಯುಕ್ತತ್ವಾತ್ । ಸ ನೋ ವಾಜೇಷ್ವಿತಿ ತ್ರಯೋದಶೀ ಚತುರ್ವಿಂಶತ್ಯಕ್ಷರಾ ದ್ವಿಪದಾ । ಅಭಿ ವೋ ವೀರಮಿತಿ ಚತುರ್ದಶೀ ಪಿಪೀಲಿಕಮಧ್ಯಾ ಬೃಹತೀ । ತ್ರಯೋದಶಿನೋ-ऽर्धर्च्येऽಷ್ಟಕಃ ಪಿಪೀಲಿಕಮಧ್ಯಾ । ಅನು. ೭-೭ । ಇತ್ಯುಕ್ತತ್ವಾತ್ । ಪದೀ ರೇಕ್ಣ ಇತಿ ಪಂಚದಶೀ ಕಕುಮ್ನ್ಯಂಕುಶಿರಾ ತ್ರೈಷ್ಟುಭಜಾಗತಚತುಷ್ಕಾಃ ಕಕುಮ್ನ್ಯಂಕುಶಿರಾ । ಅನು. ೫-೪ । ಇತ್ಯುಕ್ತತ್ವಾತ್ । ವಿಶ್ವೇಷಾಮಿತಿ ಷೋಡಶೀ ವಿರಾಟ್ । ಮಹಃ ಸು ವ ಇತಿ ಸಪ್ತದಶೀ ಜಗತೀ । ಯೋ ಪಾತಯಂತ ಇತ್ಯೈಷ್ವಾದಶ್ಯುಪರಿಷ್ಟಾದ್ಬೃಹತೀ ಚತುರ್ಥಪಾದಸ್ಯ ದ್ವಾದಶಾಕ್ಷರತ್ವಾತ್ । ಪ್ರಭಂಗಮಿತ್ಯೇಕೋನವಿಂಶೀ ಬೃಹತೀ । ಸನಿತಃ ಸುಸನಿತರಿತಿ ವಿಂಶೀ ವಿಷಮಪದಾ ಬೃಹತೀ ನವಕಾಷ್ಟ್ಯೇಕಾದಶ್ಯಷ್ಟಿನೋ ವಿಷಮಪದಾ । ಅನು. ೭-೮ । ಇತ್ಯುಕ್ತತ್ವಾತ್ । ಆ ಸ ಏತು ಪಷ್ಟಿಂ ಸಹಸ್ರೇತ್ಯೇಕವಿಂಶೀದ್ವಾವಿಂಶ್ಯೌ ಪಂಕ್ತೀ । ದಶ ಶ್ಯಾವಾ ಇತಿ ತ್ರಯೋವಿಂಶೀ ಗಾಯತ್ರೀ । ದಾನಾಸ ಇತಿ ಚತುರ್ವಿಂಶೀ ಪಂಕ್ತಿಃ । ಪಂಚವಿಂಶೀಸಪ್ತವಿಂಶ್ಯೌ ಬೃಹತ್ಯೌ । ಷಡ್ವಿಂಶ್ಯಷ್ಟಾವಿಂಶ್ಯೌ ಸತೋಬೃಹತ್ಯೌ । ಏಕೋನತ್ರಿಂಶೀ ಗಾಯತ್ರೀ । ಗಾವೋ ನ ಯೂಥಮಿತಿ ತ್ರಿಂಶೀ ವಿಂಶತ್ಯಕ್ಷರಾ ದ್ವಿಪದಾ ವಿರಾಟ್ । ಏಕತ್ರಿಂಶ್ಯುಷ್ಣಿಕ್ । ದ್ವಾತ್ರಿಂಶೀ ಪಂಕ್ತಿಃ । ತ್ರಯಸ್ತ್ರಿಂಶೀ ಗಾಯತ್ರೀ । ಆ ಸ ಏತ್ವಿತ್ಯಾದಿಭಿಶ್ಚತಸೃಭಿಃ ಕನೀತಪುತ್ರಸ್ಯ ಪೃಥುಶ್ರವಸೋ ದಾನಂ ಸ್ತೂಯತೇ । ಅತಸ್ತದ್ದೇವತಾಕಾಃ । ಆ ನೋ ವಾಯವಿತ್ಯಾದೀನಾಂ ಚತಸೃಣಾಂ ದ್ವಾತ್ರಿಂಶ್ಯಶ್ಚ ವಾಯುರ್ದೇವತಾ । ಶಿಷ್ಟಾ ಅನಾದೇಶಪರಿಭಾಷಯೇಂದ್ರದೇವತಾಕಾಃ ॥ ಏತತ್ಸರ್ವಮನುಕ್ರಮಣ್ಯಾ-ಮುಕ್ತಂ । ತ್ವಾವತಸ್ತ್ರಯಸ್ತ್ರಿಂಶದ್ವಶೋಽಶ್ವ್ಯ ಆ ಸ ಆದಿ ಕಾನೀತಸ್ಯ ಪೃಥುಶ್ರವಸೋ ದಾನಸ್ತುತಿರಾದ್ಯಾ ಪಾದನಿಚೃತ್ ಪಂಚಮ್ಯಾದಿ ಕಕುಬ್ಗಾಯತ್ರೀ ಬೃಹತ್ಯನುಷ್ಟುಪ್ ಸತೋಬೃಹತೀ ಗಾಯತ್ರೀ ವಿಪರೀತೋತ್ತರಃ ಪ್ರಗಾಥೋ ದ್ವಿಪದಾ ಚತುರ್ವಿಂಶಿಕಾ ಬೃಹತೀ ಪಿಪೀಲಿಕಮಧ್ಯಾ ಕಕುಮ್ನ್ಯಂಕುಶಿರಾ ವಿರಾಡ್ಜಗತ್ಯುಪರಿಷ್ಟಾದ್ಬೃಹತೀಬೃಹತ್ಯೌ ವಿಷಮಪದೋತ್ತರೇ ಪಂಕ್ತೀ ಗಾಯತ್ರೀ ಪಂಕ್ತಿಃ ಪ್ರಗಾಥೌ ಚ ವಾಯವ್ಯಾ ಗಾಯತ್ರೀ ದ್ವಿಪದೋಷ್ಣಿಕ್ ಪಂಕ್ತಿರ್ವಾಯವ್ಯಾ ಗಾಯತ್ರೀತಿ ॥ ಮಹಾವ್ರತೇ ನಿಷ್ಕೇವಲ್ಯೇ ಸನಿತಃ ಸುಸನಿತರಿತ್ಯಂತಮೇವ ಸೂಕ್ತಂ । ತಥಾ ಚ ಪಂಚಮಾರಣ್ಯಕೇ ಶೌನಕೇನ ಸೂತ್ರಿತಂ । ತ್ವಾವತಃ ಪೂರೂವಸವಿತಿ ವಶಃ ಸನಿತಃ ಸುಸನಿತರಿತ್ಯೇಕಪದಂತಃ । ಐ. ಆ. ೫-೨-೫ । ಇತಿ ॥**

ಅನುವಾದವು—**ತ್ವಾವತಃ** ಎಂಬ ಈ ಸೂಕ್ತವು ಎಂಟನೆಯ ಮಂಡಲದ ಆರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಮೂವತ್ತಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಅಶ್ವಪುತ್ರನಾದ ವಶನೆಂಬುವನು ಋಷಿಯು; ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳು ಗಾಯತ್ರೀಛಂದಸ್ಕವು. ಆದರೆ ಮೊದಲನೆಯ ಋಕ್ಕು **ಪಾದನಿಚೃತ್** ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಪ್ರತಿಪಾದವಲ್ಲಿಯೂ ಏಳೇಳು ಅಕ್ಷರಗಳಿದ್ದರೆ ಅದು **ಪಾದನಿಚೃತ್** ಎಂಬ ಛಂದಸ್ಸೆನಿಸುವುದು ಎಂದು ಈ ಛಂದಸ್ಸಿನ ಲಕ್ಷಣವು (ಛಂ. ಅನು. ೪-೪); **ದಧಾನೋ ಗೋಮದಶ್ವವತ್** ಎಂಬ ೫ ನೆಯ ಋಕ್ಕು ಕಕುಪ್‌ಛಂದಸ್ಕವು. ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಆ ಪಾದಗಳಲ್ಲಿ ಕ್ರಮವಾಗಿ ಎಂಟು, ಹನ್ನೆರಡು, ಎಂಟು ಅಕ್ಷರಗಳಿದ್ದರೆ ಅದು ಕಕುಪ್‌ಛಂದಸ್ಸೆನಿಸುವುದು. (ಅನು. ೫-೩); **ತಮಿಂದ್ರಂ** ಎಂಬ ಆರನೆಯ ಋಕ್ಕು ಗಾಯತ್ರೀಛಂದಸ್ಕವು **ತಸ್ಮಿನ್ ಹಿ ಸಂತಿ** ಎಂಬ ಏಳನೆಯ ಋಕ್ಕು ಬೃಹತೀಛಂದಸ್ಕವು; **ಯಸ್ತೇ ಮದಃ** ಎಂಬ ಎಂಟನೆಯ ಋಕ್ಕು ಅನುಷ್ಟುಪ್‌ಛಂದಸ್ಕವು;

**ಯಿಂ೯ ದುಷ್ಟರಃ** ಎಂಬ ಒಂಭತ್ತನೆಯ ಋಕ್ಕು ಸತೋಬೃಹತೀಛಂದಸ್ಕವು ಒಂದು ಋಕ್ಕಿನಲ್ಲಿ ಒಂದು ಮತ್ತು ಮೂರನೆಯ ಪಾದಗಳು ಜಗತೀಛಂದಸ್ಕವಾಗಿದ್ದರೆ ಅದು ಸತೋಬೃಹತೀ ಛಂದಸ್ಸೆನಿಸುವುದು. (ಅನು. ೮-೪); **ಗವ್ಯೋ ಷು ಣಃ** ಎಂಬ ಹತ್ತನೆಯ ಋಕ್ಕು ಗಾಯತ್ರೀ ಛಂದಸ್ಕವು; **ನಹಿ ತೇ ಶೂರ** ಎಂಬ ಹನ್ನೊಂದನೆಯ ಋಕ್ಕು ಬೃಹತೀಛಂದಸ್ಕವು; **ಯು ಋಷ್ವಃ** ಎಂಬ ಹನ್ನೆರಡನೆಯ ಋಕ್ಕು ವಿಪರೀತಾ ಸತೋಬೃಹತೀ ಎಂಬ ಛಂದಸ್ಸಿನದು. ಈ ಛಂದಸ್ಸಿನಲ್ಲಿ ಒಂದನೆಯ ಮತ್ತು ಮೂರನೆಯ ಪಾದಗಳಲ್ಲಿ ಎಂಟೆಂಟು ಅಕ್ಷರಗಳೂ ಎರಡನೆಯ ಮತ್ತು ನಾಲ್ಕನೆಯ ಪಾದಗಳಲ್ಲಿ ಹನ್ನೆರಡು ಹನ್ನೆರಡು ಅಕ್ಷರಗಳೂ ಇರುವವು. ಇದು ಈ ಛಂದಸ್ಸಿನ ಲಕ್ಷಣವು (ಅನು. ೮-೫); **ಸ ನೋ ವಾಜೇಷು** ಎಂಬ ಹದಿಮೂರನೆಯ ಋಕ್ಕು ಇಪ್ಪತ್ತನಾಲ್ಕಕ್ಷರದ ದ್ವಿಪದಾ ಎಂಬ ಛಂದಸ್ಸಿನದು; **ಅಭಿ ವೋ ವೀರಂ** ಎಂಬ ಹದಿನಾಲ್ಕನೆಯ ಋಕ್ಕು ಪಿಪೀಲಿಕಮಧ್ಯಮಾ ಬೃಹತೀ ಎಂಬ ಛಂದಸ್ಸಿನದು. ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಮಧ್ಯದ ಪಾದದಲ್ಲಿ ಎಂಟು ಅಕ್ಷರಗಳೂ ಉಳಿದೆರಡು ಪಾದಗಳಲ್ಲಿ ಹದಿಮೂರು ಹದಿಮೂರು ಅಕ್ಷರಗಳೂ ಇದ್ದರೆ ಅದು ಪಿಪೀಲಿಕಮಧ್ಯಾ ಬೃಹತೀ ಎಂಬ ಛಂದಸ್ಸೆನಿಸುವುದು. (ಅನು. ೭-೭); **ಪದೀ ರೇಕ್ಣಃ** ಎಂಬ ಹದಿನೈದನೆಯ ಋಕ್ಕು ಕಕುಮ್ನ್ಯಂಕುಶಿರಾ ಎಂಬ ಛಂದಸ್ಸಿನದು ಒಂದು ಋಕ್ಕಿನಲ್ಲಿ ಮೂರು ಪಾದಗಳಿದ್ದು ಮೊದಲನೆಯ ಪಾದದಲ್ಲಿ ತ್ರಿಷ್ಟುಪ್‌ಛಂದಸ್ಸಿನಂತೆ ಹನ್ನೊಂದು ಅಕ್ಷರಗಳೂ, ಎರಡನೆಯ ಪಾದದಲ್ಲಿ ಜಗತೀಛಂದಸ್ಸಿನಂತೆ ಹನ್ನೆರಡು ಅಕ್ಷರಗಳೂ, ಮೂರನೆಯ ಪಾದದಲ್ಲಿ ನಾಲ್ಕು ಅಕ್ಷರಗಳೂ ಇದ್ದರೆ ಅದು ಕಕುಮ್ನ್ಯಂಕುಶಿರಾ ಎಂಬ ಛಂದಸ್ಸೆನಿಸುವುದು (ಅನು. ೫-೪) **ವಿಶ್ವೇಷಾಂ** ಎಂಬ ಹದಿನಾರನೆಯ ಋಕ್ಕು ವಿರಾಟ್‌ಛಂದಸ್ಕವು; **ಮಹಃ ಸು ವಃ** ಎಂಬ ಹದಿನೇಳನೆಯ ಋಕ್ಕು ಜಗತೀಛಂದಸ್ಕವು; **ಯೋ ಪಾತಯೆಂತೇ** ಎಂಬ ಹದಿನೆಂಟನೆಯ ಋಕ್ಕಿನ ಚತುರ್ಥಪಾದದಲ್ಲಿ ಹನ್ನೆರಡು ಅಕ್ಷರಗಳಿರುವುದರಿಂದ ಅದು ಉಪರಿಷ್ಟಾದ್ಬೃಹತೀ ಎಂಬ ಛಂದಸ್ಸಿನದು; **ಪ್ರ ಭಂಗಂ** ಎಂಬ ಹತ್ತೊಂಭತ್ತನೆಯ ಋಕ್ಕು ಬೃಹತೀಛಂದಸ್ಕವು; **ಸನಿತಃ ಸುಸನಿತಃ** ಎಂಬ ಇಪ್ಪತ್ತನೆಯ ಋಕ್ಕು ವಿಷಮಪದಾ ಬೃಹತೀ ಎಂಬ ಛಂದಸ್ಸಿನದು. ಈ ಋಕ್ಕಿನಲ್ಲಿ ಮೊದಲನೆಯ ಪಾದದಲ್ಲಿ ಒಂಭತ್ತು ಅಕ್ಷರಗಳೂ, ಎರಡನೆಯ ಪಾದದಲ್ಲಿ ಎಂಟು ಅಕ್ಷರಗಳೂ, ಮೂರನೆಯ ಪಾದದಲ್ಲಿ ಹನ್ನೊಂದು ಅಕ್ಷರಗಳೂ, ನಾಲ್ಕನೆಯ ಪಾದದಲ್ಲಿ ಎಂಟು ಅಕ್ಷರಗಳೂ ಇರುವವು ಇದೇ ಈ ಛಂದಸ್ಸಿನ ಲಕ್ಷಣವು (ಅನು. ೭-೮); **ಆ ಸ ಏತು** ಮತ್ತು **ಷಷ್ಟಿಂ ಸಹಸ್ರಾ** ಎಂಬ ಇಪ್ಪತ್ತೊಂದು ಮತ್ತು ಇಪ್ಪತ್ತೆರಡನೆಯ ಋಕ್ಕುಗಳು ಪಂಕ್ತಿಚ್ಛಂದಸ್ಕವು. **ಪಂಚ ಶ್ಯಾವಾಃ** ಎಂಬ ಇಪ್ಪತ್ತಮೂರನೆಯ ಋಕ್ಕು ಗಾಯತ್ರೀಛಂದಸ್ಕವು; **ದಾನಾಸಃ** ಎಂಬ ಇಪ್ಪತ್ತನಾಲ್ಕನೆಯ ಋಕ್ಕು ಪಂಕ್ತಿಚ್ಛಂದಸ್ಕವು; ಇಪ್ಪತ್ತೈದು ಮತ್ತು ಇಪ್ಪತ್ತೇಳನೆಯ ಋಕ್ಕುಗಳು ಬೃಹತೀಛಂದಸ್ಕವು; ಇಪ್ಪತ್ತಾರು ಮತ್ತು ಇಪ್ಪತ್ತೆಂಟನೆಯ ಋಕ್ಕುಗಳು ಸತೋಬೃಹತೀಛಂದಸ್ಕವು; ಇಪ್ಪತ್ತೊಂಭತ್ತನೆಯ ಋಕ್ಕು ಗಾಯತ್ರೀ ಛಂದಸ್ಕವು; **ಗಾವೋ ನ ಯೂಥಂ** ಎಂಬ ಮೂವತ್ತನೆಯ ಋಕ್ಕು ಇಪ್ಪತ್ತಕ್ಷರಗಳ ದ್ವಿಪದಾವಿರಾಟ್‌ಛಂದಸ್ಕವು; ಮೂವತ್ತೊಂದನೆಯ ಋಕ್ಕು ಉಷ್ಣಿಕ್‌ಛಂದಸ್ಕವು; ಮೂವತ್ತೆರಡನೆಯ ಋಕ್ಕು ಪಂಕ್ತಿಚ್ಛಂದಸ್ಕವು; ಮೂವತ್ತ ಮೂರನೆಯ ಋಕ್ಕು ಗಾಯತ್ರೀಛಂದಸ್ಕವು; **ಆ ಸ ಏತು** ಎಂದು ಮೊದಲಾಗುವ ನಾಲ್ಕು ಋಕ್ಕುಗಳಲ್ಲಿ (೨೧-೨೪ ಋಕ್ಕುಗಳಲ್ಲಿ ಕಣ್ವತಪುತ್ರನಾದ ಪೃಥುಶ್ರವಾಃ ಎಂಬುವನ ದಾನಪ್ರಶಂಸೆಯು ಉಕ್ತವಾಗಿರುವುದರಿಂದ ಆ ಋಕ್ಕುಗಳಿಗೆ ಪೃಥುಶ್ರವಸನ ದಾನಸ್ತುತಿಯೇ ದೇವತೆಯು; **ಆ ನೋ ವಾಯೋ** ಎಂದು ಮೊದಲಾಗುವ (೨೫-೨೭ ಮತ್ತು ೨೨) ನಾಲ್ಕು ಋಕ್ಕುಗಳಿಗೂ, ಮೂವತ್ತೆರಡನೆಯ ಋಕ್ಕಿಗೂ ವಾಯುವು ದೇವತೆಯು; ಉಳಿದ ಋಕ್ಕುಗಳು ಇಂದ್ರದೇವತಾಕವು. ಈ ವಿಷಯವೆಲ್ಲವೂ ಅನುಕ್ರಮಣಿಕೆಯಲ್ಲಿ ಈ ರೀತಿ ಹೇಳಿರುವುದು— **ಶ್ಯಾವತೆಸ್ತ್ರಯಸ್ತ್ರಿಂಶದ್ವಶೋsಶ್ವ್ಯ**

ಆ ಸ ಆದಿ ಕಾನೀತಸ್ಯ ಪೃಥುಶ್ರವಸೋ ದಾನಸ್ತುತಿರಾದ್ಯಾ ಪಾದನಿಚೃತ್ ಪಂಚಮ್ಯಾದಿ ಕಕುಬ್ಗಾಯತ್ರೀ ಬೃಹತ್ಯನುಷ್ಟುಪ್ ಸತೋಬೃಹತೀ ಗಾಯತ್ರೀ ವಿಪರೀತೋತ್ತರಃ ಪ್ರಗಾಥೋ ದ್ವಿಪದಾ ಚತುರ್ವಿಂಶಿಕಾ ಬೃಹತೀ ಪಿಪೀಲಿಕಮಧ್ಯಾ ಕಕುಮ್ನ್ಯಂಕುಶಿರಾ ವಿರಾಡ್ಜಗತ್ಯುಪರಿಷ್ಟಾದ್ಬೃಹತೀಬೃಹತ್ಯೌ ವಿಷಮಪದೋತ್ತರೇ ಪಂಕ್ತೀ ಗಾಯತ್ರೀ ಪಂಕ್ತಿಃ ಪ್ರಗಾಥೌ ಚ ವಾಯವ್ಯೌ ಗಾಯತ್ರೀ ದ್ವಿಪದೋಷ್ಣಿಕ್ ಪಂಕ್ತಿರ್ವಾಯವ್ಯಾ ಗಾಯತ್ರೀ ಇತಿ ಎಂದು ಹೇಳಿರುವುದು ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಪ್ರಾರಂಭದಿಂದ ಸನಿತಃ ಸುಸನಿತಃ ಎಂಬ ಋಕ್ಕಿನವರೆಗಿರುವ (೧–೨೦) ಇಪ್ಪತ್ತು ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ— ತ್ವಾವತಃ ಪುರೂವಸವಿತಿ ವಶಃ ಸುನಿತಃ ಸುಸನಿತರಿತ್ಯೇತದಂತಃ ಎಂಬ ವಾಕ್ಯದಿಂದ (ಐ. ಅ. ೫-೨ ೫) ನಿರ್ದಿಷ್ಟವಾಗಿರುವುದು.

## ಸೂಕ್ತ—೪೬

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೪೬ ॥

ಅಷ್ಟಕ—೬ ॥ ಅಧ್ಯಾಯ—೪ ॥ ವರ್ಗ— ೧, ೨, ೩, ೪, ೫, ೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩೩ ॥

॥ ಋಷಿಃ— ವಶೋಽಶ್ವ್ಯಃ ॥

॥ ದೇವತಾ—೧-೨೦, ೨೯-೩೧, ೩೩. ಇಂದ್ರಃ । ೨೧–೨೪. ಪೃಥುಶ್ರವಸಃ ಕಾನೀತಸ್ಯ ದಾನಸ್ತುತಿಃ । ೨೫-೨೮, ೩೨. ವಾಯುಃ ॥

॥ ಛಂದಃ—೧. ಪಾದನಿಚೃತ್ । ೨-೪, ೬, ೧೦, ೨೩, ೨೯, ೩೩. ಗಾಯತ್ರೀ । ೫. ಕಕುಪ್ ೭, ೧೧, ೧೯, ೨೫, ೨೭. ಬೃಹತೀ । ೮. ಅನುಷ್ಟುಪ್ । ೯, ೨೬, ೨೮. ಸತೋಬೃಹತೀ । ೧೨. ವಿಪರೀತಾ । ೧೩. ದ್ವಿಪಾದಾ ಬೃಹತೀ । ೧೪. ಪಿಪಿಲೀಕಮಧ್ಯಾ । ೧೫. ಕಕುಮ್ನ್ಯಂಕುಶಿರಾ । ೧೬. ವಿರಾಟ್ । ೧೭. ಜಗತೀ । ೧೮. ಉಪರಿಷ್ಟಾದ್ಬೃಹತೀ । ೨೦. ವಿಷಮಪದಾ । ೨೧, ೨೨, ೨೪, ೩೨. ಪಂಕ್ತಿಃ । ೩೦. ದ್ವಿಪದಾ ವಿರಾಟ್ । ೩೧. ಉಷ್ಣಿಕ್ ॥

॥ ಸಂಹಿತಾಪಾಠಃ ॥

ತ್ವಾವತಃ ಪುರೂವಸೋ ವಯಮಿಂದ್ರ ಪ್ರಣೇತಃ ।
ಸ್ಮಸಿ ಸ್ಥಾತರ್ಹರೀಣಾಂ ॥ ೧ ॥

॥ ಪದಪಾಠಃ ॥

ತ್ವಾಽವತಃ । ಪುರೂವಸೋ ಇತಿ ಪುರುಽವಸೋ । ವಯಂ । ಇಂದ್ರ । ಪ್ರನೇತರಿತಿ ಪ್ರಽನೇತಃ ।
ಸ್ಮಸಿ । ಸ್ಥಾತಃ । ಹರೀಣಾಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಪುರೂವಸೋ ಬಹುಧನೇಂದ್ರ ಪ್ರಣೇತಃ ಕರ್ಮಣಾಂ ಪಾರಂ ಪ್ರಕರ್ಷೇಣ ಪ್ರಾಪಯಿತರಿಂದ್ರ ತ್ವಾವತಸ್ತ್ವತ್ಸದೃಶಸ್ಯ । ಇಂದ್ರಸಮಾನಸ್ಯಾನ್ಯಸ್ಯಾಭಾವಾತ್ತ್ವೇತ್ಯರ್ಥಃ । ತವ ಸ್ವಭೂತಾ ವಯಂ ಸ್ಮಸಿ । ಸ್ಮಃ । ಹೇ ಹರೀಣಾಮೇತತ್ಸಂಜ್ಞಕಾನಾಮಶ್ವಾನಾಂ ಸ್ಥಾತರಧಿಷ್ಠಾತಃ ॥

। ಪ್ರತಿಪದಾರ್ಥ ।

**ಪುರೂವಸೋ**—ಅತ್ಯಧಿಕವಾದ ಧನವುಳ್ಳವನೂ । **ಪ್ರಣೇತಃ**—ಕರ್ಮನಿರ್ವಹಣೆಗೆ ಸಹಾಯಮಾಡುವವನೂ । **ಹರೀಣಾಂ**—ಹರಿಸಂಜ್ಞಕವಾದ ಅಶ್ವಗಳಿಗೆ । **ಸ್ಥಾತಃ**—ನಿಯಾಮಕನೂ ಆದ । **ಇಂದ್ರ**—ಎಲೈ ಇಂದ್ರನೇ । **ವಯಂ**—ನಾವು । **ತ್ವಾವತಃ**—ನಿನಗೆ ಸೇರಿದವರಾಗಿ । **ಸ್ಮಸಿ**—ಆಗಿದ್ದೇವೆ.

। ಭಾವಾರ್ಥ ॥

ಅತ್ಯಧಿಕವಾದ ಧನವುಳ್ಳವನೂ, ಕರ್ಮನಿರ್ವಹಣೆಗೆ ಸಹಾಯಮಾಡುವವನೂ, ಹರಿಸಂಜ್ಞಕವಾದ ಅಶ್ವಗಳಿಗೆ ನಿಯಾಮಕನೂ ಆದ ಎಲೈ ಇಂದ್ರನೇ, ನಾವು ನಿನಗೆ ಸೇರಿದವರಾಗಿದ್ದೇವೆ.

English Translation.

O wealthy Indra, the leader (of rites), we belong to one like you, ruler of horses.

। ಸಂಹಿತಾಪಾಠಃ ।

ತ್ವಾಂ ಹಿ ಸತ್ಯಮದ್ರಿವೋ ವಿದ್ಮ ದಾತಾರಮಿಷಾಂ ।
ವಿದ್ಮ ದಾತಾರಂ ರಯೀಣಾಂ ॥ ೨ ॥

॥ ಪದಪಾಠಃ ॥

ತ್ವಾಂ । ಹಿ । ಸತ್ಯಂ । ಅದ್ರಿಽವಃ । ವಿದ್ಮ । ದಾತಾರಂ । ಇಷಾಂ ।
ವಿದ್ಮ । ದಾತಾರಂ । ರಯೀಣಾಂ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಅದ್ರಿವಃ । ಅತ್ತಿ ಶತ್ರೂನಿತ್ಯದ್ರಿರ್ವಜ್ರಃ । ತದ್ವನ್ನಿಂದ್ರ ತ್ವಾಂ ಸತ್ಯಂ ನಿಶ್ಚಯಮಿಷಾಮನ್ನಾನಾಂ ದಾತಾರಂ ವಿದ್ಮ । ಜಾನೀಮಃ । ತಥಾ ರಯೀಣಾಂ ಧನಾನಾಂ ದಾತಾರಂ ವಿದ್ಮ ॥**

। ಪ್ರತಿಪದಾರ್ಥ ।

**ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ತ್ವಾಂ ಹಿ**—ನಿನ್ನನ್ನು ಮಾತ್ರ । **ಸತ್ಯಂ**—ಖಂಡಿತವಾಗಿಯೂ । **ಇಷಾಂ**—ಅನ್ನಗಳ । **ದಾತಾರಂ**—ದಾನಮಾಡುವವನನ್ನಾಗಿ । **ವಿದ್ಮ**—ಅರಿತಿದ್ದೇವೆ । **ರಯೀಣಾಂ**—ಧನಗಳ । **ದಾತಾರಂ**—ದಾನಮಾಡುವವನನ್ನಾಗಿಯೂ । **ವಿದ್ಮ**—ಅರಿತಿದ್ದೇವೆ.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನಿನ್ನನ್ನು ಮಾತ್ರ ಖಂಡಿತವಾಗಿಯೂ ಅನ್ನದಾತೃವೆಂದರಿತಿದ್ದೇವೆ ನೀನೇ ಧನದಾತೃವೆಂದೂ ಅರಿತಿದ್ದೇವೆ.

## English Translation.

You, thunderer, we verily know to be the giver of food, you, we know to be the giver of riches.

॥ ಸಂಹಿತಾಪಾಠಃ ॥

ಆ ಯಸ್ಯ ತೇ ಮಹಿಮಾನಂ ಶತಮೂತೇ ಶತಕ್ರತೋ ।
ಗೀರ್ಭಿರ್ಗೃಣಂತಿ ಕಾರವಃ ॥ ೩ ॥

॥ ಪದಪಾಠಃ ॥

ಆ । ಯಸ್ಯ । ತೇ । ಮಹಿಮಾನಂ । ಶತಂऽಊತೇ । ಶತಕ್ರತೋ ಇತಿ ಶತऽಕ್ರತೋ ।
ಗೀಃऽಭಿಃ । ಗೃಣಂತಿ । ಕಾರವಃ ॥ ೩ ॥

॥ ಸಾಯಣಭಾಷ್ಯಂ ॥

**ಹೇ ಶತಮೂತೇऽಪರಿಮಿತರಕ್ಷಣ ಹೇ ಶತಕ್ರತೋ ಬಹುಕರ್ಮಯುಕ್ತೇಂದ್ರ ಯಸ್ಯ ತೇ ಮಹಿಮಾನಂ ಮಾಹಾತ್ಮ್ಯಂ ಕಾರವಃ ಸ್ತೋತಾರೋ ಗೀರ್ಭಿಃ ಸ್ತುತಿಭಿರ್ಗೃಣಂತಿ ಸ್ತುವಂತಿ ಸ್ವಾಭೀಷ್ಟಾಯ ॥**

॥ ಪ್ರತಿಪದಾರ್ಥ ॥

**ಶತಮೂತೇ**—ಅನೇಕ ವಿಧವಾದ ರಕ್ಷಣವುಳ್ಳವನೂ । **ಶತಕ್ರತೋ**—ಬಹು ವಿಧವಾದ ಕರ್ಮವುಳ್ಳವನೂ ಆದ ಎಲೈ ಇಂದ್ರನೇ । **ಯಸ್ಯ**—ಯಾವ ನೀನು ಪ್ರಸಿದ್ಧನಾಗಿರುವೆಯೋ ಅಂತಹ । **ತೇ**—ನಿನ್ನ । **ಮಹಿಮಾನಂ**—ಮಾಹಾತ್ಮ್ಯವನ್ನು । **ಕಾರವಃ**—ಸ್ತೋತೃಗಳು । **ಗೀರ್ಭಿಃ**—ಸ್ತುತಿಗಳಿಂದ । **ಆ ಗೃಣಂತಿ**—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಅನೇಕ ವಿಧವಾದ ರಕ್ಷಣವುಳ್ಳವನೂ, ಬಹುವಿಧವಾದ ಕರ್ಮವುಳ್ಳವನೂ ಆದ ಎಲೈ ಇಂದ್ರನೇ, ಪ್ರಸಿದ್ಧನಾಗಿರುವ ನಿನ್ನ ಮಾಹಾತ್ಮ್ಯವನ್ನು ಸ್ತೋತೃಗಳು ಸ್ತುತಿಗಳಿಂದ ಸ್ತುತಿಸುತ್ತಾರೆ.

## English Translation.

O Shatakratu, wielding a hundred protections, whose greatness the worshippers praise with their hymns.

॥ ಸಂಹಿತಾಪಾಠಃ ॥

ಸುನೀಥೋ ಘಾ ಸ ಮರ್ತ್ಯೋ ಯಂ ಮರುತೋ ಯಮರ್ಯಮಾ ।
ಮಿತ್ರಃ ಪಾಂತ್ಯದ್ರುಹಃ ॥ ೪ ॥

॥ ಪದಪಾಠಃ ॥

ಸುऽನೀಥಃ । ಘ । ಸಃ । ಮರ್ತ್ಯಃ । ಯಂ । ಮರುತಃ । ಯಂ । ಅರ್ಯಮಾ ।
ಮಿತ್ರಃ । ಪಾಂತಿ । ಅದ್ರುಹಃ ॥ ೪ ॥

॥ ಸಾಯಣಭಾಷ್ಯಂ ॥

ಸ ಮರ್ತ್ಯೋ ಮನುಷ್ಯೋ ಯಜಮಾನಃ ಸುನೀಥಃ ಸುಯಜ್ಞಃ ಸುನಯನೋ ವಾ ಭವತಿ। ಘೇತಿ ಪ್ರಸಿದ್ಧೌ। ಸ ಇತ್ಯುಕ್ತಂ ಕಮಿತ್ಯಾಹ। ಯಂ ಯಜಮಾನಂ ಮರುತೋ ದೇವಾಃ ಪಾಂತಿ ರಕ್ಷಂತ್ಯದ್ರುಹೋಽದ್ರೋಹಕರ್ತಾರಃ । ತಥಾ ಯಮರ್ಯಮಾ ಪಾತಿ। ಯಂ ಚ ಮಿತ್ರಃ ಪಾತಿ। ಸ ಏವಂ ಭವತೀತಿ ॥

॥ ಪ್ರತಿಪದಾರ್ಥ ॥

**ಯಂ**—ಯಾವ ಯಜಮಾನನನ್ನು । **ಅದ್ರುಹಃ**—ಕೇಡನ್ನು ಬಯಸದ । **ಮರುತಃ**—ಮರುತ್ತುಗಳು । **ಪಾಂತಿ**—ರಕ್ಷಿಸುವರೋ । **ಯಂ**—ಯಾವನನ್ನು । **ಅರ್ಯಮಾ**—ಅರ್ಯಮನೂ । **ಮಿತ್ರಃ**—ಮಿತ್ರನೂ ರಕ್ಷಿಸುವರೋ । **ಸಃ ಮರ್ತ್ಯಃ**—ಅದೇ ಮಾನವರೂಪನಾದ ಯಜಮಾನನು । **ಸುನೀಥಃ ಘ**—ಖಂಡಿತವಾಗಿಯೂ ಉತ್ತಮವಾದ ಯಜ್ಞನಿರ್ವಾಹಕನಾಗುತ್ತಾನೆ.

॥ ಭಾವಾರ್ಥ ॥

ಯಾವ ಯಜಮಾನನನ್ನು ಕೇಡನ್ನು ಬಯಸದಿರುವ ಮರುತ್ತುಗಳು ರಕ್ಷಿಸುವರೋ, ಯಾವನನ್ನು ಅರ್ಯಮನೂ, ಮಿತ್ರನೂ ರಕ್ಷಿಸುವರೋ ಅದೇ ಮಾನವರೂಪನಾದ ಯಜಮಾನನು ಖಂಡಿತವಾಗಿಯೂ ಉತ್ತಮವಾದ ಯಜ್ಞನಿರ್ವಾಹಕನಾಗುತ್ತಾನೆ.

## English Translation.

Fortunate in sacrifice is that mortal whom the guileless Maruts, whom Aryaman and Mitra, protect.

॥ ಸಂಹಿತಾಪಾಠಃ ॥

ದಧಾನೋ ಗೋಮದಶ್ವವತ್ಸುವೀರ್ಯಮಾದಿತ್ಯಜೂತ ಏಧತೇ ।
ಸದಾ ರಾಯಾ ಪುರುಸ್ಪೃಹಾ ॥ ೫ ॥

॥ ಪದಪಾಠಃ ॥

ದಧಾನಃ । ಗೋಽಮತ್ । ಅಶ್ವಽವತ್ । ಸುಽವೀರ್ಯಂ । ಆದಿತ್ಯಽಜೂತಃ । ಏಧತೇ ।
ಸದಾ । ರಾಯಾ । ಪುರುಽಸ್ಪೃಹಾ ॥ ೫ ॥

॥ ಸಾಯಣಭಾಷ್ಯಂ ॥

**ಆದಿತ್ಯಜೂತ ಆದಿತ್ಯಪ್ರೇರಿತ ಆದಿತ್ಯಾನುಗೃಹೀತೋ ಯಜಮಾನೋ ಗೋಮದ್ಗೋಭಿರುಪೇತಮಶ್ವವದಶ್ವೈರುಪೇತಂ ಸುವೀರ್ಯಂ ಶೋಭನವೀರ್ಯೋಪೇತಂ ಪುತ್ರಂ ದಧಾನೋ ಧಾರಯನ್ನೇಧತೇ ವರ್ಧತೇ ಸದಾ ಸರ್ವದಾ । ಕಿಂಚ ಪುರುಸ್ಪೃಹಾ ಬಹುಭಿಃ ಸ್ಪೃಹಣೀಯೇನ ರಾಯಾ ಧನೇನ ಸಹೈಧತೇ ॥**

॥ ಪ್ರತಿಪದಾರ್ಥ ॥

**ಆದಿತ್ಯಜೂತಃ**—ಆದಿತ್ಯನಿಂದ ಪ್ರೇರಿತನಾದ ಯಜಮಾನನು । **ಗೋಮತ್**—ಗೋಯುಕ್ತವಾದುದೂ । **ಅಶ್ವವತ್**—ಅಶ್ವಗಳಿಂದ ಕೂಡಿದುದೂ । **ಸುವೀರ್ಯಂ**—ಶ್ರೇಷ್ಠವಾದ ವೀರ್ಯೋಪೇತವಾದುದೂ ಆದ ಪುತ್ರಸಂಪತ್ತನ್ನು । **ದಧಾನಃ**—ಹೊಂದಿದವನಾಗಿ । **ಸದಾ**—ಯಾವಾಗಲೂ । **ಏಧತೇ**—ವೃದ್ಧಿಯನ್ನು ಹೊಂದುತ್ತಾನೆ । **ಪುರುಸ್ಪೃಹಾ**—ಅನೇಕರಿಂದ ಅಪೇಕ್ಷಿತವಾದ । **ರಾಯಾ**—ಧನದಿಂದಲೂ ವೃದ್ಧಿಯನ್ನು ಹೊಂದುತ್ತಾನೆ.

॥ ಭಾವಾರ್ಥ ॥

ಆದಿತ್ಯನಿಂದ ಪ್ರೇರಿತನಾದ ಯಜಮಾನನು ಗೋಯುಕ್ತವಾದುದೂ, ಅಶ್ವಗಳಿಂದ ಕೂಡಿದುದೂ, ಶ್ರೇಷ್ಠವಾದ ವೀರ್ಯೋಪೇತವಾದುದೂ ಆದ ಪುತ್ರಸಂಪತ್ತನ್ನು ಹೊಂದಿದವನಾಗಿ ಯಾವಾಗಲೂ ವೃದ್ಧಿಯನ್ನು ಹೊಂದುತ್ತಾನೆ. ಅನೇಕರಿಂದ ಅಪೇಕ್ಷಿತವಾದ ಧನದಿಂದಲೂ ವೃದ್ಧಿಯನ್ನು ಹೊಂದುತ್ತಾನೆ.

## English Translation.

He who is directed by Aditya ever increases, possessing abundance of cows and horses and vigorous children ; he increases in wealth longed for by many.

॥ ಸಂಹಿತಾಪಾಠಃ ॥

**ತಮಿಂದ್ರಂ ದಾನಮೀಮಹೇ ಶವಸಾನಮಭೀರ್ವಂ ।**
**ಈಶಾನಂ ರಾಯ ಈಮಹೇ ॥ ೬ ॥**

॥ ಪದಪಾಠಃ ॥

**ತಂ । ಇಂದ್ರಂ । ದಾನಂ । ಈಮಹೇ । ಶವಸಾನಂ । ಅಭೀರ್ವಂ ।**
**ಈಶಾನಂ । ರಾಯಃ । ಈಮಹೇ ॥ ೬ ॥**

॥ ಸಾಯಣಭಾಷ್ಯಂ ॥

**ತಂ ಪ್ರಸಿದ್ಧಮಿಂದ್ರಂ ದಾನಂ ದೇಯಂ ರಾಯೋ ಧನಮೀಮಹೇ । ಯಾಚಾಮಹೇ । ಕೀದೃಶಮಿಂದ್ರಂ । ಶವಸಾನಂ ಬಲಮಾಚರಂತಮಭೀರ್ವಮಭೀರುಮೀಶಾನಂ ಸರ್ವಸ್ಯ ಸ್ವಾಮಿನಂ ॥**

|| ಪ್ರತಿಪದಾರ್ಥ ||

**ತಂ**—ಪ್ರಸಿದ್ಧನಾದ | **ಇಂದ್ರಂ**—ಇಂದ್ರನನ್ನು | **ದಾನಂ**—ನಮಗೆ ಕೊಡಬೇಕಾದ ವಸ್ತುಗಳಿಗಾಗಿ | **ಈಮಹೇ**—ಯಾಚಿಸುತ್ತೇವೆ | **ಶವಸಾನಂ**—ಶಕ್ತಿಯುತವಾದ ಕರ್ಮವುಳ್ಳವನೂ | **ಅಭೀರ್ವಂ**—ಭಯರಹಿತನೂ | **ಈಶಾನಂ**—ಪ್ರಭುವೂ ಆದ ಇಂದ್ರನನ್ನು | **ರಾಯಃ**—ಧನಕ್ಕಾಗಿ | **ಈಮಹೇ**—ಯಾಚಿಸುತ್ತೇವೆ.

|| ಭಾವಾರ್ಥ ||

ಪ್ರಸಿದ್ಧನಾದ ಇಂದ್ರನನ್ನು ನಮಗೆ ಕೊಡಬೇಕಾದ ವಸ್ತುಗಳಿಗಾಗಿ ಯಾಚಿಸುತ್ತೇವೆ. ಶಕ್ತಿಯುತವಾದ ಕರ್ಮವುಳ್ಳವನೂ, ಭಯರಹಿತನೂ, ಪ್ರಭುವೂ ಆದ ಇಂದ್ರನನ್ನು ಧನಕ್ಕಾಗಿ ಯಾಚಿಸುತ್ತೇವೆ.

## English Translation.

We solicit a gift from this Indra, the displayer of might, the fearless, we solicit wealth from the lord.

|| ಸಂಹಿತಾಪಾಠಃ ||

**ತಸ್ಮಿನ್ಹಿ ಸಂತ್ಯೂತಯೋ ವಿಶ್ವಾ ಅಭೀರವಃ ಸಚಾ |**
**ತಮಾ ವಹಂತು ಸಪ್ತಯಃ ಪುರೂವಸುಂ ಮದಾಯ ಹರಯಃ ಸುತಂ ||**

|| ಪದಪಾಠಃ ||

**ತಸ್ಮಿನ್ | ಹಿ | ಸಂತಿ | ಊತಯಃ | ವಿಶ್ವಾಃ | ಅಭೀರವಃ | ಸಚಾ |**
**ತಂ | ಆ | ವಹಂತು | ಸಪ್ತಯಃ | ಪುರುऽವಸುಂ | ಮದಾಯ | ಹರಯಃ | ಸುತಂ || ೭ ||**

|| ಸಾಯಣಭಾಷ್ಯಂ ||

**ತಸ್ಮಿನ್ನಿಂದ್ರ ಊತಯೋ ಗಂತ್ರ್ಯೋ ವಿಶ್ವಾಃ ಸರ್ವಾ ಅಭೀರವೋऽಕಾತರಾಃ ಸಚಾ ಸಹಾಯಭೂತಾ ಮರುದ್ರೂಪಾಃ ಸೇನಾಃ ಸಂತಿ | ಭವಂತಿ | ಅಥವಾ ತಸ್ಮಿನ್ ಸರ್ವಾ ರಕ್ಷಣಾಃ ಸಹ ಸಂಭವಂತಿ | ತಮಿಂದ್ರಂ ಸಪ್ತಯಃ ಸರ್ಪಣಶೀಲಾ ಹರಯೋऽಶ್ವಾಃ ಪುರೂವಸುಂ ಬಹುಧನಂ | ಬಹುದನಪ್ರದಮಿತ್ಯರ್ಥಃ | ತಂ ಮದಾಯ ಸುತಮಭಿಸುತಮಭಿಷುತಂ ಸೋಮಂ ಪ್ರತ್ಯಾ ವಹಂತು | ಆಗಮಯಂತು ||**

|| ಪ್ರತಿಪದಾರ್ಥ ||

**ತಸ್ಮಿನ್ ಹಿ**—ಆದೇ ಇಂದ್ರನಲ್ಲಿ | **ವಿಶ್ವಾಃ**—ಸಮಸ್ತವಾದವೂ | **ಅಭೀರವಃ**—ಭಯರಹಿತವಾದವೂ ಆದ | **ಊತಯಃ**—ರಕ್ಷಣೆಗಳು | **ಸಚಾ**—ಒಟ್ಟಿಗೆ | **ಸಂತಿ**—ಸೇರಿಕೊಂಡಿರುತ್ತವೆ | **ಪುರೂವಸುಂ**—

ಅಧಿಕವಾದ ಧನಸಂಪತ್ತುಳ್ಳ । ತಂ—ಅದೇ ಇಂದ್ರನನ್ನು । ಸಪ್ತಯಃ—ಶೀಘ್ರಸಂಚಾರಸ್ವಭಾವವುಳ್ಳ । ಹರಯಃ—ಅಶ್ವಗಳು । ಮದಾಯ—ಅವನ ಹರ್ಷಕ್ಕಾಗಿ । ಸುತಂ—ಹಿಂಡಿರುವ ಸೋಮಾಭಿಮುಖವಾಗಿ । ಆ ವಹಂತು—ಕರೆತರಲಿ.

॥ ಭಾವಾರ್ಥ ॥

ಪ್ರಸಿದ್ಧನಾದ ಅದೇ ಇಂದ್ರನಲ್ಲಿ ಭಯರಹಿತವಾದ ಸಕಲ ರಕ್ಷಣೆಗಳೂ ಒಟ್ಟಿಗೆ ಸೇರಿಕೊಂಡಿರುತ್ತವೆ. ಅಧಿಕವಾದ ಧನಸಂಪತ್ತುಳ್ಳ ಅದೇ ಇಂದ್ರನನ್ನು ಶೀಘ್ರಸಂಚಾರಸ್ವಭಾವವುಳ್ಳ ಅಶ್ವಗಳು ಅವನ ಹರ್ಷಕ್ಕಾಗಿ ಹಿಂಡಿರುವ ಸೋಮಾಭಿಮುಖವಾಗಿ ಕರೆತರಲಿ.

## English Translation.

In him abide united all secure protections; lord of vast wealth, may his gliding steeds bear him to the expressed Soma juice for his exhilaration.

॥ ಸಂಹಿತಾಪಾಠಃ ॥

ಯಸ್ತೇ ಮದೋ ವರೇಣ್ಯೋ ಯ ಇಂದ್ರ ವೃತ್ರಹಂತಮಃ ।
ಯ ಆದದಿಃ ಸ್ವ೧ರ್ನೃಭಿರ್ಯಃ ಪೃತನಾಸು ದುಷ್ಟರಃ ॥ ೮ ॥

॥ ಪದಪಾಠಃ ॥

ಯಃ । ತೇ । ಮದಃ । ವರೇಣ್ಯಃ । ಯಃ । ಇಂದ್ರ । ವೃತ್ರಹನ್ऽತಮಃ ।
ಯಃ । ಆऽದದಿಃ । ಸ್ವಃ । ನೃऽಭಿಃ । ಯಃ । ಪೃತನಾಸು । ದುಸ್ತರಃ ॥ ೮ ॥

॥ ಸಾಯಣಭಾಷ್ಯಂ ॥

ಪೂರ್ವಮಂತ್ರೇ ಮದಾಯ ಹರಯ ಇತ್ಯುಕ್ತಂ ಸ ಮದಃ ಸ್ತೂಯತೇ । ಹೇ ಇಂದ್ರ ತೇ ತವ ಯೋ ಮದೋ ವರೇಣ್ಯೋ ವರಣೀಯಃ । ಯಶ್ಚ ಮದಃ ಸಂಗ್ರಾಮೇ ವೃತ್ರಹಂತಮಃ ಶತ್ರೂಣಾಮತಿಶಯೇನ ಹಂತಾ । ಯಶ್ಚಾದದಿರಾದಾತಾ ಸ್ವಃ ಸ್ವರಣಂ ಧನಂ ನೃಭಿರ್ನೃಭ್ಯಃ ಶತ್ರುಭ್ಯಃ । ಯಶ್ಚ ಪೃತನಾಸು ಸಂಗ್ರಾಮೇಷು ದುಷ್ಟರೋऽನಭಿಭಾವ್ಯಃ । ತಸ್ಮೈ ಮದಾಯ ಹರಯೋ ವಹಂತ್ವಿತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಯಃ—ಯಾವ । ಮದಃ— ಸಂತೃಪ್ತಿಯು । ವರೇಣ್ಯಃ—ಪೂಜ್ಯವಾಗಿದೆಯೋ । ಯಃ—ಯಾವ ಸಂತೃಪ್ತಿಯು । ವೃತ್ರಹಂತಮಃ – ಪೂರ್ಣವಾಗಿ ಶತ್ರುನಾಶಕವಾಗಿದೆಯೋ । ಯಃ—ಯಾವುದು । ನೃಭಿಃ—ಶತ್ರುಜನರಿಂದ । ಸ್ವಃ—ಅವರ ಧನವನ್ನು । ಆದದಿಃ—ಅಪಹರಿಸುವುದೋ । ಯಃ—ಯಾವ ಹರ್ಷವು । ಪೃತನಾಸು—ಸಂಗ್ರಾಮಗಳಲ್ಲಿ । ದುಷ್ಟರಃ—ಅಪ್ರತಿಹತವಾದ ಶಕ್ತಿದಾಯಕವಾಗಿರುವುದೋ (ಆ ಹರ್ಷಕ್ಕಾಗಿ ನಿನ್ನ ಅಶ್ವಗಳು ನಿನ್ನನ್ನು ಕರೆತರಲಿ)

| ಭಾವಾರ್ಥ ||

ಎಲೈ ಇಂದ್ರನೇ, ಯಾವ ನಿನ್ನ ಸಂತೃಪ್ತಿಯು ಪೂಜ್ಯವಾಗಿಯೂ, ಪೂರ್ಣವಾಗಿ ಶತ್ರುನಾಶಕವಾಗಿಯೂ ಇರುವುದೋ, ಯಾವುದು ಶತ್ರುಜನರಿಂದ ಅವರ ಧನವನ್ನು ಅಪಹರಿಸುವುದೋ, ಯಾವ ಹರ್ಷವು ಸಂಗ್ರಾಮಗಳಲ್ಲಿ ಅಪ್ರತಿಹತವಾದ ಶಕ್ತಿದಾಯಕವಾಗಿರುವುದೋ, ಆ ಹರ್ಷಕ್ಕಾಗಿ ನಿನ್ನ ಅಶ್ವಗಳು ನಿನ್ನನ್ನು ಕರೆತರಲಿ.

## English Translation.

That exhilaration of yours, Indra, which is pre-eminet, which utterly destroys your enemies, which wins wealth from men, and is invincible in battles ;

|| ಸಂಹಿತಾಪಾಠಃ ||

**ಯೋ ದುಷ್ಟರೋ ವಿಶ್ವವಾರ ಶ್ರವಾಯ್ಯೋ ವಾಜೇಷ್ವಸ್ತಿ ತರುತಾ ।**
**ಸ ನಃ ಶವಿಷ್ಠ ಸವನಾ ವಸೋ ಗಹಿ ಗಮೇಮ ಗೋಮತಿ ವ್ರಜೇ ॥ ೯ ॥**

| ಪದಪಾಠಃ |

**ಯಃ । ದುಸ್ತರಃ । ವಿಶ್ವऽವಾರ । ಶ್ರವಾಯ್ಯಃ । ವಾಜೇಷು । ಅಸ್ತಿ । ತರುತಾ ।**
**ಸಃ । ನಃ । ಶವಿಷ್ಠ । ಸವನಾ । ಆ । ವಸೋ ಇತಿ । ಗಹಿ । ಗಮೇಮ । ಗೋऽಮತಿ । ವ್ರಜೇ ॥ ೯ ॥**

|| ಸಾಯಣಭಾಷ್ಯಂ ||

**ಹೇ ವಿಶ್ವವಾರ ವಿಶ್ವೈರ್ವರಣೀಯೇಂದ್ರ ವಾಜೇಷು ಯುದ್ಧೇಷು ಯಸ್ತವ ದುಷ್ಟರೋ ದುಃಖೇನ ತರೀತುಂ ಶಕ್ಯಸ್ತರುತಾ ಶತ್ರೂಣಾಂ ತಾರಕೋऽಸ್ತಿ ಭವತಿ ಹೇ ವಸೋ ವಾಸಕ ಹೇ ಶವಿಷ್ಠಾತಿಶಯೇನ ಬಲವನ್ನಿಂದ್ರ ಸ ತ್ವಂ ನಃ ಸವನಾಸ್ಮಾಕಂ ಸವನಾನ್ಯಾ ಗಹಿ । ಆಗಚ್ಛ । ವಯಂ ಚ ಗೋಮತಿ ವ್ರಜೇ ಗೋಮಂತಂ ವ್ರಜಂ ಗಮೇಮ । ಗಚ್ಛೇಮ ॥**

| ಪ್ರತಿಪದಾರ್ಥ ||

**ವಿಶ್ವವಾರ**—ಸಕಲರ ಆದರಣೆಗೂ ಪಾತ್ರನಾದವನೂ । **ವಸೋ**—ವಸತಿದಾಯಕನೂ । **ಶವಿಷ್ಠ**—ಅತ್ಯಂತ ಶಕ್ತಿಯುತನೂ ಆದ ಎಲೈ ಇಂದ್ರನೇ । **ವಾಜೇಷು**—ಯುದ್ಧಗಳಲ್ಲಿ । **ದುಷ್ಟರಃ**—ಅಪ್ರತಿಹತವಾದುದೂ । **ಶ್ರವಾಯ್ಯಃ**—ಕೀರ್ತಿಯುತವಾದುದೂ ಆದ । **ಯಃ**—ಯಾವ । **ತರುತಾ**-ರಕ್ಷಣೆಯು । **ಅಸ್ತಿ**-ಇರುವುದೋ । **ಸಃ**—ಅದನ್ನು ಹೊಂದಿರುವ ನೀನು । **ನಃ**—ನಮ್ಮ । **ಸವನಾ**—ಯಜ್ಞಗಳಿಗೆ । **ಆ ಗಹಿ**—ದಯಮಾಡು । **(ವಯಂ**—ನಾವು) । **ಗೋಮತಿ**—ಗೋವುಗಳಿಂದ ಕೂಡಿದ । **ವ್ರಜೇ**—ಕೊಟ್ಟಿಗೆಯನ್ನು । **ಗಮೇಮ**—ಹೊಂದುವಂತಾಗಲಿ.

॥ ಭಾವಾರ್ಥ ॥

ಸಕಲರ ಆದರಣೆಗೂ ಪಾತ್ರನಾದವನೂ, ವಸತಿದಾಯಕನೂ, ಅತ್ಯಂತ ಶಕ್ತಿಯುತನೂ ಆದ ಎಲೈ ಇಂದ್ರನೇ, ಯುದ್ಧಗಳಲ್ಲಿ ಅಪ್ರತಿಹತವಾದುದೂ, ಕೀರ್ತಿಯುತವಾದುದೂ ಆದ ಯಾವ ರಕ್ಷಣೆಯಿರುವುದೋ ಅದನ್ನು ಹೊಂದಿರುವ ನೀನು ನಮ್ಮ ಯಜ್ಞಗಳಿಗೆ ದಯಮಾಡು. ನಾವು ಗೋವುಗಳಿಂದ ಕೂಡಿದ ಕೊಟ್ಟಿಗೆಯನ್ನು ಹೊಂದುವಂತಾಗಲಿ.

## English Translation.

Which is invincible in contests,—O you desired by all,—well worthy of praise and the deliverer (from enemies) ; come to our oblations, most mighty one, giver of dwellings ; may we obtain a stall full of cows.

॥ ಸಂಹಿತಾಪಾಠಃ ॥

ಗವ್ಯೋ ಷು ಣೋ ಯಥಾ ಪುರಾಶ್ವಯೋತ ರಥಯಾ ।
ವರಿವಸ್ಯ ಮಹಾಮಹ ॥ ೧೦ ॥

॥ ಪದಪಾಠಃ ॥

ಗವ್ಯೋ ಇತಿ । ಸು । ನಃ । ಯಥಾ । ಪುರಾ । ಅಶ್ವಽಯಾ । ಉತ । ರಥ್ಽಯಾ ।
ವರಿವಸ್ಯ । ಮಹಾಽಮಹ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಮಹಾಮಹ ಮಹಾಧನೇಂದ್ರ ಗವ್ಯಾ ॥ ಗವ್ಯಾ ಉ ಇತಿ ನಿಪಾತಾನಿಪಾತಶಬ್ದಯು-ಕ್ತಮುದಾಯಸ್ಯಾದಿವದ್ಭಾವೇನ ನಿಪಾತವದ್ಭಾವಾತ್ಪ್ರಕೃತಿಭಾವಃ ॥ ಅಸ್ಮಾಕಂ ಗವಾಮಿಚ್ಛಾಯಾಸ್ಮಾಕಂ ಗಾ ದಾತುಂ ಯಥಾ ಪುರಾ ಪೂರ್ವಂ ಯಥಾಸ್ಮಾಕಂ ಗವಾದಿದಾನಾಯ ವರಿವಸ್ಯಸಿ ತದ್ವದಪ್ಯಾಪಿ ಸು ಸುಷ್ಠು ವರಿವಸ್ಯ । ಪರಿಚರ । ಆಗಚ್ಛೇತ್ಯರ್ಥಃ । ನ ಕೇವಲಂ ಗವೇಚ್ಛಯಾ ಕಿಂತ್ವಶ್ವಯಾಶ್ವಪ್ರದಾನೇ-ಚ್ಛಯಾ । ಉತಾಪಿ ಚ ರಥಯಾ ರಥೇಚ್ಛಯಾ ಚ ವರಿವಸ್ಯೇತಿ ॥

॥ ಪ್ರತಿಪದಾರ್ಥ ॥

ಮಹಾಮಹ—ಅತ್ಯಧಿಕವಾದ ಧನವುಳ್ಳ ಎಲೈ ಇಂದ್ರನೇ । ಗವ್ಯಾ—ನಮಗೆ ಗೋದಾನಮಾಡುವ ಇಚ್ಛೆಯಿಂದ । ಯಥಾ—ಯಾವ ರೀತಿ । ಪುರಾ—ಹಿಂದೆಲ್ಲಾ ಬಂದೆಯೋ ಹಾಗೆ । ನಃ—ನಮ್ಮಲ್ಲಿಗೆ । ಸು—ಅತಿಶಯವಾಗಿ । ವರಿವಸ್ಯ—ದಯಮಾಡು । ಅಶ್ವಯಾ ಅಶ್ವಪ್ರದಾನೇಚ್ಛೆಯಿಂದಲೂ । ರಥಯಾ—ರಥಪ್ರದಾನೇಚ್ಛೆಯಿಂದಲೂ ದಯಮಾಡು.

॥ ಭಾವಾರ್ಥ ॥

ಅತ್ಯಧಿಕವಾದ ಧನವುಳ್ಳ ಎಲೈ ಇಂದ್ರನೇ, ನಮಗೆ ಗೋದಾನವನ್ನು ಮಾಡುವ ಇಚ್ಛೆಯಿಂದ ಯಾವ ರೀತಿ ಹಿಂದೆಲ್ಲಾ ಬಂದೆಯೋ ಹಾಗೆಯೇ ಈಗಲೂ ನಮ್ಮಲ್ಲಿಗೆ ಅತಿಶಯವಾಗಿ ದಯಮಾಡು. ಅಶ್ವಪ್ರದಾನೇಚ್ಛೆಯಿಂದಲೂ ರಥಪ್ರದಾನೇಚ್ಛೆಯಿಂದಲೂ ದಯಮಾಡು.

Fnglish Translation.

Lord of wealth, visit us as of old, to give us cows, horses and chariots.

॥ ಸಂಹಿತಾಪಾಠಃ ॥

ನಹಿ ತೇ ಶೂರ ರಾಧಸೋಽಂತಂ ವಿಂದಾಮಿ ಸತ್ರಾ ।
ದಶಸ್ಯಾ ನೋ ಮಘವನ್ನೂ ಚಿದದ್ರಿವೋ ಧಿಯೋ ವಾಜೇಭಿರಾವಿಥ ॥

॥ ಪದಪಾಠಃ ॥

ನಹಿ । ತೇ । ಶೂರ । ರಾಧಸಃ । ಅಂತಂ । ವಿಂದಾಮಿ । ಸತ್ರಾ ।
ದಶಸ್ಯ । ನಃ । ಮಘಽವನ್ । ನು । ಚಿತ್ । ಅದ್ರಿಽವಃ । ಧಿಯಃ । ವಾಜೇಭಿಃ । ಆವಿಥ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಶೂರ ವಿಕ್ರಾಂತೇಂದ್ರ ತೇ ತವ ರಾಧಸೋ ಧನಸ್ಯಾಂತಮಿಯತ್ತಾಂ ಸತ್ರಾ ಸತ್ಯಂ ನಹಿ ವಿಂದಾಮಿ । ನ ಲಭೇ । ಯಸ್ಮಾದೇವಂ ತಸ್ಮಾತ್ ಹೇ ಮಘವನ್ ಧನವನ್ ಹೇ ಅದ್ರಿವೋ ವಜ್ರವನ್ನಿಂದ್ರ ನೋಽಸ್ಮಾಕಂ ನೂ ಚಿತ್ ಕ್ಷಿಪ್ರಮೇವ ದಶಸ್ಯ । ದೇಹಿ ತದ್ಧನಂ । ಕಿಂಚ ವಾಜೇಭಿರ್ವಾಜೈರನ್ನೈರ್ಧಿಯೋಽಸ್ಮದೀಯಾನಿ ಕರ್ಮಾಣ್ಯಾವಿಥ । ರಕ್ಷ ॥**

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯಾದ ಎಲೈ ಇಂದ್ರನೇ । **ತೇ**—ನಿನ್ನ । **ರಾಧಸಃ**—ಧನಸಂಪತ್ತಿನ । **ಅಂತಂ**—ಕೊನೆಯನ್ನು । **ಸತ್ರಾ**—ಖಂಡಿತವಾಗಿಯೂ । **ನಹಿ ವಿಂದಾಮಿ**—ನಾನು ಅರಿಯೆನು । **ಮಘವನ್**—ಧನವಂತನೂ । **ಅದ್ರಿವಃ**—ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ । **ನಃ**—ನಮಗೆ । **ನೂ ಚಿತ್**—ಕ್ಷಿಪ್ರವಾಗಿ । **ದಶಸ್ಯ**—ಆ ಧನವನ್ನು ಕೊಡು । **ವಾಜೇಭಿಃ**—ಅನ್ನಗಳೊಡನೆ । **ಧಿಯಃ**—ನಮ್ಮ ಕರ್ಮಗಳನ್ನು । **ಆವಿಥ**—ರಕ್ಷಿಸು.

॥ ಭಾವಾರ್ಥ ॥

ಪರಾಕ್ರಮಿಯಾದ ಎಲೈ ಇಂದ್ರನೇ, ನಿನ್ನ ಧನಸಂಪತ್ತಿನ ಅವಧಿಯೇನೆಂಬುದನ್ನು ನಾನು ಖಂಡಿತ ಅರಿಯೆನು. ಧನವಂತನೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, ನಮಗೆ ಕ್ಷಿಪ್ರವಾಗಿ ಆ ಧನವನ್ನು ಕೊಡು. ಅನ್ನಗಳೊಡನೆ ಕೂಡಿದ ನಮ್ಮ ಕರ್ಮಗಳನ್ನು ರಕ್ಷಿಸು.

## English Translation.

Verily, hero, I find no limit to your wealth; O Maghavan, the thunderer, bestow (your gifts) quickly upon us, and bless our offerings with (abundant) food.

॥ ಸಂಹಿತಾಪಾಠಃ ॥

ಯ ಋಷ್ವಃ ಶ್ರಾವಯತ್ಸಖಾ ವಿಶ್ವೇತ್ಸ ವೇದ ಜನಿಮಾ ಪುರುಷ್ಟುತಃ ।
ತಂ ವಿಶ್ವೇ ಮಾನುಷಾ ಯುಗೇಂದ್ರಂ ಹವಂತೇ ತವಿಷಂ ಯತಸ್ರುಚಃ ॥

॥ ಪದಪಾಠಃ ॥

ಯಃ । ಋಷ್ವಃ । ಶ್ರಾವಯತ್ಽಸಖಾ । ವಿಶ್ವಾ । ಇತ್ । ಸಃ । ವೇದ । ಜನಿಮ । ಪುರುಽಸ್ತುತಃ ।
ತಂ । ವಿಶ್ವೇ । ಮಾನುಷಾ । ಯುಗಾ । ಇಂದ್ರಂ । ಹವಂತೇ । ತವಿಷಂ । ಯತಽಸ್ರುಚಃ ॥ ೧೨ ॥

॥ ಸಾಯಣಭಾಷ್ಯಂ ॥

ಯ ಇಂದ್ರ ಋಷ್ವೋ ದರ್ಶನೀಯಃ ಶ್ರಾವಯತ್ಸಖಾ । ಶ್ರಾವಯಂತಃ ಸಖಾಯ ಋತ್ವಿಜೋ ಯಸ್ಯ ಸ ತಾದೃಶಃ ಶ್ರಾವಯತ್ಸಖಾ । ಪುರುಷ್ಟುತೋ ಬಹುಭಿರ್ಯಜಮಾನೈಃ ಸ್ತುತೋ ಯ ಇಂದ್ರಃ ಸ ವಿಶ್ವೇತ್ ಸರ್ವಾಣ್ಯಪಿ ಜನಿಮಾ ಜನ್ಮಾನಿ ಪ್ರಾಣಿನಾಂ ವೇದ । ಜಾನಾತಿ । ತಂ ತವಿಷಂ ಬಲವಂತಮಿಂದ್ರಂ ವಿಶ್ವೇ ಸರ್ವೇಽಪ್ಯಧ್ವರ್ಯ್ವಾದಯೋ ಯತಸ್ರುಚಃ ಸ್ವೀಕೃತಹವಿಷ್ಕಾಃ ಸಂತೋ ಮಾನುಷಾ ಮನುಷ್ಯಸಂಬಂಧಿನೋ ಯುಗಾ ಯುಗಾನಿ ಕಾಲಾನ್ ಸರ್ವೇಷು ಕಾಲೇಷು ಹವಂತೇ । ಆಹ್ವಯಂತಿ । ಸ್ತುವಂತಿ ॥

॥ ಪ್ರತಿಪದಾರ್ಥ ॥

ಯಃ—ಯಾವ ಇಂದ್ರನು । ಋಷ್ವಃ—ಆಕರ್ಷಕವಾದ ರೂಪವುಳ್ಳವನಾಗಿಯೂ । ಶ್ರಾವಯತ್ಸಖಾ—ಋತ್ವಿಕ್ಕುಗಳಿಂದ ಸ್ತುತಿಸಲ್ಪಟ್ಟವನಾಗಿಯೂ । ಪುರುಷ್ಟುತಃ—ಅನೇಕರಿಂದ ಪ್ರಶಂಸಿಸಲ್ಪಟ್ಟವನಾಗಿಯೂ ಇರುವನೋ । ಸಃ—ಅದೇ ಇಂದ್ರನು । ವಿಶ್ವೇತ್—ಸಮಸ್ತವಾದ । ಜನಿಮಾ—ಜನ್ಮಗಳನ್ನೂ । ವೇದ—ಅರಿಯುತ್ತಾನೆ । ತವಿಷಂ—ಶಕ್ತಿಯುತನಾದ । ತಂ ಇಂದ್ರಂ—ಅದೇ ಇಂದ್ರನನ್ನು । ಯತಸ್ರುಚಃ—

ಸ್ರುಕ್ಪಾತ್ರೆಯನ್ನು ಯಾಗಕ್ಕಾಗಿ ಹಿಡಿದಿರುವ | **ವಿಶ್ವೇ ಮಾನುಷಾಃ**—ಸಕಲ ಮಾನವರೂ | **ಯುಗಾ**—ಸರ್ವಕಾಲಗಳಲ್ಲಿಯೂ | **ಹವಂತೇ**—ಪ್ರಾರ್ಥಿಸಿ ಕರೆಯುತ್ತಾರೆ.

॥ ಭಾವಾರ್ಥ ॥

ಯಾವ ಇಂದ್ರನು ಆಕರ್ಷಕವಾದ ರೂಪವುಳ್ಳವನಾಗಿಯೂ, ಋತ್ವಿಕ್ಕುಗಳಿಂದ ಸ್ತುತಿಸಲ್ಪಟ್ಟವನಾಗಿಯೂ, ಅನೇಕರಿಂದ ಪ್ರಶಂಸಿಸಲ್ಪಟ್ಟವನಾಗಿಯೂ ಇರುವನೋ, ಅದೇ ಇಂದ್ರನು ಸಮಸ್ತನಾದ ಜನಗಳನ್ನೂ ಅರಿಯುತ್ತಾನೆ. ಶಕ್ತಿಯುತನಾದ ಅದೇ ಇಂದ್ರನನ್ನು ಸ್ರುಕ್ಪಾತ್ರೆಯನ್ನು ಯಾಗಕ್ಕಾಗಿ ಎತ್ತಿಹಿಡಿದಿರುವ ಸಕಲ ಮಾನವರೂ ಸರ್ವಕಾಲಗಳಲ್ಲಿಯೂ ಪ್ರಾರ್ಥಿಸಿ ಕರೆಯುತ್ತಾರೆ.

## English Translation.

The graceful Indra, whose friends extol him, knows, praised of many, all births; him, the mighty, all men invoke at all times, seizing the ladles (for the oblation).

। ಸಂಹಿತಾಪಾಠಃ ॥

ಸ ನೋ ವಾಜೇಷ್ವವಿತಾ ಪುರೂವಸುಃ ಪುರಃಸ್ಥಾತಾ ।
ಮಘವಾ ವೃತ್ರಹಾ ಭುವತ್ ॥ ೧೩ ॥

॥ ಪದಪಾಠಃ ॥

ಸಃ । ನಃ । ವಾಜೇಷು । ಅವಿತಾ । ಪುರುऽವಸುಃ । ಪುರಃऽಸ್ಥಾತಾ ।
ಮಘऽವಾ । ವೃತ್ರऽಹಾ । ಭುವತ್ ॥ ೧೩ ॥

। ಸಾಯಣಭಾಷ್ಯಂ ।

ಏಷಾ ದ್ವಿಪದಾ ಜಗತೀ । ಸ ಪುರೂವಸುರ್ಬಹುಧನೋ ಮಘವಾ ಧನವಾನ್ ವೃತ್ರಹಾ ಶತ್ರೂಣಾಂ ಹಂತೇಂದ್ರೋ ನೋऽಸ್ಮಾಕಂ ವಾಜೇಷು ಸಂಗ್ರಾಮೇಷ್ವವಿತಾ ರಕ್ಷಿತಾ ಪುರಃಸ್ಥಾತಾ ತದರ್ಥಂ ಪುರತೋ ವರ್ತಮಾನೋ ಭುವತ್ । ಭವತು ॥

॥ ಪ್ರತಿಪದಾರ್ಥ ॥

**ಪುರೂವಸುಃ**—ಅತ್ಯಧಿಕವಾದ ಧನವುಳ್ಳವನೂ । **ಮಘವಾ**—ಧನವಂತನೂ । **ವೃತ್ರಹಾ**—ಶತ್ರುನಾಶಕನೂ ಆದ । **ಸಃ**—ಇಂದ್ರನು । **ವಾಜೇಷು**—ಸಂಗ್ರಾಮಗಳಲ್ಲಿ । **ನಃ**—ನಮ್ಮ । **ಅವಿತಾ**—ರಕ್ಷಕನಾಗಿ । **ಪುರಃ ಸ್ಥಾತಾ**—ನಮ್ಮ ಮುಂಭಾಗದಲ್ಲಿರುವವನಾಗಿ । **ಭುವತ್**— ಆಗಲಿ.

॥ ಭಾವಾರ್ಥ ॥

ಅತ್ಯಧಿಕವಾದ ಧನವುಳ್ಳವನೂ, ಧನವಂತನೂ, ಶತ್ರುನಾಶಕನೂ ಆದ ಇಂದ್ರನು ಸಂಗ್ರಾಮಗಳಲ್ಲಿ ನಮ್ಮ ರಕ್ಷಕನಾಗಿ ನಮ್ಮ ಮುಂಭಾಗದಲ್ಲಿರಲಿ.

## English Translation.

May Maghavan, the wealthy, the slayer Vritra, stand before **us as our** defender in battles.

॥ ಸಂಹಿತಾಪಾಠಃ ॥

ಅಭಿ ವೋ ವೀರಮಂಧಸೋ ಮದೇಷು ಗಾಯ ಗಿರಾ ಮಹಾ ವಿಚೇತಸಂ।
ಇಂದ್ರಂ ನಾಮ ಶ್ರುತ್ಯಂ ಶಾಕಿನಂ ವಚೋ ಯಥಾ ॥ ೧೪ ॥

॥ ಪದಪಾಠಃ ॥

ಅಭಿ । ವಃ । ವೀರಂ । ಅಂಧಸಃ । ಮದೇಷು । ಗಾಯ । ಗಿರಾ । ಮಹಾ । ವಿಽಚೇತಸಂ ।
ಇಂದ್ರಂ । ನಾಮ । ಶ್ರುತ್ಯಂ । ಶಾಕಿನಂ । ವಚಃ । ಯಥಾ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಉದ್ಗಾತ್ರಾದಯಃ ವಃ। ಯೂಯಮಿತ್ಯರ್ಥಃ।ಅಥವಾ ಹೇ ಯಜಮಾನಾಃ ವೋ ಯುಷ್ಮಾಕಂ ಹಿತಾಯಾಂಧಸಃ ಸೋಮಸ್ಯ ಮದೇಷೂತ್ಪಾದ್ಯಮಾನೇಷು ಸತ್ಸು ವೀರಂ ಶತ್ರೂಣಾಮೀರಯಿತಾರಂ ನಾಮ ಶತ್ರೂಣಾಂ ನಾಮಕಂ ವಿಚೇತಸಂ ವಿಶಿಷ್ಟಪ್ರಜ್ಞಂ ಶ್ರುತ್ಯಂ ಸರ್ವತ್ರ ಶ್ರೋತವ್ಯಂ ಶಾಕಿನಂ ಶಕ್ತಂ ಈದೃಶಮಿಂದ್ರಂ ಮಹಾ ಮಹತ್ಯಾ ಗಿರಾ ಸ್ತುತ್ಯಾ ವಚೋ ವಾಗ್ಯುಷ್ಮದೀಯಾ ಯಥಾ ಯೇನ ಪ್ರಕಾರೇಣ ಪ್ರವರ್ತತೇಗಾಯತ್ರ್ಯಃ ಶಿಷ್ಟುಭಾ ವಾ ತಥಾ ಗಾಯ । ಗಾಯತ । ಸ್ತುತಿಂ ಕುರುತ ॥

॥ ಪ್ರತಿಪದಾರ್ಥ ॥

(ಎಲೈ ಉದ್ಗಾತೃಗಳೇ) **ಅಂಧಸಃ**—ಸೋಮಪಾನದ । **ಮದೇಷು**—ಹರ್ಷದಲ್ಲಿರುವಾಗ । **ವೀರಂ**—ಪರಾಕ್ರಮಿಯೂ । **ನಾಮ**—ಶತ್ರುಗಳನ್ನು ತಗ್ಗಿಸುವವನೂ । **ವಿಚೇತಸಂ**—ವಿಶೇಷವಾದ ಪ್ರಜ್ಞೆಯುಳ್ಳವನೂ । **ಶ್ರುತ್ಯಂ**—ಪ್ರಸಿದ್ಧನೂ । **ಶಾಕಿನಂ**—ಶಕ್ತಿಯುತನೂ ಆದ । ಇಂದ್ರಂ ಅಭಿ—ಇಂದ್ರನನ್ನುದ್ದೇಶಿಸಿ । **ವಃ**—ನಿಮ್ಮ । **ಮಹಾ**—ಮಹತ್ತಾದುದೂ । **ಗಿರಾ**—ಸ್ತುತಿರೂಪವಾದುದೂ ಆದ । **ವಚಃ**—ವಾಕ್ಕುಗಳಿಂದ । **ಯಥಾ**—ಯಾವ ರೀತಿ ಇಂದ್ರನನ್ನು ಸ್ತುತಿಸಬಹುದೋ ಹಾಗೆ । **ಗಾಯ**—ಗಾನರೂಪದಲ್ಲಿ ಪ್ರಶಂಸಿರಿ.

॥ ಭಾವಾರ್ಥ ॥

ಎಲೈ ಉದ್ಗಾತೃಗಳೇ, ಸೋಮಪಾನದ ಹರ್ಷದಲ್ಲಿರುವಾಗ ಪರಾಕ್ರಮಿಯೂ, ಶತ್ರುಗಳನ್ನು ತಗ್ಗಿಸುವವನೂ, ವಿಶೇಷವಾದ ಪ್ರಜ್ಞೆಯುಳ್ಳವನೂ, ಪ್ರಸಿದ್ಧನೂ, ಶಕ್ತಿಯುತನೂ ಆದ ಇಂದ್ರನನ್ನುದ್ದೇಶಿಸಿ ನಿಮ್ಮ ಮಹತ್ತಾದುದೂ,

ಸ್ತುತಿರೂಪವಾದುದೂ ಆದ ವಾಕ್ಯಗಳಿಂದ ಯಾವ ರೀತಿ ಇಂದ್ರನನ್ನು ಸ್ತುತಿಸಬಹುದೋ ಹಾಗೆ ಗಾನರೂಪದಲ್ಲಿ ಪ್ರಶಂಸಿಸಿರಿ.

## Eng'ish Translation.

At the time of the exhilaration of the Soma, sing according to your hymns, with a loud voice, your wise hero Indra, the humbler of enemies, the the strong, the ever worthy to be praised.

॥ ಸಂಹಿತಾಪಾಠಃ ॥

ದದೀ ರೇಕ್ಣಸ್ತನ್ವೇ ದದಿರ್ವಸು ದದಿರ್ವಾಜೇಷು ಪುರುಹೂತ ವಾಜಿನಂ ।
ನೂನಮಥ ॥ ೧೫ ॥

॥ ಪದಪಾಠಃ ॥

ದದಿಃ । ರೇಕ್ಣಃ । ತನ್ವೇ । ದದಿಃ । ವಸು । ದದಿಃ । ವಾಜೇಷು । ಪುರುऽಹೂತ । ವಾಜಿನಂ ।
ನೂನಂ । ಅಥ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ಪುರುಹೂತ ಬಹುಭಿರಾಹೂತೇಂದ್ರ ತ್ವಂ ತನ್ವೇ ಮಹ್ಯಂ ಶರೀರಾಯ ರೇಕ್ಣೋ ಧನಂ ದದಿರ್ದಾತಾ ಭವ । ಕದೇತಿ ಉಚ್ಯತೇ । ನೂನಂ ಕ್ಷಿಪ್ರಮದ್ಯೇದಾನೀಮೇವ । ಏವಂ ಪ್ರತಿವಾಕ್ಯಂ ಯೋಜ್ಯಂ । ತಥಾ ವಸು ಧನಂ ಪುತ್ರಾದಿಭ್ಯೋ ದದಿರ್ದಾತಾ ಭವ । ತಥಾ ವಾಜೇಷು ಸಂಗ್ರಾಮೇಷು ವಾಜಿನಮನ್ನವಂತಂ ರಯಿಂ ದದಿರ್ದಾತಾ ಭವೇತಿ ॥ ಅತ್ರ ಸರ್ವೇಷ್ವಪಿ ವಾಕ್ಯೇಷು ದದಿರಿತ್ಯಸ್ಯ ಲಿಡ್ವ್ಯಾದಾನ್ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ । **ತನ್ವೇ**—ನನ್ನ ಶರೀರಪೋಷಣೆಗಾಗಿ । **ರೇಕ್ಣಃ**—ಧನವನ್ನು । **ದದಿಃ**—ದಾನಮಾಡು । **ನೂನಂ**—ಕ್ಷಿಪ್ರವಾಗಿ । **ವಸು**—ಧನವನ್ನು । **ದದಿಃ**—ನಮ್ಮ ಪುತ್ರಾದಿಗಳಿಗೂ ಕೊಡು । **ಅಥ**—ಅನಂತರ । **ವಾಜೇಷು**—ಸಂಗ್ರಾಮಗಳಲ್ಲಿ । **ವಾಜಿನಂ**—ಅನ್ನಯುತವಾದ ಧನವನ್ನು । **ದದಿಃ**—ದಾನಮಾಡು.

॥ ಭಾವಾರ್ಥ ॥

ಅನೇಕರ ಆಹ್ವಾನಕ್ಕೆ ಪಾತ್ರನಾದ ಎಲೈ ಇಂದ್ರನೇ, ನನ್ನ ಶರೀರಪೋಷಣೆಗಾಗಿ ಧನವನ್ನು ದಾನಮಾಡು. ಕ್ಷಿಪ್ರವಾಗಿ ಧನವನ್ನು ನಮ್ಮ ಪುತ್ರಾದಿಗಳಿಗೂ ಕೊಡು. ಬಳಿಕ ಸಂಗ್ರಾಮಗಳಲ್ಲಿಯೂ ಅನ್ನಯುತವಾದ ಧನವನ್ನು ದಾನಮಾಡು.

## English Translation.

(Indra), invoked by many, speedily give me wealth; give riches, give abundance of food in battle.

॥ ಸಂಹಿತಾಪಾಠಃ ॥

ವಿಶ್ವೇಷಾಮಿರಜ್ಯಂತಂ ವಸೂನಾಂ ಸಾಸಹ್ವಾಂಸಂ ಚಿದಸ್ಯ ವರ್ಪಸಃ ।
ಕೃಪಯತೋ ನೂನಮತ್ಯಥ ॥ ೧೬ ॥

॥ ಪದಪಾಠಃ ॥

ವಿಶ್ವೇಷಾಂ । ಇರಜ್ಯಂತಂ । ವಸೂನಾಂ । ಸಸಹ್ವಾಂಸಂ । ಚಿತ್ । ಅಸ್ಯ । ವರ್ಪಸಃ ।
ಕೃಪಯತಃ । ನೂನಂ । ಅತಿ । ಅಥ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾಂ ವಿಶ್ವೇಷಾಂ ಸರ್ವೇಷಾಂ ವಸೂನಾಂ ಧನಾನಾಮಿರಜ್ಯಂತಮೀಶಾನಮಸ್ಯ ವರ್ಪಸೋ ವಾರಕಸ್ಯ ಕೃಪಯತೋ ಯುದ್ಧಂ ಕಲ್ಪಯತಃ ಶತ್ರೋಃ ಸಾಸಹ್ವಾಂಸಮಭಿಭವಿತಾರಂ ಸ್ತುವಂತ ಇತಿ ಶೇಷಃ । ಸ ತ್ವಂ ನೂನಂ ಕ್ಷಿಪ್ರಮದ್ಯಾಪೀದಾನೀಮಪಿ ಧನಂ ಪ್ರಯಚ್ಛೇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ವಿಶ್ವೇಷಾಂ**—ಸಮಸ್ತವಾದ । **ವಸೂನಾಂ**—ಧನಗಳಿಗೂ । **ಇರಜ್ಯಂತಂ**—ಪ್ರಭುವಾದವನೂ । **ವರ್ಪಸಃ**—ತಡೆಗಟ್ಟುವ ಮತ್ತು । **ಕೃಪಯತಃ**—ಯುದ್ಧವನ್ನು ನಿರ್ಮಿಸುವ । **ಅಸ್ಯ**—ಈ ಶತ್ರುವಿನ । **ಸಾಸಹ್ವಾಂಸಂ**—ಅಪಜಯವನ್ನುಂಟುಮಾಡುವವನೂ ಆದ ನಿನ್ನನ್ನು ಸ್ತುತಿಸುತ್ತೇವೆ । **ನೂನಂ**—ಕ್ಷಿಪ್ರವಾಗಿ । **ಅತ್ಯಥ**—ಧನವನ್ನು ಕೊಡು.

॥ ಭಾವಾರ್ಥ ॥

ಸಮಸ್ತವಾದ ಧನಗಳಿಗೂ ಪ್ರಭುವಾದವನೂ, ತಡೆಗಟ್ಟುವ ಮತ್ತು ಯುದ್ಧವನ್ನು ನಿರ್ಮಿಸುವ ಈ ಶತ್ರುವಿಗೆ ಅಪಜಯವನ್ನುಂಟುಮಾಡುವವನೂ ಆದ ನಿನ್ನನ್ನು ಸ್ತುತಿಸುತ್ತೇವೆ. ನಮಗೆ ಕ್ಷಿಪ್ರವಾಗಿ ಧನವನ್ನು ಕೊಡು.

## English Translation.

(We praise you), the lord of all riches, the subduer of this obstructor waging (attacks),—speedily give us abundant (wealth).

॥ ಸಂಹಿತಾಪಾಠಃ ॥

ಮಹಃ ಸು ವೋ ಅರಮಿಷೇ ಸ್ತವಾಮಹೇ ಮೀಳ್ಹುಷೇ ಅರಂಗಮಾಯ ಜಗ್ಮಯೇ ।
ಯಜ್ಞೇಭಿರ್ಗೀರ್ಭಿರ್ವಿಶ್ವಮನುಷಾಂ ಮರುತಾಮಿಯಕ್ಷಸಿ ಗಾಯೇ ತ್ವಾ ನಮಸಾ ಗಿರಾ ॥ ೧೭ ॥

॥ ಪದಪಾಠಃ ॥

ಮಹಃ । ಸು । ವಃ । ಅರಂ । ಇಷೇ । ಸ್ತವಾಮಹೇ । ಮೀಳ್ಹುಷೇ । ಅರಂऽಗಮಾಯ । ಜಗ್ಮಯೇ । ಯಜ್ಞೇಭಿಃ । ಗೀಃऽಭಿಃ । ವಿಶ್ವऽಮನುಷಾಂ । ಮರುತಾಂ । ಇಯಕ್ಷಸಿ । ಗಾಯೇ । ತ್ವಾ । ನಮಸಾ । ಗಿರಾ ॥ ೧೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಮಹೋ ಮಹತೋ ವಃ । ತವೇತ್ಯರ್ಥಃ ॥ ವ್ಯತ್ಯಯೇನ ಬಹುವಚನಂ ॥ ಅರಂ ಗಮನಮಸ್ಮದ್ವಿಷಯಮಿಚ್ಛಾಮಿ ॥ ಅರ್ತೇರರಮಿತಿ ರೂಪಂ ॥ ತದರ್ಥಂ ಮೀಳ್ಹುಷೇ ಸೇಕ್ತ್ರೇऽರಂಗಮಾಯ ಸಂಪೂರ್ಣಗಮನಾಯ ಜಗ್ಮಯೇ ಗಮನಶೀಲಾಯ ಯಜ್ಞಂ ಪ್ರತಿ ಏವಂಭೂತಾಯ ದೇವಾಯ ಸ್ತವಾಮಹೇ । ತ್ವಾಂ ಸ್ತುಮ ಇತ್ಯರ್ಥಃ । ಕೇನ ಸಾಧನೇನೇತಿ ತದುಚ್ಯತೇ । ಯಜ್ಞೇಭಿರ್ಯಜನಸಾಧನೈರ್ಹವಿರ್ಭಿರ್ಯಜ್ಞೈರೇವ ವಾ ಗೀರ್ಭಿಃ ಸ್ತುತಿಭಿಃ । ಹೇ ದೇವ ವಿಶ್ವಮನುಷಾಂ ವಿಶ್ವೇಷಾಂ ಮನುಷ್ಯಾಣಾಂ ಯಷ್ಟವ್ಯಃ ಮಿಯಕ್ಷಸಿ । ಏತೈರಿಜ್ಯಸೇ । ಮರುತಾಂ ಸಂಬಂಧೀ ತ್ವಂ । ಕಿಂಚ ತ್ವಾ ತ್ವಾಂ ನಮಸಾ ನಮಸ್ಕಾರೇಣ ಗಿರಾ ಸ್ತುತ್ಯಾ ಚ ಗಾಯೇ । ಸ್ತುವೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಮಹಃ**—ಮಹಾತ್ಮನಾದ । **ವಃ**—ನಿನ್ನ । **ಅರಂ**—ಆಗಮನವನ್ನು । **ಸು ಇಷೇ**—ಅತಿಶಯವಾಗಿ ಇಚ್ಛಿಸುತ್ತೇನೆ । **ಮೀಳ್ಹುಷೇ**—ಇಷ್ಟಾರ್ಥಪ್ರದನಾದ ಇಂದ್ರನನ್ನುದ್ದೇಶಿಸಿ । **ಅರಂಗಮಾಯ**—ಉತ್ತಮವಾದ ಆಗಮನಕ್ಕೂ । **ಜಗ್ಮಯೇ**—ಯಜ್ಞಗಮನಕ್ಕೂ ಸಹ । **ಯಜ್ಞೇಭಿಃ**—ಯಜ್ಞಕರ್ಮಗಳಿಂದಲೂ । **ಗೀರ್ಭಿಃ**—ಸ್ತುತಿಗಳಿಂದಲೂ । **ಸ್ತವಾಮಹೇ**—ಸ್ತುತಿಸುತ್ತೇವೆ । (ಎಲೈ ಇಂದ್ರನೇ) **ಮರುತಾಂ**—ಮರುತ್ಸಖನಾದ ನೀನು । **ವಿಶ್ವಮನುಷಾಂ**—ಸಕಲ ಮಾನವರಿಗೂ । **ಇಯಕ್ಷಸಿ**—ಪೂಜ್ಯನಾಗಿದ್ದೀಯೆ । **ತ್ವಾ**—ನಿನ್ನನ್ನು । **ನಮಸಾ**—ನಮಸ್ಕಾರದಿಂದಲೂ । ಗಿರಾ-ಸ್ತುತಿವಾಕ್ಯದಿಂದಲೂ । **ಗಾಯೇ**—ಗಾನದಿಂದಲೂ ಪ್ರಶಂಸಿಸುತ್ತೇನೆ.

|| ಭಾವಾರ್ಥ ||

ಎಲೈ ಇಂದ್ರನೇ, ಮಹಾತ್ಮನಾದ ನಿನ್ನ ಆಗಮನವನ್ನು ನಾನು ಅತಿಶಯವಾಗಿ ಇಚ್ಛಿಸುತ್ತೇನೆ. ಇಷ್ಟಾರ್ಥಪ್ರದನಾದ ಇಂದ್ರನನ್ನುದ್ದೇಶಿಸಿ ಅವನ ಉತ್ತಮವಾದ ಆಗಮನಕ್ಕೂ, ಯಜ್ಞಾಗಮನಕ್ಕೂ ಸಹ ಯಜ್ಞಕರ್ಮಗಳಿಂದಲೂ, ಸ್ತುತಿಗಳಿಂದಲೂ ಪ್ರಶಂಸಿಸುತ್ತೇನೆ ಎಲೈ ಇಂದ್ರನೇ, ಮರುತ್ಸಖನಾದ ನೀನು ಸಕಲ ಮಾನವರಿಗೂ ಪೂಜ್ಯನಾಗಿದ್ದೀಯೆ. ನಿನ್ನನ್ನು ನಮಸ್ಕಾರದಿಂದಲೂ, ಸ್ತುತಿವಾಕ್ಯದಿಂದಲೂ, ಗಾನರೂಪದಿಂದಲೂ ಪ್ರಶಂಸಿಸುತ್ತೇನೆ.

## English Translation.

I desire the coming of you, the mighty one; we give praise with oblations and hymns to the showerer who hastens readily (to the sacrifice); associated with the Maruts, you are worshipped of all men; I glorify you with adoration and praise.

|| ಸಂಹಿತಾಪಾಠಃ ||

ಯೇ ಪಾತಯಂತೇ ಅಜ್ಮಭಿರ್ಗಿರೀಣಾಂ ಸ್ನುಭಿರೇಷಾಂ ।
ಯಜ್ಞಂ ಮಹಿಷ್ವಣೀನಾಂ ಸುಮ್ನಂ ತುವಿಷ್ವಣೀನಾಂ ಪ್ರಾಧ್ವರೇ ॥ ೧೮ ॥

|| ಪದಪಾಠಃ ||

ಯೇ । ಪಾತಯಂತೇ । ಅಜ್ಮಽಭಿಃ । ಗಿರೀಣಾಂ । ಸ್ನುಽಭಿಃ । ಏಷಾಂ ।
ಯಜ್ಞಂ । ಮಹಿಽಸ್ವನೀನಾಂ । ಸುಮ್ನಂ । ತುವಿಽಸ್ವನೀನಾಂ । ಪ್ರ । ಅಧ್ವರೇ । ೧೮ ॥

|| ಸಾಯಣಭಾಷ್ಯಂ ||

ಯೇ ಮರುತೋ ಗಿರೀಣಾಂ ಮೇಘಾನಾಂ ಸ್ನುಭಿಃ ಪ್ರಸ್ನವದ್ಭಿರಜ್ಮಭಿರ್ಬಲೈರ್ಬಲಕರೈರುದಕೈಃ ಸಹ ಪಾತಯಂತೇ ಪತಂತಿ ಗಚ್ಛಂತಿ ಏಷಾಂ ಮರುತಾಂ ಮಹಿಷ್ವಣೀನಾಂ ಪ್ರಭೂತಧ್ವನೀನಾಂ ಯಜ್ಞಂ ಕುರ್ಮ ಇತಿ ಶೇಷಃ । ಕೃತ್ವಾ ಚ ತುವಿಷ್ವಣೀನಾಂ ಬಹುಧ್ವನೀನಾಂ ಸುಮ್ನಂ ಸುಖಂ ತೈಃ ಕೃತಮಧ್ವರೇ ಯಜ್ಞೇ ಪ್ರ ಪ್ರಾಪ್ನುಯಾಮ । ಅಥವಾ । ಚತುರ್ಥ್ಯರ್ಥೇ ಷಷ್ಠೀ । ಪ್ರಭೂತಸ್ವನೇಭ್ಯಃ ಸುಮ್ನಮುಕ್ತ-ಲಕ್ಷಣಂ ಹವಿಃ ಪ್ರ ಪ್ರಾಪ್ನುಯಾಮಾಧ್ವರೇ ಯಜ್ಞೇ ॥

|| ಪ್ರತಿಪದಾರ್ಥ ||

**ಯೇ**—ಯಾವ ಮರುತ್ತುಗಳು । **ಗಿರೀಣಾಂ**—ಮೇಘಗಳ । **ಸ್ನುಭಿಃ**—ಉನ್ನತಪ್ರದೇಶದಲ್ಲಿರುವುವೂ । **ಅಜ್ಮಭಿಃ**—ಶಕ್ತಿಕರವಾದವೂ ಆದ ಉದಕಗಳೊಡನೆ । **ಪಾತಯಂತೇ**—ಸಂಚರಿಸುವರೋ । **ಏಷಾಂ**—

ಅಂತಹ । **ಮಹಿಷ್ವಣೀನಾಂ**—ಪ್ರಭೂತವಾದ ಧ್ವನಿಗಳುಳ್ಳ ಮರುತ್ತುಗಳನ್ನುದ್ದೇಶಿಸಿ । **ಯಜ್ಞಂ**—ಯಜ್ಞವನ್ನು ನಿರ್ವಹಿಸುತ್ತೇವೆ । **ತುವಿಷ್ವಣೀನಾಂ**—ಅಧಿಕವಾದ ಧ್ವನಿಗಳುಳ್ಳ ಆ ಮರುತ್ತುಗಳಿಂದ ದತ್ತವಾದ । **ಸುಮ್ನಂ**—ಸುಖವನ್ನು । **ಅಧ್ವರೇ**—ಯಜ್ಞದಲ್ಲಿ । **ಪ್ರ**—ನಾವು ಹೊಂದುವಂತಾಗಲಿ.

॥ ಭಾವಾರ್ಥ ॥

ಯಾವ ಮರುತ್ತುಗಳು ಮೇಘಗಳ ಉನ್ನತಪ್ರದೇಶಗಳಲ್ಲಿರುವುವೂ, ಶಕ್ತಿಕರವಾದವೂ ಆದ ಉದಕಗಳೊಡನೆ ಸಂಚರಿಸುವರೋ ಅಂತಹ ಪ್ರಭೂತವಾದ ಧ್ವನಿಗಳುಳ್ಳ ಮರುತ್ತುಗಳನ್ನುದ್ದೇಶಿಸಿ ಯಜ್ಞವನ್ನು ನಿರ್ವಹಿಸುತ್ತೇವೆ. ಅಧಿಕವಾದ ಧ್ವನಿಗಳುಳ್ಳ ಆ ಮರುತ್ತುಗಳಿಂದ ದತ್ತವಾದ ಸುಖವನ್ನು ನಾವು ಯಜ್ಞದಲ್ಲಿ ಹೊಂದುವಂತಾಗಲಿ.

## English Translation.

(We present) the oblation to those loud-sounding (Maruts) who rush along with the streaming trains of the clouds; may we obtain in the sacrifice the happiness which those deep-roarers bestow.

॥ ಸಂಹಿತಾಪಾಠಃ ॥

ಪ್ರಭಂಗಂ ದುರ್ಮತೀನಾಮಿಂದ್ರ ಶವಿಷ್ಠಾ ಭರ ।
ರಯಿಮಸ್ಮಭ್ಯಂ ಯುಜ್ಯಂ ಚೋದಯನ್ಮತೇ ಜ್ಯೇಷ್ಠಂ ಚೋದಯನ್ಮತೇ ॥

॥ ಪದಪಾಠಃ ॥

ಪ್ರಽಭಂಗಂ । ದುಃಽಮತೀನಾಂ । ಇಂದ್ರ । ಶವಿಷ್ಠ । ಆ । ಭರ ।
ರಯಿಂ । ಅಸ್ಮಭ್ಯಂ । ಯುಜ್ಯಂ । ಚೋದಯತ್ಽಮತೇ । ಜ್ಯೇಷ್ಠಂ । ಚೋದಯತ್ಽಮತೇ ॥ ೧೯ ॥

॥ ಸಾಯಣಭಾಷ್ಯಂ ॥

**ದುರ್ಮತೀನಾಂ ದುಷ್ಟಮನಸ್ಕಾನಾಂ ವೃತ್ರಾದೀನಾಂ ಪ್ರಭಂಗಂ ಪ್ರಕರ್ಷೇಣ ಭಂಜಕಂ ತ್ವಾಂ ಯಾಚಾಮಹ ಇತಿ ಶೇಷಃ । ಹೇ ಇಂದ್ರ ಶವಿಷ್ಠಾತಿಶಯೇನ ಬಲವನ್ ಸ್ತುತಸ್ತ್ವಮಸ್ಮಭ್ಯಂ ರಯಿಂ ಧನಂ ಯುಜ್ಯಂ ಯೋಗ್ಯಮಸ್ಮಾಕಮುಚಿತಂ ಧನಮಾ ಭರ । ಆಹರ । ಹೇ ಚೋದಯನ್ಮತೇ । ಚೋದಯಂತೀ ಧನಂ ಪ್ರೇರಯಂತೀ ಮತಿರ್ಯಸ್ಯ ಸ ತಥೋಕ್ತಃ । ಹೇ ತಾದೃಶ ದೇವ । ಕಿಂಚ ಹೇ ಚೋದಯನ್ಮತ ಉಕ್ತಾರ್ಥ ಜ್ಯೇಷ್ಠಂ ಧನಮಾ ಭರ ॥**

॥ ಪ್ರತಿಪದಾರ್ಥ ॥

**ದುರ್ಮತೀನಾಂ**—ದುಷ್ಟಬುದ್ಧಿಯುಳ್ಳ ಶತ್ರುಗಳ । **ಪ್ರಭಂಗಂ**—ನಾಶಕನಾದ ಇಂದ್ರನನ್ನು ನಾನು ಯಾಚಿಸುತ್ತೇನೆ । **ಶವಿಷ್ಠ**—ಅತ್ಯತಿಶಯವಾದ ಶಕ್ತಿಯುಳ್ಳ । **ಇಂದ್ರ**—ಎಲೈ ಇಂದ್ರನೇ । **ಅಸ್ಮಭ್ಯಂ**—

ನಮಗೆ | **ಯೊಜ್ಯಂ**—ಉಚಿತವಾದ | **ರಯಿಂ**—ಧನವನ್ನು | **ಆ ಭರ**—ತಂದೊದಗಿಸು | **ಚೋದಯನ್ಮತೇ**—ಧನವನ್ನು ಪ್ರೇರಿಸುವ ಬುದ್ಧಿಯುಳ್ಳ ಎಲೈ ಇಂದ್ರನೇ | **ಜ್ಯೇಷ್ಠಂ**—ಉತ್ತಮವಾದ ಧನವನ್ನು ಒದಗಿಸು | **ಚೋದಯನ್ಮತೇ**—ನಮಗೆ ಒಳ್ಳೆಯದನ್ನು ಮಾಡುವ ಬುದ್ಧಿಯುಳ್ಳ ಎಲೈ ಇಂದ್ರನೇ (ನಮಗೆ ಧನವನ್ನು ಒದಗಿಸು).

|| ಭಾವಾರ್ಥ ||

ದುಷ್ಟಬುದ್ಧಿಯುಳ್ಳ ಶತ್ರುಗಳ ನಾಶಕನಾದ ಇಂದ್ರನನ್ನು ನಾನು ಯಾಚಿಸುತ್ತೇನೆ. ಅತ್ಯತಿಶಯವಾದ ಶಕ್ತಿಯುಳ್ಳ ಎಲೈ ಇಂದ್ರನೇ, ನಮಗೆ ಉಚಿತವಾದ ಧನವನ್ನು ತಂದೊದಗಿಸು. ಧನವನ್ನು ಪ್ರೇರಿಸಿ ನಮಗೆ ಒಳ್ಳೆಯದನ್ನು ಮಾಡುವ ಬುದ್ಧಿಯುಳ್ಳ ಎಲೈ ಇಂದ್ರನೇ, ನಮಗೆ ಅತ್ಯುತ್ತಮವಾದ ಧನವನ್ನು ಒದಗಿಸು.

## English Translation.

(We worship) the crusher of the malevolent; most powerful Indra, bring to us suitable wealth, O inspirer,—(bring) most excellent (wealth), O inspirer.

|| ಸಂಹಿತಾಪಾಠಃ ||

ಸನಿತಃ ಸುಸನಿತರುಗ್ರ ಚಿತ್ರ ಚೇತಿಷ್ಠ ಸೂನೃತ |
ಪ್ರಾಸಹಾ ಸಮ್ರಾಟ್ ಸಹುರಿಂ ಸಹಂತಂ ಭುಜ್ಯುಂ ವಾಜೇಷು ಪೂರ್ವ್ಯಂ ||

|| ಪದಪಾಠಃ ||

ಸನಿತರಿತಿ | ಸುಽಸನಿತಃ | ಉಗ್ರ | ಚಿತ್ರ | ಚೇತಿಷ್ಠ | ಸೂನೃತ |
ಪ್ರಽಸಹಾ | ಸಂಽರಾಟ್ | ಸಹುರಿಂ | ಸಹಂತಂ | ಭುಜ್ಯುಂ | ವಾಜೇಷು | ಪೂರ್ವ್ಯಂ || ೨೦ ||

|| ಸಾಯಣಭಾಷ್ಯಂ ||

ಹೇ ಸನಿತಃ ಸಂಭಕ್ತರ್ದಾತರ್ವೋಗ್ರೋದ್ಗೂರ್ಣಬಲ ಚಿತ್ರ ಚಾಯನೀಯ ಚೇತಿಷ್ಠಾತ್ಯಂತಂ ಚೇತಯಿತಃ ಸೂನೃತ ಸುಸತ್ಯ ಪ್ರಾಸಹಾ ಪ್ರಸಹ್ಯ ಹೇ ಸಮ್ರಾಟ್ ಸರ್ವಸ್ಯ ಸ್ವಾಮಿನ್ ಸಮ್ಯಗ್ರಾಜಮಾನ ವಾ ತ್ವಂ ಸಹುರಿಂ ಸಹನಶೀಲಂ ಭುಜ್ಯುಂ ಭೋಜಯಿತಾರಂ ಪೂರ್ವ್ಯಂ ಪ್ರವೃದ್ಧಂ | ಮುಖ್ಯಮಿತ್ಯರ್ಥಃ | ಈದೃಶಂ ಧನಂ ವಾಜೇಷು ಸಂಗ್ರಾಮೇಷ್ವಾಭರೇತಿ ಶೇಷಃ ||

|| ಪ್ರತಿಪದಾರ್ಥ ||

**ಸನಿತಃ**—ಧನದಾತೃವೂ | **ಸುಸನಿತಃ**—ಅತ್ಯುತ್ತಮವಾದ ದಾತೃವೂ | **ಉಗ್ರ**—ಅತ್ಯಧಿಕವಾದ ಬಲವುಳ್ಳವನೂ | **ಚಿತ್ರ**—ಆಕರ್ಷಕಸ್ವರೂಪನೂ | **ಚೇತಿಷ್ಠ**—ಚೈತನ್ಯದಾಯಕನೂ | **ಸೂನೃತ**—ಸತ್ಯ ಪ್ರೇರಕನೂ | **ಪ್ರಾಸಹಾ**—ಶತ್ರುಶಕ್ತಿಯನ್ನು ತಡೆಯಬಲ್ಲವನೂ | **ಸಮ್ರಾಟ್**—ಸಾರ್ವಭೌಮನೂ ಆದ ಎಲೈ

ಇಂದ್ರನೇ । **ಸಹುರಿಂ**—ಸಹನಶೀಲವಾದುದೂ । **ಸಹಂತಂ**—ಶತ್ರುಗಳನ್ನು ತಡೆಗಟ್ಟಬಲ್ಲುದೂ । **ಭುಜ್ಯಂ**—ಭೋಗಕ್ಕೆ ಯೋಗ್ಯವಾದುದೂ । **ಪೂರ್ವ್ಯಂ**—ಅತಿ ಮುಖ್ಯವಾದುದೂ ಆದ ಧನವನ್ನು । **ವಾಜೇಷು**—ಸಂಗ್ರಾಮಗಳಲ್ಲಿ ನಮಗೆ ಒದಗಿಸು

॥ ಭಾವಾರ್ಥ ॥

ಧನದಾತೃವೂ, ಅತ್ಯುತ್ತಮವಾದ ದಾತೃವೂ, ಚೈತನ್ಯದಾಯಕನೂ, ಸತ್ಯಪ್ರೇರಕನೂ, ಶತ್ರುಶಕ್ತಿಯನ್ನು ತಡೆಯುಬಲ್ಲವನೂ ಆದ ಎಲೈ ಇಂದ್ರನೇ, ಸಹನಶೀಲವಾದುದೂ, ಶತ್ರುಗಳನ್ನು ತಡೆಗಟ್ಟಬಲ್ಲುದೂ, ಭೋಗಕ್ಕೆ ಯೋಗ್ಯವಾದುದೂ, ಅತಿಮುಖ್ಯವಾದುದೂ ಆದ ಧನವನ್ನು ಸಂಗ್ರಾಮಗಳಲ್ಲಿ ನಮಗೆ ಒದಗಿಸು.

## English Translation.

O bountiful, most bountiful, mighty, wonderful, best giver of knowledge and supremeley truthful, by your prowess, universal ruler, (bring to us) in conflicts ample wealth, overpowering those who attack us and causing enjoyment.

॥ ಸಂಹಿತಾಪಾಠಃ ॥

ಆ ಸ ಏತು ಯ ಈವದಾঁ ಅದೇವಃ ಪೂರ್ತಮಾದದೇ ।
ಯಥಾ ಚಿದ್ವಶೋ ಅಶ್ವ್ಯಃ ಪೃಥುಶ್ರವಸಿ ಕಾನೀತೇೇ೭ಸ್ಯಾ ವ್ಯುಷ್ಯಾದದೇ ॥

॥ ಪದಪಾಠಃ ॥

ಆ । ಸಃ । ಏತು । ಯಃ । ಈವತ್ । ಆ । ಅದೇವಃ । ಪೂರ್ತಂ । ಆऽದದೇ ।
ಯಥಾ । ಚಿತ್ । ವಶಃ । ಅಶ್ವ್ಯಃ । ಪೃಥುऽಶ್ರವಸಿ । ಕಾನೀತೇ । ಅಸ್ಯಾಃ । ವಿऽಉಷಿ । ಆऽದದೇ ॥೨೧॥

॥ ಸಾಯಣಭಾಷ್ಯಂ ॥

ಅತ್ರ ಶೌನಕಃ । ವಶಾಯಾಶ್ವ್ಯಾಯ ಯತ್ಪ್ರಾದಾತ್ಕಾನೀತಸ್ತು ಪೃಥುಶ್ರವಾಃ । ತದತ್ರ ಸ್ತೂಯತೇ ದಾನಮಾ ಸ ಏತ್ವೇವಮಾದಿಭಿಃ । ಬೃ. ೬-೮೮೭ ॥ ಏತು ಆಗಚ್ಛತು ಸ ಯೋऽದೇವೋ ದೇವಾದನ್ಯೋ ಮನುಷ್ಯೋ ವಶ ಈವದ್ಗಮನವದ್ಗವಾದಿಲಕ್ಷಣಂ ಪೂರ್ತಂ ಪೂರ್ಣಮಾದದೇ ಆದತ್ತೇ । ಸ್ವೀಕೃತವಾನಿತ್ಯರ್ಥಃ । ದೇವಶ್ಚೇನ್ನಾಯಯಾಪ್ಯಾಗಂತುಮರ್ಹತಿ । ಅತಃ ಪ್ರಕಾಶೇನೈವಾಗಚ್ಛತ್ವಿತ್ಯರ್ಥಃ । ತಥಮಸ್ಯ ಧನಾವಾಪ್ತಿಪ್ರಸಂಗ ಆಗಮನಪ್ರಸಂಗಶ್ಚೇತಿ ತದುಚ್ಯತೇ । ಯಥಾ ಚಿತ್ । ಚಿದಿತಿ ಪೂರಣಃ । ಯೇನ ಕಾರಣೇನ ಯಸ್ಮಾದ್ವಾ ವಶ ಏತತ್ಸಂಜ್ಞಕೋऽಶ್ವ್ಯೋऽಶ್ವಪುತ್ರಃ ಪೃಥುಶ್ರವಸ್ಯೇತನ್ನಾಮಕೇ ರಾಜ್ಞಿ ಕಾನೀತೇ ಕನೀತಪುತ್ರೇ ಕನ್ಯಾಯಾಃ ಪುತ್ರೇऽಸ್ಯಾ ಉಷಸೋ ವ್ಯುಷಿ ವ್ಯುಷ್ಟಾವಾದದೇ ಆದತ್ತೇ ತೇನ ಕಾರಣೇನ ತಸ್ಮಾದ್ವಾ ಕಾರಣಾದಾಯಾತ್ವಿತಿ । ಏವಮಸ್ಯೋ ಬಂಧುವರ್ಗೋ ವಾ ಬ್ರೂತೇ ॥

॥ ಪ್ರತಿಪದಾರ್ಥ ॥

**ಅದೇವಃ**—ದೇವತೆಗಳ ಗುಂಪಿಗೆ ಸೇರದೆ ಕೇವಲ ಮಾನವನಾದರೂ । **ಯಃ**-ಯಾವ ವಶನು । **ಈವತ್**-ಗವಾದಿರೂಪವಾದುದೂ । **ಪೂರ್ತಂ**—ಪೂರ್ಣವಾದುದೂ ಆದ ಈ ದಾನವನ್ನು । **ಆದದೇ**—ಸ್ವೀಕರಿಸುವನೋ । **ಸಃ**—ಅದೇ ವಶನು । **ಏತು**—ಈ ದಾನವನ್ನು ಸ್ವೀಕರಿಸಲು ಬರಲಿ । **ಅಸ್ಯಾಃ ವ್ಯುಷಿ**—ಈ ಉಷಸ್ಸಿನ ಆವಿರ್ಭಾವಕಾಲದಲ್ಲೇ । **ಕಾನೀತೇ**—ಕನೀತಪುತ್ರನಾದ । **ಪೃಥುಶ್ರವಸಿ**—ಪೃಥುಶ್ರವಸ್ಸೆಂಬ ರಾಜನಿಂದ । **ಅಶ್ವ್ಯಃ**—ಅಶ್ವಪುತ್ರನಾದ । **ವಶಃ**—ವಶನು । **ಯಥಾ ಚಿತ್**—ಯಾವ ಪ್ರಕಾರ । **ಆದದೇ**—ದಾನವನ್ನು ಸ್ವೀಕರಿಸುವನೋ ಆ ರೀತಿ ಇಲ್ಲಿಗೆ ಬರಲಿ.

॥ ಭಾವಾರ್ಥ ॥

ದೇವತೆಗಳ ಗುಂಪಿಗೆ ಸೇರದೆ ಕೇವಲ ಮಾನವನಾದರೂ ಸಹ ಯಾವ ವಶನು ಗವಾದಿರೂಪವಾದುದೂ, ಪೂರ್ಣವಾದುದೂ ಆದ ಈ ದಾನವನ್ನು ಸ್ವೀಕರಿಸಲು ಅರ್ಹನಾಗಿರುವನೋ ಅದೇ ವಶನು ಈ ದಾನವನ್ನು ಸ್ವೀಕರಿಸಲು ಬರಲಿ. ಈ ಉಷಸ್ಸಿನ ಆವಿರ್ಭಾವಕಾಲದಲ್ಲೇ ಕನೀತಪುತ್ರನಾದ ಪೃಥುಶ್ರವಸ್ಸೆಂಬ ರಾಜನಿಂದ ಅಶ್ವಪುತ್ರನಾದ ವಶನು ಯಾವ ಪ್ರಕಾರ ದಾನವನ್ನು ಸ್ವೀಕರಿಸುವನೋ ಆ ರೀತಿ ಇಲ್ಲಿಗೆ ಬರಲಿ.

## English Translation.

Let him draw near, who though not a god, would receive this complete living gift,—since Vasha, the son of Ashwa, receives it at the dawn of this (morning) at the hands of Prithushravas, the son of Kanita.

॥ ಸಂಹಿತಾಪಾಠಃ ॥

ಷಷ್ಟಿಂ ಸಹಸ್ರಾಶ್ವ್ಯಸ್ಯಾಯುತಾಸನಮುಷ್ಟ್ರಾನಾಂ ವಿಂಶತಿಂ ಶತಾ ।
ದಶ ಶ್ಯಾವೀನಾಂ ಶತಾ ದಶ ತ್ರ್ಯರುಷೀಣಾಂ ದಶ ಗವಾಂ ಸಹಸ್ರಾ ॥ ೨೨ ॥

॥ ಪದಪಾಠಃ ॥

ಷಷ್ಟಿಂ । ಸಹಸ್ರಾ । ಅಶ್ವ್ಯಸ್ಯ । ಅಯುತಾ । ಅಸನಂ । ಉಷ್ಟ್ರಾನಾಂ । ವಿಂಶತಿಂ । ಶತಾ ।
ದಶ । ಶ್ಯಾವೀನಾಂ । ಶತಾ । ದಶ । ತ್ರಿಽಅರುಷೀಣಾಂ । ದಶ । ಗವಾಂ । ಸಹಸ್ರಾ ॥ ೨೨ ॥

॥ ಸಾಯಣಭಾಷ್ಯಂ ॥

ಸ ವಶ ಆಗತ್ಯ ಬ್ರೂತೇ । ಅಶ್ವ್ಯಸ್ಯಾಶ್ವಸಂಬಂಧಿನಃ ಷಷ್ಟಿಂ ಸಹಸ್ರಾ ಸಹಸ್ರಾಣ್ಯಯುತಾಯುತಾನಿ ಚಾಸನಂ । ಅಭಜಂ । ಉಷ್ಟ್ರಾಣಾಂ ವಿಂಶತಿಂ ಶತಾ ಶತಾನಿ ಚಾಸನಂ । ಶ್ಯಾವೀನಾಂ ಶ್ಯಾವವರ್ಣಾನಾಂ ವಡವಾನಾಂ ದಶ ಶತಾ ಶತಾನಿ ಚಾಸನಂ । ತ್ರ್ಯರುಷೀಣಾಂ ತ್ರೀಣ್ಯರೋಚಮಾನಾನಿ ಶುಭ್ರಾಣಿ ಕಕುಪ್ಪೃಷ್ಠಪಾರ್ಶ್ವಾದಿಸ್ಥಾನಾನಿ ಯಾಸಾಂ ತಾದೃಶೀನಾಂ ಗವಾಂ ದಶ ಸಹಸ್ರಾ ಸಹಸ್ರಾಣ್ಯಭಜಂ ॥

॥ ಪ್ರತಿಪದಾರ್ಥ ॥

**ಷಷ್ಟಿಂ ಸಹಸ್ರಾ**—ಅರವತ್ತುಸಾವಿರ ಸಂಖ್ಯೆಯುಳ್ಳವೂ । **ಅಯುತಾ**—ಹತ್ತು ಸಹಸ್ರಸಂಖ್ಯೆಯುಳ್ಳವೂ ಆದ । **ಅಶ್ವ್ಯಸ್ಯ**—ಅಶ್ವಗಳ ಗುಂಪುಗಳನ್ನು । **ಅಸನಂ**—ನಾನು ಪಡೆದೆನು । **ವಿಂಶತಿಂ ಶತಾ**—ಇಪ್ಪತ್ತು ಸಹಸ್ರಸಂಖ್ಯೆಯುಳ್ಳ । **ಉಷ್ಟ್ರಾಣಾಂ**—ಒಂಟೆಗಳ ಗುಂಪುಗಳನ್ನೂ ಪಡೆದೆನು । **ದಶ ಶತಾ**—ಸಾವಿರಸಂಖ್ಯೆಯುಳ್ಳ । **ಶ್ಯಾವೀನಾಂ**—ಕಂದುಬಣ್ಣದ ಅಶ್ವಗಳನ್ನೂ ಪಡೆದೆನು । **ದಶ ದಶ ಸಹಸ್ರಾ**—ಹತ್ತುಸಾವಿರದ ಹತ್ತರಷ್ಟು ಸಂಖ್ಯೆಯಿಂದ । **ತ್ರ್ಯರುಷೀಣಾಂ**—ಮೂರು ವಿಧವಾದ ಉತ್ತಮ ಲಕ್ಷಣಗಳುಳ್ಳ । **ಗವಾಂ**—ಗೋವುಗಳ ಗುಂಪನ್ನು ಪಡೆದೆನು.

॥ ಭಾವಾರ್ಥ ॥

ಅರವತ್ತುಸಾವಿರ ಸಂಖ್ಯೆಯುಳ್ಳವೂ, ಹತ್ತುಸಹಸ್ರ ಸಂಖ್ಯೆಯುಳ್ಳವೂ ಆದ ಅಶ್ವಗಳ ಗುಂಪನ್ನು ನಾನು ಪಡೆದೆನು. ಇಪ್ಪತ್ತು ಸಹಸ್ರಸಂಖ್ಯೆಯುಳ್ಳ ಒಂಟೆಗಳ ಗುಂಪುಗಳನ್ನೂ ಪಡೆದೆನು. ಸಾವಿರಸಂಖ್ಯೆಯುಳ್ಳ ಕಂದು ಬಣ್ಣದ ಅಶ್ವಗಳನ್ನೂ ಪಡೆದೆನು. ಹತ್ತುಸಾವಿರದ ಹತ್ತರಷ್ಟು ಸಂಖ್ಯೆಯಿಂದ ಮೂರು ವಿಧವಾದ ಶುಭ್ರವೂ, ಉತ್ತಮವೂ ಆದ ಲಕ್ಷಣಗಳಿಂದ ಕೂಡಿದ ಗೋವುಗಳ ಗುಂಪನ್ನೂ ಪಡೆದೆನು.

## English Translation.

"I have received sixty thousand horses, and tens of thousands;—a score of hundreds of camels,—a thousand brown mares,—and ten times ten thousand cows with three red patches.

॥ ಸಂಹಿತಾಪಾಠಃ ॥

ದಶ ಶ್ಯಾವಾ ಋಧದ್ರಯೋ ವೀತವಾರಾಸ ಆಶವಃ ।
ಮಥ್ರಾ ನೇಮಿಂ ನಿ ವಾವೃತುಃ ॥ ೨೩ ॥

॥ ಪದಪಾಠಃ ॥

ದಶ । ಶ್ಯಾವಾಃ । ಋಧತ್ಽರಯಃ । ವೀತಽವಾರಾಸಃ । ಆಶವಃ ।
ಮಥ್ರಾಃ । ನೇಮಿಂ । ನಿ । ವವೃತುಃ ॥ ೨೩ ॥

॥ ಸಾಯಣಭಾಷ್ಯಂ ॥

ದಶ ದಶಸಂಖ್ಯಾಕಾಃ ಶ್ಯಾವಾಃ ಶ್ಯಾವವರ್ಣಾ ಆಶವೋಽಶ್ವಾ ನೇಮಿಂ ರಥನೇಮಿಂ ನಿ ವಾವೃತುಃ। ನಿವರ್ತಯಂತಿ । ರಥಂ ವಹಂತೀತ್ಯರ್ಥಃ । ಈದೃಶಾಸ್ತ ಋಧದ್ರಯಃ ಪ್ರವೃದ್ಧವೇಗಾ ವೀತವಾರಾಸಃ ಕ್ರಾಂತಬಲಾಃ ಪ್ರಾಪ್ತಬಲಾ ವಾಶವೋ ಮಥ್ರಾ ಮಥನಶೀಲಾಃ ॥

|| ಪ್ರತಿಪದಾರ್ಥ ||

**ಋಧದ್ರಯಃ**—ಪ್ರವೃದ್ಧವಾದ ವೇಗವುಳ್ಳವೂ | **ವೀತವಾರಾಸಃ**—ಪೂರ್ಣವಾದ ಬಲವುಳ್ಳವೂ | **ಮಥ್ರಾಃ**—ಶತ್ರುಬಲವನ್ನು ನಿಗ್ರಹಿಸುವುವೂ | **ಶ್ಯಾವಾಃ**—ಕಂದುಬಣ್ಣವುಳ್ಳವೂ ಆದ | **ದಶ ಆಶವಃ**—ಹತ್ತು ಅಶ್ವಗಳು | **ನೇಮಿಂ**—ರಥಚಕ್ರದ ನೇಮಿಯನ್ನು | **ನಿ ವಾವೃತುಃ**—ಸುತ್ತುವಂತೆ ಮಾಡುತ್ತವೆ.

|| ಭಾವಾರ್ಥ ||

ಪ್ರವೃದ್ಧವಾದ ವೇಗವುಳ್ಳವೂ, ಪೂರ್ಣವಾದ ಬಲವುಳ್ಳವೂ, ಶತ್ರುಬಲವನ್ನು ನಿಗ್ರಹಿಸುವುವೂ, ಕಂದು ಬಣ್ಣವುಳ್ಳವೂ ಆದ ಹತ್ತು ಅಶ್ವಗಳು ನನ್ನ ರಥವನ್ನು ವಹಿಸುತ್ತವೆ.

## English Translation.

"Ten brown horses bear along the wheel (of my chariot), of mature vigour, of complete power, and the trampling down obstacles.

|| ಸಂಹಿತಾಪಾಠಃ ||

ದಾನಾಸಃ ಪೃಥುಶ್ರವಸಃ ಕಾನೀತಸ್ಯ ಸುರಾಧಸಃ |
ರಥಂ ಹಿರಣ್ಯಯಂ ದದನ್ಮಂಹಿಷ್ಠಃ ಸೂರಿರಭೂದ್ವರ್ಷಿಷ್ಠಮಕೃತ ಶ್ರವಃ ||

|| ಪದಪಾಠಃ ||

**ದಾನಾಸಃ | ಪೃಥುऽಶ್ರವಸಃ | ಕಾನೀತಸ್ಯ | ಸುऽರಾಧಸಃ |**
**ರಥಂ | ಹಿರಣ್ಯಯಂ | ದದತ್ | ಮಂಹಿಷ್ಠಃ | ಸೂರಿಃ | ಅಭೂತ್ | ವರ್ಷಿಷ್ಠಂ | ಅಕೃತ | ಶ್ರವಃ ||೨೪||**

|| ಸಾಯಣಭಾಷ್ಯಂ ||

**ಪೂರ್ವಮಂತ್ರೈಃ ಪ್ರತಿಪಾದಿತಾನಿ ಧನಾನಿ ಬಂಧೂನಾಂ ಪಿತುರ್ವಾ ಪುರಸ್ತಾನ್ನಿರ್ದಿಶನ್ನಾಶಾಸ್ತೇ | ಪೃಥುಶ್ರವಸಃ ಕಾನೀತಸ್ಯ ಸುರಾಧಸಃ ಶೋಭನಧನಸ್ಯ | ಯತಸ್ತಸ್ಯ ಧನಂ ದಾನಾಯ ಕಲ್ಪಿತಂ ಅತಃ ಸ ಸುರಾಧಾಃ | ತಸ್ಯ ದಾನಾಸೋ ದಾನಾ ದತ್ತಾನಿ ಧನಾನೀಮಾನಿ | ಸ ಚ ಪೃಥುಶ್ರವಾಃ ಪೂರ್ವಮುಕ್ತಾನಿ ಹಿರಣ್ಯಯಂ ಹಿರಣ್ಮಯಂ ರಥಂ ಚ ದದತ್ ಪ್ರಯಚ್ಛನ್ ಮಂಹಿಷ್ಠೋऽತಿಶಯೇನ ದಾತಾ ಸೂರಿಃ ಸರ್ವಸ್ಯ ಪ್ರೇರಕಃ ಪ್ರಾಜ್ಞೋ ವಾಭೂತ್ | ಭವತಿ | ಭವತು ವಾ | ವರ್ಷಿಷ್ಠಮತಿಶಯೇನ ಪ್ರವೃದ್ಧಾಂ ಶ್ರವಃ ಕೀರ್ತಿಮಕೃತ | ಕರೋತಿ | ಕರೋತು ವಾ ||**

|| ಪ್ರತಿಪದಾರ್ಥ ||

(ಹಿಂದೆ ವರ್ಣಿತವಾದ ಗವಾದಿ ಸಂಪತ್ತುಗಳೆಲ್ಲವೂ) **ಸುರಾಧಸಃ**—ಉತ್ತಮವಾದ ಧನಸಂಪತ್ತುಳ್ಳವನೂ | **ಕಾನೀತಸ್ಯ**—ಕನೀತಪುತ್ರನೂ ಆದ | **ಪೃಥುಶ್ರವಸಃ**—ಪೃಥುಶ್ರವಸ್ಸೆಂಬ ರಾಜನಿಂದ ದತ್ತವಾದ | **ದಾನಾಸಃ**—

**ಉತ್ತಮವಾದ** ದಾನವಾಗಿವೆ । (ಅದೇ ರಾಜನು) **ಹಿರಣ್ಯಯಂ**—ಸುವರ್ಣನಿರ್ಮಿತವಾದ । **ರಥಂ**—ರಥವನ್ನು । **ದದತ್**—ಕೊಟ್ಟನು (ಆದುದರಿಂದ) । **ಮಂಹಿಷ್ಠಃ**—ಅತಿಶಯವಾದ ದಾತೃವೂ । **ಸೂರಿಃ**—ಸಕಲರಿಗೂ ಉತ್ತೇಜಕನೂ । **ಅಭೂತ್**—ಆದನು । **ವರ್ಷಿಷ್ಠಂ**—ಅತ್ಯಂತ ವಿಸ್ತೃತವಾಗಿ ಹರಡಿದ । **ಶ್ರವಃ**—ಕೀರ್ತಿಯನ್ನೂ । **ಅಕೃತ**—ಸಂಪಾದಿಸಿದ್ದಾನೆ

॥ ಭಾವಾರ್ಥ ॥

ಹಿಂದಿನ ಮಂತ್ರಗಳಲ್ಲಿ ವರ್ಣಿತವಾದ ಗವಾದಿಸಂಪತ್ತುಗಳೆಲ್ಲವೂ ಉತ್ತಮವಾದ ಧನಸಂಪತ್ತುಗಳವನೂ, **ಕನೀತ**ಪುತ್ರನೂ ಆದ ಪೃಥುಶ್ರವಸ್ಸೆಂಬ ರಾಜನಿಂದ ದತ್ತವಾದವು. ಅದೇ ರಾಜನು ಸುವರ್ಣನಿರ್ಮಿತವಾದ ರಥವನ್ನು **ಕೊಟ್ಟ**ನು. ಆದುದರಿಂದ ಅತಿಶಯವಾದ ದಾತೃವೂ ಸಕಲರಿಗೂ ಉತ್ತೇಜಕನೂ ಆದನು. ಅತ್ಯಂತ ವಿಸ್ತೃತವಾಗಿ **ಹರಡಿದ** ಕೀರ್ತಿಯನ್ನೂ ಸಂಪಾದಿಸಿದ್ದಾನೆ.

## English Translation.

"These are the gifts of the wealthy Prithushravas, the son of Kanita; he, bestowing a golden chariot, has proved himself most liberal and wise, he has won most abundant fame."

॥ ಸಂಹಿತಾಪಾಠಃ ॥

ಆ ನೋ ವಾಯೋ ಮಹೇ ತನೇ ಯಾಹಿ ಮಖಾಯ ಪಾಜಸೇ ।
ವಯಂ ಹಿ ತೇ ಚಕೃಮಾ ಭೂರಿ ದಾವನೇ ಸದ್ಯಶ್ಚಿನ್ಮಹಿ ದಾವನೇ ॥ ೨೫ ॥

॥ ಪದಪಾಠಃ ॥

ಆ । ನಃ । ವಾಯೋ ಇತಿ । ಮಹೇ । ತನೇ । ಯಾಹಿ । ಮಖಾಯ । ಪಾಜಸೇ ।
ವಯಂ । ಹಿ । ತೇ । ಚಕೃಮ । ಭೂರಿ । ದಾವನೇ । ಸದ್ಯಃ । ಚಿತ್ । ಮಹಿ । ದಾವನೇ ॥ ೨೫ ॥

॥ ಸಾಯಣಭಾಷ್ಯಂ ॥

**ಆ ನೋ ವಾಯವಿತ್ಯೇಷಾ ಪಂಚಮೇಽಹನಿ ಪ್ರಉಗಶಸ್ತ್ರೇ ವಾಯವ್ಯತೃಚೇ ತೃತೀಯಾ । ಆ ನೋ ವಾಯೋ ಮಹೇ ತನ ಇತ್ಯೇಕಾ ರಥೇನ ಪೃಥುಪಾಜಸಾ । ಆ. ೭-೧೨ । ಇತಿ ಹಿ ಸೂತ್ರಿತಂ ॥**

**ಹೇ ವಾಯೋ ತ್ವಂ ನೋಽಸ್ಮಾನ್ ಪ್ರತ್ಯಾಯಾಹಿ । ಆಗಚ್ಛ । ಕಿಮರ್ಥಂ । ಮಹೇ ಮಹತೇ ತನೇ ಧನಾಯ ಮಖಾಯ ಮಹನೀಯಾಯ ಪಾಜಸೇ ಬಲಾಯ ಚ । ಉಭಯಂ ಪ್ರದಾತುಮಿತ್ಯರ್ಥಃ । ಕಿಮತ್ರಾಸ್ತೀತಿ ಚೇತ್ ಉಚ್ಯತೇ । ವಯಂ ಹಿ ವಯಂ ಖಲು ತೇ ಭೂರಿ ದಾವನೇ ಪ್ರಭೂತಧನದಾತ್ರೇ**

**ಚಕೃಮ ಸ್ತುತಿಂ ಹವಿರ್ವಾ । ಸದ್ಯಶ್ಚಿತ್ತ್ರದಾನೀಮೇವ ಶೀಘ್ರಾಗಮನಾನಂತರಮೇವ ಚಕೃಮ ಮಹಿ ಮಹತೋ ಧನಸ್ಯ ದಾವನೇ ದಾತ್ರೇ ॥**

॥ ಪ್ರತಿಪದಾರ್ಥ ॥

**ವಾಯೋ**—ಎಲೈ ವಾಯುವೇ । **ಮಹೇ**—ಮಹತ್ತಾದ । **ತನೇ**—ಧನವನ್ನು ಕೊಡುವುದಕ್ಕೂ । **ಮಖಾಯ**—ಪೂಜ್ಯವಾದ । **ಪಾಜಸೇ**—ಶಕ್ತಿಯನ್ನು ಕೊಡುವುದಕ್ಕೂ । **ನಃ**—ನಮ್ಮಲ್ಲಿಗೆ । **ಆ ಯಾಹಿ**—ದಯಮಾಡು । **ವಯಂ ಹಿ**—ನಾವಾದರೋ । **ಭೂರಿ ದಾವನೇ**—ಅತ್ಯಧಿಕವಾಗಿ ದಾನಮಾಡತಕ್ಕ । **ತೇ**—ನಿನ್ನನ್ನುದ್ದೇಶಿಸಿ । **ಚಕೃಮ**—ಉತ್ತಮವಾದ ಸ್ತುತಿಯನ್ನು ನಿರ್ಮಿಸುತ್ತೇವೆ । **ಮಹಿ**—ಮಹತ್ತಾದ ಧನದ । **ದಾವನೇ**—ದಾತೃವಾದ ನಿನಗೆ । **ಸದ್ಯಶ್ಚಿತ್**—ನೀನು ಬಂದೊಡನೆಯೇ ಅದನ್ನು ಅರ್ಪಿಸುತ್ತೇವೆ.

॥ ಭಾವಾರ್ಥ ॥

ಎಲೈ ವಾಯುವೇ, ಮಹತ್ತಾದ ಧನವನ್ನು ಕೊಡುವುದಕ್ಕೂ, ಪೂಜ್ಯವಾದ ಶಕ್ತಿಯನ್ನು ಕೊಡುವುದಕ್ಕೂ ನಮ್ಮಲ್ಲಿಗೆ ದಯಮಾಡು. ನಾವಾದರೋ ಅತ್ಯಧಿಕವಾಗಿ ದಾನಮಾಡತಕ್ಕ ನಿನ್ನನ್ನುದ್ದೇಶಿಸಿ ಉತ್ತಮವಾದ ಸ್ತುತಿಯನ್ನು ನಿರ್ಮಿಸುತ್ತೇವೆ. ಮಹತ್ತಾದ ಧನದ ದಾತೃವಾದ ನಿನಗೆ ನೀನು ಬಂದೊಡನೆಯೇ ಅದನ್ನು ಅರ್ಪಿಸುತ್ತೇವೆ.

## English Translation.

Come to us, Vayu, to bestow great wealth and glorious strength; we have offered (libations) to you the giver of abundant (wealth), we have offered immediately to you the giver of gerat (gifts).

॥ ವಿಶೇಷವಿಷಯಗಳು ॥

**ಆ ನೋ ವಾಯೋ** ಎಂಬ ಈ ಋಕ್ಕನ್ನು ಯಾಗದ ಐದನೆಯ ದಿವಸ ಪ್ರಉಗಶಸ್ತ್ರಮಂತ್ರಗಳಲ್ಲಿ ವಾಯುವ್ಯ ತೃಚಮಂತ್ರಗಳಲ್ಲಿ (ಮೂರು ಋಕ್ಕುಗಳಲ್ಲಿ) ಮೂರನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಆ ನೋ ವಾಯೋ ಮಹೇ ತನ ಇತ್ಯೇತಾ ರಥೇನ ಪೃಥುಪಾಜಸಾ** ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಯೋ ಅಶ್ವೇಭಿರ್ವಹತೇ ವಸ್ತ ಉಸ್ರಾಸ್ತ್ರಿಃ ಸಪ್ತ ಸಪ್ತತೀನಾಂ ।
ಏಭಿಃ ಸೋಮೇಭಿಃ ಸೋಮಸುದ್ಭಿಃ ಸೋಮಪಾ ದಾನಾಯ ಶುಕ್ರಪೂ-
ತಪಾಃ ॥ ೨೬ ॥

॥ ಪದಪಾಠಃ ॥

**ಯಃ । ಅಶ್ವೇಭಿಃ । ವಹತೇ । ವಸ್ತೇ । ಉಸ್ರಾಃ । ತ್ರಿಃ । ಸಪ್ತ । ಸಪ್ತತೀನಾಂ ।**

**ಏಭಿಃ । ಸೋಮೇಭಿಃ । ಸೋಮಸುತ್ಽಭಿಃ । ಸೋಮಽಪಾಃ । ದಾನಾಯ । ಶುಕ್ರಪೂತಽಪಾಃ ॥ ೨೬ ॥**

॥ ಸಾಯಣಭಾಷ್ಯಂ ॥

ಯಃ ಪೃಥುಶ್ರವಾ ಅಶ್ವೇಭಿರಶ್ವೈರ್ವಹತೇ ಗೃಹಂ ವಸ್ತೇ ಚೋಸ್ರಾ ಗಾಃ । ತಾಭಿಶ್ಚ ಗಚ್ಛತೀತ್ಯರ್ಥಃ । ತ್ರಿಃ ಸಪ್ತೇತಿ ತಾಸಾಂ ಗವಾಂ ಸಂಖ್ಯೋಕ್ತಾ । ಸಾ ಸಂಖ್ಯಾ ವಿಶೇಷ್ಯತೇ । ಸಪ್ತತೀನಾಂ ತ್ರಿಃ ಸಪ್ತ । ಉಕ್ತಸಂಖ್ಯಾಕಾಭಿರ್ಗೋಭಿರಶ್ವೈಶ್ಚ ಯೋ ಗಚ್ಛತಿ ಸ ಪೃಥುಶ್ರವಾ ಏಭಿಃ ಸೋಮೇಭಿಃ ಸೋಮೈಃ ಸೋಮಸುದ್ಭಿಃ ಸೋಮಮಭಿಷುಣ್ವದ್ಭಿಶ್ಚ ಹೇ ಸೋಮಪಾಃ । ಸೋಮಸ್ಯ ಪಾತರಿತಿ ವಾಯೋಃ ಸಂಬೋಧನಂ । ಹೇ ಶುಕ್ರಪೂತಪಾ ದೀಪ್ತಪೂತಸ್ಯ ಚ ಸೋಮಸ್ಯ ಪಾತರ್ವಾಯೋ ದಾನಾಯ ತುಭ್ಯಂ ಸೋಮಂ ದಾತುಂ ಸೋಮೈರ್ಯುಕ್ತೋ ಭವತೀತಿ ಶೇಷಃ ॥

॥ ಪ್ರತಿಪದಾರ್ಥ ॥

**ಸೋಮಪಾಃ**— ಸೋಮವನ್ನು ಪಾನಮಾಡುವವನೂ । **ಶುಕ್ರಪೂತಪಾಃ**— ಶುದ್ಧವೂ ಪ್ರಕಾಶಯುಕ್ತವೂ ಆದ ಸೋಮವನ್ನು ಪಾನಮಾಡುವವನೂ ಆದ ಎಲೈ ವಾಯುವೇ । **ಯಃ**— ಯಾರು । **ಅಶ್ವೇಭಿಃ**— ಅಶ್ವಗಳಿಂದ । **ವಸ್ತೇ**— ಗೃಹಾಭಿಮುಖವಾಗಿ । **ವಹತೇ** — ವಹಿಸಲ್ಪಡುವನೋ ಮತ್ತು । **ಸಪ್ತತೀನಾಂ ತ್ರಿಃ ಸಪ್ತ**— ಇಪ್ಪತ್ತೊಂದರಿಂದ ಗುಣಿತವಾದ ಎಪ್ಪತ್ತು ಸಂಖ್ಯೆಯುಳ್ಳ (೭೦×೨೧=೧೪೭೦) । **ಉಸ್ರಾಃ**— ಗೋವುಗಳಿಂದ ಕೂಡಿರುವನೋ ಅಂತಹ ಪೃಥುಶ್ರವಸ್ಸೆಂಬ ರಾಜನು । **ಏಭಿಃ ಸೋಮೇಭಿಃ**— ಈ ಸೋಮಗಳೊಡನೆಯೂ । **ಸೋಮಸುದ್ಭಿಃ**— ಸೋಮವನ್ನು ಹಿಂಡುವ ಈ ಋತ್ವಿಕ್ಕುಗಳೊಡನೆಯೂ ಕೂಡಿ । **ದಾನಾಯ**— ನಿನಗೆ ಅರ್ಪಿಸಲು ಸಿದ್ಧನಾಗಿದ್ದಾನೆ.

॥ ಭಾವಾರ್ಥ ॥

ಶುದ್ಧವೂ, ಪ್ರಕಾಶಯುಕ್ತವೂ ಆದ ಸೋಮವನ್ನು ಪಾನಮಾಡತಕ್ಕ ಎಲೈ ವಾಯುವೇ, ಯಾರು ಅಶ್ವಗಳಿಂದ ಗೃಹಾಭಿಮುಖವಾಗಿ ವಹಿಸಲ್ಪಡುವನೋ ಮತ್ತು ೧೪೭೦ ಸಂಖ್ಯೆಯುಳ್ಳ ಗೋವುಗಳಿಂದ ಯಾರು ಕೂಡಿರುವನೋ ಅಂತಹ ಪೃಥುಶ್ರವಸ್ಸೆಂಬ ರಾಜನು ಈ ಸೋಮಗಳೊಡನೆಯೂ, ಈ ಸೋಮವನ್ನು ಹಿಂಡುವ ಋತ್ವಿಕ್ಕುಗಳೊಡನೆಯೂ ಕೂಡಿ ನಿನಗೆ ದಾನವನ್ನು ಅರ್ಪಿಸಲು ಸಿದ್ಧನಾಗಿದ್ದಾನೆ.

## English Translation.

He who is borne on horses and surrounds himself with thrice seven times seventy cows,— he comes to you with these Soma libations and Soma-priests, to offer to you, drinker of the Soma, drinker of the bright pure Soma.

॥ ಸಂಹಿತಾಪಾಠಃ ॥

ಯೋ ಮ ಇಮಂ ಚಿದು ತ್ಮನಾಮಂದಚ್ಚಿತ್ರಂ ದಾವನೇ ।

ಅರಟ್ವೇ ಅಕ್ಷೇ ನಹುಷೇ ಸುಕೃತ್ವನಿ ಸುಕೃತ್ತರಾಯ ಸುಕ್ರತುಃ ॥ ೨೭ ॥

॥ ಪದಪಾಠಃ ॥

ಯಃ । ಮೇ । ಇಮಂ । ಚಿತ್ । ಊಂ ಇತಿ । ತ್ಮನಾ । ಅಮಂದತ್ । ಚಿತ್ರಂ । ದಾವನೇ ।

ಅರಟ್ವೇ । ಅಕ್ಷೇ । ನಹುಷೇ । ಸುಽಕೃತ್ವನಿ । ಸುಕೃತ್ಽತರಾಯ । ಸುಽಕ್ರತುಃ ॥ ೨೭ ॥

॥ ಸಾಯಣಭಾಷ್ಯಂ ॥

ಯಃ ಪೃಥುಶ್ರವಾ ಮೇ ಮಹ್ಯಮಿಮಂ ಪುರತೋವರ್ತಮಾನಂ ಚಿತ್ರಂ ಚಾಯನೀಯಂ ಗವಾಶ್ವಾದಿಕಂ ದಾವನೇ ದಾನಾಯ ತ್ಮನಾತ್ಮನಾ ಸ್ವಬುದ್ಧ್ಯೈವಾಮಂದತ್ ಅಮಂಪತ ಅಮಾದ್ಯತ । ಸ ಚ ಸುಕ್ರತುಃ ಶೋಭನಕರ್ಮಾ ರಾಜಾ ಸುಕೃತ್ತರಾಯ ಸುಕೃತಕರ್ತೃತ್ವಾಯಾರಟ್ವೇಽಕ್ಷೇ ನಹುಷೇ ಸುಕೃತ್ವನಿ ಚ । ಏತೇ ತಸ್ಯ ರಾಜ್ಞೋಽಧ್ಯಕ್ಷಾಃ । ತೇಷ್ವಸ್ವಶಾತ್ ಅಸ್ಮೈ ಗವಾದಿಕಾನ್ ಸಂಯೋಜಯತೇತಿ । ಯದ್ವಾ । ಅರಟ್ವಾದಯೋಽನ್ಯೇ ರಾಜಾನಃ । ತೇಷು ಮಧ್ಯೇ ಸುಕೃತ್ತರಾಯಾಮಂದದಿತಿ ॥

॥ ಪ್ರತಿಪದಾರ್ಥ ॥

**ಯಃ**—ಯಾರು । **ಮೇ**—ನನಗೆ । **ಇಮಂ**—ಇಲ್ಲಿ ವರ್ಣಿತವಾದುದೂ । **ಚಿತ್ರಂ**—**ಆಕರ್ಷಕ** ವಾದುದೂ ಆದ ಗವಾದಿ ಸಂಪತ್ತನ್ನು । **ದಾವನೇ**— ದಾನಮಾಡುವುದಕ್ಕೆ । **ತ್ಮನಾ ಉ**—ಸ್ವಪ್ರೇರಣೆಯಿಂದಲೇ । **ಅಮಂದತ್**—ಸಂತುಷ್ಟನಾಗಿದ್ದಾನೆಯೋ ಅಂತಹ । **ಸುಕ್ರತುಃ**—ಶ್ರೇಷ್ಠವಾದ ಕರ್ಮಕರ್ತನಾದ ಪೃಥುಶ್ರವಸ್ಸೆಂಬ ರಾಜನು । **ಅರಟ್ವೇ, ಅಕ್ಷೇ, ನಹುಷೇ, ಸುಕೃತ್ವನಿ**—ಅರಟ್ವ, ಅಕ್ಷ, ನಹುಷ ಮತ್ತು ಸುಕೃತ್ವ ಎಂಬ **ಈ ರಾಜರ ಮಧ್ಯದಲ್ಲಿ** । **ಸುಕೃತ್ತರಾಯ**— ಅತ್ಯುತ್ತಮವಾದ ಕರ್ಮವನ್ನು ನಿರ್ವಹಿಸಲು (ಸಂಕಲ್ಪಿಸಿದ್ದಾನೆ).

॥ ಭಾವಾರ್ಥ ॥

ಮೇಲೆ ವರ್ಣಿತವಾದುದೂ, ಆಕರ್ಷಕವಾದುದೂ ಆದ ಗವಾದಿ ಸಂಪತ್ತನ್ನು ನನಗೆ ದಾನಮಾಡಲು **ಯಾರು** ಸ್ವಪ್ರೇರಣೆಯಿಂದಲೇ ಸಂತುಷ್ಟನಾಗಿದ್ದಾನೆಯೋ ಅಂತಹ ಶ್ರೇಷ್ಠವಾದ ಕರ್ಮಕರ್ತನಾದ ಪೃಥುಶ್ರವಸ್ಸೆಂಬ **ರಾಜನು** ಅರಟ್ವ, ಅಕ್ಷ, ನಹುಷ ಮತ್ತು ಸುಕೃತ್ವ ಎಂಬ ಈ ರಾಜರ ಮಧ್ಯದಲ್ಲಿ ಅತ್ಯುತ್ತಮವಾದ ಕರ್ಮವನ್ನು ನಿರ್ವಹಿಸಲು ಸಂಕಲ್ಪಿಸಿದ್ದಾನೆ.

## English Translation.

He who of his own will has been plased to give me this honoured **gift**,—**he**, performer of good works, (has determined) on a pre-emminetly good **action**, amidst Aradwa, Aksha, Nahusha and Sukritwan.

॥ ಸಂಹಿತಾಪಾಠಃ ॥

ಉಚಥ್ಯೇ᳚ ವಪು॑ಷಿ॒ ಯಃ ಸ್ವ॒ರಾಳುತ ವಾ॑ಯೋ ಘೃತ॒ಸ್ನಾಃ ।
ಅಶ್ವೇ॑ಷಿತಂ॒ ರಜೇ॑ಷಿತಂ॒ ಶುನೇ॑ಷಿತಂ॒ ಪ್ರಾಜ್ಮ॒ ತದಿ॒ದಂ ನು ತತ್ ॥ ೨೮ ॥

॥ ಪದಪಾಠಃ ॥

ಉ॒ಚ॒ಥ್ಯೇ᳚ । ವಪು॑ಷಿ । ಯಃ । ಸ್ವ॒ಽರಾಟ್ । ಉ॒ತ । ವಾ॒ಯೋ॒ ಇತಿ॑ । ಘೃ॒ತ॒ಽಸ್ನಾಃ ।
ಅಶ್ವ॑ಽಇಷಿತಂ । ರಜಃ॑ಽಇಷಿತಂ । ಶುನಾ॑ಽಇಷಿತಂ । ಪ್ರ । ಅ॒ಜ್ಮ॒ । ತತ್ । ಇ॒ದಂ । ನು । ತತ್ ॥ ೨೮ ॥

॥ ಸಾಯಣಭಾಷ್ಯಂ ॥

ಉಚಥ್ಯೇ ವಕ್ತವ್ಯೇ ಸ್ತುತ್ಯೇ ವಪುಷಿ ಶರೀರೇ ಯಃ ಸ್ವರಾಟ್ ಸ್ವಯಂ ರಾಜತೇ । ಯದ್ವಾ। ಉಚಥ್ಯೋ ವಪುಶ್ಯೋಭೌ ರಾಜಾನೌ । ತಯೋರಪಿ ಯಃ ಸ್ವರಾಟ್ ಸ್ವಾರಾಜ್ಯಂ ಕರೋತಿ ಅತಿಶಯೇನ ವರ್ತತೇ । ಹೇ ವಾಯೋ ಯಶ್ಚ ಘೃತಸ್ನಾ ಘೃತವಚ್ಛುದ್ಧಃ ಸ ರಾಜಾಶ್ವೇಷಿತಮಶ್ವೈಃ ಪ್ರಾಪಿತಂ ರಜೇಷಿತಂ । ರಜಃಶಬ್ದೇನೋಷ್ಟ್ರೋ ಗರ್ದಭೋ ವೋಚ್ಯತೇ । ತೇನಾಪ್ಯಾನೀತಂ ಶುನೇಷಿತಂ ಚಾಜ್ಮಾನ್ನಂ ಪ್ರಾದಾತ್ । ತದನ್ನಮಶ್ವಾದ್ಯಾನೀತಮಿದಂ ಪುರತೋ ದೃಶ್ಯತೇ । ತತ್ತ್ವನ್ನೈವಾನುಗ್ರಹಾದಿತ್ಯರ್ಥಃ । ಅಥವೈತಸ್ತಚ್ಛಬ್ದಃ ಪೂರಣಃ । ಅಶ್ವಾದ್ಯಾನೀತಂ ಯದಸ್ತಿ ತದಿದಂ ಖಲ್ವಿತಿ ॥

॥ ಪ್ರತಿಪದಾರ್ಥ ॥

**ವಾಯೋ**— ಎಲೈ ವಾಯುವೇ । **ಉಚಥ್ಯೇ**— ಪ್ರಶಂಸನೀಯವಾದ । **ವಪುಷಿ**— ಶರೀರವನ್ನು **ಹೊಂದಿ** । **ಯಃ**— ಯಾವ ರಾಜನು । **ಸ್ವರಾಟ್**— ಸ್ವಯಂ ಪ್ರಕಾಶಮಾನನಾಗಿದ್ದಾನೆಯೋ । **ಉತ**— **ಮತ್ತು** । **ಘೃತಸ್ನಾಃ**— ಯಾರು ಘೃತದಂತೆ ಪರಿಶುದ್ಧನಾಗಿದ್ದಾನೆಯೋ ಅಂತಹ ರಾಜನು । **ಅಶ್ವೇಷಿತಂ**— ಅಶ್ವಗಳಿಂದ ಎಳೆಯಲ್ಪಟ್ಟುದೂ । **ರಜೇಷಿತಂ**— ಒಂಟೆಗಳಿಂದ ಎಳೆಯಲ್ಪಟ್ಟುದೂ । **ಶುನೇಷಿತಂ**— ನಾಯಿಗಳಿಂದ ಎಳೆಯಲ್ಪಟ್ಟುದೂ ಆದ । **ಅಜ್ಮ**— ಅನ್ನವನ್ನು (ಆಹಾರವನ್ನು) । **ಪ್ರ** (**ಅದಾತ್**)— ದಾನ **ಮಾಡಿದ್ದಾನೆ** । **ತತ್ ಇದಂ**— ಮುಂದೆ ಕಾಣುತ್ತಿರುವುದೆಲ್ಲಾ ಅದೇ । **ನು**— ಖಂಡಿತ । **ತತ್**— ಇದೆಲ್ಲವೂ ನಿನ್ನ **ಅನುಗ್ರಹದ** ಫಲ.

॥ ಭಾವಾರ್ಥ ॥

ಎಲೈ ವಾಯುವೇ, ಪ್ರಶಂಸನೀಯವಾದ ಶರೀರವನ್ನು ಹೊಂದಿ ಯಾರು ಸ್ವಯಂ ಪ್ರಕಾಶಮಾನನಾಗಿದ್ದಾನೆಯೋ, ಯಾರು ಘೃತದಂತೆ ಪರಿಶುದ್ಧನಾಗಿದ್ದಾನೆಯೋ ಅಂತಹ ರಾಜನು ಅಶ್ವಗಳಿಂದ ಎಳೆಯಲ್ಪಟ್ಟುದೂ, ಒಂಟೆಗಳಿಂದ ಎಳೆಯಲ್ಪಟ್ಟುದೂ, ನಾಯಿಗಳಿಂದ ಎಳೆಯಲ್ಪಟ್ಟುದೂ ಆದ ಅನ್ನವನ್ನು (ಆಹಾರವನ್ನು) ದಾನಮಾಡಿದ್ದಾನೆ.

## English Translation.

He who is self-resplendent in his glorious body, who is bright, O Vayu, like ghee, has given me this food, brought by horses, brought by camels, brought by dogs.

॥ ಸಂಹಿತಾಪಾಠಃ ॥

ಅಧ ಪ್ರಿಯಮಿಷಿರಾಯ ಷಷ್ಟಿಂ ಸಹಸ್ರಾಸನಂ ।
ಅಶ್ವಾನಾಮಿನ್ನ ವೃಷ್ಣಾಂ ॥ ೨೯ ॥

॥ ಪದಪಾಠಃ ॥

**ಅಧ** । ಪ್ರಿಯಂ । ಇಷಿರಾಯ । ಷಷ್ಟಿಂ । ಸಹಸ್ರಾ । ಆಸನಂ ।
**ಅಶ್ವಾನಾಂ** । ಇತ್ । ನ । ವೃಷ್ಣಾಂ ॥ ೨೯ ॥

॥ ಸಾಯಣಭಾಷ್ಯಂ ॥

**ಅಧಾಧುನೇಷಿರಾಯ ಧನಾದಿಪ್ರೇರಯಿತ್ರೇ ರಾಜ್ಞೇ ಪ್ರಿಯಂ ಶ್ರದ್ಧೇಯಮಶ್ವಾನಾಮಿವ ವೃಷ್ಣಾಂ ಸೇಕ್ತ್ರೄಣಾಂ ಗವಾಂ ಸಹಸ್ರಾ ಸಹಸ್ರಾಣಾಂ ಷಷ್ಟಿಂ ಷಷ್ಟಿಸಹಸ್ರಸಂಖ್ಯಾಕಂ ಪ್ರಿಯಭೂತಮಸನಂ । ಅಭಜಂ ॥**

॥ ಪ್ರತಿಪದಾರ್ಥ ॥

**ಅಧ**— ಈಗ । **ಇಷಿರಾಯ**— ಉದಾರದಾತೃವಾದ ಈ ರಾಜನಿಗೆ । **ಪ್ರಿಯಂ**— ಇಷ್ಟವಾದುದೂ । **ಅಶ್ವಾನಾಂ ಇನ್ನ**— ಅಶ್ವಗಳಂತೆ ಶಕ್ತಿಯುಳ್ಳವೂ । **ಷಷ್ಟಿಂ ಸಹಸ್ರಾ**— ಅರವತ್ತುಸಹಸ್ರಸಂಖ್ಯೆಯುಳ್ಳವೂ ಆದ । **ವೃಷ್ಣಾಂ**— ವೃಷಭಗಳ ಗುಂಪನ್ನು । **ಅಸನಂ**— ಪಡೆದೆನು.

॥ ಭಾವಾರ್ಥ ॥

ಉದಾರವಾಗಿ ದಾನಮಾಡುವ ಈ ರಾಜನಿಗೆ ಪ್ರಿಯವಾದುದೂ, ಅಶ್ವಗಳಂತೆ ಶಕ್ತಿಯುಳ್ಳವೂ, ಅರವತ್ತು ಸಹಸ್ರಸಂಖ್ಯೆಯುಳ್ಳವೂ ಆದ ವೃಷಭಗಳ ಗುಂಪನ್ನು ದಾನವಾಗಿ ಪಡೆದೆನು.

## English Translation.

I have now received (a gift) dear to the beneficent king, sixty thousand bulls vigorous like horses.

॥ ಸಂಹಿತಾಪಾಠಃ ॥

ಗಾವೋ ನ ಯೂಥಮುಪ ಯಂತಿ ವಧ್ರಯ ಉಪ ಮಾ ಯಂತಿ
ವಧ್ರಯಃ ॥ ೩೦ ॥

॥ ಪದಪಾಠಃ ॥

ಗಾವಃ । ನ । ಯೂಥಂ । ಉಪ । ಯಂತಿ । ವಧ್ರಯಃ । ಉಪ । ಮಾ । ಆ । ಯಂತಿ । ವಧ್ರಯಃ ॥ ೩೦ ॥

॥ ಸಾಯಣಭಾಷ್ಯಂ ॥

ಗಾವೋ ನ ಗಾವ ಇವ ತಾ ಯಥಾ ಸಂಗವೇ ಯೂಥಮುಪ ಯಂತಿ ಉಪಗಚ್ಛಂತಿ ತದ್ವದ್ವಧ್ರಯಶ್ಛಿನ್ನಮುಷ್ಕಾ ವೃಷಭಾಃ ಪೃಥುಶ್ರವಸಾ ದತ್ತಾ ಮಾ ಮಾಮುಪ ಯಂತಿ । ಸಮೀಪಂ ಪ್ರಾಪ್ನುವಂತಿ । ಮಾ ಮಾಂ ವಧ್ರಯ ಉಪಾ ಯಂತೀತಿ ಪುನರುಕ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

ಗಾವಃ—ಪಶುಗಳು । ಯೂಥಂ ನ—ತಮ್ಮ ಮಂದೆಗಳನ್ನು । ಉಪ ಯಂತಿ—ಯಾವ ರೀತಿ ಹೋಗಿ ಸೇರುತ್ತವೆಯೋ ಹಾಗೆ । ವಧ್ರಯಃ—ಪೃಥುಶ್ರವಸ್ಸಿನಿಂದ ದತ್ತವಾದ ವೃಷಭಗಳು । ಮಾಂ—ನನ್ನನ್ನು ಉಪ ಯಂತಿ—ಬಂದು ಸೇರುತ್ತವೆ । ವಧ್ರಯಃ—ಅದೇ ವೃಷಭಗಳು । ಆ (ಯಂತಿ)—ನನ್ನನ್ನೇ ಬಂದು ಸೇರುತ್ತವೆ.

॥ ಭಾವಾರ್ಥ ॥

ಪಶುಗಳು ತಮ್ಮ ಮಂದೆಗಳನ್ನು ಹೋಗಿ ಸೇರುವಂತೆ ಪೃಥುಶ್ರವಸ್ಸಿನಿಂದ ದತ್ತವಾದ ವೃಷಭಗಳು ನನ್ನನ್ನು ಬಂದು ಸೇರುತ್ತವೆ.

## English Translation.

As the cows to the herd, so repair the oxen ; so the oxen repair to me.

॥ ಸಂಹಿತಾಪಾಠಃ ॥

ಅಧ ಯಚ್ಚಾರಥೇ ಗಣೇ ಶತಮುಷ್ಟ್ರಾಂ ಅಚಿಕ್ರದತ್ ।
ಅಧ ಶ್ವಿತ್ನೇಷು ವಿಂಶತಿಂ ಶತಾ ॥ ೩೧ ॥

॥ ಪದಪಾಠಃ ॥

ಅಧ । ಯತ್ । ಚಾರಥೇ । ಗಣೇ । ಶತಂ । ಉಷ್ಟ್ರಾನ್ । ಅಚಿಕ್ರದತ್ ।
ಅಧ । ಶ್ವಿತ್ನೇಷು । ವಿಂಶತಿಂ । ಶತಾ ॥ ೩೧ ॥

॥ ಸಾಯಣಭಾಷ್ಯಂ ॥

ಅಧಾಥ ಯದ್ಯದಾ ಚಾರಥೇ । ಚರಥಂ ಚರಣಂ ಗಮನಂ । ತತ್ಸಂಬಂಧಿನಿ ಕಾರ್ಯಮಾಣೇ ಪಸಾಯ ಪ್ರೇರ್ಯಮಾಣ ಇತ್ಯರ್ಥಃ । ತಾದೃಶೇ ಗಣ ಉಷ್ಟ್ರಸಂಘ ಉಷ್ಟ್ರಾಣ್ಯುತಮುಷ್ಟ್ರಾಣಾಂ

**ಶತಮುಚಿಕ್ರದತ್ ಅಸ್ಮಭ್ಯಂ ಪ್ರದಾನಾಯಾಜುಹಾವ । ಅಧಾಪಿ ಚಾಸ್ಮದರ್ಥಮೇವ ಶ್ವಿತ್ನೇಷು ಶ್ವೇತವರ್ಣೇಷು ಗೋಯೂಥೇಷು ವಿಂಶತಿಂ ಚ ಶತಾ ಶತಾನಿ ಚ ಅಥವಾ ಶತಾನಾಂ ವಿಂಶತಿಮುಚಿಕ್ರದತ್ ॥**

॥ ಪ್ರತಿಪದಾರ್ಥ ॥

**ಅಧ**— ಅನಂತರ । **ಯತ್**— ಯಾವಾಗ । **ಗಣೇ**— ಆ ರಾಜನ ಪಶುಸಮೂಹಗಳೆಲ್ಲವೂ । **ಚಾರಥೇ**— ಹುಲ್ಲುಗಾವಲಿಗೆ ಮೇಯಲು ಹೋದವೋ ಆಗ । **ಶತಂ ಉಷ್ಟ್ರಾನ್**— ನೂರು ಒಂಟೆಗಳನ್ನು । **ಅಚಿಕ್ರದತ್**— ನನಗೆ ದಾನಮಾಡಲು ಕರೆದು ಬರಮಾಡಿಕೊಂಡನು । **ಅಧ**— ಅಲ್ಲದೆ । **ಶ್ವಿತ್ನೇಷು**— ಶ್ವೇತವರ್ಣದ ಗೋವುಗಳಲ್ಲಿ । **ವಿಂಶತಿಂ ಶತಾ**— ಎರಡು ಸಾವಿರದಷ್ಟು ಬರಮಾಡಿಕೊಂಡನು.

॥ ಭಾವಾರ್ಥ ॥

ಆ ರಾಜನ ಪಶುಸಮೂಹಗಳೆಲ್ಲವೂ ಹುಲ್ಲುಗಾವಲಿಗೆ ಮೇಯಲು ಹೋದಾಗ ಅವುಗಳಲ್ಲಿ ನೂರು ಒಂಟೆಗಳನ್ನೂ ಶ್ವೇತವರ್ಣದ ಎರಡುಸಾವಿರ ಗೋವುಗಳನ್ನೂ ನನಗೆ ದಾನಮಾಡುವುದಕ್ಕಾಗಿ ತನ್ನಲ್ಲಿಗೆ ಬರಮಾಡಿಕೊಂಡನು.

## English Translation.

Since, when the herd were wandering (to the wood), he called a hundred camels (to give them to me), and two thousand from among the white herds (of cows).

॥ ಸಂಹಿತಾಪಾಠಃ ॥

ಶತಂ ದಾಸೇ ಬಲ್ಬೂಥೇ ವಿಪ್ರಸ್ತರುಕ್ಷ ಆ ದದೇ ।
ತೇ ತೇ ವಾಯವಿಮೇ ಜನಾ ಮದಂತೀಂದ್ರಗೋಪಾ ಮದಂತಿ ದೇವಗೋಪಾಃ ॥ ೩೨ ॥

॥ ಪದಪಾಠಃ ॥

ಶತಂ । ದಾಸೇ । ಬಲ್ಬೂಥೇ । ವಿಪ್ರಃ । ತರುಕ್ಷೇ । ಆ । ದದೇ ।
ತೇ । ತೇ । ವಾಯೋ ಇತಿ । ಇಮೇ । ಜನಾಃ । ಮದಂತಿ । ಇಂದ್ರಽಗೋಪಾಃ । ಮದಂತಿ । ದೇವಽಗೋಪಾಃ ॥ ೩೨ ॥

॥ ಸಾಯಣಭಾಷ್ಯಂ ॥

**ಅಯಂ ವಿಪ್ರೋ ಮೇಧಾವೀ ವಶೋ ಜನೋಽಹಂ ಬಲ್ಬೂಥ ಏತನ್ನಾಮಕೇ ದಾಸೇ ತರುಕ್ಷೇ ಗವಾಶ್ವಾದೀನಾಂ ತಾರಕೇ ಗವಾದ್ಯಧಿಕೃತೇ ರಾಜ್ಞಾ ಸ್ಮಾಕಂ ಪ್ರದಿಷ್ಟಧನದಾತಯೋರಾ ದದೇ । ಕಿಂ ದಾನಂ।**

ಗವಾಶ್ವಾದೀನಾಂ ಶತಂ । ಶತಶಬ್ದೋಽಪರಿಮಿತವಚನಃ । ಹೇ ವಾಯೋ ತೇ ತವ ಸ್ವಭೂತಾಸ್ತೇ ಸ್ತೋತಾರ ಇಮೇ ಜನಾಃ । ವಯಮಿತ್ಯರ್ಥಃ । ಆತ್ಮನ ಏವ ಪರೋಕ್ಷತ್ವೇನ ವಾದಃ । ತ್ವಯಾನುಗೃಹೀತತ್ವಾದಿಂದ್ರಗೋಪಾಃ । ಇಂದ್ರೋ ಗೋಪಾಯಿತಾ ಯೇಷಾಂ ತೇ ತಥೋಕ್ತಾಃ । ಇಂದ್ರೇಣ ರಕ್ಷಿತಾ ಮದಂತಿ । ತಥಾ ದೇವಗೋಪಾ ಮದಂತಿ । ಇಂದ್ರಂ ದೇವಾಂಶ್ಚ ರಾಜ್ಞೋ ಲಬ್ಧೇನ ಧನೇನ ಯಜಂತೋ ಮದಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

ದಾಸೇ—ರಾಜನಿಂದ ನಿಯಮಿತನೂ । **ತರುಕ್ಷೇ**—ಗೋವುಗಳನ್ನೂ ಅಶ್ವಗಳನ್ನೂ ರಕ್ಷಿಸುವವನೂ ಆದ । **ಬಲ್ಬೂಥೇ**—ಈ ಬಲ್ಬೂಥನಿಂದ । **ವಿಪ್ರಃ**—ಮೇಧಾವಿಯಾದ ನಾನು । **ಶತಂ**—ಶತಸಂಖ್ಯಾಕವಾದ ಪಶುಗಳನ್ನು । **ಆ ದದೇ**—ಸ್ವೀಕರಿಸಿದ್ದೇನೆ । **ವಾಯೋ**—ಎಲೈ ವಾಯುವೇ । **ತೇ**—ನಿನಗೆ ಸೇರಿದ । **ತೇ ಇಮೇ ಜನಾಃ**—ಈ ಸ್ತೋತೃಗಳೆಲ್ಲರೂ । **ಇಂದ್ರಗೋಪಾಃ**—(ನಿನ್ನ ಅನುಗ್ರಹದಿಂದಲೇ) ಇಂದ್ರನ ರಕ್ಷಣೆಗೆ ಒಳಗಾಗಿ । **ಮದಂತಿ**—ಹರ್ಷವನ್ನು ಅನುಭವಿಸುತ್ತಿದ್ದಾರೆ । **ದೇವಗೋಪಾಃ**—ಅದುದರಿಂದಲೇ ದೇವತೆಗಳಿಂದಲೂ ರಕ್ಷಿತರಾಗಿ । **ಮದಂತಿ**—ಹರ್ಷವನ್ನನುಭವಿಸುತ್ತಿದ್ದಾರೆ.

॥ ಭಾವಾರ್ಥ ॥

ರಾಜನ ಸೇವಕನೂ, ಗೋಪಾಲಕನೂ ಆದ ಈ ಬಲ್ಬೂಥನಿಂದ ಮೇಧಾವಿಯಾದ (ವಶನೆಂಬ) ನಾನು ಶತಸಂಖ್ಯಾಕವಾದ ಪಶುಗಳನ್ನು ಸ್ವೀಕರಿಸಿದ್ದೇನೆ. ಎಲೈ ವಾಯುವೇ, ನಿನಗೆ ಸೇರಿದ ಈ ಸ್ತೋತೃಗಳೆಲ್ಲರೂ, ನಿನ್ನ ಅನುಗ್ರಹದಿಂದಲೇ, ಇಂದ್ರನ ರಕ್ಷಣೆಗೆ ಪಾತ್ರರಾಗಿ ಹರ್ಷಿಸುತ್ತಾರೆ. ಆ ಅನುಗ್ರಹದಿಂದಲೇ ದೇವತೆಗಳಿಂದಲೂ ರಕ್ಷಿತರಾಗಿ ಹರ್ಷವನ್ನನುಭವಿಸುತ್ತಿದ್ದಾರೆ.

## English Translation.

I, the sage, accept the hundred from the slave Balbutha, the cowherd ; we here are yours, O Vayu,—those who have Indra and the gods for protectors rejoice (through your favour).

। ಸಂಹಿತಾಪಾಠಃ ।

ಅಧ ಸ್ಯಾ ಯೋಷಣಾ ಮಹೀ ಪ್ರತೀಚೀ ವಶಮಶ್ವ್ಯಂ ।
ಅಧಿರುಕ್ಮಾ ವಿ ನೀಯತೇ ॥ ೩೩ ॥

। ಪದಪಾಠಃ ।

ಅಧ । ಸ್ಯಾ । ಯೋಷಣಾ । ಮಹೀ । ಪ್ರತೀಚೀ । ವಶಂ । ಅಶ್ವ್ಯಂ ।
ಅಧಿಽರುಕ್ಮಾ । ವಿ । ನೀಯತೇ ॥ ೩೩ ॥

॥ ಸಾಯಣಭಾಷ್ಯಂ ॥

**ಅಥಾಧುನಾ ಸ್ಯಾ ಸಾ ಯೋಷಣಾ ಯೋಷಾ ರಾಜ್ಞಾ ಪ್ರದತ್ತಾ ಮಹೀ ಮಹತೀ ಪೂಜ್ಯಾ ಪ್ರತೀಚ್ಯಸ್ಮದಭಿಮುಖ್ಯಶ್ವ್ಯಮಶ್ವಪುತ್ರಂ ವಶಂ ಮಾಂ ಪ್ರತಿ ಸಾಧಿರುಕ್ಮಾಭರಣಾ ಸತೀ ವಿ ನೀಯತೇ । ತಾಂ ಕನ್ಯಾಂ ಮಾಂ ಪ್ರತ್ಯಾನಯಂತೀತ್ಯರ್ಥಃ । ಅತ್ರ ವಾಯವ್ಯಾಸ್ವೃಕ್ಷು ಯತ್ರ ವಾಯುರ್ನ ಸ್ತೂಯತೇ ಪರಂ ದಾನಪ್ರಶಂಸೈವ ತಾಸು ಸರ್ವಾಸು ಹೇ ವಾಯೋ ತ್ವದನುಗ್ರಹಾದೇವಮಿತಿ ಯೋಜ್ಯಂ ವಾಯುಪರತ್ವಮುಪಗಂತವ್ಯಂ ॥**

॥ ಪ್ರತಿಪದಾರ್ಥ ॥

**ಅಥ**—ಈಗ । **ಮಹೀ**—ಶ್ರೇಷ್ಠಳೂ । **ಅಧಿರುಕ್ಮಾ**—ಸುವರ್ಣಾದ್ಯಾಭರಣಗಳಿಂದ ಅಲಂಕೃತಳೂ । **ಸ್ಯಾ**—ರಾಜನಿಂದ ದತ್ತಳಾದವಳೂ ಆದ । **ಯೋಷಣಾ**—ಕನ್ಯೆಯು । **ಅಶ್ವ್ಯಂ**—ಅಶ್ವಪುತ್ರನೂ । **ವಶಂ**—ವಶಸಂಜ್ಞಕನೂ ಆದ ನನ್ನ । **ಪ್ರತೀಚೀ**—ಅಭಿಮುಖವಾಗಿ । **ವಿ ನೀಯತೇ**—ಕರೆತರಲ್ಪಡುತ್ತಿದ್ದಾಳೆ.

॥ ಭಾವಾರ್ಥ ॥

ಶ್ರೇಷ್ಠಳೂ, ಸುವರ್ಣಾದ್ಯಾಭರಣಗಳಿಂದ ಅಲಂಕೃತಳೂ, ರಾಜನಿಂದ ದತ್ತಳಾದವಳೂ ಆದ ಕನ್ಯೆಯು ಅಶ್ವಪುತ್ರನೂ, ವಶಸಂಜ್ಞಕನೂ ಆದ ನನಗೆ ಅಭಿಮುಖವಾಗಿ ಕರೆತರಲ್ಪಡುತ್ತಿದ್ದಾಳೆ.

### English Translation.

This tall maiden, adorned with gold, is led towards me, Vasha, the son Ashwa.



# ನಲವತ್ತೇಳನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಮಹಿ ವ ಇತ್ಯಷ್ಟಾದಶರ್ಚಂ ಪಂಚಮಂ ಸೂಕ್ತಮಾಪ್ತ್ಯಸ್ಯ ತ್ರಿತಸ್ಯಾರ್ಷಂ । ಷಡಷ್ಟಕಾ ಮಹಾಪಂಕ್ತಿಶ್ಛಂದಃ । ಆದ್ಯಾಸ್ತ್ರಯೋದಶರ್ಚ ಆದಿತ್ಯದೇವತಾಕಾಃ । ಯಚ್ಚ ಗೋಷ್ವಿತ್ಯಾದ್ಯಾಃ ಪಂಚರ್ಚ ಉಷೋದೇವತಾಕಾ ಆದಿತ್ಯದೇವತಾಕಾಶ್ಚ । ತಥಾ ಚಾನುಕ್ರಮಣಿಕಾ । ಮಹಿ ವೋ ದ್ವ್ಯೂನಾ ತ್ರಿತ ಆಪ್ತ್ಯ ಆದಿತ್ಯೇಭ್ಯೋಽಂತ್ಯಾಃ ಪಂಚೋಷಸೇಽಪಿ ಮಹಾಪಾಂಕ್ತಮಿತಿ ॥ ಸೂಕ್ತವಿನಿಯೋಗೋ ಲೈಂಗಿಕಃ ॥**

ಅನುವಾದವು—**ಮಹಿ ವಃ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನೆಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ **ತ್ರಿತ ಆಪ್ತ್ಯಃ** ಎಂಬವನು ಋಷಿಯು; ಎಂಟೆಂಟು ಅಕ್ಷರಗಳ ಆರು ಪಾದಗಳುಳ್ಳ ಮಹಾಪಂಕ್ತಿಶ್ಛಂದಸ್ಸವು. ಈ ಸೂಕ್ತದ ಮೊದಲಿನ ಹದಿಮೂರು ಋಕ್ಕುಗಳು

ಆದಿತ್ಯದೇವತಾಕವು. ಯಚ್ಚ ಗೋಷು ಎಂಬ ಪ್ರಾರಂಭವಾಗುವ ೧೪-೧೮ ಋಕ್ಕುಗಳಿಗೆ ಉಷಸ್ಸು ಮತ್ತು ಆದಿತ್ಯನು ದೇವತೆಯು. ಅನುಕ್ರಮಣಿಕೆಯಲ್ಲಿ - **ಮಹಿ ವೋ ಹ್ಯೂನಾ ತ್ರಿತ ಆಪ್ತ್ಯ ಆದಿತ್ಯೇಭ್ಯೋಽನ್ತ್ಯಾಃ ಪಂಚೋಷಸೇಽಪಿ ಮಹಾಪಾಂಕ್ತಂ** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೪೭

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೪೭ ॥
ಅಷ್ಟಕ—೬ ॥ ಅಧ್ಯಾಯ—೪ ॥ ವರ್ಗ—೭, ೮, ೯, ೧೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥
॥ ಋಷಿಃ—ತ್ರಿತ ಆಪ್ತ್ಯಃ ॥
॥ ದೇವತಾ—೧-೧೩ ಆದಿತ್ಯಾಃ । ೧೪-೧೮ ಆದಿತ್ಯಾ ಉಷಾಶ್ಚ ॥
॥ ಛಂದಃ—ಮಹಾಪಂಕ್ತಿಃ ॥

॥ ಸಂಹಿತಾಪಾಠಃ ॥

ಮಹಿ ವೋ ಮಹತಾಮವೋ ವರುಣ ಮಿತ್ರ ದಾಶುಷೇ ।
ಯಮಾದಿತ್ಯಾ ಅಭಿ ದ್ರುಹೋ ರಕ್ಷಥಾ ನೇಮಘಂ ನಶದನೇಹಸೋ ವ
ಊತಯಃ ಸುಊತಯೋ ವ ಊತಯಃ ॥ ೧ ॥

॥ ಪದಪಾಠಃ ॥

ಮಹಿ । ವಃ । ಮಹತಾಂ । ಅವಃ । ವರುಣ । ಮಿತ್ರ । ದಾಶುಷೇ ।
ಯಂ । ಆದಿತ್ಯಾಃ । ಅಭಿ । ದ್ರುಹಃ । ರಕ್ಷಥ । ನ । ಈಂ । ಅಘಂ । ನಶತ್ । ಅನೇಹಸಃ । ವಃ ।
ಊತಯಃ । ಸುಽಊತಯಃ । ವಃ । ಊತಯಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ವರುಣ ಹೇ ಮಿತ್ರ । ಏತದ್ದ್ವಯಮರ್ಯಮ್ಣೋಽಪ್ಯುಪಲಕ್ಷಣಂ । ಹೇ ವರುಣಾದಯಃ ಮಹತಾಂ ವೋ ಯುಷ್ಮಾಕಮವೋ ರಕ್ಷಣಂ ಮಹಿ ಮಹತ್ । ಕಸ್ಮೈ । ದಾಶುಷೇ ಹವಿರ್ದಾತ್ರೇ ಯಜಮಾನಾಯ ಕ್ರಿಯಮಾಣಂ । ಕಿಂಚ ಹೇ ಆದಿತ್ಯಾಃ ಯಂ ಯಜಮಾನಂ ದ್ರುಹೋ ದ್ರೋಗ್ಧುಃ ಸಕಾಶಾದಭಿ ರಕ್ಷಥ ಈಮೇನಂ ಯಜಮಾನಮಘಂ ಪಾಪಂ ನ ನಶತ್ । ನ ಪ್ರಾಪ್ನೋತಿ । ಕುತ ಏವಮಿತಿ ತತ್ರೋಚ್ಯತೇ । ವೋ ಯುಷ್ಮಾಕಮೂತಯೋ ರಕ್ಷಣಾನ್ಯನೇಹಸೋಽಪಾಪಾನ್ಯನುಪದ್ರವಾಣಿ ಚ । ಊತಯಃ ಯುಷ್ಮಾಕಂ ರಕ್ಷಣಾನಿ ಸುಊತಯಃ । ಶೋಭನರಕ್ಷಣಾನಿ । ಪುನರುಕ್ತಿರಾದರಾರ್ಥಾ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ | **ಮಿತ್ರ**—ಎಲೈ ಮಿತ್ರನೇ | **ಮಹತಾಂ**—ಮಹಾತ್ಮರಾದ | **ವಃ**—ನಿಮ್ಮ | **ಅವಃ**—ರಕ್ಷಣವು | **ದಾಶುಷೇ**—ಯಜ್ಞಕರ್ತನ ವಿಷಯದಲ್ಲಿ | **ಮಹಿ**—ಅತ್ಯಧಿಕವಾಗಿದೆ | **ಆದಿತ್ಯಾಃ**—ಎಲೈ ಆದಿತ್ಯರೇ | **ಯಂ**—ಯಾವ ಯಜಮಾನನನ್ನು | **ದ್ರುಹಃ**—ಕೇಡಿಗನಾದ ಶತ್ರುವಿನಿಂದ | **ಅಭಿ ರಕ್ಷಥ**—ಪೂರ್ಣವಾಗಿ ರಕ್ಷಿಸುವಿರೋ | **ಈಂ**—ಅಂತಹ ಯಜಮಾನನನ್ನು | **ಅಘಂ**—ಪಾಪವು | **ನ ನಶತ್**—ಸಮೀಪಿಸುವುದೇ ಇಲ್ಲ | (ಎಲೈ ವರುಣಾದಿಗಳೇ) **ವಃ**—ನಿಮ್ಮ | **ಊತಯಃ**—ರಕ್ಷಣೆಗಳು **ಅನೇಹಸಃ**-ಪಾಪರಹಿತವಾಗಿವೆ | **ವಃ ಊತಯಃ**-ನಿಮ್ಮ ರಕ್ಷಣೆಗಳು | **ಸುಊತಯಃ**-ಕಲ್ಯಾಣಾತ್ಮಕವಾದವು.

॥ ಭಾವಾರ್ಥ ॥

ಎಲೈ ವರುಣನೇ, ಎಲೈ ಮಿತ್ರನೇ, ಮಹಾತ್ಮರಾದ ನಿಮ್ಮ ರಕ್ಷಣವು ಯಜ್ಞಕರ್ತನ ವಿಷಯದಲ್ಲಿ ಅತ್ಯಧಿಕವಾಗಿದೆ. ಎಲೈ ಆದಿತ್ಯರೇ, ಯಾವ ಯಜಮಾನನನ್ನು ನೀವು ಕೇಡಿಗನಾದ ಶತ್ರುವಿನಿಂದ ಪೂರ್ಣವಾಗಿ ರಕ್ಷಿಸುವಿರೋ ಅಂತಹ ಯಜಮಾನನನ್ನು ಪಾಪವು ಸಮೀಪಿಸುವುದೇ ಇಲ್ಲ. ಎಲೈ ವರುಣಾದಿದೇವತೆಗಳೇ, ನಿಮ್ಮ ರಕ್ಷಣೆಗಳು ಪಾಪರಹಿತವಾಗಿವೆ. ನಿಮ್ಮ ರಕ್ಷಣೆಗಳು ಕಲ್ಯಾಣಾತ್ಮಕವಾಗಿವೆ.

## English Translation.

Mitra and Varuna, you are great, and great is your protection to the offerer ; no evil, Adityas, harms him whom yon guard from the injurer ; your aids are void of harm, your aids are true aids.

। ಸಂಹಿತಾಪಾಠಃ ।

ವಿದಾ ದೇವಾ ಅಘಾನಾಮಾದಿತ್ಯಾಸೋ ಅಪಾಕೃತಿಂ ।
ಪಕ್ಷಾ ವಯೋ ಯಥೋಪರಿ ವ್ಯ೧ಸ್ಮೇ ಶರ್ಮ ಯಚ್ಛತಾನೇಹಸೋ ವ
ಊತಯಃ ಸುಊತಯೋ ವ ಊತಯಃ ॥ ೨ ॥

॥ ಪದಪಾಠಃ ॥

ವಿದ । ದೇವಾಃ । ಅಘಾನಾಂ । ಆದಿತ್ಯಾಸಃ । ಅಪಽಆಕೃತಿಂ ।
ಪಕ್ಷಾ । ವಯಃ । ಯಥಾ । ಉಪರಿ । ವಿ । ಅಸ್ಮೇ ಇತಿ । ಶರ್ಮ । ಯಚ್ಛತ । ಅನೇಹಸಃ । ವಃ ।
ಊತಯಃ । ಸುಽಊತಯಃ । ವಃ । ಊತಯಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ದೇವಾ ಆದಿತ್ಯಾಸ ಆದಿತ್ಯಾಃ ಯೂಯಮಘಾನಾಂ ದುಃಖಾನಾಮಪಾಕೃತಿಮಪಾಕರಣಂ ಪರಿಹಾರಪ್ರಕಾರಂ ವಿದ । ಜಾನೀಥ । ಯಸ್ಮಾದೇವಂ ತಸ್ಮಾದ್ವಯಃ ಪಕ್ಷಿಣೋ ಯಥಾ ಪಕ್ಷಾ ಪಕ್ಷಾವುಪರಿ ಸ್ವಶಿಶುಕಾನಾಮುಪರಿ ಕುರ್ವಂತಿ ಸುಖಾಯ ತದ್ವದಸ್ಮೈ ಅಧ್ಯಸ್ಮಾಸು ಶರ್ಮ ಸುಖಂ ಯಚ್ಛತ । ಕುರುತ ॥ ಅಧೀತಿ ಸಪ್ತಮ್ಯರ್ಥಾನುವಾದೀ ॥ ಅಸ್ಮೇ ಅಸ್ಮಾಕಮುಪರೀತಿ ವಾ ॥

॥ ಪ್ರತಿಪದಾರ್ಥ ॥

**ದೇವಾಃ**— ದೇವತಾತ್ಮರಾದ । **ಆದಿತ್ಯಾಸಃ**— ಎಲೈ ಆದಿತ್ಯರೇ । **ಅಘಾನಾಂ**— ಪಾಪಗಳಿಗೆ । **ಅಪಾಕೃತಿಂ**— ನಾಶಸಾಧನವನ್ನು । **ವಿದ**— ನೀವು ಅರಿತಿದ್ದೀರಿ । **ವಯಃ**— ಪಕ್ಷಿಗಳು । **ಯಥಾ**— ಯಾವ ರೀತಿ । **ಪಕ್ಷಾ**— ತಮ್ಮ ರೆಕ್ಕೆಗಳನ್ನು । **ಉಪರಿ**— ತಮ್ಮ ಮರಿಗಳ ಮೇಲೆ ಹರಡಿ ಅವುಗಳಿಗೆ ಸುಖವನ್ನುಂಟು ಮಾಡುವುವೋ ಹಾಗೆ । **ಅಸ್ಮೇ**— ನಮಗೆ । **ಶರ್ಮ**— ಸುಖವನ್ನು । **ವಿ ಯಚ್ಛತ**— ಅತಿಶಯವಾಗಿ ಕೊಡಿರಿ । **ವಃ**— ನಿಮ್ಮ । **ಊತಯಃ**— ರಕ್ಷಣೆಗಳು । **ಅನೇಹಸಃ**— ಪಾಪರಹಿತವಾಗಿವೆ । **ವಃ**— ನಿಮ್ಮ । **ಊತಯಃ**— ರಕ್ಷಣೆಗಳು । **ಸುಊತಯಃ**— ಕಲ್ಯಾಣಾತ್ಮಕವಾದವು.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಆದಿತ್ಯರೇ, ನೀವು ಪಾಪಗಳಿಗೆ ನಾಶಸಾಧನವನ್ನು ಅರಿತಿದ್ದೀರಿ. ಪಕ್ಷಿಗಳು ಯಾವ ರೀತಿ ತಮ್ಮ ರೆಕ್ಕೆಗಳನ್ನು ತಮ್ಮ ಮರಿಗಳ ಮೇಲೆ ಹರಡಿ ಅವುಗಳಿಗೆ ಸುಖವನ್ನುಂಟುಮಾಡುವುವೋ ಹಾಗೆ ನಮಗೆ ಅತಿಶಯವಾಗಿ ಸುಖವನ್ನುಂಟುಮಾಡಿರಿ. ಎಲೈ ವರುಣಾದಿದೇವತೆಗಳೇ, ನಿಮ್ಮ ರಕ್ಷಣವು ಪಾಪರಹಿತವಾಗಿದೆ ನಿಮ್ಮ ರಕ್ಷಣೆಗಳು ಕಲ್ಯಾಣಾತ್ಮಕವಾದವು.

## English Translation.

Divene Adityas, you know the averting of evils ; as birds (spread) their wings over (their) young, grant us happiness ; your aids are void of harm, your aids are true aids.

॥ ಸಂಹಿತಾಪಾಠಃ ॥

ವ್ಯ೧ಸ್ಮೇ ಅಧಿ ಶರ್ಮ ತತ್ಪಕ್ಷಾ ವಯೋ ನ ಯಂತನ ।
ವಿಶ್ವಾನಿ ವಿಶ್ವವೇದಸೋ ವರೂಥ್ಯಾ ಮನಾಮಹೇಽನೇಹಸೋ ವ ಊತಯಃ
ಸುಊತಯೋ ವ ಊತಯಃ ॥ ೩ ॥

|| ಪದಪಾಠಃ ||

ವಿ । ಅಸ್ಮೇ ಇತಿ । ಅಧಿ । ಶರ್ಮ । ತತ್ । ಪಕ್ಷಾ । ವಯಃ । ನ । ಯಂತನ ।

ವಿಶ್ವಾನಿ । ವಿಶ್ವsವೇದಸಃ । ವರೂಥ್ಯಾ । ಮನಾಮಹೇ । ಅನೇಹಸಃ । ವ । ಊತಯಃ । ಸುsಊತಯಃ ।

ವಃ । ಊತಯಃ ॥ ೩ ॥

। ಸಾಯಣಭಾಷ್ಯಂ ।

**ಹೇ ಆದಿತ್ಯಾಃ ಯೂಯಮಸ್ಮೇ ಅಧ್ಯಸ್ಮಾಸು ತತ್ । ಯುಷ್ಮಾಸ್ವೇವಾಸಾಧಾರಣಂ ಯಚ್ಛರ್ಮಾಸ್ತಿ ತದಿತ್ಯರ್ಥಃ । ತದ್ವಿ ಯಂತನ । ವಿಶೇಷೇಣ ಪ್ರಾಪಯತ । ಹೇ ವಿಶ್ವವೇದಸಃ ಸರ್ವಧನಾಃ ಯುಷ್ಮಾನ್ ವಿಶ್ವಾನಿ ಸರ್ವಾಣಿ ವರೂಥ್ಯಾ । ವರೂಥಂ ಗೃಹಂ । ತದುಚಿತಾನಿ ಧನಾನಿ ಮನಾಮಹೇ । ಯಾಚಾಮಹೇ ॥**

। ಪ್ರತಿಪದಾರ್ಥ ।

(ಎಲೈ ಆದಿತ್ಯರೇ) **ವಯಃ**—ಪಕ್ಷಿಗಳು । **ಪಕ್ಷಾ ನ**—ರೆಕ್ಕೆಗಳನ್ನು ಹರಡಿ ತಮ್ಮ ಮರಿಗಳಿಗೆ ಸುಖವನ್ನು ಕೊಡುವಂತೆ । **ಅಸ್ಮೇ ಅಧಿ**—ನಮ್ಮ ವಿಷಯದಲ್ಲಿ । **ತತ್ ಶರ್ಮ**—ನಿಮ್ಮಿಂದ ಮಾತ್ರ ಕೊಡಲು ಸಾಧ್ಯವಾದ ಅಸಾಧಾರಣವಾದ ಸುಖವನ್ನು । **ವಿ ಯಂತನ**—ವಿಸ್ತೃತವಾಗಿ ಕೊಡಿರಿ । **ವಿಶ್ವವೇದಸಃ**—ಸಕಲ ಧನಸಂಪತ್ತನ್ನೂ ಹೊಂದಿರುವ ಎಲೈ ಆದಿತ್ಯರೇ । **ವಿಶ್ವಾನಿ**—ಸಮಸ್ತವಾದ । **ವರೂಥ್ಯಾ**—ರಕ್ಷಣಾಗೃಹಗಳನ್ನೂ । **ಮನಾಮಹೇ**—ನಿಮ್ಮಿಂದ ಯಾಚಿಸುತ್ತೇವೆ । (ಎಲೈ ಆದಿತ್ಯರೇ) **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುವಾತಯಃ**—ಮಂಗಳಕರವಾದವು.

। ಭಾವಾರ್ಥ ।

ಎಲೈ ಆದಿತ್ಯರೇ, ಪಕ್ಷಿಗಳು ರೆಕ್ಕೆಗಳನ್ನು ಹರಡಿ ತಮ್ಮ ಮರಿಗಳಿಗೆ ಸುಖವನ್ನು ಕೊಡುವಂತೆ, ನಮ್ಮ ವಿಷಯದಲ್ಲಿ ನಿಮ್ಮಿಂದ ಕೊಡಲು ಸಾಧ್ಯವಾದ ಅಸಾಧಾರಣವಾದ ಸುಖವನ್ನು ವಿಸ್ತೃತವಾಗಿ ಕೊಡಿರಿ. ಸಕಲ ಧನ ಸಂಪತ್ತನ್ನೂ ಹೊಂದಿರುವ ಎಲೈ ಆದಿತ್ಯರೇ, ನಾವು ನಿಮ್ಮಿಂದ ಸಮಸ್ತವಾದ ರಕ್ಷಣಾಗೃಹವನ್ನು ಯಾಚಿಸುತ್ತೇವೆ. ನಿಮ್ಮ ರಕ್ಷಣೆಗಳು ಪಾಪರಹಿತವಾದವು. ಅವು ನಮಗೆ ಮಂಗಳವನ್ನುಂಟುಮಾಡತಕ್ಕವು.

## English Translation.

Grant us that happiness of yours, as birds (spread) their wings ; O you possessed of all wealth, we solicit all riches suitable for our dwelling ; your aids are void of harm, your aids are true aids.

‖ ಸಂಹಿತಾಪಾಠಃ ‖

ಯಸ್ಮಾ ಅರಾಸತ ಕ್ಷಯಂ ಜೀವಾತುಂ ಚ ಪ್ರಚೇತಸಃ ।
ಮನೋರ್ವಿಶ್ವಸ್ಯ ಘೇದಿಮ ಆದಿತ್ಯಾ ರಾಯ ಈಶತೇಽನೇಹಸೋ ವ
ಊತಯಃ ಸುಊತಯೋ ವ ಊತಯಃ ‖ ೪ ‖

‖ ಪದಪಾಠಃ ‖

ಯಸ್ಮೈ । ಅರಾಸತ । ಕ್ಷಯಂ । ಜೀವಾತುಂ । ಚ । ಪ್ರಽಚೇತಸಃ ।
ಮನೋಃ । ವಿಶ್ವಸ್ಯ । ಘ । ಇತ್ । ಇಮೇ । ಆದಿತ್ಯಾಃ । ರಾಯಃ । ಈಶತೇ । ಅನೇಹಸಃ । ವಃ ।
ಊತಯಃ । ಸುಽಊತಯಃ । ವಃ । ಊತಯಃ ‖ ೪ ‖

‖ ಸಾಯಣಭಾಷ್ಯಂ ‖

ಯಸ್ಮೈ ಮನುಷ್ಯಾಯ ಕ್ಷಯಂ ನಿವಾಸಂ ಜೀವಾತುಂ ಜೀವನಸಾಧನಮನ್ನಂ ಚ ಪ್ರಚೇತಸಃ ಪ್ರಕೃಷ್ಟಮತಯೋಽರಾಸತ ಪ್ರಯಚ್ಛಂತಿ ತಸ್ಮೈ ಯಜಮಾನಾಯ ತದರ್ಥಮಿಮ ಆದಿತ್ಯಾ ವಿಶ್ವಸ್ಯ ಘೇತ್ ಸರ್ವಸ್ಯಾಪ್ಯಯಷ್ಟುರ್ಮನೋರ್ಮನುಷ್ಯಸ್ಯ ಧನಿಕಸ್ಯ ರಾಯೋ ಧನಸ್ಯೇಶತೇ । ಸ್ವಾಮಿನೋ ಭವಂತ್ಯಪಹೃತ್ಯ ಯಜಮಾನಾಯ ಪ್ರದಾತುಂ ‖

। ಪ್ರತಿಪದಾರ್ಥ ।

**ಪ್ರಚೇತಸಃ**—ಉತ್ಕೃಷ್ಟವಾದ ಜ್ಞಾನವುಳ್ಳ । **ಇಮೇ ಆದಿತ್ಯಾಃ**—ಈ ಆದಿತ್ಯರು । **ಯಸ್ಮೈ**—ಯಾವ ಮಾನವನಿಗಾದರೂ । **ಕ್ಷಯಂ**—ನಿವಾಸಸ್ಥಾನವನ್ನೂ । **ಜೀವಾತುಂ ಚ**—ಜೀವನಸಾಧನವಾದ ಅನ್ನವನ್ನೂ । **ಅರಾಸತ**—ಕೊಡುವರೋ । **ಮನೋಃ**—ಅಂತಹ ಮಾನವನ ಹಿತಕ್ಕಾಗಿ । **ವಿಶ್ವಸ್ಯ ಘೇತ್**—ಸಮಸ್ತವಾದ ಯಜ್ಞಮಾಡದಿರುವ ಧನಿಕರ । **ರಾಯಃ**—ಧನಕ್ಕೂ । **ಈಶತೇ**—ಒಡೆಯರಾಗಿರುತ್ತಾರೆ । (**ಎಲೈ** ಆದಿತ್ಯರೇ) । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಕಲ್ಯಾಣಾತ್ಮಕವಾದವು.

‖ ಭಾವಾರ್ಥ ‖

ಉತ್ಕೃಷ್ಟಜ್ಞಾನವುಳ್ಳ ಈ ಆದಿತ್ಯರು ಯಾವ ಯಜಮಾನನಿಗಾದರೂ ನಿವಾಸಸ್ಥಾನವನ್ನೂ, ಜೀವನಸಾಧನವಾದ ಅನ್ನವನ್ನು ಕೊಡಲಿಚ್ಛಿಸಿದರೆ ಅಂತಹ ಯಜಮಾನನ ಹಿತಕ್ಕಾಗಿ ಉಳಿದ ಯಜ್ಞಕರ್ತರಲ್ಲದ ಧನಿಕರ ಧನವನ್ನು ಅಪಹರಿಸಿ ಇವನಿಗೆ ಕೊಡುತ್ತಾರೆ. ಎಲೈ ಆದಿತ್ಯರೇ, ನಿಮ್ಮ ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಕಲ್ಯಾಣಾತ್ಮಕವಾದವು.

## English Translation.

To whomsoever these wise Adityas grant a dwelling and the means of life, (for him) they master the wealth of every man; your aids are void of harm, your aids are true aids.

॥ ಸಂಹಿತಾಪಾಠಃ ॥

**ಪರಿ ಣೋ ವೃಣಜನ್ನಘಾ ದುರ್ಗಾಣಿ ರಥ್ಯೋ ಯಥಾ ।**

**ಸ್ಯಾಮೇದಿಂದ್ರಸ್ಯ ಶರ್ಮಣ್ಯಾದಿತ್ಯಾನಾಮುತಾವಸ್ಯನೇಹಸೋ ವ ಊತಯಃ**

**ಸುಊತಯೋ ವ ಊತಯಃ ॥ ೫ ॥**

॥ ಪದಪಾಠಃ ॥

**ಪರಿ । ನಃ । ವೃಣಜನ್ । ಅಘಾ । ದುಃಽಗಾನಿ । ರಥ್ಯಃ । ಯಥಾ ॥**

**ಸ್ಯಾಮ । ಇತ್ । ಇಂದ್ರಸ್ಯ । ಶರ್ಮಣಿ । ಆದಿತ್ಯಾನಾಂ । ಉತ । ಅವಸಿ । ಅನೇಹಸಃ । ವಃ ।**

**ಊತಯಃ । ಸುಽಊತಯಃ । ವಃ । ಊತಯಃ ॥ ೫ ॥**

॥ ಸಾಯಣಭಾಷ್ಯಂ ॥

**ಪರಿ ವೃಣಜನ್ ಪರಿವರ್ಜಯಂತು ನೋಽಸ್ಮಾಕಮಘಾನಿ ಪಾಪಾನಿ । ತತ್ರ ದೃಷ್ಟಾಂತಃ । ದುರ್ಗಾಣಿ ದುರ್ಗಮನಾನ್ ಪ್ರದೇಶಾನವಟಸ್ಥಾಣ್ವಾದಿಕಾನ್ ಯಥಾ ಪರಿವರ್ಜಯಂತಿ ತದ್ವತ್ । ಇಂದ್ರಸ್ಯ ಶರ್ಮಣಿ ಸ್ಯಾಮ । ಭವೇಮ ವಯಂ । ಉತಾಪಿ ಚಾದಿತ್ಯಾನಾಮವಸಿ ರಕ್ಷಣೇ ಚ ಸ್ಯಾಮ ॥**

॥ ಪ್ರತಿಪದಾರ್ಥ ॥

**ಯಥಾ**—ಯಾವ ರೀತಿಯಲ್ಲಿ । **ರಥ್ಯಃ**—ರಥಿಕರು । **ದುರ್ಗಾನಿ**—ಕಠಿನವಾದ ಗಮನಮಾರ್ಗಗಳನ್ನೂ ಪರಿಹರಿಸಿ ದೂರವಿರುವರೋ ಹಾಗೆಯೇ । **ನಃ**—ನಮ್ಮ । **ಅಘಾ**—ಪಾಪಗಳೂ ಸಹ । **ಪರಿ ವೃಣಜನ್**—ನಮ್ಮನ್ನು ಪರಿಹರಿಸಿ ದೂರವಿರಲಿ । **ಇಂದ್ರಸ್ಯ ಇತ್**—ಇಂದ್ರನಿಂದಲೇ ದತ್ತವಾದ । **ಶರ್ಮಣಿ**—ಸುಖದಲ್ಲಿ । **ಸ್ಯಾಮ**—ನಾವು ಇರುವಂತಾಗಲಿ । **ಉತ**—ಮತ್ತು । **ಆದಿತ್ಯಾನಾಂ**—ಆದಿತ್ಯರ । **ಅವಸಿ**—ರಕ್ಷಣೆಯಲ್ಲಿಯೂ ಇರುವಂತಾಗಲಿ (ಎಲೈ ಇಂದ್ರಾದಿದೇವತೆಗಳೇ) । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಕಲ್ಯಾಣಾತ್ಮಕವಾದವು

॥ ಭಾವಾರ್ಥ ॥

ಯಾವ ರೀತಿಯಲ್ಲಿ ರಥಿಕರು ಕಠಿನವಾದ ಗಮನಮಾರ್ಗಗಳನ್ನು ಪರಿಹರಿಸಿ ದೂರಸರಿಯುವರೋ ಹಾಗೆಯೇ ನಮ್ಮ ಪಾಪಗಳೂ ಸಹ ನಮ್ಮನ್ನು ಪರಿಹರಿಸಿ ದೂರಸರಿಯಲಿ. ಇಂದ್ರನಿಂದ ದತ್ತವಾದ ಸುಖದಲ್ಲಿಯೂ, ಆದಿತ್ಯರ ರಕ್ಷಣೆಯಲ್ಲಿಯೂ ನಾವು ಇರುವಂತಾಗಲಿ. ಎಲೈ ಇಂದ್ರಾದಿದೇವತೆಗಳೇ, ನಿಮ್ಮ ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಕಲ್ಯಾಣಾತ್ಮಕವಾದವು.

## English Translation.

May our sins avoid us as charioteers, inaccessible places, we abide in **Indra**'s happiness and in the protection of the Adityas; your aids are void of **harm**, your aids are true aids.

॥ ಸಂಹಿತಾಪಾಠಃ ॥

ಪರಿಹ್ವೃತೇದನಾ ಜನೋ ಯುಷ್ಮಾದತ್ತಸ್ಯ ವಾಯತಿ ।
ದೇವಾ ಅದಭ್ರಮಾಶ ವೋ ಯಮಾದಿತ್ಯಾ ಅಹೇತನಾನೇಹಸೋ ವ
ಊತಯಃ ಸುಊತಯೋ ವ ಊತಯಃ ॥ ೬ ॥

॥ ಪದಪಾಠಃ ॥

ಪರಿऽಹ್ವೃತಾ । ಇತ್ । ಅನಾ । ಜನಃ । ಯುಷ್ಮಾऽದತ್ತಸ್ಯ । ವಾಯತಿ ।
ದೇವಾಃ । ಅದಭ್ರಂ । ಆಶ । ವಃ । ಯಂ । ಆದಿತ್ಯಾಃ । ಅಹೇತನ । ಅನೇಹಸಃ । ವಃ । ಊತಯಃ ।
ಸುऽಊತಯಃ । ವಃ । ಊತಯಃ ॥ ೬ ॥

॥ ಸಾಯಣಭಾಷ್ಯಂ ॥

ಪರಿಹ್ವೃತೇತ್ ಪರಿಪೀಡಿತೇನ್ನೈವ ಶಪೋನಿಯಮಾದಿನಾನಾ ಪ್ರಾಣಯುಕ್ತೋ ಜನೋ ಯುಷ್ಮಾದತ್ತಸ್ಯ ಯುಷ್ಮಾಭಿರ್ದತ್ತಂ ಧನಂ ॥ ಕರ್ಮಣಿ ಷಷ್ಠೀ ॥ ವಾಯತಿ । ಗಚ್ಛತಿ । ಹೇ ದೇವಾ ಹೇ ಆಶವಃ ಶೀಘ್ರಗಮನಾಃ ಯೂಯಂ ಯಂ ಯಜಮಾನಮಹೇತನ ಪ್ರಾಪ್ನುಥಃ ಸ ಜನೋऽದಭ್ರಮನಲ್ಪಂ ಧನಂ ವಾಯತಿ ಪ್ರಾಪ್ನೋತೀತಿ ಸಂಬಂಧಃ ॥

॥ ಪ್ರತಿಪದಾರ್ಥ ॥

**ದೇವಾಃ**—ದೇವತಾತ್ಮರೂ । **ಆ ಶವಃ**—ಶೀಘ್ರಗಾಮಿಗಳೂ ಆದ । **ಆದಿತ್ಯಾಃ**—ಎಲೈ ಆದಿತ್ಯರೇ । **ಅನಾ**—ಸಜೀವಿಯಾದ । **ಜನಃ**—ಮಾನವನು । **ಯುಷ್ಮಾದತ್ತಸ್ಯ**—ನಿಮ್ಮಿಂದ ದತ್ತವಾದ ಧನವನ್ನು ।

**ಪರಿಹ್ವೃತಾ ಇತ್**—ಸಂಯಮಾದಿ ತಪಃಕ್ಲೇಶಗಳಿಂದ ಮಾತ್ರ | **ನಾಯತಿ**—ಪಡೆಯಬಲ್ಲನು | **ಯಂ**—ಯಾವ ಮಾನವನನ್ನು | **ಅಹೇತನ**—ನೀವು ಸಮೀಪಿಸಿ ಹೋಗುವಿರೋ ಅವನು | **ಅದಭ್ರಂ—ಪ್ರಭೂತವಾದ** ಧನವನ್ನು ಪಡೆಯುತ್ತಾನೆ | (ಎಲೈ ಆದಿತ್ಯರೇ) **ವಃ**—ನಿಮ್ಮ | **ಊತಯಃ**—ರಕ್ಷಣೆಗಳು | **ಅನೇಹಸಃ**—ಪಾಪರಹಿತವಾದವು | **ವಃ**—ನಿಮ್ಮ | **ಊತಯಃ**—ರಕ್ಷಣೆಗಳು | **ಸು ಊತಯಃ**—ಮಂಗಳಕರ**ವಾದವು.**

|| ಭಾವಾರ್ಥ ||

ದೇವತಾತ್ಮರೂ, ಶೀಘ್ರಗಾಮಿಗಳೂ ಆದ ಎಲೈ ಆದಿತ್ಯರೇ, ಸಜೀವಿಯಾದ ಮಾನವನು **ನಿಮ್ಮಿಂದ** ದತ್ತವಾದ ಧನವನ್ನು ಸಂಯಮಾದಿ ತಪಃಕ್ಲೇಶಗಳಿಂದ ಮಾತ್ರ ಪಡೆಯಬಲ್ಲನು. ಯಾವ ಮಾನವನನ್ನು **ಅನುಗ್ರಹಿಸಿ** ನೀವು ಅವನಲ್ಲಿಗೆ ಹೋಗುವಿರೋ ಅವನು ಪ್ರಭೂತವಾದ ಧನವನ್ನು ಪಡೆಯುತ್ತಾನೆ ಎಲೈ ಆದಿತ್ಯರೇ, **ನಿಮ್ಮ** ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಮಂಗಳಕರವಾದವು.

## English Translation.

Only by painful means does a living man obtain the wealth which you bestow; but he whom you, divine Adityas, visit, wins great (riches); your aids are void of harm, your aids are true aids.

|| ಸಂಹಿತಾಪಾಠಃ ||

ನ ತಂ ತಿಗ್ಮಂ ಚನ ತ್ಯಜೋ ನ ದ್ರಾಸದಭಿ ತಂ ಗುರು |
ಯಸ್ಮಾ ಉ ಶರ್ಮ ಸಪ್ರಥ ಆದಿತ್ಯಾಸೋ ಅರಾಧ್ವಮನೇಹಸೋ ವ
ಊತಯಃ ಸುಊತಯೋ ವ ಊತಯಃ || ೭ ||

|| ಪದಪಾಠಃ ||

ನ | ತಂ | ತಿಗ್ಮಂ | ಚನ | ತ್ಯಜಃ | ನ | ದ್ರಾಸತ್ | ಅಭಿ | ತಂ | ಗುರು |
ಯಸ್ಮೈ | ಊಂ ಇತಿ | ಶರ್ಮ | ಸಽಪ್ರಥಃ | ಆದಿತ್ಯಾಸಃ | ಅರಾಧ್ವಂ | ಅನೇಹಸಃ | ವಃ | ಊತಯಃ |
ಸುಽಊತಯಃ | ವಃ | ಊತಯಃ || ೭ ||

|| ಸಾಯಣಭಾಷ್ಯಂ ||

**ತಂ ಮನುಷ್ಯಂ ತಿಗ್ಮಂ ಚನ ತೀಕ್ಷ್ಣಮೇವ ಸಂತಂ ತ್ಯಜಃ | ಕ್ರೋಧನಾಮೈತತ್ | ಅತ್ರ ಕ್ರೋಧಾತ್ಪ್ರಯುಜ್ಯಮಾನಮಾಯುಧಮುಚ್ಯತೇ | ನ ದ್ರಾಸತ್ || ದ್ರಾ ಕುತ್ಸಾಯಾಂ ಗತೌ || ಕುತ್ಸಿತಂ ನಾಗಚ್ಛತಿ | ನ ಹಿನಸ್ತೀತ್ಯರ್ಥಃ | ತಥಾ ತಂ ಜನಂ ಗುರು ಪ್ರವೃದ್ಧಮುಪರಿಹಾರಾರ್ಹಂ ದುಃಖಂ ನ**

ದ್ರಾಸತ್ । ನ ಗಚ್ಛತಿ । ಹೇ ಆದಿತ್ಯಾಸ ಆದಿತ್ಯಾಃ ಸಪ್ರಥಃ ಸಮಾನಪ್ರಥನಾಃ ಸರ್ವತಃ ಪೃಥುಭೂತಾ ವಾ ಯೂಯಂ ಯುಷ್ಮಾ ಉ ಯಸ್ಮೈ ಯಜಮಾನಾಯ । ಉಶಬ್ದಃ ಪೂರಣಃ । ಶರ್ಮ ಸುಖಮರಾಧ್ವಂ ಅದತ್ತಂ ತಂ ನ ದ್ರಾಸದಿತಿ ॥

॥ ಪ್ರತಿಪದಾರ್ಥ ॥

**ಆದಿತ್ಯಾಸಃ**— ಎಲೈ ಆದಿತ್ಯರೇ । **ಸಪ್ರಥಾಸಃ**— ವಿಸ್ತೃತವಾಗಿ ವ್ಯಾಪಿಸಿರುವ ನೀವು । **ಯಸ್ಮೈ**— ಯಾವ ಯಜಮಾನನಿಗೆ । **ಶರ್ಮ**— ಸುಖವನ್ನು । **ಅರಾಧ್ವಂ**— ಕೊಡುವಿರೋ । **ತಂ**— ಆ ಯಜಮಾನನನ್ನು । **ತಿಗ್ಮಂ ಚನ**— ಅತಿ ತೀಕ್ಷ್ಣವಾದ । **ತ್ಯಜಃ**— ಕ್ರೋಧವು । **ನ ದ್ರಾಸತ್**— ಸಮೀಪಿಸಿ ಹಿಂಸಿಸುವುದಿಲ್ಲ । **ತಂ ಅಭಿ**— ಅವನನ್ನು ಲಕ್ಷಿಸಿ । **ಗುರು**— ಅಧಿಕವಾದ ದುಃಖವು । **ನ**— ಸಮೀಪಿಸುವುದಿಲ್ಲ । **ವಃ**— ನಿಮ್ಮ । **ಊತಯಃ**— ರಕ್ಷಣೆಗಳು । **ಅನೇಹಸಃ**— ಪಾಪರಹಿತವಾದವು । **ವಃ**— ನಿಮ್ಮ । **ಊತಯಃ**— ರಕ್ಷಣೆಗಳು । **ಸುಊತಯಃ**— ಕಲ್ಯಾಣಕಾರಕವು.

॥ ಭಾವಾರ್ಥ ॥

ಎಲೈ ಆದಿತ್ಯರೇ, ವಿಸ್ತೃತವಾಗಿ ವ್ಯಾಪಿಸಿರುವ ನೀವು ಯಾವ ಯಜಮಾನನಿಗೆ ಸುಖವನ್ನು ನೀಡುವಿರೋ ಆ ಯಜಮಾನನನ್ನು ತೀಕ್ಷ್ಣವಾದ ಕ್ರೋಧವಾಗಲಿ, ಅಧಿಕವಾದ ದುಃಖವಾಗಲಿ ಸಮೀಪಿಸುವುದಿಲ್ಲ, ಮತ್ತು ಹಿಂಸಿಸುವುದಿಲ್ಲ. ನಿಮ್ಮ ರಕ್ಷಣೆಗಳು ಪಾಪರಹಿತವು ಮತ್ತು ಕಲ್ಯಾಣಕಾರಕವು.

## English Translation.

Him fierce wrath touches not, nor heavy (calamity), to whom, Adityas, you have given great happiness ; your aids are void of harm, your aids are true aids.

॥ ಸಂಹಿತಾಪಾಠಃ ॥

ಯುಷ್ಮೇ ದೇವಾ ಅಪಿ ಷ್ಮಸಿ ಯುಧ್ಯಂತ ಇವ ವರ್ಮಸು ।
ಯೂಯಂ ಮಹೋ ನ ಏನಸೋ ಯೂಯಮರ್ಭಾದುರುಷ್ಯತಾನೇಹಸೋ
ವ ಊತಯಃ ಸುಊತಯೋ ವ ಊತಯಃ ॥ ೮ ॥

॥ ಪದಪಾಠಃ ॥

ಯುಷ್ಮೇ ಇತಿ । ದೇವಾಃ । ಅಪಿ । ಸ್ಮಸಿ । ಯುಧ್ಯಂತಃಽಇವ । ವರ್ಮಽಸು ।
ಯೂಯಂ । ಮಹಃ । ನಃ । ಏನಸಃ । ಯೂಯಂ । ಅರ್ಭಾತ್ । ಉರುಷ್ಯತ । ಅನೇಹಸಃ । ವಃ ।
ಊತಯಃ । ಸುಽಊತಯಃ । ವಃ । ಊತಯಃ ॥ ೮ ॥

॥ ಸಾಯಣ ಭಾಷ್ಯಂ ॥

ಹೇ ದೇವಾ ಆದಿತ್ಯಾಃ ಯುಷ್ಮೇ ಯುಷ್ಮಾಸು ವಯಮಪಿ ಸ್ಮಸಿ । ಅಪಿ ಭವೇಮ । ಯುಷ್ಮಾಭಿರಭಿಹಿತಾಃ ಸ್ಮೇತ್ಯರ್ಥಃ । ತತ್ರ ದೃಷ್ಟಾಂತಃ । ಯುಧ್ಯಂತಃ ಶೂರಾ ವರ್ಮಸು ಕವಚೇಷು ಯಥಾ ಭವಂತಿ ತದ್ವತ್ । ಯೂಯಂ ನೋಽಸ್ಮಾನ್ ಮಹೋ ಮಹತ ಏನಸಃ ಪಾಪಾದುರುಷ್ಯತ । ರಕ್ಷತ । ತಥಾ ಯೂಯಮಸ್ಮಾನರ್ಭಾದಲ್ಪಾದಪ್ಯೇನಸ ಉರುಷ್ಯತ ॥

॥ ಪ್ರತಿಪದಾರ್ಥ ॥

**ದೇವಾಃ**—ದೇವತಾತ್ಮರಾದ ಎಲೈ ಆದಿತ್ಯರೇ । **ಯುಧ್ಯಂತಃ**—ಯುದ್ಧಮಾಡತಕ್ಕ ಶೂರರು । **ವರ್ಮಸು**—ತಮ್ಮ ಯುದ್ಧಕವಚಗಳಲ್ಲಿ ರಕ್ಷಣೆಯನ್ನು ಪಡೆಯುವಂತೆ । (**ವಯಂ**—ನಾವು) । **ಯುಷ್ಮೇ**—ನಿಮ್ಮಲ್ಲಿ । **ಅಪಿ ಸ್ಮಸಿ**—ಆಶ್ರಯವನ್ನು ಹೊಂದಿರುವೆವು । **ಯೂಯಂ**-ನೀವು । **ನಃ**-ನಮ್ಮನ್ನು । **ಮಹಃ**—ಮಹತ್ತಾದ । **ಏನಸಃ**—ಪಾಪದಿಂದ । **ಉರುಷ್ಯತ**—ರಕ್ಷಿಸಿರಿ । **ಯೂಯಂ**—ನೀವು । **ಅರ್ಭಾತ್**—ಸಣ್ಣ ಪಾಪಗಳಿಂದಲೂ ರಕ್ಷಿಸಿರಿ । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಕಲ್ಯಾಣಾತ್ಮಕವಾದವು.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಆದಿತ್ಯರೇ, ಯುದ್ಧಮಾಡತಕ್ಕ ಶೂರರು ತಮ್ಮ ಯುದ್ಧಕವಚಗಳಲ್ಲಿ ರಕ್ಷಣೆಯನ್ನು ಪಡೆಯುವಂತೆ ನಾವು ನಿಮ್ಮಲ್ಲಿ ಆಶ್ರಯವನ್ನು ಹೊಂದುವಂತಾಗಲಿ. ನೀವು ನಮ್ಮನ್ನು ಮಹತ್ತಾದ ಪಾಪದಿಂದಲೂ, ಅಲ್ಪವಾದ ಪಾಪದಿಂದಲೂ ರಕ್ಷಿಸಿರಿ. ನಿಮ್ಮ ರಕ್ಷಣೆಗಳು ಪಾಪರಹಿತವಾದವು ಮತ್ತು ಮಂಗಳಕರವಾದವು.

## English Translation.

Deities, may we abide in you as warriors in their armour ; defend us from great evil, defend us from little ; your aids are void of harm, your aids are true aids.

॥ ಸಂಹಿತಾಪಾಠಃ ॥

ಅದಿತಿರ್ನ ಉರುಷ್ಯತ್ವದಿತಿಃ ಶರ್ಮ ಯಚ್ಛತು ।

ಮಾತಾ ಮಿತ್ರಸ್ಯ ರೇವತೋಽರ್ಯಮ್ಣೋ ವರುಣಸ್ಯ ಚಾನೇಹಸೋ ವ

ಊತಯಃ ಸುಊತಯೋ ವ ಊತಯಃ ॥ ೯ ॥

|| ಪದಪಾಠಃ ||

ಅದಿತಿಃ | ನಃ | ಉರುಷ್ಯತು | ಅದಿತಿಃ | ಶರ್ಮ | ಯಚ್ಛತು |

ಮಾತಾ | ಮಿತ್ರಸ್ಯ | ರೇವತಃ | ಅರ್ಯಮ್ಣಃ | ವರುಣಸ್ಯ | ಚ | ಅನೇಹಸಃ | ವಃ | ಊತಯಃ |

ಸುಽಊತಯಃ | ವಃ | ಊತಯಃ || ೯ ||

|| ಸಾಯಣಭಾಷ್ಯಂ ||

ನೋಽಸ್ಮಾನದಿತಿರಖಂಡನೀಯಾ ದೇವಮಾತೋರುಷ್ಯತು | ರಕ್ಷತು | ತಥಾದಿತಿಃ ಶರ್ಮ ಸುಖಂ ಯಚ್ಛತು | ಅದಿತಿರ್ವಿಶೇಷ್ಯತೇ | ಯಾ ಮಾತಾ ನಿರ್ಮಾತ್ರೀ | ಕಸ್ಯ | ಮಿತ್ರಸ್ಯ ರೇವತೋ ಧನವತೋಽರ್ಯಮ್ಣೋ ವರುಣಸ್ಯ ಚ | ಸಾ ನ ಉರುಷ್ಯತ್ವಿತಿ ||

|| ಪ್ರತಿಪದಾರ್ಥ ||

**ರೇವತಃ**—ಧನವಂತನಾದ | **ಮಿತ್ರಸ್ಯ**-ಮಿತ್ರನಿಗೂ | **ಅರ್ಯಮ್ಣಃ**-ಅರ್ಯಮನಿಗೂ | **ವರುಣಸ್ಯ ಚ**—ವರುಣನಿಗೂ | **ಮಾತಾ**—ಜನನಿಯಾದ | **ಅದಿತಿಃ**—ಅದಿತಿಯು | **ನಃ**—ನಮ್ಮನ್ನು | **ಉರುಷ್ಯತು**—ರಕ್ಷಿಸಲಿ | **ಅದಿತಿಃ**—ದೇವಮಾತೆಯಾದ ಅದಿತಿಯು | **ಶರ್ಮ**—ಸುಖವನ್ನು | **ಯಚ್ಛತು**—ನಮಗೆ ಕೊಡಲಿ | (ಎಲೈ ದೇವತೆಗಳೇ) **ವಃ**—ನಿಮ್ಮ | **ಊತಯಃ**—ರಕ್ಷಣೆಗಳು | **ಅನೇಹಸಃ**—ಪಾಪರಹಿತವಾದವು | **ವಃ**—ನಿಮ್ಮ | **ಊತಯಃ**—ರಕ್ಷಣೆಗಳು | **ಸುಊತಯಃ**—ಅತ್ಯುತ್ತಮವಾದವು.

| ಭಾವಾರ್ಥ |

ಧನವಂತನಾದ ಮಿತ್ರನಿಗೂ, ಅರ್ಯಮನಿಗೂ, ವರುಣನಿಗೂ ಜನನಿಯಾದ ಅದಿತಿಯು ನಮ್ಮನ್ನು ರಕ್ಷಿಸಲಿ. ದೇವಮಾತೆಯಾದ ಅದಿತಿಯು ನಮಗೆ ಸುಖವನ್ನು ಕೊಡಲಿ. ಎಲೈ ದೇವತೆಗಳೇ, ನಿಮ್ಮ ರಕ್ಷಣೆಗಳು ಅತ್ಯುತ್ತಮವೂ, ಪಾಪರಹಿತವೂ, ಮಂಗಳಕರವೂ ಆಗಿವೆ.

## English Translation.

May Aditi defend us, may Aditi grant us happiness, the mother of the wealthy Mitra, Aryaman and Varuna; your aids are void of harm, your aids are true aids.

|| ಸಂಹಿತಾಪಾಠಃ ||

ಯದ್ದೇವಾಃ ಶರ್ಮ ಶರಣಂ ಯದ್ಭದ್ರಂ ಯದನಾತುರಂ |

ತ್ರಿಧಾತು ಯದ್ವರೂಥ್ಯಂ ೧ ತದಸ್ಮಾಸು ವಿ ಯಂತನಾನೇಹಸೋ ವ

ಊತಯಃ ಸುಊತಯೋ ವ ಊತಯಃ || ೧೦ ||

॥ ಪದಪಾಠಃ ॥

ಯತ್ । ದೇವಾಃ । ಶರ್ಮ । ಶರಣಂ । ಯತ್ । ಭದ್ರಂ । ಯತ್ । ಅನಾತುರಂ ।
ತ್ರಿಽಧಾತು । ಯತ್ । ವರೂಥ್ಯಂ । ತತ್ । ಅಸ್ಮಾಸು । ವಿ । ಯಂತನ । ಅನೇಹಸಃ । ವಃ । ಊತಯಃ ।
ಸುಽಊತಯಃ । ವಃ । ಊತಯಃ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ದೇವಾ ಆದಿತ್ಯಾಃ ಯಚ್ಛರ್ಮ ಸುಖಂ ಶರಣಂ ಶರಣೀಯಂ । ಯದ್ಭದ್ರಂ ಸರ್ವೈರ್ಭಜನೀಯಂ । ಯದನಾತುರಂ ರೋಗರಹಿತಂ । ಯತ್ತ್ರಿಧಾತು ತ್ರಿಗುಣಂ । ಯದ್ವರೂಥ್ಯಂ । ವರೂಥಂ ಗೃಹಂ । ತದರ್ಹಂ । ತದುಕ್ತಗುಣಕಂ ಶರ್ಮಾಸ್ಮಾಸು ವಿ ಯಂತನ । ವಿಯಚ್ಛತ ॥

॥ ಪ್ರತಿಪದಾರ್ಥ ॥

**ದೇವಾಃ**—ಎಲೈ ಆದಿತ್ಯರೇ । **ಯತ್**—ಯಾವ । **ಶರ್ಮ**—ಸುಖವು । **ಶರಣಂ** - ನಮಗೆ ಆಶ್ರಯ ಸ್ಥಾನವಾಗಿದೆಯೋ । **ಯತ್**—ಯಾವುದು । **ಭದ್ರಂ**—ಮಂಗಳಕರವಾಗಿದೆಯೋ । **ಯತ್**—ಯಾವುದು । **ಅನಾತುರಂ**—ರೋಗರಹಿತವಾಗಿರುವುದೋ । **(ಯತ್) ತ್ರಿಧಾತು**—ಯಾವುದು ಮೂರು ಗುಣಗಳಿಂದಲೂ ಕೂಡಿಕೊಂಡಿರುವುದೋ । **ಯತ್**— ಯಾವುದು । **ವರೂಥ್ಯಂ**—ಗೃಹದಂತೆ ರಕ್ಷಕವೋ । **ತತ್**—ಅಂತಹ ಸುಖವನ್ನು । **ಅಸ್ಮಾಸು**—ನಮಗೆ । **ವಿ ಯಂತನ**—ಕೊಡಿರಿ । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**— ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಅತ್ಯುತ್ತಮವಾದವು.

॥ ಭಾವಾರ್ಥ ॥

ಎಲೈ ಆದಿತ್ಯರೇ, ಯಾವ ಸುಖವು ನಮಗೆ ಆಶ್ರಯಸ್ಥಾನವಾಗಿದೆಯೋ, ಯಾವುದು ಮಂಗಳಕರವಾಗಿದೆಯೋ, ಯಾವುದು ರೋಗರಹಿತವಾಗಿರುವುದೋ, ಯಾವುದು ಮೂರು ಗುಣಗಳಿಂದಲೂ ಕೂಡಿಕೊಂಡಿರುವುದೋ, ಯಾವುದು ಗೃಹದಂತೆ ರಕ್ಷಕವಾಗಿರುವುದೋ ಅಂತಹ ಸುಖವನ್ನು ನಮಗೆ ಕೊಡಿರಿ. ನಿಮ್ಮ ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಅತ್ಯುತ್ತಮವಾದವು.

## English Translation.

Grant to us, deities, that happiness which is a refuge, auspicious, and free from sickness, which is threefold and fit for a (secure) shelter ; your aids are void of harm, your aids are true aids.

॥ ಸಂಹಿತಾಪಾಠಃ ॥

ಆದಿತ್ಯಾ ಅವ ಹಿ ಖ್ಯತಾಧಿ ಕೂಲಾದಿವ ಸ್ಪಶಃ ।

ಸುತೀರ್ಥಮರ್ವತೋ ಯಥಾನು ನೋ ನೇಷಥಾ ಸುಗಮನೇಹಸೋ ವ

ಊತಯಃ ಸುಊತಯೋ ವ ಊತಯಃ ॥ ೧೧ ॥

॥ ಪದಪಾಠಃ ॥

ಆದಿತ್ಯಾಃ । ಅವ । ಹಿ । ಖ್ಯತ । ಅಧಿ । ಕೂಲಾತ್ಽಇವ । ಸ್ಪಶಃ ।

ಸುಽತೀರ್ಥಂ । ಅರ್ವತಃ । ಯಥಾ । ಅನು । ನಃ । ನೇಷಥ । ಸುಽಗಂ । ಅನೇಹಸಃ । ವಃ । ಊತಯಃ ।

ಸುಽಊತಯಃ । ವಃ । ಊತಯಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಆದಿತ್ಯಾಃ ಯೂಯಮವ ಹಿ ಖ್ಯತ । ಅವ ಹಿ ಪಶ್ಯತಾಧಸ್ತಾತ್ಸ್ಥಿತಾನಸ್ಮಾನ್ । ತತ್ರ ದೃಷ್ಟಾಂತಃ । ಕೂಲಾದಧಿ ಕೂಲೇ ಸ್ಪಶಃ ಸ್ಪಷ್ಟಾಃ । ಸ್ಥಿತಾ ಇತ್ಯರ್ಥಃ । ಯಥಾ ಕೂಲಸ್ಥಃ ಪುರುಷೋಽಧೋಗತಮುದಕಂ ಜಿಜ್ಞಾಸುಸ್ತತ್ರಸ್ಥಂ ಮನುಷ್ಯಂ ವಾ ವಿಲೋಕಯಿತುಮವಾಕ್ಪಶ್ಯತಿ ತದ್ವತ್ । ತಥಾ ಕೃತ್ವಾ ಸುತೀರ್ಥಂ ಶೋಭನಾವತಾರಪ್ರದೇಶಮರ್ವತೋಽಶ್ವಾನ್ಯಥಾ ಪ್ರಾಪಯಂತ್ಯಶ್ವರಕ್ಷಕಾಃ ತದ್ವನ್ನೋಽಸ್ಮಾನ್ ಸುಗಂ ಸುಪಂಥಾನಮನು ನೇಷಥ । ಅನುನಯಥ ॥

॥ ಪ್ರತಿಪದಾರ್ಥ ॥

**ಆದಿತ್ಯಾಃ**—ಎಲೈ ಆದಿತ್ಯರೇ । **ಕೂಲಾತ್ ಅಧಿ ಸ್ಪಶಃ**—ದಡದ ಮೇಲಿರುವ ಪುರುಷನು ನೀರಿನಲ್ಲಿ ಬಿದ್ದಿರುವ ಪುರುಷನನ್ನು ಕೆಳಬಗ್ಗಿ ದಯೆಯಿಂದ ನೋಡುವಂತೆ । **ಅವ ಹಿ ಖ್ಯತ**—ಪೃಥ್ವಿಯ ಮೇಲಿರುವ ನಮ್ಮನ್ನು ಅಂತರಿಕ್ಷದಿಂದ ಕೆಳಬಗ್ಗಿ ನೋಡಿರಿ । **ಯಥಾ**—ಯಾವ ರೀತಿ । **ಅರ್ವತಃ**—ಅಶ್ವಗಳನ್ನು । **ಸುತೀರ್ಥಂ**—ಉತ್ತಮವಾದ ದಡವಿರುವ ಜಾಗಕ್ಕೆ ಅಶ್ವಪತಿಗಳು ಒಯ್ಯುವರೋ ಹಾಗೆ । **ನಃ**—ನಮ್ಮನ್ನು । **ಸುಗಂ**—ಸನ್ಮಾರ್ಗಕ್ಕೆ । **ಅನು ನೇಷಥ**—ಕರೆದೊಯ್ಯಿರಿ । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾಗಿವೆ । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಅತ್ಯುತ್ತಮವಾಗಿವೆ

॥ ಭಾವಾರ್ಥ ॥

ಎಲೈ ಆದಿತ್ಯರೇ, ದಡದ ಮೇಲಿರುವ ಪುರುಷನು ನೀರಿನಲ್ಲಿ ಬಿದ್ದಿರುವ ಪುರುಷನನ್ನು ಕೆಳಬಗ್ಗಿ ದಯೆಯಿಂದ ನೋಡುವಂತೆ, ಪೃಥ್ವಿಯ ಮೇಲಿರುವ ನಮ್ಮನ್ನು ಅಂತರಿಕ್ಷದಿಂದ ಕೆಳಬಗ್ಗಿ ನೋಡಿರಿ. ಯಾವ ರೀತಿ ಅಶ್ವಪತಿಗಳು

ಅಶ್ವಗಳನ್ನು ಉತ್ತಮವಾದ ದಡವಿರುವ ಜಾಗಕ್ಕೆ ಒಯ್ಯುವಿರೋ ಹಾಗೆ ನಮ್ಮನ್ನೂ ಸನ್ಮಾರ್ಗಕ್ಕೆ ಕರೆದೊಯ್ಯಿರಿ. ನಿಮ್ಮ ರಕ್ಷಣೆಗಳು ಪಾಪರಹಿತವೂ ಕಲ್ಯಾಣಾತ್ಮಕವೂ ಆಗಿವೆ.

## English Translation.

Adityas, look down upon us as those who look from the shore; as (men lead) their horses to a secure Ghat, so conduct us along a good path; your aids are void of harm, your aids are true aids.

॥ ಸಂಹಿತಾಪಾಠಃ ॥

ನೇಹ ಭದ್ರಂ ರಕ್ಷಸ್ವಿನೇ ನಾವಯ್ಯೈ ನೋಪಯಾ ಉತ ।
ಗವೇ ಚ ಭದ್ರಂ ಧೇನವೇ ವೀರಾಯ ಚ ಶ್ರವಸ್ಯತೇಽನೇಹಸೋ ವ
ಊತಯಃ ಸುಊತಯೋ ವ ಊತಯಃ ॥ ೧೨ ॥

॥ ಪದಪಾಠಃ ॥

ನ । ಇಹ । ಭದ್ರಂ । ರಕ್ಷಸ್ವಿನೇ । ನ । ಅವ್ಽಯೈ । ನ । ಉಪ್ಽಯೈ । ಉತ ।
ಗವೇ । ಚ । ಭದ್ರಂ । ಧೇನವೇ । ವೀರಾಯ । ಚ । ಶ್ರವಸ್ಯತೇ । ಅನೇಹಸಃ । ವಃ । ಊತಯಃ ।
ಸುಽಊತಯಃ । ವಃ । ಊತಯಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಆದಿತ್ಯಾಃ ಇಹ ಭೂಮೌ ಭದ್ರಂ ಕಲ್ಯಾಣಂ ಸುಖಂ ರಕ್ಷಸ್ವಿನೇ । ರಕ್ಷೋ ಬಲಂ । ಬಲವತೇಽಸ್ಮದ್ದ್ವೇಷ್ಟ್ರೇ ನ ಭವತ್ವಿತಿ ಶೇಷಃ । ಅವಯಾ ಅಸ್ಮಾನ್ ಹಿಂಸಿತುಮುವಗಚ್ಛತೇ ನ ಭವತು ಭದ್ರಂ । ತಥೋಪಯಾ ಉಪಗಚ್ಛತೇ ನ ಭವತು । ತರ್ಹಿ ಕಸ್ಯ ಭವತ್ವಿತಿ ಉಚ್ಯತೇ । ಗವೇ ಚ ಭದ್ರಂ ಯುಷ್ಮದೀಯಂ ಭವತು । ಚಶಬ್ದೋ ವಕ್ಷ್ಯಮಾಣಧೇನ್ವಾದ್ಯಪೇಕ್ಷಃ । ಕಿಂಚ ಧೇನವೇ ನವಪ್ರಸೂತಿಕಾಯೈ ಭದ್ರಂ ಭವತು । ವೀರಾಯಾಸ್ಮತ್ಪುತ್ರಾದಿಕಾಯ ಭದ್ರಂ ಭವತು । ಕೀದೃಶಾಯ ವೀರಾಯ । ಶ್ರವಸ್ಯತೇಽನ್ನಮಿಚ್ಛತೇ । ಅಥವೋತ್ತರಾರ್ಧೇಽಪಿ ನೇತ್ಯನುವರ್ತತೇ । ಅಸ್ಮದ್ವಿರೋಧಿನೋ ಗವಾದಿಕಾಯ ಭದ್ರಂ ನ ಭವತ್ವಿತಿ ತಸ್ಯಾರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಆದಿತ್ಯರೇ) ಇಹ—ಈ ಪೃಥ್ವಿಯಲ್ಲಿ । ರಕ್ಷಸ್ವಿನೇ—ಶಕ್ತಿಯುತನಾದ ನಮ್ಮ ಶತ್ರುವಿಗೆ । ಭದ್ರಂ—ಮಂಗಳವು । ನ—ಉಂಟಾಗದಿರಲಿ । ಅವಯೈ—ನಮ್ಮನ್ನು ಹಿಂಸಿಸಲಿಚ್ಛಿಸುವವನಿಗೂ । ನ—

ಒಳ್ಳೆಯದಾಗದಿರಲಿ | **ಉತ**—ಮತ್ತು | **ಉಪಯೈ**—ನಮ್ಮನ್ನು ಪ್ರತಿಭಟಿಸುವವನಿಗೂ | **ನ**—ಒಳ್ಳೆಯದಾಗದಿರಲಿ | **ಗವೇ ಚ**—ನಮ್ಮ ಗೋವುಗಳಿಗೆ | **ಭದ್ರಂ**—ಮಂಗಳವುಂಟಾಗಲಿ | **ಧೇನವೇ**—ನಮ್ಮ ಧೇನುಗಳಿಗೂ ಒಳ್ಳೆಯದಾಗಲಿ | **ಶ್ರವಸ್ಯತೇ**—ಅನ್ನವನ್ನು ಇಚ್ಛಿಸುವ | **ವೀರಾಯ ಚ**—ನಮ್ಮ ವೀರಪುತ್ರರಿಗೂ ಒಳ್ಳೆಯದಾಗಲಿ | **ವಃ**—ನಿಮ್ಮ | **ಊತಯಃ**-ರಕ್ಷಣೆಗಳು | **ಅನೇಹಸಃ**-ಪಾಪರಹಿತವಾದವು | **ವಃ**—ನಿಮ್ಮ | **ಊತಯಃ**—ರಕ್ಷಣೆಗಳು | **ಸುಊತಯಃ**—ಕಲ್ಯಾಣಾತ್ಮಕವಾದವು.

॥ ಭಾವಾರ್ಥ ॥

ಎಲೈ ಆದಿತ್ಯರೇ, ಈ ಪೃಥ್ವಿಯಲ್ಲಿ ಶಕ್ತಿಯುತನಾದ ನಮ್ಮ ಶತ್ರುವಿಗೆ ಮಂಗಳವುಂಟಾಗದಿರಲಿ. ನಮ್ಮನ್ನು ಹಿಂಸಿಸಲಿಚ್ಛಿಸುವವನಿಗೂ ಒಳ್ಳೆಯದಾಗದಿರಲಿ ಮತ್ತು ನಮ್ಮನ್ನು ಪ್ರತಿಭಟಿಸುವವನಿಗೂ ಒಳ್ಳೆಯದಾಗದಿರಲಿ. ನಮ್ಮ ಗೋವುಗಳಿಗೂ, ಅನ್ನೇಚ್ಛುಗಳಾದ ನಮ್ಮ ವೀರಪುತ್ರರಿಗೂ ಸದಾ ಒಳ್ಳೆಯದಾಗಲಿ. ನಿಮ್ಮ ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಕಲ್ಯಾಣಾತ್ಮಕವಾದವು.

## English Translation.

Let there not be prosperity here to our powerful (foe), nor to him who threatens or assails us; but let there be prosperity to our cattle, our milch cows, and our male offspring desirous of food; your aids are void of harm, your aids are true aids.

॥ ಸಂಹಿತಾಪಾಠಃ ॥

ಯದಾವಿರ್ಯದಪೀಚ್ಯಂ ದೇವಾಸೋ ಅಸ್ತಿ ದುಷ್ಕೃತಂ ।
ತ್ರಿತೇ ತದ್ವಿಶ್ವಮಾಪ್ತ್ಯ ಆರೇ ಅಸ್ಮದ್ದಧಾತನಾನೇಹಸೋ ವ ಊತಯಃ
ಸುಊತಯೋ ವ ಊತಯಃ ॥ ೧೩ ॥

॥ ಪದಪಾಠಃ ॥

ಯತ್ । ಆವಿಃ । ಯತ್ । ಅಪೀಚ್ಯಂ । ದೇವಾಸಃ । ಅಸ್ತಿ । ದುಃಽಕೃತಂ ।
ತ್ರಿತೇ । ತತ್ । ವಿಶ್ವಂ । ಆಪ್ತ್ಯೇ । ಆರೇ । ಅಸ್ಮತ್ । ದಧಾತನ । ಅನೇಹಸಃ । ವಃ । ಊತಯಃ ।
ಸುಽಊತಯಃ । ವಃ । ಊತಯಃ ॥ ೧೩ ॥

॥ ಸಾಯಣಭಾಷ್ಯಂ ॥

**ಹೇ ದೇವಾಸೋ ದೇವಾ ಆದಿತ್ಯಾಃ ಯದಾವಿರ್ಭೂತಂ ಪಾಪಮಾವಿರ್ಭೂತಮಸ್ತಿ । ದುಷ್ಕೃತಂ ಯಚ್ಚಾಪೀಚ್ಯಮಂತರ್ಹಿತಮಸ್ತಿ । ಅಪೀಚ್ಯಮಿತ್ಯಂತರ್ಹಿತನಾಮ । ತದ್ವಿಶ್ವಂ ತದುಭಯಮಾಪ್ತ್ಯೇ ತ್ರಿತೇ ಮಯಿ ಮಾ ಭೂತ್ । ಕಿಂತ್ವಸ್ಮದಾರೇ ದೂರೇ ದಧಾತನ । ಸ್ಥಾಪಯತ ॥**

॥ ಪ್ರತಿಪದಾರ್ಥ ॥

**ದೇವಾಸಃ**—ದೇವತಾತ್ಮರಾದ ಎಲೈ ಆದಿತ್ಯರೇ । **ಯತ್ ಆವಿಃ ಅಸ್ತಿ**—ಯಾವ ಪಾಪವು ಹೊರಕ್ಕೆ ಆವಿರ್ಭೂತವಾಗಿದೆಯೋ । **ಯತ್ ದುಷ್ಕೃತಂ**—ಯಾವ ದುಷ್ಕರ್ಮವು (ಪಾಪಸಾಧನವು) । **ಅಪೀಚ್ಯಂ**—ಅಂತರ್ಹಿತವಾಗಿದೆಯೋ । **ತದ್ವಿಶ್ವಂ**—ಎರಡು ಗುಂಪಿಗೂ ಸೇರಿದ ಈ ಎಲ್ಲಾ ಪಾಪಸಾಧನಗಳೂ । **ತ್ರಿತೇ ಆಪ್ತ್ಯೇ**—ತ್ರಿತ ಆಪ್ತ್ಯಸಂಜ್ಞಕನಾದ ನನ್ನಲ್ಲಿ ಇಲ್ಲದಿರಲಿ । **(ತತ್**—ಅವೆಲ್ಲವನ್ನೂ) । **ಅಸ್ಮತ್**—ನಮಗಿಂತಲೂ । **ಆರೇ**—ಅತಿ ದೂರದಲ್ಲಿ । **ದಧಾತನ**—ಇರಿಸಿರಿ । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾಗಿವೆ । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಮಂಗಳಕರವಾಗಿವೆ.

॥ ಭಾವಾರ್ಥ ॥

ದೇವತಾತ್ಮರಾದ ಎಲೈ ಆದಿತ್ಯರೇ, ಯಾವ ಪಾಪವು ಹೊರಕ್ಕೆ ಆವಿರ್ಭೂತವಾಗಿದೆಯೋ, ಯಾವ ದುಷ್ಕರ್ಮವು ಅಂತರ್ಹಿತವಾಗಿದೆಯೋ, ಈ ಎರಡು ಗುಂಪಿಗೂ ಸೇರಿದ ಎಲ್ಲಾ ಪಾಪಸಾಧನಗಳೂ ತ್ರಿತಆಪ್ತ್ಯನಾದ ನನ್ನಲ್ಲಿ ಇಲ್ಲದಿರಲಿ. ಅವೆಲ್ಲವನ್ನೂ ನಮಗಿಂತಲೂ ಅತಿ ದೂರದಲ್ಲಿರಿಸಿರಿ. ನಿಮ್ಮ ರಕ್ಷಣೆಗಳು ಪಾಪರಹಿತವಾಗಿವೆ. ನಿಮ್ಮ ರಕ್ಷಣೆಗಳು ಮಂಗಳಕರವಾಗಿವೆ.

## English Translation.

Deities, whatever evil is manifest, whatever is concealed, (let it be not found) in Trita Aptya, keep it far from us; your aids are void of harm, your aids are true aids.

॥ ಸಂಹಿತಾಪಾಠಃ ॥

ಯಚ್ಚ ಗೋಷು ದುಷ್ಷ್ವಪ್ನ್ಯಂ ಯಚ್ಚಾಸ್ಮೇ ದುಹಿತರ್ದಿವಃ ।
ತ್ರಿತಾಯ ತದ್ವಿಭಾವರ್ಯಾಪ್ತ್ಯಾಯ ಪರಾ ವಹಾನೇಹಸೋ ವ ಊತಯಃ
ಸುಊತಯೋ ವ ಊತಯಃ ॥ ೧೪ ॥

॥ ಪದಪಾಠಃ ॥

ಯತ್ । ಚ । ಗೋಷು । ದುಃಸ್ವಪ್ನ್ಯಂ । ಯತ್ । ಚ । ಅಸ್ಮೇ ಇತಿ । ದುಹಿತಃ । ದಿವಃ ।

ತ್ರಿತಾಯ । ತತ್ । ವಿಭಾಽವರಿ । ಆಪ್ತ್ಯಾಯ । ಪರಾ । ವಹ । ಅನೇಹಸಃ । ವಃ । ಊತಯಃ ।

ಸುಽಊತಯಃ । ವಃ । ಊತಯಃ ॥ ೧೪ ॥

॥ ಸಾಯಣಭಾಷ್ಯಂ ॥

ಯಚ್ಚ ಗೋಷ್ವಿತ್ಯಾದಿಸೂಕ್ತಶೇಷೇಣ ದುಃಸ್ವಪ್ನಂ ದೃಷ್ಟ್ವಾದಿತ್ಯಮುಪತಿಷ್ಠೇತ್ । ತಥಾ ಚ ಸ್ವಪ್ನಮನೋಜ್ಞಂ ದೃಷ್ಟ್ವೇತ್ಯುಪಕ್ರಮ್ಯ ಯಚ್ಚ ಗೋಷು ದುಷ್ಷ್ವಪ್ನ್ಯಮಿತಿ ಪಂಚಭಿರಾದಿತ್ಯಮುಪ-ತಿಷ್ಠೇತ್ । ಆ. ಗೃ. ೩-೬-೬ । ಇತಿ ಸೂತ್ರಿತಂ ॥

ಹೇ ದಿವೋ ದುಹಿತರುಷ ಉಷೋದೇವತೇ ಯಚ್ಚ ಗೋಷ್ವಸ್ಮದೀಯಾಸು ದುಷ್ಷ್ವಪ್ನ್ಯಮ-ನರ್ಥಸೂಚಕಂ ದೃಷ್ಟಂ ॥ ಸ್ವಾರ್ಥಿಕೋ ಯತ್ ॥ ಕಿಂಚ ಯಚ್ಚ ದುಷ್ಷ್ವಪ್ನ್ಯಮಸ್ಮೇ ಅಸ್ಮಾಸು ದೃಷ್ಟಂ । ಗೋಪೀಡಾನಿಮಿತ್ತಕಮಸ್ಮಾಕಂ ಪೀಡಾನಿಮಿತ್ತಕಂ ಚ ಯದ್ದುಃಸ್ವಪ್ನಂ ಪಶ್ಯಾಮ ಇತ್ಯರ್ಥಃ। ತತ್ಸರ್ವಂ ಹೇ ವಿಭಾವರಿ । ಉಷೋನಾಮೈತತ್ । ಹೇ ವ್ಯುಚ್ಛನವತಿ ದೇವಿ ಆಪ್ತ್ಯಾಯ ತ್ರಿತಾಯ ಪರಾ ವಹ । ದೂರೇ ಪರಿಹರ ॥

॥ ಪ್ರತಿಪದಾರ್ಥ ॥

**ದಿವಃ ದುಹಿತಃ**—ಸ್ವರ್ಗದ ಪುತ್ರಿಯೂ । **ವಿಭಾವರಿ**—ಕಾಂತಿಯುತಳೂ ಆದ ಎಲೈ ಉಷೋದೇವಿಯೇ। **ಗೋಷು**—ನಮ್ಮ ಗೋವುಗಳಿಗೆ । **ಯತ್ ದುಷ್ಷ್ವಪ್ನ್ಯಂ**—ಯಾವ ದುಃಸ್ವಪ್ನವು ಕಾಣಿಸಿಕೊಳ್ಳುವುದೋ । **ಯಚ್ಚ**—ಯಾವ ದುಃಸ್ವಪ್ನಗಳು । **ಅಸ್ಮೇ**—ನಮ್ಮಲ್ಲಿಯೂ ಕಾಣಿಸಿಕೊಳ್ಳುವುವೋ । **ತತ್**—ಅವೆಲ್ಲವನ್ನೂ । **ತ್ರಿತಾಯ ಆಪ್ತ್ಯಾಯ**—ತ್ರಿತಆಪ್ತ್ಯನಿಗಿಂತಲೂ । **ಪರಾ ವಹ**- ದೂರಕ್ಕೆ ಸರಿಯುವಂತೆ ಮಾಡು । (**ಎಲೈ ಉಷ** ಆದಿದೇವತೆಗಳೇ। **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾಗಿವೆ । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಕಲ್ಯಾಣಾತ್ಮಕವಾಗಿವೆ.

॥ ಭಾವಾರ್ಥ ॥

ಸ್ವರ್ಗದ ಪುತ್ರಿಯೂ, ಕಾಂತಿಯುತಳೂ ಆದ ಎಲೈ ಉಷೋದೇವಿಯೇ, ನಮ್ಮ ಗೋವುಗಳಿಗೆ ಯಾವ ದುಃಸ್ವಪ್ನವು ಕಾಣಿಸಿಕೊಳ್ಳುವುದೋ, ಯಾವ ದುಃಸ್ವಪ್ನಗಳು ನಮಗೂ ಕಾಣಿಸಿಕೊಳ್ಳುವುವೋ ಅವೆಲ್ಲವನ್ನೂ ತ್ರಿತ ಆಪ್ತ್ಯನಾದ ನನ್ನಿಂದ ದೂರ ಸರಿಯುವಂತೆ ಮಾಡು. ಎಲೈ ಉಷ ಆದಿದೇವತೆಗಳೇ, ನಿಮ್ಮ ರಕ್ಷಣೆಗಳು ಪಾಪರಹಿತ ವಾಗಿವೆ. ನಿಮ್ಮ ರಕ್ಷಣೆಗಳು ಕಲ್ಯಾಣಾತ್ಮಕವಾಗಿವೆ.

## English Translation.

Daughter of heaven, (Ushas), whatever ill-omened dream threatens our cattle or ourselves, keep it, O brilliant one, far from Trita Aptya ; your aids are void of harm, your aids are true aids.

॥ ವಿಶೇಷವಿಷಯಗಳು ॥

ಯಾರಿಗಾದರೂ ದುಃಸ್ವಪ್ನವುಂಟಾದಲ್ಲಿ ಅವರು **ಯಚ್ಚ ಗೋಷು** ಎಂದು ಮೊದಲಾಗುವ ಈ ಸೂಕ್ತದ ೧೪ನೆಯ ಋಕ್ಕಿನಿಂದ ಈ ಸೂಕ್ತದ ಕೊನೆಯವರೆಗೂ ಪಠಿಸುತ್ತಾ ಆದಿತ್ಯನನ್ನು ನೋಡಿ ಪ್ರಾರ್ಥಿಸಬೇಕು. ಈ ವಿಷಯವು ಆಶ್ವಲಾಯನಗೃಹ್ಯಸೂತ್ರದ—**ಸ್ವಪ್ನಮಮನೋಜ್ಞಂ** ಎಂದು ಪ್ರಾರಂಭಿಸಿ **ಯಚ್ಚ ಗೋಷು ದುಃಷ್ವಪ್ನ್ಯಮಿತಿ ಪಂಚಭಿರಾದಿತ್ಯಮುಪತಿಷ್ಠೇತ** ಎಂಬ ಸೂತ್ರದಿಂದ (ಆ ಗೃ. ೩-೬-೬) ವಿವೃತವಾಗಿರುವುದು

॥ ಸಂಹಿತಾಪಾಠಃ ॥

ನಿಷ್ಕಂ ವಾ ಘಾ ಕೃಣವತೇ ಸ್ರಜಂ ವಾ ದುಹಿತರ್ದಿವಃ ।
ತ್ರಿತೇ ದುಷ್ಷ್ವಪ್ನ್ಯಂ ಸರ್ವಮಾಪ್ತ್ಯೇ ಪರಿ ದದ್ಮಸ್ಯನೇಹಸೋ ವ ಊತಯಃ
ಸುಊತಯೋ ವ ಊತಯಃ ॥ ೧೫ ॥

॥ ಪದಪಾಠಃ ॥

ನಿಷ್ಕಂ । ವಾ । ಘ । ಕೃಣವತೇ । ಸ್ರಜಂ । ವಾ । ದುಹಿತಃ । ದಿವಃ ।
ತ್ರಿತೇ । ದುಃಸ್ವಪ್ನ್ಯಂ । ಸರ್ವಂ । ಆಪ್ತ್ಯೇ । ಪರಿ । ದದ್ಮಸಿ । ಅನೇಹಸಃ । ವಃ । ಊತಯಃ ।
ಸುಽಊತಯಃ । ವಃ । ಊತಯಃ ॥ ೧೫ ॥

॥ ಸಾಯಣಭಾಷ್ಯಂ ॥

**ಹೇ ದಿವೋ ದುಹಿತರುಷಃ ನಿಷ್ಕಂ ವಾ ಘಾಭರಣವಿಶೇಷಂ ವಾ ಕೃಣವತೇ ಕುರ್ವತೇ ಸ್ವರ್ಣಕಾರಾಯ ಯದ್ದುಷ್ಷ್ವಪ್ನ್ಯಂ ದೃಷ್ಟಂ । ಸ್ವರ್ಣಕಾರೇಣ ನಿರ್ಮಾಣಸಮಯೇ ದೃಷ್ಟಮಿತ್ಯರ್ಥಃ । ಘೇತಿ ಪೂರಣಃ । ವಾಶಬ್ದಶ್ಚಾರ್ಥೇ । ವಾಥವಾ ಸ್ರಜಂ ಮಾಲ್ಯಂ ಕೃಣವತೇ । ಕುರ್ವಾಣ ಇತ್ಯರ್ಥಃ । ತಸ್ಮಿನ್ನಪಿ ಮಾಲಾಕಾರೇ ಮಾಲಾನಿರ್ಮಾಣಸಮಯೇ ಯದ್ದುಷ್ಷ್ವಪ್ನ್ಯಂ ದೃಷ್ಟಂ ತದುಭಯವಿಷಯಂ ದುಃಸ್ವಪ್ನ್ಯಮಾಪ್ತ್ಯೇಽಪಾಂ ಪುತ್ರೇ ತ್ರಿತೇ ವರ್ತಮಾನಂ ಪರಿ ದದ್ಮಸಿ । ಉಪರಿ ದದ್ಮಃ । ವಯಂ ತ್ರಿತಾಃ ಪರಿತ್ಯಜಾಮೇತ್ಯರ್ಥಃ । ಅಥವಾ ತ್ರಿತೇ ಮಯಿ ಯದ್ದುಷ್ಷ್ವಪ್ನ್ಯಂ ದೃಷ್ಟಂ ತತ್ಸ್ವರ್ಣಕಾರಾಯ ಮಾಲಾಕಾರಾಯ ವಾ ಪರಿ ದದ್ಮಸಿ । ಅಸ್ಮತ್ತೋಽಪಿ ನಿಷ್ಕೃಷ್ಯ ತಯೋರುಪರಿ ಸ್ಥಾಪಯಾಮಃ ॥**

॥ ಪ್ರತಿಪದಾರ್ಥ ॥

**ದಿವಃ ದುಹಿತಃ**—ಅಂತರಿಕ್ಷಪುತ್ರಿಯಾದ ಎಲೈ ಉಷೋದೇವಿಯೇ, । **ತ್ರಿತೇ ಆಪ್ತ್ಯೇ**—ತ್ರಿತ ಆಪ್ತ್ಯನಾದ ನನ್ನ ಮೇಲೆ ಪ್ರಭಾವವನ್ನು ಬೀರುವ । **ಸರ್ವಂ ದುಃಸ್ವಪ್ನ್ಯಂ**—ಸಕಲ ದುಃಸ್ವಪ್ನಗಳನ್ನೂ । **ನಿಷ್ಕಂ ವಾ ಕೃಣವತೇ**—ಆಭರಣಾದಿಗಳನ್ನು ಮಾಡುವ ಸುವರ್ಣಕಾರನ ಮೇಲಾಗಲಿ । **ಸ್ರಜಂ ವಾ**—ಮಾಲೆಗಳನ್ನು

ಕಟ್ಟುವವನ ಮೇಲಾಗಲಿ। **ಪರಿ ದದ್ಮಸಿ**—ಅದರ ಪ್ರಭಾವವು ಬೀಳುವಂತೆ ಮಾಡುತ್ತೇವೆ। **ವಃ**—ನಿಮ್ಮ। **ಊತಯಃ**—ರಕ್ಷಣೆಗಳು। **ಅನೇಹಸಃ**—ಪಾಪರಹಿತವಾದವು। **ವಃ**—ನಿಮ್ಮ। **ಊತಯಃ**—ರಕ್ಷಣೆಗಳು। **ಸುಊತಯಃ**—ಕಲ್ಯಾಣಾತ್ಮಕವು.

॥ ಭಾವಾರ್ಥ ॥

ಸ್ವರ್ಗದ ಪುತ್ರಿಯಾದ ಎಲೈ ಉಷೋದೇವಿಯೇ ತ್ರಿತಆಪ್ತ್ಯನಾದ ನನ್ನ ಮೇಲೆ ಪ್ರಭಾವವನ್ನು ಬೀರುವ ಸಕಲ ದುಃಸ್ವಪ್ನಗಳನ್ನೂ ಸಹ ಆಭರಣಾದಿಗಳನ್ನು ಮಾಡುವ ಸುವರ್ಣಕಾರನ ಮೇಲಾಗಲಿ, ಮಾಲೆಗಳನ್ನು ಕಟ್ಟುವವನ ಮೇಲಾಗಲಿ ಅದರ ಪ್ರಭಾವವನ್ನು ಬೀಳುವಂತೆ ಮಾಡುತ್ತೇವೆ. ನಿಮ್ಮ ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಕಲ್ಯಾಣಾತ್ಮಕವಾದವು.

## English Translation.

Daughter of heaven, whatever ill-omened dream threatens Trita Aptya, we transfer it to the worker of gold ornaments or to the maker of garlands your aids are void of harm, your aids are true aids.

॥ ಸಂಹಿತಾಪಾಠಃ ॥

ತದನ್ನಾಯ ತದಪಸೇ ತಂ ಭಾಗಮುಪಸೇದುಷೇ ।
ತ್ರಿತಾಯ ಚ ದ್ವಿತಾಯ ಚೋಷೋ ದುಷ್ಷ್ವಪ್ನ್ಯಂ ವಹಾನೇಹಸೋ ವ
ಊತಯಃ ಸುಊತಯೋ ವ ಊತಯಃ ॥ ೧೬ ॥

॥ ಪದಪಾಠಃ ॥

ತತ್ಽಅನ್ನಾಯ । ತತ್ಽಅಪಸೇ । ತಂ । ಭಾಗಂ । ಉಪಽಸೇದುಷೇ ।
ತ್ರಿತಾಯ । ಚ । ದ್ವಿತಾಯ । ಚ । ಉಷಃ । ದುಃಽಸ್ವಪ್ನ್ಯಂ । ವಹ । ಅನೇಹಸಃ । ವಃ । ಊತಯಃ ।
ಸುಽಊತಯಃ । ವಃ । ಊತಯಃ ॥ ೧೬ ॥

॥ ಸಾಯಣಭಾಷ್ಯಂ ॥

ತದನ್ನಾಯ । ಯದೇವ ಜಾಗರಾವಸ್ಥಾಯಾಂ ಭೋಜ್ಯತ್ವೇನ ಪ್ರಸಿದ್ಧಂ ಮಧುಪಾಯಸಾದಿ ಸ್ವಪ್ನೇಽಪಿ ತದೇವಾನ್ನಂ ಯಸ್ಯ ಸಃ । ತಾದೃಶಾಯ । ಪ್ರತ್ಯಕ್ಷಭೋಜನವತ್ ಸ್ವಪ್ನೇಽಪಿ ಭೋಕ್ತ್ರಿತ್ಯರ್ಥಃ । ತಥಾ ತದಪಸೇ । ಯದೇವಾಪಃ ಕರ್ಮ ನಿಂದಿತಂ ಜಾಗ್ರದವಸ್ಥಾಯಾಂ ಕ್ರಿಯತೇ ತದೇವ

**ಕರ್ಮ ಸ್ವಪ್ನೇ ಯಸ್ಯ ಸ ತತ್ಕರ್ಮಾ । ತಾದೃಶಾಯ ದೇವಾಯ ತಂ ಭಾಗಂ ದುಃಸ್ವಪ್ನಸ್ಯಾಂಶಮುಪ-ಸೇದುಷೇ ಪ್ರಾಪ್ನುವತೇ ತ್ರಿತಾಯ ದ್ವಿತಾಯ ಚ ಹೇ ಉಷೋ ದೇವಿ ದುಷ್ಷ್ವಪ್ನ್ಯಮನ್ನಕರ್ಮವಿಷಯಂ ವಹ । ಅನ್ಯತ್ರ ಪ್ರಾಪಯ । ಸ್ವಪ್ನೇ ದೃಷ್ಟಂ ಮಧುಭೋಜನಾದಿಕಂ ಜಾಗ್ರದವಸ್ಥಾಸುರೂಪವತ್ಸುಖ-ಕರಂ ಭವತೀತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಉಷಃ**—ಎಲೈ ಉಷೋದೇವಿಯೇ । **ತದನ್ನಾಯ**—ಎಚ್ಚರವಾಗಿರುವಾಗ ತಿನ್ನುವ ಅನ್ನವನ್ನೇ ಕನಸಿನಲ್ಲಿಯೂ ತಿನ್ನುವಂತೆ ಕಾಣುವವನೂ । **ತದಪಸೇ**—ಎಚ್ಚರದಲ್ಲಿರುವಾಗ ಮಾಡುವ ಕರ್ಮವನ್ನೇ ಸ್ವಪ್ನದಲ್ಲಿಯೂ ಮಾಡುವಂತೆ ಕಾಣುವವನೂ । **ತಂ ಭಾಗಂ**—ಅದೇ ದುಃಸ್ವಪ್ನದ ಫಲವನ್ನು । **ಉಪಸೇದುಷೇ**—ಹೊಂದುವವನೂ ಆದ । **ತ್ರಿತಾಯ**—ತ್ರಿತನಿಗಾಗಿಯೂ । **ದ್ವಿತಾಯ ಚ**—ದ್ವಿತನಿಗಾಗಿಯೂ ಸಹ । **ದುಃಷ್ವಪ್ನ್ಯಂ**—ಆ ದುಃಸ್ವಪ್ನವನ್ನು । **ವಹ**—ಬೇರೆ ಕಡೆ ತಿರುಗಿಸು । (ಎಲೈ ದೇವತೆಗಳೇ) **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಮಂಗಳಕರವಾದವು.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಎಚ್ಚರದಲ್ಲಿರುವಾಗ ತಿನ್ನುವ ಅನ್ನವನ್ನೇ ಕನಸಿನಲ್ಲಿಯೂ ತಿನ್ನುವಂತೆ ಕಾಣುವವನೂ, ಎಚ್ಚರದಲ್ಲಿರುವಾಗ ಮಾಡುವ ಕರ್ಮವನ್ನೇ ಸ್ವಪ್ನದಲ್ಲಿಯೂ ಮಾಡುವಂತೆ ಕಾಣುವವನೂ, ಅದೇ ದುಃಸ್ವಪ್ನದ ಫಲವನ್ನು ಹೊಂದುವವನೂ ಆದ ತ್ರಿತನಿಗಾಗಿಯೂ, ದ್ವಿತನಿಗಾಗಿಯೂ ಆ ದುಃಸ್ವಪ್ನವನ್ನು ಬೇರೆ ಕಡೆ ತಿರುಗಿಸು. ಎಲೈ ಉಷಆದಿದೇವತೆಗಳೇ, ನಿಮ್ಮ ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಮಂಗಳಕರವಾದವು.

## English Translation.

Ushas, bear (elsewhere) the ill-omened dream for Trita and Dwita, who eat and do (in dreams) that (which is eaten and done amiss when awake) and who obtain that (inauspicious) portion ; your aids are void of harm, your aids are true aids.

॥ ಸಂಹಿತಾಪಾಠಃ ॥

**ಯಥಾ ಕಲಾಂ ಯಥಾ ಶಫಂ ಯಥ ಋಣಂ ಸಂನಯಾಮಸಿ ।**
**ಏವಾ ದುಷ್ಷ್ವಪ್ನ್ಯಂ ಸರ್ವಮಾಪ್ತ್ಯೇ ಸಂ ನಯಾಮಸ್ಯನೇಹಸೋ ವ**
**ಊತಯಃ ಸುಊತಯೋ ವ ಊತಯಃ ॥ ೧೭ ॥**

|| ಪದಪಾಠಃ ||

**ಯಥಾ । ಕಲಾಂ । ಯಥಾ । ಶಫಂ । ಯಥಾ । ಋಣಂ । ಸಂऽನಯಾಮಸಿ ।**
**ಏವ । ದುಃऽಸ್ವಪ್ನ್ಯಂ । ಸರ್ವಂ । ಆಪ್ತ್ಯೇ । ಸಂ । ನಯಾಮಸಿ । ಅನೇಹಸಃ । ವಃ । ಊತಯಃ**
**ಸುऽಊತಯಃ । ವಃ । ಊತಯಃ ॥ ೧೭ ॥**

|| ಸಾಯಣಭಾಷ್ಯಂ ||

**ಸಂಜ್ಞಪಿತಂ ಪಶುಂ ದಾನಾರ್ಥಂ ಸಂಸ್ಕುರ್ವಂತೋ ಯಥಾ ಯೇನ ಪ್ರಕಾರೇಣ ಕಲಾ ಶಫಮಿತಿ ಸಂಧಾಯಾನ್ಯತ್ರ ಸಂನಯಂತಿ । ಅಥಾಪರೋ ಯಥಾಶಬ್ದಃ ಪೂರಣಃ । ಅಥವಾ । ಯಥಾ ಕಲಾಂ ಹೃದಯಾದ್ಯವಯವಮವದಾನಾರ್ಹಂ ಸಂನಯಂತಿ ಯಥಾ ಚ ಶಫಂ ಶಫೋಪಲಕ್ಷಿತಮನವದಾನಾರ್ಹಂ ಶಫಾಸ್ಥ್ಯಾದಿಕಂ ಸಂನಯಂತಿ । ಯಥಾ ವಾ ಋಣಂ ಶನೈಃ ಸಂನಯಂತಿ ಏವಮೇವ ದುಷ್ವಪ್ನ್ಯಂ ಸರ್ವಮಾಪ್ತ್ಯೇ ವರ್ತಮಾನಂ ಸಂ ನಯಾಮಸಿ । ಸಂನಯಾಮಃ । ಅಪಸಾರಯಾಮಃ ॥**

|| ಪ್ರತಿಪದಾರ್ಥ ||

**ಯಥಾ**—ಯಾವ ರೀತಿ । **ಕಲಾಂ**—ಪಶುವಿನ ಹೃದಯಾದ್ಯವಯವಗಳನ್ನೂ । **ಯಥಾ**—ಯಾವ ರೀತಿ । **ಶಫಂ**—ಗೊರಸುಭಾಗಗಳನ್ನೂ (ಯಜ್ಞದಲ್ಲಿ ಒಟ್ಟಿಗೆ ಸೇರಿಸಿ ಅರ್ಪಿಸುವೆವೋ) । **ಯಥಾ**—ಯಾವ ರೀತಿ । **ಋಣಂ**—ಸಾಲವನ್ನು । **ಸಂ ನಯಾಮಸಿ**—ಕ್ರಮವಾಗಿ ತೊಲಗಿಸುವೆವೋ । **ಏವ**—ಅದೇ ರೀತಿ **ಆಪ್ತ್ಯೇ**—ತ್ರಿತ ಆಪ್ತ್ಯನಲ್ಲಿ ಅಂಟಿರುವ । **ಸರ್ವಂ**—ಸಕಲ ದುಷ್ಫಲಗಳನ್ನೂ । **ಸಂ ನಯಾಮಸಿ**—ದೂರಕ್ಕೆ ತೊಲಗಿಸುವೆವು । (ಎಲೈ ದೇವತೆಗಳೇ) **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಅತ್ಯುತ್ತಮವಾದವು.

|| ಭಾವಾರ್ಥ ||

ಯಾವ ರೀತಿ ಪಶುವಿನ ಹೃದಯಾದ್ಯವಯವಗಳನ್ನೂ, ಯಾವ ರೀತಿ ಗೊರಸುಭಾಗಗಳನ್ನೂ ಯಜ್ಞದ ಒಟ್ಟಿಗೆ ಸೇರಿಸಿ ಅರ್ಪಿಸುವೆವೋ, ಯಾವ ರೀತಿ ಕ್ರಮವಾಗಿ ಸಾಲವನ್ನು ತೊಲಗಿಸುವೆವೋ ಅದೇ ರೀತಿ ತ್ರಿತಆಪ್ತ್ಯನ ಅಂಟಿರುವ ಸಕಲ ದುಷ್ಫಲಗಳನ್ನೂ ದೂರಕ್ಕೆ ತೊಲಗಿಸುವೆವು. ಎಲೈ ದೇವತೆಗಳೇ, ನಿಮ್ಮ ರಕ್ಷಣೆಗಳು ಪಾಪರಹಿ ವಾದವು. ನಿಮ್ಮ ರಕ್ಷಣೆಗಳು ಅತ್ಯುತ್ತಮವಾದವು.

## English Translation.

As (in the sacrifice) we put severally together the proper parts and th hoofs, and as we discharge a debt, so we transfer all the ill-omened drea that rests on Aptya ; your aids are void of harm, your aids are true aids.

॥ ಸಂಹಿತಾಪಾಠಃ ॥

ಅಜೈಷ್ಮಾದ್ಯಾಸನಾಮ ಚಾಭೂಮಾನಾಗಸೋ ವಯಂ ।
ಉಷೋ ಯಸ್ಮಾದ್ದುಃಷ್ವಪ್ನ್ಯಾದಭೈಷ್ಮಾಪ ತದುಚ್ಛತ್ವನೇಹಸೋ ವ
ಊತಯಃ ಸುಊತಯೋ ವ ಊತಯಃ ॥ ೧೮ ॥

॥ ಪದಪಾಠಃ ॥

ಅಜೈಷ್ಮ । ಅದ್ಯ । ಅಸನಾಮ । ಚ । ಅಭೂಮ । ಅನಾಗಸಃ । ವಯಂ ।
ಉಷಃ । ಯಸ್ಮಾತ್ । ದುಃಽಸ್ವಪ್ನ್ಯಾತ್ । ಅಭೈಷ್ಮ । ಅಪ । ತತ್ । ಉಚ್ಛತು । ಅನೇಹಸಃ । ವಃ ।
ಊತಯಃ । ಸುಽಊತಯಃ । ವಃ । ಊತಯಃ ॥ ೧೮ ॥

॥ ಸಾಯಣಭಾಷ್ಯಂ ॥

ವಯಂ ತ್ರಿತಾ ಅದ್ಯಾಜೈಷ್ಮ । ಜಯೇಮ । ಅಸನಾಮ ಚ । ಸಂಭಜೇಮ ಚ ಸುಸ್ವಪ್ನಂ ಸುಖಂ ವಾ । ಅನಾಗಸೋಽಪಾಪಾ ಅಭೂಮ । ಭವೇಮ । ಹೇ ಉಷಃ ಯಸ್ಮಾದ್ದುಷ್ಷ್ವಪ್ನ್ಯಾದಭೈಷ್ಮ ಭೀತಾಃ ಸ್ಮ ತತ್ಪಾಪಮಪೋಚ್ಛತು । ಅಪಗಚ್ಛತು ॥

॥ ಪ್ರತಿಪದಾರ್ಥ ॥

**ಉಷಃ**—ಎಲೈ ಉಷೋದೇವಿಯೇ । **ಅದ್ಯ**—ಈಗ । **ಅಜೈಷ್ಮ**—ನಾವು ಜಯವನ್ನು ಹೊಂದುವಂತಾಗಲಿ । **ಅಸನಾಮ ಚ**—ಸಕಲ ಸುಖಗಳನ್ನು ಹೊಂದುವಂತಾಗಲಿ । **ಅನಾಗಸಃ**—ಪಾಪರಹಿತರಾಗಿಯೂ । **ಅಭೂಮ**—ಇರುವಂತಾಗಲಿ । **ಯಸ್ಮಾತ್ ದುಃಸ್ವಪ್ನ್ಯಾತ್**—ಯಾವ ದುಃಸ್ವಪ್ನದಿಂದ । **ವಯಂ**—ನಾವು । **ಅಭೈಷ್ಮ**—ಬೆದರಿದ್ದೇವೆಯೋ । **ತತ್**—ಅದು । **ಅಪ ಉಚ್ಛತು**—ದೂರ ಸರಿದು ನಾಶವಾಗಲಿ । (ಎಲೈ ದೇವತೆಗಳೇ) **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಅನೇಹಸಃ**—ಪಾಪರಹಿತವಾದವು । **ವಃ**—ನಿಮ್ಮ । **ಊತಯಃ**—ರಕ್ಷಣೆಗಳು । **ಸುಊತಯಃ**—ಅತ್ಯುತ್ತಮವಾದವು.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನಾವು ಈಗ ಜಯವನ್ನು ಹೊಂದುವಂತಾಗಲಿ ನಾವು ಸಕಲ ಸುಖಗಳನ್ನೂ ಹೊಂದುವಂತಾಗಲಿ. ಪಾಪರಹಿತರಾಗಿಯೂ ಇರುವಂತಾಗಲಿ. ಯಾವ ದುಃಸ್ವಪ್ನದಿಂದ ನಾವು ಬೆದರಿದ್ದೇವೆಯೋ ಅದು ದೂರ ಸರಿದು ನಾಶವಾಗಲಿ. ಎಲೈ ದೇವತೆಗಳೇ, ನಿಮ್ಮ ರಕ್ಷಣೆಗಳು ಪಾಪರಹಿತವಾದವು. ನಿಮ್ಮ ರಕ್ಷಣೆಗಳು ಅತ್ಯುತ್ತಮವಾದವು.

## English Translation.

May we be to-day victorious, and obtain (happiness) ; may we be free from evil ; Ushas, may that illdream depart, of which we were afraid ; your aids are void of harm, your aids are true aids.

# ನಲವತ್ತೆಂಟನೆಯ ಸೂಕ್ತವು

|| ಸಾಯಣಭಾಷ್ಯಂ ||

**ಸ್ವಾದೋರಭಕ್ಷೀತಿ ಪಂಚದಶರ್ಚಂ ಷಷ್ಠಂ ಸೂಕ್ತಂ ಕಾಣ್ವಸ್ಯ ಪ್ರಗಾಥಸ್ಯಾರ್ಷಂ ಸೋಮದೇವತಾಕಂ ತ್ರೈಷ್ಟುಭಂ | ಪಂಚಮೀ ಜಗತೀ | ಸೋಮೋ ದೇವತಾ | ತಥಾ ಚಾನುಕ್ರಾಂತಂ | ಸ್ವಾದೋಃ ಪಂಚೋನಾ ಪ್ರಗಾಥಃ ಸೌಮ್ಯಂ ತ್ರೈಷ್ಟುಭಂ ಪಂಚಮೀ ಜಗತೀತಿ || ಸೂಕ್ತವಿನಿಯೋಗೋ ಲೈಂಗಿಕಃ ||**

ಅನುವಾದವು—**ಸ್ವಾದೋರಭಕ್ಷಿ** ಎಂಬ ಈ ಸೂಕ್ತವು ಆರನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಪ್ರಗಾಥಃ ಕಾಣ್ವಃ** ಎಂಬುವನು ಋಷಿಯು; ಸೋಮನು **ದೇವತೆಯು;** ಈ ಸೂಕ್ತದ ಐದನೆಯ ಋಕ್ಕು ಜಗತೀಛಂದಸ್ಸುವು. ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸುವು. ಅನುಕ್ರಮಣಿಕೆಯಲ್ಲಿ—**ಸ್ವಾದೋಃ ಪಂಚೋನಾ ಪ್ರಗಾಥಃ ಸೌಮ್ಯಂ ತ್ರೈಷ್ಟುಭಂ ಪಂಚಮೀ ಜಗತೀ** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೪೮

ಮಂಡಲ—೮ || ಅನುವಾಕ—೬ || ಸೂಕ್ತ—೪೮ ||
ಅಷ್ಟಕ—೬ || ಅಧ್ಯಾಯ—೪ || ವರ್ಗ—೧೧, ೧೨, ೧೩ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ||
|| ಋಷಿಃ—ಪ್ರಗಾಥಃ ಕಾಣ್ವಃ ||
|| ದೇವತಾ—ಸೋಮಃ ||
|| ಛಂದಃ—೧-೪, ೬-೧೫ ತ್ರಿಷ್ಟುಪ್ | ೫. ಜಗತೀ ||

|| ಸಂಹಿತಾಪಾಠಃ ||

ಸ್ವಾದೋರಭಕ್ಷಿ ವಯಸಃ ಸುಮೇಧಾಃ ಸ್ವಾಧ್ಯೋ ವರಿವೋವಿತ್ತರಸ್ಯ |
ವಿಶ್ವೇ ಯಂ ದೇವಾ ಉತ ಮರ್ತ್ಯಾಸೋ ಮಧು ಬ್ರುವಂತೋ ಅಭಿ ಸಂಚರಂತಿ || ೧ ||

|| ಪದಪಾಠಃ ||

ಸ್ವಾದೋಃ | ಅಭಕ್ಷಿ | ವಯಸಃ | ಸುऽಮೇಧಾಃ | ಸುऽಆಧ್ಯಃ | ವರಿವೋವಿತ್ऽತರಸ್ಯ |
ವಿಶ್ವೇ | ಯಂ | ದೇವಾಃ | ಉತ | ಮರ್ತ್ಯಾಸಃ | ಮಧು | ಬ್ರುವಂತಃ | ಅಭಿ | ಸಂऽಚರಂತಿ || ೧ ||

॥ ಸಾಯಣಭಾಷ್ಯಂ ॥

ಅಹಂ ಪ್ರಗಾಥಃ ಸುಮೇಧಾಃ ಶೋಭನಪ್ರಜ್ಞಃ ಸ್ವಾಧ್ಯಃ ಸ್ವಾಧ್ಯಯನಃ ಸುಕರ್ಮಾ ವರಿವೋವಿತ್ತರಸ್ಯಾತಿಶಯೇನ ಪೂಜಾಂ ಲಭಮಾನಸ್ಯ ಸ್ವಾದೋಃ ಸುಷ್ವದನೀಯಸ್ಯ ಸ್ವಾದುಭೂತಸ್ಯ ವಯಸೋಽನ್ನಸ್ಯ ॥ ಏತಾಃ ಕರ್ಮಣಿ ಷಷ್ಠ್ಯಃ ॥ ಉಕ್ತಲಕ್ಷಣಂ ವಯೋಽನ್ನಂ ಸೋಮಾಖ್ಯಮಭಕ್ಷಿ । ಭಕ್ಷಯೇಯ । ಯಂ ಯದನ್ನಂ ವಿಶ್ವೇ ದೇವಾಃ ಸರ್ವೇಽಪೀಂದ್ರಾದಯ ಉತಾಪಿ ಚ ಮರ್ತ್ಯಾಸೋ ಮರ್ತ್ಯಾ ಮನುಷ್ಯಾ ಮಧು ಬ್ರುವಂತೋ ಮನೋಹರಮೇತದಿತಿ ಶಬ್ದಾಯಂತೋಽಭಿ ಸಂಚರಂತಿ ಅಭಿಸಂಗಚ್ಛಂತೇ ಪ್ರಾಪ್ನುವಂತಿ ತದನ್ನಮಭಕ್ಷೀತಿ ॥

॥ ಪ್ರತಿಪದಾರ್ಥ ॥

**ಯಂ**—ಯಾವ ಸೋಮವನ್ನು । **ವಿಶ್ವೇ ದೇವಾಃ**—ಸಕಲ ದೇವತೆಗಳೂ । **ಉತ**—ಮತ್ತು । **ಮರ್ತ್ಯಾಸಃ**—ಮಾನವರೂ । **ಮಧು ಬ್ರುವಂತಃ**—ಅತ್ಯಂತ ರುಚಿಕರವೆಂದು ಹೇಳಿಕೊಂಡು । **ಅಭಿ ಸಂಚರಂತಿ**—ಅದನ್ನು ಭಕ್ಷಿಸಿದರೋ ಅಂತಹ । **ಸ್ವಾದೋಃ**—ರುಚಿಕರವಾದುದೂ । **ವರಿವೋವಿತ್ತರಸ್ಯ**—ಅತಿಶಯವಾದ ಪೂಜಾರ್ಹವಾದುದೂ ಆದ । **ವಯಸಃ**—ಅನ್ನವನ್ನು । **ಸುಮೇಧಾಃ**—ಉತ್ತಮವಾದ ಪ್ರಜ್ಞೆಯುಳ್ಳವನೂ । **ಸ್ವಾಧ್ಯಃ**—ಉತ್ತಮವಾದ ಕರ್ಮವುಳ್ಳವನೂ ಆದ ನಾನು । **ಅಭಕ್ಷಿ**—ಭುಜಿಸುವಂತಾಗಲಿ.

॥ ಭಾವಾರ್ಥ ॥

ಸಕಲ ದೇವತೆಗಳೂ, ಸಕಲ ಮಾನವರೂ, ಯಾವ ಸೋಮವನ್ನು ಅತ್ಯಂತ ರುಚಿಕರವೆಂದು ಹೇಳಿಕೊಂಡು ಅದನ್ನು ಭಕ್ಷಿಸುವರೋ ಅಂತಹ ರುಚಿಕರವಾದುದೂ, ಅತಿಶಯವಾದ ಪೂಜಾರ್ಹವಾದುದೂ ಆದ ಅನ್ನವನ್ನು ಉತ್ತಮವಾದ ಪ್ರಜ್ಞೆಯುಳ್ಳವನೂ, ಉತ್ತಮವಾದ ಕರ್ಮವುಳ್ಳವನೂ ಆದ ನಾನು ಭುಜಿಸುವಂತಾಗಲಿ.

## English Translation.

May I, the wise and devout, enjoy the delicious, abundantly honoured Soma food, which all gods and mortals, pronouncing sweet, seek to obtain.

॥ ಸಂಹಿತಾಪಾಠಃ ॥

ಅಂತಶ್ಚ ಪ್ರಾಗಾ ಅದಿತಿರ್ಭವಾಸ್ಯವಯಾತಾ ಹರಸೋ ದೈವ್ಯಸ್ಯ ।

ಇಂದವಿಂದ್ರಸ್ಯ ಸಖ್ಯಂ ಜುಷಾಣಃ ಶ್ರೌಷ್ಟೀವ ಧುರಮನು ರಾಯ ಋಧ್ಯಾಃ ॥

॥ ಪದಪಾಠಃ ॥

ಅಂತರಿತಿ । ಚ । ಪ್ರ । ಅಗಾಃ । ಅದಿತಿಃ । ಭವಾಸಿ । ಅವऽಯಾತಾ । ಹರಸಃ । ದೈವ್ಯಸ್ಯ ।

ಇಂದೋ ಇತಿ । ಇಂದ್ರಸ್ಯ । ಸಖ್ಯಂ । ಜುಷಾಣಃ । ಶ್ರೌಷ್ಟೀऽಇವ । ಧುರಂ । ಅನು । ರಾಯೇ । ಋಧ್ಯಾಃ ॥

॥ ಸಾಯಣಭಾಷ್ಯಂ ॥

ಅಗ್ನೀಷೋಮಪ್ರಣಯನೇಽಂತಶ್ಚೇತ್ಯೇಷಾ । ತಥಾ ಚ ಸೂತ್ರಿತಂ । ಅಂತಶ್ಚ ಪ್ರಾಗಾ ಅದಿತಿರ್ಭವಾಸಿ ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ । ಆ. ೪-೧೦ । ಇತಿ ॥

ಹೇ ಸೋಮ ತ್ವಮಂತಶ್ಚ ಪ್ರಾಗಾಃ । ಹೃದಯಸ್ಯ ಯಾಗಾಗಾರಸ್ಯ ವಾಂತರ್ಗಚ್ಛಸಿ । ಗತ್ವಾ ಚಾದಿತಿರದೀನಸ್ತ್ವಂ ದೈವ್ಯಸ್ಯ ಹರಸಃ ಕ್ರೋಧಸ್ಯಾವಯಾತಾ ಪೃಥಕ್ಕರ್ತಾ ಭವಾಸಿ । ಭವಸಿ । ಹರ ಇತಿ ಕ್ರೋಧನಾಮ । ಹೇ ಇಂದೋ ಸೋಮ ತ್ವಮಿಂದ್ರಸ್ಯ ಸಖ್ಯಂ ಜುಷಾಣಃ ಸೇವಮಾನಃ ಶ್ರೌಷ್ಟೀವ । ಶ್ರುಷ್ಟೀತಿ ಕ್ಷಿಪ್ರನಾಮ । ತತ್ಸಂಬಂಧೀ ಶ್ರೌಷ್ಟೀ । ಕ್ಷಿಪ್ರಗಾಮ್ಯಶ್ವೋ ಧುರಮಿವ ರಾಯೇಽಸ್ಮಾಕಂ ಧನಲಾಭಾಯಾನ್ವೃಧ್ಯಾಃ । ಅನುಗಚ್ಛಸಿ । ಅಥವಾಶ್ವೋ ಯಥಾ ಧುರಂ ವೃತ್ವಾಭಿಮತದೇಶಂ ಪ್ರಾಪಯತಿ ತದ್ವದಸ್ಮಾನ್ಪ್ರಾಪಯ । ಅನುಪೂರ್ವ ಋಧಿರ್ಗತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಸೋಮವೇ) **ಅಂತಶ್ಚ**—ಹೃದಯದೊಳಗೂ । **ಪ್ರಾಗಾಃ**—ನೀನು ಪ್ರವೇಶಿಸುತ್ತೀಯೆ । **ಅದಿತಿಃ**—ಪರಿಪೂರ್ಣವಾದ ಸ್ವರೂಪವುಳ್ಳ ನೀನು । **ದೈವ್ಯಸ್ಯ**—ದೇವಸಂಬಂಧಿಯಾದ । **ಹರಸಃ**—ಕ್ರೋಧಕ್ಕೆ । **ಅವಯಾತಾ**—ನಾಶಕನಾಗಿ । **ಭವಾಸಿ**—ಆಗಿರುತ್ತೀಯೆ । **ಇಂದೋ**—ಎಲೈ ಸೋಮವೇ । **ಇಂದ್ರಸ್ಯ**—ಇಂದ್ರನ । **ಸಖ್ಯಂ**—ಮಿತ್ರತ್ವವನ್ನು । **ಜುಷಾಣಃ**—ಸೇವಿಸುತ್ತಾ । **ಶ್ರೌಷ್ಟೀ**—ವೇಗಗಾಮಿಯಾದ ಅಶ್ವವು । **ಧುರಂ ಇವ** - ಭಾರವನ್ನು ಹೊರುವಂತೆ । **ರಾಯೇ**—ನಮಗೆ ಧನಲಾಭಕ್ಕಾಗಿ । **ಅನು ಋಧ್ಯಾಃ**—ನಮ್ಮನ್ನು ಆ ಜಾಗಕ್ಕೆ ಕರೆದುಕೊಂಡು ಹೋಗಿ ಸೇರಿಸು.

॥ ಭಾವಾರ್ಥ ॥

ಎಲೈ ಸೋಮವೇ, ನೀನು ದೇವತೆಗಳ ಹೃದಯದೊಳಕ್ಕೂ ಪ್ರವೇಶಿಸಿ ಅವರ ಕೋಪವನ್ನು ದೂರ ಮಾಡುತ್ತೀಯೆ. ಪರಿಪೂರ್ಣವಾದ ಸ್ವರೂಪವುಳ್ಳ ಎಲೈ ಸೋಮವೇ, ನೀನು ಇಂದ್ರನ ಮಿತ್ರತ್ವವನ್ನು ಸೇವಿಸುತ್ತಾ, ವೇಗಗಾಮಿಯಾದ ಅಶ್ವವು ಭಾರವನ್ನು ವಹಿಸುವಂತೆ ನಮಗೆ ಧನಲಾಭಕ್ಕಾಗಿ ನಮ್ಮನ್ನು ಆ ಜಾಗಕ್ಕೆ ಕರೆದುಕೊಂಡು ಹೋಗಿ ಸೇರಿಸು.

## English Translation.

You enter within, and, unimpaired, you avert the anger of the gods ; Soma, enjoing the friendship of Indra, may you bring us to wealth as a swift (horse) its burden.

॥ ವಿಶೇಷವಿಷಯಗಳು ॥

ಅಗ್ನೀಷೋಮಪ್ರಣಯನವೆಂಬ ಯಜ್ಞಾಂಗಕರ್ಮದಲ್ಲಿ **ಅಂತಶ್ಚ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಂತಶ್ಚ ಪ್ರಾಗಾ ಅದಿತಿರ್ಭವಾಸಿ ಶ್ಯೇನೋ ನ ಯೋನಿಂ ಸದನಂ ಧಿಯಾ ಕೃತಂ** ಎಂಬ ಸೂತ್ರದಿಂದ (ಆ. ೪-೧೦) ವಿವೃತವಾಗಿರುವುದು.

|| ಸಂಹಿತಾಪಾಠಃ ||

ಅಪಾ॑ಮ॒ ಸೋಮ॑ಮ॒ಮೃತಾ॑ ಅಭೂ॒ಮಾಗ॑ನ್ಮ॒ ಜ್ಯೋತಿ॒ರವಿ॑ದಾಮ ದೇ॒ವಾನ್।
ಕಿಂ ನೂ॒ನಮ॒ಸ್ಮಾನ್ಕೃ॑ಣವ॒ದರಾ॑ತಿಃ ಕಿಮು॑ ಧೂ॒ರ್ತಿರ॑ಮೃತ॒ ಮರ್ತ್ಯ॑ಸ್ಯ॥ ೩ ||

॥ ಪದಪಾಠಃ ॥

ಅಪಾ॑ಮ । ಸೋಮ॑ಂ । ಅ॒ಮೃತಾ॑ಃ । ಅ॒ಭೂ॒ಮ॒ । ಅಗ॑ನ್ಮ । ಜ್ಯೋತಿ॑ಃ । ಅವಿ॑ದಾಮ । ದೇ॒ವಾನ್ ।
ಕಿಂ । ನೂ॒ನಂ । ಅ॒ಸ್ಮಾನ್ । ಕೃ॒ಣ॒ವ॒ತ್ । ಅರಾ॑ತಿಃ । ಕಿಂ । ಊಂ ಇತಿ । ಧೂ॒ರ್ತಿಃ । ಅ॒ಮೃ॒ತ॒ । ಮರ್ತ್ಯ॑ಸ್ಯ॥

॥ ಸಾಯಣಭಾಷ್ಯಂ ॥

ಅಪಾಮ ಸೋಮಮಿತ್ಯಾದಿಕೇ ದ್ವೇ ಸೋಮಪಾನೋತ್ತರಕಾಲೀನಸ್ಯಾಭಿಮರ್ಶನೇ ಹೃದಯಾಭಿಮರ್ಶನೇ ಚ ಕ್ರಮೇಣ ವಿನಿಯುಕ್ತೇ । ತಥಾ ಚ ಸೂತ್ರಿತಂ । ಅಪಾಮ ಸೋಮಮಮೃತಾ ಅಭೂಮ ಶಂ ನೋ ಭವ ಹೃದ ಆ ಪೀತ ಇಂದವಿತಿ ಮುಖಹೃದಯೇ ಅಭಿಮೃಶೇರನ್ನಿತಿ ॥

ಹೇ ಅಮೃತಾಮರಣ ಸೋಮ ತ್ವಾಮಪಾಮ । ಪಾನಂ ಕರವಾಮ । ಕುರ್ಮಃ । ತತೋಽಮೃತಾ ಅಭೂಮ । ಭವೇಮ । ಯಸ್ಮಾತ್ತ್ವಮಮೃತಃ ಅತಸ್ತವ ಪಾನಾದ್ವಯಮಪ್ಯಮೃತಾಃ ಸ್ಯಾಮ । ಪಶ್ಚಾಜ್ಜ್ಯೋತಿರ್ದ್ಯೋತಮಾನಂ ಸ್ವರ್ಗಮಗನ್ಮ । ಅವಿದಾಮ ಜ್ಞಾತವಂತೋ ದೇವಾನ್ । ತಥಾಭೂತಾನಸ್ಮಾನ್ನೂನಮಿದಾನೀಮರಾತಿಃ ಶತ್ರುಃ ಕಿಂ ಕೃಣವತ್ । ಕುರ್ಯಾತ್ । ಕಿಮು ಕಿಂವಾ ಮರ್ತ್ಯಸ್ಯೇದಾನೀಂ ಮನುಷ್ಯಭೂತಸ್ಯ ಮಮ ಧೂರ್ತಿರ್ಹಿಂಸಕಃ ಕಿಂ ಕೃಣವತ್ । ಕುರ್ಯಾತ್ ॥

॥ ಪ್ರತಿಪದಾರ್ಥ ॥

**ಸೋಮಂ**—ಸೋಮವನ್ನು । **ಅಪಾಮ**—ನಾವು ಪಾನಮಾಡುವೆವು । **ಅಮೃತಾಃ**—ನಾವು ಮರಣ ರಹಿತರಾಗಿ । **ಅಭೂಮ**—ಆಗುವೆವು । **ಜ್ಯೋತಿಃ**—ಪ್ರಕಾಶಮಾನವಾದ ಸ್ವರ್ಗವನ್ನು । **ಅಗನ್ಮ**—ಹೋಗಿ ಸೇರುವೆವು । **ದೇವಾನ್**—ದೇವತೆಗಳನ್ನು । **ಅವಿದಾಮ**—ತಿಳಿಯುವೆವು । **ನೂನಂ**-ಖಂಡಿತ । **ಅಸ್ಮಾನ್**—ನಮ್ಮನ್ನು । **ಅರಾತಿಃ**—ಶತ್ರುವು । **ಕಿಂ ಕೃಣವತ್**—ಏನು ಮಾಡಬಲ್ಲನು । **ಅಮೃತ**—ಮೃತಿರಹಿತನಾದ ಎಲೈ ಸೋಮವೇ । **ಮರ್ತ್ಯಸ್ಯ**—ಮಾನವನಾದ ನನ್ನ ವಿಷಯದಲ್ಲಿ । **ಧೂರ್ತಿಃ**—ಹಿಂಸಾರೂಪವುಳ್ಳ ಶತ್ರುವು । **ಕಿಮು**—ಏನು ತಾನೇ ಮಾಡಬಲ್ಲನು ?

॥ ಭಾವಾರ್ಥ ॥

ನಾವು ಸೋಮವನ್ನು ಪಾನಮಾಡುತ್ತೇವೆ. ಮೃತಿರಹಿತರಾಗುತ್ತೇವೆ. ಪ್ರಕಾಶಮಾನವಾದ ಸ್ವರ್ಗವನ್ನು ಹೋಗಿ ಸೇರುತ್ತೇವೆ. ದೇವತೆಗಳನ್ನು ಅರಿಯುತ್ತೇವೆ. ಮೃತಿರಹಿತನಾದ ಎಲೈ ಸೋಮವೇ, ಶತ್ರುವು ನಮ್ಮನ್ನು ಏನುಮಾಡಬಲ್ಲನು ? ಹಿಂಸಾರೂಪಿಯಾದ ಶತ್ರುವು ಮಾನವನಾದ ನನ್ನ ವಿಷಯದಲ್ಲಿ ಏನುತಾನೇಮಾಡಬಲ್ಲನು ?

## English Translation.

We drink the Soma, may we become immortal; we have attained the the light of (heaven), we have know the gods! what now should the enemy do to us, or what, O immortal, should the aggriever do to the mortal?

॥ ವಿಶೇಷವಿಷಯಗಳು ॥

**ಅಪಾಮ ಸೋಮಂ** ಎಂಬ ಈ ಋಕ್ಕನ್ನೂ ಇದರ ಮುಂದಿನ **ಶಂ ನೋ ಭವ** ಎಂಬ ಋಕ್ಕನ್ನೂ ಸಹ **ಸೋಮಪಾನಾನಂತರ** ಮಾಡುವ ಅಭಿಮರ್ಶನದಲ್ಲಿಯೂ, ಹೃದಯಾಭಿಮರ್ಶನದಲ್ಲಿಯೂ (ಅಭಿಮರ್ಶನವೆಂದರೆ ಸ್ಪರ್ಶನ) ಕ್ರಮವಾಗಿ ವಿನಿಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅಪಾಮ ಸೋಮಮಮೃತಾ ಅಭೂಮ ಶಂ ನೋ ಭವ ಹೃದ ಆ ಪೀತ ಇಂದವಿತಿ ಮುಖಹೃದಯೇ ಅಭಿಮೃಶೇರನ್** ಎಂಬ ಸೂತ್ರದಿಂದ (ಆ. ೫-೬) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ಶಂ ನೋ ಭವ ಹೃದ ಆ ಪೀತ ಇಂದೋ ಪಿತೇವ ಸೋಮ ಸೂನವೇ
ಸುಶೇವಃ ।
ಸಖೇವ ಸಖ್ಯ ಉರುಶಂಸ ಧೀರಃ ಪ್ರ ಣ ಆಯುರ್ಜೀವಸೇ ಸೋಮ
ತಾರೀಃ ॥ ೪ ॥

॥ ಪದಪಾಠಃ ॥

ಶಂ । ನಃ । ಭವ । ಹೃದೇ । ಆ । ಪೀತಃ । ಇಂದೋ ಇತಿ । ಪಿತಾಽಇವ । ಸೋಮ । ಸೂನವೇ ।
ಸುಽಶೇವಃ ।
ಸಖಾಽಇವ । ಸಖ್ಯೇ । ಉರುಽಶಂಸ । ಧೀರಃ । ಪ್ರ । ನಃ । ಆಯುಃ । ಜೀವಸೇ । ಸೋಮ । ತಾರೀಃ ॥

॥ ಸಾಯಣಭಾಷ್ಯಂ ॥

**ಹೇ ಇಂದೋ ಸೋಮ ಅಸ್ಮಾಭಿಃ ಪೀತಸ್ತ್ವಂ ನೋಽಸ್ಮಾಕಂ ಹೃದೇ ಹೃದಯಾಯ ಶಂ ಸುಖವಾ ಭವ । ಸುಖಭವನೇ ದೃಷ್ಟಾಂತದ್ವಯಂ । ಪಿತಾ ಸೂನವೇ ಸ್ವಾತ್ಮಜಾಯ ಯಥಾ ಸುಖಾಯ ಭವತಿ ಯಥಾ ವಾ ಸಖಾಹಿತಾನ್ನಿವರ್ತ್ಯ ಹಿತೇ ಸ್ಥಾಪಯಿತಾ ಸಖಾಯಂ ಸ್ವಸಖ್ಯೇ ಯಥಾ ಸುಶೇವಃ ಸುಸುಖೋ ಭವತಿ । ಶೇವಮಿತಿ ಸುಖನಾಮ । ತದ್ವತ್ತ್ವಮಪಿ ಭವ । ಕಿಂಚ ಹೇ ಉರುಶಂಸ ಬಹುಭಿ-**

ಬಹುಧಾ ವಾ ಶಂಸನೀಯ ಬಹುಕೀರ್ತೇ ಸೋಮ ಧೀರೋ ಧೀಮಾಂಸ್ತ್ವಂ ನೋಽಸ್ಮಾಕಂ ಜೀವಸೇ ಜೀವನಾಯಾಯುರಾಯುಷ್ಯಂ ಪ್ರ ತಾರೀಃ । ಪ್ರವರ್ಧಯ ॥

॥ ಪ್ರತಿಪದಾರ್ಥ ॥

**ಇಂದೋ**—ಪ್ರವಾಹರೂಪವುಳ್ಳ । **ಸೋಮ**—ಎಲೈ ಸೋಮವೇ । **ಸೂನವೇ**—ಮಗನಿಗೆ । **ಸುಶೇವಃ**—ಸುಖಕಾರಕನಾದ । **ಪಿತಾ ಇವ**—ತಂದೆಯಂತೆಯೂ । **ಸಖ್ಯೇ**—ಮಿತ್ರನಿಗೆ ಹಿತವನ್ನುಂಟುಮಾಡುವ । **ಸಖಾ ಇವ**—ಸ್ನೇಹಿತನಂತೆಯೂ । **ಪೀತಃ**—ನಮ್ಮಿಂದ ಪಾನಮಾಡಲ್ಪಟ್ಟ ನೀನು । **ನಃ**—ನಮ್ಮ । **ಹೃದೇ**—ಹೃದಯಕ್ಕೆ । **ಶಂ ಆ ಭವ**—ಸುಖಕಾರಕನಾಗು । **ಉರುಶಂಸ**—ಅಧಿಕವಾದ ಪ್ರಶಂಸೆಗೆ ಪಾತ್ರನಾದ । **ಸೋಮ**—ಎಲೈ ಸೋಮವೇ । **ಧೀರಃ**—ಪ್ರಾಜ್ಞನಾದ ನೀನು । **ನಃ**—ನಮಗೆ । **ಜೀವಸೇ**—ಜೀವಿಸಲು । **ಆಯುಃ**—ಆಯುಸ್ಸನ್ನು । **ಪ್ರ ತಾರೀಃ**—ವೃದ್ಧಿಗೊಳಿಸು.

॥ ಭಾವಾರ್ಥ ॥

ಪ್ರವಾಹರೂಪವುಳ್ಳ ಎಲೈ ಸೋಮವೇ, ಮಗನಿಗೆ ಸುಖಕಾರಕನಾದ ತಂದೆಯಂತೆಯೂ, ಮಿತ್ರನಿಗೆ ಹಿತವನ್ನುಂಟುಮಾಡುವ ಸಖನಂತೆಯೂ, ನಮ್ಮಿಂದ ಪಾನಮಾಡಲ್ಪಟ್ಟ ನೀನು ನಮ್ಮ ಹೃದಯಕ್ಕೆ ಸುಖಕಾರಕನಾಗು. ಅಧಿಕವಾದ ಪ್ರಶಂಸೆಗೆ ಪಾತ್ರನಾದ ಎಲೈ ಸೋಮವೇ, ಪ್ರಾಜ್ಞನಾದ ನೀನು ನಮಗೆ ಜೀವಿಸಲು ಆಯುಸ್ಸನ್ನು ವೃದ್ಧಿಗೊಳಿಸು.

## English Translation.

O Soma, drunk by us, be bliss to our hearts, as a father is indulgent to a son or friend to a friend; O Soma, worthy of wide praise, wise one, extend our years that we may live.

॥ ಸಂಹಿತಾಪಾಠಃ ॥

ಇಮೇ ಮಾ ಪೀತಾ ಯಶಸ ಉರುಷ್ಯವೋ ರಥಂ ನ ಗಾವಃ ಸಮನಾಹ ಪರ್ವಸು ।
ತೇ ಮಾ ರಕ್ಷಂತು ವಿಸ್ರಸಶ್ಚರಿತ್ರಾದುತ ಮಾ ಸ್ರಾಮಾದ್ಯವಯಂತ್ವಿಂದವಃ ॥

॥ ಪದಪಾಠಃ ॥

ಇಮೇ । ಮಾ । ಪೀತಾಃ । ಯಶಸಃ । ಉರುಷ್ಯವಃ । ರಥಂ । ನ । ಗಾವಃ । ಸಂ । ಅನಾಹ । ಪರ್ವಽಸು ।
ತೇ । ಮಾ । ರಕ್ಷಂತು । ವಿಽಸ್ರಸಃ । ಚರಿತ್ರಾತ್ । ಉತ । ಮಾ । ಸ್ರಾಮಾತ್ । ಯವಯಂತು । ಇಂದವಃ ॥

॥ ಸಾಯಣಭಾಷ್ಯಂ ॥

ಇಮೇ ಪೀತಾ ಯಶಸೋ ಯಶಸ್ಕರಾ ಉರುಷ್ಯವೋಽಸ್ಮಾಕಂ ರಕ್ಷಾಕಾಮಾಃ ಸೋಮಾ ಗಾವೋ ಗೋವಿಕಾರಭೂತಾ ವಧ್ರ್ಯೋ ರಥಂ ನ ರಥಮಿವ ತಾ ಯಥಾ ರಥಂ ವಿಸ್ರಸ್ತಂ ಪರ್ವಸು ಸಮನಾಹ ಸಂದಧತೇ ತದ್ವನ್ಮಾಂ ಪೀತಾಃ ಸೋಮಾಃ ಪರ್ವಸು ಸಂನಹ್ಯಂತು । ಕಿಂಚ ತೇ ಸೋಮಾ ಮಾ ಮಾಂ ವಿಸ್ರಸೋ ವಿಸ್ರಸ್ತಾಚ್ಚರಿತ್ರಾಚ್ಚರಣಾದನುಷ್ಠಾನಾದ್ರಕ್ಷಂತು । ಸೋಮಃ ಪೀತಶ್ಚೇತ್ಕರ್ಮ ಹ್ಯವಿಸ್ರಸ್ತಂ ಭವತಿ । ಉತಾಪಿ ಚ ಮಾ ಮಾಂ ಸ್ರಾಮಾದ್ವ್ಯಾಧೇಃ ಸಕಾಶಾದಿಂದವಃ ಪೀತಾ ಯವಯಂತು । ಪೃಥಕ್ಕುರ್ವಂತು ॥

॥ ಪ್ರತಿಪದಾರ್ಥ ॥

ಗಾವಃ—ವೃಷಭಗಳು । **ರಥಂ ನ**—ಬೇರೆ ಬೇರೆಯಾಗಿರುವ ಗಾಡಿಯ ಭಾಗಗಳನ್ನು ಒಟ್ಟಿಗೆ ಸೇರಿಸಿ ಎಳೆಯುವಂತೆ । **ಪೀತಾಃ**—ನಮ್ಮಿಂದ ಪಾನಮಾಡಲ್ಪಟ್ಟವೂ । **ಯಶಸಃ**—ಯಶಸ್ಕರವಾದವೂ । **ಉರುಷ್ಯವಃ**—ನಮ್ಮನ್ನು ರಕ್ಷಿಸಲಿಚ್ಛಿಸುವುವೂ ಆದ । **ಇಮೇ** ಈ ಸೋಮರಸಗಳು । **ಪರ್ವಸು**—ಶಿಥಿಲವಾಗಿರುವ ನಮ್ಮ ಸಂಧಿಬಂಧಗಳನ್ನು । **ಸಮನಾಹ**—ಒಟ್ಟಿಗೆ ಸೇರಿಸಿ ಗುಣಪಡಿಸುತ್ತವೆ । **ತೇ**—ಅದೇ ಸೋಮಗಳು । **ಮಾ**—ನನ್ನನ್ನು । **ವಿಸ್ರಸಃ**—ಛಿದ್ರವಾಗಿರುವ । **ಚರಿತ್ರಾತ್**—ವ್ಯವಹಾರಗಳಿಂದ । **ರಕ್ಷಂತು**—ರಕ್ಷಿಸಲಿ । **ಉತ**—ಮತ್ತು । **ಮಾ**—ನನ್ನನ್ನು । **ಸ್ರಾಮಾತ್**—ವ್ಯಾಧಿಯಿಂದಲೂ । **ಇಂದವಃ**—ಪ್ರವಾಹರೂಪದ ಈ ಸೋಮರಸಗಳು । **ಯವಯಂತು**—ಬೇರೆ ಮಾಡಲಿ.

॥ ಭಾವಾರ್ಥ ॥

ಬೇರೆ ಬೇರೆಯಾಗಿರುವ ಗಾಡಿಯ ಭಾಗಗಳನ್ನು ಒಟ್ಟಿಗೆ ಸೇರಿಸಿ ವೃಷಭಗಳು ಎಳೆಯುವಂತೆ, ನಮ್ಮಿಂದ ಪಾನ ಮಾಡಲ್ಪಟ್ಟವೂ ಯಶಸ್ಕರವಾದವೂ, ನಮ್ಮನ್ನು ರಕ್ಷಿಸಲಿಚ್ಛಿಸುವುವೂ ಆದ ಈ ಸೋಮರಸಗಳು ಶಿಥಿಲವಾಗಿರುವ ನಮ್ಮ ಸಂಧಿಬಂಧಗಳನ್ನು ಒಟ್ಟಿಗೆ ಸೇರಿಸಿ ಗುಣಪಡಿಸುತ್ತವೆ. ಅದೇ ಸೋಮಗಳು ನನ್ನನ್ನು ಛಿದ್ರವಾಗಿರುವ ವ್ಯವಹಾರ ಗಳಿಂದ ರಕ್ಷಿಸಲಿ ಮತ್ತು ನನ್ನನ್ನು ವ್ಯಾಧಿಯಿಂದಲೂ, ಪ್ರವಾಹರೂಪದ ಈ ಸೋಮರಸಗಳು ಬೇರೆ ಮಾಡಲಿ.

## English Translation·

May these glory conferring protecting Soma-streams knit together my joints as cows draw together a chariot falling in pieces; may they keep us from a loosely knit worship; may they deliver me from sickness.

॥ ಸಂಹಿತಾಪಾಠಃ ॥

ಅಗ್ನಿಂ ನ ಮಾ ಮಥಿತಂ ಸಂ ದಿದೀಪಃ ಪ್ರ ಚಕ್ಷಯ ಕೃಣುಹಿ ವಸ್ಯಸೋ ನಃ ।

ಅಥಾ ಹಿ ತೇ ಮದ ಆ ಸೋಮ ಮನ್ಯೇ ರೇವಾँ ಇವ ಪ್ರ ಚರಾ ಪುಷ್ಟಿಮಚ್ಛ । ೬ ॥

|| ಪದಪಾಠಃ ||

**ಅಗ್ನಿಂ । ನ । ಮಾ । ಮಥಿತಂ । ಸಂ । ದಿದೀಪಃ । ಪ್ರ । ಚಕ್ಷಯ । ಕೃಣುಹಿ । ವಸ್ಯಸಃ । ನಃ ।**

**ಅಥ । ಹಿ । ತೇ । ಮದೇ । ಆ । ಸೋಮ । ಮನ್ಯೇ । ರೇವಾನ್ಽಇವ । ಪ್ರ । ಚರ । ಪುಷ್ಟಿಂ । ಅಚ್ಛ ॥**

|| ಸಾಯಣಭಾಷ್ಯಂ ||

**ಹೇ ಸೋಮ ಪೀತಸ್ತ್ವಂ ಮಾ ಮಾಂ ಮಥಿತಮಗ್ನಿಂ ನಾಗ್ನಿಮಿವ ಸಂ ದಿದೀಪಃ । ಸಂದೀಪಯ । ಪ್ರ ಚಕ್ಷಯ ಚ ಚಕ್ಷುಷಃ ಸಂಧುಕ್ಷಣೇನ । ನೋಽಸ್ಮಾನ್ ವಸ್ಯಸೋಽತಿಶಯೇನ ವಸುಮತಃ ಕೃಣುಹಿ । ಕುರು । ಅಥಾಧುನಾ ಹಿ ಖಲು ತೇ ತ್ವಾಂ ಹೇ ಸೋಮ ಮದೇ ಮದಾಯ ಮನ್ಯೇ । ಸ್ತೌಮಿ । ತಥಾ ಸತಿ ರೇವಾನಿವ ಧನವಾನಿಹ । ಇವೇತಿ ಸಂಪ್ರತ್ಯರ್ಥೇ । ಪುಷ್ಟಿಮಸ್ಮತ್ಪೋಷಮಚ್ಛ ಪ್ರ ಚರ । ಅಭಿಗಚ್ಛ ॥**

|| ಪ್ರತಿಪದಾರ್ಥ ||

(ಎಲೈ ಸೋಮನೇ) **ಮಥಿತಂ—**ಅರಣಿಗಳಿಂದ ಕಡೆಯಲ್ಪಟ್ಟ । **ಅಗ್ನಿಂ ನ—**ಅಗ್ನಿಯನ್ನು ಪ್ರಜ್ವಲಿತವಾಗುವ ಹಾಗೆ ಮಾಡುವಂತೆ । **ಮಾ—**ನನ್ನನ್ನು । **ಸಂ ದಿದೀಪಃ—**ಪೂರ್ಣವಾದ ಚೈತನ್ಯಯುಕ್ತನಾಗುವ ಹಾಗೆ ಮಾಡು । **ಪ್ರ ಚಕ್ಷಯ—**ನಮ್ಮ ಕಣ್ಣುಗಳನ್ನು ತೆರೆದು ಪ್ರಕಾಶಯುಕ್ತವಾಗುವಂತೆ ಮಾಡು । **ನಃ—**ನಮ್ಮನ್ನು । **ವಸ್ಯಸಃ—**ಧನಯುಕ್ತರಾಗುವಂತೆ । **ಕೃಣುಹಿ—**ಮಾಡು । **ಸೋಮ—**ಎಲೈ ಸೋಮನೇ । **ಅಥ ಹಿ—**ಈಗಲೇ । **ತೇ—**ನಿನ್ನನ್ನು । **ಮದೇ—**ಹರ್ಷಕ್ಕಾಗಿ । **ಮನ್ಯೇ—**ಸ್ತುತಿಸುತ್ತೇನೆ । **ರೇವಾನ್—**ಧನವಂತನಾದ ನೀನು । **ಪುಷ್ಟಿಂ ಅಚ್ಛ—**ನಮ್ಮ ಪುಷ್ಟಿಗಾಗಿ । **ಪ್ರ ಚರ—**ಇಲ್ಲಿಗೆ ದಯಮಾಡು.

|| ಭಾವಾರ್ಥ ||

ಎಲೈ ಸೋಮನೇ, ಅರಣಿಗಳಿಂದ ಕಡೆಯಲ್ಪಟ್ಟ ಅಗ್ನಿಯನ್ನು ಪ್ರಜ್ವಲಿತವಾಗುವ ಹಾಗೆ ಮಾಡುವಂತೆ, ನನ್ನನ್ನು ಪೂರ್ಣವಾದ ಚೈತನ್ಯಯುಕ್ತನಾಗುವ ಹಾಗೆ ಮಾಡು. ನಮ್ಮ ಕಣ್ಣುಗಳನ್ನು ತೆರೆದು ಪ್ರಕಾಶಯುಕ್ತವಾಗುವಂತೆ ಮಾಡು ನಮ್ಮನ್ನು ಧನಯುಕ್ತರಾಗುವಂತೆ ಮಾಡು. ಎಲೈ ಸೋಮನೇ, ನಿನ್ನನ್ನು ಹರ್ಷಲಾಭಕ್ಕಾಗಿ ಈಗಲೇ ಸ್ತುತಿಸುತ್ತೇನೆ. ಧನವಂತನಾದ ನೀನು ನಮ್ಮ ಪುಷ್ಟಿಲಾಭಕ್ಕಾಗಿ ಇಲ್ಲಿಗೆ ದಯಮಾಡು.

## English Translation.

Soma, kindle me like the fire ignited by attrition, brighten (our eyes) and make us rich; I praise you now for exhilaration ; come now, full of wealth to nourish us.

|| ಸಂಹಿತಾಪಾಠಃ ||

**ಇಷಿರೇಣ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ರಾಯಃ ।**

**ಸೋಮ ರಾಜನ್ಪ್ರ ಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ ॥**

॥ ಪದಪಾಠಃ ॥

ಇಷಿರೇಣ । ತೇ । ಮನಸಾ । ಸುತಸ್ಯ । ಭಕ್ಷೀಮಹಿ । ಪಿತ್ರ್ಯಸ್ಯಽಇವ । ರಾಯಃ ।

ಸೋಮ । ರಾಜನ್ । ಪ್ರ । ನಃ । ಆಯೂಂಷಿ । ತಾರೀಃ । ಅಹಾನಿಽಇವ । ಸೂರ್ಯಃ । ವಾಸರಾಣಿ ॥೭॥

॥ ಸಾಯಣಭಾಷ್ಯಂ ॥

ಇಷಿರೇಣಾಚ್ಛಾವತಾ ಮನಸಾ ಸುತಸ್ಯ ತೇ ಸುತಮಭಿಷುತಂ ತ್ವಾಂ ಭಕ್ಷೀಮಹಿ । ಪಿತ್ರ್ಯಸ್ಯ ಪಿತೃಸಂಬಂಧಿನೋ ಧನಸ್ಯೇವ ಧನಮಿವ । ಪಿತ್ರ್ಯಂ ಧನಂ ಯಥೈಷಣೇನ ಮನಸೋಪಭುಂಜತೇ ತದ್ವತ್ । ಭಕ್ಷಿತ ಡೇ ಸೋಮ ರಾಜನ್ ಸ್ವಾಮಿನ್ ನೋಽಸ್ಮಾಕಮಾಯೂಂಷಿ ಪ್ರ ತಾರೀಃ । ಪ್ರವರ್ಧಯ । ವಾಸರಾಣಿ ಜಗದ್ವಾಸಕಾನ್ಯಹಾನಿ ಸೂರ್ಯ ಇವ । ಅತ್ರೇಷಣೇನ ವೈಷಣೇನ ವಾರ್ಷಣೇನ ವಾ । ನಿ. ೪-೭ । ಇತ್ಯಾದಿನಿರುಕ್ತಂ ಜ್ಞಾತವ್ಯಂ ॥

ಪ್ರತಿಪದಾರ್ಥ ॥

ರಾಜನ್—ಪ್ರಭುವಾದ । **ಸೋಮ**—ಎಲೈ ಸೋಮವೇ । **ಇಷಿರೇಣ**—ಆದರದಿಂದ ಕೂಡಿದ । **ಮನಸಾ**—ಮನಸ್ಸಿನಿಂದ । **ಪಿತ್ರ್ಯಸ್ಯ ರಾಯಃ ಇವ**—ಪಿತೃಧನವನ್ನು ಭುಜಿಸುವಂತೆ । **ಸುತಸ್ಯ**—ಹಿಂಡಲ್ಪಟ್ಟಿರುವ । **ತೇ**—ನಿನ್ನನ್ನು । **ಭಕ್ಷೀಮಹಿ**—ಭುಜಿಸುತ್ತೇವೆ । **ಸೂರ್ಯಃ**—ಸೂರ್ಯನು । **ವಾಸರಾಣಿ**—ಜಗತ್ತನ್ನು ವ್ಯಾಪಿಸಿರುವ । **ಅಹಾನಿ**—ಅಹಸ್ಸುಗಳನ್ನು ವೃದ್ಧಿಪಡಿಸುವಂತೆ । **ನಃ**—ನಮ್ಮ । **ಆಯೂಂಷಿ**—ಆಯುಸ್ಸುಗಳನ್ನು । **ಪ್ರ ತಾರೀಃ**—ವೃದ್ಧಿಪಡಿಸು.

॥ ಭಾವಾರ್ಥ ॥

ಪ್ರಭುವಾದ ಎಲೈ ಸೋಮವೇ, ಆದರದಿಂದ ಕೂಡಿದ ಮನಸ್ಸಿನಿಂದ ಪಿತೃಧನವನ್ನು ಭುಜಿಸುವಂತೆ ಹಿಂಡಲ್ಪಟ್ಟಿರುವ ನಿನ್ನನ್ನು ಈಗ ಸಂತೋಷದಿಂದ ಭುಜಿಸತ್ತೇವೆ ಜಗತ್ತನ್ನು ವ್ಯಾಪಿಸಿರುವ ಅಹಸ್ಸುಗಳನ್ನು ಸೂರ್ಯನು ವೃದ್ಧಿ ಪಡಿಸುವಂತೆ ನಮ್ಮ ಆಯುಸ್ಸುಗಳನ್ನು ವೃದ್ಧಿಪಡಿಸು.

English Translation.

May we partake of you, effused, with a longing mind as (men enjoy) paternal wealth; King Soma, prolong our lives, as the sun the world-establishing days.

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

**ಈಷಣೇನ ವೈಷಣೇನ ವಾರ್ಷಣೇನ ವಾ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ಧನಸ್ಯ ಪ್ರವರ್ಧಯ ಚ ನ ಆಯೂಂಷಿ ಸೋಮರಾಜನ್ । ಅಹಾನೀವ ಸೂರ್ಯೋ ವಾಸರಾಣಿ । ವಾಸರಾಣಿ ವೇಸರಾಣಿ ವಿವಾಸನಾನಿ ಗಮನಾನೀತಿವಾ ॥** (ನಿ. ೪-೭)

ಇಲ್ಲಿ **ಇಷಿರೇಣ** ಎಂಬ ಶಬ್ದಕ್ಕೆ ಮೂರು ವಿಧವಾದ ಅರ್ಥವನ್ನು ಹೇಳಿದಾರೆ. ಈ ಶಬ್ದವು **ಮನಸಾ** ಎಂಬ ಶಬ್ದಕ್ಕೆ ವಿಶೇಷಣವಾಗಿದೆ. (1) **ಈಷಣೇನ । ಈಷತಿ, ಫಣತಿ ಇತಿ ಗತಿಕರ್ಮಸು ಪಠಿತಂ । ಸರ್ವಾತ್ಮನಾ ಗತೇನೇತ್ಯರ್ಥಃ ।** ಈಷತಿಧಾತುವಿಗೆ ಗತ್ಯರ್ಥವಿರುವುದರಿಂದ ಈ ಧಾತುವಿನಿಂದ ನಿಷ್ಪನ್ನವಾದ **ಈಷಣೇನ** ಎಂಬ ಶಬ್ದಕ್ಕೆ ಅಲ್ಲಿಯೇ ಎಂದರೆ ನಿನ್ನಲ್ಲಿಯೇ ನೆಟ್ಟಿರುವ ಮನಸ್ಸಿನಿಂದ ಎಂದರ್ಥವು (2) **ಏಷಣೇನ-ಇಚ್ಛಾವತಾ ಫಲಪ್ರಾರ್ಥನಾವತೇತ್ಯರ್ಥಃ ।** ನಿನ್ನನ್ನು ಫಲಪ್ರಾಪ್ತಿಗಾಗಿ ಅಪೇಕ್ಷಿಸುತ್ತಿರುವ ಮನಸ್ಸಿನಿಂದ ಎಂದರ್ಥವು. (3) **ಋಷಣೇನೇತಿ ವಾ-ದರ್ಶನವತಾ ।** ನೋಡುತ್ತಿರುವ ಎಂದರೆ ಅದನ್ನೇ ನೋಡುತ್ತಾ ಅಪೇಕ್ಷಿಸುತ್ತಿರುವ ಮನಸ್ಸಿನಿಂದ ಎಂದರ್ಥವು

ಎಲೈ ಸೋಮರಾಜನೇ, ನಿನ್ನಲ್ಲೇ ನೆಟ್ಟಮನಸ್ಸಿನಿಂದ ನಾವು ಸೋಮರಸವನ್ನು ಪಿತ್ರಾರ್ಜಿತ ಆಸ್ತಿಯನ್ನು ಸಂತೋಷದಿಂದ ಅನುಭವಿಸುವಂತೆ ಪಾನಮಾಡೋಣ. ಸೂರ್ಯನು ವಸಂತಕಾಲದ ದಿನಗಳನ್ನು ದೀರ್ಘವಾಗಿ ಮಾಡುವಂತೆ ನೀನು ನಮ್ಮ ಆಯುಸ್ಸನ್ನು ವೃದ್ಧಿಪಡಿಸು ಎಂದು ಮುಖ್ಯಾಭಿಪ್ರಾಯವು.

ಇಲ್ಲಿ **ವಾಸರಾಣಿ** ಎಂದರೆ ದಿನಗಳು-ಹಗಲುಗಳು ಎಂದರ್ಥವು. **ವಾಸರಾಣಿ ಎಂದರೆ ವೇಸರಾಣಿ । ಶೀತೋಷ್ಣಾಭ್ಯಾಂ ತಾನಿ ಸರಂತಿ, ತೇಷು ಹಿ ಶೀತೋಷ್ಣಂ ಭವತಿ । ರಾತ್ರೌ ಶೀತಂ ದಿವಾ ಉಷ್ಣಂ ।** ವಾಸರಶಬ್ದವು ಸೃ-ಸರಿ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಕಾಲವು ಎಂದರೆ ದಿನದ ಕಾಲವು ಮುಂದುಮುಂದಕ್ಕೆ ಸರಿಯುತ್ತಿರುವುದು. ಆ ರೀತಿ ಸರಿಯುತ್ತಿರುವಾಗ ರಾತ್ರಿ ಕಾಲದಲ್ಲಿ ಶೀತವಾತಾವರಣದಿಂದಲೂ, ಹಗಲಿನಲ್ಲಿ ಔಷ್ಣ್ಯದಿಂದಲೂ ಕೂಡಿ ದಿನದ ಕಾಲಮಾನವು ಸರಿದುಹೊಗುತ್ತಿರುವುದು ಎಂದರೆ ಕಳೆದುಹೋಗುತ್ತಿರುವುದು. ಆದ್ದರಿಂದ ದಿನಗಳಿಗೆ (ಮುಖ್ಯವಾಗಿ ಹಗಲಿಗೆ) ವಾಸರಾಣಿ ಅಥವಾ ವೇಸರಾಣಿ ಎಂದು ಹೆಸರು. ಇದಲ್ಲದೆ **ವಿವಾಸನಾನಿ-ತಾನಿ ಹಿ ತತ್ ಶೀತಂ ವಿವಾಸಯಂತಿ ನಾಶಯಂತೀತ್ಯರ್ಥಃ ।** ರಾತ್ರಿಕಾಲದಲ್ಲಿ ಉಂಟಾಗುವ ಶೈತ್ಯವನ್ನು ಹಗಲು ತನ್ನ (ಸೂರ್ಯನ) ಔಷ್ಣ್ಯದಿಂದ ನಾಶಮಾಡುವುದರಿಂದ ಹಗಲುಗಳಿಗೆ ನಿವಾಸನಾನಿ ಎಂಬರ್ಥವನ್ನು ಹೇಳಬಹುದು. ಅಥವಾ **ಗಮನಾನೀತಿ ವಾ ವಿಸೃತಾನಿ ವಿಸ್ತೀರ್ಣಾನಿ ಸಂತಿ ವಾಸರಾಣೀತಿ ಉಚ್ಯಂತೇ । ಯಥಾ ತಾನಿ ಸೂರ್ಯಃ ವರ್ಧಯತಿ ಮಂದಗತಿತ್ವಾತ್ ಏವಮಸ್ಮಾಕಂ ತ್ವಮಾಯುಃ ಪ್ರವರ್ಧಯೇತ್ಯಾಶೀಃ ॥** ಹಗಲುಕಾಲವು-ಇದರಲ್ಲಿಯೂ ಬೇಸಗೆಯಲ್ಲಿ-ದೀರ್ಘವಾಗಿರುವುದರಿಂದ ವಿಸ್ತಾರವಾದ ಹಗಲುಗಳಿಗೆ ವಾಸರಾಣಿ ಎಂದು ಹೇಳಬಹುದು ಸೂರ್ಯನು ಹಗಲಿನಲ್ಲಿ ಮಂದಗತಿಯಿಂದ ಸಂಚರಿಸುತ್ತಾ ಹಗಲಿನ ಕಾಲಪರಿಮಾಣವನ್ನು ಹೆಚ್ಚುಮಾಡುತ್ತಾನೆ. ಅದರಂತೆ ಎಲೈ ಸೋಮನೇ, ನೀನು ನಮ್ಮ ಆಯುಃಪ್ರಮಾಣವನ್ನು ಹೆಚ್ಚುಮಾಡು ಎಂಬ ಪ್ರಾರ್ಥನೆಯು ಇಲ್ಲಿ ಉಕ್ತವಾಗಿದೆ.

॥ ಸಂಹಿತಾಪಾಠಃ ॥

**ಸೋಮ ರಾಜನ್ಮೃಳಯಾ ನಃ ಸ್ವಸ್ತಿ ತವ ಸ್ಮಸಿ ವ್ರತ್ಯಾ೩ಸ್ತಸ್ಯ ವಿದ್ಧಿ ।**

**ಅಲರ್ತಿ ದಕ್ಷ ಉತ ಮನ್ಯುರಿಂದೋ ಮಾ ನೋ ಅರ್ಯೋ ಅನುಕಾಮಂ**

**ಪರಾ ದಾಃ ॥ ೮ ॥**

॥ ಪದಪಾಠಃ ॥

ಸೋಮ । ರಾಜನ್ । ಮೃಳಯ । ನಃ । ಸ್ವಸ್ತಿ । ತವ । ಸ್ಮಸಿ । ವ್ರತ್ಯಾಃ । ತಸ್ಯ । ವಿದ್ಧಿ ।

ಅಲರ್ತಿ । ದಕ್ಷಃ । ಉತ । ಮನ್ಯುಃ । ಇಂದೋ ಇತಿ । ಮಾ । ನಃ । ಅರ್ಯಃ । ಅನುಽಕಾಮಂ । ಪರಾ । ದಾಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಸೋಮ ರಾಜನ್ ನೋಽಸ್ಮಾನ್ ಸ್ವಸ್ತ್ಯವಿನಾಶಾಯ ಮೃಳಯ । ಸುಖಯ ಚ । ವ್ರತ್ಯಾ ವ್ರತಿನೋ ವಯಂ ತವ ಸ್ಮಸಿ ಸ್ವಭೂತಾಃ ಸ್ಮ । ತಸ್ಯ ತಂ ಸ್ವಕೀಯಂ ತವ ವಿದ್ಧಿ । ಜಾನೀಹಿ । ಅಥವಾ ತವ ತ್ವಮಿತ್ಯರ್ಥಃ । ತ್ವಂ ಜಾನೀಹಿ । ಕಿಂಚ ಹೇ ಇಂದೋ ದಕ್ಷಃ ಪ್ರವೃದ್ಧೋಽಸ್ಮಚ್ಛತ್ರುರಲರ್ತಿ । ಗಚ್ಛತಿ । ಉತಾಪಿ ಚ ಮನ್ಯುಃ ಕ್ರೋಧಃ ಕ್ರುದ್ಧೋ ವಾಲರ್ತಿ । ತಾದೃಶಸ್ಯೋಭಯವಿಧಸ್ಯಾರ್ಯೋಽರೇರನುಕಾಮಂ ಯಥಾಕಾಮಂ ನೋಽಸ್ಮಾನ್ಮಾ ಪರಾ ದಾಃ । ಪರಾದೇಹಿ ॥

॥ ಪ್ರತಿಪದಾರ್ಥ ॥

ರಾಜನ್ – ಪ್ರಭುವಾದ । **ಸೋಮ**—ಎಲೈ ಸೋಮನೇ । **ನಃ**—ನಮಗೆ । **ಸ್ವಸ್ತಿ**—ಒಳ್ಳೆಯದಾಗುವಂತೆ । **ಮೃಳಯ**—ಸುಖಪಡಿಸು । **ವ್ರತ್ಯಾಃ** – ಯಜ್ಞಕರ್ಮಗಳನ್ನು ನೆರವೇರಿಸುವ ನಾವು । **ತವ**—ನಿನಗೆ ಸೇರಿದವರಾಗಿ । **ಸ್ಮಸಿ** - ಆಗಿದ್ದೇವೆ । **ತಸ್ಯ** -ನಿನಗೆ ಸೇರಿದ ನಮ್ಮನ್ನು । **ವಿದ್ಧಿ**—ಭಕ್ತಿಯುತರೆಂದು ತಿಳಿ । **ಉತ**—ಮತ್ತು । **ಇಂದೋ**—ಪ್ರವಿಸತಕ್ಕ ಎಲೈ ಸೋಮನೇ । **ದಕ್ಷಃ**—ಬಲಯುತನಾದ ಶತ್ರುವು । **ಅಲರ್ತಿ**—ಎದುರುಬೀಳಲು ಬರುತ್ತಾನೆ । **ಮನ್ಯುಃ**—ಕ್ರೋಧವನ್ನು ಪ್ರಕಟಿಸುತ್ತಾನೆ । **ಅರ್ಯಃ**—ಶತ್ರುವಿಗೆ । **ಅನುಕಾಮಂ**—ಅವನ ಇಚ್ಛೆಯಂತೆ । **ನಃ**—ನಮ್ಮನ್ನು । **ಮಾ ಪರಾ ದಾಃ**—ಬಿಟ್ಟುಕೊಡಬೇಡ.

॥ ಭಾವಾರ್ಥ ॥

ಪ್ರಭುವಾದ ಎಲೈ ಸೋಮನೇ, ನಮಗೆ ಒಳ್ಳೆಯದಾಗುವಂತೆ ನಮ್ಮನ್ನು ಸುಖಪಡಿಸು. ಯಜ್ಞಕರ್ಮಗಳನ್ನು ಆಚರಿಸುವ ನಾವು ನಿನಗೆ ಸೇರಿದವರೇ ಆಗಿದ್ದೇವೆ. ನಿನಗೆ ಸೇರಿದ ನಮ್ಮನ್ನು ಭಕ್ತಿಯುತರೆಂದು ತಿಳಿ. ಎಲೈ ಸೋಮನೇ, ಬಲಯುತನಾದ ಶತ್ರುವು ಎದರುಬೀಳಲು ಬರುತ್ತಾನೆ. ಕ್ರೋಧವನ್ನು ಪ್ರಕಟಿಸುತ್ತಾನೆ. ಶತ್ರುವಿಗೆ ಅವನ ಇಚ್ಛೆಯಂತೆ ನಮ್ಮನ್ನು ಬಿಟ್ಟುಕೊಡಬೇಡ.

## English Translation.

King Soma, bless us for onr welfare; we worshippers are yours, recognize it ; the enemy goes strong and fierce, O Soma ; give us not over to him as he desires.

॥ ಸಂಹಿತಾಪಾಠಃ ॥

ತ್ವಂ ಹಿ ನ ಸ್ತನ್ವಃ ಸೋಮ ಗೋಪಾ ಗಾತ್ರೇಗಾತ್ರೇ ನಿಷಸತ್ಥಾ ನೃಚಕ್ಷಾಃ ।
ಯತ್ತೇ ವಯಂ ಪ್ರಮಿನಾಮ ವ್ರತಾನಿ ಸ ನೋ ಮೃಳ ಸುಷಖಾ ದೇವ
ವಸ್ಯಃ ॥ ೯ ॥

॥ ಪದಪಾಠಃ ॥

ತ್ವಂ । ಹಿ । ನಃ । ತನ್ವಃ । ಸೋಮ । ಗೋಪಾಃ । ಗಾತ್ರೇಽಗಾತ್ರೇ । ನಿಽಸಸತ್ಥ । ನೃಽಚಕ್ಷಾಃ ।
ಯತ್ । ತೇ । ವಯಂ । ಪ್ರಽಮಿನಾಮ । ವ್ರತಾನಿ । ಸಃ । ನಃ । ಮೃಳ । ಸುಽಸಖಾ । ದೇವ । ವಸ್ಯಃ ॥೯ ।

॥ ಸಾಯಣಭಾಷ್ಯಂ ॥

**ಹೇ ಸೋಮ ದೇವ ತ್ವಂ ನೋಽಸ್ಮಾಕಂ ತನ್ವಸ್ತನೋರಂಗಸ್ಯ ಗೋಪಾ ಹಿ ರಕ್ಷಿತಾ ಖಲು । ಅತೋ ಗಾತ್ರೇ ಗಾತ್ರೇ ಸರ್ವೇಷ್ವಂಗೇಷು ನೃಚಕ್ಷಸಾ ನೃಣಾಂ ಕರ್ಮನೇತೄಣಾಂ ದ್ರಷ್ಟಾ ತ್ವಂ ನಿಷಸತ್ಥ। ನಿಷೀದಸಿ । ಯದ್ಯದ್ಯಪಿ ತೇ ತವ ವ್ರತಾನಿ ಕರ್ಮಾಣಿ ವಯಂ ಪ್ರಮಿನಾಮ ಹಿಂಸ್ಮಃ ತಥಾಪಿ ಹೇ ದೇವ ಸ ತ್ವಂ ವಸ್ಯಃ ಶ್ರೇಷ್ಠಾನ್ನೋಽಸ್ಮಾನ್ ಸುಷಖಾ ಶೋಭನಸಖಾ ಸನ್ ಮೃಳ । ಸುಖಯ ॥**

॥ ಪ್ರತಿಪದಾರ್ಥ ॥

**ಸೋಮ**—ಎಲೈ ಸೋಮದೇವನೇ । **ತ್ವಂ**—ನೀನು । **ನಃ**—ನಮ್ಮ । **ತನ್ವಃ**—ಶರೀರಕ್ಕೆ । **ಗೋಪಾ ಹಿ**—ರಕ್ಷಕನಾಗಿದ್ದೀಯೆ । **ಗಾತ್ರೇ ಗಾತ್ರೇ**—ನಮ್ಮ ದೇಹದ ಪ್ರತಿಯೊಂದು ಅಂಗದಲ್ಲಿಯೂ । **ನೃಚಕ್ಷಾಃ**—ಮಾನವರಾದ ನಮ್ಮ ವ್ಯವಹಾರಗಳನ್ನು ವೀಕ್ಷಿಸುತ್ತಾ । **ನಿಷಸತ್ಥ**—ಆಕ್ರಮಿಸಿ ಕುಳಿತಿದ್ದೀಯೆ । **ಯತ್**—ಒಂದುವೇಳೆ । **ತೇ**—ನಿನ್ನ । **ವ್ರತಾನಿ**—ಕರ್ಮಗಳನ್ನು । **ವಯಂ**—ನಾವು । **ಪ್ರಮಿನಾಮ**—ಕುಂಠಿತವನ್ನಾಗಿ ಮಾಡಿದರೂ । **ದೇವ**—ದೇವತಾತ್ಮನಾದ ಎಲೈ ಸೋಮನೇ । **ಸಃ**—ನೀನು । **ವಸ್ಯಃ**—ಉತ್ತಮರಾದ । **ನಃ**—ನಮಗೆ । **ಸುಷಖಾ**—ಉತ್ತಮನಾದ ಮಿತ್ರನಾಗಿದ್ದು । **ಮೃಳ**—ಸುಖಪಡಿಸು.

॥ ಭಾವಾರ್ಥ ॥

ಎಲೈ ಸೋಮದೇವನೇ, ನೀನು ನಮ್ಮ ಶರೀರಕ್ಕೆ ರಕ್ಷಕನಾಗಿದ್ದೀಯೆ. ನಮ್ಮ ದೇಹದ ಪ್ರತಿಯೊಂದು ಅಂಗದಲ್ಲಿಯೂ ಮಾನವರಾದ ನಮ್ಮ ವ್ಯವಹಾರಗಳನ್ನು ವೀಕ್ಷಿಸುತ್ತಾ ಆಕ್ರಮಿಸಿ ಕುಳಿತಿದ್ದೀಯೆ. ದೇವತಾತ್ಮನಾದ ಎಲೈ ಸೋಮನೇ, ನಾವು ಒಂದುವೇಳೆ ನಿನ್ನ ಕರ್ಮಗಳನ್ನು ಕುಂಠಿತವನ್ನಾಗಿ ಮಾಡಿದರೂ, ನೀನು ನಮಗೆ ಉತ್ತಮವಾದ ಮಿತ್ರನಾಗಿದ್ದು ನಮ್ಮನ್ನು ಸುಖಪಡಿಸು.

## English Translation.

O Soma, you are the guardian of our bodies, you dwell in each limb as the beholder of men; though we impair your rites, yet, divine one, bless us, you who are possessed of most excellent food and good friends.

॥ ಸಂಹಿತಾಪಾಠಃ ॥

ಋದೂದರೇಣ ಸಖ್ಯಾ ಸಚೇಯ ಯೋ ಮಾ ನ ರಿಷ್ಯೇದ್ಧರ್ಯಶ್ವ ಪೀತಃ ।
ಅಯಂ ಯಃ ಸೋಮೋ ನ್ಯಧಾಯ್ಯಸ್ಮೇ ತಸ್ಮಾ ಇಂದ್ರಂ ಪ್ರತಿರಮೇ-
ಮ್ಯಾಯುಃ ॥ ೧೦ ॥

॥ ಪದಪಾಠಃ ॥

ಋದೂದರೇಣ । ಸಖ್ಯಾ । ಸಚೇಯ । ಯಃ । ಮಾ । ನ । ರಿಷ್ಯೇತ್ । ಹರಿऽಅಶ್ವ । ಪೀತಃ ।
ಅಯಂ । ಯಃ । ಸೋಮಃ । ನಿ । ಅಧಾಯಿ । ಅಸ್ಮೇ ಇತಿ । ತಸ್ಮೈ । ಇಂದ್ರಂ । ಪ್ರऽತಿರಂ । ಏಮಿ ।
ಆಯುಃ ॥ ೧೦ ॥

॥ ಸಾಯಣಭಾಷ್ಯಂ ॥

ಅಹಂ ಪ್ರಗಾಥ ಋದೂದರೇಣೋದರಾಬಾಧಕೇನ ಸೋಮೇನ ಸಖ್ಯಾ ಸಚೇಯ । ಸಂಗಚ್ಛೇಯ । ಸಂಗತೋ ಭವಾಮಿ । ಋದೂದರಃ ಸೋಮೋ ಮೃದೂದರಃ । ನಿ. ೬-೪ । ಇತಿ ಯಾಸ್ಕಃ । ಯಃ ಸೋಮಃ ಪೀತಃ ಸನ್ ಮಾ ಮಾಂ ನ ರಿಷ್ಯೇತ್ ನ ಹಿಂಸ್ಯೇತ್ ಹೇ ಹರ್ಯಶ್ವೇಂದ್ರ ಸೌಮ್ಯೇ ಸೂಕ್ತ ಇಂದ್ರಸ್ಯ ಕೀರ್ತನಂ ಸೋಮಸ್ಯೇಂದ್ರಸ್ವಾಮಿಕತ್ವಾನ್ನ ವಿರುದ್ಧಂ । ಯೋಽಯಂ ಸೋಮೋಽಸ್ಮೇ ಅಸ್ಮಾಸು ನ್ಯಧಾಯಿ ನಿಹಿತೋಽಭೂತ್ ತಸ್ಮೈ ಸೋಮಾಯ ಪ್ರತಿರಮಾಯುರ್ಜಠರೇ ಚಿರಕಾಲಾವಸ್ಥಾನಮಿಂದ್ರಮೇಮಿ । ಯಾಚೇ ॥

॥ ಪ್ರತಿಪದಾರ್ಥ ॥

ಯಃ—ಯಾವ ಸೋಮವು । ಪೀತಃ—ಪಾನಮಾಡಲ್ಪಟ್ಟಾಗ । ಮಾ—ನನ್ನನ್ನು । ನ ರಿಷ್ಯೇತ್—ಹಿಂಸಿಸುವುದಿಲ್ಲವೋ ಅಂತಹ । ಋದೂದರೇಣ—ಉದರಪೂರ್ಣಮಾಡತಕ್ಕ ಸೋಮದೊಡನೆ । ಸಖ್ಯಾ—ಮಿತ್ರತ್ವವನ್ನು । ಸಚೇಯ—ಹೊಂದುವಂತಾಗಲಿ । ಹರ್ಯಶ್ವ—ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ । ಯಃ ಅಯಂ ಸೋಮಃ—ಯಾವ ಈ ಸೋಮವು । ಅಸ್ಮೇ—ನಮ್ಮಲ್ಲಿ । ನ್ಯಧಾಯಿ—ಇಡಲ್ಪಟ್ಟಿದೆಯೋ ।

**ತಸ್ಮೈ**—ಆ ಸೋಮಕ್ಕೆ । **ಪ್ರತಿರಂ**—ದೀರ್ಘವಾದ । **ಆಯುಃ**—ಆಯುಸ್ಸನ್ನುಂಟು ಮಾಡೆಂದು । **ಇಂದ್ರಂ**—ಈಶ್ವರನಾದ ನಿನ್ನನ್ನು । **ಏಮಿ**—ಯಾಚಿಸುತ್ತೇನೆ.

॥ ಭಾವಾರ್ಥ ॥

ಯಾವ ಸೋಮವು ಪಾನಮಾಡಲ್ಪಟ್ಟಾಗ ನನ್ನನ್ನು ಹಿಂಸಿಸುವುದಿಲ್ಲವೋ ಅಂತಹ ಉದರಪೂರ್ಣವಾಡತಕ್ಕ ಸೋಮದೊಡನೆ ನಾನು ಮಿತ್ರತ್ವವನ್ನು ಹೊಂದುವೆನು. ಹರಿಸಂಜ್ಞಕವಾದ ಅಶ್ವವುಳ್ಳ ಎಲೈ ಇಂದ್ರನೇ, ನಾನು ಪಾನಮಾಡಿರುವ ಸೋಮವು ದೀರ್ಘಕಾಲ ನನ್ನ ಉದರದಲ್ಲೇ ಇರುವಂತೆ ಮಾಡು ಎಂದು ಈಶ್ವರನಾದ ನಿನ್ನನ್ನು ಪ್ರಾರ್ಥಿಸುತ್ತೇನೆ.

## English Translation.

May I obtain a wholesome friend who, when quaffed, will not harm me, O lord of bay horses; I ask of Indra a long permanence for this Soma which has been placed within us.

॥ ವಿಶೇಷವಿಷಯಗಳು ॥

**ಋದೂದರೇಣ**—ಈ ಶಬ್ದಕ್ಕೆ ಯಾಸ್ಕರು—**ಋದೂದರಃ ಸೋಮೋ ಮೃದೂದರೋ ಮೃದುರುದರೇಷ್ವಿತಿ ವಾ । ಋದೂದರೇಣ ಸಖ್ಯಾ ಸಚೇಯ ಇತ್ಯಪಿ ನಿಗಮೋ ಭವತಿ** ॥ (ನಿ. ೬-೪) ಎಂದು ನಿರ್ವಚನವನ್ನು ಹೇಳಿದಾರೆ. ಋದೂದರವೆಂದರೆ ಸೋಮವು ಅಥವಾ ಸೋಮರಸವು. ಈ ಸೋಮದ ಒಳಭಾಗವು ಮೃದುವಾಗಿರುವುದರಿಂದ ಅಥವಾ ಇದನ್ನು ಪಾನಮಾಡುವನ ಉದರದಲ್ಲಿ ಇದು ಮೃದುವಾಗಿರುವುದರಿಂದ (ಮೃದು ಎಂದರೆ ಮೆತ್ತಗೆ, ಬಾಧೆ ಅಥವಾ ಹಿಂಸೆಯಿಲ್ಲದಂತೆ) ಸೋಮವು ಋದೂದರವೆಂದು ಹೇಳಲ್ಪಡುವುದು. ಈ ವಿಷಯದಲ್ಲಿ **ಋದೂದರೇಣ ಸಖ್ಯಾ ಸಚೇಯ** ಎಂಬ ಪ್ರಕೃತಋಕ್ಕೇ ಉದಾಹರಣೆಯಾಗಿರುವುದು. ಎಂದರೆ ಸೋಮಪಾನದಿಂದ ಉದರಕ್ಕೆ ಯಾವ ಬಾಧೆಯೂ ಆಗದೆ ಹರ್ಷದಾಯಕವಾಗಿಯೇ ಇರುವುದು ಎಂದು ಮುಖ್ಯಾಭಿಪ್ರಾಯವು.

। ಸಂಹಿತಾಪಾಠಃ ।

ಅಪ ತ್ಯಾ ಅಸ್ಥುರನಿರಾ ಅಮೀವಾ ನಿರತ್ರಸಂತಮಿಷೀಚೀರಭೈಷುಃ ।
ಆ ಸೋಮೋ ಅಸ್ಮಾँ ಅರುಹದ್ವಿಹಾಯಾ ಅಗನ್ಮ ಯತ್ರ ಪ್ರತಿರಂತ ಆಯುಃ ॥ ೧೧ ॥

। ಪದಪಾಠಃ ।

ಅಪ । ತ್ಯಾಃ । ಅಸ್ಥುಃ । ಅನಿರಾಃ । ಅಮೀವಾಃ । ನಿಃ । ಅತ್ರಸನ್ । ತಮಿಷೀಚೀಃ । ಅಭೈಷುಃ ॥
ಆ । ಸೋಮಃ । ಅಸ್ಮಾನ್ । ಅರುಹತ್ । ವಿऽಹಾಯಾಃ । ಅಗನ್ಮ । ಯತ್ರ । ಪ್ರऽತಿರಂತೇ । ಆಯುಃ ॥

॥ ಸಾಯಣಭಾಷ್ಯಂ ॥

ತ್ಯಾಸ್ತಾ ಅನಿರಾಃ ಪ್ರೇರಯಿತುಮಶಕ್ಯಾ ಅಮೀವಾ ಬಲವತ್ಯಃ ಪೀಡಾಃ ಅಪಾಸ್ಥುಃ । ಅಪಗಚ್ಛಂತು । ಯಾಸ್ತವಿಷೀಚೀರ್ಬಲವತ್ಯೋಽಸ್ಮಾನ್ನಿರ್ನಿತರಾಮತ್ರಸನ್ ಪ್ರಾಪ್ನುವನ್ ಕಂಪಯಂತಿ ತಥಾಭೈಷುಃ । ಅಪಗಮೇ ಕಾರಣಮಾಹ । ಯಸ್ಮಾತ್ಸೋಮೋ ವಿಹಾಯಾ ಮಹಾನ್ ಸನ್ನಸ್ಮಾನಾರುಹತ್ ಅಗಮತ್ ಪ್ರಾಪ್ತವಾನ್ ಅತೋಽಪಾಸ್ಥುರಿತಿ ಭಾವಃ । ಯತ್ರ ಯಸ್ಮಿನ್ ಸೋಮೇ ಪೀತೆ ಆಯುರಾಯುಷ್ಯಂ ಪ್ರತಿರಂತೇ ವರ್ಧಯಂತಿ ಮನುಷ್ಯಾಸ್ತಂ ಸೋಮಮಗನ್ಮೇತಿ ॥

॥ ಪ್ರತಿಪದಾರ್ಥ ॥

**ತ್ಯಾಃ**—ಸರ್ವದಾ ಪೀಡಿಸುವುವೂ । **ಅನಿರಾಃ**—ತೊಲಗಿಸಲು ಸಾಧ್ಯವಿಲ್ಲದವೂ ಆದ । **ಅಮೀವಾಃ**—ರೋಗಗಳು । **ಅಪ ಅಸ್ಥುಃ**—ದೂರ ಸರಿಯಲಿ । **ನಿಃ**—ಪೂರ್ಣವಾಗಿ । **ಅತ್ರಸನ್**—ನಮ್ಮನ್ನು ನಡುಗುವಂತೆ ಮಾಡಿದವೂ । **ತವಿಷೀಚೀಃ**—ಶಕ್ತಿಯುತವೂ ಆದ ವ್ಯಾಧಿಗಳು । **ಅಭೈಷುಃ**—ಸೋಮನಿಗೆ ಬೆದರಿ ಹೋಗಲಿ । **ವಿಹಾಯಾಃ**—ಮಹತ್ಸ್ವರೂಪವುಳ್ಳ । **ಸೋಮಃ**—ಸೋಮವು । **ಅಸ್ಮಾನ್**—ನಮ್ಮನ್ನು । **ಆರುಹನ್**—ಪ್ರವೇಶಿಸಿದೆ । **ಯತ್ರ**—ಯಾವ ಸೋಮದಿಂದ ತೃಪ್ತವಾದ । **ಆಯುಃ**—ಮಾನವನ ಆಯುಸ್ಸು । **ಪ್ರತಿರಂತೇ**—ವೃದ್ಧಿಯಾಗುವುದೋ । **ಅಗನ್ಮ**—ಆ ಸೋಮವನ್ನು ನಾವು ಹೊಂದಿದ್ದೇವೆ.

॥ ಭಾವಾರ್ಥ ॥

ಸರ್ವದಾ ನಮ್ಮನ್ನು ಪೀಡಿಸುವುವೂ, ತೊಲಗಿಸಲು ಸಾಧ್ಯವಿಲ್ಲದವೂ ಆದ ರೋಗಗಳು ನಮ್ಮಿಂದ ದೂರ ಸರಿಯಲಿ. ನಮ್ಮನ್ನು ನಡಗುವಂತೆ ಮಾಡಿದವೂ, ಶಕ್ತಿಯುತವೂ ಆದ ವ್ಯಾಧಿಗಳು ಸೋಮನಿಗೆ ಬೆದರಿ ಹೋಗಲಿ. ಮಹತ್ಸ್ವರೂಪವುಳ್ಳ ಸೋಮವು ನಮ್ಮನ್ನು ಪ್ರವೇಶಿಸಿದೆ. ಯಾವ ಸೋಮದಿಂದ ತೃಪ್ತವಾದ ಮಾನವನ ಆಯುಸ್ಸು ವೃದ್ಧಿಯಾಗುವುದೋ ಆ ಸೋಮವನ್ನು ನಾವು ಹೊಂದಿದ್ದೇವೆ.

## English Translation.

May those irremovable sicknesses depart; let those strong (pains) which have made us tremble, be afraid; the mighty Soma has climbed into us,—we have attained that (draught) by which men prolong life.

॥ ಸಂಹಿತಾಪಾಠಃ ॥

ಯೋ ನ ಇಂದುಃ ಪಿತರೋ ಹೃತ್ಸು ಪೀತೋಽಮರ್ತ್ಯೋ ಮರ್ತ್ಯಾ ಆವಿವೇಶ ।

ತಸ್ಮೈ ಸೋಮಾಯ ಹವಿಷಾ ವಿಧೇಮ ಮೃಳೀಕೇ ಅಸ್ಯ ಸುಮತೌ ಸ್ಯಾಮ ॥ ೧೨ ॥

|| ಪದಪಾಠಃ ||

ಯಃ । ನಃ । ಇಂದುಃ । ಪಿತರಃ । ಹೃತ್ಸು । ಪೀತಃ । ಅಮರ್ತ್ಯಃ । ಮರ್ತ್ಯಾನ್ । ಆऽವಿವೇಶ ।

ತಸ್ಮೈ । ಸೋಮಾಯ । ಹವಿಷಾ । ವಿಧೇಮ । ಮೃಳೀಕೇ । ಅಸ್ಯ । ಸುऽಮತೌ । ಸ್ಯಾಮ ॥ ೧೨ ॥

|| ಸಾಯಣಭಾಷ್ಯಂ ||

ಹೇ ಪಿತರಃ ಯ ಇಂದುರ್ಹೃತ್ಸು ಪೀತಃ ಸನ್ನಮರ್ತ್ಯೋ ಮೃತಿರಹಿತಃ ಸನ್ನಾವಿವೇಶ ಮರ್ತ್ಯಾನ್ನೋಽಸ್ಮಾನ್ ತಸ್ಮೈ ಸೋಮಾಯ ಹವಿಷಾ ವಿಧೇಮ । ಪರಿಚರೇಮ । ಅಸ್ಯ ಸೋಮಸ್ಯ ಮೃಳೀಕೇ ಸುಖೇ ಸುಮತೌ ಚಾನುಗ್ರಹಬುದ್ಧೌ ಚ ಸ್ಯಾಮ । ಭವೇಮ ॥

|| ಪ್ರತಿಪದಾರ್ಥ ||

**ಪಿತರಃ**— ಎಲೈ ಪಿತೃಗಳೇ | **ಅಮರ್ತ್ಯಃ**— ಮೃತಿರಹಿತವಾದ | **ಯಃ ಇಂದುಃ**— ಯಾವ ಸೋಮವು | **ಹೃತ್ಸು**— ನಮ್ಮ ಮನಃಪೂರ್ವಕವಾಗಿ | **ಪೀತಃ**— ಪಾನಮಾಡಲ್ಪಟ್ಟು | **ಮರ್ತ್ಯಾನ್**— ಮಾನವರಾದ | **ನಃ**— ನಮ್ಮನ್ನು | **ಆವಿವೇಶ**— ಪ್ರವೇಶಿಸಿದೆಯೋ | **ತಸ್ಮೈ ಸೋಮಾಯ**— ಆ ಸೋಮವನ್ನುದ್ದೇಶಿಸಿ | **ಹವಿಷಾ**— ಹವಿಸ್ಸಿನಿಂದ | **ವಿಧೇಮ**— ಉಪಚರಿಸುತ್ತೇವೆ | **ಅಸ್ಯ**— ಈ ಸೋಮದ | **ಮೃಳೀಕೇ**— ಸುಖದಲ್ಲಿಯೂ | **ಸುಮತೌ**— ಅನುಗ್ರಹಾತ್ಮಕವಾದ ಬುದ್ಧಿಯಲ್ಲಿಯೂ | **ಸ್ಯಾಮ**— ನಾವು ಇರುವಂತಾಗಲಿ.

|| ಭಾವಾರ್ಥ ||

ಎಲೈ ಪಿತೃಗಳೇ, ಮೃತಿರಹಿತವಾದ ಯಾವ ಸೋಮವು ನಮ್ಮ ಮನಃಪೂರ್ವಕವಾಗಿ ಪಾನಮಾಡಲ್ಪಟ್ಟು ಮಾನವರಾದ ನಮ್ಮ ಹೃದಯವನ್ನು ಪ್ರವೇಶಿಸಿದೆಯೋ, ಆ ಸೋಮವನ್ನುದ್ದೇಶಿಸಿ ಹವಿಸ್ಸಿನಿಂದ ಉಪಚರಿಸುತ್ತೇವೆ. ಈ ಸೋಮದಿಂದ ಉಂಟಾಗುವ ಸುಖದಲ್ಲೂ, ಅದರ ಅನುಗ್ರಹಬುದ್ಧಿಯಲ್ಲಿಯೂ ನಾವು ಇರುವಂತೆ ಆಗಲಿ.

## English Translation.

That Soma which, drunk into our hearts, has entered, immortal, into us mortals,—to him, fathers, let us do worship with oblations; may we abide in his bliss and favour.

|| ಸಂಹಿತಾಪಾಠಃ ||

ತ್ವಂ ಸೋಮ ಪಿತೃಭಿಃ ಸಂವಿದಾನೋಽನು ದ್ಯಾವಾಪೃಥಿವೀ ಆ ತತಂಥ ।

ತಸ್ಮೈ ತ ಇಂದೋ ಹವಿಷಾ ವಿಧೇಮ ವಯಂ ಸ್ಯಾಮ ಪತಯೋ ರಯೀಣಾಂ ॥ ೧೩ ॥

॥ ಪದಪಾಠಃ ॥

ತ್ವಂ । ಸೋಮ । ಪಿತೃऽಭಿಃ । ಸಂऽವಿದಾನಃ । ಅನು । ದ್ಯಾವಾಪೃಥಿವೀ ಇತಿ । ಆ । ತತಂಥ ।
ತಸ್ಮೈ । ತೇ । ಇಂದೋ ಇತಿ । ಹವಿಷಾ । ವಿಧೇಮ । ವಯಂ । ಸ್ಯಾಮ । ಪತಯಃ । ರಯೀಣಾಂ ॥೧೩॥

॥ ಸಾಯಣಭಾಷ್ಯಂ ॥

ಮಹಾಪಿತೃಯಜ್ಞೇ ಸೋಮಾಯ ಪಿತೃಮತೇ ಪುರೋಡಾಶಮಿತ್ಯತ್ರ ತ್ವಂ ಸೋಮೇತಿ ಯಾಜ್ಯಾ । ಸೂತ್ರಿತಂ ಚ । ತ್ವಂ ಸೋಮ ಪಿತೃಭಿಃ ಸಂವಿದಾನೋ ಬರ್ಹಿಷದಃ ಪಿತರ ಊತ್ಯರ್ವಾಕ್ । ಆ. ೨-೧೯ । ಇತಿ ॥ ತೃತೀಯಸವನೇ ಸೋಮಸ್ಯ ಚರೋರಪೀಯಂ ಯಾಜ್ಯಾ। ತ್ವಂ ಸೋಮ ಪಿತೃಭಿಃ ಸಂವಿದಾನ ಇತಿ ಸೌಮ್ಯಸ್ಯ । ಆ. ೫-೧೯ । ಇತಿ ಹಿ ಸೂತ್ರಿತಂ ॥

ಹೇ ಸೋಮ ತ್ವಂ ಪಿತೃಭಿಃ ಸಹ ಸಂವಿದಾನಃ ಸಂಗಚ್ಛಮಾನೋ ದ್ಯಾವಾಪೃಥಿವೀ ದ್ಯಾವಾಪೃಥಿವ್ಯಾವನ್ವಾ ತತಂಥ । ಕ್ರಮೇಣ ವಿಸ್ತಾರಯಸಿ । ತಸ್ಮೈ ಸೋಮಾಯ ಹವಿಷಾ ವಿಧೇಮ । ಪರಿಚರೇಮ । ವಯಂ ರಯೀಣಾಂ ಧನಾನಾಂ ಪತಯಃ ಸ್ಯಾಮ । ಭವೇಮ ॥

॥ ಪ್ರತಿಪದಾರ್ಥ ॥

**ಇಂದೋ**—ಪ್ರವಾಹಾತ್ಮಕವಾದ । **ಸೋಮ**—ಎಲೈ ಸೋಮವೇ । **ತ್ವಂ**—ನೀನು । **ಪಿತೃಭಿಃ**—ಪಿತೃಗಳೊಡನೆ । **ಸಂವಿದಾನಃ**—ಕೂಡಿಕೊಂಡವನಾಗಿ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ಅನು ಆ ತತಂಥ**—ವಿಸ್ತೃತವಾಗುವಂತೆ ಮಾಡಿದ್ದೀಯೇ । **ತಸ್ಮೈ ತೇ**—ಅಂತಹ ನಿನ್ನನ್ನುದ್ದೇಶಿಸಿ । **ಹವಿಷಾ**—ಹವಿಸ್ಸಿನಿಂದ । **ವಿಧೇಮ**—ಉಪಚರಿಸುತ್ತೇವೆ । **ವಯಂ**—ನಾವು । **ರಯೀಣಾಂ**—ಧನಗಳಿಗೆ । **ಪತಯಃ**—ಒಡೆಯರಾಗಿ । **ಸ್ಯಾಮ**—ಆಗುವಂತಾಗಲಿ.

॥ ಭಾವಾರ್ಥ ॥

ಪ್ರವಾಹರೂಪವುಳ್ಳ ಎಲೈ ಸೋಮವೇ, ನೀನು ಪಿತೃಗಳೊಡನೆ ಕೂಡಿಕೊಂಡವನಾಗಿ ದ್ಯಾವಾಪೃಥಿವಿಗಳನ್ನು ವಿಸ್ತೃತವಾಗುವಂತೆ ಮಾಡಿದ್ದೀಯೆ. ಅಂತಹ ನಿನ್ನನ್ನುದ್ದೇಶಿಸಿ ಹವಿಸ್ಸಿನಿಂದ ಉಪಚರಿಸುತ್ತೇವೆ. ನಾವು ಧನಗಳಿಗೆ ಒಡೆಯರಾಗುವಂತಾಗಲಿ.

## English Translation.

Soma, you in conjunction with the fathers stretch out successively heaven and earth,—to you let us do worship with oblations, may we be lords of wealth.

॥ ವಿಶೇಷವಿಷಯಗಳು ॥

ಮಹಾಪಿತೃಯಜ್ಞವೆಂಬ ಇಷ್ಟಿಯಲ್ಲಿ **ಸೋಮಾಯ ಪಿತೃಮತೇ ಪುರೋಡಾಶಂ** ಎಂದು ಹೋಮಮಾಡುವಾಗ **ತ್ವಂ ಸೋಮ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—

**ತ್ವಂ ಸೋಮ ಪಿತೃಭಿಃ ಸಂವಿದಾನೋ ಬರ್ಹಿಷದಃ ಪಿತರ ಊತ್ಯರ್ವಾಕ್** ಎಂಬ ಸೂತ್ರದಿಂದ (ಆ. ೨-೯) ವಿವೃತವಾಗಿರುವುದು. ತೃತೀಯಸವನಕಾಲದಲ್ಲಿ ಸೋಮದೇವತೆಯನ್ನುದ್ದೇಶಿಸಿ ಮಾಡುವ ಚರುಹೋಮದಲ್ಲಿಯೂ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತ್ವಂ ಸೋಮ ಪಿತೃಭಿಃ ಸಂವಿದಾನ ಇತಿ ಸೌಮ್ಯಸ್ಯ** ಎಂಬ ಸೂತ್ರದಿಂದ (ಆ. ೫-೧೯) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ತ್ರಾತಾರೋ ದೇವಾ ಅಧಿ ವೋಚತಾ ನೋ ಮಾ ನೋ ನಿದ್ರಾ ಈಶತ
ಮೋತ ಜಲ್ಪಿಃ ।
ವಯಂ ಸೋಮಸ್ಯ ವಿಶ್ವಹ ಪ್ರಿಯಾಸಃ ಸುವೀರಾಸೋ ವಿದಥಮಾ
ವದೇಮ ॥ ೧೪ ॥

॥ ಪದಪಾಠಃ ॥

ತ್ರಾತಾರಃ । ದೇವಾಃ । ಅಧಿ । ವೋಚತ । ನಃ । ಮಾ । ನಃ । ನಿಃ ದ್ರಾ । ಈಶತ । ಮಾ । ಉತ । ಜಲ್ಪಿಃ ।
ವಯಂ । ಸೋಮಸ್ಯ । ವಿಶ್ವಹ । ಪ್ರಿಯಾಸಃ । ಸುಽವೀರಾಸಃ । ವಿದಥಂ । ಆ । ವದೇಮ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ತ್ರಾತಾರೋ ರಕ್ಷಿತಾರೋ ಹೇ ದೇವಾಃ ನೋಽಸ್ಮಾನಧಿ ವೋಚತ । ಅಧಿವಚನಂ ಕುರುತ । ಕಿಂಚ ನೋಽಸ್ಮಾನ್ನಿದ್ರಾಃ ಸ್ವಪ್ನಾ :ಮೇಶತ । ಈಶ್ವರಾ ಮಾ ಭೂವನ್ ಬಾಧಿತುಂ । ಉತಾಪಿ ಚ ಜಲ್ಪಿರ್ನಿಂದಕೋಽಸ್ಮಾನ್ಮಾ ನಿಂದತು । ವಯಂ ಸೋಮಸ್ಯ ಪ್ರಿಯಾಸಃ ಪ್ರಿಯಾಃ ಸ್ಯಾಮ ವಿಶ್ವಹ ಸರ್ವೇಷ್ವಪ್ಯಹಃಸು । ಸರ್ವದೇತ್ಯರ್ಥಃ । ಸುವೀರಾಸಃ ಶೋಭನಪುತ್ರಾಃ ಸಂತೋ ವಿದಥಂ ಸ್ತೋತ್ರಮಾ ವದೇಮ । ಅಭಿಮುಖ್ಯೇನ ವದೇಮ । ಅಥವಾ । ಸುಪುತ್ರಾ ವಿದಥಂ ಗೃಹಮಾ ವದೇಮ । ಆವದನಂ ಪುತ್ರಪೌತ್ರಾಣಾಂ ಧನೇನೋಪಲಂಭನಂ ॥

॥ ಪ್ರತಿಪದಾರ್ಥ ॥

**ತ್ರಾತಾರಃ**—ರಕ್ಷಕರಾದ । **ದೇವಾಃ**—ಎಲೈ ದೇವತೆಗಳೇ । **ನಃ**—ನಮಗೆ । **ಅಧಿ ವೋಚತ**—ಒಳ್ಳೆಯದಾಗಲೆಂದು ಹರಸಿರಿ । **ನಃ**—ನಮ್ಮ ಮೇಲೆ । **ನಿದ್ರಾಃ**—ದುಃಸ್ವಪ್ನಗಳು । **ಮಾ ಈಶತ**—ತಮ್ಮ ಪ್ರಭಾವಗಳನ್ನು ಬೀರದಿರಲಿ । **ಉತ**—ಮತ್ತು । **ಜಲ್ಪಿಃ**—ನಿಂದಕನು । **ಮಾ**—ನಮ್ಮನ್ನು ನಿಂದಿಸದಿರಲಿ । **ವಯಂ**—ನಾವು । **ವಿಶ್ವಹ**—ಸಕಲ ದಿನಗಳಲ್ಲಿಯೂ । **ಸೋಮಸ್ಯ**—ಸೋಮಕ್ಕೆ । **ಪ್ರಿಯಾಸಃ**—ಪ್ರೀತಿಪಾತ್ರರಾಗಿರುವಂತಾಗಲಿ । **ಸುವೀರಾಸಃ**—ಉತ್ತಮವಾದ ಪುತ್ರರೊಡಗೂಡಿ । **ವಿದಥಂ**—ಸ್ತೋತ್ರವನ್ನು । **ಆ ವದೇಮ**—ಪಠಿಸುವೆವು.

|| ಭಾವಾರ್ಥ ||

ರಕ್ಷಕರಾದ ಎಲೈ ದೇವತೆಗಳೇ, ನಮಗೆ ಒಳ್ಳೆಯದಾಗಲೆಂದು ಹರಸಿರಿ. ನಮ್ಮ ಮೇಲೆ ದುಃಸ್ವಪ್ನಗಳು ಅವುಗಳ ಪ್ರಭಾವವನ್ನು ಬೀರದಿರಲಿ. ನಿಂದಕನು ನಮ್ಮನ್ನು ನಿಂದಿಸದಿರಲಿ. ನಾವು ಸಕಲ ದಿನಗಳಲ್ಲಿಯೂ ಸೋಮಕ್ಕೆ ಪ್ರೀತಿಪಾತ್ರರಾಗಿರುವಂತಾಗಲಿ. ಉತ್ತಮವಾದ ಪುತ್ರರೊಡಗೂಡಿ ನಾವು ಸ್ತೋತ್ರವನ್ನು ಪಠಿಸುವೆವು

## English Translation.

Guardian gods, speak favourably to us; let no dreams nor the censurer **overpower** us; may we be ever dear to Soma; possessed of brave offspring, **may we** utter our hymn.

|| ಸಂಹಿತಾಪಾಠಃ ||

ತ್ವಂ ನಃ ಸೋಮ ವಿಶ್ವತೋ ವಯೋಧಾಸ್ತ್ವಂ ಸ್ವರ್ವಿದಾ ವಿಶಾ ನೃಚಕ್ಷಾಃ ।
ತ್ವ ನ ಇಂದ ಊತಿಭಿಃ ಸಜೋಷಾಃ ಪಾಹಿ ಪಶ್ಚಾತಾದುತ ವಾ
ಪುರಸ್ತಾತ್ ॥ ೧೫ ॥

॥ ಪದಪಾಠಃ ॥

ತ್ವಂ । ನಃ । ಸೋಮ । ವಿಶ್ವತಃ । ವಯಃಽಧಾಃ । ತ್ವಂ । ಸ್ವಃಽವಿತ್ । ಆ । ವಿಶ । ನೃಽಚಕ್ಷಾಃ ।
ತ್ವಂ । ನಃ । ಇಂದೋ ಇತಿ । ಊತಿಽಭಿಃ । ಸಽಜೋಷಾಃ । ಪಾಹಿ । ಪಶ್ಚಾತಾತ್ । ಉತ । ವಾ ।
ಪುರಸ್ತಾತ್ ॥ ೧೫ ॥

॥ ಸಾಯಣಭಾಷ್ಯಂ ॥

ತ್ವಂ ನಃ ಸೋಮ ವಿಶ್ವತ ಇತಿ ಸೌಮ್ಯೇ ಪಶೌ ಹವಿಷೋಽನುವಾಕ್ಯಾ । ಸೂತ್ರಿತಂ ಚ । ತ್ವಂ ನಃ ಸೋಮ ವಿಶ್ವತೋ ವಯೋಧಾ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ । ಆ ೩-೭ । ಇತಿ ॥

ಹೇ ಸೋಮ ತ್ವಂ ನೋಽಸ್ಮಾಕಂ ವಿಶ್ವತಃ ಸರ್ವಾಭ್ಯೋ ದಿಗ್ಭ್ಯೋ ವಯೋಧಾ ಅನ್ನದಾತಾ । ತಥಾ ತ್ವಂ ಸ್ವರ್ವಿತ್ ಸ್ವರ್ಗಲಂಭಕೋ ನೃಚಕ್ಷಾಃ ಸರ್ವಮನುಷ್ಯದ್ರಷ್ಟಾ ತ್ವಮಾ ವಿಶ । ಹೇ ಇಂದೋ ತ್ವಂ ಸಜೋಷಾಃ ಸಹ ಪ್ರೀಯಮಾಣಃ ಸನ್ನೂತಿಭಿಃ ಸಹ । ಅಥವೋತಯೋ ಗಂತಾರೋ ಮರುತಃ । ತೈಃ ಸಹಿತಃ ಸನ್ ಪಶ್ಚಾತಾತ್ ಪಶ್ಚಾದುತ ವಾ ಪುರಸ್ತಾಚ್ಚ ಪಾಹಿ ॥

|| ಪ್ರತಿಪದಾರ್ಥ ||

**ಸೋಮ**—ಎಲೈ ಸೋಮದೇವನೇ । **ತ್ವಂ**—ನೀನು । **ನಃ**—ನಮಗೆ । **ವಿಶ್ವತಃ**—ಸಕಲ ದಿಕ್ಕುಗಳಿಂದಲೂ । **ವಯೋಧಾಃ**—ಅನ್ನದಾತನಾಗಿರು । **ತ್ವಂ**—ನೀನು । **ಸ್ವರ್ವಿತ್**—ಸ್ವರ್ಗವೀಕ್ಷಕನಾಗಿದ್ದೀಯೆ ।

**ನೃಚಕ್ಷಾಃ**—ಮಾನವರ ವ್ಯವಹಾರವನ್ನು ವೀಕ್ಷಿಸುವವನಾಗಿದ್ದೀಯೆ | **ಆ ವಿಶ**—ನಮ್ಮಲ್ಲಿ ಪ್ರವೇಶಿಸು | **ಇಂದೋ**—ಎಲೈ ಸೋಮವೇ | **ತ್ವಂ**—ನೀನು | **ಸಜೋಷಾಃ**—ಪ್ರೀತಿಯಿಂದ ಕೂಡಿ | **ಊತಿಭಿಃ**—ರಕ್ಷಣೆಗಳೊಡನೆ | **ಪಶ್ಚಾತಾತ್**—ಹಿಂಭಾಗದಿಂದಲೂ | **ಉತ ವಾ**—ಅಲ್ಲದೇ | **ಪುರಸ್ತಾತ್**—ಮುಂಭಾಗದಿಂದಲೂ | **ಪಾಹಿ**—ನಮ್ಮನ್ನು ರಕ್ಷಿಸು.

|| ಭಾವಾರ್ಥ ||

ಎಲೈ ಸೋಮದೇವನೇ, ನೀನು ನಮಗೆ ಸಕಲ ದಿಕ್ಕುಗಳಲ್ಲಿಯೂ ಅನ್ನದಾತನಾಗಿರು. ನೀನು ಸ್ವರ್ಗವೀಕ್ಷಕನಾಗಿದ್ದೀಯೆ. ಮಾನವರ ವ್ಯವಹಾರವನ್ನು ವೀಕ್ಷಿಸುವವನಾಗಿದ್ದೀಯೆ. ನಮ್ಮಲ್ಲಿ ಪ್ರವೇಶಿಸು. ಎಲೈ ಸೋಮವೇ, ನೀನು ಪ್ರೀತಿಯಿಂದ ಕೂಡಿ ರಕ್ಷಣೆಗಳೊಡನೆ ಹಿಂಭಾಗದಿಂದಲೂ ಮತ್ತು ಮುಂಭಾಗದಿಂದಲೂ ನಮ್ಮನ್ನು ರಕ್ಷಿಸು.

## English Translation.

You, Soma, give us food from every side; you are the bestower of heaven; enter us, beholder of men; O Soma, rejoicing with your protecting powers, guard us from behind and before.

|| ವಿಶೇಷವಿಷಯಗಳು ||

**ತ್ವಂ ನಃ ಸೋಮ ವಿಶ್ವತಃ** ಎಂಬ ಈ ಋಕ್ಕನ್ನು ಸೋಮದೇವತಾಕವಾದ ಪಶುಯಾಗದಲ್ಲಿ ಹವಿಸ್ಸನ್ನು ಹೋಮಮಾಡುವಾಗ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ತ್ವಂ ನಃ ಸೋಮ ವಿಶ್ವತೋ ವಯೋಧಾ ಯಾ ತೇ ಧಾಮಾನಿ ದಿವಿ ಯಾ ಪೃಥಿವ್ಯಾಂ** ಎಂಬ ಸೂತ್ರದಿಂದ (ಆ. ೩-೭) ವಿವೃತವಾಗಿರುವುದು.



# ನಲವತ್ತೊಂಭತ್ತನೆಯ ಸೂಕ್ತವು

## (ವಾಲಖಿಲ್ಯಸೂಕ್ತ—೧)

## ಪೀಠಿಕೆ

॥ ಭಾಷ್ಯಂ ॥

**ಶ್ರೀ ಗಣೇಶಾಯ ನಮಃ । ಶ್ರುತಿಕಂಜಾರ್ಥಲಕ್ಷ್ಮೀಂ ಯೋ ವಿಕಾಸಯತಿ ಹೃದ್ಗತಂ (ತಾಂ) । ಸ ಹಾಯಾತ್ಸಚ್ಚಿದಾನಂದಃ ಸೂರ್ಯಮಂಡಲಗೋ ಹರಿಃ ॥ 'ಅಭಿ ಪ್ರ ವಃ' ಇತಿ ದಶರ್ಚಂ ಪ್ರಥಮಂ ಸೂಕ್ತಂ ಪ್ರಸ್ಕಣ್ವಸ್ಯಾರ್ಷಮೈಂದ್ರಂ । ಅನುಕ್ರಾಂತಂ ಚ--'ಅಭಿ ಪ್ರ ದಶ ಪ್ರಸ್ಕಣ್ವಃ ಪ್ರಾಗಾಥಂ ತತ್' ಇತಿ । ಅಯುಜಾಂ ಬೃಹತೀ ಛಂದಃ । ಯುಜಾಂ ಸತೋಬೃಹತೀ ಛಂದಃ । ವಿನಿಯೋಗಃ ಸೂತ್ರಾದವಗಂತವ್ಯಃ ॥**

ಋಗ್ವೇದಸಂಹಿತೆಯ ಎಂಟನೆಯ ಮಂಡಲದಲ್ಲಿ ೪೮ ಸೂಕ್ತಗಳಾದ ಮೇಲೆ ವಾಲಖಿಲ್ಯವೆಂಬ ಭಾಗವಿರುವುದು. ಇದರಲ್ಲಿ ಒಟ್ಟು ಹನ್ನೊಂದು ಸೂಕ್ತಗಳೂ ೮೦ ಋಕ್ಕುಗಳೂ ಇರುವವು. ಮೊದಲಿನ ಐದು ಸೂಕ್ತಗಳಿಗೆ ಇಂದ್ರನೇ ದೇವತೆಯು; ಆರನೆಯ ಸೂಕ್ತದಲ್ಲಿ ಇಂದ್ರ ಮತ್ತು ವಿಶ್ವೇದೇವತೆಗಳು ಸ್ತುತರಾಗಿದ್ದಾರೆ; ಏಳನೆಯ ಸೂಕ್ತದಲ್ಲಿ ಪ್ರಸ್ಕಣ್ವಋಷಿಯ ದಾನಸ್ತುತಿ ಇದೆ. ಎಂಟನೆಯ ಸೂಕ್ತದಲ್ಲಿ ಹಿಂದಿನ ಸೂಕ್ತದಂತೆ ಪ್ರಸ್ಕಣ್ವನ ದಾನಸ್ತುತಿಯೂ ಇರುವುದಲ್ಲದೆ ಅಗ್ನಿ ಮತ್ತು ಸೂರ್ಯರು (೫ನೇ ಋಕ್ಕಿನಲ್ಲಿ) ಸ್ತುತರಾಗಿದ್ದಾರೆ. ಒಂಭತ್ತನೇ ಸೂಕ್ತಕ್ಕೆ ಅಶ್ವಿನೀ ದೇವತೆಗಳು ದೇವತೆಯು; ಹತ್ತನೆಯ ಸೂಕ್ತಕ್ಕೆ ವಿಶ್ವೇದೇವತೆಗಳು ದೇವತೆಯು; ಹನ್ನೊಂದನೆಯ ಸೂಕ್ತಕ್ಕೆ ಇಂದ್ರಾವರುಣರು ದೇವತೆಯು. ಈ ಸೂಕ್ತಗಳಿಗೆ ಋಷಿಗಳೂ ಬೇರೆ ಬೇರೆ ಇದ್ದಾರೆ.

ವಾಲಖಿಲ್ಯಸೂಕ್ತಗಳಿಗೆ ಸಾಯಣರು ಭಾಷ್ಯವನ್ನು ಬರೆದಿಲ್ಲ. ಇದಕ್ಕೆ ಇತರ ಯಾವ ಭಾಷ್ಯವೂ ಇರುವಂತೆ ತೋರುವುದಿಲ್ಲ. ಅಥವಾ ಇದ್ದರೂ ಲಬ್ಧವಾಗಿಲ್ಲ Max-Muller ಮೊದಲಾದ ಪಾಶ್ಚಾತ್ಯಪಂಡಿತರೂ ಈ ಸೂಕ್ತಗಳ ವಿಷಯವಾಗಿ ಏನನ್ನೂ ಹೇಳಿರುವುದಿಲ್ಲ. ಖಿಲ ಶಬ್ದಕ್ಕೆ ಪರಿಶಿಷ್ಟ, ಶೇಷ ಎಂಬರ್ಥವಿರುವುದರಿಂದ ಈ ಸೂಕ್ತಗಳು ಪರಿಶಿಷ್ಟಮಂತ್ರಗಳೆಂದು ಹೇಳಬಹುದು. ಈ ಸೂಕ್ತಗಳ ಕೆಲವು ಮಂತ್ರಗಳು ತೈತ್ತಿರೀಯಸಂಹಿತೆ ಮೊದಲಾದ ಇತರ ವೇದಗಳಲ್ಲಿಯೂ ಇರುವುದರಿಂದ ಪರಶಾಖೆಯಲ್ಲಿರುವ ಮಂತ್ರಗಳನ್ನು ಪರಿಶಿಷ್ಟಮಂತ್ರವನ್ನಾಗಿ ಪರಿಗಣಿಸಬೇಕೆಂಬ ಉಕ್ತಿಯಂತೆ ಈ ಸೂಕ್ತಗಳು ಪರಿಶಿಷ್ಟಮಂತ್ರಗಳೇ ಆಗಿರಬೇಕು ಇವುಗಳ ಶೈಲಿಯಲ್ಲಿಯೂ ಸಹ ಇತರ ವೇದಮಂತ್ರಗಳಲ್ಲಿರುವ ಗಂಭೀರತೆಯೂ, ಶ್ರೇಷ್ಠತೆಯೂ, ಪ್ರಾಚೀನತೆಯೂ ಕಂಡುಬರುವುದಿಲ್ಲ. ಆದರೂ ಈ ಸೂಕ್ತಗಳನ್ನು ಋಗ್ವೇದಸಂಹಿತೆಯಲ್ಲಿ ಸೇರಿಸಿ ಅಧ್ಯಯನಮಾಡುವ ಪೂರ್ವಸಂಪ್ರದಾಯವು ಪರಂಪರಾನುಗತವಾಗಿ ಬಂದಿರುವುದಲ್ಲದೆ ಮಂತ್ರಗಳಿಗೆ ವಿಧ್ಯನುಸಾರವಾಗಿ ಸ್ವರಗಳೂ, ಪದಪಾಠವೂ ಇರುವುದು.

ಈ ಸೂಕ್ತಗಳಿಗೆ ಸಾಯಣಭಾಷ್ಯವಿರುವುದಿಲ್ಲವೆಂದು ಮೇಲೆಯೇ ಹೇಳಿದೇವೆ. ಆದರೆ ಪೂನಾನಗರದ ವೈದಿಕಸಂಶೋಧನಮಂಡಲದವರಿಂದ ಪ್ರಕಟವಾಗಿರುವ ಸಾಯಣಭಾಷ್ಯಸಹಿತವಾದ ಋಗ್ವೇದಸಂಹಿತೆಯಲ್ಲಿ 3ನೇ ಭಾಗದಲ್ಲಿ 779ನೇ ಪುಟದಲ್ಲಿ ಈ ಸೂಕ್ತಗಳ ವಿಷಯದಲ್ಲಿ ಒಂದು ಸೂಚನೆ ಇದೆ—

ವಾರಾಣಸೀಸ್ಥರಾಜಕೀಯಸಂಸ್ಕೃತಪಾಠಶಾಲಾಯಾಃ ಪ್ರಾಪ್ತೇ (ಜ್ಞ) ಸಂಜ್ಞಕಲಿಖಿತಪುಸ್ತಕೇ ವಾಲಖಿಲ್ಯಸೂಕ್ತಾನಾಂ ಭಾಷ್ಯಂ ಲಿಖಿತಮುಪಲಭ್ಯತೇ । ಪರಂ ತ್ವಿತರೇಷು ಸರ್ವೇಷ್ವಪಿ ಪುಸ್ತಕೇಷ್ವನುಪಲಂಭಾತ್ ವ್ಯಾಖ್ಯಾಶೈಲ್ಯಾ ವಿಭಿನ್ನತ್ವಾಚ್ಚ ನೈತತ್ಸಾಯಣಾಚಾರ್ಯಕೃತ-ಮಿತಿ ವ್ಯಕ್ತಂ ಪ್ರತೀಯತೇ । ತಥಾಪ್ಯೇತದ್ವಿದುಷಾಮುಪಯೋಗಾಯ ಸ್ಯಾದಿತಿ ಮತ್ವಾತ್ರ ದೀಯತೇ ।

ಏತಸ್ಮಿನ್ವಿಷಯೇಽಸ್ಮಾಭಿಃ ಪೃಷ್ಟಾ ಏತತ್ಪಾಠಶಾಲಾಧಿಕಾರಿಣಃ ಏವಂ ಲಿಖಂತಿ—ಏತದ್ಧಸ್ತ-ಲಿಖಿತಂ ಪಾಠಶಾಲಾಯಾಃ ಕೃತೇ ರೇವಾನಗರೇ ಕ್ರೀತಮಾಸೀತ್ । ತಸ್ಯ ಲೇಖನಂ ಪುಣ್ಯಪತ್ತನ ಏವಾಭೂದಿತಿ ಶ್ರೂಯತೇ । ಏತಲ್ಲಿಖಿತಪುಸ್ತಕಗತವಾಲಖಿಲ್ಯಸೂಕ್ತಭಾಷ್ಯಂ ಕೇನ ವಿರಚಿತಮಿತಿ ನಿಶ್ಚಿತಂ ವಕ್ತುಮಶಕ್ಯಂ । ನ ಕೇನಾಪಿ ವಾರಾಣಸೀಸ್ಥೇನ ಪಂಡಿತೇನೈತ-ದ್ವಿರಚಿತಮಿತಿ ನಿಶ್ಚಿತಮೇವ ॥

ಇಲ್ಲಿ ಕೊಟ್ಟಿರುವ ವಾಲಖಿಲ್ಯಸೂಕ್ತಗಳ ಭಾಷ್ಯವು ಕಾಶಿಯಲ್ಲಿರುವ ಗೌರ್ನಮೆಂಟ್ ಸಂಸ್ಕೃತ ಪಾಠಶಾಲೆಯಲ್ಲಿಗುವ (ಜ್ಞ) ಎಂಬ ನಂಬರಿನ ಹಸ್ತಲಿಖಿತ (ಕೈಬರಹದ) ಪ್ರತಿಯಿಂದ ಗೃಹೀತವಾಗಿರುವುದು. ಇತರ ಯಾವ ಭಾಷ್ಯಪುಸ್ತಕಗಳಲ್ಲಿಯೂ ವಾಲಖಿಲ್ಯಸೂಕ್ತಗಳ ಭಾಷ್ಯವು ದೊರೆಯುವುದಿಲ್ಲವಾದ್ದರಿಂದಲೂ, ಈ ಭಾಷ್ಯದ ಶೈಲಿಯು ಸಾಯಣಭಾಷ್ಯಶೈಲಿಯಂತಿರುವುದಿಲ್ಲವಾದ್ದರಿಂದಲೂ, ಈ ಭಾಷ್ಯವು ಸಾಯಣಾಚಾರ್ಯವಿರಚಿತವಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಆದರೂ ವೇದಾರ್ಥವನ್ನು ಅಭ್ಯಾಸಮಾಡುವವರಿಗೆ ಇದು ಉಪಯೋಗವಾಗಬಹುದೆಂಬ ಭರವಸೆಯಿಂದ ಇದನ್ನು ಇಲ್ಲಿ ಪ್ರಕಟಿಸಲಾಗಿದೆ.

ಈ ಪುಸ್ತಕದ ವಿಷಯದಲ್ಲಿ ನಾವು ಆ ಪಾಠಶಾಲೆಯ ಅಧಿಕಾರಿಗಳಿಗೆ ಬರೆದು ಕೇಳಲಾಗಿ ಅವರು— ಈ ಕೈಬರಹದ ಪುಸ್ತಕವು ಪಾಠಶಾಲೆಯ ಪುಸ್ತಕಾಗಾರಕ್ಕಾಗಿ ಪುಸ್ತಕಗಳನ್ನು ಸಂಗ್ರಹಿಸುವಾಗ ಪ್ರಸಕ್ತಪ್ರತಿಯನ್ನು ರೇವಾನಗರದಲ್ಲಿ ಕೊಂಡದ್ದಾಗಿಯೂ ಅದನ್ನು ಪೂನಾನಗರದಲ್ಲಿ ಬರೆಯಲಾಗಿದೆಯೆಂದೂ ತಿಳಿಯಬಂದಿದೆ. ಆದರೆ ಈ ವಾಲಖಿಲ್ಯಸೂಕ್ತಗಳ ಭಾಷ್ಯವು ಯಾರಿಂದ ವಿರಚಿತವಾಯಿತೆಂಬ ವಿಚಾರದಲ್ಲಿ ಏನೊಂದು ಸಂಗತಿಯೂ ತಿಳಿಯುವುದಿಲ್ಲ. ಆದರೆ ಕಾಶಿಯಲ್ಲಿರುವ ಯಾವ ಪಂಡಿತರಿಂದಲೂ ವಿರಚಿತವಾದುದಲ್ಲವೆಂಬುದನ್ನು ಮಾತ್ರ ನಿಶ್ಚಯವಾಗಿಯೂ ಹೇಳಬಹುದು ಎಂದು ಪ್ರತ್ಯುತ್ತರ ಬರೆದಿದಾರೆ.

॥ ಪ್ರಥಮಸೂಕ್ತದ ಭಾಷ್ಯವು ॥

ಶ್ರೀ ಗಣೇಶಾಯ ನಮಃ । ಶ್ರುತಿಕಂಜಾರ್ಥಲಕ್ಷ್ಮೀಂ ಯೋ ವಿಕಾಸಯತಿ ಹೃದ್ಗತಾಂ । ಸ ಪಾಯಾತ್ಸಚ್ಚಿದಾನಂದಃ ಸೂರ್ಯಮಂಡಲಗೋ ಹರಿಃ ॥

ಅನುವಾದವು— **ಅಭಿ ಪ್ರ ವಃ** ಎಂಬ ಈ ಸೂಕ್ತವು ವಾಲಖಿಲ್ಯಸೂಕ್ತಗಳಲ್ಲಿ ಮೊದಲನೆಯದು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಪುತ್ರನಾದ ಪ್ರಸ್ಕಣ್ವನೆಂಬುವನು ಋಷಿಯು; ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ— **ಅಭಿ ಪ್ರ ದಶ ಪ್ರಸ್ಕಣ್ವಃ ಪ್ರಾಗಾಥಂ ತತ್** ಎಂದು ಹೇಳಿರುವುದು. ಈ ಸೂಕ್ತದ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು; ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ವಿನಿಯೋಗವನ್ನು ಸೂತ್ರದಿಂದ ತಿಳಿದುಕೊಳ್ಳಬೇಕು

## ಸೂಕ್ತ—೪೯

(ವಾಲಖಿಲ್ಯಸೂಕ್ತ—೧)

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೪೯ ॥
ಅಷ್ಟಕ—೬ ॥ ಅಧ್ಯಾಯ—೪ ॥ ವರ್ಗ—೧೪, ೧೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ— ಪ್ರಸ್ಕಣ್ವಃ ಕಾಣ್ವಃ ॥
॥ ದೇವತಾ— ಇಂದ್ರಃ ॥
॥ ಛಂದಃ— ಪ್ರಾಗಾಥಂ (ಅಯುಜಃ ಬೃಹತ್ಯಃ ಯುಜಃ ಸತೋಬೃಹತ್ಯಃ) ॥

॥ ಸಂಹಿತಾಪಾಠಃ ॥

ಅಭಿ ಪ್ರ ವಃ ಸುರಾಧಸಮಿಂದ್ರಮರ್ಚ ಯಥಾ ವಿದೇ ।
ಯೋ ಜರಿತೃಭ್ಯೋ ಮಘವಾ ಪುರೂವಸುಃ ಸಹಸ್ರೇಣೇವ ಶಿಕ್ಷತಿ ॥ ೧ ॥

॥ ಪದಪಾಠಃ ॥

ಅಭಿ । ಪ್ರ । ವಃ । ಸುಽರಾಧಸಂ । ಇಂದ್ರಂ । ಅರ್ಚ । ಯಥಾ । ವಿದೇ ।
ಯಃ । ಜರಿತೃಽಭ್ಯಃ । ಮಘಽವಾ । ಪುರುಽವಸುಃ । ಸಹಸ್ರೇಣಽಇವ । ಶಿಕ್ಷತಿ ॥ ೧ ॥

॥ ಭಾಷ್ಯಂ ॥

ಋಷಿರಾತ್ಮಾನಂ ಬ್ರೂತೇ । ಹೇ ಪ್ರಸ್ಕಣ್ವ ವಃ ಯುಷ್ಮಾಕಂ । ಬಹುವಚನಂ ಪುತ್ರಪೌತ್ರಾಭಿಪ್ರಾಯೇಣ । ಯುಷ್ಮತ್ಸ್ವಾಮಿಭೂತಮಿಂದ್ರಮಭಿಲಕ್ಷ್ಯ ಪ್ರಾರ್ಚ ಪ್ರಕರ್ಷೇಣ ಪೂಜಯ । ತತ್ರ ದೃಷ್ಟಾಂತಃ । ಯಥಾ ವಿದೇ ವಿದ್ವಾಂಸಂ ಸ್ವಗುರುಂ ಪೂಜಯಸಿ ತದ್ವತ್ । ಕೀದೃಶಂ । ಸುರಾಧಸಂ । ಶೋಭನಂ ರಾಧೋ ಧನಂ ಯಸ್ಯ ತಂ । ಕೋಽಸಾವಿಂದ್ರ ಇತ್ಯುಚ್ಯತೇ । ಯ ಇಂದ್ರಃ ಮಘವಾ ಧನವಾನ್ ಪುರೂವಸುಃ ಬಹೂನಾಂ ವಾಸಯಿತಾ ಜರಿತೃಭ್ಯಃ ಸ್ತೋತೃಭ್ಯಃ ಸಹಸ್ರೇಣೇವ ಅಪರಿಮಿತಮೇವ ಶಿಕ್ಷತಿ ದದಾತಿ । ಧನಾದಿಕಮಿತಿ ಶೇಷಃ । ಅತ್ರ ಯಃಶಬ್ದೋಽವಧಾರಣಾರ್ಥಃ । ಸಹಸ್ರೇಣೇವ (? ಇವಶಬ್ದೋಽವಧಾರಣಾರ್ಥಃ । ಸಹಸ್ರೇಣೈವ)

॥ ಪ್ರತಿಪದಾರ್ಥ ॥

**ಮಘವಾ**—ಧನವಂತನೂ । **ಪುರೂವಸುಃ**—ಅನೇಕರಿಗೆ ವಸತಿದಾಯಕನೂ ಆದ । **ಯಃ**—ಯಾವ ಇಂದ್ರನು । **ಜರಿತೃಭ್ಯಃ**—ತನ್ನ ಸ್ತೋತೃಗಳಿಗೆ । **ಸಹಸ್ರೇಣೇವ**—ಸಹಸ್ರಸಂಖ್ಯಾಕವಾಗಿಯೇ । **ಶಿಕ್ಷತಿ**—ದಾನಮಾಡುವನೋ ಅಂತಹ । **ಸುರಾಧಸಂ**—ಉತ್ತಮವಾದ ಸಂಪತ್ತುಳ್ಳವನೂ । **ವಃ**—ನಿಮ್ಮ ಬಂಧುವೂ ಆದ । **ಇಂದ್ರಂ**—ಇಂದ್ರನನ್ನು । **ಯಥಾ ವಿದೇ**—ವಿದ್ಯಾವಂತನನ್ನು ಪೂಜಿಸುವಂತೆ । **ಅಭಿ ಪ್ರಾರ್ಚ**—ಎದುರುಗೊಂಡು ಪೂಜಿಸು.

॥ ಭಾವಾರ್ಥ ॥

ಧನವಂತನೂ ಅನೇಕರಿಗೆ ವಸತಿದಾಯಕನೂ ಆದ ಯಾರು ತನ್ನ ಸ್ತೋತೃಗಳಿಗೆ ಸಹಸ್ರಸಂಖ್ಯಾಕವಾಗಿಯೇ ದಾನಮಾಡುವನೋ ಅಂತಹ ಉತ್ತಮವಾದ ಸಂಪತ್ತುಳ್ಳವನೂ ನಿಮ್ಮ ಬಂಧುವೂ ಆದ ಇಂದ್ರನನ್ನು ವಿದ್ಯಾವಂತನಾದ ಗುರುವನ್ನು ಪೂಜಿಸುವಂತೆ ಎದುರುಗೊಂಡು ಪೂಜಿಸು.

English Translation.

That I may attain wealth I invoke Indra, Lord of precious wealth and sing his praise, Maghavan, Lord of abundance he gives to his worshippers thousands and thousands.

॥ ಸಂಹಿತಾಪಾಠಃ ॥

ಶತಾನೀಕೇವ ಪ್ರ ಜಿಗಾತಿ ಧೃಷ್ಣುಯಾ ಹಂತಿ ವೃತ್ರಾಣಿ ದಾಶುಷೇ ।
ಗಿರೇರಿವ ಪ್ರ ರಸಾ ಅಸ್ಯ ಪಿನ್ವಿರೇ ದತ್ರಾಣಿ ಪುರುಭೋಜಸಃ ॥ ೨ ॥

॥ ಪದಪಾಠಃ ॥

ಶತಾನೀಕಾಽಇವ । ಪ್ರ । ಜಿಗಾತಿ । ಧೃಷ್ಣುಽಯಾ । ಹಂತಿ । ವೃತ್ರಾಣಿ । ದಾಶುಷೇ ।
ಗಿರೇಃಽಇವ । ಪ್ರ । ರಸಾಃ । ಅಸ್ಯ । ಪಿನ್ವಿರೇ । ದತ್ರಾಣಿ । ಪುರುಽಭೋಜಸಃ ॥ ೨ ॥

॥ ಭಾಷ್ಯಂ ॥

ಧೃಷ್ಣುಯಾ ಶತ್ರುಧರ್ಷಣಶೀಲ ಇಂದ್ರಃ ಶತಾನೀಕೇವ ಅಪರಿಮಿತಾನ್ಯೇವ ರಿಪುಸೈನ್ಯಾನಿ ಪ್ರ ಜಿಗಾತಿ ಪ್ರಕರ್ಷೇಣ ಗಚ್ಛತಿ । ಸ್ವವಶೀಕರೋತಿ । ಕಿಂಚ ಯ ಇಂದ್ರಃ ದಾಶುಷೇ ಹವಿರ್ದತ್ತವತೋ ಯಜಮಾನಸ್ಯ ವೃತ್ರಾಣಿ ಪಾಪಾನಿ ಶತ್ರೂನ್ ವಾ ಹಂತಿ ನಾಶಯತಿ । ತಸ್ಯಾಸ್ಯ ಪುರುಭೋಜಸಃ ಬಹುಪಾಲಕಸ್ಯೇಂದ್ರಸ್ಯ ದತ್ರಾಣಿ ಹಿರಣ್ಯಾದೀನಿ ಧನಾನಿ । ದತ್ರಮತ್ರ ಹಿರಣ್ಯಂ ಮರುತ್ ದತ್ರಂ ಇತಿ ಹಿರಣ್ಯನಾಮಸು ಪಾಠಾತ್ । ಪ್ರ ಪಿನ್ವಿರೇ ಪ್ರಕರ್ಷೇಣ ಪ್ರೀಣಯಂತಿ ತರ್ಪಯಂತಿ ಜಗತ್ । ಅತ್ರ ದೃಷ್ಟಾಂತಃ । ಗಿರೇರಿವ ಪರ್ವತಸ್ಯ ಮೇಘಸ್ಯ ವಾ ಸಂಬಂಧಿನೋ ಯಥಾ ರಸಾಃ ಜಲಾನಿ ಜಗತ್ ಪ್ರೀಣಯಂತಿ ತದ್ವತ್ ॥

॥ ಪ್ರತಿಪದಾರ್ಥ ॥

**ಧೃಷ್ಣುಯಾ**—ಶತ್ರುಧರ್ಷಕನಾದ ಇಂದ್ರನು । **ಶತಾನೀಕಾ ಇವ**—ಶತಸಂಖ್ಯಾಕವಾದ ಸೈನ್ಯಸಮೂಹದ ನಾಯಕನಂತೆ । **ಪ್ರ ಜಿಗಾತಿ**—ವೈಭವದಿಂದ ಸಂಚರಿಸುತ್ತಾನೆ । **ದಾಶುಷೇ**—ಯಜಮಾನನ ಹಿತಾರ್ಥವಾಗಿ ।

**ವೃತ್ರಾಣಿ**—ಪಾಪಕರರಾದ ಶತ್ರುಗಳನ್ನು | **ಹಂತಿ**—ನಾಶಮಾಡುತ್ತಾನೆ | **ರಸಾಃ**—ಉದಕಗಳು | **ಗಿರೇಃ ಇವ**—ಪರ್ವತದಿಂದ ಉಕ್ಕಿಬಂದು ಪ್ರವಹಿಸುವಂತೆ | **ಪುರುಭೋಜಸಃ**—ಅನೇಕರಿಗೆ ಪಾಲಕನಾದ | **ಅಸ್ಯ**—ಈ ಇಂದ್ರನಿಂದ | **ದತ್ರಾಣಿ**—ಕೊಡಲ್ಪಟ್ಟ ಸಂಪತ್ತುಗಳು | **ಪ್ರ ಪಿನ್ವಿರೇ**—ಪ್ರವಹಿಸಿ ಬಂದು ಜಗತ್ತನ್ನು ತೃಪ್ತಿಪಡಿಸುತ್ತವೆ.

॥ ಭಾವಾರ್ಥ ॥

ಶತ್ರುಧರ್ಷಕನಾದ ಇಂದ್ರನು ಶತಸಂಖ್ಯಾಕವಾದ ಸೈನ್ಯಸಮೂಹದ ನಾಯಕನಂತೆ ವೈಭವದಿಂದ ಸಂಚರಿಸುತ್ತಾನೆ. ಯಜಮಾನನ ಹಿತಾರ್ಥವಾಗಿ ಪಾಪಕರರಾದ ಶತ್ರುಗಳನ್ನು ನಾಶಮಾಡುತ್ತಾನೆ. ಪರ್ವತದಿಂದ ಉಕ್ಕಿಬಂದ ಉದಕಪ್ರವಾಹಗಳು ಜಗತ್ತನ್ನು ತೃಪ್ತಿಪಡಿಸುವಂತೆ, ಇಂದ್ರನಿಂದ ದತ್ತವಾದ ಸಂಪತ್ತುಗಳು ಪ್ರವಾಹರೂಪದಲ್ಲಿ ಬಂದು ಜಗತ್ತಿಗೆ ತೃಪ್ತಿಯನ್ನು ಉಂಟುಮಾಡುತ್ತವೆ.

## English Translation.

He is walking magistically as if Lord of hundred forces, for the sacrificers he is killing Vritra, protector of many. Gifts proceeds from him as streams spring out of a mountain.

॥ ಸಂಹಿತಾಪಾಠಃ ॥

ಆ ತ್ವಾ ಸುತಾಸ ಇಂದವೋ ಮದಾ ಯ ಇಂದ್ರ ಗಿರ್ವಣಃ ।
ಆಪೋ ನ ವಜ್ರಿನ್ನನ್ವೋಕ್ಯಂ೧ ಸರಃ ಪೃಣಂತಿ ಶೂರ ರಾಧಸೇ ॥ ೩ ॥

॥ ಪದಪಾಠಃ ॥

ಆ । ತ್ವಾ । ಸುತಾಸಃ । ಇಂದವಃ । ಮದಾಃ । ಯೇ । ಇಂದ್ರ । ಗಿರ್ವಣಃ ।
ಆಪಃ । ನ । ವಜ್ರಿನ್ । ಅನು । ಓಕ್ಯಂ । ಸರಃ । ಪೃಣಂತಿ । ಶೂರ । ರಾಧಸೇ ॥ ೩ ॥

॥ ಭಾಷ್ಯಂ ॥

ಹೇ ಗಿರ್ವಣಃ ಗೀರ್ಭಿರ್ವನನೀಯೇಂದ್ರ ಮದಾಃ ಹರ್ಷಕರಾಃ ಯೇ ಇಂದವಃ **ಸೋಮಾಃ ಸುತಾಸಃ ಅಭಿಷುತಾಃ ಸಂತಿ ತೇ ಹೇ ವಜ್ರಿನ್ ವಜ್ರೋಪೇತ ಹೇ ಶೂರ ಶೌರ್ಯಯುಕ್ತೇಂದ್ರ ಓಕ್ಯಂ ಸಮವಯಿತುಮರ್ಹಂ ( ? ಸಮವೇತುಮರ್ಹಂ) ತ್ವಾ ತ್ವಾಮಾಪೃಣಂತಿ ಸರ್ವತಃ ಪೂರಯಂತಿ । ಸ್ವರಸಪ್ರದಾನೇನ ತ್ವಾಂ ತರ್ಪಯಂತೀತ್ಯರ್ಥಃ । ಕಥಂ । ಅಪೋ ನ ಸರಃ । ತಾ ಯಥಾ ಮಹಾಜಲಾಶಯಂ ಪೂರಯಂತಿ ತದ್ವತ್ । ಕಿಮರ್ಥಂ । ರಾಧಸೇ ಯಜಮಾನಸ್ಯ ಧನಲಾಭಾಯ ॥**

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯೂ । **ಗಿರ್ವಣಃ**—ಸ್ತುತಿಗಳಿಂದ ಪೂಜಿತನೂ । **ವಜ್ರಿನ್**—ವಜ್ರಾಯುಧ ಧಾರಿಯೂ ಆದ । **ಇಂದ್ರ**—ಎಲೈ ಇಂದ್ರನೇ । **ಅಪಃ**—ಉದಕಗಳು । **ಓಕ್ಯಂ**—ತಮ್ಮ ಗಮ್ಯಪ್ರದೇಶವಾದ। **ಸರಃ ಅನು ನ**—ಸರಸ್ಸಿಗೆ ಹೋಗಿ ತುಂಬಿಕೊಳ್ಳುವಂತೆ । **ಮದಾಃ**—ಮದಕರಗಳಾದ । **ಯೇ ಇಂದವಃ**—ಯಾವ ಸೋಮರಸಗಳು । **ಸುತಾಸಃ**—ಹಿಂಡಲ್ಪಟ್ಟವೆಯೋ ಅಂತಹ ಸೋಮರಸಗಳು । **ರಾಧಸೇ**—ಯಜಮಾನನಿಗೆ ಧನಲಾಭಕ್ಕಾಗಿ । **ತ್ವಾ**—ನಿನ್ನನ್ನು ಸಮೀಪಿಸಿ । **ಆ ಪೃಣಂತಿ**—ನಿನ್ನ ಉದರದಲ್ಲಿ ತುಂಬಿಕೊಳ್ಳುತ್ತವೆ.

॥ ಭಾವಾರ್ಥ ॥

ಪರಾಕ್ರಮಿಯೂ, ಸ್ತುತಿಗಳಿಂದ ಪೂಜಿತನೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, ಉದಕಗಳು ತಮ್ಮ ಗಮ್ಯಪ್ರದೇಶವಾದ ಸರಸ್ಸಿಗೆ ಹೋಗಿ ತುಂಬಿಕೊಳ್ಳುವಂತೆ, ಮದಕರಗಳಾದ ಯಾವ ಸೋಮರಸಗಳು ಹಿಂಡಲ್ಪಟ್ಟವೆಯೋ ಅಂತಹ ಸೋಮರಸಗಳು ಯಜಮಾನನಿಗೆ ಧನಲಾಭಕ್ಕಾಗಿ ನಿನ್ನ ಉದರವನ್ನು ತುಂಬಿಕೊಂಡು ನಿನಗೆ ಹರ್ಷಕಾರಕವಾಗಲಿ.

## English Translation.

Worshipable Indra, the exhilarating Soma is being effused for the hero, wielder of thunder-bolt; may abundance go to you as water fills its dwelling, the Lake.

॥ ಸಂಹಿತಾಪಾಠಃ ॥

ಅನೇಹಸಂ ಪ್ರತರಣಂ ವಿವಕ್ಷಣಂ ಮಧ್ವಃ ಸ್ವಾದಿಷ್ಠಮೀಂ ಪಿಬ ।
ಆ ಯಥಾ ಮಂದಸಾನಃ ಕಿರಾಸಿ ನಃ ಪ್ರ ಕ್ಷುದ್ರೇವ ತ್ಮನಾ ಧೃಷತ್ ॥ ೪ ॥

॥ ಪದಪಾಠಃ ॥

ಅನೇಹಸಂ । ಪ್ರಽತರಣಂ । ವಿವಕ್ಷಣಂ । ಮಧ್ವಃ । ಸ್ವಾದಿಷ್ಠಂ । ಈಂ । ಪಿಬ ।
ಆ । ಯಥಾ । ಮಂದಸಾನಃ । ಕಿರಾಸಿ । ನಃ । ಪ್ರ । ಕ್ಷುದ್ರಾಽಇವ । ತ್ಮನಾ । ಧೃಷತ್ ॥ ೪ ॥

॥ ಭಾಷ್ಯಂ ॥

ಹೇ ಇಂದ್ರ ಅನೇಹಸಂ ಯಥಾಕಾಲಂ ಈಂ ಏನಂ ಸೋಮಂ ಪಿಬ । ಕೀದೃಶಂ । ಪ್ರತರಣಂ ಪ್ರವರ್ಧನಂ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ । ವಿವಕ್ಷಣಂ ಅತಿಶಯೇನ ಸ್ತುತ್ಯಂ ಮಧ್ವಃ ಮಧುನಃ ಸಕಾಶಾದಪಿ ಸ್ವಾದಿಷ್ಠಂ ಸ್ವಾದುತಮಂ । ಕಮೇತಂ । ಯಸ್ಯ ಪಾನೇನ ಮಂದಸಾನಃ ಹವೀಂಷಿ ಸಂಭಜಮಾನಸ್ತ್ವಂ ನೋಽಸ್ಮಭ್ಯಂ ಯಜಮಾನೇಭ್ಯಃ ಯಥಾ ಯಥಾವತ್ ಫಲಮಾಕಿರಾಸಿ ಕಾರ್ತ್ಸ್ನ್ಯೇನ

**ವಿಕ್ಷಿಪಸಿ । ದದಾಸೀತ್ಯರ್ಥಃ । ಕೇಭ್ಯ ಇವ । ಧೃಷತ್ ಶತ್ರುಧರ್ಷಕಸ್ತ್ವಂ ತ್ಮನಾ ಆತ್ಮನಾ ಸ್ವಯಮೇವ ಕ್ಷುದ್ರೇವ ದೀನೇಭ್ಯ ಇವ ತೇಭ್ಯೋ ಯಥಾ ಪ್ರ ದದಾಸಿ ತದ್ವತ್ । ಉಪಸರ್ಗವಶಾದ್ಯೋಗ್ಯ-ಕ್ರಿಯಾಧ್ಯಾಹಾರಃ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಧೃಷತ್**—ಶತ್ರುಧರ್ಷಕನಾದ ನೀನು । **ತ್ಮನಾ**—ಸ್ವಪ್ರೇರಣೆಯಿಂದಲೇ । **ಕ್ಷುದ್ರಾ ಇವ ಪ್ರ**—ದೀನದರಿದ್ರರಿಗೆ ಉದಾರವಾಗಿ ದಾನಮಾಡುವಂತೆ । **ಯಥಾ**—ಯಾವ ರೀತಿ । **ಮಂದಸಾನಃ**—ತೃಪ್ತನಾದ ನೀನು । **ನಃ**—ನಮಗೂ । **ಆ ಕಿರಾಸಿ**—ಯಥೇಚ್ಛವಾಗಿ ಕೊಡುವೆಯೋ ಹಾಗೆ । **ಅನೇಹಸಂ**—ದೋಷರಹಿತವಾದುದೂ । **ಪ್ರತರಣಂ**—ವೃದ್ಧಿಕಾರಕವಾದುದೂ । **ವಿವಕ್ಷಣಂ**—ಅತ್ಯಂತ ಪ್ರಶಂಸನೀಯವಾದುದೂ । **ಮಧ್ವಃ**—ಮಧುವಿಗಿಂತಲೂ । **ಸ್ವಾದಿಷ್ಠಂ**—ಅತ್ಯಂತ ರುಚಿಕರವಾದುದೂ ಆದ । **ಈಂ**—ಈ ಸೋಮರಸವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಶತ್ರುಧರ್ಷಕನಾದ ನೀನು, ಸ್ವಪ್ರೇರಣೆಯಿಂದಲೇ ದೀನದರಿದ್ರರಿಗೆ ಉದಾರವಾಗಿ ದಾನಮಾಡುವಂತೆ, ಯಾವ ರೀತಿ ತೃಪ್ತನಾದ ನೀನು ನಮಗೂ ಯಥೇಚ್ಛವಾಗಿ ಕೊಡುವೆಯೋ ಹಾಗೆ ಮಾಡುವ ದೋಷರಹಿತವಾದುದೂ, ಮಧುವಿಗಿಂತಲೂ ಅತ್ಯಂತ ರುಚಿಕರವಾದುದೂ ಆದ ಈ ಸೋಮರಸವನ್ನು ಪಾನಮಾಡು.

## English Translation.

Drink the sweet Soma, Sinless, salvation-giving and leader to heaven; when you are exhilarated you become proud and like kshudra give us desired wealth.

॥ ಸಂಹಿತಾಪಾಠಃ ॥

ಆ ನಃ ಸ್ತೋಮಮುಪ ದ್ರವದ್ಧಿಯಾನೋ ಅಶ್ವೋ ನ ಸೋತೃಭಿಃ ।
ಯಂ ತೇ ಸ್ವಧಾವನ್ತ್ಸ್ವದಯಂತಿ ಧೇನವ ಇಂದ್ರ ಕಣ್ವೇಷು ರಾತಯಃ ॥

॥ ಪದಪಾಠಃ ॥

**ಆ । ನಃ । ಸ್ತೋಮಂ । ಉಪ । ದ್ರವತ್ । ಹಿಯಾನಃ । ಅಶ್ವಃ । ನ । ಸೋತೃಽಭಿಃ ।**

**ಯಂ । ತೇ । ಸ್ವಧಾಽವನ್ । ಸ್ವದಯಂತಿ । ಧೇನವಃ । ಇಂದ್ರ । ಕಣ್ವೇಷು । ರಾತಯಃ ॥ ೫ ॥**

॥ ಭಾಷ್ಯಂ ॥

**ಹೇ ಇಂದ್ರ ಸ ಭವಾನ್ ನೋಽಸ್ಮದೀಯೈಃ ಸೋತೃಭಿಃ ಸೋಮಾಭಿಷವಕರ್ತೃಭಿರಧ್ವರ್ಯ್ವಾ-ದಿಭಿರ್ಋತ್ವಿಗ್ಭಿಃ ಕೃತಂ ಸ್ತೋತ್ರವಿಶೇಷಂ ಆ ಅಭಿಮುಖ್ಯೇನ ಉಪ ದ್ರವತ್ ಉಪಗಚ್ಛತು ಸಮೀಪಂ**

ಪ್ರಾಪ್ನೋತು । ಕ ಇವ । ಹಿಯಾನಃ ಪ್ರೇರ್ಯಮಾಣಃ ಅಶ್ವೋ ನ ಅಶ್ವ ಇವ । ಸ ಯಥಾ ಅಭಿಲಷಿತಂ ದೇಶಂ ಪ್ರಾಪ್ನೋತಿ ತದ್ವತ್ । ಹೇ ಸ್ವಧಾವನ್ ಅನ್ನವನ್ನಿಂದ್ರ ತೇ ತವ ಸ್ವಭೂತಾನಿ ಧೇನವಃ ತರ್ಪಕಾಣಿ ಕಣ್ವೇಷು ಅಸ್ಮಾಸು ವರ್ತಮಾನಾನಿ ರಾತಯಃ ಹವಿರ್ದಾನಾನಿ ಯಂ ತ್ವಾಂ ಸ್ವದಯಂತಿ ಸ್ವಾದಯಂತಿ । ತ್ವದುದರೇ ಪ್ರವಿಶ್ಯ ತ್ವಾಂ ತರ್ಪಯಂತೀತ್ಯರ್ಥಃ । ಸ ಭವಾನ್ ಉಪ ದ್ರವತ್ ಇತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಸ್ವಧಾವನ್—ಅನ್ನವಂತನಾದ । ಇಂದ್ರ—ಎಲೈ ಇಂದ್ರನೇ । ತೇ—ನಿನಗೆ ಸೇರಿದ । ಕಣ್ವೇಷು—ಕಣ್ವವಂಶೀಯರಾದ ನಮ್ಮಲ್ಲಿರುವ । ಧೇನವಃ—ಕ್ಷೀರಗಳನ್ನು ಕೊಡುವ ಧೇನುಗಳೂ । ರಾತಯಃ—ನಮ್ಮಿಂದ ದತ್ತವಾದ ಹವಿರಾದಿಗಳೂ । ಯಂ—ಯಾವ ನಿನ್ನನ್ನು । ಸ್ವದಯಂತಿ—ತೃಪ್ತಿಪಡಿಸುವುವೋ ಅಂತಹ ನೀನು । ಹಿಯಾನಃ—ವೇಗವಾಗಿ ಓಡುತ್ತಿರುವ । ಅಶ್ವಃ ನ—ಅಶ್ವದಂತೆ । ಸ್ತೋತೃಭಿಃ—ಸ್ತುತಿಕರ್ತರಿಂದ ನಿರ್ಮಿತವಾದ । ನಃ ಸ್ತೋಮಂ—ನಮ್ಮ ಸ್ತುತಿಗಳಿಗಭಿಮುಖವಾಗಿ । ಉಪ ಆ ದ್ರವತ್—ಓಡಿ ಬಾ.

॥ ಭಾವಾರ್ಥ ॥

ಅನ್ನವಂತನಾದ ಎಲೈ ಇಂದ್ರನೇ, ನಿನಗೆ ಸಂಬಂಧಿಸಿದ ಕಣ್ವವಂಶೀಯರಾದ ನಮ್ಮಲ್ಲಿರುವ ಕ್ಷೀರಗಳನ್ನು ಕೊಡುವ ಧೇನುಗಳೂ, ನಮ್ಮಿಂದ ದತ್ತವಾದ ಹವಿರಾದಿಗಳೂ ಯಾವ ನಿನ್ನನ್ನು ತೃಪ್ತಿಪಡಿಸುವುವೋ ಅಂತಹ ನೀನು ವೇಗವಾಗಿ ಓಡುತ್ತಿರುವ ಅಶ್ವದಂತೆ ಸ್ತುತಿಕರ್ತರಿಂದ ನಿರ್ಮಿತವಾದ ನಮ್ಮ ಸ್ತುತಿಗಳಿಗಭಿಮುಖವಾಗಿ ಓಡಿ ಬಾ.

## English Translation.

Indra, Lord of food, the gifts you offered to us are making the Soma sweet, the effusers are invoking you ; come to it quickly running like a horse.

॥ ಸಂಹಿತಾಪಾಠಃ ॥

ಉಗ್ರಂ ನ ವೀರಂ ನಮಸೋಪ ಸೇದಿಮ ವಿಭೂತಿಮಕ್ಷಿತಾವಸುಂ ।
ಉದ್ರೀವ ವಜ್ರಿನ್ನವತೋ ನ ಸಿಂಚತೇ ಕ್ಷರಂತೀಂದ್ರ ಧೀತಯಃ ॥ ೬ ॥

॥ ಪದಪಾಠಃ ॥

ಉಗ್ರಂ । ನ । ವೀರಂ । ನಮಸಾ । ಉಪ । ಸೇದಿಮ । ವಿಽಭೂತಿಂ । ಅಕ್ಷಿತಽವಸುಂ ।
ಉದ್ರೀಽಇವ । ವಜ್ರಿನ್ । ಅವತಃ । ನ । ಸಿಂಚತೇ । ಕ್ಷರಂತಿ । ಇಂದ್ರ । ಧೀತಯಃ ॥ ೬ ॥

|| ಭಾಷ್ಯಂ ||

ಹೇ ಇಂದ್ರ ವೀರಂ ವಿಶೇಷೇಣ ಶತ್ರುಭಟಾನ್ ಪ್ರೇರಯಂತಂ ತ್ವಾಂ ನಮಸಾ ಹವಿರ್ಲಕ್ಷಣೇನಾನ್ನೇನ ಸಹ । ಯದ್ವಾ ನಮಸಾ ಪ್ರಹ್ವೀಭಾವೇನ ಸಹ ಉಪ ಸೇದಿಮ ಶರಣಂ ಪ್ರಾಪ್ನುಮೋ ವಯಂ । ಕಮಿವ । ಉಗ್ರಂ ನ ಉದ್ಗೂರ್ಣಬಲಮಿವ । ತಂ ಯಥಾ ಕೇಚನ ದೀನಾಃ ಶರಣಂ ಪ್ರಾಪ್ನುವಂತಿ ತದ್ವತ್ । ಕೀದೃಶಂ ತ್ವಾಂ । ವಿಭೂತಿಂ ವಿವಿಧೈಶ್ವರ್ಯೋಪೇತಂ । ಅಥವಾ ವಿವಿಧಭವನಸ್ವಭಾವಂ । ಇಂದ್ರೋ ಮಾಯಾಭಿಃ ಪುರುರೂಪ ಈಯತ ಇತಿ ಶ್ರುತೇಃ । ರೂಪಂರೂಪಂ ಪ್ರತಿರೂಪೋ ಬಭೂವ ಇತಿ ಶ್ರುತ್ಯಂತರಾತ್ । ಅಕ್ಷಿತವಸುಂ ಅಕ್ಷೀಣಧನಂ । ಕಿಂಚ ಹೇ ವಜ್ರಿನ್ ವಜ್ರವನ್ನಿಂದ್ರ ಸಿಂಚತೇ ಸ್ವರ್ಗಾದಿಫಲಸೇಕ್ತ್ರೇ ತುಭ್ಯಂ ತ್ವದರ್ಥಂ ಧೀತಯಃ ಅಸ್ಮದಂಗುಲಯಃ ಕ್ಷರಂತಿ ಸ್ರವಂತಿ ಸೋಮರಸಂ । ಕ ಇವ । ಉದ್ರೀವ । ಉದಕಾನ್ ( ? ಉದಕವಾನ್) ಅವತೋ ನ ಕೂಪ ಇವ । ಸ ಯಥಾ ಸಸ್ಯಾದಿಸೇಕ್ತ್ರೇ ಜಲಂ ಕ್ಷರತಿ ತದ್ವತ್ । ಅತ್ರ ಇವಶಬ್ದೋऽನರ್ಥಕಃ ||

|| ಪ್ರತಿಪದಾರ್ಥ ||

**ವೀರಂ**—ಪರಾಕ್ರಮಿಯೂ । **ವಿಭೂತಿಂ**—ಐಶ್ವರ್ಯವಂತನೂ । **ಅಕ್ಷಿತವಸುಂ**—ನಾಶರಹಿತವಾದ ಧನವುಳ್ಳವನೂ ಆದ ಇಂದ್ರನನ್ನು । **ಉಗ್ರಂ ನ**—ಅಶಕ್ತರು ಅತ್ಯಧಿಕವಾದ ಬಲವುಳ್ಳವನನ್ನು ನಮ್ರತೆಯಿಂದ ಸಮೀಪಿಸುವಂತೆ । **ನಮಸಾ**—ನಮಸ್ಕಾರಪೂರ್ವಕವಾಗಿ (ವಿನಯದಿಂದ) । **ಉಪ ಸೇದಿಮ**—ಸಮೀಪಿಸಿ ಮರೆಹೋಗುತ್ತೇವೆ । **ವಜ್ರಿನ್**—ವಜ್ರಾಯುಧಧಾರಿಯಾದ । **ಇಂದ್ರ**—ಎಲೈ ಇಂದ್ರನೇ । **ಅವತಃ**—ಬಾವಿಯು (ಬುಗ್ಗೆಯು) । **ಉದ್ರೀ ಇವ**—ನೀರನ್ನು ಉಕ್ಕಿಸಿ ಪ್ರವಹಿಸುವಂತೆ ಮಾಡುವಂತೆ । **ಧೀತಯಃ**—ನಮ್ಮ ಬೆರಳುಗಳು । **ಸಿಂಚತೇ**—ಸ್ವರ್ಗಾದಿಫಲದಾತೃವಾದ ನಿನಗಾಗಿ । **ಕ್ಷರಂತಿ**—ಸೋಮವನ್ನು ಹಿಂಡಿ ಪ್ರವಹಿಸುವಂತೆ ಮಾಡುತ್ತವೆ.

|| ಭಾವಾರ್ಥ ||

ಅಶಕ್ತರು ಅತ್ಯಧಿಕವಾದ ಬಲವುಳ್ಳವನನ್ನು ನಮ್ರತೆಯಿಂದ ಸಮೀಪಿಸುವಂತೆ ಪರಾಕ್ರಮಿಯೂ, ಐಶ್ವರ್ಯವಂತನೂ, ನಾಶರಹಿತವಾದ ಧನವುಳ್ಳವನೂ ಆದ ಇಂದ್ರನನ್ನು ನಾವು ನಮಸ್ಕಾರಪೂರ್ವಕವಾಗಿ ವಿನಯದಿಂದ ಸಮೀಪಿಸಿ ಮರೆಹೋಗುತ್ತೇವೆ. ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಬುಗ್ಗೆಯು ನೀರನ್ನು ಉಕ್ಕಿಸಿ ಪ್ರವಹಿಸುವಂತೆ ಮಾಡುವಹಾಗೆ, ನಮ್ಮ ಬೆರಳುಗಳು ಸೋಮವನ್ನು ಹಿಂಡಿ ಸ್ವರ್ಗಾದಿಫಲದಾತೃವಾದ ನಿನಗಭಿಮುಖವಾಗಿ ಪ್ರವಹಿಸುವಂತೆ ಮಾಡುತ್ತವೆ.

## English Translation.

We shall now go to Indra with salute he is covered with Vibhuti, Lord of inexhaustible wealth ; ferocious hero, wielder of thunder-bolt as a gushing fountain rushes forth so do our prayers spring forth.

|| ಸಂಹಿತಾಪಾಠಃ ||

ಯದ್ಧ ನೂನಂ ಯದ್ವಾ ಯಜ್ಞೇ ಯದ್ವಾ ಪೃಥಿವ್ಯಾಮಧಿ ।
ಅತೋ ನೋ ಯಜ್ಞಮಾಶುಭಿರ್ಮಹೇಮತ ಉಗ್ರ ಉಗ್ರೇಭಿರಾ ಗಹಿ ॥ ೭ ॥

|| ಪದಪಾಠಃ ||

ಯತ್ । ಹ । ನೂನಂ । ಯತ್ । ವಾ । ಯಜ್ಞೇ । ಯತ್ । ವಾ । ಪೃಥಿವ್ಯಾಂ । ಅಧಿ ।
ಅತಃ । ನಃ । ಯಜ್ಞಂ । ಆಶುऽಭಿಃ । ಮಹೇऽಮತೇ । ಉಗ್ರಃ । ಉಗ್ರೇಭಿಃ । ಆ । ಗಹಿ ॥ ೭ ॥

|| ಭಾಷ್ಯಂ ||

ಹೇ ಮಹೇಮತೇ ಪೂಜಾಸಕ್ತಬುದ್ಧೇ ಇಂದ್ರ ಯದ್ಧ ಯತ್ರ ಕ್ವಚಿತ್ ಸ್ಥಾನವಿಶೇಷೇ ನೂನಂ ನಿಶ್ಚಿತಂ ವರ್ತಸೇ । ಯತ್ ಯತ್ರ ವಾ ಯಜ್ಞೇ ಅಧ್ವರೇ ವರ್ತಸೇ । ಯತ್ ಯತ್ರ ವಾ ಪೃಥಿವ್ಯಾಂ ಅಧಿ ಅಧಿಕಂ ವರ್ತಸೇ । ಅತಃ ಅಸ್ಮಾತ್ಸ್ಥಾನವಿಶೇಷಾತ್ ಉಗ್ರಃ ಉದ್ಗೂರ್ಣಬಲಸ್ತ್ವಂ ಉಗ್ರೇಭಿಃ ಉದ್ಗೂರ್ಣಬಲೈಃ ಆಶುಭಿಃ ಶೀಘ್ರಗಾಮಿಭಿರಶ್ವೈಃ ನೋऽಸ್ಮಾಕಂ ಯಜ್ಞಂ ಆ ಗಹಿ ಆಗಚ್ಛ ॥

|| ಪ್ರತಿಪದಾರ್ಥ ||

ಮಹೇಮತೇ—ಪೂಜ್ಯವಾದ ಬುದ್ಧಿಯುಳ್ಳ ಎಲೈ ಇಂದ್ರನೇ । ಉಗ್ರಃ—ಅತ್ಯಧಿಕವಾದ ಬಲವುಳ್ಳ ನೀನು । ಯತ್ ಹ—ಎಲ್ಲಿದ್ದರೂ ಸಹ । ನೂನಂ—ಖಂಡಿತ । ನಃ—ನಮ್ಮ । ಯಜ್ಞಂ—ಯಜ್ಞ ಪ್ರದೇಶಕ್ಕೆ । ಆಶುಭಿಃ—ವೇಗಗಾಮಿಗಳಾದವೂ । ಉಗ್ರೇಭಿಃ—ಬಹಳ ಬಲವುಳ್ಳವೂ ಆದ ಅಶ್ವಗಳೊಡನೆ । ಆ ಗಹಿ—ದಯಮಾಡು । ಯದ್ವಾ—ಒಂದು ವೇಳೆ । ಯಜ್ಞೇ—ಇತರರ ಯಜ್ಞದಲ್ಲಿದ್ದರೂ । ಯದ್ವಾ—ಅಥವಾ । ಪೃಥಿವ್ಯಾಂ ಅಧಿ—ಪೃಥ್ವಿಯ ಮೇಲೆ ಉಳಿದಾವ ಪ್ರದೇಶದಲ್ಲಿದ್ದರೂ । ಅತಃ—ಅಲ್ಲಿಂದಲೇ ನಮ್ಮ ಯಜ್ಞಾಭಿಮುಖವಾಗಿ ಬಾ.

॥ ಭಾವಾರ್ಥ ॥

ಪೂಜ್ಯವಾದ ಬುದ್ಧಿಯುಳ್ಳ ಎಲೈ ಇಂದ್ರನೇ, ಅತ್ಯಧಿಕವಾದ ಬಲವುಳ್ಳ ನೀನು ಎಲ್ಲಿದ್ದರೂ ಸಹ ಖಂಡಿತ ನಮ್ಮ ಯಜ್ಞಪ್ರದೇಶಕ್ಕೆ ವೇಗಗಾಮಿಗಳೂ ಬಹಳ ಬಲವುಳ್ಳವೂ ಆದ ಅಶ್ವಗಳೊಡನೆ ದಯಮಾಡು. ಒಂದು ವೇಳೆ ಇತರ ಯಾವ ಯಜ್ಞದಲ್ಲಿದ್ದರೂ, ಅಥವಾ ಪೃಥ್ವಿಯ ಮೇಲೆ ಉಳಿದಾವ ಪ್ರದೇಶದಲ್ಲಿದ್ದರೂ ಅಲ್ಲಿಂದಲೇ ನಮ್ಮ ಯಜ್ಞಾಭಿಮುಖವಾಗಿ ಬಾ.

## English Translation.

Wherever you may be now, ferocious, noble Indra, whether in ther ite or in the earth, do come from there to this our rite with speedy and ferocious horses.

॥ ಸಂಹಿತಾಪಾಠಃ ॥

ಅಜಿರಾಸೋ ಹರಯೋ ಯೇ ತ ಆಶವೋ ವಾತಾ ಇವ ಪ್ರಸಕ್ಷಿಣಃ ।

ಯೇಭಿರಪತ್ಯಂ ಮನುಷಃ ಪರೀಯಸೇ ಯೇಭಿರ್ವಿಶ್ವಂ ಸ್ವರ್ದೃಶೇ ॥ ೮ ॥

॥ ಪದಪಾಠಃ ॥

ಅಜಿರಾಸಃ । ಹರಯಃ । ಯೇ । ತೇ । ಆಶವಃ । ವಾತಾಃऽಇವ । ಪ್ರऽಸಕ್ಷಿಣಃ ।

ಯೇಭಿಃ । ಅಪತ್ಯಂ । ಮನುಷಃ । ಪರಿऽಈಯಸೇ । ಯೇಭಿಃ । ವಿಶ್ವಂ । ಸ್ವಃ । ದೃಶೇ ॥ ೮ ॥

॥ ಭಾಷ್ಯಂ ॥

ಹೇ ಇಂದ್ರ ತೇ ತವ ಸ್ವಭೂತಾಃ ಯೇ ಹರಯಃ ಅಶ್ವಾಃ ವಾತಾ ಇವ ವಾಯವ ಇವ ಪ್ರಸಕ್ಷಿಣಃ ಪ್ರಕರ್ಷೇಣ ಸಂಗಚ್ಛಮಾನಾಃ ಸಂತಿ । ಕೀದೃಶಾಸ್ತೇ ಪುನಃ । ಅಜಿರಾಸಃ ಶತ್ರೂನ್ ಕ್ಷಿಪಂತಃ ಆಶವಃ ಶೀಘ್ರಗಾಮಿನಶ್ಚ । ಯೇಭಿಃ ಯೈರಶ್ವೈಃ ಮನುಷಃ ಮನೋಃ ಅಪತ್ಯಂ ಅಪತನಹೇತುಂ ಯಜಮಾನಂ ಪರೀಯಸೇ ಸರ್ವತ ಆಗಚ್ಛಸಿ ಯೇಭಿಃ ಯೈರಶ್ವೈಃ ವಿಶ್ವಂ ಸ್ವಃ ಸರ್ವಂ ಸ್ವರ್ಲೋಕಂ ದೃಶೇ ದ್ರಷ್ಟುಮಿಚ್ಛಸಿ ತೈರಾ ಗಹಿ ಇತಿ ಪೂರ್ವೇಣಾನ್ವಯಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತೇ**—ನಿನಗೆ ಸೇರಿದ । **ಯೇ**—ಯಾವ । **ಹರಯಃ**—ಹರಿಸಂಜ್ಞಕವಾದ ಅಶ್ವಗಳು । **ಅಜಿರಾಸಃ**—ಶತ್ರುಗಳನ್ನುರುಳಿಸುವವಾಗಿಯೂ । **ಆಶವಃ**—ಶೀಘ್ರಗಾಮಿಗಳಾಗಿಯೂ । **ವಾತಾ ಇವ**—ವಾಯುಗಳಂತೆ । **ಪ್ರಸಕ್ಷಿಣಃ**—ಅತಿಶಯವಾದ ಸಂಚಾರವುಳ್ಳವಾಗಿಯೂ ಇರುವುವೋ । **ಯೇಭಿಃ**—ಯಾವ ಅಶ್ವಗಳೊಡನೆ । **ಮನುಷಃ**—ಮನುವಿನ । **ಅಪತ್ಯಂ**—ಪುತ್ರರೂಪನಾದ ಯಜಮಾನನಲ್ಲಿಗೆ । **ಪರಿಈಯಸೇ**—ಹೋಗುವೆಯೋ । **ಯೇಭಿಃ**—ಯಾವ ಅಶ್ವಗಳೊಡನೆ । **ವಿಶ್ವಂ**—ಸಮಸ್ತವಾದ । **ಸ್ವಃ**—ಸ್ವರ್ಗವನ್ನೂ । **ದೃಶೇ**—ನೋಡಲಿಚ್ಛಿಸುತ್ತೀಯೋ (ಅಂತಹ ಅಶ್ವಗಳೊಡನೆ ನಮ್ಮ ಯಜ್ಞಕ್ಕೆ ಬಾ).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಸೇರಿದ ಯಾವ ಹರಿಸಂಜ್ಞಕವಾದ ಅಶ್ವಗಳು ಶತ್ರುಗಳನ್ನುರುಳಿಸುವವಾಗಿಯೂ, ಶೀಘ್ರಗಾಮಿಗಳಾಗಿಯೂ, ವಾಯುಗಳಂತೆ ಅತಿಶಯವಾದ ಸಂಚಾರವುಳ್ಳವಾಗಿಯೂ ಇರುವವೋ, ಯಾವ ಅಶ್ವಗಳೊಡನೆ ಸಮಸ್ತವಾದ ಸ್ವರ್ಗವನ್ನೂ ನೋಡಲಿಚ್ಛಿಸುವೆಯೋ ಅಂತಹ ಅಶ್ವಗಳೊಡನೆ ನಮ್ಮ ಯಜ್ಞಕ್ಕೆ ಬಾ.

## English Translation.

Your horses named Hari have the speed of winds and are vanquishers of enemies, with that help you go to men and go to the earth overgrown with many things born.

॥ ಸಂಹಿತಾಪಾಠಃ ॥

ಏತಾವತಸ್ತ ಈಮಹ ಇಂದ್ರ ಸುಮ್ನಸ್ಯ ಗೋಮತಃ ।
ಯಥಾ ಪ್ರಾವೋ ಮಘವನ್ಮೇಧ್ಯಾತಿಥಿಂ ಯಥಾ ನೀಪಾತಿಥಿಂ ಧನೇ ॥ ೯ ॥

॥ ಪದಪಾಠಃ ॥

ಏತಾವತಃ । ತೇ । ಈಮಹೇ । ಇಂದ್ರ । ಸುಮ್ನಸ್ಯ । ಗೋಽಮತಃ ।
ಯಥಾ । ಪ್ರ । ಅವಃ । ಮಘಽವನ್ । ಮೇಧ್ಯಽಅತಿಥಿಂ । ಯಥಾ । ನೀಪಽಅತಿಥಿಂ । ಧನೇ ॥ ೯ ॥

॥ ಭಾಷ್ಯಂ ॥

ಹೇ ಮಘವನ್ ಧನವನ್ನಿಂದ್ರ ಧನೇ ನಿಮಿತ್ತಭೂತೇ ಸತಿ ಯಥಾ ಯೇನ ಪ್ರಕಾರೇಣ ಮೇಧ್ಯಾತಿಥಿಂ ಏತನ್ನಾಮಕಮೃಷಿಂ ಪ್ರಾವಃ ಪ್ರಕರ್ಷೇಣ ರಕ್ಷಿತವಾನಸಿ ಯಥಾ ಯೇನ ಚ ಪ್ರಕಾರೇಣ ನೀಪಾತಿಥಿಂ ಏತನ್ನಾಮಾನಮೃಷಿಂ ಪ್ರಾವಃ ಏತಾವತಃ ಇಯದೇವ ತೇ ತವ ಸ್ವಭೂತಂ ಗೋಮತಃ ಗವಾಶ್ವಾದ್ಯುಪೇತಂ ಸುಮ್ನಸ್ಯ ಸುಖಂ ಈಮಹೇ ಯಾಚಾಮಹೇ ವಯಂ ಕಣ್ವಾಃ । ಸರ್ವತ್ರ ಕರ್ಮಣಿ ಷಷ್ಠ್ಯಃ ॥

॥ ಪ್ರತಿಪದಾರ್ಥ ॥

**ಮಘವನ್**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ಧನೇ**—ಧನನಿಮಿತ್ತವಾಗಿ । **ಯಥಾ**—ಯಾವ ರೀತಿಯಲ್ಲಿ । **ಮೇಧಾತಿಥಿಂ**—ಮೇಧಾತಿಥಿಯೆಂಬ ಋಷಿಯನ್ನು । **ಪ್ರಾವಃ**--ರಕ್ಷಿಸಿದೆಯೋ । **ಯಥಾ**—ಯಾವ ಪ್ರಕಾರವಾಗಿ । **ನೀಪಾತಿಥಿಂ**—ನೀಪಾತಿಥಿಯೆಂಬ ಋಷಿಯನ್ನು ರಕ್ಷಿಸಿದೆಯೋ । **ಏತಾವತಃ**—ಅದೇ ರೀತಿಯಲ್ಲಿರುವುದೂ । **ಗೋಮತಃ**—ಗೋಯುಕ್ತವಾದುದೂ ಆದ । **ಸುಮ್ನಸ್ಯ**—ಸುಖವನ್ನು । **ತೇ**—ನಿನ್ನಿಂದ । **ಈಮಹೇ**—ಯಾಚಿಸುತ್ತೇವೆ.

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ಧನಕ್ಕಾಗಿ ಪ್ರಯತ್ನಿಸಿದಾಗ ನೀನು ಯಾವ ರೀತಿ ಮೇಧಾತಿಥಿಯೆಂಬ ಋಷಿಗೂ ನೀಪಾತಿಥಿಯೆಂಬ ಋಷಿಗೂ ಧನವನ್ನು ಕೊಟ್ಟು ರಕ್ಷಿಸಿದೆಯೋ ಅದೇ ರೀತಿಯಲ್ಲಿರುವುದೂ ಗೋಯುಕ್ತವಾದುದೂ ಆದ (ಧನರೂಪವಾದ) ಸುಖವನ್ನು ನಿನ್ನಿಂದ ಯಾಚಿಸುತ್ತೇವೆ.

## English Translation.

Give us wealth, cattle, we solicit of you Maghavan, because you did help Medhatithi and Nipatithi in their obtaining of wealth.

॥ ಸಂಹಿತಾಪಾಠಃ ॥

ಯಥಾ ಕಣ್ವೇ ಮಘವನ್ತ್ರಸದಸ್ಯವಿ ಯಥಾ ಪಕ್ಥೇ ದಶವ್ರಜೇ ।

ಯಥಾ ಗೋಶರ್ಯೇ ಅಸನೋರೃಜಿಶ್ವನೀಂದ್ರ ಗೋಮದ್ಧಿರಣ್ಯ-
ವತ್ ॥ ೧೦ ॥

॥ ಪದಪಾಠಃ ।

**ಯಥಾ । ಕಣ್ವೇ । ಮಘಽವನ್ । ತ್ರಸದಸ್ಯವಿ । ಯಥಾ । ಪಕ್ಥೇ । ದಶಽವ್ರಜೇ ।**

**ಯಥಾ । ಗೋಽಶರ್ಯೇ । ಅಸನೋಃ । ಋಜಿಶ್ವನಿ । ಇಂದ್ರ । ಗೋಽಮತ್ । ಹಿರಣ್ಯಽವತ್ ॥ ೧೦ ॥**

॥ ಭಾಷ್ಯಂ ॥

**ಹೇ ಮಘವನ್ ಧನವನ್ನಿಂದ್ರ ಯಥಾ ಯೇನ ಪ್ರಕಾರೇಣ ಕಣ್ವೇ ಏತನ್ನಾಮ್ನಿ ಮಹ್ಷಿತರಿ ಗೋಮತ್ ಗವೋಪೇತಂ ಹಿರಣ್ಯವತ್ ಕಾಂಚನೋಪೇತಂ ಚ ಸುಮ್ನಂ ಅಸನೋಃ ದತ್ತವಾನಸಿ । ಯಥಾ ಚ ತ್ರಸದಸ್ಯವಿ ಏತನ್ನಾಮಕೇ ರಾಜ್ಞಿ ಯಥಾ ಚ ಪಕ್ಥೇ ಏತತ್ಸಂಜ್ಞೇ ರಾಜ್ಞಿ ಯಥಾ ಚ ದಶವ್ರಜೇ ಏತತ್ಸಂಜ್ಞಕೇ ನೃಪೇ ಯಥಾ ಚ ಗೋಶರ್ಯೇ ಏತನ್ನಾಮ್ನಿ ಕ್ಷತ್ರಿಯೇ ಯಥಾ ಚ ಋಜಿಶ್ವನಿ ಏತತ್ಸಂಜ್ಞಕೇ ರಾಜನಿ ಗವಾದ್ಯುಪೇತಂ ಸುಮ್ನಮಸನೋಃ ಏತಾವದೀಮಹೇ ಇತಿ ಪೂರ್ವೇಣ ಸಂಬಂಧಃ ॥**

॥ ಪ್ರತಿಪದಾರ್ಥ ॥

**ಮಘವನ್**--ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ಯಥಾ**—ಯಾವ ಪ್ರಕಾರವಾಗಿ । **ಕಣ್ವೇ**—ಕಣ್ವಋಷಿಗೂ । **ತ್ರಸದಸ್ಯವಿ**—ತ್ರಸದಸ್ಯುವೆಂಬ ರಾಜನಿಗೂ । **ಯಥಾ**—ಯಾವ ರೀತಿ । **ಪಕ್ಥೇ**—ಪಕ್ಥನೆಂಬ ರಾಜನಿಗೂ । **ದಶವ್ರಜೇ**—ದಶವ್ರಜನೆಂಬ ರಾಜನಿಗೂ । **ಯಥಾ**—ಯಾವ ರೀತಿ । **ಗೋಶರ್ಯೇ**—ಗೋಶರ್ಯನೆಂಬ ಕ್ಷತ್ರಿಯನಿಗೂ । **ಋಜಿಶ್ವನಿ**—ಋಜಿಶ್ವನೆಂಬ ರಾಜನಿಗೂ । **ಗೋಮತ್**—ಗೋಯುಕ್ತವಾದುದೂ । **ಹಿರಣ್ಯವತ್**—ಸುವರ್ಣಮಯವಾದುದೂ ಆದ ಧನವನ್ನು । **ಅಸನೋಃ**—ಕೊಟ್ಟಿಯೋ । (ಅದನ್ನೇ ನಾವೂ ಯಾಚಿಸುತ್ತೇವೆ).

॥ ಭಾವಾರ್ಥ ॥

ಧನವಂತನಾದ ಎಲೈ ಇಂದ್ರನೇ, ಯಾವ ರೀತಿ ಕಣ್ವಋಷಿಗೂ, ತ್ರಸದಸ್ಯು, ಪಕ್ಥ, ದಶವ್ರಜ, ಗೋಶರ್ಯ, ಋಜಿಶ್ವ ಎಂಬ ರಾಜರಿಗೂ, ಗೋಯುಕ್ತವಾದುದೂ, ಸುವರ್ಣಮಯವಾದುದೂ ಆದ ಧನವನ್ನು ಕೊಟ್ಟಿಯೋ ಅದೇ ರೀತಿ ನಮಗೂ ಕೊಡಬೇಕೆಂದು ನಿನ್ನನ್ನು ಯಾಚಿಸುತ್ತೇವೆ.

## English Translation.

Maghavan because you gave wealth in gold and cattles, to Kanwas Trasadasyu, Paktha, Dasavraja, Gosarya and Rijiswan.



## ಐವತ್ತನೆಯ ಸೂಕ್ತವು

### (ವಾಲಖಿಲ್ಯಸೂಕ್ತ—೨)

**ಪ್ರ ಸು ಶ್ರುತಂ ಇತಿ ದಶರ್ಚಂ ದ್ವಿತೀಯಂ ಸೂಕ್ತಂ ಕಾಣ್ವಸ್ಯ ಪುಷ್ಟಿಗೋರಾರ್ಷಮೈಂದ್ರಂ। ಅನುಕ್ರಮ್ಯತೇ ಚ—ಪ್ರ ಸು ಶ್ರುತಂ ಪುಷ್ಟಿಗುಃ ಇತಿ। ಕಣ್ವಸ್ಯ ಪುತ್ರಃ ಪುಷ್ಟಿಗುಃ ಋಷಿಃ। ಇಂದ್ರೋ ದೇವತಾ। ಅಯುಜಾಂ ಬೃಹತೀ ಛಂದಃ। ಯುಜಾಂ ಸತೋ ಬೃಹತೀ ಛಂದಃ। ವಿನಿಯೋಗಃ ಸೂತ್ರಾದವಗಂತವ್ಯಃ ॥**

ಅನುವಾದವು—**ಪ್ರ ಸು ಶ್ರುತಂ** ಎಂಬ ಈ ಸೂಕ್ತವು ವಾಲಖಿಲ್ಯಸೂಕ್ತಗಳಲ್ಲಿ ಎರಡನೆಯ ಸೂಕ್ತವು ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಪುಷ್ಟಿಗುಃ ಕಾಣ್ವಃ** ಎಂಬುವನು ಋಷಿಯು. ಅನುಕ್ರಮಣಿಕೆಯಲ್ಲಿ—**ಪ್ರ ಸು ಶ್ರುತಂ ಪುಷ್ಟಿಗುಃ** ಎಂದು ಹೇಳಿರುವುದು. ಇಂದ್ರನು ದೇವತೆಯು. ಕಣ್ವಪುತ್ರನಾದ **ಪುಷ್ಟಿಗುಃ** ಎಂಬುವನು ಋಷಿಯು. ಈ ಸೂಕ್ತದ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು; ಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು. ವಿನಿಯೋಗವನ್ನು ಸೂತ್ರದಿಂದ ತಿಳಿದುಕೊಳ್ಳಬೇಕು.

### ಸೂಕ್ತ—೫೦

(ವಾಲಖಿಲ್ಯಸೂಕ್ತ—೨)

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೫೦ ॥
ಅಷ್ಟಕ—೬ ॥ ಅಧ್ಯಾಯ—೪ ॥ ವರ್ಗ— ೧೬, ೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಪುಷ್ಟಿಗುಃ ಕಾಣ್ವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಪ್ರಾಗಾಥಂ (ಅಯುಜಃ ಬೃಹತ್ಯಃ। ಯುಜಃ ಸತೋಬೃಹತ್ಯಃ ॥

॥ ಸಂಹಿತಾಪಾಠಃ ॥

ಪ್ರ ಸು ಶ್ರುತಂ ಸುರಾಧಸಮರ್ಚಾ ಶಕ್ರಮಭಿಷ್ಟಯೇ ।
ಯಃ ಸುನ್ವತೇ ಸ್ತುವತೇ ಕಾಮ್ಯಂ ವಸು ಸಹಸ್ರೇಣೇವ ಮಂಹತೇ ॥ ೧ ॥

॥ ಪದಪಾಠಃ ॥

ಪ್ರ । ಸು । ಶ್ರುತಂ । ಸುಽರಾಧಸಂ । ಅರ್ಚ । ಶಕ್ರಂ । ಅಭಿಷ್ಟಯೇ ।

ಯಃ । ಸುನ್ವತೇ । ಸ್ತುವತೇ । ಕಾಮ್ಯಂ । ವಸು । ಸಹಸ್ರೇಣಽಇವ । ಮಂಹತೇ ॥ ೧ ॥

॥ ಭಾಷ್ಯಂ ॥

ಋಷಿರಾತ್ಮಾನಂ ಬ್ರೂತೇ । ಹೇ ಪುಷ್ಟಿಗೋ ತ್ವಂ ಅಭಿಷ್ಟಯೇ ಅಭಿಲಷಿತಸಿದ್ಧಯೇ ತಂ ಶಕ್ರಂ ಸರ್ವಕರ್ಮಸು ಶಕ್ತಮಿಂದ್ರಂ ಸು ಸುಷ್ಠು ಯಥಾ ತಥಾ ಪ್ರ ಅರ್ಚ ಪ್ರಕರ್ಷೇಣ ಪೂಜಯ । ಕೀದೃಶಂ । ಶ್ರುತಂ ವಿಖ್ಯಾತಂ ಸುರಾಧಸಂ ಶೋಭನಧನೋಪೇತಂ । ತಂ ಕಂ । ಯ ಇಂದ್ರಃ ಸುನ್ವತೇ ಸೋಮಾಭಿಷವಂ ಕುರ್ವತೇ ಸ್ತುವತೇ ಸ್ತುತಿಂ ಕುರ್ವತೇ ಯಜಮಾನಾಯ ಕಾಮ್ಯಂ ಕಾಮಿನಂ (? ಕಮನೀಯಂ) ವಸು ಧನಂ ಸಹಸ್ರೇಣೇವ ಅಸಂಖ್ಯಾತೇನೇವ ಮಂಹತೇ ದದಾತಿ ತಂ । ಮಂಹತಿರ್ದಾನಾರ್ಥಃ । ದಾನಕರ್ಮಸು ತತ್ಪಾಠಾತ್ ॥

॥ ಪ್ರತಿಪದಾರ್ಥ ॥

(ಎಲೈ ಋಷಿಯೇ) **ಯಃ**—ಯಾವ ಇಂದ್ರನು । **ಸುನ್ವತೇ**—ಸೋಮವನ್ನು ಹಿಂಡುವವನಿಗೂ । **ಸ್ತುವತೇ**-ಸ್ತುತಿಯನ್ನು ಅರ್ಪಿಸುವವನಿಗೂ । **ಕಾಮ್ಯಂ**-ಅಪೇಕ್ಷಿತವಾದ । **ವಸು**—ಧನವನ್ನು । **ಸಹಸ್ರೇಣೇವ**—ಸಹಸ್ರ ಸಂಖ್ಯೆಯಲ್ಲಿ । **ಮಂಹತೇ**—ಕೊಡುವನೋ ಅಂತಹ । **ಶ್ರುತಂ**—ಪ್ರಖ್ಯಾತನೂ । **ಸುರಾಧಸಂ**—ಉತ್ತಮವಾದ ಧನವುಳ್ಳವನೂ ಆದ । **ಶಕ್ರಂ**—ಇಂದ್ರನನ್ನು । **ಅಭಿಷ್ಟಯೇ**—ನಿನ್ನ ಇಷ್ಟಾರ್ಥಸಿದ್ಧಿಗಾಗಿ । **ಸು**—ಅತಿಶಯವಾಗಿ । **ಪ್ರ ಅರ್ಚ**—ಪೂಜಿಸು.

॥ ಭಾವಾರ್ಥ ॥

ಎಲೈ ಋಷಿಯೇ, ಯಾವ ಇಂದ್ರನು ಸೋಮವನ್ನು ಹಿಂಡಿ ಅರ್ಪಿಸುವವನಿಗೂ, ಸ್ತುತಿಯನ್ನು ಅರ್ಪಿಸುವವನಿಗೂ ಅಪೇಕ್ಷಿತವಾದ ಧನವನ್ನು ಸಹಸ್ರ ಸಂಖ್ಯೆಯಲ್ಲಿ ಕೊಡುವನೋ ಅಂತಹ ಪ್ರಖ್ಯಾತನೂ, ಉತ್ತಮವಾದ ಧನವುಳ್ಳವನೂ ಆದ ಇಂದ್ರನನ್ನು ನಿನ್ನ ಇಷ್ಟಾರ್ಥಸಿದ್ಧಿಗಾಗಿ ಅತಿಶಯವಾಗಿ ಪೂಜಿಸು.

## English Translation.

Desiring wealth I worship Shakra, Lord of precious wealth, he gives, wealth in thousands to the worshipper and effuser.

॥ ಸಂಹಿತಾಪಾಠಃ ॥

ಶತಾನೀಕಾ ಹೇತಯೋ ಅಸ್ಯ ದುಷ್ಟರಾ ಇಂದ್ರಸ್ಯ ಸಮಿಷೋ ಮಹೀಃ ।

ಗಿರಿರ್ನ ಭುಜ್ಮಾ ಮಘವತ್ಸು ಪಿನ್ವತೇ ಯದೀಂ ಸುತಾ ಅಮಂದಿಷುಃ ॥ ೨ ॥

॥ ಪದಪಾಠಃ ॥

ಶತಽಅನೀಕಾಃ । ಹೇತಯಃ । ಅಸ್ಯ । ದುಸ್ತರಾಃ । ಇಂದ್ರಸ್ಯ । ಸಂಽಇಷಃ । ಮಹೀಃ ।

ಗಿರಿಃ । ನ । ಭುಜ್ಮಾ । ಮಘವತ್ಽಸು । ಪಿನ್ವತೇ । ಯತ್ । ಈಂ । ಸುತಾಃ । ಅಮಂದಿಷುಃ ॥ ೨ ॥

॥ ಭಾಷ್ಯಂ ॥

**ಸುತಾ ಅಭಿಷುತಾಃ ಸೋಮಾ ಯದ್ಯದಾ ಈಮೇನಮಿಂದ್ರಂ ಅಮಂದಿಷುಃ ಅಮಾದಯನ್ ತದಾ ಅಸ್ಯೇಂದ್ರಸ್ಯ ಹೇತಯಃ ಹನನಸಾಧನಾನ್ಯಾಯುಧಾನಿ ಮಘವತ್ಸು ಹವಿರ್ಲಕ್ಷಣಧನವತ್ಸು ಯಜಮಾನೇಷು ಪಿನ್ವತೇ । ತದೀಯಶತ್ರುಧನಾನಿ ತೇಷು ಸಮರ್ಪ್ಯ ತಾನ್ ಪ್ರೀಣಯಂತೀತ್ಯರ್ಥಃ । ತ ಇವ । ಭುಜ್ಮಾ ಗಿರಿರ್ನ ಪಾಲಕೋ ಮೇಘ ಇವ । ಸ ಯಥಾ ಭುವಿ ಜಲಾನಿ ಸಮರ್ಪ್ಯ ತಾಂ ಪ್ರೀಣಯತಿ ತದ್ವತ್ । ಶತ್ರುಧನಾಹರಣಂ ತು "ಶತ್ರೋಯತಾಮಾ ಭರಾ ಭೋಜನಾನಿ" (ಋ. ಸಂ. ೫-೪-೫) ಇತ್ಯಾದಿಶ್ರುತಿಪ್ರಸಿದ್ಧಂ । ಕೀದೃಶ್ಯೋ ಹೇತಯಃ । ಶತಾನೀಕಾಃ । ಶತಮಪರಿಮಿತಾನಿ ಅನೀಕಾನಿ ಮುಖಾನಿ ಯಾಸಾಂ ತಾಃ । ಸರ್ವತೋಮುಖಾ ಇತ್ಯರ್ಥಃ । ಅತ ಏವ ದುಸ್ತರಾ ದುರ್ನಿವಾರ್ಯಾಃ । ಸಮಿಷಃ ಸಮ್ಯಕ್ ಇಟ್ ಅನ್ನಂ ಯಾಭ್ಯಸ್ತಾಃ । ಮಹೀಃ ಮಹತ್ಯಃ ॥**

॥ ಪ್ರತಿಪದಾರ್ಥ ॥

**ಯತ್**-ಯಾವಾಗ । **ಸುತಾಃ**-ಹಿಂಡಿರುವ ಸೋಮರಸಗಳು । **ಈಂ**-ಈ ಇಂದ್ರನನ್ನು । **ಅಮಂದಿಷುಃ**-ಹರ್ಷಗೊಳಿಸುವುವೋ ಆಗ । **ಭುಜ್ಮಾ**—ಪಾಲಕವಾದ । **ಗಿರಿಃ ನ**—ಮೇಘವು ಪೃಥ್ವಿಯಲ್ಲಿ ಉದಕವನ್ನು ತುಂಬಿ ತೃಪ್ತಿಪಡಿಸುವಂತೆ । **ಅಸ್ಯ ಇಂದ್ರಸ್ಯ**—ಈ ಇಂದ್ರನ । **ಶತಾನೀಕಾಃ**—ನೂರಾರು ಮುಖಗಳುಳ್ಳವೂ । **ದುಸ್ತರಾಃ**—ಶತ್ರುಗಳ ಪ್ರತಿಭಟನೆಗೆ ಸಿಲುಕದವೂ । **ಸಮಿಷಃ**—ಪೂರ್ಣವಾದ ಅನ್ನಯುಕ್ತವಾದವೂ । **ಮಹೀಃ**—ಮಹತ್ಸ್ವರೂಪವುಳ್ಳವೂ ಆದ । **ಹೇತಯಃ**—ಆಯುಧಗಳು । **ಮಘವತ್ಸು**—ಹವಿಸ್ಸಿನ ರೂಪದ ಧನವುಳ್ಳ ಯಜಮಾನರಲ್ಲಿ । **ಪಿನ್ವತೇ**—ಶತ್ರುಧನವನ್ನು ತುಂಬಿ ತೃಪ್ತಿಪಡಿಸುತ್ತವೆ.

॥ ಭಾವಾರ್ಥ ॥

ಹಿಂಡಿ ಸಿದ್ಧವಾಗಿರುವ ಈ ಸೋಮರಸಗಳು ಯಾವಾಗ ಇಂದ್ರನಿಗೆ ಹರ್ಷವನ್ನುಂಟುಮಾಡುವುವೋ ಆಗ ಜಗತ್ಪಾಲಕವಾದ ಮೇಘವು ಹೇಗೆ ಮಳೆಯನ್ನು ಸುರಿಸಿ ಪೃಥ್ವಿಯನ್ನು ತುಂಬುವುದೋ ಹಾಗೆ ಈ ಇಂದ್ರನ ನೂರಾರು ಮುಖವುಳ್ಳವೂ, ಶತ್ರುಗಳ ಪ್ರತಿಭಟನೆಗೆ ಸಿಲುಕದವೂ ಪೂರ್ಣವಾಗಿ ಅನ್ನಯುಕ್ತವಾದವೂ, ಮಹತ್ಸ್ವರೂಪವುಳ್ಳವೂ ಆದ ಆಯುಧಗಳು ಹವಿಸ್ಸಿನ ರೂಪದ ಧನವುಳ್ಳ ಯಜಮಾನರಲ್ಲಿ ಶತ್ರುಧನವನ್ನು ತುಂಬಿ ತೃಪ್ತಿಪಡಿಸುತ್ತವೆ.

## English Translation.

Of immeasurable Indra, your weapons are hundreds and food abundant when the effused Soma exhilarates him then being food-giver lika a mountain delights the wealthy.

॥ ಸಂಹಿತಾಪಾಠಃ ॥

ಯದೀಂ ಸುತಾಸ ಇಂದವೋಽಭಿ ಪ್ರಿಯಮಮಂದಿಷುಃ ।

ಆಪೋ ನ ಧಾಯಿ ಸವನಂ ಮ ಆ ವಸೋ ದುಘಾ ಇವೋಪ ದಾಶುಷೇ ॥

॥ ಪದಪಾಠಃ ॥

ಯತ್ । ಈಂ । ಸುತಾಸಃ । ಇಂದವಃ । ಅಭಿ । ಪ್ರಿಯಂ । ಅಮಂದಿಷುಃ ।

ಆಪಃ । ನ । ಧಾಯಿ । ಸವನಂ । ಮೇ । ಆ । ವಸೋ ಇತಿ । ದುಘಾಃಽಇವ । ಉಪ । ದಾಶುಷೇ ॥ ೩ ॥

॥ ಭಾಷ್ಯಂ ॥

ಹೇ ಇಂದ್ರ ಯದ್ಯದಾ ಸುತಾಸಃ ಅಭಿಷುತಾಃ ಇಂದವಃ ಸೋಮಾಃ ಯಂ ( ? ಪ್ರಿಯಂ) ವಲ್ಲಭಂ ಈಂ ಏನಂ ತ್ವಾಂ ಅಭಿ ಅಭಿಲಕ್ಷ್ಯ ಅಮಂದಿಷುಃ ಅಮಾದಯನ್ । ತದಾ ಹೇ ವಸೋ ವಾಸಯಿತರಿಂದ್ರ ತ್ವಯಾ ದಾಶುಷೇ ಹವಿರ್ದತ್ತವತೇ ಮೇ ಮಹ್ಯಂ ಮದರ್ಥಂ ಸವನಂ ಯಜ್ಞಃ ಉಪಗಮ್ಯ ಆ ಧಾಯಿ ಕಾರ್ತ್ಸ್ನ್ಯೇನ ಸಫಲೀಕೃತಃ । ತತ್ರ ದೃಷ್ಟಾಂತಃ । ಆಪೋ ನ । ತಾ ಯಥಾ ಸ್ನಾನಪಾನಾದಿನಾ ಸಫಲೀಕ್ರಿಯಂತೇ ತದ್ವತ್ । ಅಪರೋ ದೃಷ್ಟಾಂತಃ । ದುಘಾ ಇವ । ಹವಿರ್ದುಘಾ ಧೇನವೋ ಯಥಾ ಸಾಂನಾಯ್ಯಸೇವನಾದಿನಾ ಸಫಲೀಕ್ರಿಯಂತೇ ತದ್ವತ್ ಸೋಮಪಾನಾದಿನಾ ಯಜ್ಞಃ ಸಫಲೀಕೃತ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ಸುತಾಸಃ**—ಹಿಂಡಿ ಸಿದ್ಧವಾಗಿರುವ । **ಇಂದವಃ**—ಸೋಮರಸಗಳು । **ಪ್ರಿಯಂ**—ಪ್ರಿಯಕಾರಕನಾದ । **ಈಂ ಅಭಿ**—ನಿನ್ನನ್ನು ಲಕ್ಷಿಸಿ ಬಂದು । **ಯತ್**—ಯಾವಾಗ । **ಅಮಂದಿಷುಃ**—ತೃಪ್ತಿಗೊಳಿಸುವವೋ ಆಗ । **ಆಪಃ ನ**—ಸ್ನಾನಾದಿಗಳಿಗೆ ಯೋಗ್ಯವಾದ ಉದಕಗಳಂತೆಯೂ । **ದುಘಾ ಇವ**—ಕ್ಷೀರಾದಿಗಳನ್ನು ಕೊಡುವ ಧೇನುಗಳಂತೆಯೂ । **ಮೇ ಸವನಂ**—ನನ್ನ ಯಜ್ಞವು । **ದಾಶುಷೇ**—ಹವಿಸ್ಸನ್ನು ಅರ್ಪಿಸುವ ನನ್ನನ್ನು । **ಉಪ**—ಸಮೀಪಿಸಿ । **ಆ ಧಾಯಿ**—ನನ್ನ ಉದ್ದಿಶ್ಯವನ್ನು ಸಾರ್ಥಕಗೊಳಿಸುತ್ತದೆ.

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಇಂದ್ರನೇ, ಹಿಂಡಿ ಸಿದ್ಧವಾಗಿರುವ ಸೋಮರಸಗಳು ಜಗತ್ಪ್ರಿಯಕಾರಕನಾದ ನಿನ್ನನ್ನು ಸಮೀಪಿಸಿ ಯಾವಾಗ ನಿನ್ನನ್ನು ತೃಪ್ತಿಗೊಳಿಸುವುವೋ ಆಗ ಸ್ನಾನಪಾನಾದಿಗಳಿಗೆ ಯೋಗ್ಯವಾದ ಉದಕಗಳಂತೆಯೂ, ಕ್ಷೀರಾದಿಗಳನ್ನು ಕೊಡುವ ಧೇನುಗಳಂತೆಯೂ ನನ್ನ ಯಜ್ಞವು ಹವಿಸ್ಸನ್ನರ್ಪಿಸುವ ನನ್ನನ್ನು ಸಮೀಪಿಸಿ ನನ್ನ ಉದ್ದಿಶ್ಯವನ್ನು ಸಾರ್ಥಕಗೊಳಿಸುತ್ತದೆ.

## English Translation.

When the effused Soma has exhilarated Indra the giver of dwellings, I offer you Soma like water—you are like the milch cow to your worshipper.

|| ಸಂಹಿತಾಪಾಠಃ ||

ಅನೇಹಸಂ ಪ್ರೋ ಹವಮಾನಮೂತಯೇ ಮಧ್ವಃ ಕ್ಷರಂತಿ ಧೀತಯಃ |
ಆ ತ್ವಾ ವಸೋ ಹವಮಾನಾಸ ಇಂದವ ಉಪ ಸ್ತೋತ್ರೇಷು ದಧಿರೇ || ೪ ||

|| ಪದಪಾಠಃ ||

ಅನೇಹಸಂ | ವಃ | ಹವಮಾನಂ | ಊತಯೇ | ಮಧ್ವಃ | ಕ್ಷರಂತಿ | ಧೀತಯಃ |
ಆ | ತ್ವಾ | ವಸೋ ಇತಿ | ಹವಮಾನಾಸಃ | ಇಂದವಃ | ಉಪ | ಸ್ತೋತ್ರೇಷು | ದಧಿರೇ || ೪ ||

|| ಭಾಷ್ಯಂ ||

ಹೇ ಋತ್ವಿಜಃ ವಃ ಯುಷ್ಮತ್ಸಂಬಂಧಿನ್ಯಃ ಧೀತಯೋಽಂಗುಲಯಃ ಊತಯೇ ರಕ್ಷಾರ್ಥಂ ಹವಮಾನಂ ಸ್ತೂಯಮಾನಮಿಂದ್ರಮುದ್ದಿಶ್ಯ ಮಧ್ವಃ ಮಧುರರಸಂ ಸೋಮಂ ಕ್ಷರಂತಿ | ಕೀದೃಶಂ | ಅನೇಹಸಂ | ನ ಆಹನ್ಯತ ಇತ್ಯನೇಹಃ ತಂ | ಶತ್ರುಭಿರನಭಿಭಾವ್ಯಮಿತ್ಯರ್ಥಃ | ಹೇ ವಸೋ ವಾಸಯಿತರಿಂದ್ರ ಹವಮಾನಾಸಃ ಸ್ತೂಯಮಾನಾಃ ಇಂದವಃ ಸೋಮಾಃ ಸ್ತೋತ್ರೇಷು ನಿಮಿತ್ತೇಷು ತ್ವಾ ತ್ವಾಂ ಉಪ ಸಮೀಪೇ ಆ ದಧಿರೇ ಆಭಿಮುಖ್ಯೇನ ಸ್ಥಾಪಿತವಂತಃ ||

|| ಪ್ರತಿಪದಾರ್ಥ ||

(ಎಲೈ ಋತ್ವಿಕ್ಕುಗಳೇ) **ವಃ**—ನಿಮ್ಮ | **ಧೀತಯಃ**—ಅಂಗುಲಿಗಳು | **ಊತಯೇ**—ನಿಮ್ಮ ರಕ್ಷಣಾರ್ಥವಾಗಿ | **ಹವಮಾನಂ**—ಪೂಜ್ಯನಾದ ಇಂದ್ರನನ್ನುದ್ದೇಶಿಸಿ | **ಅನೇಹಸಂ**—ದೋಷರಹಿತವಾದುದೂ | **ಮಧ್ವಃ**—ಮಾಧುರ್ಯೋಪೇತವಾದುದೂ ಆದ ಸೋಮರಸವನ್ನು | **ಕ್ಷರಂತಿ**—ಹಿಂಡುತ್ತವೆ | **ವಸೋ**—ವಸತಿದಾಯಕನಾದ ಎಲೈ ಇಂದ್ರನೇ | **ಹವಮಾನಾಸಃ**—ಸ್ತುತ್ಯರ್ಹವಾದ | **ಇಂದವಃ**—ಸೋಮರಸಗಳು | **ಸ್ತೋತ್ರೇಷು**—ಸ್ತುತಿಕಾಲಗಳಲ್ಲಿ | **ತ್ವಾ ಉಪ**—ನಿನ್ನನ್ನು ಸಮೀಪಿಸಿ | **ಆ ದಧಿರೇ**—ನಿನ್ನಲ್ಲಿ ಸ್ಥಾಪಿತವಾಗುತ್ತವೆ.

|| ಭಾವಾರ್ಥ ||

ಎಲೈ ಋತ್ವಿಕ್ಕುಗಳೇ, ನಿಮ್ಮ ಬೆರಳುಗಳು ನಿಮ್ಮ ರಕ್ಷಣಾರ್ಥವಾಗಿ ಪೂಜ್ಯನಾದ ಇಂದ್ರನನ್ನುದ್ದೇಶಿಸಿ ದೋಷರಹಿತವಾದುದೂ, ಮಾಧುರ್ಯೋಪೇತವಾದುದೂ ಆದ ಸೋಮರಸವನ್ನು ಹಿಂಡುತ್ತವೆ. ವಸತಿದಾಯಕನಾದ ಎಲೈ ಇಂದ್ರನೇ, ಸ್ತುತ್ಯರ್ಹವಾದ ಸೋಮರಸಗಳು ಸ್ತುತಿಕಾಲದಲ್ಲಿ ನಿನ್ನನ್ನು ಸ್ಥಾಪಿಸಿ ನಿನ್ನಲ್ಲಿ ಸ್ಥಾಪಿತವಾಗುತ್ತವೆ.

## English Translation.

Worshippers, for your protection all rightious actions are dropping sweets in invocation of Indra. Giver of dwelling, Soma being effused goes to you.

॥ ಸಂಹಿತಾಪಾಠಃ ॥

ಆ ನಃ ಸೋಮೇ ಸ್ವಧ್ವರ ಇಯಾನೋ ಅತ್ಯೋ ನ ತೋಶತೇ ।
ಯಂ ತೇ ಸ್ವದಾವನ್ತ್ಸ್ವದಂತಿ ಗೂರ್ತಯಃ ಪೌರೇ ಛಂದಯಸೇ ಹವಂ ॥

॥ ಪದಪಾಠಃ ॥

ಆ । ನಃ । ಸೋಮೇ । ಸುऽಅಧ್ವರೇ । ಇಯಾನಃ । ಅತ್ಯಃ । ನ । ತೋಶತೇ ।
ಯಂ । ತೇ । ಸ್ವದಾऽವನ್ । ಸ್ವದಂತಿ । ಗೂರ್ತಯಃ । ಪೌರೇ । ಛಂದಯಸೇ । ಹವಂ ॥ ೫ ॥

॥ ಭಾಷ್ಯಂ ॥

ನೋऽಸ್ಮಾಕಂ ಯಜಮಾನಾನಾಂ ಸಂಬಂಧಿನಿ ಸ್ವಧ್ವರೇ ಶೋಭನಯಜ್ಞೇ ಸೋಮೇ ಸೋಮಪಾನೇ ನಿಮಿತ್ತಭೂತೇ ಸತಿ ಅತ್ಯೋ ನ ಸತತಗಮನಶೀಲೋऽಶ್ವ ಇವ ಇಯಾನಃ ಗಚ್ಛನ್ನಿಂದ್ರಃ ಆ ತೋಶತೇ ಅಸ್ಮಚ್ಛತ್ರೂನ್ ಹಿನಸ್ತಿ । ತೋಶತಿರ್ವಧಕರ್ಮಾ । ನಿತೋಶತೇ ನಿಬರ್ಹಯತಿ ಇತಿ ವಧಕರ್ಮಸು ಪಾಠಾತ್ । ಇಂದ್ರಂ ಪ್ರತ್ಯಕ್ಷೀಕೃತ್ಯ ಬ್ರೂತೇ । ಹೇ ಸ್ವದಾವನ್ ಆಸ್ವಾದನಕುಶಲೇಂದ್ರ ತೇ ತವ ಸ್ವಭೂತಾಃ ಗೂರ್ತಯಃ ಉದ್ಯತಾಃ ಸ್ತುತಯಃ ಯಂ ತ್ವಾಂ ಸ್ವದಂತಿ ಆತ್ಮಾನಮಾಸ್ವಾದಯಂತಿ ಸ ತ್ವಂ ಪೌರೇ ಪುರಜನಸಮೂಹೇ ಹವಮಾತ್ಮನಃ ಸ್ತುತಿಂ ಛಂದಯಸೇ ಕಾಮಯಸೇ । ಋತ್ವಿಗ್ಭಿಃ ಕ್ರಿಯಮಾಣಾಃ ಸ್ತುತೀಃ ಕರ್ತವ್ಯೇತ್ಯಭಿಲಷಸೀತ್ಯರ್ಥಃ ॥

। ಪ್ರತಿಪದಾರ್ಥ ।

**ನಃ**—ನಮ್ಮ । **ಸ್ವಧ್ವರೇ**—ಉತ್ತಮವಾದ ಯಜ್ಞಭೂಮಿಯಲ್ಲಿ । **ಸೋಮೇ**—ಸೋಮಪಾನದ ನಿಮಿತ್ತವಾಗಿ । **ಅತ್ಯಃ ನ**—ಉತ್ತಮವಾದ ಅಶ್ವದಂತೆ । **ಇಯಾನಃ**—ಸಂಚರಿಸುವ ಇಂದ್ರನು । **ಆ ತೋಶತೇ**—ಶತ್ರುಗಳನ್ನು ಹಿಂಸಿಸಿ ನಾಶಪಡಿಸುತ್ತಾನೆ । **ಸ್ವದಾವನ್**—ಆಸ್ವಾದನಕುಶಲನಾದ ಎಲೈ ಇಂದ್ರನೇ । **ಯಂ**—ಯಾವ ನಿನ್ನನ್ನು । **ತೇ**—ನಿನ್ನನ್ನುದ್ದೇಶಿಸಿದ । **ಗೂರ್ತಯಃ**—ಸ್ತುತಿಗಳು । **ಸ್ವದಂತಿ**—ತೃಪ್ತಿಗೊಳಿಸುವುವೋ ಅಂತಹ ನೀನು । **ಪೌರೇ**—ಋತ್ವಿಗಾದಿ ಪುರಜನರ ನಡುವೆ । **ಹವಂ**—ಸ್ತುತಿರೂಪವಾದ ಪ್ರಾರ್ಥನೆಯನ್ನು । **ಛಂದಯಸೇ**—ಅಪೇಕ್ಷಿಸುತ್ತೀಯೆ.

॥ ಭಾವಾರ್ಥ ॥

ನಮ್ಮ ಉತ್ತಮವಾದ ಯಜ್ಞಭೂಮಿಯಲ್ಲಿ ಸೋಮಪಾನದ ನಿಮಿತ್ತವಾಗಿ ಉತ್ತಮವಾದ ಅಶ್ವದಂತೆ ಸಂಚರಿಸುವ ಇಂದ್ರನು ಶತ್ರುಗಳನ್ನು ಹಿಂಸಿಸಿ ನಾಶಪಡಿಸುತ್ತಾನೆ. ಆಸ್ವಾದನಕುಶಲನಾದ ಎಲೈ ಇಂದ್ರನೇ, ನಿನ್ನನ್ನು ಉದ್ದೇಶಿಸಿದ ಸ್ತುತಿಗಳು ಯಾವ ನಿನ್ನನ್ನು ತೃಪ್ತಿಗೊಳಿಸುವುವೋ ಅಂತಹ ನೀನು ಋತ್ವಿಗಾದಿ ಪುರಜನರ ನಡುವೆ ಸ್ತುತಿರೂಪವಾದ ಪ್ರಾರ್ಥನೆಯನ್ನು ಅಪೇಕ್ಷಿಸುತ್ತೀಯೆ.

## English Translation.

Indra being invoked to our good rite is going like a horse; relishing Indra, your worshippers are sweetening this Soma. Honour invocation of the Sons of Puru.

॥ ಸಂಹಿತಾಪಾಠಃ ॥

ಪ್ರ ವೀರಮುಗ್ರಂ ವಿವಿಚಿಂ ಧನಸ್ಪೃತಂ ವಿಭೂತಿಂ ರಾಧಸೋ ಮಹಃ ।
ಉದ್ರೀವ ವಜ್ರಿನ್ನವತೋ ವಸುತ್ವನಾ ಸದಾ ಪೀಪೇಥ ದಾಶುಷೇ ॥ ೬ ॥

॥ ಪದಪಾಠಃ ॥

ಪ್ರ । ವೀರಂ । ಉಗ್ರಂ । ವಿವಿಚಿಂ । ಧನಽಸ್ಪೃತಂ । ವಿಽಭೂತಿಂ । ರಾಧಸಃ । ಮಹಃ ।
ಉದ್ರೀಽಇವ । ವಜ್ರಿನ್ । ಅವತಃ । ವಸುಽತ್ವನಾ । ಸದಾ । ಪೀಪೇಥ । ದಾಶುಷೇ ॥ ೬ ॥

॥ ಭಾಷ್ಯಂ ॥

ಹೇ ಇಂದ್ರ ವೀರಂ ವಿಶೇಷೇಣ ಶತ್ರೂಣಾಂ ಪ್ರೇರಯಿತಾರಂ ಮಹಃ ಮಹತ್ ರಾಧಸಃ ರಾಧೋ ಧನಂ । ಕರ್ಮಣಿ ಷಷ್ಠೀ । ಪ್ರ ಪ್ರಾರ್ಥಯೇ ಯಾಚಾಮಿ । ಉಪಸರ್ಗವಶಾದ್ಯೋಗ್ಯಕ್ರಿಯಾಧ್ಯಾಹಾರಃ । ಕೀದೃಶಂ ತ್ವಾಂ । ಉಗ್ರಮುದ್ಗೂರ್ಣಬಲಂ ವಿವಿಚಿಂ ಪುಣ್ಯಾಪುಣ್ಯಯೋರ್ವಿವೇಕ್ತಾರಂ ಧನಸ್ಪೃತಂ ಧನದಾತಾರಂ ವಿಭೂತಿಂ ವಿವಿಧೈಶ್ವರ್ಯೋಪೇತಾನ್ ( ? ಪೇತಂ) ಯತಃ ಹೇ ವಜ್ರಿನ್ ವಜ್ರವನ್ನಿಂದ್ರ ತ್ವಂ ದಾಶುಷೇ ಹವಿಷಾಂ ದಾತಾರಂ । ಕರ್ಮಣಿ ಚತುರ್ಥೀ । ಸದಾ ಸರ್ವದಾ ವಸುತ್ವನಾ ಧನದಾನೇನ ಪೀಪೇಥ ಅಪ್ಯಾಯಯಸಿ । ವರ್ಧಯಸೀತ್ಯರ್ಥಃ । ಕ ಇವ । ಉದ್ರೀವ ಅವತಃ ಉದಕವಾನ್ ಕೂಪ ಇವ । ಸ ಯಥಾ ಉದಕದಾನೇನ ಜಗದಾಪ್ಯಾಯಯತಿ ತದ್ವತ್ ॥

॥ ಪ್ರತಿಪದಾರ್ಥ ॥

**ವೀರಂ**— ಪರಾಕ್ರಮಿಯೂ । **ಉಗ್ರಂ**— ಅತ್ಯಧಿಕವಾದ ಬಲವುಳ್ಳವನೂ । **ವಿವಿಚಿಂ**— ಪುಣ್ಯಾಪುಣ್ಯಗಳ ವ್ಯತ್ಯಾಸವನ್ನರಿತವನೂ । **ಧನಸ್ಪೃತಂ**— ಧನದಾತೃವೂ । **ವಿಭೂತಿಂ**— ಐಶ್ವರ್ಯೋಪೇತನೂ ಆದ

ಇಂದ್ರನಿಂದ | **ಮಹಃ**—ಮಹತ್ತಾದ | **ರಾಧಸಃ**—ಧನವನ್ನು | **ಪ್ರ**—ಯಾಚಿಸುತ್ತೇನೆ | **ವಜ್ರಿನ್**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ | (ತ್ವಂ—ನೀನು) | **ಅವತಃ**—ಋಗ್ಮಿಯು | **ಉದ್ರೀ ಇವ**—ಉದಕವನ್ನು ಪ್ರವಹಿಸುವಂತೆ ಮಾಡುವ ಹಾಗೆ | **ದಾಶುಷೇ**—ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ | **ಸದಾ**—ಯಾವಾಗಲೂ | **ವಸುತ್ವನಾ**—ಧನದಾನದಿಂದ | **ಪೀಪೇಥ**—ತೃಪ್ತಿಯನ್ನುಂಟುಮಾಡುತ್ತೀಯೆ.

॥ ಭಾವಾರ್ಥ ॥

ಪರಾಕ್ರಮಿಯೂ, ಅತ್ಯಧಿಕವಾದ ಬಲವುಳ್ಳವನೂ, ಪುಣ್ಯಪಾಪಗಳ ವ್ಯತ್ಯಾಸವನ್ನರಿತವನೂ, ಧನದಾತೃವೂ, ಐಶ್ವರ್ಯೋಪೇತನೂ ಆದ ಇಂದ್ರನಿಂದ ಮಹತ್ತಾದ ಧನವನ್ನು ಯಾಚಿಸುತ್ತೇನೆ. ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಋಗ್ಮಿಯು ಉದಕವನ್ನು ಪ್ರವಹಿಸುವಂತೆ ಮಾಡಿ ಜನರಿಗೆ ತೃಪ್ತಿಯನ್ನು ಕೊಡುವಂತೆ, ನೀನು ಧನಪ್ರದಾನದಿಂದ ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಯಾವಾಗಲೂ ತೃಪ್ತಿಯನ್ನುಂಟುಮಾಡುತ್ತೀಯೆ.

## English Translation

We worship Indra, hero, ferocious, speedy, pleasing by gifts of wealth and having abundance of Vibhuti, wielder of thunder-bolt, like a well do you with spreading wealth drink Soma like water for the wel-being of your worshipper.

। ಸಂಹಿತಾಪಾಠಃ ।

ಯದ್ಧ ನೂನಂ ಪರಾವತಿ ಯದ್ವಾ ಪೃಥಿವ್ಯಾಂ ದಿವಿ ।
ಯುಜಾನ ಇಂದ್ರ ಹರಿಭಿರ್ಮಹೇಮತ ಋಷ್ವ ಋಷ್ವೇಭಿರಾ ಗಹಿ ॥ ೭ ॥

। ಪದಪಾಠಃ ।

ಯತ್ । ಹ । ನೂನಂ । ಪರಾऽವತಿ । ಯತ್ । ವಾ । ಪೃಥಿವ್ಯಾಂ । ದಿವಿ ।
ಯುಜಾನಃ । ಇಂದ್ರ । ಹರಿऽಭಿಃ । ಮಹೇऽಮತೇ । ಋಷ್ವಃ । ಋಷ್ವೇಭಿಃ । ಆ । ಗಹಿ ॥ ೭ ॥

। ಭಾಷ್ಯಂ ।

**ಹೇ ಮಹೇಮತೇ ಪೂಜಾಸಕ್ತಬುದ್ಧೇ ಇಂದ್ರ ಯದ್ಧ ಯತ್ರ ಕ್ವಚಿತ್ ಪರಾವತಿ ದೂರದೇಶೇ ನೂನಂ ನಿಶ್ಚಿತಂ ವರ್ತಸೇ । ಯದ್ವಾ ಯತ್ರ ವಾ ಪೃಥಿವ್ಯಾಂ ಭುವಿ ದಿವಿ ದ್ಯುಲೋಕೇ ವಾ ವರ್ತಸೇ । ಅಸ್ಮಾತ್ ಸ್ಥಾನವಿಶೇಷಾತ್ ಋಷ್ವೈಃ ಮಹದ್ಭಿಃ ಹರಿಭಿಃ ಏತತ್ಸಂಜ್ಞಕೈರಶ್ವೈಃ ರಥಂ ಯುಜಾನಃ ಯುಕ್ತಂ ಕುರ್ವಾಣಃ ಋಷ್ವಃ ಮಹಾಂಸ್ತ್ವಮಾ ಗಹಿ ಆಗಚ್ಛಾಸ್ಮದ್ಯಜ್ಞಂ ॥**

॥ ಪ್ರತಿಪದಾರ್ಥ ॥

**ಮಹೇಮತೇ**—ಅತ್ಯಂತ ಪೂಜ್ಯನಾದ । **ಇಂದ್ರ**—ಎಲೈ ಇಂದ್ರನೇ । **ನೂನಂ**—ಈಗ । **ಯದ್ಧ**—ಒಂದು ವೇಳೆ । **ಪರಾವತಿ**—ಅತ್ಯಂತ ದೂರಪ್ರದೇಶವಾದ । **ದಿವಿ**—ದ್ಯುಲೋಕದಲ್ಲಿದ್ದರೂ । **ಯದ್ವಾ**—ಅಥವಾ । **ಪೃಥಿವ್ಯಾಂ**—ಪೃಥ್ವಿಯ ಮೇಲಿದ್ದರೂ (ಆ ಪ್ರದೇಶದಿಂದ) । **ಋಷ್ವಃ**—ಪೂಜ್ಯನಾದ ನೀನು । **ಋಷ್ವೇಭಿಃ**—ಮಹತ್ಸ್ವರೂಪವುಳ್ಳ । **ಹರಿಭಿಃ**—ನಿನ್ನ ಅಶ್ವಗಳೊಡನೆ । **ಯುಜಾನಃ**—ಕೂಡಿಕೊಂಡು । **ಆ ಗಹಿ**—ನಮ್ಮ ಯಜ್ಞಕ್ಕೆ ದಯಮಾಡು.

॥ ಭಾವಾರ್ಥ ॥

ಅತ್ಯಂತ ಪೂಜ್ಯನಾದ ಎಲೈ ಇಂದ್ರನೇ, ಒಂದು ವೇಳೆ ನೀನು ಈ ಕಾಲದಲ್ಲಿ ಅತ್ಯಂತ ದೂರಪ್ರದೇಶವಾದ ದ್ಯುಲೋಕದಲ್ಲಿದ್ದರೂ, ಅಥವಾ ಪೃಥ್ವಿಯ ಮೇಲಿದ್ದರೂ ಆ ಪ್ರದೇಶದಿಂದ ಪೂಜ್ಯನಾದ ನೀನು ಮಹತ್ಸ್ವರೂಪವುಳ್ಳ ನಿನ್ನ ಅಶ್ವಗಳೊಡನೆ ಕೂಡಿಕೊಂಡು ನಮ್ಮ ಯಜ್ಞಕ್ಕೆ ದಯಮಾಡು.

English Translation.

Loving, noble Indra whether you be away or in this earth or in the heaven come harnessing the loving horses, in your chariot.

॥ ಸಂಹಿತಾಪಾಠಃ ॥

ರಥಿರಾಸೋ ಹರಯೋ ಯೇ ತೇ ಅಸ್ರಿಧ ಓಜೋ ವಾತಸ್ಯ ಪಿಪ್ರತಿ ।
ಯೇಭಿರ್ನಿ ದಸ್ಯುಂ ಮನುಷೋ ನಿಘೋಷಯೋ ಯೇಭಿಃ ಸ್ವಃ ಪರೀಯಸೇ ॥ ೮ ॥

॥ ಪದಪಾಠಃ ॥

ರಥಿರಾಸಃ । ಹರಯಃ । ಯೇ । ತೇ । ಅಸ್ರಿಧಃ । ಓಜಃ । ವಾತಸ್ಯ । ಪಿಪ್ರತಿ ।
ಯೇಭಿಃ । ನಿ । ದಸ್ಯುಂ । ಮನುಷಃ । ನಿಽಘೋಷಯಃ । ಯೇಭಿಃ । ಸ್ವಃ । ಪರಿಽಈಯಸೇ ॥

॥ ಭಾಷ್ಯಂ ॥

ಯೇ ಹರಯೋಽಶ್ವಾಃ ತೇ ತವ ಸ್ವಭೂತಾಃ ರಥಿರಾಸಃ ರಥಾರ್ಹಾಃ ಅಸ್ರಿಧಃ । ಸ್ರಿಧೋ ಹಿಂಸಕಾಃ ಶತ್ರವಃ । ತದ್ರಹಿತಾಃ ಸಂತಿ । ಯೇಭಿರ್ಯೈರಶ್ವೈಃ ಮನುಷಃ ಮನುಷ್ಯಸ್ಯ ಯಜಮಾನಸ್ಯ ಸಂಬಂಧಿನಂ ದಸ್ಯುಮುಪಕ್ಷಪಯಿತಾರಂ ಶತ್ರುಂ ನಿಃ ನಿರಂತರಂ ನಿಘೋಷಯಃ ನಿತರಾಮಾಕ್ರೋಶಯಸಿ । ಅಶ್ವಶಫಪ್ರಹಾರೈಸ್ತಂ ಚೂರ್ಣಯನ್ ವಿಶಬ್ದಿತಂ ಕರೋಷೀತ್ಯರ್ಥಃ । ಕಿಂಚ ಯೇಭಿರ್ಯೈ-

ರಶ್ವೈಃ ಸ್ವಃ ಸ್ವರ್ಲೋಕಂ ಪರೀಯಸೇ ಪರಿತೋ ಗಚ್ಛಸಿ । ತೇ ಹರಯೋ ವಾತಸ್ಯ ವಾಯೋಃ ಓಜಃ ಬಲಂ ಪಿಪ್ರತಿ ಪೂರಯಂತಿ । ವಾಯೋಃ ಸಾಮರ್ಥ್ಯಮಾತ್ಮನಿ ಸಂಪಾದಯಂತೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ರಥಿರಾಸಃ**— ಉತ್ತಮವಾದ ರಥಾರ್ಹವಾದ । **ಯೇ**— ಯಾವ । **ಹರಯಃ**— ನಿನ್ನ ಅಶ್ವಗಳು । **ಅಸ್ರಿಧಃ**— ಹಿಂಸಕವಾದ ಶತ್ರುರಹಿತವಾಗಿರುವುವೋ । **ಯೇಭಿಃ**— ಯಾವ ಅಶ್ವಗಳ ಸಹಾಯದಿಂದ । **ಮನುಷಃ**— ಯಜ್ಞಕರ್ತನ । **ದಸ್ಯುಂ**— ಹಿಂಸಕನಾದ ಶತ್ರುವನ್ನು । **ನಿ**— ಸರ್ವದಾ । **ನಿ ಘೋಷಯಃ**— ನಾಶಮಾಡುವ ಶಬ್ದವನ್ನು ಮಾಡಿಸುವೆಯೋ । **ಯೇಭಿಃ**— ಯಾವ ಅಶ್ವಗಳೊಡನೆ । **ಸ್ವಃ**— ಸ್ವರ್ಗವನ್ನು । **ಪರಿ ಈಯಸೇ**— ಸರ್ವತ್ರ ಸಂಚರಿಸುವೆಯೋ । **ತೇ**— ಆ ಅಶ್ವಗಳು । **ವಾತಸ್ಯ**— ವಾಯುವಿನ । **ಓಜಃ**— ಬಲವನ್ನು । **ಪಿಪ್ರತಿ**— ತುಂಬಿಕೊಳ್ಳುತ್ತವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಶ್ರೇಷ್ಠವಾದ ರಥಕ್ಕೆ ಯೋಗ್ಯವಾದ ಯಾವ ನಿನ್ನ ಅಶ್ವಗಳು ಹಿಂಸಕವಾದ ಶತ್ರುರಹಿತವಾಗಿರುವುವೋ, ಯಾವ ಅಶ್ವಗಳ ಸಹಾಯದಿಂದ ಯಜ್ಞಕರ್ತನಿಗೆ ಹಿಂಸಕನಾದ ಶತ್ರುವನ್ನು ಸರ್ವದಾ ನಾಶಪಡಿಸುವ ಶಬ್ದವನ್ನು ಮಾಡಿಸುವೆಯೋ, ಯಾವ ಅಶ್ವಗಳೊಡನೆ ಸ್ವರ್ಗವನ್ನು ಸರ್ವತ್ರ ಸಂಚರಿಸುವೆಯೋ ಆ ಅಶ್ವಗಳು ವಾಯುವಿನ ಬಲವನ್ನು ತುಂಬಿಕೊಳ್ಳುತ್ತವೆ.

## English Translation.

Your horses carrying chariot are envyless and competing the speed of wind. To their help you have killed the Dasyus, you have made them famous and all things known.

॥ ಸಂಹಿತಾಪಾಠಃ ॥

ಏತಾವತಸ್ತೇ ವಸೋ ವಿದ್ಯಾಮ ಶೂರ ನವ್ಯಸಃ ।
ಯಥಾ ಪ್ರಾವ ಏತಶಂ ಕೃತ್ವ್ಯೇ ಧನೇ ಯಥಾ ವಶಂ ದಶವ್ರಜೇ ॥ ೯ ॥

॥ ಪದಪಾಠಃ ॥

**ಏತಾವತಃ । ತೇ । ವಸೋ ಇತಿ । ವಿದ್ಯಾಮ । ಶೂರ । ನವ್ಯಸಃ ।**

**ಯಥಾ । ಪ್ರ । ಅವಃ । ಏತಶಂ । ಕೃತ್ವ್ಯೇ । ಧನೇ । ಯಥಾ । ವಶಂ । ದಶಽವ್ರಜೇ ॥ ೯ ॥**

॥ ಭಾಷ್ಯಂ ॥

ಹೇ ವಸೋ ವಾಸಯಿತಃ ಹೇ ಶೂರ ವಿಕ್ರಾಂತೇಂದ್ರ ಯಥಾ ಯೇನ ಪ್ರಕಾರೇಣ ಕೃತ್ವ್ಯೇ ಕರ್ತವ್ಯೇ ಧನೇ ನಿಮಿತ್ತೇ ಸತಿ ಏತಶಂ ಏತನ್ನಾಮಾನಮೃಷಿಂ ಪ್ರಾವಃ ಪ್ರಕರ್ಷೇಣ ರಕ್ಷಿತವಾನಸಿ । ಕಿಂಚ ಯಥಾ ಯೇನ ಪ್ರಕಾರೇಣ ದಶವ್ರಜೇ ದಶಸಂಖ್ಯಾಕಶತ್ರುಸಮೂಹೇ ವಶಂ ಏತತ್ಸಂಜ್ಞಕಮೃಷಿಂ ಪ್ರಾವಃ ಪ್ರಕರ್ಷೇಣ ರಕ್ಷಿತವಾನಸಿ । ಏತಾವತಃ ಏತಾವತ್ಪರಾಕ್ರಮೋಪೇತಂ ತೇ ತ್ವಾಂ ನವ್ಯಸಃ ಸ್ತುತ್ಯಂ ವಿದ್ಯಾಮ ಜಾನೀಮೋ ವಯಂ । ಸರ್ವತ್ರ ಕರ್ಮಣಿ ಷಷ್ಠೀ ॥

॥ ಪ್ರತಿಪದಾರ್ಥ ॥

**ವಸೋ**—ವಸತಿದಾಯಕನೂ । **ಶೂರ**—ಪರಾಕ್ರಮಿಯೂ ಆದ ಎಲೈ ಇಂದ್ರನೇ । **ಯಥಾ**—ಯಾವ ಪ್ರಕಾರವಾಗಿ । **ಕೃತ್ವ್ಯೇ**—ಕರ್ತವ್ಯಸಾಧನವಾದ । **ಧನೇ**—ಧನನಿಮಿತ್ತವಾಗಿ । **ಏತಶಂ**—ಏತಶನೆಂಬ ಋಷಿಯನ್ನು । **ಪ್ರಾವಃ**—ರಕ್ಷಿಸಿದೆಯೋ । **ಯಥಾ**—ಯಾವ ಪ್ರಕಾರವಾಗಿ । **ದಶವ್ರಜೇ**—ದಶಸಂಖ್ಯಾಕವಾದ ಶತ್ರುಸಮೂಹದ ನಡುವೆ । **ವಶಂ**—ವಶನೆಂಬ ಋಷಿಯನ್ನು ರಕ್ಷಿಸಿದೆಯೋ । **ಏತಾವತಃ**—ಅಂತಹ ಮಹತ್ವವುಳ್ಳವನೂ । **ನವ್ಯಸಃ**—ಪೂಜ್ಯನೂ ಆದ । **ತೇ**- ನಿನ್ನ ಮಹತ್ವವನ್ನು । **ವಿದ್ಯಾಮ**—ನಾವು ಅರಿಯುತ್ತೇವೆ.

॥ ಭಾವಾರ್ಥ ॥

ವಸತಿದಾಯಕನೂ, ಪರಾಕ್ರಮಿಯೂ ಆದ ಎಲೈ ಇಂದ್ರನೇ, ಯಾವ ಪ್ರಕಾರವಾಗಿ ಕರ್ತವ್ಯಸಾಧನವಾದ ಧನನಿಮಿತ್ತದಿಂದ ನೀನು ಏತಶನೆಂಬ ಋಷಿಯನ್ನು ರಕ್ಷಿಸಿದೆಯೋ, ಯಾವ ಪ್ರಕಾರವಾಗಿ ದಶಸಂಖ್ಯಾಕವಾದ ಶತ್ರುಸಮೂಹದ ನಡುವೆ ವಶನೆಂಬ ಋಷಿಯನ್ನು ರಕ್ಷಿಸಿದೆಯೋ ಅಂತಹ ಮಹತ್ವವುಳ್ಳವನೂ, ಪೂಜ್ಯನೂ ಆದ ನಿನ್ನ ಮಹತ್ವವನ್ನು ನಾವು ಅರಿಯುತ್ತೇವೆ.

## English Translation.

Hero, keeper of dwellings, Indra we know of so much your wealth for which you did protect Yetasha and Vashaya with Dasavraja.

। ಸಂಹಿತಾಪಾಠಃ ।

ಯಥಾ ಕೃಣ್ವೇ ಮಘವನ್ಮೇಧೇ ಅಧ್ವರೇ ದೀರ್ಘನೀಥೇ ದಮೂನಸಿ ।
ಯಥಾ ಗೋಶರ್ಯೇ ಅಸಿಷಾಸೋ ಅದ್ರಿವೋ ಮಯಿ ಗೋತ್ರಂ ಹರಿಶ್ರಿಯಂ ॥ ೧೦ ॥

|| ಪದಪಾಠಃ ||

ಯಥಾ | ಕಣ್ವೇ | ಮಘಽವನ್ | ಮೇಧೇ | ಅಧ್ವರೇ | ದೀರ್ಘಽನೀಥೇ | ದಮೂನಸಿ |

ಯಥಾ | ಗೋಽಶರ್ಯೇ | ಅಸಿಸಾಸಃ | ಅದ್ರಿಽವಃ | ಮಯಿ | ಗೋತ್ರಂ | ಹರಿಽಶ್ರಿಯಂ || ೧೦ ||

|| ಭಾಷ್ಯಂ ||

ಹೇ ಅದ್ರಿವಃ ವಜ್ರಿವನ್ (?) ಇಂದ್ರ ಮೇಧೇ ಯಜ್ಞೇ ಯಥಾ ಯೇನ ಪ್ರಕಾರೇಣ ಕಣ್ವೇ ಏತನ್ನಾಮಕೇ ಋಷೌ ನಿಮಿತ್ತೇ ಹರಿಶ್ರಿಯಂ । ಹರಿಃ ಜಗತ್ತಾಪಹರ್ತ್ರೀ ಹರಿತವರ್ಣಾ ವಾ ಶ್ರೀಃ ಜಲಲಕ್ಷ್ಮೀರ್ಯಸ್ಯ ತಾದೃಶಂ । ಗೋತ್ರಂ ಮೇಘಂ ಅಸಿಸಾಸಃ ದತ್ತವಾನಸಿ । ಈದೃಶೇ ಕಣ್ವೇ ಅಧ್ವರೇ। ಧ್ವರತಿರ್ಹಿಂಸಾಕರ್ಮಾ । ತದ್ರಹಿತೇ ದೀರ್ಘನೀಥೇ ದೀರ್ಘಂ ಸ್ವರ್ಲೋಕಪರ್ಯಂತಂ ನೀಥಂ ಹವಿಃ ಪ್ರಾಪಣಂ ಯಸ್ಯ ತಥಾಭೂತೇ । ಪುನಃ ಕೀದೃಶೇ । ದಮೂನಸಿ ದಾನಮನಸಿ ಉದಾರೇ । ಯಥಾ ಚ ಗೋಶರ್ಯೇ ಏತನ್ನಾಮಕೇ ಋಷೌ ಮೇಘಂ ದತ್ತವಾನಸಿ ತಥಾ ಮಯಿ ಪುಷ್ಟಿಗೌ ಹರಿಶ್ರಿಯಂ ಗೋತ್ರಂ ದೇಹಿ । ಯಥಾ ತಯೋರನುಗ್ರಹದೃಷ್ಟ್ಯಾ ಮೇಘವೃಷ್ಟಿಂ ಕೃತವಾನಸಿ ತಥಾ ಮಯ್ಯಪಿ ಕೃಪಾದೃಷ್ಟ್ಯಾ ಅಭಿಲಷಿತವೃಷ್ಟಿಂ ಕುರ್ವಿತ್ಯಭಿಪ್ರಾಯಃ ||

|| ಪ್ರತಿಪದಾರ್ಥ ||

**ಅದ್ರಿವಃ**—ವಜ್ರಾಯುಧಧಾರಿಯಾದ | **ಮಘವನ್**—ಎಲೈ ಇಂದ್ರನೇ | **ದೀರ್ಘನೀಥೇ**—ಸ್ವರ್ಗ ಪರ್ಯಂತ ಹವಿಸ್ಸನ್ನು ವಹಿಸುವುದೂ | **ಅಧ್ವರೇ**—ಹಿಂಸಾರಹಿತವಾದುದೂ ಆದ | **ಮೇಧೇ**—ಯಜ್ಞದಲ್ಲಿ | **ದಮೂನಸಿ**—ಉದಾರಿಯಾದ | **ಕಣ್ವೇ**—ಕಣ್ವನಿಗೋಸ್ಕರ | **ಯಥಾ**—ಯಾವ ರೀತಿ | **ಹರಿಶ್ರಿಯಂ**—ತಾಪಹಾರಿಯಾದ ಉದಕಸಂಪತ್ತಿನಿಂದ ಕೂಡಿದ | **ಗೋತ್ರಂ**—ಮೇಘವನ್ನು | **ಅಸಿಷಾಸಃ**—ಒದಗಿಸಿದೆಯೋ | **ಯಥಾ**—ಯಾವ ರೀತಿ | **ಗೋಶರ್ಯೇ**—ಗೋಶರ್ಯನಿಗೂ ಒದಗಿಸಿದೆಯೋ (ಅದೇ ರೀತಿ) | **ಮಯಿ**—ನನಗಾಗಿಯೂ ಒದಗಿಸು.

|| ಭಾವಾರ್ಥ ||

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಸ್ವರ್ಗಪರ್ಯಂತ ಹವಿಸ್ಸನ್ನು ವಹಿಸುವುದೂ, ಹಿಂಸಾರಹಿತ ವಾದುದೂ ಆದ ಯಜ್ಞದಲ್ಲಿ ಉದಾರಿಯಾದ ಕಣ್ವನಿಗೋಸ್ಕರ ಯಾವ ರೀತಿ ತಾಪಹಾರಿಯಾದ ಉದಕಸಂಪತ್ತಿನಿಂದ ಕೂಡಿದ ಮೇಘವನ್ನು ಒದಗಿಸಿ ವೃಷ್ಟಿಯನ್ನು ಸುರಿಸಿದೆಯೋ, ಯಾವ ರೀತಿ ಗೋಶರ್ಯನಿಗೂ ಒದಗಿಸಿದೆಯೋ, ಅದೇ ರೀತಿ ನನಗೂ ಒದಗಿಸಿ ತೃಪ್ತಿಯನ್ನುಂಟುಮಾಡು.

## English Translation.

Maghavan wielder of thunder-bolt do protect us as you did protect in secret rite, Kanwa, Gosharya and Dirghanith.



# ಐವತ್ತೊಂದನೆಯ ಸೂಕ್ತವು

(ವಾಲಖಿಲ್ಯಸೂಕ್ತ—೩)

। ಭಾಷ್ಯಂ ॥

**ಯಥಾ ಮನೌ ಸಾಂವರಣೌ ಇತಿ ದಶರ್ಚಂ ತೃತೀಯಂ ಸೂಕ್ತಂ ಕಾಣ್ವಸ್ಯ ಶ್ರುಷ್ಟಿಗೋರಾರ್ಷಮೈಂದ್ರಂ । ಅನುಕ್ರಾಂತಂ ಚ । ಯಥಾ ಮನೌ ಶ್ರುಷ್ಟಿಗುಃ ಇತಿ । ಅಯುಜಾಂ ಬೃಹತೀ ಛಂದಃ । ಯುಜಾಂ ಸತೋಬೃಹತೀ ಛಂದಃ । ವಿನಿಯೋಗಃ ಸೂತ್ರಾದವಗಂತವ್ಯಃ ॥**

ಅನುವಾದವು—**ಯಥಾ ಮನೌ ಸಾಂವರಣೌ** ಎಂಬ ಈ ಸೂಕ್ತವು ವಾಲಖಿಲ್ಯಸೂಕ್ತಗಳಲ್ಲಿ ಮೂರನೆಯ ಸೂಕ್ತವು.* ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಶ್ರುಷ್ಟಿಗುಃ ಕಾಣ್ವಃ** ಎಂಬುವನು ಋಷಿಯು; ಇಂದ್ರನು ದೇವತೆಯು. ಈ ಸೂಕ್ತದ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಸುವು; ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಯಥಾ ಮನೌ ಶ್ರುಷ್ಟಿಗುಃ** ಎಂದು ಹೇಳಿರುವುದು. ವಿನಿಯೋಗವನ್ನು ಸೂತ್ರದಿಂದ ತಿಳಿದುಕೊಳ್ಳಬೇಕು.

## ಸೂಕ್ತ—೫೧

(ವಾಲಖಿಲ್ಯಸೂಕ್ತ—೩)

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೫೧ ॥
ಅಷ್ಟಕ—೬ ॥ ಅಧ್ಯಾಯ—೪ ॥ ವರ್ಗ—೧೮, ೧೯ ॥
॥ ಸೂಕ್ತವಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಶ್ರುಷ್ಟಿಗುಃ ಕಾಣ್ವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಪ್ರಾಗಾಥಂ (ಅಯುಜಃ ಬೃಹತ್ಯಃ । ಯುಜಃ ಸತೋಬೃಹತ್ಯಃ) ॥

॥ ಸಂಹಿತಾಪಾಠಃ ॥

ಯಥಾ ಮನೌ ಸಾಂವರಣೌ ಸೋಮಮಿಂದ್ರಾಪಿಬಃ ಸುತಂ ।
ನೀಪಾತಿಥೌ ಮಘವನ್ಮೇಧ್ಯಾತಿಥೌ ಪುಷ್ಟಿಗೌ ಶ್ರುಷ್ಟಿಗೌ ಸಚಾ ॥ ೧ ॥

॥ ಪದಪಾಠಃ ॥

**ಯಥಾ । ಮನೌ । ಸಾಂऽವರಣೌ । ಸೋಮಂ । ಇಂದ್ರ । ಅಪಿಬಃ । ಸುತಂ ।**

**ನೀಪऽಅತಿಥೌ । ಮಘऽವನ್ । ಮೇಧ್ಯऽಅತಿಥೌ । ಪುಷ್ಟಿऽಗೌ । ಶ್ರುಷ್ಟಿऽಗೌ । ಸಚಾ ॥ ೧ ॥**

|| ಭಾಷ್ಯಂ ||

ಹೇ ಇಂದ್ರ ಯಥಾ ಯೇನ ಪ್ರಕಾರೇಣ ಸಾಂವರಣೌ ಸಂವರಣಸ್ಯ ಪುತ್ರೇ ಮನೌ ವರ್ತಮಾನಂ ಸುತಮಭಿಷುತಂ ಸೋಮಮಪಿಬಃ । ಪೀತವಾನಸಿ । ತಥಾ ಹೇ ಮಘವನ್ ಧನವನ್ನಿಂದ್ರ ನೀಪಾತಿಥೌ । ನಯತಿ ಹವಿರ್ದೇವಾನ್ ಪಾತಿ ರಕ್ಷತಿ ಯಜಮಾನಂ ಚೇತಿ ನೀಪಃ । ತಾದೃಶೋಽತಿಥಿರ್ಯಸ್ಯ ತಸ್ಮಿನ್ । ಏತತ್ಸಂಜ್ಞಕೇ ಋಷೌ ಮೇಧ್ಯಾತಿಥೌ । ಮೇಧ್ಯಃ ಯಜ್ಞಾರ್ಹಃ ಅತಿಥಿರ್ಯಸ್ಯ ತಾದೃಶೇ ಏತನ್ನಾಮಕೇ ಋಷೌ ಪುಷ್ಟಿಗೌ । ಪುಷ್ಟಿಃ ಕುಟುಂಬಪೋಷಿಕಾ ಗೌರ್ಯಸ್ಯ ತಾದೃಶೇ ಋಷೌ । ಕ್ತಿಚ್‌ಕ್ತೌಚ ಸಂಜ್ಞಾಯಾಂ ಇತಿ ಪುಷಿಧಾತೋಃ ಕರ್ತರಿ ಕ್ತಿಚ್ । ಶ್ರುಷ್ಟಿಗೌ । ಶ್ರುಷ್ಟಿಃ ಶೀಘ್ರವ್ಯಾಪಿನೀ ಗೌರ್ಯಸ್ಯ ತಾದೃಶೇ ಮಯಿ ಚ । ಶ್ರುಷ್ಟೀತಿ ಕ್ಷಿಪ್ರನಾಮ ಆಶು ಅಷ್ಟಿ ಇತಿ ನಿರುಕ್ತಮತ್ರಾನುಸಂಧೇಯಂ । ಏತೇಷ್ವಸ್ಮಾಸು ವರ್ತಮಾನಮಭಿಷುತಂ ಸೋಮಂ ಸಚಾ ಸಹೈವ ಪಿಬೇತಿ ಶೇಷಃ । ಇಹ ಸಚಾಪದೇನ ಯುಗಪದನೇಕರೂಪಧಾರಣಶಕ್ತಿಃ ಸೂಚ್ಯತೇ । ಸಂಭವತಿ ಚ ಸಾ । ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಇತ್ಯಾದಿಶ್ರುತೇಃ ||

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ । **ಯಥಾ**—ಯಾವ ಪ್ರಕಾರವಾಗಿ । **ಸಾಂವರಣೌ**—ಸಂವರಣಪುತ್ರನಾದ । **ಮನೌ**—ಮನುವಿನಲ್ಲಿ । **ಸುತಂ**—ಹಿಂಡಿದ್ದ । **ಸೋಮಂ**—ಸೋಮವನ್ನು । **ಅಪಿಬಃ**—ಪಾನಮಾಡಿದೆಯೋ ಅದೇ ರೀತಿ । **ಮಘವನ್**—ಧನವಂತನಾದ ಎಲೈ ಇಂದ್ರನೇ । **ನೀಪಾತಿಥೌ**—ನಿಪಾತಿಥಿಯೆಂಬ ಋಷಿಯಲ್ಲಿಯೂ । **ಮೇಧ್ಯಾತಿಥೌ**—ಮೇಧ್ಯಾತಿಥಿಯೆಂಬ ಋಷಿಯಲ್ಲಿಯೂ । **ಪುಷ್ಟಿಗೌ**—ಪುಷ್ಟಿಗುವೆಂಬ ಋಷಿಯಲ್ಲಿಯೂ । **ಶ್ರುಷ್ಟಿಗೌ**—ಶ್ರುಷ್ಟಿಗುವೆಂಬ ಋಷಿಯಲ್ಲಿಯೂ । **ಸಚಾ**—ಒಟ್ಟಿಗೆ ಕೂಡಿಕೊಂಡು ಪಾನಮಾಡು.

। ಭಾವಾರ್ಥ ।

ಎಲೈ ಇಂದ್ರನೇ, ಯಾವ ಪ್ರಕಾರವಾಗಿ ಸಂವರಣಪುತ್ರನಾದ ಮನುವಿನಲ್ಲಿ ಹಿಂಡಿದ್ದ ಸೋಮವನ್ನು ನೀನು ಪಾನಮಾಡಿದೆಯೋ ಅದೇ ರೀತಿ ಧನವಂತನಾದ ಎಲೈ ಇಂದ್ರನೇ, ನೀಪಾತಿಥಿಯೆಂಬ ಋಷಿಯಲ್ಲಿಯೂ, ಮೇಧ್ಯಾತಿಥಿಯೆಂಬ ಋಷಿಯಲ್ಲಿಯೂ, ಪುಷ್ಟಿಗುವೆಂಬ ಋಷಿಯಲ್ಲಿಯೂ, ಶ್ರುಷ್ಟಿಗುವೆಂಬ ಋಷಿಯಲ್ಲಿಯೂ ಒಟ್ಟಿಗೆ ಕೂಡಿಕೊಂಡು ಪಾನಮಾಡು.

## English Translation.

Indra as you did drink Soma for the priest Samvanin, so drink for Medhatithi and Nipatithi, Pushtigu and Srushtigu.

|| ಸಂಹಿತಾಪಾಠಃ ||

ಪಾರ್ಷದ್ವಾಣಃ ಪ್ರಸ್ಕಣ್ವಂ ಸಮಸಾದಯಚ್ಛಯಾನಂ ಜಿವ್ರಿಮುದ್ಧಿತಂ ।
ಸಹಸ್ರಾಣ್ಯಸಿಷಾಸದ್ಗವಾಮೃಷಿಸ್ತ್ವೋತೋ ದಸ್ಯವೇ ವೃಕಃ ॥ ೨ ||

॥ ಪದಪಾಠಃ ॥

ಪಾರ್ಷದ್ವಾಣಃ । ಪ್ರಸ್ಕಣ್ವಂ । ಸಂ । ಅಸಾದಯತ್ । ಶಯಾನಂ । ಜಿವ್ರಿಂ । ಉದ್ಧಿತಂ ।

ಸಹಸ್ರಾಣಿ । ಅಸಿಸಾಸತ್ । ಗವಾಂ । ಋಷಿಃ । ತ್ವಾऽಊತಃ । ದಸ್ಯವೇ । ವೃಕಃ ॥ ೨ ॥

॥ ಭಾಷ್ಯಂ ॥

ಹೇ ಇಂದ್ರ ಪಾರ್ಷದ್ವಾಣಃ ಪುರುಷವಾಕ್ ಶ್ಲಿಭಶತ್ರುಃ (? ಕಶ್ಚಿಚ್ಛತ್ರುಃ) । ವಾಣ ಇತಿ ವಾಙ್ನಾಮ ವಾಣೀಚೀ ವಾಣಃ ಇತ ತನ್ನಾಮಸು ಪಾಠಾತ್ । ಶಯಾನಂ ಸ್ವಪಂತಂ ಪ್ರಸ್ಕಣ್ವಂ ಕಣ್ವಸ್ಯ ಪುತ್ರಂ ಯದಾ ಸಮಸಾದಯತ್ ಸಮ್ಯಗಪೀಡಯತ್ । ಕೀದೃಶಂ । ಜಿವ್ರಿಂ ಜರಾಜೀರ್ಣಂ ಉದ್ಧಿತಂ ಊರ್ಧ್ವದೇಶೇ ಸ್ಥಾಪಿತಂ ತದಾ ತ್ವೋತಃ ತ್ವಯಾ ಇಂದ್ರೇಣ ರಕ್ಷಿತಃ ಸ ಋಷಿಃ ಪ್ರಸ್ಕಣ್ವಃ ದಸ್ಯವೇ ಉಪಕ್ಷಪಯಿತುಃ ಶತ್ರೋಃ ವೃಕಃ ವಿಕರ್ತನಃ ಸನ್ ತದೀಯಾನಿ ಗವಾಂ ಸಹಸ್ರಾಣಿ ಅಸಿಸಾಸತ್ ಸಂಭಜತೇ ಸ್ಮ । ಇತ್ಥಂಪ್ರಭಾವಸ್ತ್ವಮಸಿ ತಸ್ಮಾತ್ತ್ವಾಂ ಸ್ತುಮ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪಾರ್ಷದ್ವಾಣಃ**— ಕ್ರೂರವಾಕ್ಕುಳ್ಳ ಶತ್ರುವು । **ಜಿವ್ರಿಂ**— ವೃದ್ಧನೂ । **ಉದ್ಧಿತಂ**— ಊರ್ಧ್ವಭಾಗದಲ್ಲಿ ಸ್ಥಿತನೂ । **ಶಯಾನಂ**— ನಿದ್ರೆಮಾಡುತ್ತಿದ್ದವನೂ ಆದ । **ಪ್ರಸ್ಕಣ್ವಂ**— ಕಣ್ವಪುತ್ರನಾದ ಪ್ರಸ್ಕಣ್ವನನ್ನು । **ಸಮಸಾದಯತ್**— ಪೂರ್ಣವಾಗಿ ಪೀಡಿಸಿದನು । **ತ್ವೋತಃ**— ಆ ಕಾಲದಲ್ಲಿ ನಿನ್ನಿಂದ ರಕ್ಷಿತನಾದ । **ಋಷಿಃ**— ಪ್ರಸ್ಕಣ್ವ ಋಷಿಯು । **ದಸ್ಯವೇ**— ಶತ್ರುವಿಗೆ । **ವೃಕಃ**— ನಾಶಕನಾಗಿದ್ದು । **ಸಹಸ್ರಾಣಿ**— ಸಹಸ್ರಸಂಖ್ಯಾಕವಾದ । **ಗವಾಂ**— ಗೋವುಗಳ ಸಮೂಹವನ್ನು । **ಅಸಿಷಾಸತ್**— ಶತ್ರುವಿನಿಂದ ಪಡೆದನು.

॥ ಭಾವಾರ್ಥ ॥

ಎಲೈ ಇಂದ್ರನೇ, ಕ್ರೂರವಾಕ್ಕುಳ್ಳ ಶತ್ರುವು ವೃದ್ಧನೂ, ಊರ್ಧ್ವಭಾಗದಲ್ಲಿ ಸ್ಥಿತನೂ, ನಿದ್ರೆಮಾಡುತ್ತಿದ್ದವನೂ ಆದ ಕಣ್ವಪುತ್ರನಾದ ಪ್ರಸ್ಕಣ್ವನನ್ನು ಪೂರ್ಣವಾಗಿ ಪೀಡಿಸಿದನು. ಆ ಕಾಲದಲ್ಲಿ ನಿನ್ನಿಂದ ರಕ್ಷಿತನಾದ ಪ್ರಸ್ಕಣ್ವ ಋಷಿಯು ಶತ್ರುವಿಗೆ ನಾಶಕನಾಗಿದ್ದು ಸಹಸ್ರಸಂಖ್ಯಾಕವಾದ ಗೋವುಗಳ ಸಮೂಹವನ್ನು ಶತ್ರುಸ್ಥಾನದಿಂದ ಪಡೆದನು.

## English Translation.

Old Parshardvan sat laying Prakasana up. The Rishi who was a terror to Dashyu protected thousand cows.

॥ ಸಂಹಿತಾಪಾಠಃ ॥

ಯ ಉಕ್ಥೇಭಿರ್ನ ವಿಂಧತೇ ಚಿಕಿದ್ಯ ಋಷಿಚೋದನಃ ।

ಇಂದ್ರಂ ತಮಚ್ಛಾ ವದ ನವ್ಯಸ್ಯಾ ಮತ್ಯರಿಷ್ಯಂತಂ ನ ಭೋಜಸೇ ॥ ೩ ॥

॥ ಪದಪಾಠಃ ॥

ಯಃ । ಉಕ್ಥೇಭಿಃ । ನ । ವಿಂಧತೇ । ಚಿಕಿತ್ । ಯಃ । ಋಷಿಽಚೋದನಃ ।

ಇಂದ್ರಂ । ತಂ । ಅಚ್ಛ । ವದ । ನವ್ಯಸಾ । ಮತೀ । ಅರಿಷ್ಯಂತಂ । ಭೋಜಸೇ ॥ ೩ ॥

॥ ಭಾಷ್ಯಂ ॥

ಋಷಿರಾತ್ಮಾನಂ ಬ್ರೂತೇ । ಹೇ ಶ್ರುಷ್ಟಿಗೋ ಯ ಇಂದ್ರಃ ನ ಸಂಪ್ರತಿ ಉಕ್ಥೇಭಿಃ ಉಕ್ಥೈಃ ಸ್ತೋತ್ರೈಃ ಸ್ತುತಃ ಸನ್ ಚಿಕಿತ್ ಸ್ತೋತುಃ ಜ್ಞಾನಂ ವಿಂಧತೇ ಪರಿಚರತಿ । ವಿಧತಿಃ ಪರಿಚರಣಕರ್ಮಾ । ಮತ್ಸ್ತವನೇ ತವ ಸಮ್ಯಕ್ ಜ್ಞಾನಮಸ್ತೀತ್ಯ (?ತ್ಯ) ಭಿನಂದತಿ । ಯಶ್ಚೇಂದ್ರಃ ಋಷಿಚೋದನಃ ಋಷೀಣಾಂ ಮಂತ್ರಾಣಾಂ ತದ್ದ್ರಷ್ಟ್ರೂಣಾಂ ವಾ ಚೋದನಃ ಪ್ರವರ್ತಕೋಽಸ್ತಿ ತಮಿಂದ್ರಂ ಪರಮೇಶ್ವರಂ ಅಚ್ಛಾಭಿಲಕ್ಷ್ಯ ನವ್ಯಸ್ಯಾ ನವತನಾ ( ? ನವತರಾಂ) ಮತೀ ಮತಿಂ ಸ್ತುತಿಂ ವದ ಬ್ರೂಹಿ । ತತ್ರ ದೃಷ್ಟಾಂತಃ । ಅರಿಷ್ಯಂತಂ ನ ಭೋಜಸೇ । ಯಥಾ ಕಶ್ಚಿದರಿಷ್ಯಂತಂ ಅಹಿಂಸಂತಂ ಸ್ವಾಮಿನಂ ಭೋಜಸೇ ಸ್ವಪಾಲನಾಯ ನವತರಾಂ ಸ್ತುತಿಂ ಬ್ರೂತೇ ತದ್ವತ್ ॥

॥ ಪ್ರತಿಪದಾರ್ಥ ॥

(ಎಲೈ ಋಷಿಯೇ) **ಯಃ**—ಯಾವ ಇಂದ್ರನು । **ನ**—ಈಗ । **ಉಕ್ಥೇಭಿಃ**—ಸ್ತುತಿಗಳಿಂದ ಪ್ರಶಂಸಿತನಾಗಿ । **ಚಿಕಿತ್**—ಸ್ತುತಿಕರ್ತನ ಜ್ಞಾನವನ್ನು । **ವಿಂಧತೇ**—ಅಭಿನಂದಿಸುವನೋ । **ಯಃ**—ಯಾರು । **ಋಷಿಚೋದನಃ**—ಋಷಿಗಳ ಸತ್ಕರ್ಮಪ್ರೇರಕನೋ। **ತಂ**—ಅಂತಹ। **ಇಂದ್ರಂ**—ಇಂದ್ರನನ್ನು। **ಭೋಜಸೇ**—ಪಾಲನಕ್ಕಾಗಿ । **ಅರಿಷ್ಯಂತಂ ನ**—ಅಹಿಂಸಕನಾದ ಸ್ವಾಮಿಯನ್ನು ಸ್ತುತಿಸುವಂತೆ । **ನವ್ಯಸಾ**—ನೂತನವಾದ । **ಮತೀ**—ಸ್ತುತಿಯಿಂದ । **ಅಚ್ಛ**—ಅತಿಶಯವಾಗಿ । **ವದ**—ಸ್ತುತಿಸಿ ಪ್ರಶಂಸಿಸು.

॥ ಭಾವಾರ್ಥ ॥

ಎಲೈ ಋಷಿಯೇ, ಯಾವ ಇಂದ್ರನು, ಈಗ ಸ್ತುತಿಗಳಿಂದ ಪ್ರಶಂಸಿತನಾಗಿ, ಸ್ತುತಿಕರ್ತನ ಜ್ಞಾನವನ್ನು ಅಭಿನಂದಿಸುವನೋ, ಯಾರು ಋಷಿಗಳಿಗೆ ಸತ್ಕರ್ಮಪ್ರೇರಕನೋ ಅಂತಹ ಇಂದ್ರನನ್ನು ಪಾಲನಕ್ಕಾಗಿ ಅಹಿಂಸಕನಾದ ಸ್ವಾಮಿಯನ್ನು ಸ್ತುತಿಸುವಂತೆ ನೂತನವಾದ ಸ್ತುತಿಯಿಂದ ಅತಿಶಯವಾಗಿ ಸ್ತುತಿಸಿ ಪ್ರಶಂಸಿಸು.

## English Translation.

Who is attainable by chants who being roused by Rishi is all knowing ; intending protection for his pleasure utter praises.

॥ ಸಂಹಿತಾಪಾಠಃ ॥

ಯಸ್ಮಾ ಅರ್ಕಂ ಸಪ್ತಶೀರ್ಷಾಣಮಾನೃಚುಸ್ತ್ರಿಧಾತುಮುತ್ತಮೇ ಪದೇ ।

ಸ ತ್ವಿ೧ಮಾ ವಿಶ್ವಾ ಭುವನಾನಿ ಚಿಕ್ರದದಾದಿಜ್ಜನಿಷ್ಟ ಪೌಂಸ್ಯಂ ॥ ೪ ॥

॥ ಪದಪಾಠಃ ॥

ಯಸ್ಮೈ । ಅರ್ಕಂ । ಸಪ್ತಽಶೀರ್ಷಾಣಂ । ಆನೃಚುಃ । ತ್ರಿಽಧಾತುಂ । ಉತ್ಽತಮೇ । ಪದೇ ।
ಸಃ । ತು । ಇಮಾ । ವಿಶ್ವಾ । ಭುವನಾನಿ । ಚಿಕ್ರದತ್ । ಆತ್ । ಇತ್ । ಜನಿಷ್ಟ । ಪೌಂಸ್ಯಂ ॥ ೪ ॥

॥ ಭಾಷ್ಯಂ ॥

ಯಸ್ಮೈ ಇಂದ್ರಾಯ ಪರಮೇಶ್ವರಾಯ ತದರ್ಥಂ ಉತ್ತಮೇ ಪದೇ ಉತ್ಕೃಷ್ಟತಮೇ ಸ್ಥಾನೇ ದ್ಯುಲೋಕಾಖ್ಯೇ ಸ್ಥಿತಂ ಅರ್ಕಂ ಅರ್ಚನೀಯಮಾದಿತ್ಯಮಾನೃಚುಃ ಅರ್ಚಂತಿ ಸರ್ವೇ। ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ (ಛಾಂ. ಉ. ೧-೬-೬) ಇತ್ಯಾದಿ ಶ್ರುತ್ಯುಕ್ತಂ ಯದೀಯಂ ಸ್ವರೂಪಮುಪಲಬ್ಧುಂ। ಸರ್ವೇ ಸೂರ್ಯಮಾರಾಧಯಂತೀತ್ಯರ್ಥಃ। ಕೀದೃಶಮರ್ಕಂ। ಸಪ್ತಶೀರ್ಷಾಣಂ । ಸಪ್ತಸಂಖ್ಯಾಕಾಃ ಶೀರ್ಷವತ್ ಪ್ರಧಾನಭೂತಾ ರಶ್ಮಯೋ ಯಸ್ಯ ತಾದೃಶಂ। ತ್ರಿಧಾತುಂ ತ್ರಯಾಣಾಂ ಭೂರಾದಿಲೋಕಾನಾಂ ಪೋಷಕಂ। ಸೂರ್ಯಸ್ಯ ತ್ರಿಲೋಕೀಪೋಷಕತ್ವಂ ತು ವೃಷ್ಟ್ಯಾದಿವ್ಯಾಪಾರೇಣ ಪ್ರಸಿದ್ಧಂ। ಯತ್ಸ್ವರೂಪಲಾಭಾಯ ಅರ್ಕಮರ್ಚಂತಿ ಸ ತು ಪರಮೇಶ್ವರಃ ಇಮಾ ಇಮಾನಿ ದೃಶ್ಯಮಾನಾನಿ ವಿಶ್ವಾ ಸರ್ವಾಣಿ ಭುವನಾನಿ ಭೂತಜಾತಾನಿ ದೇವಾಸುರಮನುಷ್ಯರೂಪಾಣಿ ಉದ್ದಿಶ್ಯ ಅಚಿಕ್ರದತ್ ಆಕ್ರಂದತಿ। ಮಾಧ್ಯಮಿಕ್ಯಾ ವಾಚಾ ದದದಶಬ್ದೈರ್ಗಮ ( ? ರ್ದಮ) ದಯಾದಾನವಾಚಕೈಃ। ಆದಿತ್ ಅನಂತರಮೇವ ಪೌಂಸ್ಯಂ ಬಲಂ ಶಿಕ್ಷಾಲಕ್ಷಣಂ ಜನಿಷ್ಟ ಜನಯತಿ ಆವಿರ್ಭಾವಯತಿ। ಅಯಂ ಭಾವಃ। ಪರಮೇಶ್ವರ ಆದೌ ಮೇಘಸ್ತನಿತಲಕ್ಷಣಯಾ ಸ್ವವಾಣ್ಯಾ ಭೂಕ್ಷೇಭ್ಯೋ (? ಭೂಸ್ಥೇಭ್ಯೋ) ಹಿತಮುಪದಿಶತಿ। ಅನಾಕರ್ಣಿತೇ ಚ ತಸ್ಮಿನ್ ಪಶ್ಚಾದ್ದಾರಿದ್ರ್ಯಾದಿಲಕ್ಷಣಾಂ ಶಿಕ್ಷಾಮಾವಿಷ್ಕರೋತೀತಿ। ಅತ್ರಾಭಿಹಿತೋಽರ್ಥೋ ಬೃಹದಾರಣ್ಯಕೇ ಖಿಲಕಾಂಡೇ ತ್ರಯಾಃ ಹ ವೈ ಪ್ರಾಜಾಪತ್ಯಾಃ ಇತ್ಯಾದಿನಾ ಗ್ರಂಥೇನ ಪ್ರಪಂಚಿತಃ (ಬೃ. ಉ. ೫-೨) ॥

। ಪ್ರತಿಪದಾರ್ಥ ।

**ಯಸ್ಮೈ**—ಯಾವ ಇಂದ್ರನಿಗಾಗಿ । **ಸಪ್ತಶೀರ್ಷಾಣಂ**—ಏಳು ರಶ್ಮಿಗಳುಳ್ಳವನೂ । **ತ್ರಿಧಾತುಂ**—ಮೂರು ಲೋಕಗಳಿಗೂ ಪೋಷಕನೂ । **ಅರ್ಕಂ**—ಪೂಜ್ಯನೂ ಆದ ಆದಿತ್ಯನನ್ನು । **ಉತ್ತಮೇ ಪದೇ**—ಅತ್ಯುತ್ತಮವಾದ ಸ್ಥಾನವಾದ ದ್ಯುಲೋಕದಲ್ಲಿ । **ಆನೃಚುಃ**—ಸಕಲರೂ ಪೂಜಿಸುವರೋ । **ಸ ತು**—ಆದಿತ್ಯ ರೂಪನಾದ ಅದೇ ಇಂದ್ರನು । **ಇಮಾ ವಿಶ್ವಾ ಭುವನಾನಿ**—ಈ ಸಕಲ ಲೋಕಗಳನ್ನೂ । **ಚಿಕ್ರದತ್**—ಶಬ್ದ ಪೂರಿತವಾಗುವಂತೆ ಮಾಡಿದನು । **ಆದಿತ್**—ಆ ಒಡನೆಯೇ । **ಪೌಂಸ್ಯಂ**—ಬಲವನ್ನು । **ಜನಿಷ್ಟ**—ಉತ್ಪನ್ನಮಾಡಿದನು

॥ ಭಾವಾರ್ಥ ॥

ಯಾವ ಇಂದ್ರನ ತೃಪ್ತ್ಯರ್ಥವಾಗಿ ಸಪ್ತರಶ್ಮಿಗಳುಳ್ಳವನೂ, ಮೂರು ಲೋಕಗಳಿಗೂ ಪೋಷಕನೂ, ಪೂಜ್ಯನೂ, ಅತ್ಯುತ್ತಮವಾದ ದ್ಯುಲೋಕಸ್ಥನೂ ಆದ ಆದಿತ್ಯನನ್ನು ಸಕಲರೂ ಪೂಜಿಸುವರೋ ಅಂತಹ ಆದಿತ್ಯರೂಪ

ನಾದ ಆದೇ ಇಂದ್ರನು ಈ ಸಕಲ ಲೋಕಗಳನ್ನೂ ಶಬ್ದಪೂರಿತವಾಗುವಂತೆ ಮಾಡಿದನು. ಆ ಒಡನೆಯೇ ಬಲವನ್ನೂ ಉತ್ಪನ್ನಮಾಡಿದನು.

## English Translation.

For whom is good places who is worshipping mantras with seven points and three places, he has made this universe, full of sounds and is producer of strength.

|| ಸಂಹಿತಾಪಾಠಃ ||

ಯೋ ನೋ ದಾತಾ ವಸೂನಾಮಿಂದ್ರಂ ತಂ ಹೂಮಹೇ ವಯಂ ।
ವಿದ್ಮಾ ಹ್ಯಸ್ಯ ಸುಮತಿಂ ನವೀಯಸೀಂ ಗಮೇಮ ಗೋಮತಿ ವ್ರಜೇ ॥ ೫ ॥

॥ ಪದಪಾಠಃ ॥

ಯಃ । ನಃ । ದಾತಾ । ವಸೂನಾಂ । ಇಂದ್ರಂ । ತಂ । ಹೂಮಹೇ । ವಯಂ ।
ವಿದ್ಮ । ಹಿ । ಅಸ್ಯ । ಸುಽಮತಿಂ । ನವೀಯಸೀಂ । ಗಮೇಮ । ಗೋಽಮತಿ । ವ್ರಜೇ ॥ ೫ ॥

|| ಭಾಷ್ಯಂ ||

ಯ ಇಂದ್ರಃ ನೋಽಸ್ಮಾಕಂ ವಸೂನಾಂ ವಾಸಹೇತೂನಾಂ ಧನಾನಾಂ ದಾತಾ ಭವತಿ ತಮಿಂದ್ರಂ ಪರಮೇಶ್ವರಂ ಹೂಮಹೇ ಆಹ್ವಯಾಮೋ ವಯಂ ಸ್ತೋತಾರಃ। ಹಿ ಯಸ್ಮಾದಸ್ಯೇಂದ್ರಸ್ಯ ನವೀಯಸೀಂ ನವತರಾಮಕೃತಪೂರ್ವಾಂ ಸುಮತಿಂ ಕಲ್ಯಾಣೀಂ ಮತಿಮನುಗ್ರಹಬುದ್ಧಿಂ ವಿದ್ಮ ಜಾನೀಮಃ । ಅತಸ್ತಮಾಹ್ವಯಾಮೇತಿ ಪೂರ್ವೇಣ ಸಂಬಂಧಃ । ಯಯಾ ಸುಮತ್ಯಾ ವಯಂ ಗೋಮತಿ ಗವೋಪೇತೇ ವ್ರಜೇ ಗಜಾಶ್ವಾದಿಪಶುಸಮೂಹೇ ಗಮೇಮ ಸ್ವಾಮಿತ್ವೇನ ಪ್ರಾಪ್ನುಯಾಮ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ನಃ**—ನಮಗೆ । **ವಸೂನಾಂ**—ಧನಕ್ಕೆ । **ದಾತಾ**—ದಾತೃವಾಗಿರುವನೋ । **ತಂ ಇಂದ್ರಂ**—ಆ ಇಂದ್ರನನ್ನು । **ವಯಂ**—ನಾವು । **ಹೂಮಹೇ**—ಪ್ರಾರ್ಥಿಸಿ ಕರೆಯುತ್ತೇವೆ । **ಅಸ್ಯ**—ಈ ಇಂದ್ರನ । **ನವೀಯಸೀಂ**—ನೂತನವಾದ । **ಸುಮತಿಂ**—ಉತ್ತಮವಾದ ಅನುಗ್ರಹ ಬುದ್ಧಿಯನ್ನು । **ವಿದ್ಮ ಹಿ**—ಅರಿಯುತ್ತೇವೆ । **ಗೋಮತಿ**—ಗೋಭರಿತವಾದ । **ವ್ರಜೇ**—ಕೊಟ್ಟಿಗೆಯಲ್ಲಿ । **ಗಮೇಮ**—ನಾವು ಸ್ವಾಮಿಭಾವದಿಂದ ಸೇರುವಂತಾಗಲಿ.

|| ಭಾವಾರ್ಥ ||

ಯಾವ ಇಂದ್ರನು ನಮಗೆ ಧನದಾನವನ್ನು ಮಾಡುವನೋ ಆ ಇಂದ್ರನನ್ನು ನಾವು ಪ್ರಾರ್ಥಿಸಿ ಕರೆಯುತ್ತೇವೆ. ಈ ಇಂದ್ರನ ನೂತನವೂ, ಉತ್ತಮವೂ ಆದ ಅನುಗ್ರಹಬುದ್ಧಿಯನ್ನು ನಾವು ಅರಿತು ತತ್ಫಲವಾಗಿ ಉತ್ತಮವಾದ ಗೋಸಂಘವನ್ನು ಪಡೆಯುವಂತಾಗಲಿ.

## English Translation.

We invoke Indra the giver of our wealth we know his favourable disposition ; may we go to a pasture with cows.

|| ಸಂಹಿತಾಪಾಠಃ ||

ಯಸ್ಮೈ ತ್ವಂ ವಸೋ ದಾನಾಯ ಶಿಕ್ಷಸಿ ಸ ರಾಯಸ್ಪೋಷಮಶ್ನುತೇ ।
ತಂ ತ್ವಾ ವಯಂ ಮಘವನ್ನಿಂದ್ರ ಗಿರ್ವಣಃ ಸುತಾವಂತೋ ಹವಾಮಹೇ ||

|| ಪದಪಾಠಃ ||

ಯಸ್ಮೈ । ತ್ವಂ । ವಸೋ ಇತಿ । ದಾನಾಯ । ಶಿಕ್ಷಸಿ । ಸಃ । ರಾಯಃ । ಪೋಷಂ । ಅಶ್ನುತೇ ।
ತಂ । ತ್ವಾ । ವಯಂ । ಮಘ್ೞವನ್ । ಇಂದ್ರ । ಗಿರ್ವಣಃ । ಸುತೞವಂತಃ । ಹವಾಮಹೇ || ೬ ||

|| ಭಾಷ್ಯಂ ||

ಹೇ ವಸೋ ವಾಸಯಿತರಿಂದ್ರ ತ್ವಂ ಯಸ್ಮೈ ಯಜಮಾನಾಯ ದಾನಾಯ ಧನದಾನಾರ್ಥಂ ಶಿಕ್ಷಸಿ ಆಜ್ಞಾಪಯಸಿ ಸ ಯಜಮಾನಃ ರಾಯಃ ಧನಸ್ಯ ಪೋಷಂ ಪುಷ್ಟಿಮಶ್ನುತೇ ವ್ಯಾಪ್ನೋತಿ । ಯಂ ಯಜಮಾನಂ ಧನಂ ದಾತುಂ ಪ್ರವರ್ತಯಸಿ ಸ ತ್ವದಾಜ್ಞಯಾ ಧನತ್ಯಾಗೇನ ವಸುಸಮೃದ್ಧೋ ಭವತೀತ್ಯಾಕೂತಂ। ಅತೋ ಹೇ ಗಿರ್ವಣಃ ಗೀರ್ಭಿರ್ವನನೀಯ ಮಘವನ್ ಧನವನ್ನಿಂದ್ರ ತಂ ತಾದೃಶಂ ತ್ವಾ ತ್ವಾಂ ಸುತಾವಂತಃ ಅಭಿಷುತಸೋಮಾ ವಯಂ ಹವಾಮಹೇ ಆಹ್ವಯಾಮಃ ||

|| ಪ್ರತಿಪದಾರ್ಥ ||

ಮಘವನ್—ಧನವಂತನೂ । ಗಿರ್ವಣಃ—ಸ್ತುತಿಗಳಿಂದ ಪೂಜ್ಯನೂ । ವಸೋ—ವಸತಿದಾಯಕನೂ ಆದ । ಇಂದ್ರ—ಎಲೈ ಇಂದ್ರನೇ । ಯಸ್ಮೈ—ಯಾವ ಯಜಮಾನನಿಗೆ । ತ್ವಂ—ನೀನು । ದಾನಾಯ—ಧನದಾನವನ್ನು ಮಾಡುವ ಕ್ರಮವನ್ನು । ಶಿಕ್ಷಸಿ—ಉಪದೇಶಿಸುವೆಯೋ । ಸಃ—ಅವನು । ರಾಯಃ—ಸಂಪತ್ತಿನ । ಪೋಷಂ—ಪುಷ್ಟಿಯನ್ನು । ಅಶ್ನುತೇ—ಪಡೆಯುತ್ತಾನೆ । ತಂ—ಅಂತಹ ಉತ್ತಮನಾದ । ತ್ವಾ—ನಿನ್ನನ್ನು । ಸುತಾವಂತಃ—ಸೋಮರಸವನ್ನು ಹಿಂಡಿರುವ । ವಯಂ—ನಾವು । ಹವಾಮಹೇ—ಪ್ರಾರ್ಥಿಸಿ ಕರೆಯುತ್ತೇವೆ.

|| ಭಾವಾರ್ಥ ||

ಧನವಂತನೂ, ಸ್ತುತಿಗಳಿಂದ ಪೂಜ್ಯನೂ, ವಸತಿದಾಯಕನೂ ಆದ ಎಲೈ ಇಂದ್ರನೇ, ಯಾವ ಯಜಮಾನನಿಗೆ ನೀನು ಧನದಾನವನ್ನು ಮಾಡುವ ಕ್ರಮವನ್ನು ಉಪದೇಶಿಸುವೆಯೋ, ಅವನು ಸಂಪತ್ಪುಷ್ಟಿಯನ್ನು ಪಡೆಯುತ್ತಾನೆ. ಅಂತಹ ಉತ್ತಮನಾದ ನಿನ್ನನ್ನು ಸೋಮರಸವನ್ನು ಹಿಂಡುವ ನಾವು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Giver of dwelling, adorable Maghavan whom you give determining to give, his wealth goes increasing. You are thus, so with effused Some we invoke you.

|| ಸಂಹಿತಾಪಾಠಃ ||

ಕದಾ ಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ ।
ಉಪೋಪೇನ್ನು ಮಘವನ್ಭೂಯ ಇನ್ನು ತೇ ದಾನಂ ದೇವಸ್ಯ ಪೃಚ್ಯತೇ ॥೭॥

|| ಪದಪಾಠಃ ||

ಕದಾ । ಚನ । ಸ್ತರೀಃ । ಅಸಿ । ನ । ಇಂದ್ರ । ಸಶ್ಚಸಿ । ದಾಶುಷೇ ।
ಉಪಽಉಪ । ಇತ್ । ನು । ಮಘಽವನ್ । ಭೂಯಃ । ಇತ್ । ನು । ತೇ । ದಾನಂ । ದೇವಸ್ಯ । ಪೃಚ್ಯತೇ ॥ ೭ ॥

|| ಭಾಷ್ಯಂ ||

**ಹೇ ಮಘವನ್ ಧನವನ್ನಿಂದ್ರ ನು ಕ್ಷಿಪ್ರಂ ದಾನಂ ಹವಿಃಸಮರ್ಪಣಂ ನು ನಿಶ್ಚಿತಂ ಭೂಯ ಇತ್ ಪ್ರಚುರಂ ಸದೇವ ತೇ ತವ ದೇವಸ್ಯ ದ್ಯೋತಮಾನಸ್ಯ ಪರಮೇಶ್ವರಸ್ಯ ಉಪೋಪೇತ್ ಸಮೀಪಮೇವ ಪೃಚ್ಯತೇ ತ್ವಯಾ ಸಂಪೃಕ್ತಂ ಭವತಿ । ಸ್ವಲ್ಪಮಪಿ ಶೀಘ್ರಂ ಸತ್ಪಾತ್ರೇ ಸಮರ್ಪಿತಂ ಬಹುಲೀಭೂಯ ಈಶ್ವರೇ ಸಂಗತಂ ಭವತೀತ್ಯಭಿಪ್ರಾಯಃ । ಅತಃ ಹೇ ಇಂದ್ರ ಪರಮೇಶ್ವರ ದಾಶುಷೇ ಹವಿರ್ದತ್ತವತೋ ಯಜಮಾನಸ್ಯ ಸ್ತರೀಃ ಹಿಂಸಕಃ ಕದಾಚನ ಕದಾಪಿ ನಾಸಿ ನ ಭವಸಿ। ಅಪಿ ತು ಸಶ್ಚಸಿ ತೇನ ಸಂಗಚ್ಛಸೇ। ತದೀಯಂ ಸಖ್ಯಂ ಸಂಪಾದಯಸೀತ್ಯರ್ಥಃ । ಪ್ರಸಮುಪೋದಃ ಪಾದಪೂರಣೇ (ಪಾ. ಸೂ. ೮-೧-೬) ಇತ್ಯನೇನ ಉಪ ಇತ್ಯಸ್ಯ ದ್ವಿವಚನಂ (ದ್ವಿರ್ವಚನಂ) ಪಾದಪೂರಣಾರ್ಥಂ ||**

|| ಪ್ರತಿಪದಾರ್ಥ ||

**ಮಘವನ್**—ಧನವಂತನಾದ। **ಇಂದ್ರ**—ಎಲೈ ಇಂದ್ರನೇ। **ದೇವಸ್ಯ**—ದೇವತಾತ್ಮನಾದ। **ತೇ**—ನಿನ್ನನ್ನು ಉದ್ದೇಶಿಸಿ ಅರ್ಪಿಸಿದ। **ದಾನಂ**—ಹವಿರ್ದಾನವು। **ಉಪೋಪ ಇನ್ನು**—ನಿನ್ನನ್ನು ಸಮೀಪಿಸು

ವಾಗಲೇ | **ಭೂಯ ಇನ್ನು**—ಅತ್ಯಧಿಕವಾಗಿ ಬೆಳೆದು | **ಪೃಚ್ಯತೇ**—ನಿನ್ನಿಂದ ಸ್ವೀಕರಿಸಲ್ಪಡುತ್ತದೆ | (**ಇಂದ್ರ**—ಎಲೈ ಇಂದ್ರನೇ) | **ಸ್ತರೀಃ**—ಯಜಮಾನನಿಗೆ ಹಿಂಸಕನಾಗಿ | **ಕದಾಚನ**—ಯಾವಾಗಲೂ | **ನ ಅಸಿ**—ನೀನು ಇರುವುದೇ ಇಲ್ಲ | **ದಾಶುಷೇ**—ಹವಿಸ್ಸನ್ನರ್ಪಿಸುವ ಯಜಮಾನನಿಗೆ | **ಸಶ್ಚಸಿ**—ಮಿತ್ರನಾಗಿಯೇ ಅಂಟಿಕೊಂಡಿರುತ್ತೀಯೆ.

| ಭಾವಾರ್ಥ ||

ಧನವಂತನಾದ ಎಲೈ ಇಂದ್ರನೇ, ದೇವತಾತ್ಮನಾದ ನಿನ್ನನ್ನು ಉದ್ದೇಶಿಸಿ ಅರ್ಪಿಸಿದ ಹವಿರ್ದಾನವು ನಿನ್ನನ್ನು ಸಮೀಪಿಸುವಾಗಲೇ ಅತ್ಯಧಿಕವಾಗಿ ಬೆಳೆದು ನಿನ್ನಿಂದ ಸ್ವೀಕರಿಸಲ್ಪಡುತ್ತದೆ. ಎಲೈ ಇಂದ್ರನೇ, ನೀನು ಯಾವಾಗಲೂ ಯಜಮಾನನಿಗೆ ಹಿಂಸಕನಾಗಿ ಇರುವುದೇ ಇಲ್ಲ. ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ಮಿತ್ರನಾಗಿಯೇ ಅಂಟಿಕೊಂಡಿರುವೆ.

## English Translation.

Indra you never cease producing, you come to the sacrificer. You are God ; your gift comes once and oft.

|| ಸಂಹಿತಾಪಾಠಃ ||

ಪ್ರ ಯೋ ನನಕ್ಷೇ ಅಭ್ಯೋಜಸಾ ಕ್ರಿವಿಂ ವಧೈಃ ಶುಷ್ಣಂ ನಿಘೋಷಯನ್ |
ಯದೇದಸ್ತಂಭೀತ್ಪ್ರಥಯನ್ನಮೂಂ ದಿವಮಾದಿಜ್ಜನಿಷ್ಟ ಪಾರ್ಥಿವಃ || ೮ ||

|| ಪದಪಾಠಃ ||

ಪ್ರ | ಯಃ | ನನಕ್ಷೇ | ಅಭಿ | ಓಜಸಾ | ಕ್ರಿವಿಂ | ವಧೈಃ | ಶುಷ್ಣಂ | ನಿಽಘೋಷಯನ್ |
ಯದಾ | ಇತ್ | ಅಸ್ತಂಭೀತ್ | ಪ್ರಥಯನ್ | ಅಮೂಂ | ದಿವಂ | ಆತ್ | ಇತ್ | ಜನಿಷ್ಟ | ಪಾರ್ಥಿವಃ || ೮ ||

|| ಭಾಷ್ಯಂ ||

ಯ ಇಂದ್ರಃ ವಧೈಃ ಆಯುಧಪ್ರಹಾರೈಃ ಕ್ರಿವಿಂ ವಿಕೃತ್ತಂ ಶುಷ್ಣಮೇತನ್ನಾಮಾನಮಸುರಂ ಓಜಸಾ ಬಲೇನ ನಿಘೋಷಯನ್ ನಿತರಾಂ ಶಬ್ದಯನ್ ಸನ್ ಅಭಿ ಅಭಿತಃ ಪ್ರ ಪ್ರಕರ್ಷೇಣ ನನಕ್ಷೇ ವ್ಯಾಪ್ನೋತಿ ಸ್ಮ | ಅಸುರಂ ಹತ್ವಾ ಸ್ವಸಾಮರ್ಥ್ಯಂ ಸರ್ವತಃ ಪ್ರಕಾಶಿತವಾನಿತ್ಯರ್ಥಃ | ಕದೇತ್ಯವೇಕ್ಷಾಯಾಮಾಹ | ಯದೇತ್ ಯದ್ಯೈವ ಸೋಽಸುರಃ ಪ್ರಥಯನ್ ಆತ್ಮಾನಂ ಪೃಥುಂ ಕುರ್ವನ್ ಅಮೂಂ ದೂರೇ ದೃಶ್ಯಮಾನಂ ದಿವಂ ದ್ಯುಲೋಕಂ ಅಸ್ತಂಭೀತ್ ಸ್ತಬ್ಧಂ ಕೃತವಾನ್ | ಆದಿತ್ ಅನಂತರಮೇವ ಪಾರ್ಥಿವೋಽಗ್ನಿಃ ಜನಿಷ್ಟ ಪ್ರಾದುರಭೂತ್ | ಲೋಕಾನ್ ಪ್ರಾಣನಿರೋಧೇನ ಅಗ್ನಿಃ ಸಮಜನಿ ಯದಾ ತದೇತ್ಯರ್ಥಃ ||

॥ ಪ್ರತಿಪದಾರ್ಥ ॥

**ಯದಾ ಇತ್**—ಯಾವ ಕಾಲದಲ್ಲಿ । **ಅಮೂಂ ದಿವಂ**—ಪ್ರಸಿದ್ಧವಾದ ದ್ಯುಲೋಕವನ್ನೆಲ್ಲಾ । **ಪ್ರಥಯನ್**—ವ್ಯಾಪಿಸುತ್ತಾ । **ಅಸ್ತಂಭೀತ್**—ಈ ಅಸುರನು ತಡೆಗಟ್ಟಿದನೋ । **ಆತ್ ಇತ್**—ಆ ಒಡನೆಯೇ । **ಪಾರ್ಥಿವಃ**—ಪಾರ್ಥಿವಾಗ್ನಿಯ ರೂಪದಲ್ಲಿ । **ಜನಿಷ್ಟ**—ಈ ಇಂದ್ರನು ಉತ್ಪನ್ನನಾದನು । **ಯಃ**—ಯಾವ ಅದೇ ಇಂದ್ರನು । **ತ್ರಿವಿಂ**—ಪ್ರವೃದ್ಧನಾದ । **ಶುಷ್ಣಂ**—ಶುಷ್ಣನೆಂಬ ಅದೇ ಅಸುರನನ್ನು । **ವಧೈಃ**—ಹನನಸಾಧನವಾದ ಆಯುಧಗಳಿಂದ । **ನಿಘೋಷಯನ್**—ಶಬ್ದಮಾಡುವಂತೆ ಹಿಂಸಿಸುತ್ತಾ । **ಓಜಸಾ**—ತನ್ನ ಶಕ್ತಿಯಿಂದ । **ಅಭಿ**—ಸರ್ವತ್ರ । **ಪ್ರ ನನಕ್ಷೇ**—ವ್ಯಾಪಿಸಿ ವಿಸ್ತೃತನಾಗಿದ್ದಾನೆ.

॥ ಭಾವಾರ್ಥ ॥

ಯಾವ ಕಾಲದಲ್ಲಿ ಪ್ರಸಿದ್ಧವಾದ ದ್ಯುಲೋಕವನ್ನೆಲ್ಲಾ ವ್ಯಾಪಿಸುತ್ತಾ ಈ ಅಸುರನು ತಡೆಗಟ್ಟಿದನೋ ಆ ಒಡನೆಯೇ ಪಾರ್ಥಿವಾಗ್ನಿಯ ರೂಪದಲ್ಲಿ ಇಂದ್ರನು ಉತ್ಪನ್ನನಾದನು. ಅದೇ ಇಂದ್ರನು ಪ್ರವೃದ್ಧನಾದ ಶುಷ್ಣನೆಂಬ ಅದೇ ಅಸುರನನ್ನು ಹನನಸಾಧನವಾದ ಆಯುಧಗಳಿಂದ ಹಿಂಸಿಸುತ್ತಾ ತನ್ನ ಶಕ್ತಿಯಿಂದ ಸರ್ವತ್ರ ವ್ಯಾಪಿಸಿ ವಿಸ್ತೃತನಾಗಿದ್ದಾನೆ.

## English Translation.

He who filled the well by killing Shushna by weapon hurled with might, who surprised the heaven, who coming to earth produced all things.

॥ ಸಂಹಿತಾಪಾಠಃ ॥

ಯಸ್ಯಾಯಂ ವಿಶ್ವ ಆರ್ಯೋ ದಾಸಃ ಶೇವಧಿಪಾ ಅರಿಃ ।
ತಿರಶ್ಚಿದರ್ಯೇ ರುಶಮೇ ಪವೀರವಿ ತುಭ್ಯೇತ್ಸೋ ಅಜ್ಯತೇ ರಯಿಃ ॥ ೯ ॥

॥ ಪದಪಾಠಃ ॥

ಯಸ್ಯ । ಅಯಂ । ವಿಶ್ವಃ । ಆರ್ಯಃ । ದಾಸಃ । ಶೇವಧಿಽಪಾಃ । ಅರಿಃ ।
ತಿರಃ । ಚಿತ್ । ಅರ್ಯೇ । ರುಶಮೇ । ಪವೀರವಿ । ತುಭ್ಯ । ಇತ್ । ಸಃ । ಅಜ್ಯತೇ । ರಯಿಃ ॥ ೯ ॥

॥ ಭಾಷ್ಯಂ ॥

ವಿಶ್ವಃ ಸರ್ವಃ ಅಯಂ ದೃಶ್ಯಮಾನಃ ಆರ್ಯಃ ಅಸುರಸ್ವಾಮಿಕೋ ಗಣಃ ಯಸ್ಯೇಂದ್ರಸ್ಯ ಅರಿಃ ಶತ್ರುರ್ಭವತಿ । ಕೀದೃಶಃ ಸಃ । ದಾಸಃ ಧನಾದೇರುಪಕ್ಷಪಯಿತಾ ಶೇವಧಿಪಾಃ । ಶೇವಧಿರ್ನಿಧಿಸ್ತಂ ಪಾತಿ ರಕ್ಷತೀತಿ । ತಥಾ ಅಸುರಾದಿಧನಸ್ಯಾಪಹರ್ತಾ ಸ್ವಧನಸ್ಯ ಚ ರಕ್ಷಿತೇತ್ಯರ್ಥಃ । ತೇನೇಂದ್ರೇಣ ರುಶಮೇ ಅಕಲ್ಯಾಣೇ ಅರ್ಯೇ ಅರಿಗಣೇ ತಸ್ಮಿನ್ ತಿರಶ್ಚಿತ್ ಅಂತರ್ಹಿತಮೇವ ಪವೀರವಿ । ಪವಿಃ ರಥನೇಮಿಸ್ತ-

ದ್ಯಂತೋಽರಾಃ ಪವೀರಾಃ । ತದುಪೇತಂ ಚಕ್ರಂ ಪವೀರವಿ। ಅತ್ರ ಪವೀ ರಥನೇಮಿರ್ಭವತಿ (ನಿರು. ೫-೫) ಇತ್ಯಾದಿ ನಿರುಕ್ತಂ ದ್ರಷ್ಟವ್ಯಂ । ತಾದೃಶಂ ಚಕ್ರಮಜ್ಯತೇ ಪ್ರಕ್ಷಿಪ್ಯತೇ । ಚತುರ್ಥಪಾದೇ ಪ್ರತ್ಯಕ್ಷೀಕೃತ್ಯ ಉಚ್ಯತೇ। ಹೇ ಇಂದ್ರ ತುಭ್ಯಮೇವ ತ್ವದರ್ಥಮೇವ ಸಃ ಅಸುರಗಣೇ ವಿದ್ಯಮಾನಃ ರಯಿಃ ನಿಧಿಲಕ್ಷಣೋ ಧನರಾಶಿಃ ಅಜ್ಯತೇ ಪ್ರಕ್ಷಿಪ್ಯತೇಽರಿಗಣೇನ। ಅಸುರಗಣೇ ಗುಪ್ತಂ ಚಕ್ರದಾನಮಪಿ ಇಂದ್ರಾಯ ನಿಧಿಪ್ರದಮಭವತ್ ತದಾ ಸತ್ಪಾತ್ರೇ ಗುಪ್ತಂ ಧನದಾನಂ ಮಹಾಫಲದಂ ಸ್ಯಾದಿತಿ ಕಿಮು ವಕ್ತವ್ಯಮಿತ್ಯಾಶಯಃ ॥

॥ ಪ್ರತಿಪದಾರ್ಥ ॥

**ಯಸ್ಯ**—ಯಾವ ಇಂದ್ರನಿಗೆ। **ವಿಶ್ವಃ**—ಸಮಸ್ತವಾದ। **ಆರ್ಯಃ**—ಅಸುರ ಗಣವೆಲ್ಲವೂ। **ಅರಿಃ**—ಶತ್ರುರೂಪವಾಗಿದೆಯೋ। **ಅಯಂ**-ಅದೇ ಇಂದ್ರನು। **ದಾಸಃ**—ಶತ್ರುಧನವನ್ನು ಅಪಹರಿಸುವವನೂ **ಶೇವಧಿಪಾಃ**—ಸ್ವಧನವನ್ನು ರಕ್ಷಿಸುವವನೂ ಆಗಿದ್ದಾನೆ (ಎಲೈ ಇಂದ್ರನೇ)। **ರುಶಮೇ**—ಅಮಂಗಳಕರನೂ। **ಪವೀರವಿ**—ಚಕ್ರದಂತೆ ಭ್ರಮಣಮಾಡುವವನೂ ಆದ। **ಆರ್ಯೇ**—ಶತ್ರುವಿನಲ್ಲಿ। **ತಿರಶ್ಚಿತ್**—ಅಂತರ್ಹಿತವಾಗಿದ್ದರೂ ಸಹ। **ಸಃ ರಯಿಃ**—ಆ ಧನವೆಲ್ಲವೂ। **ತುಭ್ಯ ಇತ್**—ನಿನಗಾಗಿಯೇ। **ಅಜ್ಯತೇ**—ಅರ್ಪಿತವಾಗುತ್ತದೆ.

॥ ಭಾವಾರ್ಥ ॥

ಯಾವ ಇಂದ್ರನಿಗೆ ಸಮಸ್ತವಾದ ಅಸುರ ಗಣವೆಲ್ಲವೂ ಶತ್ರುರೂಪವಾಗಿದೆಯೋ ಅದೇ ಇಂದ್ರನು ಶತ್ರುಧನವನ್ನು ಅಪಹರಿಸುವವನೂ, ಸ್ವಧನವನ್ನು ರಕ್ಷಿಸುವವನೂ ಆಗಿದ್ದಾನೆ. ಎಲೈ ಇಂದ್ರನೇ, ಅಮಂಗಳಕರನೂ, ಚಕ್ರದಂತೆ ಭ್ರಮಣಮಾಡುವವನೂ ಆದ ಶತ್ರುವಿನಲ್ಲಿ ಅಂತರ್ಹಿತವಾಗಿದ್ದರೂ ಸಹ ಆ ಧನವೆಲ್ಲವೂ ನಿನಗಾಗಿಯೇ ಅರ್ಪಿತವಾಗುತ್ತದೆ.

## English Translation.

Aryans and slaves are protector of wealth and worshipper who came before Arya, fair coloured, Paveru, he is united with you, dispenser of wealth.

॥ ಸಂಹಿತಾಪಾಠಃ ॥

ತುರಣ್ಯವೋ ಮಧುಮಂತಂ ಘೃತಶ್ಚುತಂ ವಿಪ್ರಾಸೋ ಅರ್ಕಮಾನೃಚುಃ।
ಅಸ್ಮೇ ರಯಿಃ ಪಪ್ರಥೇ ವೃಷ್ಣ್ಯಂ ಶವೋಽಸ್ಮೇ ಸುವಾನಾಸ ಇಂದವಃ ॥೧೦॥

॥ ಪದಪಾಠಃ ॥

ತುರಣ್ಯವಃ । ಮಧುಽಮಂತಂ । ಘೃತಽಶ್ಚುತಂ । ವಿಪ್ರಾಸಃ । ಅರ್ಕಂ । ಆನೃಚುಃ ।
ಅಸ್ಮೇ ಇತಿ । ರಯಿಃ । ಪಪ್ರಥೇ । ವೃಷ್ಣ್ಯಂ । ಶವಃ । ಅಸ್ಮೇ ಇತಿ । ಸುವಾನಾಸಃ । ಇಂದವಃ ॥ ೧೦ ॥

॥ ಭಾಷ್ಯಂ ॥

**ತುರಣ್ಯವಃ ತ್ವರಮಾಣಾಃ ವಿಪ್ರಾಸೋ ಮೇಧಾವಿನೋ ಯಜಮಾನಾಃ ಅರ್ಕಮರ್ಚನೀಯಮಿಂದ್ರಂ ಅನೂಷತ ಅರ್ಚಂತಿ । ಕೀದೃಶಂ । ಮಧುಮಂತಂ ಮಧುರಾಮೃತರಸೋಪೇತಂ ಘೃತಶ್ಚುತಂ ಜಲಸ್ರಾವಿಣಂ ಮೇಘಭೇದನೇನ ವೃಷ್ಟಿಂ ಕುರ್ವಂತಮಿತ್ಯರ್ಥಃ । ಕೇನಾಭಿಪ್ರಾಯೇಣಾರ್ಚಂತೀತ್ಯುಚ್ಯತೇ । ಅಸ್ಮೇ ಅಸ್ಮಾಸು ರಯಿಃ ಧನರಾಶಿಃ ಪಪ್ರಥೇ ಪ್ರಥಿತೋ ಭವತು । ತಥಾ ವೃಷ್ಣ್ಯಂ ಅಪತ್ಯೋತ್ಪಾದಕಂ ಶವಃ ಬಲಮಸ್ತು । ಕಿಂಚಾಸ್ಮೇ ಅಸ್ಮಾಸು ಸುವಾನಾಸಃ ಅಭಿಷುತಾ ಇಂದವಃ ಸೋಮಾಃ ಸಂತು । ಇಂದ್ರಾನುಗ್ರಹೇಣೈವ ತತ್ಸರ್ವಮಸ್ಮಾಸು ಸಂಪದ್ಯತಾಮಿತ್ಯಾಶಯೇನೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಅಸ್ಮೇ**—ನಮ್ಮಲ್ಲಿ । **ರಯಿಃ**—ಧನವು । **ಪಪ್ರಥೇ**—ವಿಸ್ತೃತವಾಗಿ ತುಂಬಲಿ । **ವೃಷ್ಣ್ಯಂ**—ಪುತ್ರೋತ್ಪಾದಕವಾದ । **ಶವಃ**—ಬಲವು ಉಂಟಾಗಲಿ । **ಅಸ್ಮೇ**—ನಮ್ಮಲ್ಲಿ । **ಸುವಾನಾಸಃ**—ಹಿಂಡಿರುವ । **ಇಂದವಃ**—ಸೋಮರಸಗಳು ತುಂಬಿರಲಿ ಎಂಬ ಆಶಯದಿಂದ ಕೂಡಿದ । **ತುರಣ್ಯವಃ**—ಕರ್ಮದಲ್ಲಿ ತ್ವರೆಯುಳ್ಳವರೂ । **ವಿಪ್ರಾಸಃ**—ಮೇಧಾವಿಗಳೂ ಆದ ಯಜಮಾನರು । **ಮಧುಮಂತಂ**—ಮಧುರವಾದ ಅಮೃತಪೂರಿತನೂ । **ಘೃತಶ್ಚುತಂ**—ವೃಷ್ಟಿಯನ್ನು ಸುರಿಸುವವನೂ । **ಅರ್ಕಂ**—ಪೂಜ್ಯನೂ ಆದ ಇಂದ್ರನನ್ನು । **ಅನೂಷತ**—ಪೂಜಿಸುತ್ತಾರೆ.

॥ ಭಾವಾರ್ಥ ॥

"ನಮ್ಮಲ್ಲಿ ಧನವು ಪ್ರಭೂತವಾಗಿ ತುಂಬಿರಲಿ; ನಮಗೆ ಪುತ್ರೋತ್ಪಾದಕವಾದ ಬಲವುಂಟಾಗಲಿ; ನಮ್ಮಲ್ಲಿ ಹಿಂಡುವ ಸೋಮರಸಗಳು ತುಂಬಿರಲಿ" ಎಂಬ ಆಶಯದಿಂದ ಕೂಡಿದವರೂ, ಕರ್ಮದಲ್ಲಿ ತ್ವರೆಯುಳ್ಳವರೂ, ಮೇಧಾವಿಗಳೂ ಆದ ಯಜಮಾನರು ಮಧುರವಾದ ಅಮೃತಪೂರಿತನೂ, ವೃಷ್ಟಿಯನ್ನು ಸುರಿಸುವವನೂ, ಪೂಜ್ಯನೂ ಆದ ಇಂದ್ರನನ್ನು ಪೂಜಿಸುತ್ತಾರೆ.

English Translation.

Quickly the Vipras are uttering worshipping mantras with sweet honey and thrifting ghee, wealth is being sent to them. Manly strength and effused Soma are coming to us.



# ಐವತ್ತೆರಡನೆಯ ಸೂಕ್ತವು

**(ವಾಲಖಿಲ್ಯಸೂಕ್ತ—೪)**

॥ ಭಾಷ್ಯಂ ॥

**ಯಥಾ ಮನೌ ವಿವಸ್ವತಿ ಇತಿ ದಶರ್ಚಂ ಚತುರ್ಥಂ ಸೂಕ್ತಂ ಆಯುವಮೈಂದ್ರಂ । ಅನುಕ್ರಾಂತಂ ಚ—ಯಥಾ ಮನಾವಾಯುಃ ಇತಿ । ಕಾಣ್ವ ಆಯುರ್ಋಷಿಃ । ಇಂದ್ರೋ ದೇವತಾ । ಅಯುಜಾಂ ಬೃಹತೀ ಛಂದಃ । ಯುಜಾಂ ಸತೋ ಬೃಹತೀಛಂದಃ । ವಿನಿಯೋಗಃ ಸೂಕ್ತಾದವಗಂತವ್ಯಃ ॥**

ಅನುವಾದವು— **ಯಥಾ ಮನೌ ವಿವಸ್ವತಿ** ಎಂಬ ಈ ಸೂಕ್ತವು ವಾಲಖಿಲ್ಯಸೂಕ್ತಗಳಲ್ಲಿ ನಾಲ್ಕನೆಯದು. ಇದರಲ್ಲಿ ಹತ್ತು ಋಕ್ಕುಗಳಿರುವವು; ಈ ಸೂಕ್ತಕ್ಕೆ **ಆಯುಃ ಕಾಣ್ವಃ** ಎಂಬುವನು ಋಷಿಯು; ಇಂದ್ರನು ದೇವತೆಯು; ಈ ಸೂಕ್ತದ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು; ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು. ಅನುಕ್ರಮಣಿಕೆಯಲ್ಲಿ— **ಯಥಾ ಮನಾವಾಯುಃ** ಎಂದು ಹೇಳಿರುವುದು ವಿನಿಯೋಗವನ್ನು ಸೂತ್ರದಿಂದ ತಿಳಿದುಕೊಳ್ಳಬೇಕು.

## ಸೂಕ್ತ—೫೨

(ವಾಲಖಿಲ್ಯಸೂಕ್ತ—೪)

ಮಂಡಲ—೮ ॥ ಅನುವಾಕ—೬ ॥ ಸೂಕ್ತ—೫೨ ॥
ಅಷ್ಟಕ—೬ ॥ ಅಧ್ಯಾಯ—೪ ॥ ವರ್ಗ—೨೦, ೨೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥
॥ ಋಷಿಃ—ಆಯುಃ ಕಾಣ್ವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಪ್ರಾಗಾಥಂ (ಅಯುಜಃ ಬೃಹತ್ಯಃ । ಯುಜಃ ಸತೋಬೃಹತ್ಯಃ ॥

॥ ಸಂಹಿತಾಪಾಠಃ ॥

**ಯಥಾ ಮನೌ ವಿವಸ್ವತಿ ಸೋಮಂ ಶಕ್ರಾಪಿಬಃ ಸುತಂ ।**
**ಯಥಾ ತ್ರಿತೇ ಛಂದ ಇಂದ್ರ ಜುಜೋಷಸ್ಯಾಯೌ ಮಾದಯಸೇ ಸಚಾ ॥ ೧ ॥**

॥ ಪದಪಾಠಃ ॥

**ಯಥಾ । ಮನೌ । ವಿವಸ್ವತಿ । ಸೋಮಂ । ಶಕ್ರ । ಅಪಿಬಃ । ಸುತಂ ।**
**ಯಥಾ । ತ್ರಿತೇ । ಛಂದಃ । ಇಂದ್ರ । ಜುಜೋಷಸಿ । ಆಯೌ । ಮಾದಯಸೇ । ಸಚಾ ॥ ೧ ॥**

॥ ಭಾಷ್ಯಂ ॥

**ಹೇ ಶಕ್ರ ಸಮರ್ಥೇಂದ್ರ ಯಥಾ ಯೇನ ಪ್ರಕಾರೇಣ ವಿವಸ್ವತಿ ವಿವಸ್ವತಃ ಪುತ್ರೇ ವೈವಸ್ವತೇ ಮನೌ ವರ್ತಮಾನಂ ಸುತಮಭಿಷುತಂ ಸೋಮಂ ಅಪಿಬಃ ಪೀತವಾನಸಿ । ಹೇ ಇಂದ್ರ ಪರಮೇಶ್ವರ ಯಥಾ ಚ ತ್ರಿತೇ ಏತನ್ನಾಮಕೇ ಋಷೌ ವರ್ತಮಾನಂ ಛಂದಃ ವೇದಜಾತಂ ಜುಜೋಷಸಿ ಭೃಶಂ ಸೇವಸೇ । ತಥಾ ಆಯೌ ಏತನ್ನಾಮಕೇ ಮಯಿ ಸಚಾ ಸಹ ವರ್ತಮಾನಂ ಸೋಮಂ ಛಂದೋಲಕ್ಷಣಂ ತದುಭಯಂ ಸಂಸೇವ್ಯ ಮಾದಯಸೇ ಆನಂದಯಸಿ ಮಾಮಾತ್ಮಾನಂ ಚ ॥**

॥ ಪ್ರತಿಪದಾರ್ಥ ॥

**ಶಕ್ರ**—ಸಾಮರ್ಥ್ಯೋಪೇತನಾದ । **ಇಂದ್ರ**—ಎಲೈ ಇಂದ್ರನೇ । **ಯಥಾ**—ಯಾವ ಪ್ರಕಾರವಾಗಿ । **ವಿವಸ್ವತಿ**—ವಿವಸ್ವಂತನ ಪುತ್ರನಾದ । **ಮನೌ**—ಮನುವಿನಲ್ಲಿದ್ದ । **ಸುತಂ**—ಹಿಂಡಿದ । **ಸೋಮಂ**—

**ಸೋಮ**ವನ್ನು | **ಅಪಿಬಃ**—ಪಾನಮಾಡಿದೆಯೋ | **ಯಥಾ**—ಯಾವ ರೀತಿ | **ತ್ರಿತೇ**—ತ್ರಿತನಲ್ಲಿ ನಿರ್ಮಿತವಾದ | **ಛಂದಃ**—ಛಂದೋಮಯಿಯಾದ ಸ್ತುತಿಯನ್ನು | **ಜುಜೋಷಸಿ**—ಸೇವಿಸಿದೆಯೋ ಅದೇ ರೀತಿ | **ಆಯೌ**—ಆಯುಸಂಜ್ಞಕನಾದ ನನ್ನಲ್ಲಿ | **ಸಚಾ**—ಒಂದಾಗಿದ್ದು | **ಮಾದಯಸೇ**—ನನ್ನ ಸೋಮ ಮತ್ತು ಸ್ತುತಿಗಳಿಂದ ತೃಪ್ತಿಯನ್ನು ಹೊಂದು.

॥ ಭಾವಾರ್ಥ ॥

ಸಾಮರ್ಥ್ಯೋಪೇತನಾದ ಎಲೈ ಇಂದ್ರನೇ, ಯಾವ ಪ್ರಕಾರವಾಗಿ ವಿವಸ್ವಂತನ ಪುತ್ರನಾದ ಮನುವಿನಲ್ಲಿದ್ದ ಹಿಂಡಿದ ಸೋಮವನ್ನು ಪಾನಮಾಡಿದೆಯೋ, ಯಾವ ರೀತಿ ತ್ರಿತನಲ್ಲಿ ನಿರ್ಮಿತವಾದ ಛಂದೋಮಯಿಯಾದ ಸ್ತುತಿಯನ್ನು ಸೇವಿಸಿದೆಯೋ ಅದೇ ರೀತಿ ಆಯುಸಂಜ್ಞಕನಾದ ನನ್ನೊಡನಿದ್ದು ನನ್ನಿಂದ ಅರ್ಪಿತವಾಗುವ ಸೋಮವನ್ನೂ, ಸ್ತುತಿಯನ್ನೂ ಸೇವಿಸಿ ತೃಪ್ತನಾಗು.

## English Translation.

Indra, as you drunk the Soma of Manu as you fulfilled the wishes of Trita as you were exhilarated.

॥ ಸಂಹಿತಾಪಾಠಃ ॥

ಪೃಷಧ್ರೇ ಮೇಧ್ಯೇ ಮಾತರಿಶ್ವನೀಂದ್ರ ಸುವಾನೇ ಅಮಂದಥಾಃ ।
ಯಥಾ ಸೋಮಂ ದಶಶಿಪ್ರೇ ದಶೋಣ್ಯೇ ಸ್ಯೂಮರಶ್ಮಾವೃಜೂನಸಿ ॥ ೨ ॥

॥ ಪದಪಾಠಃ ॥

ಪೃಷಧ್ರೇ । ಮೇಧ್ಯೇ । ಮಾತರಿಶ್ವನಿ । ಇಂದ್ರ । ಸುವಾನೇ । ಅಮಂದಥಾಃ ।
ಯಥಾ । ಸೋಮಂ । ದಶऽಶಿಪ್ರೇ । ದಶऽಓಣ್ಯೇ । ಸ್ಯೂಮऽರಶ್ಮೌ । ಋಜೂನಸಿ ॥ ೨ ॥

॥ ಭಾಷ್ಯಂ ॥

**ಹೇ ಇಂದ್ರ ಸುವಾನೇ ಸೋಮಾಭಿಷವಂ ಕುರ್ವಾಣೇ ಪೃಷಧ್ರೇ ಏತನ್ನಾಮಕೇ ಋಷೌ ವರ್ತಮಾನಂ ಸೋಮಂ ಪೀತ್ವಾ ಯಥಾ ಅಮಂದಥಾಃ ಹೃಷ್ಟವಾನಸಿ। ಯಥಾ ಚ ಮೇಧ್ಯೇ ಮಾತರಿಶ್ವನಿ ದಶಶಿಪ್ರೇ ದಶೋಣ್ಯೇ ಸ್ಯೂಮರಶ್ಮೌ ಋಜೂನಸಿ ಚ ಏತೇಷು ಸರ್ವೇಷ್ವೃಷಿಷು ವರ್ತಮಾನಂ ಸೋಮಂ ಪೀತ್ವಾ ಅಮಂದಥಾಃ । ತದಾ ಮಾಂ ಮಾದಯಸೇ ಇತಿ ಪೂರ್ವೇಣ ಸಂಬಂಧಃ ॥**

ಪದಾರ್ಥ ॥

ಇಂದ್ರ—ಎಲೈ ಇಂದ್ರನೇ | **ಸುವಾನೇ**—ಸೋಮಾಭಿಷವವನ್ನು ಮಾಡತಕ್ಕ | **ಪೃಷಧ್ರೇ**—ಪೃಷಧ್ರನೆಂಬ ಋಷಿಯಲ್ಲಿದ್ದ | **ಸೋಮಂ**—ಸೋಮವನ್ನು ಪಾನಮಾಡಿ | **ಯಥಾ**—ಯಾವ ರೀತಿ |

ಮಂದಥಾಃ— ಹರ್ಷವನ್ನು ಹೊಂದಿದೆಯೋ (ಹಾಗೆಯೇ) | ಮೇಧ್ಯೇ—ಮೇಧ್ಯನಲ್ಲಿಯೂ | ಮಾತರಿಶ್ವನಿ—ಮಾತರಿಶ್ವನಲ್ಲಿಯೂ | ದಶಶಿಪ್ರೇ-ದಶಶಿಪ್ರನಲ್ಲಿಯೂ | ದಶೋಣ್ಯೇ-ದಶೋಣ್ಯನಲ್ಲಿಯೂ | ಸ್ಯೂಮರಶ್ಮೌ—ಸ್ಯೂಮರಶ್ಮಿಯಲ್ಲಿಯೂ | ಋಜೂನಸಿ—ಋಜೂನನಲ್ಲಿಯೂ ಸಿದ್ಧವಾಗಿದ್ದ ಸೋಮವನ್ನು ಪಾನಮಾಡಿ ಯಾವ ರೀತಿ ಹರ್ಷವನ್ನು ಹೊಂದಿದೆಯೋ ಅದರಂತೆಯೇ ನನ್ನಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ ಹರ್ಷವನ್ನು ಹೊಂದು.

|| ಭಾವಾರ್ಥ ||

ಎಲೈ ಇಂದ್ರನೇ, ಸೋಮಾಭಿಷವವನ್ನು ಮಾಡುವ (ಮಾಡಿದ) ಪೃಷಧ್ರ, ಮೇಧ್ಯ, ಮಾತರಿಶ್ವ, ದಶಶಿಪ್ರ, ದಶೋಣ್ಯ, ಸ್ಯೂಮರಶ್ಮಿ, ಋಜೂನ ಎಂಬ ಈ ಎಲ್ಲಾ ಋಷಿಗಳಿಂದಲೂ ಅರ್ಪಿತವಾದ ಸೋಮವನ್ನು ಪಾನಮಾಡಿ, ಯಾವ ರೀತಿ ಹರ್ಷವನ್ನು ಹೊಂದಿದೆಯೋ, ಅದೇ ರೀತಿ ನನ್ನಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ ಹರ್ಷವನ್ನು ಹೊಂದು.

English Translation.

As you become exhilarated with Prishadra when Matararishva effuses Soma at the rite. As you did drink the radiant Soma with Dasashipra and Dashonya.

|| ಸಂಹಿತಾಪಾಠಃ ||

ಯ ಉಕ್ಥಾ ಕೇವಲಾ ದಧೇ ಯಃ ಸೋಮಂ ಧೃಷಿತಾಪಿಬತ್ |
ಯಸ್ಮೈ ವಿಷ್ಣುಸ್ತ್ರೀಣಿ ಪದಾ ವಿಚಕ್ರಮ ಉಪ ಮಿತ್ರಸ್ಯ ಧರ್ಮಭಿಃ ||೩||

|| ಪದಪಾಠಃ ||

ಯಃ | ಉಕ್ಥಾ | ಕೇವಲಾ | ದಧೇ | ಯಃ | ಸೋಮಂ | ಧೃಷಿತಾ | ಅಪಿಬತ್ |
ಯಸ್ಮೈ | ವಿಷ್ಣುಃ | ತ್ರೀಣಿ | ಪದಾ | ವಿಽಚಕ್ರಮೇ | ಉಪ | ಮಿತ್ರಸ್ಯ | ಧರ್ಮಽಭಿಃ || ೩ ||

|| ಭಾಷ್ಯಂ ||

ಯ ಇಂದ್ರಃ ಕೇವಲಾ ಕೇವಲಾನಿ ಅತ್ಮಸ್ವಾಮಿಕಾನಿ ಉಕ್ಥಾ ಉಕ್ಥಾನಿ ಶಸ್ತ್ರಾಣಿ ದಧೇ ಅವಧಾರಯತಿ | ಶೃಣ್ವತೀತ್ಯರ್ಥಃ (? ಶೃಣೋತಿ) | ಯಶ್ಚೇಂದ್ರಃ ಧೃಷಿತಃ ಶತ್ರೂಣಾಂ ಧರ್ಷಕಃ ಅಭಿಭವಿತಾ ಸನ್ ಸೋಮಮಪಿಬತ್ ಪೀತವಾನ್ | ಯಸ್ಮೈ ಇಂದ್ರಾಯ ತದರ್ಥಂ ವಿಷ್ಣುರ್ವ್ಯಾಪಕ ಉಪೇಂದ್ರಃ ಮಿತ್ರಸ್ಯ | ಮಿತ್ರೋಽಹರಭಿಮಾನೀ ದೇವಃ | ಅಹರ್ವೈ ಮಿತ್ರೋ ರಾತ್ರಿರ್ವರುಣಃ (ಐ. ಬ್ರಾ. ೪-೧೦) ಇತಿ ಶ್ರುತೇಃ | ತಸ್ಯ ಧರ್ಮಭಿಃ ಧರ್ಮೈಃ ಉದಯಾಸ್ತಮಯ್ಯೈರ್ವ್ಯಾಪಾರೈರುಪಲಕ್ಷಿತಃ ಸನ್ ತ್ರೀಣಿ

ಪದಾ ತ್ರಿಭಿಃ ಪಾದೈಃ ವಿಚಕ್ರಮೇ ವಿಶೇಷೇಣ ಆಕ್ರಾಂತವಾನ್ ತ್ರಿಲೋಕೀಂ । ಸ ಇಂದ್ರೋಽಸ್ಮಾನ್ ಮಾದಯತ್ವಿತಿ ಆಶೀಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಇಂದ್ರನು । **ಕೇವಲಾ**—ಆತ್ಮತೃಪ್ತಿಯನ್ನು ಕೊಡತಕ್ಕ । **ಉಕ್ಥಾ**—ಶಸ್ತ್ರರೂಪವಾದ ಸ್ತುತಿಗಳನ್ನು । **ದಧೇ**—ಹೊಂದಿದನೋ । **ಧೃಷತಾ**—ಶತ್ರುಧರ್ಷಕನಾದ । **ಯಃ**—ಯಾರು । **ಸೋಮಂ**—ಸೋಮವನ್ನು । **ಅಪಿಬತ್**—ಪಾನಮಾಡಿದನೋ । **ಯಸ್ಮೈ**—ಯಾವನಿಗೋಸ್ಕರ । **ವಿಷ್ಣುಃ**—ವ್ಯಾಪಕನಾದ ವಿಷ್ಣುವು । **ಮಿತ್ರಸ್ಯ**—ಮಿತ್ರದೇವನ । **ಧರ್ಮಭಿಃ**—ಉದಯಾಸ್ತಮಯರೂಪವಾದ ಧರ್ಮಗಳಿಂದ । **ಉಪ**—ನಿರ್ದೇಶಿಸಲ್ಪಟ್ಟು । **ತ್ರೀಣಿ ಪದಾ**—ತನ್ನ ಮೂರು ಪಾದಗಳನ್ನೂ । **ವಿಚಕ್ರಮೇ**—ಹರಡಿ ವ್ಯಾಪಿಸಿದನೋ ಅಂತಹ ಇಂದ್ರನು ನಮ್ಮ ಸೋಮವನ್ನು ಪಾನಮಾಡಿ ತೃಪ್ತನಾಗಲಿ.

॥ ಭಾವಾರ್ಥ ॥

ಯಾವ ಇಂದ್ರನು ಆತ್ಮತೃಪ್ತಿಯನ್ನು ಕೊಡತಕ್ಕ ಶಸ್ತ್ರರೂಪವಾದ ಸ್ತುತಿಗಳನ್ನು ಹೊಂದಿದನೋ, ಶತ್ರುಧರ್ಷಕನಾದ ಯಾವ ಇಂದ್ರನು ಸೋಮವನ್ನು ಪಾನಮಾಡಿದನೋ, ಯಾರಿಗೋಸ್ಕರ ಸರ್ವವ್ಯಾಪಿಯಾದ ವಿಷ್ಣುವು ಮಿತ್ರದೇವನ ಉದಯಾಸ್ತಮಯರೂಪವಾದ ಧರ್ಮಗಳಿಂದ ನಿರ್ದೇಶಿಸಲ್ಪಟ್ಟು ತನ್ನ ಮೂರು ಪಾದಗಳನ್ನೂ ಹರಡಿ ವ್ಯಾಪಿಸಿದನೋ ಅಂತಹ ಇಂದ್ರನು ನಮ್ಮ ಸೋಮವನ್ನು ಪಾನಮಾಡಿ ತೃಪ್ತನಾಗಲಿ.

## English Translation.

He who has taken for himself the hymns, who has dared heroically drink Soma, in whose presence Vishnu put three steps as directed by Mitra.

॥ ಸಂಹಿತಾಪಾಠಃ ॥

ಯಸ್ಯ ತ್ವಮಿಂದ್ರ ಸ್ತೋಮೇಷು ಚಾಕನೋ ವಾಜೇ ವಾಜಿಞ್ಛತಕ್ರತೋ ।
ತಂ ತ್ವಾ ವಯಂ ಸುದುಘಾಮಿವ ಗೋದುಹೋ ಜುಹೂಮಸಿ ಶ್ರವಸ್ಯವಃ ॥

॥ ಪದಪಾಠಃ ॥

ಯಸ್ಯ । ತ್ವಂ । ಇಂದ್ರ । ಸ್ತೋಮೇಷು । ಚಾಕನಃ । ವಾಜೇ । ವಾಜಿನ್ । ಶತಕ್ರತೋ ಇತಿ ಶತಽಕ್ರತೋ ।
ತಂ । ತ್ವಾ । ವಯಂ ಸುದುಘಾಂಽಇವ । ಗೋಽದುಹಃ । ಜುಹೂಮಸಿ । ಶ್ರವಸ್ಯವಃ ॥ ೪ ॥

॥ ಭಾಷ್ಯಂ ॥

ಹೇ ವಾಜಿನ್ ಅನ್ನವನ್ ಹೇ ಶತಕ್ರತೋ ಬಹುಕರ್ಮವನ್ನಿಂದ್ರ ತ್ವಂ ಯಸ್ಯ ಯಜಮಾನಸ್ಯ ಸ್ತೋಮೇಷು ಸ್ತೋತ್ರೇಷು ನಿಮಿತ್ತೇಷು ವಾಜೇ ಹವಿರ್ಲಕ್ಷಣೇ ಅನ್ನೇ ಚ ನಿಮಿತ್ತಭೂತೇ ಸತಿ ಚಾಕನಃ

ತೃಪ್ಯಸಿ ತಂ ತಾದೃಶಂ ತ್ವಾ ತ್ವಾಮಿಂದ್ರಂ ಶ್ರವಸ್ಯವಃ । ಶ್ರವ ಇತ್ಯನ್ನನಾಮ । ಅನ್ನಕಾಮಾ ವಯಂ ಯಜಮಾನಾಃ ಜುಹುಮಃ ಹವಿರ್ದದ್ಮಃ । ತತ್ರ ದೃಷ್ಟಾಂತಃ । ಸುದುಘಾಮಿವ ಗೋದುಹಃ । ಗೋದೋಗ್ಧಾರಃ ಸುದೋಗ್ಧ್ರೀಂ ಗಾಂ ಪ್ರತಿ ಯಥಾ ಹರಿತತೃಣಾದಿಕಂ ದದತಿ ತದ್ವತ್ ॥

॥ ಪ್ರತಿಪದಾರ್ಥ ॥

**ಶತಕ್ರತೋ**—ಅನೇಕ ಕರ್ಮಕರ್ತನೂ । **ವಾಜಿನ್**—ಅನ್ನವಂತನಾದವನೂ ಆದ । **ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಯಸ್ಯ**—ಯಾವ ಯಜಮಾನನ । **ಸ್ತೋಮೇಷು**—ಸ್ತುತಿಕಾಲದಲ್ಲಿ । **ವಾಜೇ**—ಅವನ ಅನ್ನನಿಮಿತ್ತವಾಗಿ । **ಚಾಕನಃ**—ನಿನ್ನ ತೃಪ್ತಿಯನ್ನು ಪ್ರಕಟಿಸುವೆಯೋ । **ತಂ ತ್ವಾ**—ಅದೇ ಯಜಮಾನನ ಸಂಬಂಧಿಯಾದ ನಿನ್ನನ್ನು । **ಶ್ರವಸ್ಯವಃ**—ಅನ್ನೇಚ್ಛುಗಳಾದ । **ವಯಂ**—ನಾವು । **ಗೋದುಹಃ**—ಗೋವನ್ನು ಕರೆಯಲಿಚ್ಛಿಸುವವರು । **ಸುದುಘಾಂ ಇವ**—ಉತ್ತಮವಾದ ಧೇನುವನ್ನು ಸಮೀಪಿಸಿ ಕರೆಯುವಂತೆ । **ಜುಹೂಮಸಿ**—ಕರೆಯುತ್ತೇವೆ.

॥ ಭಾವಾರ್ಥ ॥

ಅನೇಕ ಕರ್ಮಕರ್ತನೂ, ಅನ್ನವಂತನೂ ಆದ ಎಲೈ ಇಂದ್ರನೇ, ನೀನು ಯಾವ ಯಜಮಾನನ ಸ್ತುತಿಕಾಲದಲ್ಲಿ ಅವನ ಅನ್ನನಿಮಿತ್ತವಾಗಿ ನಿನ್ನ ತೃಪ್ತಿಯನ್ನು ಪ್ರಕಟಿಸುವೆಯೋ ಅದೇ ಯಜಮಾನನ ಸಂಬಂಧಿಯಾದ ನಿನ್ನನ್ನು ಅನ್ನೇಚ್ಛುಗಳಾದ ನಾವು ಗೋವನ್ನು ಕರೆಯಲು ಇಚ್ಛಿಸುವವರು ಉತ್ತಮವಾದ ಧೇನುವನ್ನು ಸಮೀಪಿಸಿ ಕರೆಯುವಂತೆ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Indra of great speed who desires praises in the rite, we are invoking you desirous of food like milkers calling cows giving milk.

॥ ಸಂಹಿತಾಪಾಠಃ ॥

ಯೋ ನೋ ದಾತಾ ಸ ನಃ ಪಿತಾ ಮಹಾಁ ಉಗ್ರ ಈಶಾನಕೃತ್ ।
ಅಯಾಮನ್ನುಗ್ರೋ ಮಘವಾ ಪುರೂವಸುರ್ಗೋರಶ್ವಸ್ಯ ಪ್ರ ದಾತು ನಃ ॥

॥ ಪದಪಾಠಃ ॥

ಯಃ । ನಃ । ದಾತಾ । ಸಃ । ನಃ । ಪಿತಾ । ಮಹಾನ್ । ಉಗ್ರಃ । ಈಶಾನ್ಽಕೃತ್ ।
ಅಯಾಮನ್ । ಉಗ್ರಃ । ಮಘ್ಽವಾ । ಪುರುಽವಸುಃ । ಗೋಃ । ಅಶ್ವಸ್ಯ । ಪ್ರ । ದಾತು । ನಃ ॥ ೫ ॥

॥ ಭಾಷ್ಯಂ ॥

ಯ ಇಂದ್ರಃ ನೋಽಸ್ಮಭ್ಯಂ ದಾತಾ ಧನಾದೇರ್ದಪತಿ (? ದದಾತಿ) ಸಃ ಇಂದ್ರಃ ನೋಽಸ್ಮಾಕಂ ಪಿತಾ ಪಾಲಕೋ ಭವತು । ಕೀದೃಶಃ ಸಃ । ಮಹಾನ್ ಪ್ರೌಢಃ ಉಗ್ರಃ ಉದ್ಗೂರ್ಣಬಲಃ ಈಶಾನಕೃತ್ ।

ದೀನಮೀಶಾನಂ ಪ್ರಭುಂ ಕರೋತೀತಿ ತಥಾ । ದೀನದಯಾಲುರಿತ್ಯರ್ಥಃ । ತಾದೃಶಃ ಸ ಮಘವಾ ಧನವಾನಿಂದ್ರಃ ನೋಽಸ್ಮಭ್ಯಂ ಗೋಃ ಗಾಮಶ್ವಸ್ಯ ಅಶ್ವಂ ಚ । ಉಭಯತ್ರ ಕರ್ಮಣಿ ಷಷ್ಠೀ । ಪ್ರದಾತು ಪ್ರಕರ್ಷೇಣ ದದಾತು । ಕೀದೃಶೋ ಮಘವಾ । ಅಯಾಮನ್ । ಯಾಂತ್ಯನೇನೇತಿ ಯಾಮಾ ಮಾರ್ಗಃ । ಸ ನ ವಿದ್ಯತೇ ಯಸ್ಯಾಸಾವಯಾಮಾ । ತಸ್ಮಿನ್ನಯಾಮನಿ । ಸುಪಾಂ ಸುಲುಕ್ ಇತಿ ಸಪ್ತಮ್ಯಾ ಲುಕ್ । ಮಾರ್ಗರಹಿತೇ ಪಾಪಿನಿ ಪುಂಸಿ ಉಗ್ರಃ ಉದ್ಗೂರ್ಣಬಲಃ ತಸ್ಮಿನ್ ಆವಿಷ್ಕೃತಪ್ರಭುಶಕ್ತಿರಿತ್ಯರ್ಥಃ । ಪುರುವಸುಶ್ಚ ಪ್ರಭೂತಗವಾಶ್ವಾದಿಧನೋಪೇತಃ ॥

॥ ಪ್ರತಿಪದಾರ್ಥ ॥

**ಮಹಾನ್**—ಮಹಾತ್ಮನೂ । **ಉಗ್ರಃ**—ಅತ್ಯಧಿಕವಾದ ಬಲವುಳ್ಳವನೂ । **ಈಶಾನಕೃತ್**—ಅಶಕ್ತನನ್ನೂ ಪ್ರಭುವನ್ನಾಗಿ ಮಾಡತಕ್ಕವನೂ ಆದ । **ಯಃ**—ಯಾವ ಇಂದ್ರನು । **ನಃ**—ನಮಗೆ । **ದಾತಾ**—ಉತ್ತಮವಾದ ದಾತೃವಾಗಿರುವನೋ । **ಸಃ**—ಅವನೇ । **ನಃ**—ನಮಗೆ । **ಪಿತಾ**—ಪಾಲಕನಾಗಿರಲಿ । **ಅಯಾಮನ್**—ಪಾಪಮಾರ್ಗರಹಿತನೂ । **ಉಗ್ರಃ**—ಭಯಂಕರನೂ । **ಪುರೂವಸುಃ**—ಅಧಿಕವಾದ ಧನವುಳ್ಳವನೂ ಆದ । **ಮಘವಾ**—ಇಂದ್ರನು । **ನಃ**—ನಮಗೆ । **ಗೋಃ**—ಗೋವುಗಳನ್ನೂ । **ಅಶ್ವಸ್ಯ**—ಅಶ್ವಗಳನ್ನೂ । **ಪ್ರ ದಾತು**—ಒದಗಿಸಿ ಕೊಡಲಿ.

॥ ಭಾವಾರ್ಥ ॥

ಮಹಾತ್ಮನೂ, ಅತ್ಯಧಿಕವಾದ ಬಲವುಳ್ಳವನೂ, ಅಶಕ್ತನನ್ನು ಪ್ರಭುವನ್ನಾಗಿ ಮಾಡತಕ್ಕವನೂ ಆದ ಯಾವ ಇಂದ್ರನು ನಮಗೆ ಉತ್ತಮವಾದ ದಾತೃವಾಗಿರುವನೋ, ಅವನೇ ನಮಗೆ ಪಾಲಕನಾಗಿರಲಿ. ಪಾಪಮಾರ್ಗರಹಿತನೂ, ಭಯಂಕರನೂ, ಅಧಿಕವಾದ ಧನವುಳ್ಳವನೂ ಆದ ಇಂದ್ರನು ನಮಗೆ ಗೋವುಗಳನ್ನೂ, ಅಶ್ವಗಳನ್ನೂ ಒದಗಿಸಿ ಕೊಡಲಿ.

## English Translation.

He is our giver, he is our father, he is noble, ferocious, Lord of wealth. Ferocious Maghavan, May Indra Lord of abnndance grant us cattle and horses.

॥ ಸಂಹಿತಾಪಾಠಃ ॥

ಯಸ್ಮೈ ತ್ವಂ ವಸೋ ದಾನಾಯ ಮಂಹಸೇ ಸ ರಾಯಸ್ಪೋಷಮಿನ್ವತಿ ।
ವಸೂಯವೋ ವಸುಪತಿಂ ಶತಕ್ರತುಂ ಸ್ತೋಮೈರಿಂದ್ರಂ ಹವಾಮಹೇ ॥

॥ ಪದಪಾಠಃ ॥

ಯಸ್ಮೈ । ತ್ವಂ । ವಸೋ ಇತಿ । ದಾನಾಯ । ಮಂಹಸೇ । ಸಃ । ರಾಯಃ । ಪೋಷಂ । ಇನ್ವತಿ ।
ವಸುಽಯವಃ । ವಸುಽಪತಿಂ । ಶತಽಕ್ರತುಂ । ಸ್ತೋಮೈಃ । ಇಂದ್ರಂ । ಹವಾಮಹೇ ॥ ೬ ॥

|| ಭಾಷ್ಯಂ ||

ಹೇ ವಸೋ ವಾಸಯಿತರಿಂದ್ರ ತ್ವಂ ಯಸ್ಮೈ ಯಜಮಾನಾಯ ದಾತವ್ಯಂ ಧನಾದಿಕಂ ಮಂಹಸೇ ದದಾಸಿ ಸ ತಾದೃಶೋ ಯಜಮಾನಃ ರಾಯಃ ಧನಸ್ಯ ಪೋಷಂ ಪುಷ್ಟಿಂ ಇನ್ವತಿ ವ್ಯಾಪ್ನೋತಿ । ಧನಸಮೃದ್ಧಿಂ ಪ್ರಾಪ್ನೋತೀತ್ಯರ್ಥಃ । ಅತೋ ಹೇ ಇಂದ್ರ ವಸೂಯವಃ ಧನಕಾಮಾ ವಯಂ ಯಜಮಾನಾ ವಸುಪತಿಂ ಧನಪಾಲಕಂ ಶತಕ್ರತುಂ ಬಹುಕರ್ಮಾಣಂ ಇಂದ್ರ ಪರಮೇಶ್ವರ ( ? ಇಂದ್ರಂ ಪರಮೇಶ್ವರಂ) ತ್ವಾಂ ಸ್ತೋತ್ರೈಃ ಹವಾಮಹೇ ಆಹ್ವಯಾಮಃ ॥

॥ ಪ್ರತಿಪದಾರ್ಥ ॥

**ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ತ್ವಂ**—ನೀನು । **ಯಸ್ಮೈ**—ಯಾವ ಯಜಮಾನನಿಗೆ । **ದಾನಾಯ**—ದಾನಾರ್ಹವಾದ ಪದಾರ್ಥಗಳನ್ನು । **ಮಂಹಸೇ**—ಕೊಡುವೆಯೋ । **ಸಃ**—ಅವನು । **ರಾಯಃ**—ಸಂಪತ್ತಿನ । **ಪೋಷಂ**—ಪುಷ್ಟಿಯನ್ನು । **ಇನ್ವತಿ**—ಹೊಂದುತ್ತಾನೆ । **ವಸುಯವಃ**—ಧನಾಪೇಕ್ಷಿಗಳಾದ ನಾವು । **ವಸುಪತಿಂ**—ಧನಕ್ಕೆ ಒಡೆಯನೂ । **ಶತಕ್ರತುಂ**—ಅನೇಕ ಕರ್ಮಕರ್ತನೂ ಆದ । **ಇಂದ್ರಂ**—ಇಂದ್ರನನ್ನು । **ಸ್ತೋಮೈಃ**—ಸ್ತುತಿಗಳಿಂದ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ.

॥ ಭಾವಾರ್ಥ ॥

ವಸತಿದಾಯಕನಾದ ಎಲೈ ಇಂದ್ರನೇ, ನೀನು ಯಾವ ಯಜಮಾನನಿಗೆ ದಾನಾರ್ಹವಾದ ಪದಾರ್ಥಗಳನ್ನು ಕೊಡುವೆಯೋ ಅವನು ಸಂಪತ್ಪುಷ್ಟಿಯನ್ನು ಪಡೆಯುತ್ತಾನೆ. ಧನಾಪೇಕ್ಷಿಗಳಾದ ನಾವು ಧನಕ್ಕೆ ಒಡೆಯನೂ, ಅನೇಕ ಕರ್ಮಕರ್ತನೂ ಆದ ಇಂದ್ರನನ್ನು ಸ್ತುತಿಗಳಿಂದ ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Indra, whom you wishes to give, his wealth goes increasing ; Desirous of wealth we invoke Vasumati and Satakritu with praises.

॥ ಸಂಹಿತಾಪಾಠಃ ॥

ಕದಾ ಚನ ಪ್ರ ಯುಚ್ಛಸ್ಯುಭೇ ನಿ ಪಾಸಿ ಜನ್ಮನೀ ।
ತುರೀಯಾದಿತ್ಯ ಹವನಂ ತ ಇಂದ್ರಿಯಮಾ ತಸ್ಥಾವಮೃತಂ ದಿವಿ ॥ ೭ ॥

॥ ಪದಪಾಠಃ ॥

ಕದಾ । ಚನ । ಪ್ರ । ಯುಚ್ಛಸಿ । ಉಭೇ ಇತಿ । ನಿ । ಪಾಸಿ । ಜನ್ಮನೀ ಇತಿ ।
ತುರೀಯ । ಆದಿತ್ಯ । ಹವನಂ । ತೇ । ಇಂದ್ರಿಯಂ । ಆ । ತಸ್ಥೌ । ಅಮೃತಂ । ದಿವಿ ॥ ೭ ॥

‖ ಭಾಷ್ಯಂ ‖

ಇದಾನೀಮೃಷಿಃ ಸೂರ್ಯರೂಪೇಣೇಂದ್ರಂ ಸ್ತೌತಿ । ಹೇ ಇಂದ್ರ ಕದಾಚನ ಕದಾಪಿ ತ್ವಂ ಪ್ರ ಯುಚ್ಛಸಿ ಪ್ರಮತ್ತೋ ಭವಸಿ । ನೈವ ಭವಸೀತಿ ಕಟಾಕ್ಷಃ । ಅಹೋರಾತ್ರಂ ಜಾಗರೂಕ ಏವಾಸೀತ್ಯರ್ಥಃ। ಯತಸ್ತ್ವಮುಭೇ ಜನ್ಮನೀ । ಏಕಮದಿತೇರಿಂದ್ರರೂಪೇಣ ಜನ್ಮ । ದ್ವಿತೀಯಂ ಬ್ರಹ್ಮವಿದ್ಯಾತಃ ಜಗದಾತ್ಮರೂಪೇಣೇತಿ ದ್ವೇ ಜನುಷೀ । ನಿ ಪಾಸಿ ನಿತರಾಂ ಪಾಲಯಸಿ । ನ ಹ್ಯಸಾವಧಾನಃ ಪ್ರಪಂಚಂ ಪರಮಾರ್ಥಂ ಚ ಉಭಯಂ ಕರ್ತುಂ ಶಕ್ನುಯಾತ್ ಕಶ್ಚಿದಿತಿ ಭಾವಃ । ಹೇ ತುರೀಯ ಪ್ರತ್ಯಗಾತ್ಮ-ರೂಪೇಣ ಅವಸ್ಥಾತ್ರಯಾತೀತ ಹೇ ಆದಿತ್ಯ ಅದಿತಿಪುತ್ರ ಇಂದ್ರ ತೇ ತವ ಸ್ವಭೂತಮಿಂದ್ರಿಯಮಿಂದ್ರಸ್ಯ ತವ ಲಿಂಗಂ ದ್ಯೋತಕಂ ಹವನಂ । ಹೂಯತೇಽಸ್ಮಿನ್ನಿತಿ ಹವನಮಾದಿತ್ಯಮಂಡಲಂ । ಅಗ್ನೌ ಪ್ರಾಸ್ತಾ-ಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ಇತಿ ಸ್ಮೃತೇರಾದಿತ್ಯಮಂಡಲಸ್ಯ ಹೋಮಾಧಿಷ್ಠಾನತ್ವಂ ಪ್ರಸಿದ್ಧಂ । ತಾದೃಶಂ ಮಂಡಲಂ ಅಮೃತಂ ಮರಣಧರ್ಮರಹಿತಂ ಸತ್ ದಿವಿ ದ್ಯುಲೋಕೇ ಆ ತಸ್ಥೌ ಅಭಿಮುಖ್ಯೇ-ನಾತಿಷ್ಠತ್ ! ಯಸ್ಮಾತ್ತ್ವಂ ಜಗದಾತ್ಮಾಸೀತ್ಯತಸ್ತ್ವಾಂ ಹವಾಮಹ ಇತಿ ಪೂರ್ವೇಣಾನ್ವಯಃ ॥

‖ ಪ್ರತಿಪದಾರ್ಥ ‖

(ಎಲೈ ಇಂದ್ರನೇ) **ಕದಾ ಚನ**—ಯಾವಾಗ ತಾನೇ | **ಪ್ರ ಯುಚ್ಛಸಿ**—ನೀನು ನಿನ್ನ ಕರ್ತವ್ಯವನ್ನು ಮರೆಯುತ್ತೀಯೆ। **ಉಭೇ ಜನ್ಮನೀ**—ನಿತ್ಯಾನಿತ್ಯರೂಪಗಳಿಂದ ಎರಡು ಜನ್ಮಗಳನ್ನೂ | **ನಿ ಪಾಸಿ**—ಪೂರ್ಣವಾಗಿ ರಕ್ಷಿಸುತ್ತೀಯೆ | **ತುರೀಯ**—ಅತ್ಯುತ್ತಮವಾದ ನಾಲ್ಕನೆಯ ಸ್ಥಾನದಲ್ಲಿರುವ | **ಆದಿತ್ಯ**—ಆದಿತ್ಯರೂಪನಾದ ಎಲೈ ಇಂದ್ರನೇ | **ತೇ**—ನಿನ್ನ | **ಇಂದ್ರಿಯಂ**—ಸ್ವರೂಪದ್ಯೋತಕವಾದುದೂ | **ಅಮೃತಂ**—ಶಾಶ್ವತವಾದುದೂ ಆದ | **ಹವನಂ**—ಆದಿತ್ಯಮಂಡಲವು | **ದಿವಿ**—ದ್ಯುಲೋಕದಲ್ಲಿ | **ಆ ತಸ್ಥೌ**—ಸ್ಥಾಪಿತವಾಗಿದೆ.

‖ ಭಾವಾರ್ಥ ‖

ಎಲೈ ಇಂದ್ರನೇ, ನೀನು ನಿನ್ನ ಕರ್ತವ್ಯವನ್ನು ಮರೆತಿರುವ ಕಾಲವಿಲ್ಲವೇ ಇಲ್ಲ. ಯಾವಾಗಲೂ ನೀನು ಜಾಗರೂಕನಾಗಿಯೇ ಇದ್ದು ನಿತ್ಯಾನಿತ್ಯರೂಪಗಳಾದ ಎರಡು ಜನ್ಮಗಳನ್ನೂ ಪೂರ್ಣವಾಗಿ ರಕ್ಷಿಸುತ್ತೀಯೆ. ಅತ್ಯುತ್ತಮವಾದ ನಾಲ್ಕನೆಯ ಸ್ಥಾನದಲ್ಲಿರುವ ಆದಿತ್ಯರೂಪನಾದ ಎಲೈ ಇಂದ್ರನೇ, ನಿನ್ನ ಸ್ವರೂಪದ್ಯೋತಕವಾದುದೂ, ಶಾಶ್ವತವಾದುದೂ ಆದ ಆದಿತ್ಯಮಂಡಲವು ದ್ಯುಲೋಕದಲ್ಲಿ ಸ್ಥಾಪಿತವಾಗಿದೆ.

## English Translation.

Never do you fall into error; you protect both kind. Speedy Aditya the blazing invocation for you rests in heaven.

‖ ಸಂಹಿತಾಪಾಠಃ ‖

**ಯಸ್ಮೈ ತ್ವಂ ಮಘವನ್ನಿಂದ್ರ ಗಿರ್ವಣಃ ಶಿಕ್ಷೋ ಶಿಕ್ಷಸಿ ದಾಶುಷೇ ।**

**ಅಸ್ಮಾಕಂ ಗಿರ ಉತ ಸುಷ್ಟುತಿಂ ವಸೋ ಕಣ್ವವಚ್ಛೃಣುಧೀ ಹವಂ ॥ ೮ ॥**

॥ ಪದಪಾಠಃ ॥

ಯಸ್ಮೈ । ತ್ವಂ । ಮಘಽವನ್ । ಇಂದ್ರ । ಗಿರ್ವಣಃ । ಶಿಕ್ಷೋ ಇತಿ । ಶಿಕ್ಷಸಿ । ದಾಶುಷೇ ।

ಅಸ್ಮಾಕಂ । ಗಿರಃ । ಉತ । ಸುಽಸ್ತುತಿಂ । ವಸೋ ಇತಿ । ಕಣ್ವಽವತ್ । ಶೃಣುಧಿ । ಹವಂ ॥ ೮ ॥

॥ ಭಾಷ್ಯಂ ॥

ಹೇ ಮಘವನ್ ಧನವನ್ ಹೇ ಗಿರ್ವಣಃ ಗೀರ್ಭಿರ್ವನನೀಯ ಹೇ ಶಿಕ್ಷೋ ಶಿಕ್ಷಕೇಂದ್ರ ದಾಶುಷೇ ಹವಿರ್ದತ್ತವತೇ ಯಸ್ಮೈ ಯಜಮಾನಾಯ ಶಿಕ್ಷಸಿ ಅಪೇಕ್ಷಿತಂ ಧನಾದಿ ದದಾಸಿ ತತ್ಸಂಬಂಧಿನಾಮಸ್ಮಾಕಂ ಗಿರಃ ಪ್ರಾರ್ಥನಾವಾಚಃ ಶೃಣುಧಿ ಶೃಣು । ಉತಾಪಿ ಚ ಹೇ ವಸೋ ವಾಸಯಿತರಿಂದ್ರ ಸುಷ್ಟುತಿಂ ಶೋಭನಾಂ ಸ್ತುತಿಂ ಶೃಣುಧಿ । ಕಿಂಚ ಕಣ್ವವತ್ ಯಥಾ ಕಣ್ವಸ್ಯ ಹವಮಾಹ್ವಾನಮಶೃಣೋಃ ಏವಮಸ್ಮಾಕಂ ಹವಂ ಶೃಣು ॥

॥ ಪ್ರತಿಪದಾರ್ಥ ॥

**ಗಿರ್ವಣಃ**—ಸ್ತುತಿಗಳಿಂದ ಪ್ರಶಂಸಿತನೂ । **ಮಘವನ್**—ಧನವಂತನೂ । **ಶಿಕ್ಷೋ**—ಉಪದೇಶಕನೂ ಆದ । **ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ದಾಶುಷೇ**—ಹವಿಸ್ಸನ್ನು ಅರ್ಪಿಸುವ । **ಯಸ್ಮೈ**—ಯಾವ ಯಜಮಾನನಿಗೆ । **ಶಿಕ್ಷಸಿ**—ಧನದಾನವನ್ನು ಮಾಡುವೆಯೋ । **ಅಸ್ಮಾಕಂ**—ಅದೇ ಯಜಮಾನ ಸಂಬಂಧಿಗಳಾದ ನಮ್ಮ । **ಗಿರಃ**—ಸ್ತುತಿವಾಕ್ಯಗಳನ್ನೂ । **ಉತ**—ಮತ್ತು । **ಸುಷ್ಟುತಿಂ**—ಪ್ರಶಂಸಾಪೂರ್ವಕ ವಾದ । **ಹವಂ**—ಆಹ್ವಾನವನ್ನೂ । **ವಸೋ**—ವಸತಿದಾಯಕನಾದ ಎಲೈ ಇಂದ್ರನೇ । **ಕಣ್ವವತ್**—ಕಣ್ವನ ಪ್ರಾರ್ಥನೆಯನ್ನು ಕೇಳಿದಂತೆ । **ಶೃಣುಧಿ**—ಕೇಳು.

॥ ಭಾವಾರ್ಥ ॥

ಸ್ತುತಿಗಳಿಂದ ಪ್ರಶಂಸಿತನೂ, ಧನವಂತನೂ, ಉಪದೇಶಕನೂ ಆದ ಎಲೈ ಇಂದ್ರನೇ, ನೀನು ಹವಿಸ್ಸನ್ನು ಅರ್ಪಿಸುವ ಯಾವ ಯಜಮಾನನಿಗೆ ಧನದಾನವನ್ನು ಮಾಡುವೆಯೋ ಅದೇ ಯಜಮಾನಸಂಬಂಧಿಗಳಾದ ನಮ್ಮ ಸ್ತುತಿವಾಕ್ಯಗಳನ್ನೂ ಮತ್ತು ಪ್ರಶಂಸಾಪೂರ್ವಕವಾದ ಆಹ್ವಾನವನ್ನೂ ವಸತಿದಾಯಕನಾದ ಎಲೈ ಇಂದ್ರನೇ, ಕಣ್ವನ ಪ್ರಾರ್ಥನೆಯನ್ನು ಕೇಳಿದಂತೆ ಕೇಳು.

## English Translation.

Worshipable, liberal Maghavan you give to the sacrificer ; giver of dwellings, as you did hear of the invocation of Kanwa likewise do you hear our words, praises and invocation.

॥ ಸಂಹಿತಾಪಾಠಃ ॥

ಅಸ್ತಾವಿ ಮನ್ಮ ಪೂರ್ವ್ಯಂ ಬ್ರಹ್ಮೇಂದ್ರಾಯ ವೋಚತ ।

ಪೂರ್ವೀರ್ಋತಸ್ಯ ಬೃಹತೀರನೂಷತ ಸ್ತೋತುರ್ಮೇಧಾ ಅಸೃಕ್ಷತ ॥ ೯ ॥

॥ ಪದಪಾಠಃ ॥

**ಅಸ್ತಾವಿ । ಮನ್ಮ । ಪೂರ್ವ್ಯಂ । ಬ್ರಹ್ಮ । ಇಂದ್ರಾಯ । ವೋಚತ ।**

**ಪೂರ್ವೀಃ । ಋತಸ್ಯ । ಬೃಹತೀಃ । ಅನೂಷತ । ಸ್ತೋತುಃ । ಮೇಧಾಃ । ಅಸೃಕ್ಷತ ॥ ೯ ॥**

॥ ಭಾಷ್ಯಂ ॥

ಹೇ ಋತ್ವಿಜಃ ಮನ್ಮ ಮನನೀಯಂ ಪೂರ್ವ್ಯಂ ಪುರಾತನಂ ಯತ್ ಬ್ರಹ್ಮ ಸ್ತೋತ್ರಂ ಅಸಾವಿ (?ಅಸ್ತಾವಿ) ಸ್ತುತಿವಿಷಯೀಕೃತಂ ಭವದ್ಭಿಸ್ತತ್ ಬ್ರಹ್ಮ ಸ್ತೋತ್ರಂ ಇಂದ್ರಾಯ ಪರಮೇಶ್ವರಾಯ ತದರ್ಥಂ ವೋಚತ ಬ್ರೂತ । ಯತೋ ಭವಂತಃ ಋತಸ್ಯ ಸತ್ಯಸ್ಯೇಂದ್ರಸ್ಯ ಸಂಬಂಧಿನೀಃ ಪೂರ್ವೀಃ ಬಹ್ವೀಃ ಬೃಹತೀಃ ಮಹತೀಃ । ಸಾಮರ್ಥ್ಯಾತ್ ಮೂರ್ತೀಃ ಇಂದ್ರಸ್ಯ ಪ್ರಚುರಾನ್ ಮಹತೋ ಗುಣಾವತಾರಾನಿತ್ಯರ್ಥಃ । ಅನೂಷತ ಸ್ತುತಿವಿಷಯೀಕೃತವಂತಃ ಕಿಂಚ ಸ್ತೋತುರ್ಮಮ ಆಯೋಃ ಮೇಧಾಃ ಧಾರಣಾವತೀಃ ಬುದ್ಧೀಃ ಅಸೃಕ್ಷತ ಸೃಷ್ಟವಂತಃ । ಅತಃ ಪ್ರಾರ್ಥಯೇ ಬ್ರಹ್ಮೇಂದ್ರಾಯ ವೋಚತೇತಿ ॥

॥ ಪ್ರತಿಪದಾರ್ಥ ॥

(ಎಲೈ ಋತ್ವಿಕ್ಕುಗಳೇ) **ಋತಸ್ಯ**—ಸತ್ಯಾತ್ಮಕನಾದ ಇಂದ್ರನಿಗೆ ಸಂಬಂಧಿಸಿದ । **ಪೂರ್ವೀಃ**—ಅನೇಕವಾದವೂ । **ಬೃಹತೀಃ**—ಮಹತ್ತಾದವೂ ಆದ ಸ್ತುತಿಗಳನ್ನು । **ಅನೂಷತ**—ಪಠಿಸಿದ್ದೀರಿ । **ಸ್ತೋತುಃ**—ಸ್ತುತಿಕರ್ತನಾದ ನನ್ನ । **ಮೇಧಾಃ**—ಬುದ್ಧಿಯನ್ನು । **ಅಸೃಕ್ಷತ**—ಸಂಸ್ಕರಿಸಿದ್ದೀರಿ (ಆದುದರಿಂದ) । **ಮನ್ಮ**—ಧ್ಯಾನಾತ್ಮಕವಾದುದೂ । **ಪೂರ್ವ್ಯಂ**—ಪುರಾತನವಾದುದೂ ಆದ ಯಾವ ಸ್ತುತಿಯು । **ಅಸ್ತಾವಿ**—ಹಿಂದೆಲ್ಲಾ ಪಠಿತವಾಗಿದೆಯೋ ಅಂತಹ । **ಬ್ರಹ್ಮ**—ಉತ್ತಮವಾದ ಸ್ತುತಿಯನ್ನು । **ಇಂದ್ರಾಯ**—ಇಂದ್ರನನ್ನುದ್ದೇಶಿಸಿ । **ವೋಚತ**—ಪಠಿಸಿರಿ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಸತ್ಯಾತ್ಮಕನಾದ ಇಂದ್ರನಿಗೆ ಸಂಬಂಧಿಸಿದ ಅನೇಕ ವಿಧವಾದವೂ, ಮಹತ್ತಾದವೂ ಆದ ಸ್ತುತಿಗಳನ್ನು ನೀವು ಪಠಿಸಿ ಸ್ತುತಿಕರ್ತನಾದ ನನ್ನ ಬುದ್ಧಿಯನ್ನು ಸಂಸ್ಕರಿಸಿದ್ದೀರಿ ಆದುದರಿಂದ, ಧ್ಯಾನಾತ್ಮಕವಾದುದೂ, ಪುರಾತನವಾದುದೂ ಆದ ಯಾವ ಸ್ತುತಿಯು ಹಿಂದೆಲ್ಲಾ ಪಠಿತವಾಗಿದೆಯೋ ಅಂತಹ ಉತ್ತಮವಾದ ಸ್ತುತಿಯನ್ನು ಇಂದ್ರನನ್ನುದ್ದೇಶಿಸಿ ಪಠಿಸಿರಿ.

## English Translation.

Sing ancient hymns in praise of Indra, Sing the grand hyman before the rite and animate the body of the worshippers.

॥ ಸಂಹಿತಾಪಾಠಃ ॥

ಸಮಿಂದ್ರೋ ರಾಯೋ ಬೃಹತೀರಧೂನುತ ಸಂ ಕ್ಷೋಣೀ ಸಮು ಸೂರ್ಯಂ ।
ಸಂ ಶುಕ್ರಾಸಃ ಶುಚಯಃ ಸಂ ಗವಾಶಿರಃ ಸೋಮಾ ಇಂದ್ರಮಮಂದಿಷುಃ ॥

॥ ಪದಪಾಠಃ ॥

ಸಂ । ಇಂದ್ರಃ । ರಾಯಃ । ಬೃಹತೀಃ । ಅಧೂನುತ । ಸಂ । ಕ್ಷೋಣೀ ಇತಿ । ಸಂ । ಊಂ ಇತಿ । ಸೂರ್ಯಂ ।
ಸಂ । ಶುಕ್ರಾಸಃ । ಶುಚಯಃ । ಸಂ । ಗೋಽಆಶಿರಃ । ಸೋಮಾಃ । ಇಂದ್ರಂ । ಅಮಂದಿಷುಃ ॥ ೧೦ ॥

॥ ಭಾಷ್ಯಂ ॥

ಯ ಇಂದ್ರಃ ಬೃಹತೀಃ ಮಹಾಂತಿ ರಾಯಃ ಹಿರಣ್ಯಾದಿಧನಾನಿ ಸಮಧೂನುತ ಸಮ್ಯಗಕರೋತ್ । ಯಶ್ಚೇಂದ್ರಃ ಕ್ಷೋಣೀ ದ್ಯಾವಾಪೃಥಿವ್ಯೌ ಸಮಧೂನುತ ಸಮಕ್ ರಚಯಾಂಚಕ್ರೇ । ಕ್ಷೋಣೀ ಇತಿ ದ್ಯಾವಾಪೃಥಿವ್ಯೋರ್ನಾಮಧೇಯಂ । ರೋದಸೀ ಕ್ಷೋಣೀ ಅಂಧಸೀ ಇತಿ ತನ್ನಾಮಸು ಪಾಠಾತ್ । ಕಿಂಚ ಯ ಇಂದ್ರಃ ಸೂರ್ಯಂ ಮಂಗಲಾತ್ಮಾನಂ ಸಮಧೂನುತ ಸಮಜನಯತ್ । ತಮಿಂದ್ರಂ ಶುಕ್ರಾಸಃ ಶುಕ್ಲಾಃ ದೀಪ್ತಾಃ ಶುಚಯಃ ಪೂತಾಃ ಆಪಃ ವಸತೀವರ್ಯೇಕಧನಾಃ ಲಕ್ಷಣಾಃ ಸಮಮಂದಿಷುಃ ಸಮ್ಯಗಮಾದಯನ್ ॥ ಕಿಂಚ ಗವಾಶಿರಃ ಗೋದುಗ್ಧಂ ಸೋಮಾಃ ತದ್ರಸಾಶ್ಚ ತಮಿಂದ್ರಂ ಸಮಮಂದಿಷುಃ । ಇತ್ಥಂ ಮಹಾನುಭಾವ ಇಂದ್ರೋಽಸೀತಿ ತ್ವದರ್ಥಂ ಬ್ರಹ್ಮ ವೋಚತ ಇತಿ ಪೂರ್ವೇಣ ಸಂಬಂಧಃ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । ಬೃಹತೀಃ—ಮಹತ್ತಾದ । ರಾಯಃ—ಧನವನ್ನು । ಸಮಧೂನುತ—ಒದಗಿಸಿಕೊಟ್ಟಿದ್ದಾನೆ । ಕ್ಷೋಣೀ—ದ್ಯಾವಾಪೃಥಿವಿಗಳನ್ನು । ಸಂ—ಸರಿಯಾಗಿ ರಚಿಸಿದ್ದಾನೆ । ಸೂರ್ಯಂ—ಸೂರ್ಯನನ್ನು । ಸಮು—ನಿರ್ಮಿಸಿದ್ದಾನೆ । ಇಂದ್ರಂ—ಅದೇ ಇಂದ್ರನನ್ನು । ಶುಕ್ರಾಸಃ—ಪ್ರಭಾಯುತವಾದವೂ । ಶುಚಯಃ—ಪರಿಶುದ್ಧವಾದವೂ । ಗವಾಶಿರಃ—ಕ್ಷೀರಾದ್ಯಾಶ್ರಯಣದ್ರವ್ಯಗಳಿಂದ ಕೂಡಿದವೂ ಆದ । ಸೋಮಾಃ—ಸೋಮರಸಗಳು । ಸಂ ಅಮಂದಿಷುಃ—ತೃಪ್ತನನ್ನಾಗಿ ಮಾಡಿವೆ.

॥ ಭಾವಾರ್ಥ ॥

ಇಂದ್ರನು ನಮಗೆಲ್ಲಾ ಮಹತ್ತಾದ ಧನವನ್ನು ಒದಗಿಸಿಕೊಟ್ಟಿದ್ದಾನೆ. ದ್ಯಾವಾಪೃಥಿವಿಗಳನ್ನು ಸರಿಯಾಗಿ ರಚಿಸಿದ್ದಾನೆ. ಸೂರ್ಯನನ್ನು ನಿರ್ಮಿಸಿದ್ದಾನೆ. ಅದೇ ಇಂದ್ರನನ್ನು ಪ್ರಭಾಯುತವಾದವೂ, ಪರಿಶುದ್ಧವಾದವೂ, ಕ್ಷೀರಾದ್ಯಾಶ್ರಯಣದ್ರವ್ಯಗಳಿಂದ ಕೂಡಿದವೂ ಆದ ಸೋಮರಸಗಳು ತೃಪ್ತನನ್ನಾಗಿ ಮಾಡಿವೆ.

# ಐವತ್ತೆಂಟನೆಯ ಸೂಕ್ತವು

## (ವಾಲಖಿಲ್ಯಸೂಕ್ತ—೧೦)

|| ಭಾಷ್ಯಂ ||

**ಯಮೃತ್ವಿಜಃ ಇತಿ ತೃಚಾತ್ಮಕಂ ದಶಮಂ ಸೂಕ್ತಂ ಕಾಣ್ವಸ್ಯ ಮೇಧ್ಯಸ್ಯಾರ್ಷಂ ವೈಶ್ವದೇವಂ ತ್ರೈಷ್ಟುಭಂ । ಅನುಕ್ರಾಂತಂ ಚ ಯಮೃತ್ವಿಜಸ್ತೃಚಂ ವೈಶ್ವದೇವಮಾದ್ಯ ಋತ್ವಿಕ್‌ಸ್ತುತಿರ್ವಾ ಇತಿ । ಆದ್ಯಾ ಋತ್ವಿಗ್ದೇವತ್ಯಾ ವಾ ಇತ್ಯರ್ಥಃ । ವಿನಿಯೋಗಃ ಸೂತ್ರಾದವಗಂತವ್ಯಃ ||**

ಅನುವಾದವು—**ಯಮೃತ್ವಿಜಃ** ಎಂಬ ಈ ಸೂಕ್ತವು ವಾಲಖಿಲ್ಯಸೂಕ್ತಗಳಲ್ಲಿ ಹತ್ತನೆಯದು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಮೇಧ್ಯಃ ಕಾಣ್ವಃ** ಎಂಬುವನು ಋಷಿಯು; ವಿಶ್ವೇದೇವತೆಗಳು ಅಥವಾ ಋತ್ವಿಜರು ದೇವತೆಗಳು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಮೃತ್ವಿಜಸ್ತೃಚಃ ವೈಶ್ವದೇವಮಾದ್ಯ ಋತ್ವಿಕ್ಸ್ತುತಿರ್ವಾ** ಎಂದು ಹೇಳಿರುವುದು. ವಿನಿಯೋಗವನ್ನು ಸೂತ್ರದಿಂದ ತಿಳಿದುಕೊಳ್ಳಬೇಕು.

## ಸೂಕ್ತ—೫೮

(ವಾಲಖಿಲ್ಯಸೂಕ್ತ—೧೦)

ಮಂಡಲ—೮ || ಅನುವಾಕ—೬ || ಸೂಕ್ತ—೫೮ ||

ಅಷ್ಟಕ—೬ || ಅಧ್ಯಾಯ—೪ || ವರ್ಗ—೨೯ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ||

|| ಋಷಿಃ—ಮೇಧ್ಯಃ ಕಾಣ್ವಃ ||

|| ದೇವತಾ—೧. ವಿಶ್ವೇದೇವಾ ಋತ್ವಿಜೋ ವಾ । ೨-೩. ವಿಶ್ವೇ ದೇವಾಃ ||

|| ಛಂದಃ—ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಯಮೃ॒ತ್ವಿಜೋ॑ ಬಹು॒ಧಾ ಕ॒ಲ್ಪಯಂ॑ತಃ॒ ಸಚೇ॑ತಸೋ ಯ॒ಜ್ಞಮಿ॒ಮಂ
ವಹಂ॑ತಿ ।
ಯೋ ಅ॑ನೂ॒ಚಾನೋ ಬ್ರಾ॑ಹ್ಮ॒ಣೋ ಯು॒ಕ್ತ ಆ॑ಸೀ॒ತ್ಕಾ ಸ್ವಿ॒ತ್ತತ್ರ॒ ಯಜ॑-
ಮಾನಸ್ಯ ಸಂ॒ವಿತ್ ॥ ೧ ||

॥ ಪದಪಾಠಃ ॥

ಯಂ । ಋತ್ವಿಜಃ । ಬಹುಧಾ । ಕಲ್ಪಯಂತಃ । ಸಽಚೇತಸಃ । ಯಜ್ಞಂ । ಇಮಂ । ವಹಂತಿ ।

ಯಃ । ಅನೂಚಾನಃ । ಬ್ರಾಹ್ಮಣಃ । ಯುಕ್ತಃ । ಆಸೀತ್ । ಕಾ । ಸ್ವಿತ್ । ತತ್ರ । ಯಜಮಾನಸ್ಯ । ಸಂಽವಿತ್ ॥ ೧ ॥

॥ ಭಾಷ್ಯಂ ॥

ಸಚೇತಸಃ ಸಮಾನಪ್ರಜ್ಞಾಃ ಋತ್ವಿಜಃ ಯಮಿಮಂ ಯಜ್ಞಂ ಯಜನೀಯಂ ಕರ್ಮವಿಶೇಷಂ ಬಹುಧಾ ಅನೇಕಪ್ರಕಾರೇಣ ಕಲ್ಪಯಂತಃ ರಚಯಂತಃ ಸಂತಃ ವಹಂತಿ ದೇವಾನ್ ಪ್ರಾಪಯಂತಿ । ತಮಿಮಂ ಯಜ್ಞಂ ಕುರ್ವನ್ ಬ್ರಾಹ್ಮಣಃ ಋತ್ವಿಗ್ಲಕ್ಷಣೋ ವಿಪ್ರಃ ಯಜ್ಞಕರ್ಮವಿಶೇಷೇ ಯುಕ್ತಃ ಸಮಾಹಿತಃ ಆಸೀತ್ । ತತ್ರ ಕರ್ಮಣಿ ಕಾ ಸ್ವಿತ್ । ಸ್ವಿದಿತಿ ವಿತರ್ಕೇ । ಕಾ ವಾ ಯಜಮಾನಸ್ಯ ಸಂವಿತ್ ಪ್ರಜ್ಞಾ । ನ ಕಿಂಚಿತ್ಕರಾ ಇತ್ಯರ್ಥಃ । ಯತ್ರ ಕರ್ಮಣಿ ಋತ್ವಿಗೇವ ಸಾವಧಾನೋಽಸ್ತಿ ತತ್ರ ಯಜಮಾನಸ್ಯ ಪ್ರಜ್ಞಾಪಾಟವೇನ ಕಿಂ ಪ್ರಯೋಜನಮಸ್ತಿ । ನ ಕಿಂಚಿದಪೀತಿ ಭಾವಃ । ಕೀದೃಶೋ ಬ್ರಾಹ್ಮಣಃ । ಅನೂಚಾನಃ ಗುರೋಃ ಸಕಾಶಾದಧೀತವೇದವೇದಾಂಗಃ ॥

। ಪ್ರತಿಪದಾರ್ಥ ।

**ಸಚೇತಸಃ**—ಸಮಾನವಾದ ಪ್ರಜ್ಞೆಯುಳ್ಳ । **ಋತ್ವಿಜಃ**—ಋತ್ವಿಕ್ಕುಗಳು । **ಯಂ**—ಯಾವ ಯಜ್ಞವನ್ನು । **ಬಹುಧಾ**—ಅನೇಕ ಪ್ರಕಾರವಾಗಿ । **ಕಲ್ಪಯಂತಃ**—ರಚಿಸುತ್ತಾ । **ಯಜ್ಞಂ**—ಇದೇ ಯಜ್ಞಕ್ಕೆ । **ವಹಂತಿ**—ದೇವತೆಗಳನ್ನು ಬರಮಾಡುವರೋ (ಅಲ್ಲದೇ) । **ಇಮಂ**—ಈ ಯಜ್ಞಕ್ಕೆ । **ಯುಕ್ತಃ**—ನಿಯಮಿತನಾಗಿ । **ಅನೂಚಾನಃ**—ವೇದಾಧ್ಯಯನಸಂಪನ್ನನಾದವನೂ । **ಯಃ ಬ್ರಾಹ್ಮಣಃ ಆಸೀತ್**—ಯಾವ ಋತ್ವಿಗ್ರೂಪನಾದವನೂ ಆದ ಬ್ರಾಹ್ಮಣನಿರುವನೋ । **ತತ್ರ**—ಅಂತಹ ಉತ್ತಮವಾದ ಯಜ್ಞದಲ್ಲಿ । **ಯಜಮಾನಸ್ಯ**—ಯಜಮಾನನ । **ಸಂವಿತ್**—ಪೂರ್ಣಜ್ಞಾನದ ಆವಶ್ಯಕತೆಯು । **ಕಾ ಸ್ವಿತ್**—ಏಕೆ ತಾನೇ ಬೇಕು?

। ಭಾವಾರ್ಥ ।

ಯಾವ ಯಜ್ಞವನ್ನು ಸಮಾನವಾದ ಪ್ರಜ್ಞೆಯುಳ್ಳ ಋತ್ವಿಕ್ಕುಗಳು ಅನೇಕ ಪ್ರಕಾರವಾಗಿ ರಚಿಸುತ್ತಾ, ಇದೇ ಯಜ್ಞಕ್ಕೆ ದೇವತೆಗಳನ್ನು ಬರಮಾಡುವರೋ, ಅಲ್ಲದೇ, ಇದೇ ಯಾವ ಯಜ್ಞದಲ್ಲಿ ವೇದಾಧ್ಯಯನಸಂಪನ್ನನೂ, ಋತ್ವಿಗ್ರೂಪನೂ ಆದ ಬ್ರಾಹ್ಮಣನು ಕರ್ಮಾಸಕ್ತನಾಗಿರುವನೋ ಅಂತಹ ಉತ್ತಮವಾದ ಯಜ್ಞದಲ್ಲಿ ಯಜಮಾನನ ಪೂರ್ಣಜ್ಞಾನದ ಆವಶ್ಯಕತೆಯು ತಾನೇ ಏನು?

## English Translation.

Of him who is variously conceived by the noble minded priests engaged in this rite who do not atter any word, are engaged as a priest, how little do the worshippers know of him.

॥ ಸಂಹಿತಾಪಾಠಃ ॥

ಏಕ ಏವಾಗ್ನಿರ್ಬಹುಧಾ ಸಮಿದ್ಧ ಏಕಃ ಸೂರ್ಯೋ ವಿಶ್ವಮನು ಪ್ರಭೂತಃ ।
ಏಕೈವೋಷಾಃ ಸರ್ವಮಿದಂ ವಿ ಭಾತ್ಯೇಕಂ ವಾ ಇದಂ ವಿ ಬಭೂವ
ಸರ್ವಂ ॥ ೨ ॥

॥ ಪದಪಾಠಃ ॥

ಏಕಃ । ಏವ । ಅಗ್ನಿಃ । ಬಹುಧಾ । ಸಂಽಇದ್ಧಃ । ಏಕಃ । ಸೂರ್ಯಃ । ವಿಶ್ವಂ । ಅನು । ಪ್ರಽಭೂತಃ ।
ಏಕಾ । ಏವ । ಉಷಾಃ । ಸರ್ವಂ । ಇದಂ । ವಿ । ಭಾತಿ । ಏಕಂ । ವೈ । ಇದಂ । ವಿ । ಬಭೂವ । ಸರ್ವಂ ॥

॥ ಭಾಷ್ಯಂ ॥

ಏಕಃ ಕೇವಲ ಏವಾಗ್ನಿಃ ದಾನಾದಿಗುಣಯುಕ್ತೋ ದೇವಃ ಬಹುಧಾ ಬಾಡವವೈದ್ಯುತಾದ್ಯನೇಕಪ್ರಕಾರೇಣ ಸಮಿದ್ಧಃ ಸಮ್ಯಕ್ ದೀಪ್ತೋ ಭವತಿ। ಯಥಾ ಏಕಃ ಏಕಾಕೀ ಸೂರ್ಯಃ ಪ್ರಾಣಿನಾಂ ಸುಷ್ಟು ಕರ್ಮಸ್ವೀರಯಿತಾ ದೇವಃ ವಿಶ್ವಂ ಸರ್ವಂ ಜಗದನು ಅನುಪ್ರವಿಶ್ಯ । ತತ್ಸೃಷ್ಟ್ವಾ ತದೇವಾನುಪ್ರಾವಿಶತ್ (ತೈ. ಉ. ೨-೬) ಇತಿ ಶ್ರುತೇಃ। ಪ್ರಭೂತಃ ಅನೇಕಾತ್ಮತಯಾ ಪ್ರಾದುರ್ಭೂತೋಽಸ್ತಿ । ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ (ಋ. ಸಂ. ೧-೧೧೫-೧) ಇತಿ ಶ್ರುತೇಃ । ಕಿಂಚ ಏಕಾ ಏಕಾಕಿನ್ಯೇವ ಉಷಾಃ ತಮೋ ವಿನಾಶಯಂತೀ ದೇವೀ ಸರ್ವಂ ಸಮಸ್ತಮಿದಂ ದೃಶ್ಯಮಾನಂ ಜಗತ್ ವಿ ಭಾತಿ ವಿಶೇಷೇಣ ದೀಪಯತಿ। ತಸ್ಮಾದೇಕಂ ವೈ ಏಕಮೇವಾದ್ವಿತೀಯಂ ಬ್ರಹ್ಮ ಇದಮಾಬ್ರಹ್ಮಸ್ತಂಬಪರ್ಯಂತಂ ಜಗತ್ ವಿ ಬಭೂವ ವಿಶೇಷೇಣಾಭವದಿತಿ ಯುಕ್ತಮಿತಿ ಶೇಷಃ। ಯದಾಗ್ನ್ಯಾದಯೋ ದೇವಾ ಅಪ್ಯೇಕಾಕಿನಃ ಸಂತೋಽನೇಕಭವನಸಮರ್ಥಾಸ್ತದಾ ಪರಂ ಬ್ರಹ್ಮ ಏಕಂ ಸದನೇಕಂ ಭವೇದಿತಿ ಕಿಮು ವಕ್ತವ್ಯಮಿತ್ಯಭಿಪ್ರಾಯಃ ॥

॥ ಪ್ರತಿಪದಾರ್ಥ ॥

**ಏಕ ಏವಾಗ್ನಿಃ**—ಸತ್ಯಸ್ವರೂಪನಾದ ಒಬ್ಬನೇ ಅಗ್ನಿಯು । **ಬಹುಧಾ**—ವಿದ್ಯುದಾದಿ ನಾನಾರೂಪಗಳಲ್ಲಿ । **ಸಮಿದ್ಧಃ**—ಪ್ರಜ್ವಲಿತನಾಗುತ್ತಾನೆ । **ಏಕಃ ಸೂರ್ಯಃ**—ಒಬ್ಬನೇ ಸೂರ್ಯನು । **ವಿಶ್ವಂ ಅನು**—ಸಕಲ ವಿಶ್ವವನ್ನೂ ಪ್ರವೇಶಿಸಿ । **ಪ್ರಭೂತಃ**—ಬೇರೆ ಬೇರೆ ರೂಪಗಳಲ್ಲಿ ಉತ್ಪನ್ನನಾಗುತ್ತಾನೆ । **ಏಕ ಏವ ಉಷಾಃ**—ಒಬ್ಬಳೇ ಉಷೋದೇವಿಯು । **ಇದಂ ಸರ್ವಂ**—ಈ ಸಕಲ ವಿಶ್ವವನ್ನೂ । **ವಿ ಭಾತಿ**—ಪ್ರಕಾಶಪಡಿಸುತ್ತಾಳೆ । **ಏಕಂ ವಾ ಇದಂ**—ಸತ್ಯಾತ್ಮಕವಾದ ಈ ಒಂದೇ ತತ್ತ್ವವು । **ಸರ್ವಂ**—ಜಗತ್ತಿನ ಸಕಲ ರೂಪಗಳಲ್ಲಿಯೂ । **ವಿ ಬಭೂವ**—ಪರಿಣಮಿತವಾಗಿದೆ.

|| ಭಾವಾರ್ಥ ||

ಸತ್ಯಸ್ವರೂಪನಾದ ಒಬ್ಬನೇ ಅಗ್ನಿಯು ವಿದ್ಯುದಾದಿ ನಾನಾರೂಪಗಳಲ್ಲಿ ಪ್ರಜ್ವಲಿತನಾಗುತ್ತಾನೆ. ಒಬ್ಬನೇ ಸೂರ್ಯನು ಸಕಲ ವಿಶ್ವವನ್ನೂ ಪ್ರವೇಶಿಸಿ ಬೇರೆಬೇರೆ ರೂಪಗಳಲ್ಲಿ ಉತ್ಪನ್ನನಾಗುತ್ತಾನೆ. ಒಬ್ಬಳೇ ಉಷೋದೇವಿಯು ಈ ಸಕಲ ವಿಶ್ವವನ್ನೂ ಪ್ರಕಾಶಪಡಿಸುತ್ತಾಳೆ. ಸತ್ಯಾತ್ಮಕವಾದ ಈ ಒಂದೇ ತತ್ತ್ವವು ಜಗತ್ತಿನ ಸಕಲರೂಪಗಳಲ್ಲಿಯೂ ಪರಿಣಮಿತವಾಗಿದೆ.

## English Translation.

Sage Agni appears kindled in many forms; one Sun lords over the whole world ; one Dawn reveale every thing. One is in various forms.

|| ಸಂಹಿತಾಪಾಠಃ ||

ಜ್ಯೋತಿಷ್ಮಂತಂ ಕೇತುಮಂತಂ ತ್ರಿಚಕ್ರಂ ಸುಖಂ ರಥಂ ಸುಷದಂ ಭೂರಿವಾರಂ ।
ಚಿತ್ರಾಮಘಾ ಯಸ್ಯ ಯೋಗೇಽಧಿಜಜ್ಞೇ ತಂ ವಾಂ ಹುವೇ ಅತಿ ರಿಕ್ತಂ ಪಿಬಧ್ಯೈ ॥ ೩ ॥

|| ಪದಪಾಠಃ ||

ಜ್ಯೋತಿಷ್ಮಂತಂ । ಕೇತುಽಮಂತಂ । ತ್ರಿಽಚಕ್ರಂ । ಸುಽಖಂ । ರಥಂ । ಸುಽಸದಂ । ಭೂರಿಽವಾರಂ । ಚಿತ್ರಽಮಘಾ । ಯಸ್ಯ । ಯೋಗೇ । ಅಧಿಽಜಜ್ಞೇ । ತಂ । ವಾಂ । ಹುವೇ । ಅತಿ । ರಿಕ್ತಂ । ಪಿಬಧ್ಯೈ ॥

|| ಭಾಷ್ಯಂ ||

ಹೇ ವಿಶ್ವೇದೇವಾಃ ವಾಂ । ವಚನವ್ಯತ್ಯಯಶ್ಛಾಂದಸಃ । ವೋ ಯುಷ್ಮಾಕಂ ಮಧ್ಯೇ ಅತಿರಿಕ್ತಂ ನಿರತಿಶಯಂ ತಂ ತಚ್ಛಬ್ದವಾಚ್ಯಂ ಪರಮಾತ್ಮಾನಂ ಪಿಬಧ್ಯೈ ಸೋಮಂ ಪಾತುಂ ಹುವೇ ಆಹ್ವಯಾಮಿ । ತಂ ಕಂ । ಯಸ್ಯ ಪರಮಾತ್ಮನಃ ಯೋಗೇ ಸೇವ್ಯಸೇವಕಭಾವಸಂಬಂಧೇ ಸತಿ ಚಿತ್ರಮಘಾ । ಚಿತ್ರಂ ಚಾಯನೀಯಂ ಮಘಂ ಗವಾಶ್ವಾದಿಲಕ್ಷಣಂ ಧನಂ ಯಸ್ಯಾಃ ಸಾ ಚಿತ್ರಮಘಾ । ಪೂಜನೀಯಾನೇಕಧನೋಪೇತಾ ಲಕ್ಷ್ಮೀಃ ಅಧಿ ಜಜ್ಞೇ ಅಧಿಕಂ ಪ್ರಾದುರಭೂತ್ ಯುಧಿಷ್ಠಿರಾದೇಸ್ತಂ । ಕೀದೃಶಂ ತಂ । ಜ್ಯೋತಿಷ್ಮಂತಂ ಜ್ಯೋತೀಂಷಿ ಸೂರ್ಯಾದೀನಿ ಪ್ರಕಾಶ್ಯತ್ವೇನ ಸಂತಿ ಯಸ್ಯ ತಂ । ತಸ್ಯ ಭಾಸಾ ಸರ್ವಮಿದಂ ವಿಭಾತಿ ಇತಿ ಶ್ರುತೇಃ । ಕೇತುಮಂತಂ । ಕೇತವಃ ಪ್ರಜ್ಞಾಃ ವಿಷಯಾಃ ಸಂತಿ ಯಸ್ಯ ತಂ । ಯಃ ಸರ್ವಜ್ಞಃ ಸರ್ವವಿತ್ (ಮು. ಉ. ೧-೧-೯) ಇತಿ ಶ್ರುತೇಃ । ಕೇತುರಿತಿ ಪ್ರಜ್ಞಾನಾಮ । ಕೇತುಃ ಕೇತ ಇತಿ ತನ್ನಾಮಸು ಪಾಠಾತ್ । ತ್ರಿಚಕ್ರಂ ತ್ರಿಷು ಭೂರಾದಿಲೋಕೇಷು ಚಕ್ರಂ ಚಂಕ್ರಮಣಂ

ತ್ರಿವಿಕ್ರಮಾವತಾರೇ ಯಸ್ಯ ತಂ | ಇದಂ ವಿಷ್ಣುರ್ವಿಚಕ್ರಮೇ (ಋ. ಸಂ. ೧-೧೩-೧೭) ಇತ್ಯಾದಿ ಶ್ರುತೇಃ | ಯದ್ವಾ ತ್ರಿಷು ಲೋಕೇಷು ಅಪ್ರತಿಹತಂ ಚಕ್ರಂ ಸುದರ್ಶನಾಖ್ಯಂ ಯಸ್ಯ ತಂ | ಸುಖಂ ನಿರತಿಶಯಾನಂದಾತ್ಮಕಂ | ಓಂ ಕಂ ಬ್ರಹ್ಮ ಖಂ ಇತಿ ಶ್ರುತೇಃ | ರಥಂ ರಂಹಣಸ್ವಭಾವಂ | ಗಮನಶೀಲಮಿತಿ ಯಾವತ್ | ಅಪಾಣಿಪಾದೋ ಜವನೋ ಗ್ರಹೀತಾ (ಶ್ವೇ. ಉ. ೩-೧೯) ಇತಿ ಶ್ರುತೇಃ | ಸುಷದಂ | ಶೋಭನೇ ಆತ್ಮಸ್ವರೂಪೇ ಸೀದತಿ ತಿಷ್ಠತೀತಿ ಸುಷತ್ ಸುಪ್ರತಿಷ್ಠಃ ತಂ | ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ಇತಿ ಶ್ರುತೇಃ | ಭೂರಿವಾರಂ ಭೂರಿಭಿರ್ಬಹುಭಿಃ ಪ್ರಾಣಿಭಿಃ ವಾರೋ ವರಣೀಯೋಯಸ್ತಂ | ಸರ್ವಾತ್ಮಕತ್ವಾತ್ ಸರ್ವಪ್ರಿಯತ್ವಮುಚಿತಮಸ್ಯ | ಆತ್ಮನಃ ಕಾಮಾಯ ಸರ್ವಂ ಪ್ರಿಯಂ ಭವತಿ (ಬೃ ಉ. ೨-೪-೫) ಇತಿ ಶ್ರುತೇಃ ||

|| ಪ್ರತಿಪದಾರ್ಥ ||

(ಎಲೈ ವಿಶ್ವೇದೇವತೆಗಳೇ) **ಯಸ್ಯ**—ಯಾವ ಪರಮಾತ್ಮನ | **ಯೋಗೇ**—ಸಂಬಂಧವಿರಲಾಗಿ | **ಚಿತ್ರಾಮಘಾ**—ಪೂಜ್ಯವಾದ ಧನದೇವತೆಯು | **ಅಧಿಜಜ್ಞೇ**—ಉತ್ಪನ್ನಳಾಗುವಳೋ ಅಂತಹವನೂ | **ವಾಂ**—ನಿಮ್ಮಲ್ಲೆಲ್ಲಾ | **ಅತಿ ರಿಕ್ತಂ**—ಅತಿಶಯವಾದ ವೈಭವವುಳ್ಳವನೂ | **ಜ್ಯೋತಿಷ್ಮಂತಂ**—ಸೂರ್ಯಾದಿಗಳಿಗೂ ಪ್ರಕಾಶವನ್ನುಂಟುಮಾಡುವ ತೇಜೋಯುತನೂ | **ಕೇತುಮಂತಂ**—ಪ್ರಜ್ಞಾವಿಷಯವುಳ್ಳವನೂ | **ತ್ರಿಚಕ್ರಂ**—ಮೂರು ಲೋಕಗಳಲ್ಲೂ ಸಂಚರಿಸುವ ಸ್ವರೂಪವುಳ್ಳವನೂ | **ಸುಖಂ**—ನಿರತಿಶಯವಾದ ಆತ್ಮಸುಖದಾತೃವೂ | **ರಥಂ**—ಸಂಚಾರಶೀಲನೂ | **ಸುಷದಂ**—ಉತ್ತಮವಾದ ಆತ್ಮಸ್ಥಿತಿಯುಳ್ಳವನೂ | **ಭೂರಿವಾರಂ**—ಸಕಲರ ಅನ್ವೇಷಣೆಗೂ ಪಾತ್ರನೂ ಆದ | **ತಂ**—ಆ ಪರಮಾತ್ಮನನ್ನು | **ಪಿಬಧ್ಯೈ**—ಸೋಮಪಾನಮಾಡಲು | **ಹುವೇ**—ಪ್ರಾರ್ಥಿಸಿ ಕರೆಯುತ್ತೇನೆ.

|| ಭಾವಾರ್ಥ ||

ಎಲೈ ವಿಶ್ವೇದೇವತೆಗಳೇ, ಯಾವ ಪರಮಾತ್ಮನ ಸಂಬಂಧವಿರಲಾಗಿ ಪೂಜ್ಯವಾದ ಧನದೇವತೆಯು ಉತ್ಪನ್ನಳಾಗುವಳೋ ಅಂತಹವನೂ, ನಿಮ್ಮಲ್ಲೆಲ್ಲಾ ಅತಿಶಯವಾದ ವೈಭವವುಳ್ಳವನೂ, ಸೂರ್ಯಾದಿಗಳಿಗೂ ಪ್ರಕಾಶವನ್ನೊದಗಿಸುವ ತೇಜೋಯುತನೂ, ಪ್ರಜ್ಞಾವಿಷಯವುಳ್ಳವನೂ, ಮೂರು ಲೋಕಗಳಲ್ಲೂ ಸಂಚರಿಸುವ ಸ್ವರೂಪವುಳ್ಳವನೂ, ನಿರತಿಶಯವಾದ ಆತ್ಮಸುಖದಾತೃವೂ, ಸಂಚಾರಶೀಲನೂ, ಉತ್ತಮವಾದ ಆತ್ಮಸ್ಥಿತಿಯುಳ್ಳವನೂ, ಸಕಲರ ಅನ್ವೇಷಣೆಗೂ ಪಾತ್ರನೂ ಆದ ಆ ಪರಮಾತ್ಮನನ್ನು ಸೋಮಪಾನಮಾಡಲು ಪ್ರಾರ್ಥಿಸಿ ಕರೆಯುತ್ತೇನೆ.

## English Translation.

Dazzling chariot moving quickly on its three wheels, sending out brilliance with easy seat and abundance with his approach the dawn came out with wounderful abundance ; come here and drink in your charit.



# ಐವತ್ತೊಂಭತ್ತನೆಯ ಸೂಕ್ತವು

(ವಾಲಖಿಲ್ಯಸೂಕ್ತ—೧೧)

|| ಭಾಷ್ಯಂ ||

**ಇಮಾನಿ ವಾಮಿತಿ ಸಪ್ತರ್ಚಮೇಕಾದಶಂ ಸೂಕ್ತಂ ಕಾಣ್ವಸ್ಯ ಸುಪರ್ಣಸ್ಯಾರ್ಷಮೈಂದ್ರಾವರುಣಂ ಜಾಗತಂ । ಇಮಾನಿ ವಾಂ ಸಪ್ತ ಸುಪರ್ಣ ಐಂದ್ರಾವರುಣಂ ಜಾಗತಂ ಇತ್ಯನುಕ್ರಾಂತತ್ವಾತ್ । ವಿನಿಯೋಗಃ ಸೂತ್ರಾದವಗಂತವ್ಯಃ ॥**

ಅನುವಾದವು—**ಇಮಾನಿ ವಾಂ** ಎಂಬ ಈ ಸೂಕ್ತವು ವಾಲಖಿಲ್ಯಸೂಕ್ತಗಳಲ್ಲಿ ಹನ್ನೊಂದನೆಯದು ಮತ್ತು ಕೊನೆಯದು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ **ಸುಪರ್ಣಃ ಕಾಣ್ವಃ** ಎಂಬುವನು ಋಷಿಯು; ಇಂದ್ರಾವರುಣರು ದೇವತೆಯು; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ—**ಇಮಾನಿ ವಾಂ ಸಪ್ತ ಸುಪರ್ಣ ಐಂದ್ರಾವರುಣಂ ಜಾಗತಂ** ಎಂದು ಹೇಳಿರುವುದು. ವಿನಿಯೋಗವನ್ನು ಸೂತ್ರದಿಂದ ತಿಳಿದುಕೊಳ್ಳಬೇಕು.

## ಸೂಕ್ತ—೫೯

(ವಾಲಖಿಲ್ಯಸೂಕ್ತ—೧೧)

ಮಂಡಲ—೮ || ಅನುವಾಕ—೬ || ಸೂಕ್ತ—೫೯ ||
ಅಷ್ಟಕ—೬ || ಅಧ್ಯಾಯ—೪ || ವರ್ಗ—೩೦, ೩೧ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ||
|| ಋಷಿಃ—ಸುಪರ್ಣಃ ಕಾಣ್ವಃ ||
|| ದೇವತಾ—ಇಂದ್ರಾವರುಣೌ ||
|| ಛಂದಃ—ಜಗತೀ ||

|| ಸಂಹಿತಾಪಾಠಃ ||

ಇಮಾನಿ ವಾಂ ಭಾಗಧೇಯಾನಿ ಸಿಸ್ರತ ಇಂದ್ರಾವರುಣಾ ಪ್ರ ಮಹೇ
ಸುತೇಷು ವಾಂ ।
ಯಜ್ಞೇಯಜ್ಞೇ ಹ ಸವನಾ ಭುರಣ್ಯಥೋ ಯತ್ಸುನ್ವತೇ ಯಜಮಾನಾಯ
ಶಿಕ್ಷಥಃ ॥ ೧ ॥

|| ಪದಪಾಠಃ ||

ಇಮಾನಿ । ವಾಂ । ಭಾಗಽಧೇಯಾನಿ । ಸಿಸ್ರತೇ । ಇಂದ್ರಾವರುಣಾ । ಪ್ರ । ಮಹೇ । ಸುತೇಷು । ವಾಂ । ಯಜ್ಞೇಽಯಜ್ಞೇ । ಹ । ಸವನಾ । ಭುರಣ್ಯಥಃ । ಯತ್ । ಸುನ್ವತೇ । ಯಜಮಾನಾಯ । ಶಿಕ್ಷಥಃ ॥

॥ ಭಾಷ್ಯಂ ॥

ಹೇ ಇಂದ್ರಾವರುಣಾ ಇಂದ್ರಾವರುಣೌ ಇಮಾನಿ ಇದಾನೀಂ ಕೃತಾನಿ ಭಾಗಧೇಯಾನಿ ಭವದಂಶಭೂತಾನಿ ಚರುಪುರೋಡಾಶಾದಿಹವೀಂಷಿ ವಾಂ ಯುವಾಂ ಪ್ರತಿ ಸಿಸ್ರತೇ ಪ್ರಾಪ್ನುವಿುಚ್ಛಂತಿ । ಅತಃ ಸುತೇಷು ಅಭಿಷುತೇಷು ಸೋಮೇಷು ಸತ್ಸು ಮಹೇ ಮಹತೇ ಪೂಜನಾಯ ವಾಂ ಯುವಾಂ ಪ್ರ ಪ್ರಾರ್ಥಯೇ । ಉಪಸರ್ಗವಶಾದ್ಯೋಗ್ಯಕ್ರಿಯಾಧ್ಯಾಹಾರಃ । ಯತ್ ಯಸ್ಮಾತ್ ಯಜ್ಞೇಯಜ್ಞೇ ಪ್ರತಿಯಜ್ಞಂ ಸವನಾ ತ್ರಿಷ್ವಪಿ ಸವನೇಷು ಭುರಣ್ಯಥೋ ಹ ಗಚ್ಛಥಃ ಖಲು । ಕಿಂಚ ಸುನ್ವತೇ ಸೋಮಾಭಿಷವಂ ಕುರ್ವತೇ ಯಜಮಾನಾಯ ಶಿಕ್ಷಥಃ ಅಭಿಮತಂ ಪ್ರಯಚ್ಛಥಃ। ಶಿಕ್ಷತಿರ್ದಾನಕರ್ಮಾ। ಪೃಣಾತಿ ಶಿಕ್ಷತಿ ಇತಿ ದಾನಕರ್ಮಸು ಪಾಠಾತ್ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರ ಮತ್ತು ವರುಣ ದೇವತೆಗಳೇ । ಯತ್—ಯಾವ ನಿಮ್ಮ ಪ್ರಭಾವದಿಂದ । ಯಜ್ಞೇ ಯಜ್ಞೇ ಹ—ಪ್ರತಿಯೊಂದು ಯಜ್ಞಕ್ಕೂ । ಸವನಾ—ಮೂರು ಸವನಕಾಲಗಳಲ್ಲೂ । ಭುರಣ್ಯಥಃ—ಹೋಗುವಿರೋ (ಮತ್ತು) । ಸುನ್ವತೇ—ಸೋಮರಸವನ್ನು ಹಿಂಡುವ । ಯಜಮಾನಾಯ—ಯಜ್ಞಕರ್ತನಿಗೆ । ಶಿಕ್ಷಥಃ—ಅವನ ಅಭೀಷ್ಟವನ್ನು ಕೊಡುವಿರೋ (ಆದುದರಿಂದಲೇ) । ವಾಂ—ನಿಮ್ಮನ್ನು ದ್ದೇಶಿಸಿ ಅರ್ಪಿಸಿದವೂ । ಇಮಾನಿ ಭಾಗಧೇಯಾನಿ—ನಿಮ್ಮ ಭಾಗಕ್ಕೆ ಸೇರಿದವೂ ಆದ ಚರುಪುರೋಡಾಶಗಳು । ಸಿಸ್ರತೇ—ನಿಮ್ಮನ್ನೇ ಅಪೇಕ್ಷಿಸಿ ಸಮಿಾಪಿಸುತ್ತವೆ । ಸುತೇಷು—ಸೋಮರಸವು ಹಿಂಡಿ ಸಿದ್ಧವಾದಾಗ । ವಾಂ—ನಿಮ್ಮ । ಮಹೇ—ಪೂಜೆಗಾಗಿ । ಪ್ರ—ಪ್ರಾರ್ಥಿಸುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಯಾವ ನಿಮ್ಮ ಪ್ರಭಾವದಿಂದ ಪ್ರತಿಯೊಂದು ಯಜ್ಞಕ್ಕೂ ಮೂರು ಸವನಕಾಲಗಳಲ್ಲೂ ಹೋಗುವಿರೋ ಮತ್ತು ಸೋಮರಸವನ್ನು ಹಿಂಡುವ ಯಜ್ಞಕರ್ತನಿಗೆ ಅವನ ಅಭೀಷ್ಟವನ್ನು ಕೊಡುವಿರೋ ಆದುದರಿಂದಲೇ, ನಿಮ್ಮನ್ನುದ್ದೇಶಿಸಿ ಅರ್ಪಿಸಿದವೂ, ನಿಮ್ಮ ಭಾಗಕ್ಕೆ ಸೇರಿದವೂ ಆದ ಚರುಪುರೋಡಾಶಾದಿಗಳು ನಿಮ್ಮನ್ನೇ ಅಪೇಕ್ಷಿಸಿ ಸಮಿಾಪಿಸುತ್ತವೆ. ಸೋಮರಸವು ಹಿಂಡಿ ಸಿದ್ಧವಾದಾಗ ನಿಮ್ಮ ಪೂಜೆಗಾಗಿ ನಾನು ನಿಮ್ಮನ್ನು ಪ್ರಾರ್ಥಿಸುತ್ತೇನೆ.

## English Translation.

Agni, Indra, Varuna in the chief rite we invoke you to drink Soma. This is your portion ; come following it, in every rite, nourish the sacrifices and libations, make gift to the worshipper offering Soma libations.

॥ ಸಂಹಿತಾಪಾಠಃ ॥

ನಿಃಷಿಧ್ವರೀರೋಷಧೀರಾಪ ಆಸ್ತಾಮಿಂದ್ರಾವರುಣಾ ಮಹಿಮಾನಮಾಶತ ।
ಯಾ ಸಿಸ್ರತೂ ರಜಸಃ ಪಾರೇ ಅಧ್ವನೋ ಯಯೋಃ ಶತ್ರುರ್ನಕಿರಾದೇವ
ಓಹತೇ ॥ ೨ ॥

॥ ಪದಪಾಠಃ ॥

ನಿಃऽಸಿಧ್ವರೀಃ । ಓಷಧೀಃ । ಆಪಃ । ಆಸ್ತಾಂ । ಇಂದ್ರಾವರುಣಾ । ಮಹಿಮಾನಂ । ಆಶತ ।
ಯಾ । ಸಿಸ್ರತುಃ । ರಜಸಃ । ಪಾರೇ । ಅಧ್ವನಃ । ಯಯೋಃ । ಶತ್ರುಃ । ನಕಿಃ । ಅದೇವಃ । ಓಹತೇ ॥

॥ ಭಾಷ್ಯಂ ॥

ಹೇ ಇಂದ್ರಾವರುಣಾ ಇಂದ್ರಾವರುಣೌ ಭವಂತೌ ಯದಾ ಆಸ್ತಾಂ ಓಷಧ್ಯಾದಿಕರ್ತೃತ್ವೇನಾಭೂತಾಂ ತದಾ ನಿಃಸಿಧ್ವರೀಃ ನಿತರಾಂ ಮಂಗಲಸ್ವಭಾವಾ ಓಷಧೀಃ ವ್ರೀಹ್ಯಾದ್ಯಾ ಓಷಧಯಃ ಅಪಃ ಉದಕಾನಿ ಚ ಮಹಿಮಾನಂ ಭವತೋ ಮಾಹಾತ್ಮ್ಯಂ ಆಶತ ವ್ಯಾಪ್ನುವಂತಿ । ಕಿಂಚ ಯಾ ಯೌ ಭವಂತೌ ರಜಸೋऽಂತರಿಕ್ಷಲೋಕಸ್ಯ ಸಂಬಂಧಿನಃ ಅಧ್ವನೋ ಮಾರ್ಗಸ್ಯ ಪಾರೇ ಪರತೀರೇ ಸಿಸ್ರತುಃ ಯಥೇಚ್ಛಂ ಸರಣಂ ಕುರುತಃ। ಯಯೋರ್ಭವತೋಃ ಶತ್ರುಃ ಶಾತಯಿತಾ ಅದೇವಃ ದೇವಪ್ರತಿಯೋಗೀ ಅಸುರಾದಿಃ ನಕಿಃ ಓಹತೇ ನ ಕೋऽಪಿ ತರ್ಕಗೋಚರೋ ಭವತಿ । ಸ್ವೇಚ್ಛಯಾ। ವಿಹರತೋರ್ಭವತೋಃ ಗತಿಪ್ರತಿಘಾತಕಃ ಶತ್ರುಃ ನ ಕೋऽಪ್ಯಸ್ತೀತ್ಯರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ । (**ಯದಾ**—ಯಾವಾಗ) । **ಆಸ್ತಾಂ**—ಓಷಧ್ಯಾದಿಗಳಿಗೆ ನಿರ್ಮಾಪಕರಾಗಿದ್ದೀರೋ ಆಗ । **ನಿಃ ಸಿಧ್ವರೀಃ**—ಮಂಗಳಸ್ವರೂಪವುಳ್ಳ । **ಓಷಧೀಃ**—ವ್ರೀಹ್ಯಾದ್ಯೋಷಧಿಗಳೂ । **ಅಪಃ**—ಉದಕಗಳೂ । **ಮಹಿಮಾನಂ**—ನಿಮ್ಮ ಮಾಹಾತ್ಮ್ಯವನ್ನೇ । **ಆಶತ**—ಹೊಂದುತ್ತವೆ । **ಯಾ**—ಯಾವ ನೀವು । **ರಜಸಃ**—ಅಂತರಿಕ್ಷದ । **ಅಧ್ವನಃ ಪಾರೇ**—ಮಾರ್ಗಗಳ ತೀರಪ್ರದೇಶಗಳಲ್ಲೆಲ್ಲಾ । **ಸಿಸ್ರತುಃ**—ಸಂಚರಿಸುವಿರೋ ಅಂತಹ । **ಯಯೋಃ**—ನಿಮ್ಮಿಬ್ಬರಿಗೆ । **ಶತ್ರುಃ**—ಶತ್ರುವಾದವನೂ । **ಅದೇವಃ**—ದೇವತೆಗಳಿಗೆ ವಿರೋಧಿಯಾದವನೂ ಆದ ಯಾವ ಅಸುರನೂ । **ನಕಿಃ ಓಹತೇ**—ನಿಮ್ಮನ್ನು ಪ್ರತಿಭಟಿಸಲು ಶಕ್ತನಾಗಲಾರನು.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಯಾವಾಗ ಓಷಧ್ಯಾದಿಗಳಿಗೆ ನಿರ್ಮಾಪಕರಾಗಿದ್ದೀರೋ ಆಗ ಮಂಗಳಸ್ವರೂಪವುಳ್ಳ ವ್ರೀಹ್ಯಾದ್ಯೋಷಧಿಗಳೂ, ಉದಕಗಳೂ ನಿನ್ನ ಮಾಹಾತ್ಮ್ಯವನ್ನೇ ಹೊಂದುತ್ತವೆ. ಯಾವ ನೀವು ಅಂತರಿಕ್ಷಮಾರ್ಗಗಳ ತೀರಪ್ರದೇಶಗಳಲ್ಲೆಲ್ಲಾ ಸಂಚರಿಸುವಿರೋ ಅಂತಹ ನಿಮ್ಮಿಬ್ಬರಿಗೆ ಶತ್ರುವಾದವನೂ, ದೇವತೆಗಳಿಗೆ ವಿರೋಧಿಯಾದವನೂ ಆದ ಯಾವ ಅಸುರನೂ ನಿಮ್ಮನ್ನು ಪ್ರತಿಭಟಿಸಲು ಶಕ್ತನಾಗಲಾರನು.

## English Translation.

Indra and Varuna are here, walking by a path leading to beyond the sky ; no god-fearing men can be their enemy. The vegetable and water attain their powers ;

॥ ಸಂಹಿತಾಪಾಠಃ ॥

ಸತ್ಯಂ ತದಿಂದ್ರಾವರುಣಾ ಕೃಶಸ್ಯ ವಾಂ ಮಧ್ವ ಊರ್ಮಿಂ ದುಹತೇ ಸಪ್ತ ವಾಣೀಃ ।
ತಾಭಿರ್ದಾಶ್ವಾಂಸಮವತಂ ಶುಭಸ್ಪತೀ ಯೋ ವಾಮದಬ್ಧೋ ಅಭಿ ಪಾತಿ ಚಿತ್ತಿಭಿಃ ॥ ೩ ॥

॥ ಪದಪಾಠಃ ॥

ಸತ್ಯಂ । ತತ್ । ಇಂದ್ರಾವರುಣಾ । ಕೃಶಸ್ಯ । ವಾಂ । ಮಧ್ವಃ । ಊರ್ಮಿಂ । ದುಹತೇ । ಸಪ್ತ । ವಾಣೀಃ । ತಾಭಿಃ । ದಾಶ್ವಾಂಸಂ । ಅವತಂ । ಶುಭಃ । ಪತೀ ಇತಿ । ಯಃ । ವಾಂ । ಅದಬ್ಧಃ । ಅಭಿ । ಪಾತಿ । ಚಿತ್ತಿಽಭಿಃ ॥ ೩ ॥

॥ ಭಾಷ್ಯಂ ॥

ಹೇ ಇಂದ್ರಾವರುಣಾ ಇಂದ್ರಾವರುಣೌ ಯಾಃ ಸಪ್ತಸಂಖ್ಯಾಕಾಃ ಸರ್ವಣಸ್ವಭಾವಾ ವಾ ವಾಣೀಃ ವಾಣ್ಯಃ ಸಪ್ತಹೋತ್ರಕಾಣಾಂ ಸ್ತುತಿರೂಪಾ ವಾಚಃ ಕೃಶಸ್ಯ ಏತನ್ನಾಮ್ನೋ ಯಜಮಾನಸ್ಯ ಸಂಬಂಧಿನಃ ಮಧ್ವಃ ಮಧುರಸ್ಯ ಸೋಮಸ್ಯ ಊರ್ಮಿಂ ತದುಪಲಕ್ಷಿತಂ ರಸಂ ಪ್ರತಿ ವಾಂ ಯುವಾಂ ದುಹತೇ ಪ್ರಪೂರಯಂತೀತಿ ಯತ್ ತತ್ಸತ್ಯಮವಿತಥಮೇವ । ತಸ್ಮಾತ್ತಾಭಿರ್ವಾಣೀಭಿರ್ದೇತುಭೂತಾಭಿಃ ಯುವಾಂ ದಾಶ್ವಾಂಸಂ ಹವಿರ್ದತ್ತವಂತಂ ಯಜಮಾನಂ ಅವತಂ ರಕ್ಷತಂ । ಯಜಮಾನಂ ವಿಶಿನಷ್ಟಿ । ಹೇ ಶುಭಸ್ಪತೀ ಉದಕಸ್ಯ ಪಾಲಯಿತಾರಾವಿಂದ್ರಾವರುಣೌ ಯೋ ಯಜಮಾನಃ ಅದಬ್ಧಃ ಕೇನಾಪ್ಯಹಿಂಸಿತಃ ಸನ್ ಚಿತ್ತಿಭಿಃ ಪ್ರಜ್ಞೋಪಲಕ್ಷಿತೈಃ ಕರ್ಮಭಿಃ ವಾಂ ಯುವಾಮಭಿ ಪಾತಿ ಸರ್ವತೋ ರಕ್ಷತಿ । ತಮವತಮಿತಿ ಪೂರ್ವೇಣಾನ್ವಯಃ ॥

॥ ಪ್ರತಿಪದಾರ್ಥ ॥

ಇಂದ್ರಾವರುಣಾ—ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಸಪ್ತ ವಾಣೀಃ**—ಸಪ್ತಹೋತೃಗಳ ಸ್ತುತಿರೂಪಗಳಾದ ವಾಕ್ಕುಗಳು । **ಕೃಶಸ್ಯ**—ಕೃಶಸಂಜ್ಞಕನಾದ ಯಜಮಾನನ । **ಮಧ್ವಃ**—ಮಧುರವಾದ

ಸೋಮರಸದ । **ಊರ್ಮಿಂ**—ರಸಾಭಿಮುಖವಾಗಿ । **ವಾಂ**—ನಿಮ್ಮನ್ನು । **ದುಹತೇ**—ಕರೆತಂದು ಪೂರ್ಣ ಮಾಡುತ್ತವೆ ಎಂಬುದು ಯಾವುದುಂಟೋ । **ತತ್**— ಅದು । **ಸತ್ಯಂ**—ಸತ್ಯಾತ್ಮಕವಾಗಿಯೇ ಇದೆ । **ಶುಭಸ್ಪತೀ**— ಉದಕಪಾಲಕರಾದ ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಅದಬ್ಧಃ**—ಯಾರಿಂದಲೂ ಅಹಿಂಸಿತನಾದ । **ಯಃ**—ಯಾವ ಯಜಮಾನನು । **ಚಿತ್ತಿಭಿಃ**—ಪ್ರಜ್ಞಾಪೂರ್ವಕವಾದ ತನ್ನ ಕರ್ಮಗಳಿಂದ । **ವಾಂ**— ನಿಮ್ಮನ್ನು । **ಅಭಿ ಪಾತಿ**—ಸುತ್ತಲೂ ರಕ್ಷಿಸುವನೋ । **ದಾಶ್ವಾಂಸಂ**—ಹವಿರ್ದಾತನಾದ ಅದೇ ಯಜಮಾನನನ್ನು । **ತಾಭಿಃ**—ಅದೇ ಸ್ತುತಿಗಳಿಗೆ ಪ್ರತಿಯಾಗಿ । **ಅವತಂ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಸಪ್ತಹೋತೃಗಳ ಸ್ತುತಿರೂಪಗಳಾದ ವಾಕ್ಕುಗಳು ಕೃಶಸಂಜ್ಞಕನಾದ ಯಜಮಾನನ ಮಧುರವಾದ ಸೋಮರಸದ ರಸಾಭಿಮುಖವಾಗಿ ನಿಮ್ಮನ್ನು ಕರೆತಂದು ಪೂರ್ಣಮಾಡುತ್ತವೆ ಎಂಬುದು ಯಾವುದುಂಟೋ ಅದು ಸತ್ಯಾತ್ಮಕವಾಗಿಯೇ ಇದೆ. ಉದಕಪಾಲಕರಾದ ಎಲೈ ಇಂದ್ರ ಮತ್ತು ವರುಣದೇವತೆಗಳೇ, ಯಾರಿಂದಲೂ ಅಹಿಂಸಿತನಾದ ಯಾವ ಯಜಮಾನನು ಪ್ರಜ್ಞಾಪೂರ್ವಕವಾದ ತನ್ನ ಕರ್ಮಗಳಿಂದ ನಿಮ್ಮನ್ನು ಸುತ್ತಲೂ ರಕ್ಷಿಸುವನೋ ಹವಿರ್ದಾತನಾದ ಅದೇ ಯಜಮಾನನನ್ನು ಅದೇ ಸ್ತುತಿಗಳಿಗೆ ಪ್ರತಿಯಾಗಿ ರಕ್ಷಿಸಿರಿ.

## English Translation.

Indra and Varuna, it is true that for you Saptavani is effusing the Soma of Krisha ; you are the supporter of good works. The men without enemy who worship you wih good works, protect him your worshipper.

। ಸಂಹಿತಾಪಾಠಃ ।

ಘೃತಪ್ರುಷಃ ಸೌಮ್ಯಾ ಜೀರದಾನವಃ ಸಪ್ತ ಸ್ವಸಾರಃ ಸದನ ಋತಸ್ಯ ।
ಯಾ ಹ ವಾಮಿಂದ್ರಾವರುಣಾ ಘೃತಶ್ಚುತಸ್ತಾಭಿರ್ಧತ್ತಂ ಯಜಮಾನಾಯ
ಶಿಕ್ಷತಂ ॥ ೪ ॥

। ಪದಪಾಠಃ ।

ಘೃತಂಽಪ್ರುಷಃ । ಸೌಮ್ಯಾಃ । ಜೀರಽದಾನವಃ । ಸಪ್ತ । ಸ್ವಸಾರಃ । ಸದನೇ । ಋತಸ್ಯ ।
ಯಾಃ । ಹ । ವಾಂ । ಇಂದ್ರಾವರುಣಾ । ಘೃತಽಶ್ಚುತಃ । ತಾಭಿಃ । ಧತ್ತಂ । ಯಜಮಾನಾಯ । ಶಿಕ್ಷತಂ ॥

॥ ಭಾಷ್ಯಂ ॥

ತಾಃ ಸತ್ಯವಾಣ್ಯಃ ಕ್ವ ಸಂತೀತ್ಯಪೇಕ್ಷಾಯಾಮಾಹ । ಋತಸ್ಯ ಯಜ್ಞಸ್ಯ ಸದನೇ ಸ್ಥಾನೇ ಸಪ್ತ ಸಪ್ತಸಂಖ್ಯಾಕಾಃ ಸ್ವಸಾರಃ ಸ್ವಯಂಸಾರಿಣ್ಯೋ ವಾಣ್ಯಃ ಸಂತಿ । ಕೀದೃಶ್ಯಸ್ತಾಃ । ಘೃತಪ್ರುಷಃ । ಘೃತಮಿತ್ಯುದಕನಾಮ । ತೇನ ಸೋಮರಸೋ ಲಕ್ಷ್ಯತೇ । ತಥಾ ಚ ಸೋಮರಸಸ್ರಾವಿಣ್ಯ ಇತ್ಯರ್ಥಃ

ಸೋಮ್ಯಾಃ ಸೋಮಾರ್ಹಾಃ ಜೀರದಾನವಃ ಕ್ಷಿಪ್ರದಾನಾಃ । ಕಿಂಚ ಹೇ ಇಂದ್ರಾವರುಣಾ ಇಂದ್ರಾವರುಣೌ ಯಾ ವಾಣ್ಯಃ ವಾಂ ಯುವಾಮುದ್ದಿಶ್ಯ ಘೃತಶ್ಚುತಃ ಸೋಮರಸಸ್ರಾವಿಣ್ಯೋ ಭವಂತಿ ಅಥವಾ ಆಜ್ಯಸ್ರಾವಿಣ್ಯೋ ಭವಂತಿ । ಹೇತಿ ಪ್ರಸಿದ್ಧಂ । ತಾಭಿರ್ಹೇತುಭೂತಾಭಿಃ ಧತ್ತಂ ಯಜಮಾನಂ ಪುಷ್ಣೀತಂ । ತದರ್ಥಂ ಚ ಯಜಮಾನಾಯ ಶಿಕ್ಷತಮಭಿಮತಂ ದತ್ತಂ ॥

॥ ಪ್ರತಿಪದಾರ್ಥ ॥

**ಘೃತಪ್ರುಷಃ**—ಉದಕರೂಪವಾದ ಸೋಮರಸವನ್ನು ಸುರಿಸುವುವೂ । **ಸೌಮ್ಯಾಃ**—ಸೋಮಾರ್ಹವಾದವೂ । **ಜೀರದಾನವಃ**—ಕ್ಷಿಪ್ರವಾಗಿ ದಾನಮಾಡುವುವೂ । **ಸಪ್ತ ಸ್ವಸಾರಃ**—ಸಪ್ತಸಂಖ್ಯಾಕವೂ ಆದ ವಾಣಿಗಳು । **ಋತಸ್ಯ**—ಸತ್ಯಾತ್ಮಕವಾದ ಯಜ್ಞದ । **ಸದನೇ**—ಸ್ಥಾನದಲ್ಲಿವೆ । **ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಘೃತಶ್ಚುತಃ**—ಸೋಮರಸವನ್ನು ಹಿಂಡತಕ್ಕ । **ಯಾಃ**—ಯಾವ ಸ್ತುತಿವಾಕ್ಕುಗಳು । **ವಾಂ**—ನಿಮ್ಮನ್ನುದ್ದೇಶಿಸಿ ಪ್ರಶಂಸಿಸುವುವೋ । **ತಾಭಿಃ**—ಅವುಗಳೊಡನೆ । **ಧತ್ತಂ**—ಯಜಮಾನನಿಗೆ ಆಧಾರಕರಾಗಿರಿ । **ಯಜಮಾನಾಯ**—ಯಜಮಾನನಿಗೆ । **ಶಿಕ್ಷತಂ**—ಅವನ ಅಭೀಷ್ಟವನ್ನು ಕೊಡಿರಿ.

॥ ಭಾವಾರ್ಥ ॥

ಉದಕರೂಪವಾದ ಸೋಮರಸವನ್ನು ಸುರಿಸುವುವೂ, ಸೋಮಾರ್ಹವೂ, ಕ್ಷಿಪ್ರವಾಗಿ ದಾನಮಾಡುವುವೂ, ಸಪ್ತಸಂಖ್ಯಾಕವೂ ಆದ ವಾಣಿಗಳು ಸತ್ಯಾತ್ಮಕವಾದ ಯಜ್ಞದ ಸ್ಥಾನದಲ್ಲಿವೆ. ಎಲೈ ಇಂದ್ರ ಮತ್ತು ವರುಣ ದೇವತೆಗಳೇ, ಸೋಮರಸವನ್ನು ಹಿಂಡತಕ್ಕ ಯಾವ ಸ್ತುತಿವಾಕ್ಕುಗಳು ನಿಮ್ಮನ್ನುದ್ದೇಶಿಸಿ ಪ್ರಶಂಸಿಸುವುವೋ ಅವುಗಳೊಡನೆ ಯಜಮಾನನಿಗೆ ಆಧಾರಕರಾಗಿರಿ. ಯಜಮಾನನಿಗೆ ಅವನ ಅಭೀಷ್ಟವನ್ನು ಕೊಡಿರಿ.

## English Translation.

The amiable seven sisters in the house of rite, are become giver of abundance. Indra and Varuna those who drop ghee for you, uphold them, give them gifts.

। ಸಂಹಿತಾಪಾಠಃ ।

ಅವೋಚಾಮ ಮಹತೇ ಸೌಭಗಾಯ ಸತ್ಯಂ ತ್ವೇಷಾಭ್ಯಾಂ ಮಹಿಮಾನಮಿಂದ್ರಿಯಂ ।
ಅಸ್ಮಾನ್ತ್ಸ್ವಿಂದ್ರಾವರುಣಾ ಘೃತಶ್ಚುತಸ್ತ್ರಿಭಿಃ ಸಾಪ್ತೇಭಿರವತಂ ಶುಭಸ್ಪತೀ ॥

॥ ಪದಪಾಠಃ ॥

ಅವೋಚಾಮ । ಮಹತೇ । ಸೌಭಗಾಯ । ಸತ್ಯಂ । ತ್ವೇಷಾಭ್ಯಾಂ । ಮಹಿಮಾನಂ । ಇಂದ್ರಿಯಂ । ಅಸ್ಮಾನ್ । ಸು । ಇಂದ್ರಾವರುಣಾ । ಘೃತಽಶ್ಚುತಃ । ತ್ರಿಽಭಿಃ । ಸಾಪ್ತೇಭಿಃ । ಅವತಂ । ಶುಭಃ । ಪತೀ ಇತಿ ॥ ೫ ॥

॥ ಭಾಷ್ಯಂ ॥

ಹೇ ಇಂದ್ರಾವರುಣಾ ಇಂದ್ರಾವರುಣೌ ತ್ವೇಷಾಭ್ಯಾಂ ದೀಪ್ತಾಭ್ಯಾಂ ಭವದ್ಭ್ಯಾಂ ಸಂಪಾದಿತಂ ಮಹಿಮಾನಂ ಕೀರ್ತಿವಿಶೇಷಂ ವಯಂ ಮಹತೇ ಬೃಹತೇ ಸೌಭಗಾಯ ಐಶ್ವರ್ಯಾಯ ಅವೋಚಾಮ ವರ್ಣಯೇಮ । ಕೀದೃಶಂ ಮಹಿಮಾನಂ । ಸತ್ಯಮವಿತಥಂ । ಯುಷ್ಮತ್ಸ್ವರೂಪಾನುಕೂಲಮಿತ್ಯರ್ಥಃ । ಇಂದ್ರಿಯಂ ಇಂದ್ರಯೋಃ ಪರಮೇಶ್ವರಯೋರ್ಭವತೋರ್ಜ್ಞಾಪಕಂ । ತಸ್ಮಾತ್ ಹೇ ಶುಭಸ್ಪತೀ ಉದಕಸ್ಯ ಪಾಲಯಿತಾರಾವಿಂದ್ರಾವರುಣೌ ಯುವಾಂ ಘೃತಶ್ಚುತಃ ಸೋಮರಸಸ್ರಾವಿಣೋಽಸ್ಮಾನ್ ಯಜಮಾನಾನ್ ತ್ರಿಭಿಃ ಸಾಪ್ತೇಭಿಃ । ಸಪ್ತಯೋಽಶ್ವಾಃ ತೇಷಾಂ ಸಮೂಹಃ । ಸಪ್ತಯೂಥೈಸ್ತ್ರೈಃ ತ್ರಿಸಂಖ್ಯಾಕೈರಶ್ವಸಮೂಹೈಃ ಸೋತಂ (? ಸು ಅವತಂ] ಸುತರಾಂ ಪಾಲಯತಂ । ಇಂದ್ರಾವರುಣಯೋರೈಶ್ವರ್ಯಯೋಗಾತ್ ಅಶ್ವೈರಸ್ಮತ್ಪಾಲನಂ ಸಮಂಜಸಮಿತಿ ಭಾವಃ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ । **ತ್ವೇಷಾಭ್ಯಾಂ**—ಪ್ರಕಾಶಮಾನರಾದ ನಿಮ್ಮಿಂದ ಸಂಪಾದಿತವಾದುದೂ । **ಸತ್ಯಂ**—ಸತ್ಯಾತ್ಮಕವಾದುದೂ । **ಇಂದ್ರಿಯಂ**—ನಿಮ್ಮ ಸ್ವರೂಪದ್ಯೋತಕವಾದುದೂ ಆದ । **ಮಹಿಮಾನಂ**—ಮಾಹಾತ್ಮ್ಯವನ್ನು । **ಮಹತೇ**—ಮಹತ್ತಾದ । **ಸೌಭಗಾಯ**—ಕಲ್ಯಾಣಕ್ಕಾಗಿ । **ಅವೋಚಾಮ**—ಪ್ರಶಂಸಿಸುತ್ತೇವೆ । **ಶುಭಸ್ಪತೀ**—ಉದಕಪಾಲಕರಾದ ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಘೃತಶ್ಚುತಃ**—ಸೋಮರಸವನ್ನು ಹಿಂಡಿ ಅರ್ಪಿಸುವ । **ಅಸ್ಮಾನ್**—ನಮ್ಮನ್ನು । **ತ್ರಿಭಿಃ ಸಾಪ್ತೇಭಿಃ**—ತ್ರಿಸಂಖ್ಯಾಕವಾದ ಅಶ್ವಗಳೊಡನೆಯೂ । **ಸು**—ಅತ್ಯಾತಿಶಯವಾಗಿ । **ಅವತಂ**—ರಕ್ಷಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಪ್ರಕಾಶಮಾನರಾದ ನಿಮ್ಮಿಂದ ಸಂಪಾದಿತವಾದುದೂ, ಸತ್ಯಾತ್ಮಕವಾದುದೂ, ನಿಮ್ಮ ಸ್ವರೂಪದ್ಯೋತಕವಾದುದೂ ಆದ ಮಾಹಾತ್ಮ್ಯವನ್ನು ಮಹತ್ತಾದ ಕಲ್ಯಾಣಕ್ಕಾಗಿ ಪ್ರಶಂಸಿಸುತ್ತೇವೆ. ಉದಕಪಾಲಕರಾದ ಎಲೈ ಇಂದ್ರ ಮತ್ತು ವರುಣದೇವತೆಗಳೇ, ಸೋಮರಸವನ್ನು ಹಿಂಡಿ ಅರ್ಪಿಸುವ ನಮ್ಮನ್ನು ತ್ರಿಸಂಖ್ಯಾಕವಾದ ಅಶ್ವಗಳೊಡನೆಯೂ ಅತ್ಯತಿಶಯವಾಗಿ ರಕ್ಷಿಸಿರಿ.

## English Translation.

Desirous of good fortune we are praising the nobleness of brilliant Indra and Varuna. We are dropping ghee, Indra and Varuna are the lords of righteous works. May they protect us by thrice seven.

|| ಸಂಹಿತಾಪಾಠಃ ||

ಇಂದ್ರಾವರುಣಾ ಯದೃಷಿಭ್ಯೋ ಮನೀಷಾಂ ವಾಚೋ ಮತಿಂ ಶ್ರುತಮ-
ದತ್ತಮಗ್ರೇ ।
ಯಾನಿ ಸ್ಥಾನಾನ್ಯಸೃಜಂತ ಧೀರಾ ಯಜ್ಞಂ ತನ್ವಾನಾಸ್ತಪಸಾಭ್ಯಪಶ್ಯಂ || ೬ ||

|| ಪದಪಾಠಃ ||

ಇಂದ್ರಾವರುಣಾ । ಯತ್ । ಋಷಿಽಭ್ಯಃ । ಮನೀಷಾಂ । ವಾಚಃ । ಮತಿಂ । ಶ್ರುತಂ । ಅದತ್ತಂ । ಅಗ್ರೇ ।
ಯಾನಿ । ಸ್ಥಾನಾನಿ । ಅಸೃಜಂತ । ಧೀರಾಃ । ಯಜ್ಞಂ । ತನ್ವಾನಾಃ । ತಪಸಾ । ಅಭಿ । ಅಪಶ್ಯಂ || ೬ ||

|| ಭಾಷ್ಯಂ ||

ಹೇ ಇಂದ್ರಾವರುಣಾ ಇಂದ್ರಾವರುಣೌ ಯತ್ ಯೇ ಋಷಯಃ ಯಜ್ಞಂ ತನ್ವಾನಾಃ ಕರ್ಮವಿಶೇಷಂ ವಿಸ್ತಾರಯಂತಃ ಅತ ಏವ ಧೀರಾಃ ಶುದ್ಧಾಂತಃಕರಣತ್ವೇನ ಧೀಮಂತಃ ಸಂತಃ ಅಗ್ರೇ ಅಂತಃಕರಣಶುದ್ಧೇಃ ಪ್ರಾಕ್ ಯಾನಿ ಸ್ಥಾನಾನಿ ಗೃಹಕ್ಷೇತ್ರಾದೀನಿ ಸ್ಥಿತಾನಿ ತಾನಿ ಅಸೃಜಂತ ವಿಸೃಷ್ಟವಂತಃ । ತತ್ಯಜಿರಿತಿ (? ತತ್ಯಜುರಿತಿ) ಯಾವತ್ । ತೇಭ್ಯ ಋಷಿಭ್ಯಃ ಮಂತ್ರದೃಗ್ಭ್ಯಃ ಮನೀಷಾದಿಶ್ರುತಾಂತಂ ಸರ್ವಂ ಯುವಾಂ ಅದತ್ತಂ ದತ್ತವಂತೌ ಇತ್ಯಹಂ ತಪಸಾ ಆಲೋಚನಾತ್ಮಕೇನ ಜ್ಞಾನೇನ ಅಭ್ಯಪಶ್ಯಂ ಸರ್ವತೋ ದೃಷ್ಟವಾನಸ್ಮಿ । ಮನೀಷಾ ಅತ್ರ ಚಿಜ್ಜಡವಿವೇಕವತೀ ಬುದ್ಧಿಃ । ವಾಚಃ ಉಪನಿಷಲ್ಲಕ್ಷಣಾ ಗಿರಃ । ಮತಿರ್ಮನನಂ ತರ್ಕಸಾಮರ್ಥ್ಯಂ । ಶ್ರುತಂ ಶಾಸ್ತ್ರಮೀಮಾಂಸಾಲಕ್ಷಣಂ । ಏತತ್ಸರ್ವಂ ಭವದ್ಭ್ಯಾಂ ತೇಭ್ಯೋ ದತ್ತಮಿತಿ ಶ್ರೀಮಚ್ಚರಣಪ್ರಸಾದಾಲ್ಲಬ್ಧಜ್ಞಾನೇನ ಮಯಾ ಜ್ಞಾತಮಿತ್ಯೃಷೇರ್ವಕ್ತುರಭಿಪ್ರಾಯಃ ||

|| ಪ್ರತಿಪದಾರ್ಥ ||

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಯಜ್ಞಂ ತನ್ವಾನಾಃ**—ವಿಸ್ತೃತವಾಗಿ ಯಜ್ಞವನ್ನು ಆಚರಿಸುತ್ತ । **ಧೀರಾಃ**—ಪ್ರಾಜ್ಞರಾಗಿದ್ದು । **ಅಗ್ರೇ**—ತಮ್ಮ ಸಂನ್ಯಾಸಕ್ಕೆ ಪೂರ್ವಭಾವಿಯಾಗಿ । **ಯಾನಿ ಸ್ಥಾನಾನಿ**—ಯಾವ ಯಾವ ಗೃಹಕ್ಷೇತ್ರಾದಿ ಸ್ಥಾನಗಳು ಇದ್ದವೋ ಅವನ್ನೆಲ್ಲಾ । **ಯತ್**—ಯಾವ ಋಷಿಗಳು । **ಅಸೃಜಂತ**—ತ್ಯಾಗಮಾಡಿಬಿಟ್ಟರೋ । **ಋಷಿಭ್ಯಃ**—ಅಂತಹ ಋಷಿಗಳಿಗೆ । **ಮನೀಷಾಂ**—ವಿವೇಕ ಬುದ್ಧಿಯನ್ನೂ । **ವಾಚಃ**—ಉಪನಿಷದಾದಿ ತತ್ತ್ವವಾಕ್ಯಗಳನ್ನೂ । **ಮತಿಂ**—ಮನನಾದಿ ಸಾಮರ್ಥ್ಯವನ್ನೂ । **ಶ್ರುತಂ**—ಶಾಸ್ತ್ರಾದಿಗಳ ಜ್ಞಾನವನ್ನೂ । **ಅದತ್ತಂ**—ಅನುಗ್ರಹಿಸಿ ಕೊಟ್ಟರಿ ಎಂಬುದನ್ನು । **ತಪಸಾ**—ನನ್ನ ತಪಶ್ಶಕ್ತಿಯಿಂದ । **ಅಭ್ಯಪಶ್ಯಂ**—ಕಂಡುಕೊಂಡಿದ್ದೇನೆ.

|| ಭಾವಾರ್ಥ ||

ಎಲೈ ಇಂದ್ರ ಮತ್ತು ವರುಣದೇವತೆಗಳೇ, ವಿಸ್ತೃತವಾಗಿ ಯಜ್ಞವನ್ನು ಆಚರಿಸುತ್ತ ಪ್ರಾಜ್ಞರಾಗಿದ್ದು ನಮ್ಮ ಸಂನ್ಯಾಸಕ್ಕೆ ಪೂರ್ವಭಾವಿಯಾಗಿ ಯಾವ ಯಾವ ಗೃಹ ಮತ್ತು ಕ್ಷೇತ್ರಾದಿಸ್ವಾಮ್ಯಗಳಿದ್ದವೋ ಅವನ್ನೆಲ್ಲಾ ಯಾವ ಋಷಿಗಳು ತ್ಯಾಗಮಾಡಿಬಿಟ್ಟರೋ ಅಂತಹ ಋಷಿಗಳಿಗೆ ವಿವೇಕಬುದ್ಧಿಯನ್ನೂ ಉಪನಿಷದಾದಿ ತತ್ತ್ವವಾಕ್ಯಗಳನ್ನೂ, ಮನನಾದಿ ಸಾಮರ್ಥ್ಯವನ್ನೂ ಶಾಸ್ತ್ರಾದಿಗಳ ಜ್ಞಾನವನ್ನೂ ಅನುಗ್ರಹಿಸಿಕೊಟ್ಟಿರಿ ಎಂಬುದನ್ನು ನನ್ನ ತಪಶ್ಶಕ್ತಿಯಿಂದ ಕಂಡುಕೊಂಡಿದ್ದೇನೆ.

## English Translation.

Indra and Varuna what you did grant to the Rishis wise-worded **hymns,** Sruti and the Lokas : we are being engaged in rite, shall engage them.

॥ ಸಂಹಿತಾಪಾಠಃ ॥

ಇಂದ್ರಾವರುಣಾ ಸೌಮನಸಮದೃಪ್ತಂ ರಾಯಸ್ಪೋಷಂ ಯಜಮಾನೇಷು ಧತ್ತಂ ।
ಪ್ರಜಾಂ ಪುಷ್ಟಿಂ ಭೂತಿಮಸ್ಮಾಸು ಧತ್ತಂ ದೀರ್ಘಾಯುತ್ವಾಯ ಪ್ರ ತಿರತಂ ನ ಆಯುಃ ॥ ೭ ॥

। ಪದಪಾಠಃ ।

ಇಂದ್ರಾವರುಣಾ । ಸೌಮನಸಂ । ಅದೃಪ್ತಂ । ರಾಯಃ । ಪೋಷಂ । ಯಜಮಾನೇಷು । ಧತ್ತಂ । ಪ್ರಜಾಂ । ಪುಷ್ಟಿಂ । ಭೂತಿಂ । ಅಸ್ಮಾಸು । ಧತ್ತಂ । ದೀರ್ಘಾಯುತ್ವಾಯ । ಪ್ರ । ತಿರತಂ । ನಃ । ಆಯುಃ ॥ ೭ ॥

|| ಭಾಷ್ಯಂ ||

ಹೇ ಇಂದ್ರಾವರುಣಾ ಇಂದ್ರಾವರುಣೌ ಯುವಾಂ ಸೌಮನಸಂ ಪ್ರಸನ್ನಮನಸ್ಕತ್ವಂ ತಥಾ ಅದೃಪ್ತಂ ಅನುದ್ಧತಂ । ಮೋಹಶೂನ್ಯಮಿತಿ ಯಾವತ್ । ರಾಯಃ ಧನಸ್ಯ ಪೋಷಂ ಪುಷ್ಟಿಂ ಚ ಯಜಮಾನೇಷು ಧತ್ತಂ ಧಾರಯತಂ । ಕಿಂಚಾಸ್ಮಾಸು ಸ್ತೋತೃಷು ಪ್ರಜಾಂ ಪುತ್ರಪೌತ್ರಾದಿರೂಪಾಂ ಪುಷ್ಟಿಂ ಧನಾದೇಃ ಸಮೃದ್ಧಿಂ ಭೂತಿಂ ಗವಾಶ್ವಾದಿಗಜಾಂತಸಂಪದಂ ಚ ಧತ್ತಂ ಧಾರಯತಂ । ಅಥ ಚ ದೀರ್ಘಾಯುತ್ವಾಯ ಚಿರಜೀವನಾಯ ನೋಽಸ್ಮಾಕಮಾಯುಃ ಜೀವಿತಕಾಲಂ ಪ್ರ ತಿರತಂ ಪ್ರವರ್ಧಯತಂ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥

॥ ಪ್ರತಿಪದಾರ್ಥ ॥

**ಇಂದ್ರಾವರುಣಾ**—ಎಲೈ ಇಂದ್ರ ಮತ್ತು ವರುಣದೇವತೆಗಳೇ । **ಯಜಮಾನೇಷು**—ಯಜಮಾನರಲ್ಲಿ । **ಸೌಮನಸಂ**—ಪ್ರಸನ್ನವಾದ ಮನಸ್ಸನ್ನೂ । **ಅದೃಪ್ತಂ**—ನಿರಭಿಮಾನವನ್ನೂ । **ರಾಯಃ**—ಧನವನ್ನೂ । **ಪೋಷಂ**—ಪುಷ್ಟಿಯನ್ನೂ । **ಧತ್ತಂ**—ಸ್ಥಾಪಿಸಿರಿ । **ಅಸ್ಮಾಸು**—ನಮ್ಮಲ್ಲಿ (ಸ್ತುತಿಕರ್ತರಲ್ಲಿ) । **ಪ್ರಜಾಂ**—ಸಂತತಿಸಂಪತ್ತನ್ನೂ । **ಪುಷ್ಟಿಂ**—ಧನಸಂಪತ್ಪುಷ್ಟಿಯನ್ನೂ । **ಭೂತಿಂ**—ಗವಾದ್ಯೈಶ್ವರ್ಯವನ್ನೂ । **ಧತ್ತಂ**—ತುಂಬಿಡಿರಿ । **ನಃ**—ನಮ್ಮ । **ಆಯುಃ**—ಆಯುಸ್ಸನ್ನು । **ದೀರ್ಘಾಯುತ್ವಾಯ**—ದೀರ್ಘಕಾಲ ಬದುಕಲು । **ಪ್ರತಿರತಂ**—ವೃದ್ಧಿಪಡಿಸಿರಿ.

॥ ಭಾವಾರ್ಥ ॥

ಎಲೈ ಇಂದ್ರ ಮತ್ತು ವರುಣದೇವತೆಗಳೇ, ಯಜಮಾನರಲ್ಲಿ ಪ್ರಸನ್ನವಾದ ಮನಸ್ಸನ್ನೂ, ನಿರಭಿಮಾನವನ್ನೂ, ಧನವನ್ನೂ, ಪುಷ್ಟಿಯನ್ನೂ ಸ್ಥಾಪಿಸಿರಿ. ಸ್ತುತಿಕರ್ತರಾದ ನಮ್ಮಲ್ಲಿ ಸಂತತಿಸಂಪತ್ತನ್ನೂ, ಧನಸಂಪತ್ಪುಷ್ಟಿಯನ್ನೂ, ಗವಾದ್ಯೈಶ್ವರ್ಯವನ್ನೂ ತುಂಬಿಡಿರಿ. ನಾವು ದೀರ್ಘಕಾಲ ಬದಕುವಂತೆ ನಮ್ಮ ಆಯುಸ್ಸನ್ನು ಬೆಳೆಸಿರಿ.

### English Translation.

Indra and Varuna the wealth which pleases the might, but does not make vain, give the worshippers such wealth ; give us sons, nourishment and cover, preserve our longivity, that we may live long



## ಅರವತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಸಪ್ತಮೇಽನುವಾಕೇ ದಶ ಸೂಕ್ತಾನಿ । ತತ್ರಾಗ್ನ ಆ ಯಾಹೀತಿ ವಿಂಶತ್ಯೃಚಂ ಪ್ರಥಮಂ ಸೂಕ್ತಂ ಪ್ರಗಾಥಪುತ್ರಸ್ಯ ಭರ್ಗಸ್ಯಾರ್ಷಮಾಗ್ನೇಯಂ । ಪ್ರಥಮಾತೃತೀಯಾದ್ಯಯುಜೋ ಬೃಹತ್ಯೋ ದ್ವಿತೀಯಾಚತುರ್ಥ್ಯಾದಿಯುಜಃ ಸತೋಬೃಹತ್ಯಃ । ತಥಾ ಚಾನುಕ್ರಾಂತಂ । ಅಗ್ನ ಆ ವಿಂಶತಿರ್ಭರ್ಗಃ ಪ್ರಾಗಾಥ ಆಗ್ನೇಯಂ ಪ್ರಾಗಾಥಂ ತ್ವಿತಿ ॥ ಪ್ರಾತರನುವಾಕ ಆಗ್ನೇಯೇ ಕ್ರತೌ ಬಾರ್ಹತೇ ಛಂದಸ್ಯಾಶ್ವಿನಶಸ್ತ್ರೇ ಚೇದಂ ಸೂಕ್ತಂ । ತಥಾ ಚ ಸೂತ್ರಿತಂ । ಅಯಮಗ್ನಿರಗ್ನ ಆ ಯಾಹಿ । ಆ. ೪-೧೩ । ಇತಿ ॥**

ಅನುವಾದವು—ಋಗ್ವೇದಸಂಹಿತೆಯ ಎಂಟನೆಯ ಮಂಡಲದ ಏಳನೆಯ ಅನುವಾಕದಲ್ಲಿ ಹತ್ತು ಸೂಕ್ತಗಳಿರುವವು. ಅವುಗಳಲ್ಲಿ **ಅಗ್ನ ಆ ಯಾಹಿ** ಎಂಬ ಈ ಸೂಕ್ತವು ಮೊದಲನೆಯದು ಇದರಲ್ಲಿ ಇಪ್ಪತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಗಾಥಪುತ್ರನಾದ ಭರ್ಗನೆಂಬುವನು ಋಷಿಯು ; ಅಗ್ನಿಯು ದೇವತೆಯು ; ಈ ಸೂಕ್ತದ ಒಂದು, ಮೂರು ಮೊದಲಾದ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು. ಸಮಸಂಖ್ಯೆಯ ಋಕ್ಕುಗಳು

ಸತೋಬೃಹತೀಛಂದಸ್ಕವು; ಅನುಕ್ರಮಣಿಕೆಯಲ್ಲಿ—**ಅಗ್ನ ಆ ವಿಂಶತಿರ್ಭರ್ಗಃ ಪ್ರಾಗಾಥ ಆಗ್ನೇಯಂ ಪ್ರಾಗಾಥಂ ತು** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಬೃಹತೀಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಅಯಮಗ್ನಿರಗ್ನ ಆ ಯಾಹಿ** ಎಂಬ ಸೂತ್ರದಿಂದ (ಆ ೪-೧೩) ವಿವೃತವಾಗಿರುವುದು.

## ಸೂಕ್ತ—೬೦

ಮಂಡಲ—೮ || ಅನುವಾಕ—೬ || ಸೂಕ್ತ—೬೦ ||
ಅಷ್ಟಕ—೬ || ಅಧ್ಯಾಯ—೪ || ವರ್ಗ- ೩೨. ೩೩, ೩೪, ೩೫ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ - ೨೦ ||
|| ಋಷಿಃ—ಭರ್ಗಃ ಪ್ರಾಗಾಥಃ ||
|| ದೇವತಾ—ಅಗ್ನಿಃ ||
|| ಛಂದಃ—ಪ್ರಾಗಾಥಂ ||

|| ಸಂಹಿತಾಪಾಠಃ ||

ಅಗ್ನ ಆ ಯಾಹ್ಯಗ್ನಿಭಿರ್ಹೋತಾರಂ ತ್ವಾ ವೃಣೀಮಹೇ |
ಆ ತ್ವಾಮನಕ್ತು ಪ್ರಯತಾ ಹವಿಷ್ಮತೀ ಯಜಿಷ್ಠಂ ಬರ್ಹಿರಾಸದೇ || ೧ ||

|| ಪದಪಾಠಃ ||

**ಅಗ್ನೇ | ಆ | ಯಾಹಿ | ಅಗ್ನಿऽಭಿಃ | ಹೋತಾರಂ | ತ್ವಾ | ವೃಣೀಮಹೇ |**
**ಆ | ತ್ವಾಂ | ಅನಕ್ತು | ಪ್ರऽಯತಾ | ಹವಿಷ್ಮತೀ | ಯಜಿಷ್ಠಂ | ಬರ್ಹಿಃ | ಆऽಸದೇ || ೧ ||**

|| ಸಾಯಣಭಾಷ್ಯಂ ||

**ಹೇ ಅಗ್ನೇ ಅಗ್ನಿಭಿರ್ಯಷ್ಟವ್ಯೈಃ ಸಹಾ** ಯಾಹಿ | **ಆಗಚ್ಛ | ತದರ್ಥಂ ಹೋತಾರಂ ದೇವಾನಾಮಾಹ್ವಾತಾರಂ ತ್ವಾ ತ್ವಾಂ ವೃಣೀಮಹೇ | ತ್ವಾ ತ್ವಾಮಾಗತಂ ಪ್ರಯತಾಧ್ವರ್ಯುಹಸ್ತಾಭ್ಯಾಂ ನಿಯತಾ ಹವಿಷ್ಮತೀ ಘೃತವತೀ ಯಜಿಷ್ಠಂ ತ್ವಾಂ ಬರ್ಹಿರ್ಬರ್ಹಿಷ್ಯಾಸದ ಆಸಾದ್ಯಾ ಸರ್ವತೋऽನಕ್ತು ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ಅಗ್ನಿಭಿಃ**—ನಿನ್ನ ಇತರ ವಿಭೂತಿವಿಶೇಷಗಳೊಡನೆ | **ಆ ಯಾಹಿ**—ದಯಮಾಡು | **ಹೋತಾರಂ**—ಹೋತೃರೂಪವಾದ | **ತ್ವಾ**—ನಿನ್ನನ್ನು | **ವೃಣೀಮಹೇ**—ಆರಿಸುತ್ತೇವೆ | **ಪ್ರಯತಾ**—ಅಧ್ವರ್ಯುವಿನ ಹಸ್ತದಿಂದ ಅರ್ಪಿತವಾದುದೂ | **ಹವಿಷ್ಮತೀ**—ಹವಿಸ್ಸನ್ನು ಹೊಂದಿರುವುದೂ ಆದ ಈ ಸ್ರುಕ್ಪಾತ್ರೆಯು (ಆಜ್ಯವು) | **ಯಜಿಷ್ಠಂ**—ಅತ್ಯಂತ ಪೂಜ್ಯನಾದ | **ತ್ವಾ**—ನಿನ್ನನ್ನು | **ಬರ್ಹಿಃ**—ದರ್ಭಾಸನದ ಮೇಲೆ | **ಆಸದೇ**—ಕುಳಿತುಕೊಳ್ಳಲು | **ಆ ಅನಕ್ತು**—ಸರ್ವತ್ರ ಲೇಪನಸಂಸ್ಕಾರವನ್ನು ಮಾಡಲಿ.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಇತರ ವಿಭೂತಿವಿಶೇಷಗಳೊಡನೆ ದಯಮಾಡು ಹೋತೃರೂಪನಾದ ನಿನ್ನನ್ನು ಆರಿಸುತ್ತೇವೆ. ಅಧ್ವರ್ಯುವಿನ ಹಸ್ತದಲ್ಲಿರುವ ಸುಕ್ಪಾತ್ರೆಯಿಂದ ಅರ್ಪಿತವಾದುದೂ, ಹವಿಸ್ಸಿನ ರೂಪವುಳ್ಳದ್ದೂ ಆದ ಆಜ್ಯವು ನಿನ್ನನ್ನು ದರ್ಭಾಸನದ ಮೇಲೆ ಕುಳ್ಳಿರಿಸಲು ಸರ್ವತ್ರ ಲೇಪನಸಂಸ್ಕಾರವನ್ನು ಮಾಡಲಿ.

## English Translation.

Agni, come hither with the fires, we choose you as our invoking priest ; let the presented offering anoint you, the chief sacrificer, to sit down on the sacred grass.

॥ ಸಂಹಿತಾಪಾಠಃ ॥

ಅಚ್ಛಾ ಹಿ ತ್ವಾ ಸಹಸಃ ಸೂನೋ ಅಂಗಿರಃ ಸ್ರುಚಶ್ಚರಂತ್ಯಧ್ವರೇ ।
ಊರ್ಜೋ ನಪಾತಂ ಘೃತಕೇಶಮೀಮಹೇಽಗ್ನಿಂ ಯಜ್ಞೇಷು ಪೂರ್ವ್ಯಂ ॥೩॥

॥ ಪದಪಾಠಃ ॥

ಅಚ್ಛ । ಹಿ । ತ್ವಾ । ಸಹಸಃ । ಸೂನೋ ಇತಿ । ಅಂಗಿರಃ । ಸ್ರುಚಃ । ಚರಂತಿ । ಅಧ್ವರೇ ।
ಊರ್ಜಃ । ನಪಾತಂ । ಘೃತऽಕೇಶಂ । ಈಮಹೇ । ಅಗ್ನಿಂ । ಯಜ್ಞೇಷು । ಪೂರ್ವ್ಯಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಸಹಸಃ ಸೂನೋ ಬಲಸ್ಯ ಪುತ್ರ । ಬಲೇನ ಮಥ್ಯಮಾನತ್ವಾತ್ । ಹೇ ಅಂಗಿರೋಽಂಗಿರಸಾಂ ಮಧ್ಯ ಏಕ । ಅಥವಾಂಗತಿರ್ಗತಿಕರ್ಮಾ । ಸರ್ವತ್ರ ಸಂಗತ । ತ್ವಾ ತ್ವಾಮಧ್ವರೇ ಯಾಗೇಽಚ್ಛಾಭಿಪ್ರಾಪ್ತುಂ ಸ್ರುಚಶ್ಚರಂತಿ । ಗಚ್ಛಂತಿ । ಅತ ಊರ್ಜೋಽನ್ನಸ್ಯ ನಪಾತಂ ನ ಪಾತಯಿತಾರಂ ರಕ್ಷಕಂ ಬಲಸ್ಯ ನಪ್ತಾರಂ ವಾ ಘೃತಕೇಶಂ ಪ್ರದೀಪ್ತಕಲತಸ್ಥಾನೀಯಜ್ವಾಲಂ ಪೂರ್ವ್ಯಂ ಪುರಾತನಂ ಪೂರಕಂ ವಾಗ್ನಿಂ ಯಜ್ಞೇಷ್ವಸ್ಮದೀಯೇಷ್ವೀಮಹೇ । ಸ್ತೌಮಿ ॥

॥ ಪ್ರತಿಪದಾರ್ಥ ॥

ಸಹಸಃ ಸೂನೋ—ಶಕ್ತಿಪುತ್ರನೂ । ಅಂಗಿರಃ—ಅಂಗಿರಸ್ಸುಗಳ ನಡುವೆ ಮುಖ್ಯನೂ ಆದ ಎಲೈ ಅಗ್ನಿಯೇ । ತ್ವಾ—ನಿನ್ನನ್ನು । ಅಧ್ವರೇ—ಯಾಗದಲ್ಲಿ । ಅಚ್ಛ—ಅಭಿಮುಖವಾಗಿ ಬರಮಾಡಲು । ಸ್ರುಚಃ—ಸ್ರುಕ್ಪಾತ್ರೆಗಳು । ಚರಂತಿ ಹಿ—ಪ್ರಯುಕ್ತಿಸುತ್ತಿವೆ । ಊರ್ಜಃ—ಅನ್ನಕ್ಕೆ । ನಪಾತಂ—ರಕ್ಷಕನೂ । ಘೃತಕೇಶಂ—ಪ್ರದೀಪ್ತವಾದ ಜ್ವಾಲೆಯುಳ್ಳವನೂ । ಪೂರ್ವ್ಯಂ—ಪುರಾತನನೂ ಆದ । ಅಗ್ನಿಂ—ಅಗ್ನಿಯನ್ನು । ಯಜ್ಞೇಷು—ಯಜ್ಞಗಳಲ್ಲಿ । ಈಮಹೇ—ಸ್ತುತಿಸುತ್ತೇವೆ.

|| ಭಾವಾರ್ಥ ||

ಶಕ್ತಿಪುತ್ರನೂ, ಅಂಗಿರಸ್ಸುಗಳ ನಡುವೆ ಮುಖ್ಯನೂ ಆದ ಎಲೈ ಅಗ್ನಿಯೇ, ನಿನ್ನನ್ನು ಯಾಗದಲ್ಲಿ ನಮಗೆ ಅಭಿಮುಖವಾಗಿ ಬರಮಾಡಲು ಸ್ರುಕ್ಪಾತ್ರೆಗಳು ಪ್ರಯತ್ನಿಸುತ್ತಿವೆ. ಅನ್ನಕ್ಕೆ ರಕ್ಷಕನೂ, ಪ್ರದೀಪ್ತವಾದ ಜ್ವಾಲೆಯುಳ್ಳವನೂ, ಪುರಾತನನೂ ಆದ ಅಗ್ನಿಯನ್ನು ಯಜ್ಞಗಳಲ್ಲಿ ಸ್ತುತಿಸುತ್ತೇವೆ.

## English Translation.

Angiras, son of strength, the ladles go to find you in the sacrifice ; we praise the ancient Agni in our offerings, the grandson of food, butter-haired.

|| ಸಂಹಿತಾಪಾಠಃ ||

ಅಗ್ನೇ ಕವಿರ್ವೇಧಾ ಅಸಿ ಹೋತಾ ಪಾವಕ ಯಕ್ಷ್ಯಃ |
ಮಂದ್ರೋ ಯಜಿಷ್ಠೋ ಅಧ್ವರೇಷ್ವೀಡ್ಯೋ ವಿಪ್ರೇಭಿಃ ಶುಕ್ರ ಮನ್ಮಭಿಃ ||

|| ಪದಪಾಠಃ ||

ಅಗ್ನೇ | ಕವಿಃ | ವೇಧಾಃ | ಅಸಿ | ಹೋತಾ | ಪಾವಕ | ಯಕ್ಷ್ಯಃ |
ಮಂದ್ರಃ | ಯಜಿಷ್ಠಃ | ಅಧ್ವರೇಷು | ಈಡ್ಯಃ | ವಿಪ್ರೇಭಿಃ | ಶುಕ್ರ | ಮನ್ಮಽಭಿಃ || ೩ ||

|| ಸಾಯಣಭಾಷ್ಯಂ ||

**ಹೇ ಅಗ್ನೇ ಕವಿರ್ಮೇಧಾವೀ ತ್ವಂ ವೇಧಾ ವಿಧಾತಾಸಿ ಫಲಾನಾಂ | ಹೇ ಪಾವಕ ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾ ಯಕ್ಷ್ಯೋ ಯಷ್ಟವ್ಯೋಽಸಿ ಹೇ ಶುಕ್ರ ದೀಪ್ತ ಮಂದ್ರೋ ಮೋದನೀಯೋ ಯಜಿಷ್ಠೋ ಯಷ್ಟೃತಮಸ್ತ್ವಮಧ್ವರೇಷು ಯಜ್ಞೇಷು ವಿಪ್ರೇಭಿರ್ಮೇಧಾವಿಭಿರೃತ್ವಿಗ್ಭಿರ್ಮನ್ಮಭಿರ್ಮನನೀಯೈಃ ಸ್ತೋತ್ರೈರೀಡ್ಯಃ ಸ್ತುತ್ಯೋಽಸಿ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ಕವಿಃ**—ಮೇಧಾವಿಯಾದ ನೀನು | **ವೇಧಾಃ**—ಸೃಷ್ಟಿಕರ್ತನಾಗಿ | **ಅಸಿ**—ಆಗಿದ್ದೀಯೇ | **ಪಾವಕ**—ಶುದ್ಧಿಕಾರಕನಾದ ಎಲೈ ಅಗ್ನಿಯೇ | **ಹೋತಾ**—ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ | **ಯಕ್ಷ್ಯಃ**—ಅತ್ಯಂತ ಪೂಜ್ಯನೂ ಆಗಿದ್ದೀಯೆ | **ಶುಕ್ರ**—ಪ್ರಭಾಯುತನಾದ ಎಲೈ ಅಗ್ನಿಯೇ | **ಮಂದ್ರಃ**—ಆಹ್ಲಾದಕರನೂ | **ಯಜಿಷ್ಠಃ**—ಅತ್ಯಂತ ಪೂಜ್ಯನೂ ಆದ ನೀನು | **ವಿಪ್ರೇಭಿಃ**—ಮೇಧಾವಿಗಳಾದ ಋತ್ವಿಕ್ಕುಗಳಿಂದ | **ಮನ್ಮಭಿಃ**—ಧ್ಯಾನಾತ್ಮಕವಾದ ಸ್ತುತಿಗಳ ಮೂಲಕ | **ಅಧ್ವರೇಷು**—ಯಜ್ಞಗಳಲ್ಲಿ | **ಈಡ್ಯಃ**—ಸ್ತುತಿಸಲ್ಪಡುತ್ತೀಯೆ.

। ಭಾವಾರ್ಥ ।

ಎಲೈ ಅಗ್ನಿಯೇ, ಮೇಧಾವಿಯಾದ ನೀನು ಸೃಷ್ಟಿಕರ್ತನಾಗಿದ್ದೀಯೆ. ಶುದ್ಧಿಕಾರಕನಾದ ಎಲೈ ಅಗ್ನಿಯೇ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಅತ್ಯಂತ ಪೂಜ್ಯನೂ ಆಗಿದ್ದೀಯೆ. ಪ್ರಭಾಯುತನಾದ ಎಲೈ ಅಗ್ನಿಯೇ, ಆಹ್ಲಾದಕರನೂ, ಅತ್ಯಂತ ಪೂಜ್ಯನೂ ಆದ ನೀನು ಮೇಧಾವಿಗಳಾದ ಋತ್ವಿಕ್ಕುಗಳಿಂದ ಧ್ಯಾನಾತ್ಮಕವಾದ ಸ್ತುತಿಗಳ ಮೂಲಕ ಯಜ್ಞಗಳಲ್ಲಿ ಸ್ತುತಿಸಲ್ಪಡುತ್ತೀಯೆ.

## English Translation.

Agni, you, wise, are the creator (of consequences) ; O purifier, you are the invoking priest, worthy of worship ; bright one, you are to be praised in our sacrifices by the priests with hymns, yourself the chief ministrant worthy to be rejoiced in.

|| ಸಂಹಿತಾಪಾಠಃ ||

ಅದ್ರೋಘಮಾ ವಹೋಶತೋ ಯವಿಷ್ಠ್ಯ ದೇವಾँ ಅಜಸ್ರ ವೀತಯೇ ।
ಅಭಿ ಪ್ರಯಾಂಸಿ ಸುಧಿತಾ ವಸೋ ಗಹಿ ಮಂದಸ್ವ ಧೀತಿಭಿರ್ಹಿತಃ ॥ ೪ ॥

। ಪದಪಾಠಃ ।

ಅದ್ರೋಘಂ । ಆ । ವಹ । ಉಶತಃ । ಯವಿಷ್ಠ್ಯ । ದೇವಾನ್ । ಅಜಸ್ರ । ವೀತಯೇ ।
ಅಭಿ । ಪ್ರಯಾಂಸಿ । ಸುऽಧಿತಾ । ವಸೋ ಇತಿ । ಗಹಿ । ಮಂದಸ್ವ । ಧೀತಿऽಭಿಃ । ಹಿತಃ ॥ ೪ ॥

॥ ಸಾಯಣಭಾಷ್ಯಂ ।

ಅದ್ರೋಘಮದ್ರೋಗ್ಧಾರಂ ಮಾಂ ಪ್ರತಿ ಹೇ ಯವಿಷ್ಠ್ಯ ಯುವತಮಾಜಸ್ರ ನಿತ್ಯ ಆ ವಹ । ಆನಯ । ಕಾನ್ । ಉಶತೋऽಸ್ಮದರ್ಥಂ ಕಾಮಯಮಾನಾನ್ದೇವಾನ್ । ಕಿಮರ್ಥಂ । ವೀತಯೇ ಹವಿರ್ಭಕ್ಷಣಾಯ । ಹೇ ವಸೋ ವಾಸಕಾಗ್ನೇ ಸುಧಿತಾ ಸುನಿಹಿತಾನಿ ಪ್ರಯಾಂಸ್ಯನ್ನಾನ್ಯಭಿ ಗಹಿ । ಅಭಿಗಚ್ಛ । ಆಗತ್ಯ ಚ ಧೀತಿಭಿಃ ಸ್ತುತಿಭಿರ್ಹಿತೋ ನಿಹಿತಃ ಸನ್ಮಂದಸ್ವ । ಯದ್ವಾ । ಧೀತಿಭಿರ್ಮಂದಸ್ವೇತಿ ಸಂಬಂಧಃ ॥

। ಪ್ರತಿಪದಾರ್ಥ ।

ಯವಿಷ್ಠ್ಯ—ಅತ್ಯಂತ ತರುಣನೂ । ಅಜಸ್ರ—ನಿತ್ಯನೂ ಆದ ಎಲೈ ಅಗ್ನಿಯೇ । ಉಶತಃ—ಹವಿಸ್ಸನ್ನು ಅಪೇಕ್ಷಿಸುವ । ದೇವಾನ್—ದೇವತೆಗಳನ್ನು । ವೀತಯೇ—ಹವಿಸ್ಸನ್ನು ಭಕ್ಷಿಸಲು । ಅದ್ರೋಘಂ—ಕಳಂಕರಹಿತನಾದ ನನ್ನಲ್ಲಿಗೆ । ಆ ವಹ—ಕರೆದುಕೊಂಡು ಬಾ । ವಸೋ—ವಸತಿದಾಯಕನಾದ ಎಲೈ ಅಗ್ನಿಯೇ ।

**ಸುಧಿತಾ**— ಉತ್ತಮವಾಗಿ ಅರ್ಪಿತವಾದ | **ಪ್ರಯಾಂಸಿ ಅಭಿ**— ಅನ್ನಗಳನ್ನು ಲಕ್ಷಿಸಿ | **ಆ ಗಹಿ**— ದಯಮಾಡು | **ಹಿತಃ**- ಉತ್ತಮವಾಗಿ ಸ್ಥಾಪಿತನಾದ ನೀನು | **ಧೀತಿಭಿಃ** – ಸ್ತುತಿಗಳಿಂದ | **ಮಂದಸ್ವ**— ಹರ್ಷವನ್ನು ಹೊಂದು.

|| ಭಾವಾರ್ಥ ||

ಅತ್ಯಂತ ತರುಣನೂ, ನಿತ್ಯನೂ ಆದ ಎಲೈ ಅಗ್ನಿಯೇ, ಹವಿಸ್ಸನ್ನು ಅಪೇಕ್ಷಿಸುವ ದೇವತೆಗಳನ್ನು ಕಳಂಕ ರಹಿತನಾದ ನನ್ನಲ್ಲಿಗೆ ಹವಿರ್ಭಕ್ಷಣಕ್ಕಾಗಿ ಕರೆದುಕೊಂಡು ಬಾ. ವಸತಿದಾಯಕನಾದ ಎಲೈ ಅಗ್ನಿಯೇ, ಉತ್ತಮವಾಗಿ ಅರ್ಪಿತವಾದ ಅನ್ನಗಳನ್ನು ಲಕ್ಷಿಸಿ ದಯಮಾಡು. ಉತ್ತಮವಾಗಿ ಸ್ಥಾಪಿತನಾದ ನೀನು ಸ್ತುತಿಗಳಿಂದ ಹರ್ಷವನ್ನು ಹೊಂದು.

## English Translation.

Most youthful, eternal one, bring the longing gods to me guileless, to eat (the oblation) ; giver of dwellings, approach the well-placed food ; rejoice, being set in your place with praises.

|| ಸಂಹಿತಾಪಾಠಃ ||

ತ್ವಮಿತ್ಸಪ್ರಥಾ ಅಸ್ಯಗ್ನೇ ತ್ರಾತರ್ಋತಸ್ಕವಿಃ |
ತ್ವಾಂ ವಿಪ್ರಾಸಃ ಸಮಿಧಾನ ದೀದಿವ ಆ ವಿವಾಸಂತಿ ವೇಧಸಃ || ೫ ||

|| ಪದಪಾಠಃ ||

**ತ್ವಂ | ಇತ್ | ಸಽಪ್ರಥಾಃ | ಅಸಿ | ಅಗ್ನೇ | ತ್ರಾತಃ | ಋತಃ | ಕವಿಃ |**
**ತ್ವಾಂ | ವಿಪ್ರಾಸಃ | ಸಂಽಇಧಾನ | ದೀದಿಽವಃ | ಆ | ವಿವಾಸಂತಿ | ವೇಧಸಃ || ೫ ||**

|| ಸಾಯಣಭಾಷ್ಯಂ ||

**ಹೇ ಅಗ್ನೇ ತ್ರಾತಾ ರಕ್ಷಕ ಋತಃ ಸತ್ಯಭೂತಃ ಕವಿಃ ಕ್ರಾಂತಪ್ರಜ್ಞಸ್ತ್ವಮಿತ್ತ್ವಮೇವ ಸಪ್ರಥಾಃ ಸರ್ವತಃ ಪೃಥುರಸಿ | ಭವಸಿ | ಹೇ ಸಮಿಧಾನ ಸಮಿಧ್ಯಮಾನ ಹೇ ದೀದಿವೋ ದೀಪ್ತ ತ್ವಾಂ ವಿಪ್ರಾಸೋ ವಿಪ್ರಾ ಮೇಧಾವಿನೋ ವೇಧಸೋ ವಿಧಾತಾರಃ ಸ್ತೋತಾರೋ ವಿವಾಸಂತಿ | ಪರಿಚರಂತಿ ||**

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ತ್ರಾತಃ**—ರಕ್ಷಕನೂ | **ಋತಃ**—ಸತ್ಯಭೂತನೂ | **ಕವಿಃ**—ಕ್ರಾಂತಪ್ರಜ್ಞನೂ ಆದ | **ತ್ವಂ ಇತ್**—ನೀನೇ | **ಸಪ್ರಥಃ**—ಸರ್ವತ್ರ ವಿಸ್ತೃತನಾಗಿ | **ಅಸಿ**—ವ್ಯಾಪಿಸಿದ್ದೀಯೆ | **ಸಮಿಧಾನ**—ಉತ್ತಮವಾಗಿ ಪ್ರಜ್ವಲಿತನೂ | **ದೀದಿವಃ**—ಪ್ರಭಾಯುತನೂ ಆದ ಎಲೈ ಅಗ್ನಿಯೇ | **ತ್ವಾಂ**—ನಿನ್ನನ್ನು | **ವಿಪ್ರಾಸಃ**—ಮೇಧಾವಿಗಳೂ | **ವೇಧಸಃ**—ಸ್ತುತಿಕರ್ತರೂ | **ಆ ವಿವಾಸಂತಿ**—ಸರ್ವತ್ರ ಉಪಚರಿಸುತ್ತಾರೆ

|| ಭಾವಾರ್ಥ ||

ಎಲೈ ಅಗ್ನಿಯೇ, ರಕ್ಷಕನೂ, ಸತ್ಯಭೂತನೂ, ಕ್ರಾಂತಪ್ರಜ್ಞನೂ ಆದ ನೀನೇ ಸರ್ವತ್ರ ವಿಸ್ತೃತನಾಗಿ ವ್ಯಾಪಿಸಿದ್ದೀಯೆ. ಉತ್ತಮವಾಗಿ ಪ್ರಜ್ವಲಿತನೂ, ಪ್ರಭಾಯುತನೂ ಆದ ಎಲೈ ಅಗ್ನಿಯೇ, ನಿನ್ನನ್ನು ಮೇಧಾವಿಗಳೂ, ಸ್ತುತಿಕರ್ತರೂ ಸರ್ವತ್ರ ಉಪಚರಿಸುತ್ತಾರೆ.

## English Translation.

Deliverer Agni, you, the truthful and the seer, are widely spread; O kindled blazing one, the wise praisers wait on you.

|| ಸಂಹಿತಾಪಾಠಃ ||

ಶೋಚಾ ಶೋಚಿಷ್ಠ ದೀದಿಹಿ ವಿಶೇ ಮಯೋ ರಾಸ್ವ ಸ್ತೋತ್ರೇ ಮಹಾಂ ಅಸಿ ।
ದೇವಾನಾಂ ಶರ್ಮನ್ಮಮ ಸಂತು ಸೂರಯಃ ಶತ್ರೂಷಾಹಃ ಸ್ವಗ್ನಯಃ ॥೬॥

|| ಪದಪಾಠಃ ||

ಶೋಚ । ಶೋಚಿಷ್ಠ । ದೀದಿಹಿ । ವಿಶೇ । ಮಯಃ । ರಾಸ್ವ । ಸ್ತೋತ್ರೇ । ಮಹಾನ್ । ಅಸಿ ।
ದೇವಾನಾಂ । ಶರ್ಮನ್ । ಮಮ । ಸಂತು । ಸೂರಯಃ । ಶತ್ರುऽಸಹಃ । ಸುऽಅಗ್ನಯಃ ॥ ೬ ॥

|| ಸಾಯಣಭಾಷ್ಯಂ ||

ಹೇ ಶೋಚಿಷ್ಠಾತಿಶಯೇನ ಶೋಚಯಿತರಗ್ನೇ ಶೋಚ । ದೀಪ್ಯಸ್ವ । ದೀದಿಹಿ । ದೀಪಯಾಸ್ಮಾನ್ । ವಿಶೇ ಪ್ರಜಾಯೈ ಸ್ತೋತ್ರೇ ಮಯಃ ಸುಖಂ ರಾಸ್ವ । ದೇಹಿ । ತ್ವಂ ಮಹಾನಸಿ । ದೇವಾನಾಂ ಸಂಬಂಧಿನಿ ಶರ್ಮಞ್ಶರ್ಮಣಿ ಸುಖೇ ಮಮ ಸೂರಯಃ ಸ್ತೋತಾರೋ ಮೇಧಾವಿನೋऽಸ್ಮಾಕಂ ಪುತ್ರಾದಯೋ ವಾ ಸಂತು । ಭವಂತು । ಶತ್ರೂಷಾಹಃ ಶತ್ರೂಣಾಮಭಿಭವಿತಾರಃ ಸ್ವಗ್ನಯಃ ಶೋಭನಾಗ್ನಯಶ್ಚ ಸಂತು ॥

|| ಪ್ರತಿಪದಾರ್ಥ ||

ಶೋಚಿಷ್ಠ—ಅತಿಶಯವಾಗಿ ಪ್ರಕಾಶಿಸುವ ಎಲೈ ಅಗ್ನಿಯೇ । ಶೋಚ—ಇನ್ನೂ ಪ್ರಕಾಶಿಸು । ದೀದಿಹಿ—ನಮ್ಮನ್ನೂ ಪ್ರಕಾಶಗೊಳಿಸು । ವಿಶೇ—ನಿನ್ನ ಪ್ರಜೆಗಳಾದ । ಸ್ತೋತ್ರೇ—ಸ್ತುತಿಕರ್ತರಿಗೆ । ಮಯಃ—ಸುಖವನ್ನು । ರಾಸ್ವ—ಕೊಡು । ಮಹಾನ್ ಅಸಿ—ನೀನು ಮಹಾತ್ಮನಾಗಿದ್ದೀಯೆ । ಮಮ—

ನನಗೆ ಸೇರಿದ | **ಸೂರಯಃ**—ಸ್ತುತಿಕರ್ತರು (ನನ್ನ ಪುತ್ರಾದಿಗಳು) | **ದೇವಾನಾಂ**—ದೇವತೆಗಳಿಂದ ದತ್ತವಾದ | **ಶರ್ಮನ್**—ಸುಖಗಳಲ್ಲಿ | **ಸಂತು**—ಇರಲಿ | **ಶತ್ರೂಷಾಹಃ**—ಶತ್ರುಗಳನ್ನು ಸೋಲಿಸುವವರಾಗಿಯೂ | **ಸ್ವಗ್ನಯಃ**—ಉತ್ತಮವಾದ ಅಗ್ನಿ ಪೂಜಕರಾಗಿಯೂ ಇರಲಿ.

॥ ಭಾವಾರ್ಥ ॥

ಅತಿಶಯವಾಗಿ ಪ್ರಕಾಶಿಸುವ ಎಲೈ ಅಗ್ನಿಯೇ, ಇನ್ನೂ ಅಧಿಕವಾಗಿ ಪ್ರಕಾಶಿಸು. ನಮ್ಮನ್ನೂ ಪ್ರಕಾಶಗೊಳಿಸು. ನಿನ್ನ ಪ್ರಜೆಗಳಾದ ಸ್ತುತಿಕರ್ತರಿಗೆ ಸುಖವನ್ನು ಕೊಡು. ನೀನು ಮಹಾತ್ಮನಾಗಿದ್ದೀಯೆ. ನಿನ್ನ ಸ್ತುತಿಕರ್ತರಾದ ನನ್ನ ಪುತ್ರಾದಿಗಳು ದೇವತೆಗಳಿಂದ ದತ್ತವಾದ ಸುಖವನ್ನನುಭವಿಸಲಿ. ಅವರು ತಮ್ಮ ಶತ್ರುಗಳನ್ನು ಸೋಲಿಸುವವರಾಗಿಯೂ, ಉತ್ತಮವಾದ ಅಗ್ನಿ ಪೂಜಕರಾಗಿಯೂ ಇರಲಿ.

## English Translation.

Most resplendent (Agni), shine forth and illuminate (us); give happiness to your people, to your worshipper, for you are great; may my priests abide in the bliss of the gods, subduing their enemies, possessing bright fires.

॥ ಸಂಹಿತಾಪಾಠಃ ॥

ಯಥಾ ಚಿದ್ವೃದ್ಧಮತಸಮಗ್ನೇ ಸಂಜೂರ್ವಸಿ ಕ್ಷಮಿ ।
ಏವಾ ದಹ ಮಿತ್ರಮಹೋ ಯೋ ಅಸ್ಮಧ್ರುಗ್ದುರ್ಮನ್ಮಾ ಕಶ್ಚ ವೇನತಿ ॥

॥ ಪದಪಾಠಃ ॥

ಯಥಾ । ಚಿತ್ । ವೃದ್ಧಂ । ಅತಸಂ । ಅಗ್ನೇ । ಸಂऽಜೂರ್ವಸಿ । ಕ್ಷಮಿ ।
ಏವ । ದಹ । ಮಿತ್ರऽಮಹಃ । ಯಃ । ಅಸ್ಮऽಧ್ರುಕ್ । ದುಃऽಮನ್ಮಾ । ಕಃ । ಚ । ವೇನತಿ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಕ್ಷಮಿ ಕ್ಷಮಾಯಾಂ ವರ್ತಮಾನಂ ವೃದ್ಧಮತಸಂ ಶುಷ್ಕಂ ಕಾಷ್ಠಂ ಯಥಾ ಯೇನ ಪ್ರಕಾರೇಣ ಸಂಜೂರ್ವಸಿ । ಜೂರ್ವತಿರ್ಹಿಂಸಾಕರ್ಮಾ । ಸಮ್ಯಗ್ದಹಸೀತ್ಯರ್ಥಃ । ಏವ್ಮೇವಂ ದಹ ಹೇ ಮಿತ್ರಮಹೋ ಮಿತ್ರಾಣಾಮಸ್ಮಾಕಂ ಪೂಜಕ ತೇಜೋ ವಾ । ಕಂ । ಯೋಽಸ್ಮಧ್ರುಗಸ್ಮಾಕಂ ದ್ರೋಗ್ಧಾ ಕಶ್ಚ ಕಶ್ಚಿದ್ದುರ್ಮನ್ಮಾ ದುರ್ಮತಿರ್ವೇನತಿ ಕಾಮಯತೇಽಸ್ಮಾನ್ದ್ರೋಗ್ಧುಂ ತಂ ದಹೇತಿ ॥

॥ ಪ್ರತಿಪದಾರ್ಥ ॥

**ಮಿತ್ರಮಹಃ**— ನಿನ್ನ ಸುಹೃತ್ತುಗಳಾದ ನಮಗೆ ಪೂಜ್ಯನಾದ । **ಅಗ್ನೇ**— ಎಲೈ ಅಗ್ನಿಯೇ । **ಕ್ಷಮಿ**— ಪೃಥ್ವಿಯಲ್ಲಿ । **ವೃದ್ಧಂ ಅತಸಂ**— ಜೀರ್ಣವಾದ ಶುಷ್ಕವಾದ ಕಾಷ್ಠವನ್ನು । **ಯಥಾ ಚಿತ್**— ಯಾವ ಪ್ರಕಾರವಾಗಿ । **ಸಂಜೂರ್ವಸಿ**— ಪೂರ್ಣವಾಗಿ ದಹಿಸಿಬಿಡುವೆಯೋ । **ಏವ**— ಅದೇ ರೀತಿಯಲ್ಲಿ । **ಯಃ ಕಶ್ಚ**— ಯಾವನಾದರೂ । **ದುರ್ಮನಾಃ**— ಕೆಟ್ಟಬುದ್ಧಿಯುಳ್ಳವನಾಗಿ । **ಅಸ್ಮಧ್ರುಕ್**— ನಮಗೆ ಕೇಡನ್ನು ಬಯಸುತ್ತಾ । **ವೇನತಿ**— ನಮ್ಮನ್ನು ವಂಚಿಸಲಿಚ್ಛಿಸುವನೋ ಅವನನ್ನೂ । **ದಹ**— ಪೂರ್ಣವಾಗಿ ದಹಿಸು.

॥ ಭಾವಾರ್ಥ ॥

ನಿನ್ನ ಸುಹೃತ್ತುಗಳಾದ ನಮಗೆಲ್ಲಾ ಪೂಜ್ಯನಾದ ಎಲೈ ಅಗ್ನಿಯೇ, ಪೃಥ್ವಿಯಲ್ಲಿ ಜೀರ್ಣವಾಗಿ ಶುಷ್ಕವಾದ ಕಾಷ್ಠವನ್ನು ಯಾವ ರೀತಿ ಪೂರ್ಣವಾಗಿ ದಹಿಸಿಬಿಡುವೆಯೋ ಅದೇ ರೀತಿಯಲ್ಲಿ ಯಾವನಾದರೂ ಕೆಟ್ಟ ಬುದ್ಧಿಯುಳ್ಳವನಾಗಿ ನಮಗೆ ಕೇಡನ್ನು ಬಯಸುತ್ತಾ ನಮ್ಮನ್ನು ವಂಚಿಸಲಿಚ್ಛಿಸಿದರೆ ಅವನನ್ನು ಪೂರ್ಣವಾಗಿ ದಹಿಸು.

## English Translation.

As, Agni, you consume old timber on the earth, so cherisher of friends, do you burn our injurer, whoever evil-minded wishes (our ill).

॥ ಸಂಹಿತಾಪಾಠಃ ॥

**ಮಾ ನೋ ಮರ್ತಾಯ ರಿಪವೇ ರಕ್ಷಸ್ವಿನೇ ಮಾಘಶಂಸಾಯ ರೀರಧಃ ।**
**ಅಸ್ರೇದದ್ಭಿಸ್ತರಣಿಭಿರ್ಯವಿಷ್ಠ್ಯ ಶಿವೇಭಿಃ ಪಾಹಿ ಪಾಯುಭಿಃ ॥ ೮ ॥**

॥ ಪದಪಾಠಃ ॥

ಮಾ । ನಃ । ಮರ್ತಾಯ । ರಿಪವೇ । ರಕ್ಷಸ್ವಿನೇ । ಮಾ । ಅಘऽಶಂಸಾಯ । ರೀರಧಃ ।
ಅಸ್ರೇಧತ್ऽಭಿಃ । ತರಣಿऽಭಿಃ । ಯವಿಷ್ಠ್ಯ । ಶಿವೇಭಿಃ । ಪಾಹಿ । ಪಾಯುऽಭಿಃ ॥ ೮ ॥

॥ ಸಾಯಣಭಾಷ್ಯಂ ॥

ನೋऽಸ್ಮಾನ್ಮರ್ತಾಯ ಮರಣಧರ್ಮಾಯ ರಿಪವೇ ಶತ್ರವೇ ಹಿಂಸಿತ್ರೇ ರಕ್ಷಸ್ವಿನೇ ಬಲವತೇ ಮಾ ರೀರಧಃ । ವಶಮಾನಯ । ತಥಾಘಶಂಸಾಯ ಪಾಪಶಂಸಕಾಯ ಮಾ ರೀರಧಃ । ಹೇ ಯವಿಷ್ಠ್ಯ ಯುವತಮ ಅಸ್ರೇಧದ್ಭಿರಹಿಂಸಕೈಸ್ತರಣಿಭಿಸ್ತಾರಕೈಃ ಶಿವೇಭಿಃ ಸುಖಕರೈಃ ಪಾಯುಭಿಃ ಪಾಲಕೈ-ರ್ನೋऽಸ್ಮಾನ್ಪಾಹಿ । ರಕ್ಷ ॥

॥ ಪ್ರತಿಪದಾರ್ಥ ॥

**ಯವಿಷ್ಠ್ಯ**—ಅತ್ಯಂತ ಯುವಕನಾದ ಎಲೈ ಅಗ್ನಿಯೇ। **ರಕ್ಷಸ್ವಿನೇ**—ಬಲಯುತನೂ। **ಮರ್ತಾಯ**—ಮಾನವರೂಪನೂ ಆದ। **ರಿಪವೇ**—ಹಿಂಸಕನಾದ ಶತ್ರುವಿಗೆ। **ನಃ**—ನಮ್ಮನ್ನು। **ಮಾ ರೀರಧಃ**—ಬಿಟ್ಟುಕೊಡಬೇಡ। **ಅಘಶಂಸಾಯ**—ನಮಗೆ ಕೇಡನ್ನು ಬಯಸುವವನಿಗೂ। **ಮಾ**—ನಮ್ಮನ್ನು ಬಿಟ್ಟುಕೊಡಬೇಡ। **ಅಸ್ರೇಧದ್ಭಿಃ**—ಅಹಿಂಸಕವಾದವೂ। **ತರಣಿಭಿಃ**—ದುಃಖದಿಂದ ದಾಟಿಸತಕ್ಕವೂ। **ಶಿವೇಭಿಃ**—ಮಂಗಳಕರವೂ ಆದ। **ಪಾಯುಭಿಃ**—ರಕ್ಷಣೆಗಳಿಂದ। **ಪಾಹಿ**—ಕಾಪಾಡು.

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ಬಲಯುತನೂ, ಮಾನವರೂಪನೂ ಆದ ಹಿಂಸಕನಾದ ಶತ್ರುವಿಗೆ ನಮ್ಮನ್ನು ಬಿಟ್ಟುಕೊಡಬೇಡ. ನಮಗೆ ಕೇಡನ್ನು ಬಯಸುವವನಿಗೂ ನಮ್ಮನ್ನು ಬಿಟ್ಟುಕೊಡಬೇಡ. ಅಹಿಂಸಕವೂ, ದುಃಖದಿಂದ ದಾಟಿಸತಕ್ಕವೂ ಮಂಗಳಕರವೂ ಆದ ರಕ್ಷಣೆಗಳಿಂದ ಕಾಪಾಡು.

## English Translation.

Subject us not to a strong mortal enemy, nor to the malevolent; O most youthful, guard us with your unharming delivering, auspicious protections.

॥ ಸಂಹಿತಾಪಾಠಃ ॥

ಪಾಹಿ ನೋ ಅಗ್ನ ಏಕಯಾ ಪಾಹ್ಯುತ ದ್ವಿತೀಯಯಾ ।
ಪಾಹಿ ಗೀರ್ಭಿಸ್ತಿಸೃಭಿರೂರ್ಜಾಂ ಪತೇ ಪಾಹಿ ಚತಸೃಭಿರ್ವಸೋ ॥ ೯ ॥

॥ ಪದಪಾಠಃ ॥

ಪಾಹಿ । ನಃ । ಅಗ್ನೇ । ಏಕಯಾ । ಪಾಹಿ । ಉತ । ದ್ವಿತೀಯಯಾ ।
ಪಾಹಿ । ಗೀಃऽಭಿಃ । ತಿಸೃऽಭಿಃ । ಊರ್ಜಾಂ । ಪತೇ । ಪಾಹಿ । ಚತಸೃऽಭಿಃ । ವಸೋ ಇತಿ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ನೋऽಸ್ಮಾನೇಕಯೈಕಯಾ ಗಿರಾ ಪಾಹಿ । ರಕ್ಷ । ಉತಾಪಿ ಚ ದ್ವಿತೀಯಯಾ ಪಾಹಿ । ಪಾಲಯ । ಪಾಹಿ । ತಿಸೃಭಿರ್ಗೀರ್ಭಿರೂರ್ಜಾಮನ್ನಾನಾಂ ಬಲಾನಾಂ ವಾ ಪತೇ ಸ್ವಾಮಿನ್ । ತಥಾ ಪಾಹಿ ಚತಸೃಭಿರ್ಗೀರ್ಭಿರ್ಹೇ ವಸೋ ವಾಸಕಾಗ್ನೇ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ | **ನಃ**—ನಮ್ಮನ್ನು | **ಏಕಯಾ**—ಒಂದೇ ಋಗ್ರೂಪವಾದ ವಾಕ್ಕಿನಿಂದ | **ಪಾಹಿ**—ರಕ್ಷಿಸು | **ಉತ**—ಮತ್ತು | **ದ್ವಿತೀಯಯಾ**—ಎರಡನೆಯ ಋಕ್ಕಿನಿಂದಲೂ | **ಪಾಹಿ**—ರಕ್ಷಿಸು | **ಊರ್ಜಾಂ ಪತೇ**—ಅನ್ನಪಾಲಕನಾದ ಎಲೈ ಅಗ್ನಿಯೇ | **ತ್ರಿಸೃಭಿಃ**—ತ್ರಿಸಂಖ್ಯಾಕವಾದ | **ಗೀರ್ಭಿಃ**—(ಋಗ್ರೂಪವಾದ) ವಾಕ್ಕುಗಳಿಂದ | **ಪಾಹಿ**—ರಕ್ಷಿಸು | **ವಸೋ**—ವಸತಿದಾಯಕನಾದ ಎಲೈ ಅಗ್ನಿಯೇ | **ಚತಸೃಭಿಃ**—ನಾಲ್ಕು ಋಕ್ಕುಗಳ ಸಮುದಾಯದಿಂದಲೂ | **ಪಾಹಿ**—ರಕ್ಷಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮ ಒಂದೇ ಋಕ್ಕುಳ್ಳ ವಾಕ್ಕಿನಿಂದಲೂ ಮತ್ತು ಎರಡು ಋಕ್ಕುಳ್ಳ ವಾಕ್ಸಮುದಾಯದಿಂದಲೂ ರಕ್ಷಿಸು. ಅಲ್ಲದೇ, ಅನ್ನಪಾಲಕನಾದ ಎಲೈ ಅಗ್ನಿಯೇ, ತ್ರಿಸಂಖ್ಯಾಕವಾದ ಋಕ್ಸಮೂಹದಿಂದಲೂ ರಕ್ಷಿಸು. ವಸತಿದಾಯಕನಾದ ಎಲೈ ಅಗ್ನಿಯೇ, ನಾಲ್ಕು ಋಕ್ಕುಗಳ ಸಮುದಾಯದಿಂದಲೂ ನಮ್ಮನ್ನು ರಕ್ಷಿಸು.

## English Translation.

Agni, protect us by one (rich), or protect us by a second ; lord of strength. protect ns by three songs ; protect us, giver of dwellings, by four.

॥ ಸಂಹಿತಾಪಾಠಃ ॥

ಪಾಹಿ ವಿಶ್ವಸ್ಮಾದ್ರಕ್ಷಸೋ ಅರಾವ್ಣಃ ಪ್ರ ಸ್ಮ ವಾಜೇಷು ನೋಽವ ।
ತ್ವಾಮಿದ್ಧಿ ನೇದಿಷ್ಠಂ ದೇವತಾತಯ ಆಪಿಂ ನಕ್ಷಾಮಹೇ ವೃಧೇ ॥ ೧೦ ॥

॥ ಪದಪಾಠಃ ॥

ಪಾಹಿ । ವಿಶ್ವಸ್ಮಾತ್ । ರಕ್ಷಸಃ । ಅರಾವ್ಣಃ । ಪ್ರ । ಸ್ಮ । ವಾಜೇಷು । ನಃ । ಅವ ।
ತ್ವಾಂ । ಇತ್ । ಹಿ । ನೇದಿಷ್ಠಂ । ದೇವಽತಾತಯೇ । ಆಪಿಂ । ನಕ್ಷಾಮಹೇ । ವೃಧೇ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಿಶ್ವಸ್ಮಾತ್ಸರ್ವಸ್ಮಾದ್ರಕ್ಷಸೋಽರಾವ್ಣೋಽದಾತುಃ ಸಕಾಶಾತ್ಪಾಹಿ । ರಕ್ಷಾಸ್ಮಾನ್ । ವಾಜೇಷು ಸಂಗ್ರಾಮೇಷು ನೋಽಸ್ಮಾನ್ ಪ್ರಾವ । ಪ್ರಕರ್ಷೇಣ ರಕ್ಷ । ಸ್ಮೇತಿ ಪೂರಣಃ । ಹಿ ಯಸ್ಮಾನ್ನೇದಿಷ್ಠಮಾಸನ್ನಮಾಪಿಂ ಬಂಧುಭೂತಂ ತ್ವಾಮಿತ್ತ್ವಾಮೇವ ದೇವತಾತಯೇ ಯಜ್ಞಾಯ ಯಜ್ಞಸಿದ್ಧ್ಯರ್ಥಂ ವೃಧೇ ವರ್ಧನಾಯ ನಕ್ಷಾಮಹೇ ವ್ಯಾಪ್ನುಮಃ । ನಕ್ಷತಿರ್ವ್ಯಾಪ್ತಿಕರ್ಮಾ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ಅರಾವ್ಣಃ**—ಅದಾತೃಗಳಾದ | **ವಿಶ್ವಸ್ಮಾತ್ ರಕ್ಷಸಃ**—ಸಕಲ ಶತ್ರುಗಳಿಂದಲೂ | **ಪಾಹಿ**—ರಕ್ಷಿಸು | **ವಾಜೇಷು**—ಸಂಗ್ರಾಮಗಳಲ್ಲಿ | **ನಃ**—ನಮ್ಮನ್ನು | **ಪ್ರ ಅವ**—ಪೂರ್ಣವಾಗಿ ರಕ್ಷಿಸು | **ಹಿ**—ಏತಕ್ಕೆಂದರೆ | **ನೇದಿಷ್ಠಂ**—ನಮಗೆ ಅತ್ಯಂತ ಸಮೀಪಸ್ಥನಾದ | **ಆಪಿಂ**—ಬಂಧುವಾದ | **ತ್ವಾಂ ಇತ್**—ನಿನ್ನನ್ನೇ | **ದೇವತಾತಯೇ**—ದೇವಕಾರ್ಯವಾದ ಯಜ್ಞಕ್ಕಾಗಿಯೂ | **ವೃಧೇ**—ನಮ್ಮ ಅಭಿವೃದ್ಧಿಗಾಗಿಯೂ | **ನಕ್ಷಾಮಹೇ**—ಸಮೀಪಿಸುತ್ತೇವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಅದಾತೃಗಳಾದ ಸಕಲ ಹಿಂಸಕರಾದ ಶತ್ರುಗಳಿಂದಲೂ ನಮ್ಮನ್ನು ರಕ್ಷಿಸು. ಸಂಗ್ರಾಮಗಳಲ್ಲಿ ನಮ್ಮನ್ನು ಪೂರ್ಣವಾಗಿ ರಕ್ಷಿಸು. ಏತಕ್ಕೆಂದರೆ, ನಮಗೆ ಅತ್ಯಂತ ಸಮೀಪಸ್ಥನಾದ, ಬಂಧುವಾದ ನಿನ್ನನ್ನೇ ದೇವಕಾರ್ಯವಾದ ಯಜ್ಞಕ್ಕಾಗಿಯೂ, ನಮ್ಮ ಅಭಿವೃದ್ಧಿಗಾಗಿಯೂ ಸಮೀಪಿಸುತ್ತೇವೆ.

English Translation.

Protect us from every impious Rakshasa, shield us in battles; we approach you, our nearest neighbour, our kinsman, for sacrifice and for increase.

॥ ಸಂಹಿತಾಪಾಠಃ ॥

ಆ ನೋ ಅಗ್ನೇ ವಯೋವೃಧಂ ರಯಿಂ ಪಾವಕ ಶಂಸ್ಯಂ |
ರಾಸ್ವಾ ಚ ನ ಉಪಮಾತೇ ಪುರುಸ್ಪೃಹಂ ಸುನೀತೀ ಸ್ವಯಶಸ್ತರಂ ॥ ೧೧ ॥

॥ ಪದಪಾಠಃ ॥

ಆ | ನಃ | ಅಗ್ನೇ | ವಯಃಽವೃಧಂ | ರಯಿಂ | ಪಾವಕ | ಶಂಸ್ಯಂ |
ರಾಸ್ವ | ಚ | ನಃ | ಉಪಽಮಾತೇ | ಪುರುಽಸ್ಪೃಹಂ | ಸುಽನೀತೀ | ಸ್ವಯಶಃಽತರಂ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಪಾವಕ ಶೋಧಕ ವಯೋವೃಧಮನ್ನಸ್ಯ ವರ್ಧಕಂ ಶಂಸ್ಯಂ ಶಂಸನೀಯಂ ರಯಿಂ ಧನಂ ನೋಽಸ್ಮಭ್ಯಮಾ ಹರೇತಿ ಶೇಷಃ | ಆವೃತ್ತ್ಯ ಚ ಹೇ ಉಪಮಾತೇ | ಉಪಾಸ್ಮತ್ಸಮೀಪೇ ಮಾತಿ ನೋ ಧನಮಿತ್ಯುಪಮಾತಿಃ | ಹೇ ತಾದೃಶಾಗ್ನೇ ನೋಽಸ್ಮಭ್ಯಂ ಸುನೀತೀ ಸುನೀತ್ಯಾ ಶೋಭನನಯನೇನ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ಸ್ವಯಶಸ್ತರಮತ್ಯಂತಂ ಸ್ವಭೂತಕೀರ್ತಿ ಧನಂ ರಾಸ್ವ ಚ | ದೇಹಿ ॥**

। ಪ್ರತಿಪದಾರ್ಥಃ ।

**ಪಾವಕ**— ಶುದ್ಧಿಕಾರಕನಾದ । **ಅಗ್ನೇ**— ಎಲೈ ಅಗ್ನಿಯೇ । **ವಯೋವೃಧಂ**— ನಮ್ಮ ಅನ್ನವನ್ನು ವೃದ್ಧಿಗೊಳಿಸತಕ್ಕದ್ದೂ । **ಶಂಸ್ಯಂ**— ಪ್ರಶಸ್ಯವಾದುದೂ ಆದ । **ರಯಿಂ**— ಧನವನ್ನು । **ನಃ**— ನಮಗೆ । **ಆ (ಹರ)**— ತಂದೊದಗಿಸು । **ಉಪಮಾತೇ**— ನಮ್ಮ ಸಮೀಪದಲ್ಲಿದ್ದು ನಮ್ಮ ಧನದ ಪರಿಮಾಣವನ್ನು ನೋಡತಕ್ಕ ಎಲೈ ಅಗ್ನಿಯೇ । **ನಃ**— ನಮಗೆ । **ಸುನೀತೀ**— ಅತ್ಯುತ್ಕೃಷ್ಟವಾದ ಮಾರ್ಗದಿಂದ । **ಪುರುಸ್ಪೃಹಂ**— ಅನೇಕರಿಂದ ಅಪೇಕ್ಷಿತವಾದುದೂ । **ಸ್ವಯಶಸ್ತರಂ**— ಉತ್ತಮವಾದ ಯಶಸ್ಕಾರಕವಾದುದೂ ಆದ ಧನವನ್ನು । **ರಾಸ್ವ**— ಕೊಡು.

॥ ಭಾವಾರ್ಥ ॥

ಶುದ್ಧಿಕಾರಕನಾದ ಎಲೈ ಅಗ್ನಿಯೇ, ನಮ್ಮ ಅನ್ನವನ್ನು ವೃದ್ಧಿಗೊಳಿಸತಕ್ಕದ್ದೂ, ಪ್ರಶಸ್ಯವಾದುದೂ ಆದ ಧನವನ್ನು ನಮಗೆ ತಂದೊದಗಿಸು. ನಮ್ಮ ಸಮೀಪದಲ್ಲಿದ್ದು ನಮ್ಮ ಧನದ ಪರಿಮಾಣವನ್ನು ನೋಡತಕ್ಕ ಎಲೈ ಅಗ್ನಿಯೇ ನಮಗೆ ಅತ್ಯುತ್ಕೃಷ್ಟವಾದ ಮಾರ್ಗದಿಂದ ಅನೇಕರಿಂದ ಅಪೇಕ್ಷಿತವಾದುದೂ, ಉತ್ತಮವಾದ ಯಶಸ್ಸಿಗೆ ಕಾರಣವಾದುದೂ ಆದ ಧನವನ್ನು ಕೊಡು.

## English Translation.

Purifying Agni, bestow upon us food-augmenting excellent wealth ; and (bring) us, O meter-out of good, by auspicious guidance, (a treasure) desired by many and bringing its own fame.

॥ ಸಂಹಿತಾಪಾಠಃ ॥

**ಯೇನ ವಂಸಾಮ ಪೃತನಾಸು ಶರ್ಧತಸ್ತರಂತೋ ಅರ್ಯ ಆದಿಶಃ ।**

**ಸ ತ್ವಂ ನೋ ವರ್ಧ ಪ್ರಯಸಾ ಶಚೀವಸೋ ಜಿನ್ವಾ ಧಿಯೋ ವಸುವಿದಃ ॥**

॥ ಪದಪಾಠಃ ॥

**ಯೇನ । ವಂಸಾಮ । ಪೃತನಾಸು । ಶರ್ಧತಃ । ತರಂತಃ । ಅರ್ಯಃ । ಆಽದಿಶಃ ।**

**ಸಃ । ತ್ವಂ । ನಃ । ವರ್ಧ । ಪ್ರಯಸಾ । ಶಚೀವಸೋ ಇತಿ ಶಚೀಽವಸೋ । ಜಿನ್ವ । ಧಿಯಃ । ವಸುಽವಿದಃ ॥**

। ಸಾಯಣಭಾಷ್ಯಂ ।

**ಯೇನ ಧನೇನ ಪೃತನಾಸು ಸಂಗ್ರಾಮೇಷು ಶರ್ಧತೋ ವೇಗಂ ಕುರ್ವತೋಽರ್ಯೋಽರೀಞ್ಛತ್ರೂನಾದಿಶ ಆದೇಷ್ಟೄಞ್ಛಸ್ತ್ರಪ್ರಕ್ಷೇಪ್ತೄಂಸ್ತರಂತೋ ವಂಸಾಮ ಹಿಂಸಾಮ ತದ್ಧನಂ ದೇಹಿ । ಹೇ ಶಚೀವಸೋ ಪ್ರಜ್ಞಯಾ ವಾಸಯಿತಃ ಕರ್ಮಣಾ ಧನಂ ವಾ ಸ ಪ್ರಸಿದ್ಧಸ್ತ್ವಂ ನೋಽಸ್ಮಾನ್ವರ್ಧ । ವರ್ಧಯ ।**

ಪ್ರೀಣಯ । ಪ್ರಯಸಾನ್ನೇನ ತ್ವಂ ವಾ ವರ್ಧ । ಅಸ್ಮದೀಯೇನ ಪ್ರಯಸಾ ಹವಿಷಾ ವಸುವಿದೋ ವಸೂನಾಂ ಲಂಭಕಾನಿ ಧಿಯಃ ಕರ್ಮಾಣ್ಯಸ್ಮದೀಯಾನಿ ಜಿನ್ವ । ಪ್ರೀಣಯ ॥

॥ ಪ್ರತಿಪದಾರ್ಥ ॥

**ಶಚೀವಸೋ**—ಕರ್ಮರೂಪವಾದ ಧನವುಳ್ಳ ಎಲೈ ಅಗ್ನಿಯೇ । **ಯೇನ**—ಯಾವ ಧನದಿಂದ । **ಪೃತನಾಸು**—ಸಂಗ್ರಾಮಗಳಲ್ಲಿ । **ಶರ್ಧತಃ**—ವೇಗವಾಗಿ ಎದುರುಬೀಳುವವರೂ । **ಆದಿಶಃ**—ಶಸ್ತ್ರಗಳನ್ನು ಪ್ರಯೋಗಿಸುವವರೂ ಆದ । **ಅರ್ಯಃ**—ಶತ್ರುಗಳನ್ನು । **ತರಂತಃ**—ಹಿಂದೆ ಬೀಳಿಸುತ್ತಾ । **ವಂಸಾಮ**—ಅವರನ್ನು ಹಿಂಸಿಸಬಲ್ಲೆವೋ ಅಂತಹ ಧನವನ್ನು ಕೊಡು । **ಸಃ**—ಪ್ರಸಿದ್ಧನಾದ । **ತ್ವಂ**—ನೀನು । **ನಃ**—ನಮ್ಮನ್ನು । **ಪ್ರಯಸಾ**—ಅನ್ನಗಳಿಂದ । **ವರ್ಧ**—ಬೆಳೆಸು । **ವಸುವಿದಃ**—ನಮ್ಮ ಧನಕ್ಕೆ ವೃದ್ಧಿಕಾರಕಗಳಾದ । **ಧಿಯಃ**—ಕರ್ಮಗಳನ್ನು । **ಜಿನ್ವ**—ಪೂರ್ಣಗೊಳಿಸು.

॥ ಭಾವಾರ್ಥ ॥

ಕರ್ಮರೂಪವಾದ ಧನವುಳ್ಳ ಎಲೈ ಅಗ್ನಿಯೇ, ಸಂಗ್ರಾಮಗಳಲ್ಲಿ ವೇಗವಾಗಿ ನಮ್ಮ ಮೇಲೆ ಬೀಳುವವರೂ, ಶಸ್ತ್ರಗಳನ್ನು ಪ್ರಯೋಗಿಸುವವರೂ ಆದ ಶತ್ರುಗಳನ್ನು ಯಾವ ಧನದ ಸಹಾಯದಿಂದ ಸೋಲಿಸಿ ಹಿಂಸಿಸಬಲ್ಲೆವೋ ಅಂತಹ ಧನವನ್ನು ನಮಗೆ ಕೊಡು. ಪ್ರಸಿದ್ಧನಾದ ನೀನು ನಮ್ಮನ್ನು ಅನ್ನಗಳಿಂದ ಬೆಳೆಸು. ನಮ್ಮ ಧನಕ್ಕೆ ವೃದ್ಧಿಕಾರಕಗಳಾದ ಕರ್ಮಗಳನ್ನು ಪೂರ್ಣಗೊಳಿಸು.

## English Translation.

By which we may escape and destroy in battles our impetuous weapon-aiming enemies ; O you who by wisdom establish our rites, bless us with food, prosper our wealth-obtaining offerings.

॥ ಸಂಹಿತಾಪಾಠಃ ॥

ಶಿಶಾನೋ ವೃಷಭೋ ಯಥಾಗ್ನಿಃ ಶೃಂಗೇ ದವಿಧ್ವತ್ ।

ತಿಗ್ಮಾ ಅಸ್ಯ ಹನವೋ ನ ಪ್ರತಿಧೃಷೇ ಸುಜಂಭಃ ಸಹಸೋ ಯಹುಃ ॥ ೧೩ ॥

॥ ಪದಪಾಠಃ ॥

ಶಿಶಾನಃ । ವೃಷಭಃ । ಯಥಾ । ಅಗ್ನಿಃ । ಶೃಂಗೇ ಇತಿ । ದವಿಧ್ವತ್ ।

ತಿಗ್ಮಾಃ । ಅಸ್ಯ । ಹನವಃ । ನ । ಪ್ರತಿಽಧೃಷೇ । ಸುಽಜಂಭಃ । ಸಹಸಃ । ಯಹುಃ ॥ ೧೩ ॥

॥ ಸಾಯಣಭಾಷ್ಯಂ ॥

ಅಯಮಗ್ನಿಃ ಶೃಂಗೇ ಶಿಶಾನಸ್ತೀಕ್ಷ್ಣೀಕುರ್ವನ್ ವೃಷಭೋ ಯಥಾ ದವಿಧ್ವತ್ ಕಂಪಯತಿ ಶಿರಃ ಏವಂ ಶೃಂಗಸ್ಥಾನೀಯಾ ಜ್ವಾಲಾಃ ಶಿಶಾನಸ್ತೀಕ್ಷ್ಣೀಕುರ್ವನ್ ದವಿಧ್ವತ್ । ಕಂಪಯತಿ ಶಿರಃ । ಅಸ್ಯಾಗ್ನೇರ್ಹನವೋ ನ ಹನವ ಇವ ಹನುಸ್ಥಾನೀಯಾ ಜ್ವಾಲಾಸ್ತಿಗ್ಮಾ ನ ಪ್ರತಿಧೃಷೇ । ಪ್ರತಿಧರ್ಷಿತುಮಶಕ್ಯಾಃ । ಯೋಽಗ್ನಿಃ ಸುಜಂಭಃ ಸುದಂಷ್ಟ್ರಃ ಸಹಸೋ ಯಹುಃ ಸಹಸಃ ಪುತ್ರೋಽಸ್ಯ ಹನವ ಇತ್ಯರ್ಥಃ ॥

॥ ಪ್ರತಿಪದಾರ್ಥ ॥

**ಶೃಂಗೇ**—ತನ್ನ ಕೊಂಬುಗಳನ್ನು । **ಶಿಶಾನಃ**—ತೀಕ್ಷ್ಣವಾಗಿ ಮಾಡಿಕೊಂಡು । **ದವಿಧ್ವತ್**— ತನ್ನ ಶಿರಃಕಂಪವನ್ನು ಮಾಡುವ । **ವೃಷಭೋ ಯಥಾ**— ವೃಷಭದಂತೆ । **ಅಗ್ನಿಃ**—ಅಗ್ನಿಯೂ ಸಹ ಜ್ವಾಲಾರೂಪವಾದ ತನ್ನ ಶೃಂಗಗಳನ್ನು ತೀಕ್ಷ್ಣವಾಗಿ ಮಾಡಿ ಶಿರಃಕಂಪವನ್ನು ಮಾಡುತ್ತಾನೆ । (**ಯಃ**—ಯಾವ ಅಗ್ನಿಯು) । **ಸುಜಂಭಃ**—ಜ್ವಾಲಾರೂಪದ ದಂಷ್ಟ್ರವುಳ್ಳವನೂ । **ಸಹಸೋ ಯಹುಃ**—ಶಕ್ತಿಪುತ್ರನೂ ಆಗಿರುವನೋ । **ಅಸ್ಯ**—ಅಂತಹ ಅಗ್ನಿಯ । **ತಿಗ್ಮಾಃ**— ತೀಕ್ಷ್ಣವಾದವೂ । **ಹನವಃ**—ಕೆನ್ನೆಯಂತಿರುವುವೂ ಆದ ಜ್ವಾಲೆಗಳು । **ನ ಪ್ರತಿಧೃಷೇ**—ಅಪ್ರತಿಹತವಾದವಾಗಿವೆ.

॥ ಭಾವಾರ್ಥ ॥

ತನ್ನ ಕೊಂಬುಗಳನ್ನು ತೀಕ್ಷ್ಣವಾಗಿ ಮಾಡಿಕೊಂಡು ತನ್ನ ಶಿರಃಕಂಪವನ್ನು ಮಾಡುವ ವೃಷಭದಂತೆ ಅಗ್ನಿಯೂ ಸಹ ಜ್ವಾಲಾರೂಪವಾದ ತನ್ನ ಶೃಂಗಗಳನ್ನು ತೀಕ್ಷ್ಣವಾಗಿ ಮಾಡಿ ಶಿರಃಕಂಪವನ್ನು ಮಾಡುತ್ತಾನೆ. ಯಾವ ಅಗ್ನಿಯು ಜ್ವಾಲಾರೂಪದ ದಂಷ್ಟ್ರವುಳ್ಳವನೂ, ಶಕ್ತಿಪುತ್ರನೂ ಆಗಿರುವನೋ ಅಂತಹ ಅಗ್ನಿಯ ತೀಕ್ಷ್ಣವಾದವೂ, ಕೆನ್ನೆಯಂತಿರುವುವೂ ಆದ ಜ್ವಾಲೆಗಳು ಅಪ್ರತಿಹತವಾದವಾಗಿವೆ.

## English Translation.

Agni tosses his horns, sharpening them as a bull ; his sharp jaws are not to be resisted ; he is mighty-toothed, this son of strength.

॥ ಸಂಹಿತಾಪಾಠಃ ॥

ನಹಿ ತೇ ಅಗ್ನೇ ವೃಷಭ ಪ್ರತಿಧೃಷೇ ಜಂಭಾಸೋ ಯದ್ವಿತಿಷ್ಠಸೇ ।
ಸ ತ್ವಂ ನೋ ಹೋತಃ ಸುಹುತಂ ಹವಿಷ್ಕೃಧಿ ವಂಸ್ವಾ ನೋ ವಾರ್ಯಾ ಪುರು ॥ ೧೪ ॥

॥ ಪದಪಾಠಃ ॥

ನಹಿ । ತೇ । ಅಗ್ನೇ । ವೃಷಭ । ಪ್ರತಿಽಧೃಷೇ । ಜಂಭಾಸಃ । ಯತ್ । ವಿಽತಿಷ್ಠಸೇ ।
ಸಃ । ತ್ವಂ । ನಃ । ಹೋತರಿತಿ । ಸುಽಹುತಂ । ಹವಿಃ । ಕೃಧಿ । ವಂಸ್ವ । ನಃ । ವಾರ್ಯಾ । ಪುರು ॥ ೧೪ ॥

॥ ಸಾಯಣಭಾಷ್ಯಂ ॥

ಹೇ ವೃಷಭ ವರ್ಷಕ ತೇ ತವ ಜಂಭಾಸೋ ಜಂಭಾ ದಂತಸ್ಥಾನೀಯಾ ಜ್ವಾಲಾ ನಹಿ ಪ್ರತಿಧೃಷೇ ಪ್ರತಿಧರ್ಷಿತುಂ ನ ಶಕ್ಯಾಃ । ಯದ್ಯಸ್ಮಾದ್ವಿತಿಷ್ಠಸೇ ವಿವಿಧಂ ಗಚ್ಛಸಿ । ಪ್ರವರ್ಧಸ ಇತ್ಯರ್ಥಃ । ಹೇ ಹೋತರ್ಹೋಮನಿಷ್ಪಾದಕ ಸ ತ್ವಂ ಹವಿರಸ್ಮದ್ದತ್ತಂ ಸುಹುತಂ ಕೃಧಿ । ಕುರು । ನೋಽಸ್ಮಭ್ಯಂ ವಾರ್ಯಾ ವರಣೀಯಾನಿ ಪುರು ಬಹೂನಿ ವಂಸ್ವ । ದೇಹಿ ॥

॥ ಪ್ರತಿಪದಾರ್ಥ ॥

**ವೃಷಭ**—ಕಾಮವರ್ಷಕನಾದ । **ಅಗ್ನೇ**—ಎಲೈ ಅಗ್ನಿಯೇ । **ಯತ್**—ಯಾವ ನಿನ್ನ ಜ್ವಾಲೆಗಳ ಮೂಲಕ । **ವಿತಿಷ್ಠಸೇ**—ಸರ್ವತ್ರ ಪ್ರಸರಿಸುವೆಯೋ ಅಂತಹ । **ತೇ ಜಂಭಾಸಃ**—ದಂತದಂತಿರುವ ನಿನ್ನ ಜ್ವಾಲೆಗಳು । **ನಹಿ ಪ್ರತಿಧೃಷೇ**—ಖಂಡಿತ ಅಪ್ರತಿಹತವಾದ ಶಕ್ತಿಯುಳ್ಳವು । **ಹೋತಃ**—ಹೋಮಸಂಪಾದಕನಾದ ಎಲೈ ಅಗ್ನಿಯೇ । **ಸಃ ತ್ವಂ**—ಪ್ರಸಿದ್ಧನಾದ ನೀನು । **ನಃ ಹವಿಃ**—ನಮ್ಮಿಂದ ಅರ್ಪಿತವಾದ ಹವಿಸ್ಸನ್ನು । **ಸುಹುತಂ**—ಉತ್ತಮವಾದ ಹವಿಸ್ಸಾಗುವಂತೆ । **ಕೃಧಿ**—ಮಾಡು । **ನಃ**—ನಮಗೆ । **ವಾರ್ಯಾ**—ಅಪೇಕ್ಷಿತವಾದ ಧನವನ್ನು । **ಪುರು**—ಅಧಿಕವಾಗಿ । **ವಂಸ್ವ**—ಕೊಡು.

॥ ಭಾವಾರ್ಥ ॥

ಕಾಮವರ್ಷಕನಾದ ಎಲೈ ಅಗ್ನಿಯೇ, ಯಾವ ನಿನ್ನ ಜ್ವಾಲೆಗಳ ಮೂಲಕ ಸರ್ವತ್ರ ಪ್ರಸರಿಸುವೆಯೋ ಅಂತಹ ದಂತದಂತಿರುವ ನಿನ್ನ ಜ್ವಾಲೆಗಳು ಖಂಡಿತ ಅಪ್ರತಿಹತವಾದ ಶಕ್ತಿಯುಳ್ಳವು. ಹೋಮಸಂಪಾದಕನಾದ ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ನಮ್ಮ ಹವಿಸ್ಸನ್ನು ಉತ್ತಮವಾದ ಹವಿಸ್ಸಾಗುವಂತೆ ಮಾಡು. ನಮಗೆ ಅಪೇಕ್ಷಿತವಾದ ಧನವನ್ನು ಅಧಿಕವಾಗಿ ಕೊಡು.

## English Translation

Since you spread out on all sides, your teeth, bull Agni, are not to be resisted ; O offerer, make our oblation rightly presented ; give us many precious (gifts).

॥ ಸಂಹಿತಾಪಾಠಃ ॥

ಶೇಷೇ ವನೇಷು ಮಾತ್ರೋಃ ಸಂ ತ್ವಾ ಮರ್ತಾಸ ಇಂಧತೇ ।
ಅತಂದ್ರೋ ಹವ್ಯಾ ವಹಸಿ ಹವಿಷ್ಕೃತ ಆದಿದ್ದೇವೇಷು ರಾಜಸಿ ॥ ೧೫ ॥

॥ ಪದಪಾಠಃ ॥

ಶೇಷೇ । ವನೇಷು । ಮಾತ್ರೋಃ । ಸಂ । ತ್ವಾ । ಮರ್ತಾಸಃ । ಇಂಧತೇ ।
ಅತಂದ್ರಃ । ಹವ್ಯಾ । ವಹಸಿ । ಹವಿಃಽಕೃತಃ । ಆತ್ । ಇತ್ । ದೇವೇಷು । ರಾಜಸಿ ॥ ೧೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವನೇಷು ವರ್ತಮಾನಯೋರ್ಮಾತ್ರೋರರಣ್ಯೋಃ ಶೇಷೇ । ಸ್ವಪಿಷಿ । ವರ್ತಸೇ । ತ್ವಾ ತ್ವಾಂ ತಥಾಭೂತಂ ಮರ್ತಾಸೋ ಮನುಷ್ಯಾ ಅಧ್ವರ್ಯ್ವಾದಯೋ ಮಥನೇನೋತ್ಪಾದ್ಯ ಸಮಿಂಧತೇ । ಪಶ್ಚಾತ್ಪ್ರವೃದ್ಧಸ್ತ್ವಮತಂದ್ರೋಽನಲಸಃ ಸನ್ ಹವಿಷ್ಕೃತೋ ಯಜಮಾನಸ್ಯ ಹವ್ಯಾ ಹವೀಂಷಿ ವಹಸಿ ದೇವಾನ್ಪ್ರತಿ । ಅದಿದನಂತರಮೇವ ದೇವೇಷು ಮಧ್ಯೇ ರಾಜಸಿ । ದೀಪ್ಯಸೇ ॥

॥ ಪ್ರತಿಪದಾರ್ಥ ॥

(ಎಲೈ ಅಗ್ನಿಯೇ) **ವನೇಷು**—ಅರಣ್ಯಗಳಲ್ಲಿರುವ । **ಮಾತ್ರೋಃ**—ಅರಣಿಗಳಲ್ಲಿ । **ಶೇಷೇ**—ನೀನು ಸುಪ್ತನಾಗಿದ್ದೀಯೆ । **ತ್ವಾ**—ನಿನ್ನನ್ನು । **ಮರ್ತಾಸಃ**—ಮಾನವರು । **ಸಮಿಂಧತೇ**—ಪ್ರಜ್ವಲಿತನನ್ನಾಗಿ ಮಾಡುತ್ತಾರೆ । **ಅತಂದ್ರಃ**—ಆಲಸ್ಯರಹಿತನಾಗಿ । **ಹವಿಷ್ಕೃತಃ**—ಹವಿಸ್ಸನ್ನರ್ಪಿಸುವ ಯಜಮಾನನ । **ಹವ್ಯಾ**—ಹವಿಸ್ಸುಗಳನ್ನು । **ವಹಸಿ**—ದೇವತೆಗಳಲ್ಲಿಗೆ ವಹಿಸುತ್ತೀಯೆ । **ಆದಿತ್**—ಆ ಒಡನೆಯೇ । **ದೇವೇಷು**—ದೇವತೆಗಳ ನಡುವೆ । **ರಾಜಸಿ**—ಪ್ರಕಾಶಿಸುತ್ತೀಯೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ಅರಣ್ಯಗಳಲ್ಲಿರುವ ನಿನ್ನ ಮಾತೃಪ್ರಾಯವಾದ ಅರಣಿಗಳಲ್ಲಿ ಸುಪ್ತನಾಗಿರುವ ನಿನ್ನನ್ನು ಮಾನವರು ಪ್ರಯತ್ನಿಸಿ ಪ್ರಜ್ವಲಿತನನ್ನಾಗಿ ಮಾಡುತ್ತಾರೆ. ಆಲಸ್ಯರಹಿತನಾಗಿ ಹವಿಸ್ಸನ್ನರ್ಪಿಸುವ ಯಜಮಾನನ ಹವಿಸ್ಸುಗಳನ್ನು ದೇವತೆಗಳಿಗೆ ವಹಿಸುತ್ತೀಯೆ ಆ ಒಡನೆಯೇ, ದೇವತೆಗಳ ನಡುವೆ ಪ್ರಕಾಶಿಸುತ್ತೀಯೆ.

## English Translation.

You sleep within your mothers in the woods, mortals kindle you; unwearied you bear the offerings of the sacrificer, then you shine among the gods.

॥ ಸಂಹಿತಾಪಾಠಃ ॥

ಸಪ್ತ ಹೋತಾರಸ್ತಮಿದೀಳತೇ ತ್ವಾಗ್ನೇ ಸುತ್ಯಜಮಹ್ರಯಂ ।
ಭಿನತ್ಸ್ಯದ್ರಿಂ ತಪಸಾ ವಿ ಶೋಚಿಷಾ ಪ್ರಾಗ್ನೇ ತಿಷ್ಠ ಜನಾಁ ಅತಿ ॥ ೧೬ ॥

॥ ಪದಪಾಠಃ ॥

ಸಪ್ತ । ಹೋತಾರಃ । ತಂ । ಇತ್ । ಈಳತೇ । ತ್ವಾ । ಅಗ್ನೇ । ಸುಽತ್ಯಜಂ । ಅಹ್ರಯಂ ।
ಭಿನತ್ಸಿ । ಅದ್ರಿಂ । ತಪಸಾ । ವಿ । ಶೋಚಿಷಾ । ಪ್ರ । ಅಗ್ನೇ । ತಿಷ್ಠ । ಜನಾನ್ । ಅತಿ ॥ ೧೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತಮಿತ್ತ್ವಮೇವ ತ್ವಾ ತ್ವಾಂ ಸಪ್ತ ಹೋತಾರೋ ಹೋತ್ರಕಾ ಈಳತೇ । ಸ್ತುವಂತಿ । ಕೀದೃಶಂ ತ್ವಾಂ । ಸುತ್ಯಜಂ ಸುತ್ಯಾಗಂ । ಅಭಿಮತಪ್ರದಮಿತ್ಯರ್ಥಃ । ಅಹ್ರಯಮಕ್ಷೀಣಂ ಪ್ರವೃದ್ಧಂ । ಕಿಂಚಾದ್ರಿಂ ಮೇಘಂ ತಪಸಾ ತಾಪಕೇನ ಶೋಚಿಷಾ ತೇಜಸಾ । ತಪಸಾ ಶೋಚಿಷಾ ಚೇತಿ ವಾ ಯೋಜ್ಯಂ । ವಿ ಭಿನತ್ಸಿ । ಹೇ ಅಗ್ನೇ ಜನಾನಸ್ಮಾನತ್ಯತೀತ್ಯ ಪ್ರ ತಿಷ್ಠ ಪ್ರಗಚ್ಛ ಹವಿರಾದಾಯ ದೇವಾನ್ಪ್ರತಿ । ಅಥವಾಸ್ಮದ್ದ್ವಿರೋಧಿಜನಾನತಿಕ್ರಮ್ಯ ಪ್ರ ತಿಷ್ಠ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಸುತ್ಯಜಂ – ಇಷ್ಟಾರ್ಥಪ್ರದನೂ । ಅಹ್ರಯಂ— ಕ್ಷಯರಹಿತನೂ । ತಂ— ಪ್ರಸಿದ್ಧನೂ ಆದ । ತ್ವಾ ಇತ್—ನಿನ್ನನ್ನೇ । ಸಪ್ತ ಹೋತಾರಃ—ಸಪ್ತಹೋತೃಗಳೂ ಸಹ । ಈಳತೇ—ಸ್ತುತಿಸುತ್ತಾರೆ । (ತ್ವಂ—ನೀನು) । ತಪಸಾ—ದಹಿಸತಕ್ಕ । ಶೋಚಿಷಾ—ತೇಜಸ್ಸಿನಿಂದ । ಅದ್ರಿಂ—ಮೇಘವನ್ನು । ವಿ ಭಿನತ್ಸಿ—ಸೀಳುತ್ತೀಯೆ । ಅಗ್ನೇ—ಎಲೈ ಅಗ್ನಿಯೇ । ಜನಾನ್—ಯಜಮಾನ ರಾದ ನಮ್ಮನ್ನು । ಅತಿ—ದಾಟಿಕೊಂಡು । ಪ್ರ ತಿಷ್ಠ—ನಮ್ಮ ಹವಿಸ್ಸಿನಿಂದ ದೇವತೆಗಳಲ್ಲಿ ಹೋಗಿ ಸೇರು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಇಷ್ಟಾರ್ಥಪ್ರದನೂ, ಕ್ಷಯರಹಿತನೂ, ಪ್ರಸಿದ್ಧನೂ ಆದ ನಿನ್ನನ್ನೇ ಸಪ್ತಹೋತೃಗಳೂ ಸಹ ಸ್ತುತಿಸುತ್ತಾರೆ. ನೀನು ದಹಿಸತಕ್ಕ ನಿನ್ನ ತೇಜಸ್ಸಿನಿಂದ ಮೇಘವನ್ನು ಸೀಳುತ್ತೀಯೆ. ಎಲೈ ಅಗ್ನಿಯೇ, ಯಜಮಾನರಾದ ನಮ್ಮನ್ನು ದಾಟಿಕೊಂಡು ನಮ್ಮ ಹವಿಸ್ಸಿನೊಂದಿಗೆ ದೇವತೆಗಳಲ್ಲಿ ಹೋಗಿ ಸೇರು.

## English Translation.

The Seven praists praise you, Agni, giver of good things and unfailing. you cleave the cloud with your fierce splendour ; go forth, having overcome onr enemies.

॥ ಸಂಹಿತಾಪಾಠಃ ॥

ಅಗ್ನಿಮಗ್ನಿಂ ವೋ ಅಧ್ರಿಗುಂ ಹುವೇಮ ವೃಕ್ತಬರ್ಹಿಷಃ ।
ಅಗ್ನಿಂ ಹಿತಪ್ರಯಸಃ ಶಶ್ವತೀಷ್ವಾ ಹೋತಾರಂ ಚರ್ಷಣೀನಾಂ ॥ ೧೭ ॥

॥ ಪದಪಾಠಃ ॥

ಅಗ್ನಿಂಽಅಗ್ನಿಂ । ವಃ । ಅಧ್ರಿಽಗುಂ । ಹುವೇಮ । ವೃಕ್ತಽಬರ್ಹಿಷಃ ।
ಅಗ್ನಿಂ । ಹಿತಽಪ್ರಯಸಃ । ಶಶ್ವತೀಷು । ಆ । ಹೋತಾರಂ । ಚರ್ಷಣೀನಾಂ ॥ ೧೭ ॥

॥ ಸಾಯಣಭಾಷ್ಯಂ ॥

ಅಗ್ನಿಮಗ್ನಿಂ । ವೀಪ್ಸಾದರಾರ್ಥಾ । ಅಗ್ನಿಮೇವ ಹೇ ಯಜಮಾನಾಃ ವೋ ಯುಷ್ಮದರ್ಥಂ ಹುವೇಮ । ಆಹ್ವಯಾಮ । ಅಥವಾ । ಹೇ ದೇವಾಃ ವೋ ಯುಷ್ಮದರ್ಥಮಿತಿ ವಾ ವ್ಯಾಖ್ಯೇಯಂ । ಕೀದೃಶಾ ವಯಂ । ವೃಕ್ತಬರ್ಹಿಷಶ್ಛಿನ್ನದರ್ಭಾಃ । ಕೀದೃಶಮಗ್ನಿಂ । ಅಧ್ರಿಗುಮಧೃತಗಮನಂ ಸರ್ವದಾ ಗೃಹೇ ವರ್ತಮಾನಮಗ್ನಿಂ । ಹಿತಪ್ರಯಸೋ ನಿಹಿತಹವಿಷ್ಕಾ ವಯಮಾ ಹುವೇಮೇತಿ ಶೇಷಃ । ಕೀದೃಶಮಗ್ನಿಂ । ಶಶ್ವತೀಷು ಬಹ್ವೀಷು ಭೂಮಿಷು ವರ್ತಮಾನಂ ಹೋತಾರಂ ಹೋಮನಿಷ್ಪಾದಕಂ । ಕಿಮರ್ಥಂ । ಚರ್ಷಣೀನಾಂ ಮನುಷ್ಯಾಣಾಮರ್ಥಾಯ । ಅಗ್ನೌ ತೃಪ್ತೇ ಸತಿ ವೃಷ್ಟಿಲಾಭಾ-ತ್ಪ್ರಾಣ್ಯುಪಕಾರಸಿದ್ಧಂ ಪ್ರಾಣ್ಯರ್ಥತ್ವಂ । ಅಥವಾ ಮನುಷ್ಯಾಣಾಂ ಯಜಮಾನಾನಾಂ ಹೋತಾರಂ ಹೋಮಸಾಧಕಂ ॥

॥ ಪ್ರತಿಪದಾರ್ಥ ॥

(ಎಲೈ ಯಜಮಾನನೇ) **ವೃಕ್ತಬರ್ಹಿಷಃ**—ದರ್ಭಾಸನವನ್ನು ಸಂಸ್ಕರಿಸಿರುವ ನಾವು । **ವಃ**—ನಿಮಗಾಗಿ । **ಅಧ್ರಿಗುಂ**—ಅಪ್ರತಿಹತವಾದ ಸಂಚಾರವುಳ್ಳ । **ಅಗ್ನಿಂ ಅಗ್ನಿಂ**—ಕೇವಲ ಅಗ್ನಿಯನ್ನೇ । **ಹುವೇಮ**—ಕರೆಯುತ್ತೇವೆ । **ಹಿತಪ್ರಯಸಃ**—ಹವಿಸ್ಸನ್ನು ಅರ್ಪಿಸಿದ ನಾವು । **ಶಶ್ವತೀಷು**—ಅನೇಕ ಸ್ಥಾನಗಳಲ್ಲಿರುವವನೂ । **ಹೋತಾರಂ**—ಹೋಮಸಂಪಾದಕನೂ ಆದ । **ಅಗ್ನಿಂ**—ಅಗ್ನಿಯನ್ನು । **ಚರ್ಷಣೀನಾಂ**—ಮಾನವರ ಹಿತಕ್ಕಾಗಿ । **ಆ (ಹುವೇಮ)**—ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಯಜಮಾನರೇ, ದರ್ಭಾಸನವನ್ನು ಸಂಸ್ಕರಿಸಿರುವ ನಾವು ನಿಮಗಾಗಿ ಅಪ್ರತಿಹತವಾದ ಸಂಚಾರವುಳ್ಳ ಕೇವಲ ಅಗ್ನಿಯನ್ನೇ ಕರೆಯುತ್ತೇವೆ. ಹವಿಸ್ಸನ್ನು ಅರ್ಪಿಸಿದ ನಾವು ಅನೇಕ ಸ್ಥಾನದಲ್ಲಿರುವವನೂ, ಹೋಮಸಂಪಾದಕನೂ ಆದ ಅಗ್ನಿಯನ್ನು ಮಾನವರ ಹಿತಕ್ಕಾಗಿ ಕರೆಯುತ್ತೇವೆ.

## English Translation.

Now that we have cut the sacred grass, let us invoke for you Agni, the irresistible; haveing placed the oblations, let us invoke Agni, abiding in many (places), the offerer of sacrifices for men.

॥ ಸಂಹಿತಾಪಾಠಃ ॥

ಕೇತೇನ ಶರ್ಮನ್ತ್ಸಚತೇ ಸುಷಾಮಣ್ಯಗ್ನೇ ತುಭ್ಯಂ ಚಿಕಿತ್ವನಾ ।
ಇಷಣ್ಯಯಾ ನಃ ಪುರುರೂಪಮಾ ಭರ ವಾಜಂ ನೇದಿಷ್ಠಮೂತಯೇ ॥ ೧೮ ॥

|| ಪದಪಾಠಃ ||

ಕೇತೇನ । ಶರ್ಮನ್ । ಸಚತೇ । ಸುಽಸಾಮನಿ । ಅಗ್ನೇ । ತುಭ್ಯಂ । ಚಿಕಿತ್ವನಾ ।

ಇಷಣ್ಯಯಾ । ನಃ । ಪುರುಽರೂಪಂ । ಆ । ಭರ । ವಾಜಂ । ನೇದಿಷ್ಠಂ । ಊತಯೇ ॥ ೧೮ ॥

|| ಸಾಯಣಭಾಷ್ಯಂ ||

ಹೇ ಅಗ್ನೇ ತುಭ್ಯಂ ಚಿಕಿತ್ವನಾ ಚಿಕಿತುಷಾ ಜನೇನ ಹೋತ್ರಾದಿನಾ ಸಹ ಯಜಮಾನಃ ಕೇತೇನ ಪ್ರಜ್ಞಾಪಕೇನ ಸ್ತೋತ್ರೇಣ ಯಜತ ಇತಿ ಶೇಷಃ । ಕುತ್ರೇತಿ ತದುಚ್ಯತೇ । ಸುಷಾಮಣಿ ಶೋಭನರಥಂತರಾದಿಸಾಮೋಪೇತೇ ಶರ್ಮಣ್ಯಪ್ರರ್ಮಣಿ ಸುಖಸಾಧನೇ ಯಜ್ಞೇ । ಅತೋ ಹೇ ಅಗ್ನೇ ಇಷಣ್ಯಯೇಚ್ಛಯಾ ಸ್ವೀಯಯಾ ನೋಽಸ್ಮಭ್ಯಂ ಪುರುರೂಪಂ ನಾನಾರೂಪಂ ನೇದಿಷ್ಠಮಂತಿಕೇ ಸರ್ವದಾ ವರ್ತಮಾನಂ ವಾಜಮನ್ನಮೂತಯೇ ರಕ್ಷಣಾಯಾ ಭರ । ಆಹರ ॥

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ । **ಚಿಕಿತ್ವನಾ**—ಪ್ರಾಜ್ಞರಾದ ಹೋತ್ರಾದಿಗಳಿಂದ ಕೂಡಿದ ಯಜಮಾನನು । **ಕೇತೇನ**—ಪ್ರಜ್ಞಾಯುತವಾದ ಸ್ತುತಿಗಳಿಂದ । **ಸುಷಾಮಣಿ**—ಉತ್ತಮವಾದ ರಥಂತರಾದಿಸಾಮುಗಳಿಂದ ಕೂಡಿದ । **ಶರ್ಮನ್**—ಯಜ್ಞಗೃಹದಲ್ಲಿ । **ತುಭ್ಯಂ**—ನಿನ್ನನ್ನುದ್ದೇಶಿಸಿ । **ಸಚತೇ**—ಆರಾಧಿಸುತ್ತಾನೆ । **ಇಷಣ್ಯಯಾ**—ನಿನ್ನ ಸ್ವಪ್ರೇರಣೆಯಿಂದಲೇ । **ನಃ**—ನಮಗೆ । **ಪುರುರೂಪಂ**—ಅನೇಕ ವಿಧವಾದುದೂ । **ನೇದಿಷ್ಠಂ**—ಯಾವಾಗಲೂ ನಮ್ಮ ಸಮೀಪದಲ್ಲೇ ಇರತಕ್ಕದ್ದೂ ಆದ । **ವಾಜಂ**—ಅನ್ನವನ್ನು । **ಊತಯೇ**—ನಮ್ಮ ರಕ್ಷಣಾರ್ಥವಾಗಿ । **ಆ ಭರ**—ತಂದೊದಗಿಸು.

|| ಭಾವಾರ್ಥ ||

ಎಲೈ ಅಗ್ನಿಯೇ. ಪ್ರಾಜ್ಞರಾದ ಹೋತ್ರಾದಿಗಳಿಂದ ಕೂಡಿದ ಯಜಮಾನನು ಪ್ರಜ್ಞಾಯುತವಾದ ಸ್ತುತಿಗಳಿಂದ ಉತ್ತಮವಾದ ರಥಂತರಾದಿಸಾಮುಗಳಿಂದ ಕೂಡಿದ ಯಜ್ಞಗೃಹದಲ್ಲಿ ನಿನ್ನನ್ನುದ್ದೇಶಿಸಿ ಆರಾಧಿಸುತ್ತಾನೆ. ನಿನ್ನ ಸ್ವಪ್ರೇರಣೆಯಿಂದಲೇ, ನಮಗೆ ಅನೇಕ ವಿಧವಾದುದೂ, ಯಾವಾಗಲೂ ನಮ್ಮ ಸಮೀಪದಲ್ಲೇ ಇರತಕ್ಕದ್ದೂ ಆದ ಅನ್ನವನ್ನು ನಮ್ಮ ರಕ್ಷಣಾರ್ಥವಾಗಿ ತಂದೊದಗಿಸು.

## English Translation.

(The sacrificer) worships you by praises, Agni, with the experiened (priests) in the rite celebrated with beautiful Saman hymns; bring us of your own accord for our protection, food of various kinds which may be always in our reach.

## English Translation

Maghavan, rich in cattle, (those who abide) in your happiness have greatly augmented your might when it was born, (they have greatly augmented) you, Indra, and your knowledge ; Indras's gifts are worthy of praise.

॥ ಸಂಹಿತಾಪಾಠಃ ॥

ಅಹಂ ಚ ತ್ವಂ ಚ ವೃತ್ರಹನ್ತ್ಸಂ ಯುಜ್ಯಾವ ಸನಿಭ್ಯ ಆ ।
ಅರಾತೀವಾ ಚಿದದ್ರಿವೋಽನು ನೌ ಶೂರ ಮಂಸತೇ ಭದ್ರಾ ಇಂದ್ರಸ್ಯ ರಾತಯಃ ॥ ೧೧ ॥

॥ ಪದಪಾಠಃ ॥

ಅಹಂ । ಚ । ತ್ವಂ । ಚ । ವೃತ್ರಽಹನ್ । ಸಂ । ಯುಜ್ಯಾವ । ಸನಿಽಭ್ಯಃ । ಆ ।
ಅರಾತಿಽವಾ । ಚಿತ್ । ಅದ್ರಿಽವಃ । ಅನು । ನೌ । ಶೂರ । ಮಂಸತೇ । ಭದ್ರಾಃ । ಇಂದ್ರಸ್ಯ । ರಾತಯಃ ॥

॥ ಸಾಯಣಭಾಷ್ಯಂ ॥

ಹೇ ವೃತ್ರಹನ್ನಿಂದ್ರ ತ್ವಂ ಚಾಹಂ ಚ ಸಂ ಯುಜ್ಯಾವ । ಸಂಗತೌ ಭವಾವ । ಕಿಯದವಧೀತಿ ಉಚ್ಯತೇ । ಸನಿಭ್ಯ ಆ ಯಾವತಾ ಕಾಲೇನ ಧನಾನಿ ಲಭ್ಯಂತೇ ತಾವತ್ಕಾಲಂ । ನೌ ಸಂಗತಯೋರಾವಯೋರ್ಹೇ ಅದ್ರಿವೋ ವಜ್ರವನ್ನಿಂದ್ರ ಅರಾತೀವಾದಾನೋಽಪಿ ಜನಸ್ತ್ವದ್ದತ್ತಧನಸ್ಯಾನು ಮಂಸತೇ । ಅನುಮತಿಂ ಕರೋತಿ ॥

॥ ಪ್ರತಿಪದಾರ್ಥ ॥

**ಶೂರ**—ಪರಾಕ್ರಮಿಯೂ । **ವೃತ್ರಹನ್**—ವೃತ್ರಹಂತಕನೂ ಆದ ಎಲೈ ಇಂದ್ರನೇ । **ತ್ವಂ ಚ**—ನೀನೂ । **ಅಹಂ ಚ**—ನಾನೂ । **ಸನಿಭ್ಯ ಆ**—ಧನಪ್ರಾಪ್ತಿಯಾಗುವವರೆಗೂ । **ಸಂ ಯುಜ್ಯಾವ**—ಒಟ್ಟಿಗೆ ಸೇರಿಕೊಂಡಿರೋಣ । **ಅದ್ರಿವಃ**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಅರಾತೀವಾ ಚಿತ್**—ಔದಾರ್ಯವಿಲ್ಲದ ಅದಾತೃವೂ ಸಹ । **ನೌ**—ನಮ್ಮ ಸಂಬಂಧವನ್ನು । **ಅನು ಮಂಸತೇ**—ಧನಪ್ರಾಪಕವೆಂದೇ ತಿಳಿಯುತ್ತಾನೆ । **ಇಂದ್ರಸ್ಯ**—ಇಂದ್ರನ । **ರಾತಯಃ**—ದಾನಗಳು । **ಭದ್ರಾಃ**—ಪ್ರಶಂಸನೀಯವು.

॥ ಭಾವಾರ್ಥ ॥

ಪರಾಕ್ರಮಿಯೂ, ವೃತ್ರಹಂತಕನೂ ಆದ ಎಲೈ ಇಂದ್ರನೇ, ನೀನೂ ನಾನೂ, ಧನಪ್ರಾಪ್ತಿಯಾಗುವವರೆಗೂ ಒಟ್ಟಿಗೆ ಸೇರಿಕೊಳ್ಳೋಣ ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಔದಾರ್ಯವಿಲ್ಲದ ಅದಾತೃವೂ ಸಹ, ನಮ್ಮ ಸಂಬಂಧವನ್ನು ಧನಪ್ರಾಪಕವೆಂದೇ ಅರಿಯುತ್ತಾನೆ. ಇಂದ್ರನ ದಾನಗಳು ಪ್ರಶಂಸಾರ್ಹನಾದವು.

## English Translation.

May I and you, slyer of Vritra, be closely united until wealth is obtained ; hero, wielding the thunderbolt, even the niggared concedes (that our union gives wealth); Indra's gifts are worthy of praise.

|| ಸಂಹಿತಾಪಾಠಃ ||

ಸತ್ಯಮಿದ್ವಾ ಉ ತಂ ವಯಮಿಂದ್ರಂ ಸ್ತವಾಮ ನಾನೃತಂ ।
ಮಹಾಁ ಅಸುನ್ವತೋ ವಧೋ ಭೂರಿ ಜ್ಯೋತೀಂಷಿ ಸುನ್ವತೋ ಭದ್ರಾ
ಇಂದ್ರಸ್ಯ ರಾತಯಃ ॥ ೧೨ ॥

|| ಪದಪಾಠಃ ||

ಸತ್ಯಂ । ಇತ್ । ವೈ । ಊಂ ಇತಿ । ತಂ । ವಯಂ । ಇಂದ್ರಂ । ಸ್ತವಾಮ । ನ । ಅನೃತಂ ।
ಮಹಾನ್ । ಅಸುನ್ವತಃ । ವಧಃ । ಭೂರಿ । ಜ್ಯೋತೀಂಷಿ । ಸುನ್ವತಃ । ಭದ್ರಾಃ । ಇಂದ್ರಸ್ಯ ।
ರಾತಯಃ ॥ ೧೨ ॥

|| ಸಾಯಣಭಾಷ್ಯಂ ||

ವಯಂ ಪ್ರಗಾಥಾಸ್ತಮಿಂದ್ರಂ ಸತ್ಯಮಿತ್ಸತ್ಯಮೇವ ಸ್ತವಾಮ । ನಾಽನೃತಮಸತ್ಯಂ ನ ಸ್ತವಾಮ । ಅಸ್ಮಾಭಿರುಕ್ತಾ ಗುಣಾಃ ಸತ್ಯಾ ಏವ ಸಂತು ನಾನೃತಾ ಇತ್ಯರ್ಥಃ । ಸ್ತುತ್ಯಸ್ಯೇಂದ್ರಸ್ಯ ಸಂಬಂಧ್ಯಸುನ್ವತೋಽಯಜ್ವನೋ ವಧೋ ಮಹಾನ್ಪ್ರಭೂತೋ ಭವತಿ । ಭೂರಿ ಜ್ಯೋತೀಂಷಿ ಬಹೂನ್ಸೋಮಾನ್ಸುನ್ವತೋಽಭಿಷವಂ ಕುರ್ವತೋ ಯಜಮಾನಸ್ಯೇಂದ್ರಕೃತೋಽನುಗ್ರಹೋ ಮಹಾನ್ಭವತೀತ್ಯರ್ಥಃ ॥

|| ಪ್ರತಿಪದಾರ್ಥ ||

ವಯಂ—ನಾವು । ತಂ ಇಂದ್ರಂ—ಪ್ರಸಿದ್ಧನಾದ ಇಂದ್ರನನ್ನು । ಸತ್ಯಮಿದ್ವೈ—ಪ್ರಾಮಾಣಿಕವಾಗಿಯೇ । ಸ್ತವಾಮ—ಸ್ತುತಿಸೋಣ । ಅನೃತಂ—ಅಸತ್ಯರೂಪದಿಂದ । ನ—ಸ್ತುತಿಸಲಾಗದು । ಅಸುನ್ವತಃ—ಯಜ್ಞಕರ್ತನಲ್ಲದವನಿಗೆ । ವಧಃ—ನಾಶವು । ಮಹಾನ್—ಅತ್ಯಧಿಕವಾದುದು । ಭೂರಿ—ಅತ್ಯಧಿಕವಾಗಿ । ಜ್ಯೋತೀಂಷಿ—ಸೋಮರಸವನ್ನು । ಸುನ್ವತಃ—ಹಿಂಡಿ ಅರ್ಪಿಸುವ ಯಜಮಾನನಿಗೆ ಲಭಿಸುವ । ಇಂದ್ರಸ್ಯ—ಇಂದ್ರನ । ರಾತಯಃ—ದಾನಗಳು । ಭದ್ರಾಃ—ಮಂಗಳಕರವಾಗಿವೆ.

|| ಭಾವಾರ್ಥ ||

ಪ್ರಸಿದ್ಧನಾದ ಇಂದ್ರನನ್ನು ನಾವು ಸತ್ಯವಾಗಿಯೇ ಸ್ತುತಿಸೋಣ. ಅಪ್ರಾಮಾಣಿಕವಾಗಿ ಸ್ತುತಿಸಬಾರದು. ಯಜ್ಞಕರ್ತನಲ್ಲದ ಮನುಜನಿಗೆ ಅಧಿಕವಾದ ನಾಶವು ಸಿದ್ಧವು. ಅತ್ಯಧಿಕವಾಗಿ ಸೋಮರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಲಭಿಸುವ ಇಂದ್ರನ ದಾನಗಳು ಮಂಗಳಕರಗಳಾಗಿವೆ.

## English Translation.

Let us praise that Indra with truth, not with untruth, great is the destruction of him who offers not; but to him who offers abundant Soma-oblations, Indra's gifts are worthy of praise.



# ಅರವತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

**ಸ ಪೂರ್ವ್ಯ ಇತಿ ದ್ವಾದಶರ್ಚಂ ಚತುರ್ಥಂ ಸೂಕ್ತಂ | ಅತ್ರಾನುಕ್ರಮಣಿಕಾ | ಸ ಪೂರ್ವ್ಯೋ ಗಾಯತ್ರಮಾದ್ಯಾ ಚತುರ್ಥ್ಯಾದಿದ್ವೇ ಸಪ್ತಮೀ ಚಾನುಷ್ಟುಭೋ ಗಾಯತ್ರೇಽಂತ್ಯಾ ದೈವೀ ತ್ರಿಷ್ಟುಬಿತಿ | ಪ್ರಥಮಾಚತುರ್ಥೀಪಂಚಮೀಸಪ್ತಮ್ಯ ಶ್ಚತಸ್ರೋಽನುಷ್ಟುಭೋಽಸ್ಮೇ ರುದ್ರಾ ಇತ್ಯಂತ್ಯಾ ತ್ರಿಷ್ಟುಬವಶಿಷ್ಟಾ ಗಾಯತ್ರ್ಯಃ | ಅಂತ್ಯಾಯಾ ದೇವಾ ದೇವತಾ ಶಿಷ್ಟಾ ಐಂದ್ರ್ಯಃ || ಷಷ್ಠೇಽಹನಿ ಮರುತ್ವತೀಯಸ್ಯಾದ್ಯಸ್ತೃಚಃ ಪ್ರತಿಪತ್ | ಸೂತ್ರಿತಂ ಚ | ಸ ಪೂರ್ವ್ಯೋ ಮಹಾನಾಂ ತ್ರಯ ಇಂದ್ರಸ್ಯ ಸೋಮಾ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ | ಆ. ೮-೧ | ಇತಿ ||**

ಅನುವಾದವು—**ಸ ಪೂರ್ವ್ಯಃ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ನಾಲ್ಕನೆಯ **ಸೂಕ್ತವು.** ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಸ ಪೂರ್ವ್ಯೋ ಗಾಯತ್ರಮಾದ್ಯಾ ಚತುರ್ಥ್ಯಾದಿದ್ವೇ ಸಪ್ತಮೀ ಚಾನುಷ್ಟುಭೋ ಗಾಯತ್ರೇಽನ್ತ್ಯಾ ದೈವೀ ತ್ರಿಷ್ಟುಪ್** ಎಂದು ಹೇಳಿರುವುದು. ಈ ಸೂಕ್ತದ ಒಂದು, ನಾಲ್ಕು, ಐದು, ಏಳು ಎಂಬ ನಾಲ್ಕು ಋಕ್ಕುಗಳು ಅನುಷ್ಟುಪ್‌ಛಂದಸ್ಕವು. **ಅಸ್ಮೇ ರುದ್ರಾಃ** ಎಂಬ ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಗಾಯತ್ರೀಛಂದಸ್ಕವು. ಈ ಸೂಕ್ತದ ಕೊನೆಯ ಋಕ್ಕಿಗೆ ದೇವತೆಗಳೇ ದೇವತೆಯು; ಉಳಿದ ಋಕ್ಕುಗಳಿಗೆ ಇಂದ್ರನು ದೇವತೆಯು. ಯಾಗದ ಆರನೆಯ ದಿವಸ ಮರುತ್ವತೀಯಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲ ಮೂರು ಋಕ್ಕುಗಳನ್ನು ಪ್ರತಿಪತ್ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸ ಪೂರ್ವ್ಯೋ ಮಹಾನಾಂ ತ್ರಯ ಇಂದ್ರಸ್ಯ ಸೋಮಾ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ** ಎಂಬ ಸೂತ್ರದಿಂದ (ಆ ೮-೧) ವಿವೃತವಾಗಿರುವುದು.

## ಸೂಕ್ತ—೬೩

ಮಂಡಲ—೮ ‖ ಅನುವಾಕ—೭ ‖ ಸೂಕ್ತ—೬೩ ‖
ಅಷ್ಟಕ—೬ ‖ ಅಧ್ಯಾಯ—೪ ‖ ವರ್ಗ—೪೨, ೪೩ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ‖
‖ ಋಷಿಃ—ಪ್ರಗಾಥಃ ಕಾಣ್ವಃ ‖
‖ ದೇವತಾ—೧-೧೧. ಇಂದ್ರಃ । ೧೨. ದೇವಾಃ ‖
‖ ಛಂದಃ—೧, ೪, ೫, ೭ ಅನುಷ್ಟುಪ್ । ೨, ೩, ೬, ೮-೧೧. ಗಾಯತ್ರೀ । ೧೨. ತ್ರಿಷ್ಟುಪ್ ‖

‖ ಸಂಹಿತಾಪಾಠಃ ‖

ಸ ಪೂರ್ವ್ಯೋ ಮಹಾನಾಂ ವೇನಃ ಕ್ರತುಭಿರಾನಜೇ ।
ಯಸ್ಯ ದ್ವಾರಾ ಮನುಷ್ಪಿತಾ ದೇವೇಷು ಧಿಯ ಆನಜೇ ‖ ೧ ‖

‖ ಪದಪಾಠಃ ‖

ಸಃ । ಪೂರ್ವ್ಯಃ । ಮಹಾನಾಂ । ವೇನಃ । ಕ್ರತುಽಭಿಃ । ಆನಜೇ ।
ಯಸ್ಯ । ದ್ವಾರಾ । ಮನುಃ । ಪಿತಾ । ದೇವೇಷು । ಧಿಯಃ । ಆನಜೇ ‖ ೧ ‖

‖ ಸಾಯಣಭಾಷ್ಯಂ ‖

**ಸ ಪೂರ್ವ್ಯೋ ಮುಖ್ಯೋ ಮಹಾನಾಂ ಪೂಜ್ಯಾನಾಂ ಯಜಮಾನಾನಾಂ ಕ್ರತುಭಿಃ ಕರ್ಮಭಿರ್ನಿಮಿತ್ತಭೂತೈರ್ವೇನಃ ಕಾಂತಸ್ತೇಷಾಂ ಹವಿಃ ಕಾಮಯಮಾನ ಆನಜೇ । ಆಗಚ್ಛತಿ । ಯಸ್ಯೇಂದ್ರಸ್ಯ ದ್ವಾರಾ ದ್ವಾರಾಣಿ ಪ್ರಾಪ್ತ್ಯುಪಾಯಾನಿ ಧಿಯಃ ಕರ್ಮಾಣಿ ದೇವೇಷ್ವೇತೇಷು ಮಧ್ಯೇ ಪಿತಾ ಸರ್ವೇಷಾಂ ಪಾಲಕೋ ಮನುರಾನಜೇ ಪ್ರಾಪ । ಆನಜಿಃ ಪ್ರಾಪ್ತಿಕರ್ಮಾ ‖**

‖ ಪ್ರತಿಪದಾರ್ಥ ‖

**ಯಸ್ಯ**—ಯಾವ ಇಂದ್ರನ । **ದ್ವಾರಾ**—ಅನುಗ್ರಹವನ್ನು ಸಂಪಾದಿಸಲು ಸಾಧನವಾದ । **ಧಿಯಃ**—ಕರ್ಮಗಳನ್ನು । **ದೇವೇಷು**—ದೇವತೆಗಳ ನಡುವೆ । **ಪಿತಾ**—ಸರ್ವಪಾಲಕನಾದ । **ಮನುಃ**—ಮನುವು । **ಆನಜೇ**—ಸಂಪಾದಿಸಿದನೋ । **ಸಃ**—ಅಂತಹ । **ಪೂರ್ವ್ಯಃ**—ಮುಖ್ಯನಾದ ಇಂದ್ರನು । **ಮಹಾನಾಂ**—ಪೂಜ್ಯರಾದ ಯಜಮಾನರ । **ಕ್ರತುಭಿಃ**—ಕರ್ಮಗಳಿಂದ । **ವೇನಃ**—ಹವಿಸ್ಸನ್ನು ಅಪೇಕ್ಷಿಸುತ್ತಾ । **ಆನಜೇ**—ಬರುತ್ತಾನೆ.

‖ ಭಾವಾರ್ಥ ‖

ಯಾವ ಇಂದ್ರನ ಅನುಗ್ರಹವನ್ನು ಸಂಪಾದಿಸಲು ಸಾಧನವಾದ ಕರ್ಮಗಳನ್ನು ದೇವತೆಗಳ ನಡುವೆ ಸರ್ವಪಾಲಕನಾದ ಮನುವು ಸಂಪಾದಿಸಿದನೋ, ಅಂತಹ ಮುಖ್ಯನಾದ ಇಂದ್ರನು ಪೂಜ್ಯರಾದ ಯಜಮಾನರ ಕರ್ಮಗಳಿಂದ ಹವಿಸ್ಸನ್ನು ಅಪೇಕ್ಷಿಸುತ್ತಾ ಬರುತ್ತಾನೆ.

## English Translation.

He, (Indra), the chief of those to be honoured, desirous **of our** offerings, approaches; he, the doors of whose favour, the sacred **rites,** Manu, the (universal) father, attained among the gods.

|| ಸಂಹಿತಾಪಾಠಃ ||

ದಿವೋ ಮಾನಂ ನೋತ್ಸದನ್ತ್ಸೋಮಪೃಷ್ಠಾಸೋ ಅದ್ರಯಃ ।
ಉಕ್ಥಾ ಬ್ರಹ್ಮ ಚ ಶಂಸ್ಯಾ ॥ ೨ ॥

|| ಪದಪಾಠಃ ||

ದಿವಃ । ಮಾನಂ । ನ । ಉತ್ । ಸದನ್ । ಸೋಮऽಪೃಷ್ಠಾಸಃ । ಅದ್ರಯಃ ।
ಉಕ್ಥಾ । ಬ್ರಹ್ಮ । ಚ । ಶಂಸ್ಯಾ ॥ ೨ ॥

|| ಸಾಯಣಭಾಷ್ಯಂ ||

**ದಿವೋ ದ್ಯುಲೋಕಸ್ಯ ಮಾನಂ ನಿರ್ಮಾತಾರಮಿಂದ್ರಂ ನೋತ್ಸದನ್ । ನೋತ್ಸೃಜಂತು । ಕೇ । ಸೋಮಪೃಷ್ಠಾಸಃ ಸೋಮಸ್ಪೃಷ್ಟಾರಃ ಸೋಮಾಭಿಷವಕರ್ತಾರೋಽದ್ರಯೋ ಗ್ರಾವಾಣಃ । ಕಿಂಚೋಕ್ಥೋಕ್ಥಾನಿ ಶಸ್ತ್ರಾಣಿ ಬ್ರಹ್ಮ ಚ ಬ್ರಹ್ಮಾಣಿ ಸ್ತೋತ್ರಾಣಿ ಶಂಸ್ಯಾ ಶಂಸನೀಯಾನಿ ಭವಂತೀತಿ ಶೇಷಃ । ಯದ್ವಾ । ಯಾನಿ ಸ್ತೋತ್ರಾಣಿ ಶಸ್ತ್ರಾಣಿ ಚ ಸಂತಿ ತಾನೀಂದ್ರಂ ನೋತ್ಸೃಜಂತ್ವಿತಿ ಸಮನ್ವಯಃ ॥**

|| ಪ್ರತಿಪದಾರ್ಥ ||

**ಸೋಮಪೃಷ್ಠಾಸಃ**—ಸೋಮವನ್ನು ಹಿಂಡತಕ್ಕ । **ಅದ್ರಯಃ**—ಗ್ರಾವಗಳು । **ದಿವಃ**—ದ್ಯುಲೋಕದ । **ಮಾನಂ**—ನಿರ್ಮಾಪಕನಾದ ಇಂದ್ರನನ್ನು । **ನ ಉತ್ಸದನ್**—ತ್ಯಾಗಮಾಡದಿರಲಿ । **ಶಂಸ್ಯಾ**—ಪ್ರಶಂಸಾಪೂರ್ವಕವಾಗಿ ಪಠಿತವಾಗಬೇಕಾದ । **ಉಕ್ಥಾ**—ಶಸ್ತ್ರಮಂತ್ರಗಳೂ । **ಬ್ರಹ್ಮ ಚ**—ಸ್ತೋತ್ರಗಳೂ ಇಂದ್ರನನ್ನು ತ್ಯಾಗಮಾಡದಿರಲಿ.

|| ಭಾವಾರ್ಥ ||

ಸೋಮವನ್ನು ಹಿಂಡತಕ್ಕ ಕಲ್ಲುಗಳು ದ್ಯುಲೋಕಕ್ಕೆ ನಿರ್ಮಾಪಕನಾದ ಇಂದ್ರನನ್ನು ತ್ಯಾಗಮಾಡದಿರಲಿ. ಪ್ರಶಂಸಾರೂಪದಲ್ಲಿ ಪಠಿತವಾಗಬೇಕಾದ ಶಸ್ತ್ರಮಂತ್ರಗಳೂ, ಸ್ತೋತ್ರಗಳೂ ಇಂದ್ರನನ್ನು ತ್ಯಾಗಮಾಡದಿರಲಿ.

## English Translation.

May the stones which press out the Soma never forsake **Indra, the** maker of heaven, nor the praises and hymns which are to be uttered

|| ಸಂಹಿತಾಪಾಠಃ ||

ಸ ವಿದ್ವಾँ ಅಂಗಿರೋಭ್ಯ ಇಂದ್ರೋ ಗಾ ಅವೃಣೋದಪ ।
ಸ್ತುಷೇ ತದಸ್ಯ ಪೌಂಸ್ಯಂ ॥ ೩ ॥

|| ಪದಪಾಠಃ ||

ಸಃ । ವಿದ್ವಾನ್ । ಅಂಗಿರಃऽಭ್ಯಃ । ಇಂದ್ರಃ । ಗಾಃ । ಅವೃಣೋತ್ । ಅಪ ।
ಸ್ತುಷೇ । ತತ್ । ಅಸ್ಯ । ಪೌಂಸ್ಯಂ ॥ ೩ ॥

। ಸಾಯಣಭಾಷ್ಯಂ ॥

ಸ ವಿದ್ವಾನುಪಾಯಜ್ಞ ಇಂದ್ರೋऽಂಗಿರೋಭ್ಯಸ್ತೇಷಾಮರ್ಥಾಯ ಗಾಃ ಪಣಿಭಿರಪಹೃತಾಃ ಪಿಹಿತಾ ಅಪಾವೃಣೋತ್ । ಅಪವಾರಿತವಾನ್ । ತತ್ತಾದೃಶಮಸ್ಯ ಪೌಂಸ್ಯಂ ಪುಂಸ್ತ್ವಂ ಸಾಮರ್ಥ್ಯಂ ಸ್ತುಷೇ । ಸ್ತೌಮಿ ॥

। ಪ್ರತಿಪದಾರ್ಥ ॥

ವಿದ್ವಾನ್—ಪ್ರಾಜ್ಞನಾದ । ಸ ಇಂದ್ರಃ—ಅದೇ ಇಂದ್ರನು । ಅಂಗಿರೋಭ್ಯಃ—ಅಂಗಿರಾಋಷಿಗಳಿಗೆ । ಗಾಃ—ಪಣಿಗಳಿಂದ ಅಪಹೃತವಾದ ಗೋವುಗಳನ್ನು । ಅಪ ಅವೃಣೋತ್—ಬಿಡಿಸಿ ತಂದುಕೊಟ್ಟನು । ಅಸ್ಯ—ಅದೇ ಇಂದ್ರನ । ತತ್ ಪೌಂಸ್ಯಂ—ಪ್ರಸಿದ್ಧವಾದ ವೀರ್ಯಕರ್ಮವನ್ನು । ಸ್ತುಷೇ—ಪ್ರಶಂಸಿಸುತ್ತೇನೆ.

|| ಭಾವಾರ್ಥ ||

ಪ್ರಾಜ್ಞನಾದ ಇಂದ್ರನು ಅಂಗಿರಾಋಷಿಗಳಿಗೆ ಪಣಿಗಳಿಂದ ಅಪಹೃತಗಳಾದ ಗೋವುಗಳನ್ನು ಬಿಡಿಸಿ ತಂದುಕೊಟ್ಟನು. ಅದೇ ಇಂದ್ರನ ಪ್ರಸಿದ್ಧವಾದ ವೀರ್ಯಕರ್ಮವನ್ನು ಪ್ರಶಂಸಿಸುತ್ತೇನೆ.

## English Translation.

He, the wise Indra, discovered the cows to the Angirasas; I glorify that his mtght.

। ಸಂಹಿತಾಪಾಠಃ ।

ಸ ಪ್ರತ್ನಥಾ ಕವಿವೃಧ ಇಂದ್ರೋ ವಾಕಸ್ಯ ವಕ್ಷಣಿಃ ।
ಶಿವೋ ಅರ್ಕಸ್ಯ ಹೋಮನ್ಯಸ್ಮತ್ರಾ ಗಂತ್ವವಸೇ ॥ ೪ ॥

। ಪದಪಾಠಃ ।

ಸಃ । ಪ್ರತ್ನಽಥಾ । ಕವಿಽವೃಧಃ । ಇಂದ್ರಃ । ವಾಕಸ್ಯ । ವಕ್ಷಣಿಃ ।

ಶಿವಃ । ಅರ್ಕಸ್ಯ । ಹೋಮನಿ । ಅಸ್ಮಽತ್ರಾ । ಗಂತು । ಅವಸೇ ॥ ೪ ॥

। ಸಾಯಣಭಾಷ್ಯಂ ।

ಸ ಇಂದ್ರಃ ಪ್ರತ್ನಥಾ ಪ್ರತ್ನವತ್ಪೂರ್ವಸ್ಮಿನ್ಕಾಲೇ ಯಥಾ ತದ್ವದಿದಾನೀಮಪಿ ಕವಿವೃಧೋ ಮೇಧಾವಿನಾಂ ಸ್ತೋತೄಣಾಂ ವರ್ಧಯಿತಾ ವಾಕಸ್ಯ ಸ್ತೋತುರ್ವಕ್ಷಣಿರ್ವೋಢಾ ಶಿವಃ ಸುಖಕರೋಽರ್ಕಸ್ಯ । ಅರ್ಕಮನ್ನಮರ್ಚನೀಯತ್ವಾದರ್ಚನಸಾಧನತ್ವಾದ್ವಾ । ತಾದೃಶಸ್ಯ ಸೋಮಸ್ಯ ಹೋಮನಿ ಹೋಮೇ ಸೋಽಸ್ಮತ್ರಾಸ್ಮಾಸು ನಿಮಿತ್ತಭೂತೇಷ್ವವಸೇ ರಕ್ಷಣಾಯ ಗಚ್ಛತು ॥

। ಪ್ರತಿಪದಾರ್ಥ ॥

**ಸಃ**—ಪ್ರಸಿದ್ಧನಾದ । **ಇಂದ್ರಃ**—ಇಂದ್ರನು । **ಪ್ರತ್ನಥಾ**—ಹಿಂದಿನ ಕಾಲದಲ್ಲಿ ಅನುಗ್ರಹಿಸಿದಂತೆಯೇ ಈಗಲೂ । **ಕವಿವೃಧಃ**—ಮೇಧಾವಿಗಳಾದ ಸ್ತುತಿಕರ್ತರಿಗೆ ವೃದ್ಧಿಕಾರಕನಾಗಿಯೂ । **ವಾಕಸ್ಯ**—ಸ್ತುತಿಕರ್ತರನ್ನು । **ವಕ್ಷಣಿಃ**—ಅಪೇಕ್ಷಿತವಾದ ಸ್ಥಾನಕ್ಕೆ ವಹಿಸುವವನಾಗಿಯೂ । **ಶಿವಃ**—ಮಂಗಳಕರನಾಗಿಯೂ ಇದ್ದಾನೆ (**ಸಃ**—ಅವನು) । **ಅರ್ಕಸ್ಯ**—ಪೂಜ್ಯವಾದ ಸೋಮದ । **ಹೋಮನಿ**—ಹೋಮಕಾಲದಲ್ಲಿ । **ಅಸ್ಮತ್ರಾ**—ನಮ್ಮಲ್ಲಿಗೆ । **ಅವಸೇ**—ರಕ್ಷಣಾರ್ಥವಾಗಿ । **ಗಂತು**—ಬರಲಿ.

। ಭಾವಾರ್ಥ ।

ಪ್ರಸಿದ್ಧನಾದ ಇಂದ್ರನು, ಹಿಂದಿನ ಕಾಲದಲ್ಲಿ ಅನುಗ್ರಹಿಸಿದಂತೆಯೇ, ಈಗಲೂ ಮೇಧಾವಿಗಳಾದ ಸ್ತುತಿಕರ್ತರಿಗೆ ವೃದ್ಧಿಕಾರಕನಾಗಿಯೂ, ಸ್ತುತಿಕರ್ತರನ್ನು ಅಪೇಕ್ಷಿತವಾದ ಸ್ಥಾನಕ್ಕೆ ವಹಿಸುವವನಾಗಿಯೂ, ಮಂಗಳಕರನಾಗಿಯೂ ಇದ್ದಾನೆ. ಅವನು ಪೂಜ್ಯವಾದ ಸೋಮದ ಹೋಮಕಾಲದಲ್ಲಿ ನಮ್ಮಲ್ಲಿಗೆ ರಕ್ಷಣಾರ್ಥವಾಗಿ ಬರಲಿ.

## English Translation.

As in former times, so now too is Indra the blesser of the worshipper and the bearer of him who praises him; may he come among us auspicious for our protection at the oblation of the Soma.

॥ ಸಂಹಿತಾಪಾಠಃ ॥

ಆದೂ ನು ತೇ ಅನು ಕ್ರತುಂ ಸ್ವಾಹಾ ವರಸ್ಯ ಯಜ್ಯವಃ ।

ಶ್ವಾತ್ರಮರ್ಕಾ ಅನೂಷತೇಂದ್ರ ಗೋತ್ರಸ್ಯ ದಾವನೇ ॥ ೫ ॥

॥ ಪದಪಾಠಃ ॥

ಅತ್ । ಊಂ ಇತಿ । ನು । ತೇ । ಅನು । ಕ್ರತುಂ । ಸ್ವಾಹಾ । ವರಸ್ಯ । ಯಜ್ಯವಃ ।

ಶ್ವಾತ್ರಂ । ಅರ್ಕಾಃ । ಅನೂಷತ । ಇಂದ್ರ । ಗೋತ್ರಸ್ಯ । ದಾವನೇ ॥ ೫ ॥

॥ ಸಾಯಣಭಾಷ್ಯಂ ॥

ಅದ್ಯನಂತರಮೇವ ನ್ವದ್ಯ ಹೇ ಇಂದ್ರ ತೇ ತವ ಕ್ರತುಂ ಕರ್ಮಾನು ಕ್ರಮೇಣ । ಅನೂಷತೇತಿ ಸಂಬಂಧಃ । ಅನುಕ್ರಮೇಣ ಸ್ತುವಂತಿ । ಕೇ । ಸ್ವಾಹಾ ವರಸ್ಯ ಸ್ವಾಹಾದೇವ್ಯಾಃ ಪತೇರಗ್ನೇರ್ಯಜ್ಯವೋ ಯಷ್ಟಾರಃ । ತದ್ವರ್ಥಮಗ್ನಾ ಯಾಗಂ ಕುರ್ವಂತ ಇತ್ಯರ್ಥಃ । ತಾದೃಶಾ ಅರ್ಕಾ ಅರ್ಚಯಿತಾರಃ ಸ್ತೋತಾರಃ । ಶ್ವಾತ್ರಮಿತಿ ಕ್ಷಿಪ್ರನಾಮ । ಅನ್ಯದೇವತಾಸ್ತುತಿರೂಪವಿಲಂಬಮಕೃತ್ವಾತಿಶೀಘ್ರಮತಿ-ದೀರ್ಘಂ ಸ್ತುದಂತೀತ್ಯಭಿಪ್ರಾಯಃ । ಕಿಮರ್ಥಂ ಸ್ತುವಂತೀತಿ ಉಚ್ಯತೇ । ಗೋತ್ರಸ್ಯ ದಾವನೇ ಧನಸ್ಯ ದಾನಾಯ ॥

॥ ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಸ್ವಾಹಾ ವರಸ್ಯ—ಸ್ವಾಹಾದೇವಿಗೆ ಪತಿಯಾದ ಅಗ್ನಿಯನ್ನು । ಯಜ್ಯವಃ—ಪೂಜಿಸತಕ್ಕ । ಅರ್ಕಾಃ—ಸ್ತುತಿಕರ್ತರು । ಗೋತ್ರಸ್ಯ- ಧನದ । ದಾವನೇ—ಸಂಪಾದನೆಗಾಗಿ । ಶ್ವಾತ್ರಂ—ಒಡನೆಯೇ । ಅದು—ತತ್ಪೂಜಾನಂತರ । ನು—ಈಗ । ತೇ—ನಿನ್ನ । ಕ್ರತುಂ—ಕರ್ಮವನ್ನು । ಅನು—ಯಥಾಕ್ರಮವಾಗಿ । ಅನೂಷತ—ಸ್ತುತಿಸುತ್ತಾರೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ವಾಹಾದೇವಿಗೆ ಪತಿಯಾದ ಅಗ್ನಿಯನ್ನು ಪೂಜಿಸತಕ್ಕ ಸ್ತುತಿಕರ್ತರು ಧನದ ಸಂಪಾದನೆಗಾಗಿ ತತ್ಪೂಜಾನಂತರವೇ ನಿನ್ನ ಕರ್ಮವನ್ನು ಯಥಾಕ್ರಮವಾಗಿ ಸ್ತುತಿಸುತ್ತಾರೆ.

## English Translation.

Forthwith, Indra, as they offer to Agni the lord of Swaha, the singers successively praise your deeds, for the attainment of wealth.

॥ ಸಂಹಿತಾಪಾಠಃ ॥

ಇಂದ್ರೇ ವಿಶ್ವಾನಿ ವೀರ್ಯಾ ಕೃತಾನಿ ಕರ್ತ್ವಾನಿ ಚ ।

ಯಮರ್ಕಾ ಅಧ್ವರಂ ವಿದುಃ ॥ ೬ ॥

|| ಪದಪಾಠಃ ||

ಇಂದ್ರೇ । ವಿಶ್ವಾನಿ । ವೀರ್ಯಾ । ಕೃತಾನಿ । ಕರ್ತ್ವಾನಿ । ಚ ।
ಯಂ । ಅರ್ಕಾಃ । ಅಧ್ವರಂ । ವಿದುಃ ॥ ೬ ॥

॥ ಸಾಯಣಭಾಷ್ಯಂ ॥

ಅಸ್ಮಿನ್ನಿಂದ್ರೇ ವಿಶ್ವಾನಿ ಸರ್ವಾಣಿ ವೀರ್ಯಾ ವೀರ್ಯಾಣಿ ಸಾಮರ್ಥ್ಯಾನಿ ಕೃತಾನಿ ಕರ್ತ್ವಾನಿ ಚ ಕರ್ತವ್ಯಾನಿ ಚ ವರ್ತಂತೇ ಇತಿ ಶೇಷಃ । ಯಮಿಂದ್ರಮರ್ಕಾಃ ಸ್ತೋತಾರೋಽಧ್ವರಮಹಿಂಸಕಂ ವಿದುಃ ಜಾನಂತಿ ತಸ್ಮಿನ್ನಿಂದ್ರ ಇತಿ ॥

॥ ಪ್ರತಿಪದಾರ್ಥ ॥

**ಯಂ**—ಯಾವ ಇಂದ್ರನನ್ನು । **ಅರ್ಕಾಃ**—ಸ್ತುತಿಕರ್ತರು । **ಅಧ್ವರಂ**—ಅಹಿಂಸಕನೆಂದು । **ವಿದುಃ**—ತಿಳಿದಿದ್ದಾರೋ । **ಇಂದ್ರೇ**—ಅದೇ ಇಂದ್ರನಲ್ಲಿ । **ವಿಶ್ವಾನಿ**—ಸಮಸ್ತವಾದ । **ವೀರ್ಯಾ**—ಸಾಮರ್ಥ್ಯೋಪೇತವಾದವೂ । **ಕೃತಾನಿ**—ಹಿಂದೆ ನೆರವೇರಿದವೂ । **ಕರ್ತ್ವಾನಿ ಚ**—ಮುಂದೆ ನೆರವೇರಬೇಕಾದವೂ ಆದ ಸಕಲ ಕರ್ಮಗಳೂ ಅಡಗಿವೆ.

॥ ಭಾವಾರ್ಥ ॥

ಯಾವ ಇಂದ್ರನನ್ನು ಸ್ತುತಿಕರ್ತರು ಅಹಿಂಸಕನೆಂದು ತಿಳಿದಿದ್ದಾರೆಯೋ, ಅದೇ ಇಂದ್ರನಲ್ಲಿ ಸಾಮರ್ಥ್ಯದ್ಯೋತಕವೂ ಹಿಂದೆ ಮಾಡಲ್ಪಟ್ಟವೂ, ಮುಂದೆ ಮಾಡಲ್ಪಡಬೇಕಾದವೂ ಆದ ಸಕಲ ಕರ್ಮಗಳೂ ಅಡಗಿವೆ.

## English Translation.

In that Indra, whom the singers know as the unharming, all past and future powers abide.

॥ ಸಂಹಿತಾಪಾಠಃ ॥

ಯತ್ಪಾಂಚಜನ್ಯಯಾ ವಿಶೇಂದ್ರೇ ಘೋಷಾ ಅಸೃಕ್ಷತ ।
ಅಸ್ತೃಣಾದ್ಬರ್ಹಣಾ ವಿಪೋ೩ ಽರ್ಯೋ ಮಾನಸ್ಯ ಸ ಕ್ಷಯಃ ॥ ೭ ॥

॥ ಪದಪಾಠಃ ॥

ಯತ್ । ಪಾಂಚಽಜನ್ಯಯಾ । ವಿಶಾ । ಇಂದ್ರೇ । ಘೋಷಾಃ । ಅಸೃಕ್ಷತ ।
ಅಸ್ತೃಣಾತ್ । ಬರ್ಹಣಾ । ವಿಪಃ । ಅರ್ಯಃ । ಮಾನಸ್ಯ । ಸಃ । ಕ್ಷಯಃ ॥ ೭ ॥

॥ ಸಾಯಣಭಾಷ್ಯಂ ॥

ಪಂಚಮೇಽಹನಿ ಮರುತ್ವತೀಯೇ ಯತ್ಪಾಂಚಜನ್ಯಯೇತಿ ತೃಚಃ ಪ್ರತಿಪತ್ । ಸೂತ್ರಿತಂ ಚ । ಯತ್ಪಾಂಚಜನ್ಯಯಾ ವಿಶೇಂದ್ರ ಇತ್ಥೋಮುಪಾ ಏಳ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ । ಆ. ೭-೧೨ । ಇತಿ ॥

ಯದ್ಯದಾ ಪಾಂಚಜನ್ಯಯಾ । ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚ ಜನಾಃ । ತತ್ರಭವಯಾ ವಿಶಾ ಪ್ರಜಯೇಂದ್ರೇ ಘೋಷಾಃ ಸ್ತುತಯೋಽಸೃಕ್ಷತ ಸೃಜ್ಯಂತೇ ತದಾನೀಮಯಮಿಂದ್ರೋಽಸ್ತೃಣಾತ್ ಹಿನಸ್ತಿ ಶತ್ರೂನ್ ಬರ್ಹಣಾ ಸ್ವಮಹತ್ತ್ವೇನ । ಅನನ್ಯಸಹಾಯೇನೇತ್ಯರ್ಥಃ । ತಾದೃಶಃ ಸೋಽರ್ಯ ಇಂದ್ರೋ ವಿಪೋ ಮೇಧಾವಿನಃ ಸ್ತೋತುರ್ಮಾನಸ್ಯ ಪೂಜಾಯಾಃ ಸತ್ಕಾರಸ್ಯ ಕ್ಷಯೋ ನಿವಾಸೋ ಭವತಿ ॥

॥ ಪ್ರತಿಪದಾರ್ಥ ॥

**ಯತ್**— ಯಾವಾಗ । **ಪಾಂಚಜನ್ಯಯಾ**— ನಿಷಾದಾದಿಪಂಚವರ್ಣಾತ್ಮಕವಾದ । **ವಿಶಾ**— ಪ್ರಜೆಗಳಿಂದ । **ಇಂದ್ರೇ**— ಇಂದ್ರನನ್ನುದ್ದೇಶಿಸಿದ । **ಘೋಷಾಃ**— ಸ್ತುತಿಗಳು । **ಅಸೃಕ್ಷತ**— ನಿರ್ಮಿತವಾಗಿ ಪಠಿತವಾದವೋ ಆ ಒಡನೆಯೇ । **ಬರ್ಹಣಾ**— ಕೇವಲ ಸ್ವಸಾಮರ್ಥ್ಯದಿಂದಲೇ । **ಅಸ್ತೃಣಾತ್**— ಇಂದ್ರನು ಶತ್ರುಗಳನ್ನು ನಾಶಪಡಿಸಿದನು । **ಸಃ**— ಅಂತಹ । **ಅರ್ಯಃ**— ಸ್ವಾಮಿಯಾದ ಇಂದ್ರನು । **ವಿಪಃ**— ಮೇಧಾವಿಯಾದ ಸ್ತುತಿಕರ್ತನ । **ಮಾನಸ್ಯ**— ಪೂಜೆಗೆ । **ಕ್ಷಯಃ**— ಪಾತ್ರಸ್ಥಾನವಾಗಿ ಆಗುತ್ತಾನೆ.

॥ ಭಾವಾರ್ಥ ॥

ನಿಷಾದಾದಿ ಪಂಚವರ್ಣಾತ್ಮಕರಾದ ಪ್ರಜೆಗಳಿಂದ ಇಂದ್ರನನ್ನುದ್ದೇಶಿಸಿದ ಸ್ತುತಿಗಳು ನಿರ್ಮಿತವಾಗಿ ಯಾವಾಗ ಪಠಿತವಾದವೋ ಆ ಒಡನೆಯೇ, ಕೇವಲ ಸ್ವಸಾಮರ್ಥ್ಯದಿಂದಲೇ ಇಂದ್ರನು ಶತ್ರುಗಳನ್ನು ನಾಶಪಡಿಸಿದನು. ಅಂತಹ ಸ್ವಾಮಿಯಾದ ಇಂದ್ರನು ಮೇಧಾವಿಯಾದ ಸ್ತುತಿಕರ್ತನ ಪೂಜೆಗೆ ಪಾತ್ರಸ್ಥಾನವಾಗಿ ಆಗುತ್ತಾನೆ.

## English Translation.

When praises are addressed to Indra by the men of the five classes, he destroys their enemies by his might ; he, the lord, is the abode of worsipper's homage.

॥ ವಿಶೇಷವಿಷಯಗಳು ॥

ಯಜ್ಞದ ಐದನೆಯ ದಿವಸ ಮರುತ್ವತೀಯಶಸ್ತ್ರಮಂತ್ರಗಳನ್ನು ಪಠಿಸುವಾಗ **ಯತ್ಪಾಂಚಜನ್ಯಯಾ** ಎಂದು ಮೊದಲಾಗುವ ಈ ಮೂರು ಋಕ್ಕುಗಳನ್ನು ಪ್ರತಿಪತ್ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಯತ್ಪಾಂಚಜನ್ಯಯಾ ವಿಶೇಂದ್ರ ಇತ್ಥೋಮುಪಾ ಏಳ ಇತಿ ಮರುತ್ವತೀಯಸ್ಯ ಪ್ರತಿಪದನುಚರೌ** ಎಂಬ ಸೂತ್ರದಿಂದ (ಆ. ೭-೧೨) ವಿವೃತವಾಗಿರುವುದು

॥ ಸಂಹಿತಾಪಾಠಃ ॥

ಇಯಮು ತೇ ಅನುಷ್ಟುತಿಶ್ಚಕೃಷೇ ತಾನಿ ಪೌಂಸ್ಯಾ ।
ಪ್ರಾವಶ್ಚಕ್ರಸ್ಯ ವರ್ತನಿಂ ॥೮॥

॥ ಪದಪಾಠಃ ॥

ಇಯಂ । ಊಂ ಇತಿ । ತೇ । ಅನುऽಸ್ತುತಿಃ । ಚಕೃಷೇ । ತಾನಿ । ಪೌಂಸ್ಯಾ ।
ಪ್ರ । ಆವಃ । ಚಕ್ರಸ್ಯ । ವರ್ತನಿಂ ॥ ೮ ॥

॥ ಸಾಯಣಭಾಷ್ಯಂ ॥

ಇಯಮಿದಾನೀಂಕ್ರಿಯಮಾಣಾನುಷ್ಟುತಿರನುಕೂಲಾ ಸ್ತುತಿಸ್ತೇ ತವ ಸ್ವಭೂತಾ । ಕುತಸ್ತ ಇತಿ ಉಚ್ಯತೇ । ತಾನಿ ಪ್ರಸಿದ್ಧಾನಿ ವೃತ್ರವಧಾದೀನಿ ಪೌಂಸ್ಯಾ ಪುಂಸ್ತ್ವಾನಿ ಯತಶ್ಚಕೃಷೇ । ಅತಸ್ತ ಇತ್ಯರ್ಥಃ। ಹೇ ಇಂದ್ರ ಚಕ್ರಸ್ಯ ರಥಾಧಾರಸ್ಯ ವರ್ತನಿಂ ಮಾರ್ಗಂ ಪ್ರಾವಃ । ಪ್ರಾರಕ್ಷಃ । ಅಥಾಸ್ಮದ್ಯಜ್ಞಗಮನಾಯ ರಕ್ಷಃಕೃತಾ ಚಕ್ರಮಾರ್ಗಬಾಧಾ ಯಥಾ ನ ಭವತಿ ತಥಾ ರಕ್ಷಸೀತ್ಯರ್ಥಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತಾನಿ**— ವೃತ್ರವಧಾದಿರೂಪವಾದ । **ಪೌಂಸ್ಯಾ**-ವೀರ್ಯಕರ್ಮಗಳನ್ನು । **ಚಕೃಷೇ**— ನೀನು ನೆರವೇರಿಸಿದ್ದೀಯೆ । **ಚಕ್ರಸ್ಯ**—ರಥಚಕ್ರದ । **ವರ್ತನಿಂ**—ಮಾರ್ಗವನ್ನು । **ಪ್ರಾವಃ**—ರಕ್ಷಿಸಿರುವೆ (ಆದುದರಿಂದ) । **ಇಯಂ**— ಈಗ ಪಠಿತವಾಗುವ । **ಅನುಷ್ಟುತಿಃ**— ನಿನಗೆ ಪ್ರಿಯಕರವಾದ ಸ್ತುತಿಯು । **ತೇ ಉ**— ನಿನ್ನನ್ನೇ ಉದ್ದೇಶಿಸಲ್ಪಟ್ಟಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ವೃತ್ರವಧಾದಿರೂಪವಾದ ವೀರ್ಯಕರ್ಮಗಳನ್ನು ನೆರವೇರಿಸಿದ್ದೀಯೆ. ರಥಚಕ್ರದ ಮಾರ್ಗಗಳನ್ನು ರಕ್ಷಿಸಿರುವೆ. ಆದುದರಿಂದ ಈಗ ಪಠಿತವಾಗುವ ನಿನಗೆ ಪ್ರಿಯಕರವಾದ ಸ್ತುತಿಯು ನಿನ್ನನ್ನೇ ಉದ್ದೇಶಿಸಲ್ಪಟ್ಟಿದೆ.

## English Translation.

This praise is yours, for you have achieved those exploits ; you have guarded the road of our chariot-wheel (to be sacrificial rite).

॥ ಸಂಹಿತಾಪಾಠಃ ॥

ಅಸ್ಯ ವೃಷ್ಣೋ ವ್ಯೋದನ ಉರು ಕ್ರಮಿಷ್ಟ ಜೀವಸೇ ।
ಯವಂ ನ ಪಶ್ವ ಆ ದದೇ ॥ ೯ ॥

॥ ಪದಪಾಠಃ ॥

ಅಸ್ಯ । ವೃಷ್ಣಃ । ವಿಽಓದನೇ । ಉರು । ಕ್ರಮಿಷ್ಟ । ಜೀವಸೇ ।

ಯವಂ । ನ । ಪಶ್ವಃ । ಆ । ದದೇ ॥ ೯ ॥

॥ ಸಾಯಣಭಾಷ್ಯಂ ॥

ಅಸ್ಯ ವೃಷ್ಣೋ ವರ್ಷಿತುರಿಂದ್ರಸ್ಯ ವ್ಯೋದನೇ ವಿವಿಧೇಽನ್ನೇ ಲಬ್ಧೇ ಸತಿ ಜೀವಸೇ ಜೀವನಾಯೋರು ವಿಸ್ತೀರ್ಣಂ ಕ್ರಮಿಷ್ಟ ಪದನಿಧಾನಂ ಕರೋತಿ ಸರ್ವೋ ಲೋಕಃ । ಅಥವೇಂದ್ರಸ್ಯ ಸ್ವಭೂತೇಽನ್ನೇ ಲಬ್ಧೇ ಲಬ್ಧವ್ಯೇ ವಾ ಸತಿ ಪದನ್ಯಾಸಂ ಕರೋತಿ । ತಥಾ ಕೃತ್ವಾ ಯವಂ ನ ಪಶ್ವೋ ಯವಂ ಪಶವ ಇವ ಸರ್ವೋ ಜನ ಆ ದದೇ ಆದತ್ತೇ ಸ್ವೀಕರೋತಿ ತದನ್ನಂ ॥

॥ ಪ್ರತಿಪದಾರ್ಥ ॥

**ವೃಷ್ಣಃ**—ಇಷ್ಟಾರ್ಥಗಳನ್ನು ಸುರಿಸುವ । **ಅಸ್ಯ**—ಈ ಇಂದ್ರನಿಂದ । **ವ್ಯೋದನೇ**—ವಿವಿಧವಾದ ಅನ್ನವು ಲಬ್ಧವಾದಾಗ । **ಜೀವಸೇ**—ತಮ್ಮ ತಮ್ಮ ಜೀವನಕ್ಕಾಗಿ । **ಉರು**—ಅತ್ಯಂತ ವಿಸ್ತೃತವಾಗಿ ಪಾದಗಳನ್ನಿಡುತ್ತಾ । **ಕ್ರಮಿಷ್ಟ**—ಲೋಕದ ಸಕಲ ಜನವೂ ಓಡಾಡುತ್ತಾರೆ । **ಪಶ್ವಃ**—ಪಶುಗಳು । **ಯವಂ ನ**—ಆತುರದಿಂದ ಯವಾದಿ ಧಾನ್ಯಗಳನ್ನು ಭಕ್ಷಿಸುವಂತೆ । **ಆ ದದೇ**—ಲೋಕವೆಲ್ಲವೂ ಈ ಅನ್ನಗಳನ್ನು ಸ್ವೀಕರಿಸುತ್ತದೆ.

॥ ಭಾವಾರ್ಥ ॥

ಇಷ್ಟಾರ್ಥಗಳನ್ನು ಸುರಿಸುವ ಈ ಇಂದ್ರನಿಂದ ನಾನಾ ವಿಧವಾದ ಅನ್ನಗಳು ಲಬ್ಧವಾದಾಗ ತಮ್ಮ ತಮ್ಮ ಜೀವನಕ್ಕಾಗಿ ಅತ್ಯಂತ ವಿಸ್ತೃತವಾಗಿ ಪಾದಗಳನ್ನಿಡುತ್ತಾ ಲೋಕದ ಜನರು ಓಡಾಡುತ್ತಾರೆ. ಪಶುಗಳು ಆತುರದಿಂದ ಯವಾದಿಧಾನ್ಯಗಳನ್ನು ಭಕ್ಷಿಸುವಂತೆ ಲೋಕವೆಲ್ಲವೂ ಈ ಅನ್ನಗಳನ್ನು ಸ್ವೀಕರಿಸುತ್ತದೆ.

## English Translation.

When the various sustenance, given by Indra, the showerer, is obtained, all men step out with wide strides for (dear) life; they receive it as cattle barley.

॥ ಸಂಹಿತಾಪಾಠಃ ॥

ತದ್ದಧಾನಾ ಅವಸ್ಯವೋ ಯುಷ್ಮಾಭಿರ್ದಕ್ಷಪಿತರಃ ।

ಸ್ಯಾಮ ಮರುತ್ವತೋ ವೃಧೇ ॥ ೧೦ ॥

|| ಪದಪಾಠಃ ||

ತತ್ । ದಧಾನಾಃ । ಅವಸ್ಯವಃ । ಯುಷ್ಮಾಭಿಃ । ದಕ್ಷऽಪಿತರಃ ।

ಸ್ಯಾಮ । ಮರುತ್ವತಃ । ವೃಧೇ ॥ ೧೦ ॥

। ಸಾಯಣಭಾಷ್ಯಂ ।

ತತ್ಸ್ತೋತ್ರಂ ದಧಾನಾ ಧಾರಯಂತೋऽವಸ್ಯವೋ ರಕ್ಷಾಕಾಮಾ ವಯಂ ಹೇ ಋತ್ವಿಜಃ ಯುಷ್ಮಾಭಿಃ । ಸಹಿತಾ ಇತಿ ವಾ ಯೋಜ್ಯಂ । ತಾದೃಶಾ ದಕ್ಷಪಿತರಃ । ದಕ್ಷೋऽನ್ನಂ । ತಸ್ಯ ಪಿತರಃ ಪಾಲಕಾಃ ಸ್ವಾಮಿನಃ ಸ್ಯಾಮ । ಕಿಮರ್ಥಂ । ಮರುತ್ವತೋ ಮರುದ್ಭಿಸ್ತದ್ವತ ಇಂದ್ರಸ್ಯ ವೃಧೇ ವರ್ಧನಾಯ ಯಾಗಾಯ ॥

। ಪ್ರತಿಪದಾರ್ಥ ।

(ಎಲೈ ಋತ್ವಿಕ್ಕುಗಳೇ) **ತತ್**—ಪ್ರಸಿದ್ಧವಾದ ಸ್ತೋತ್ರವನ್ನು । **ದಧಾನಾಃ**—ಇಂದ್ರನಿಗೆ ಅರ್ಪಿಸುತ್ತಲೂ । **ಅವಸ್ಯವಃ**—ರಕ್ಷಣೆಯನ್ನು ಇಚ್ಛಿಸುತ್ತಲೂ । **ಯುಷ್ಮಾಭಿಃ**—ನಿಮ್ಮಗಳೊಡನೆ ಕೂಡಿ । **ಮರುತ್ವತಃ**—ಮರುತ್ಸಹಾಯಕನಾದ ಇಂದ್ರನ । **ವೃಧೇ**—ವೃದ್ಧಿಕಾರಕವಾದ ಯಜ್ಞನಿರ್ವಹಣಕ್ಕೋಸ್ಕರ । **ದಕ್ಷಪಿತರಃ**—ಅನ್ನಕ್ಕೆ ಒಡೆಯರಾಗಿ । **ಸ್ಯಾಮ**—ನಾವು ಇರುವಂತಾಗಲಿ.

। ಭಾವಾರ್ಥ ।

ಎಲೈ ಋತ್ವಿಕ್ಕುಗಳೇ, ಪ್ರಸಿದ್ಧವಾದ ಸ್ತೋತ್ರವನ್ನು ಇಂದ್ರನಿಗೆ ಅರ್ಪಿಸುತ್ತಲೂ, ರಕ್ಷಣೆಯನ್ನು ಇಚ್ಛಿಸುತ್ತಲೂ ನಿಮ್ಮಗಳೊಡಗೂಡಿ ಮರುತ್ಸಹಾಯಕನಾದ ಇಂದ್ರನಿಗೆ ವೃದ್ಧಿಕಾರಕವಾದ ಯಜ್ಞನಿರ್ವಹಣಕ್ಕೋಸ್ಕರ ಅನ್ನಕ್ಕೆ ಒಡೆಯರಾಗಿ ನಾವು ಇರುವಂತಾಗಲಿ.

## English Translation.

Presenting our praises and desiring protection, may we with you (O priests) be lords of food, to offer sacrifice to (Indra) attended by the Maruts.

|| ಸಂಹಿತಾಪಾಠಃ ||

ಬಳ್ಳುತ್ವಿಯಾಯ ಧಾಮ್ನ ಋಕ್ವಭಿಃ ಶೂರ ನೋನುಮಃ ।

ಜೇಷಾಮೇಂದ್ರ ತ್ವಯಾ ಯುಜಾ ॥ ೧೧ ॥

। ಪದಪಾಠಃ ।

ಬಟ್ । ಋತ್ವಿಯಾಯ । ಧಾಮ್ನೇ । ಋಕ್ವಽಭಿಃ । ಶೂರ । ನೋನುಮಃ ।

ಜೇಷಾಮ । ಇಂದ್ರ । ತ್ವಯಾ । ಯುಜಾ ॥ ೧೧ ॥

॥ ಸಾಯಣಭಾಷ್ಯಂ ॥

ಬಟ್ ಸತ್ಯಮೃತ್ವಿಯಾಯರ್ತೌ ಭವಾಯ । ಋತುಶಬ್ದೋ ಯಾಗಕಾಲೋಪಲಕ್ಷಕಃ । ಯಾಗಕಾಲೇ ಪ್ರಾದುರ್ಭೂತಾಯ ಧಾಮ್ನೇ ಕಲ್ಯಾಣತೇಜಸೇ ತುಭ್ಯಂ ಹೇ ಶೂರೇಂದ್ರ ಋಕ್ವಭಿರ್ಮಂತ್ರೈರ್ನೋನುಮಃ । ಅತಿಶಯೇನ ಸ್ತುಮಃ । ಹೇ ಇಂದ್ರ ಸ್ತುತೇನ ತ್ವಯಾ ಯುಜಾ ಸಹಾಯಭೂತೇನ ಜೇಷಾಮ ಜಯೇಮ ಶತ್ರೂನ್ ॥

॥ ಪ್ರತಿಪದಾರ್ಥ ॥

**ಶೂರ**— ಪರಾಕ್ರಮಿಯಾದ ಎಲೈ ಇಂದ್ರನೇ । **ಋತ್ವಿಯಾಯ**— ಯಜ್ಞಕಾಲದಲ್ಲಿ ಉತ್ಪನ್ನನಾಗತಕ್ಕವನೂ । **ಧಾಮ್ನೇ**— ಕಲ್ಯಾಣಾತ್ಮಕವಾದ ತೇಜಸುಳ್ಳವನೂ ಆದ ನಿನ್ನನ್ನುದ್ದೇಶಿಸಿ । **ಬಟ್**— ಸತ್ಯವಾಗಿಯೂ । **ಋಕ್ವಭಿಃ**— ಮಂತ್ರಗಳಿಂದ । **ನೋನುಮಃ**— ಸ್ತುತಿಸುತ್ತೇವೆ । **ಇಂದ್ರ**— ಎಲೈ ಇಂದ್ರನೇ । **ತ್ವಯಾ**— ಹೀಗೆ ಸ್ತುತನಾದ ನಿನ್ನೊಡನೆ । **ಯುಜಾ**— ಸೇರಿಕೊಂಡು । **ಜೇಷಾಮ**— ನಾವು ಶತ್ರುಗಳನ್ನು ಜಯಿಸುವೆವು.

॥ ಭಾವಾರ್ಥ ॥

ಪರಾಕ್ರಮಿಯಾದ ಎಲೈ ಇಂದ್ರನೇ, ಯಜ್ಞಕಾಲದಲ್ಲಿ ಉತ್ಪನ್ನನಾಗತಕ್ಕವನೂ, ಕಲ್ಯಾಣಾತ್ಮಕವಾದ ತೇಜಸ್ಸುಳ್ಳವನೂ ಆದ ನಿನ್ನನ್ನುದ್ದೇಶಿಸಿ ಸತ್ಯವಾಗಿಯೂ ಮಂತ್ರಗಳಿಂದ ಸ್ತುತಿಸುತ್ತೇವೆ ಎಲೈ ಇಂದ್ರನೇ, ಹೀಗೆ ಸ್ತುತನಾದ ನಿನ್ನೊಡನೆ ಸೇರಿಕೊಂಡು ನಾವು ಶತ್ರುಗಳನ್ನು ಜಯಿಸುವಂತಾಗಲಿ.

## English Translation.

Hero, by our hymns we offer praise to you, who appear at the time of sacrifice, and wear auspicious splendour ; with you as our ally may we conquer (our enemies).

॥ ಸಂಹಿತಾಪಾಠಃ ॥

ಅಸ್ಮೇ ರುದ್ರಾ ಮೇಹನಾ ಪರ್ವತಾಸೋ ವೃತ್ರಹತ್ಯೇ ಭರಹೂತೌ ಸಜೋಷಾಃ ।

ಯಃ ಶಂಸತೇ ಸ್ತುವತೇ ಧಾಯಿ ಪಜ್ರ ಇಂದ್ರಜ್ಯೇಷ್ಠಾ ಅಸ್ಮಾँ ಅವಂತು ದೇವಾಃ ॥ ೧೨ ॥

॥ ಪದಪಾಠಃ ॥

ಅಸ್ಮೇ ಇತಿ । ರುದ್ರಾಃ । ಮೇಹನಾ । ಪರ್ವತಾಸಃ । ವೃತ್ರ್ರsಹತ್ಯೇ । ಭರsಹೂತೌ । ಸsಜೋಷಾಃ ।
ಯಃ । ಶಂಸತೇ । ಸ್ತುವತೇ । ಧಾಯಿ । ಪಜ್ರಃ । ಇಂದ್ರsಜ್ಯೇಷ್ಠಾಃ । ಅಸ್ಮಾನ್ ಅವಂತು ।
ದೇವಾಃ ॥ ೧೨ ॥

॥ ಸಾಯಣಭಾಷ್ಯಂ ॥

ಅಸ್ಮೇ ಅಸ್ಮಾನ್ರುದ್ರಾ ಮೇಹನೋದಕಸೇಚನಯುಕ್ತಾಃ ಪರ್ವತಾಸೋ ಮೇಘಾಶ್ಚ ವೃತ್ರಹತ್ಯೇ ವೃತ್ರಹನನಸಾಧನೇ ಭರಹೂತೌ ಸಂಗ್ರಾಮಾಹ್ವಾನೇ ಸಜೋಷಾ ಅಸ್ಮತ್ಸಮಾನಪ್ರೀತಿಶ್ಚ ಯ ಇಂದ್ರಃ ಶಂಸತೇ ಶಸ್ತ್ರಂ ಪಠತೇ ಸ್ತುವತೇ ಸ್ತೋತ್ರಂ ಕುರ್ವತೇ ಚ ಯಜಮಾನಾಯ ಪಜ್ರೋ ಬಲವಾನ್ ವೇಗವಾನ್ಸ್ವಾ ಧಾಯಿ ಗಚ್ಛತಿ ಸ ಇಂದ್ರಶ್ಚೇಮ ಇಂದ್ರಜ್ಯೇಷ್ಠಾ ದೇವಾ ಅಸ್ಮಾನವಂತು । ರಕ್ಷಂತು । ಅಸ್ಮಾನಿತಿ ಪೂರಣಃ । ಅಥವೈವಂ ಯೋಜ್ಯಂ । ರುದ್ರಾ ರುದ್ರಪುತ್ರಾ ಮೇಹನಾ ಸೇಚನೇನ ಯುಕ್ತಾಃ ಪರ್ವತಾಃ ಪರ್ವತಸದೃಶಾಃ ಪೂರಣವಂತಃ ಪ್ರೀಣನವಂತೋ ವಾ । ಪೂರ್ವ ಪುನಃ ಪೃಣಾತೇಃ ಪ್ರೀಣಾತೇರ್ವೇತಿ ನಿರುಕ್ತಂ । ೧-೨೦ । ವೃತ್ರಹತ್ಯೇ ಭರಹೂತೌ ಸಜೋಷಾಃ ಸಜೋಷಸಃ ಸಹಾಯಭೂತಾ ಮರುತೋ ದೇವಾ ಇಂದ್ರಜ್ಯೇಷ್ಠಾ ಉಕ್ತಲಕ್ಷಣ ಇಂದ್ರಶ್ಚಾಸ್ಮಾನವಂತ್ವಿತಿ ॥

॥ ಪ್ರತಿಪದಾರ್ಥ ॥

(**ರುದ್ರಾಃ**—ರುದ್ರರೂ । **ಮೇಹನಾ**—ವೃಷ್ಟಿಸೇಚಕರಾದ । **ಪರ್ವತಾಸಃ**—ಮೇಘಗಳೂ) । ಅಥವಾ (**ಇಂದ್ರಜ್ಯೇಷ್ಠಾಃ**—ಇಂದ್ರನೇ ಮುಖ್ಯನಾಗಿ ಉಳ್ಳವರೂ । **ಪರ್ವತಾಃ**—ಪರ್ವತಕ್ಕೆ ಸಮಾನರೂ । **ಮೇಹನಾ**—ವೃಷ್ಟಿಕಾರಕರೂ । **ರುದ್ರಾಃ**—ರುದ್ರಪುತ್ರರೂ ಆದ ಮರುತ್ತುಗಳೂ) । ಅಲ್ಲದೇ **ಯಃ**—ಯಾವ ಇಂದ್ರನು । **ವೃತ್ರಹತ್ಯೇ**—ವೃತ್ರಹನನ ಸಾಧಕವಾದ । **ಭರಹೂತೌ**—ಸಂಗ್ರಾಮದಲ್ಲಿ ಕರೆಬಂದಾಗ । **ಸಜೋಷಾಃ**—ನಮ್ಮಲ್ಲಿ ಸಮಾನವಾದ ಪ್ರೀತಿಯುಳ್ಳವನಾಗಿ । **ಶಂಸತೇ**—ಶಸ್ತ್ರಮಂತ್ರವನ್ನು ಪಠಿಸುವವನೂ । **ಸ್ತುವತೇ**—ಸ್ತೋತ್ರವನ್ನು ಪಠಿಸುವವನೂ ಆದ ಯಜಮಾನನಿಗಾಗಿ । **ಪಜ್ರಃ**—ವೇಗವನ್ನು ಹೊಂದಿ । **ಧಾಯಿ**—ಓಡಿಬರುವನೋ ಅಂತಹ ಇಂದ್ರನೂ । **ಇಂದ್ರಜ್ಯೇಷ್ಠಾಃ**—ಇಂದ್ರನೇ ಮುಖ್ಯವಾಗಿ ಉಳ್ಳ । **ದೇವಾಃ**—ಸಕಲ ದೇವತೆಗಳೂ । **ಅಸ್ಮಾನ್**—ನಮ್ಮನ್ನು । **ಅವಂತು**—ರಕ್ಷಿಸಲಿ.

॥ ಭಾವಾರ್ಥ ॥

ಪರ್ವತಕ್ಕೆ ಸಮಾನರೂ, ವೃಷ್ಟಿಕಾರಕರೂ, ಇಂದ್ರನೇ ಮುಖ್ಯವಾಗಿ ಉಳ್ಳವರೂ, ರುದ್ರಪುತ್ರರೂ ಆದ ಮರುದ್ದೇವತೆಗಳೂ ಮತ್ತು ಅವರೊಡನೆ ಇರುವವನೂ, ವೃತ್ರಹನನ ಸಾಧನವಾದ ಸಂಗ್ರಾಮದಲ್ಲಿ ಕರೆಬಂದಾಗ ನಮ್ಮಲ್ಲಿ ಸಮಾನವಾಗಿ ಪ್ರೀತಿಯುಳ್ಳವನಾಗಿ ಶಸ್ತ್ರಪಾಠಕನೂ ಸ್ತೋತ್ರಪಾಠಕನೂ ಆದ ಯಜಮಾನನ ಸಹಾಯಾರ್ಥವಾಗಿ ಶಕ್ತಿಯುತನಾಗಿ ಓಡಿಬರುವವನೂ ಆದ ಇಂದ್ರನೂ, ಇತರ ಸಕಲ ದೇವತೆಗಳೂ ನಮ್ಮನ್ನು ರಕ್ಷಿಸಲಿ.

## English Translation.

The Rudras, the showering clouds, and (Indra) who rejoices wirh us in the bettle-challenge which brings Vritra's destruction, and who comes in his might to the reciter and singer of his praises,—may these gods, with Indra at their head, protect us.



# ಅರವತ್ತನಾಲ್ಕನೆಯ ಸೂಕ್ತವು

|| ಸಾಯಣಭಾಷ್ಯಂ ||

**ಉತ್ತ್ವಾ ಮಂದಂತ್ವಿತಿ ದ್ವಾದಶರ್ಚಂ ಪಂಚಮಂ ಸೂಕ್ತಂ ಪ್ರಗಾಥಸ್ಯಾರ್ಷಂ । ಪ್ರಾಗ್ವತ್ಸಪ್ರ-ಪರಿಭಾಷಯಾ ಗಾಯತ್ರಮೈಂದ್ರಂ । ಉತ್ತ್ವೇತ್ಯನುಕ್ರಮಣಿಕಾ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಉತ್ತ್ವಾ ಮಂದಂತು** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಐದನೆಯ **ಸೂಕ್ತವು.** ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಗಾಥನು ಋಷಿಯು; ಇಂದ್ರನು ದೇವತೆಯು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಉತ್ತ್ವಾ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೬೪

ಮಂಡಲ—೮ || ಅನುವಾಕ—೭ || ಸೂಕ್ತ—೬೪ ||
ಅಷ್ಟಕ—೬ || ಅಧ್ಯಾಯ—೪ || ವರ್ಗ—೪೪, ೪೫ ||
|| **ಸೂಕ್ತದಲ್ಲಿರುವ ಋಕ್ಸಂಖ್ಯೇ—೧೨** ||
|| **ಋಷಿಃ—ಪ್ರಗಾಥಃ ಕಾಣ್ವಃ** ||
|| **ದೇವತಾ—ಇಂದ್ರಃ** ||
|| **ಛಂದಃ—ಗಾಯತ್ರೀ** ||

|| **ಸಂಹಿತಾಪಾಠಃ** ||

ಉತ್ತ್ವಾ ಮಂದಂತು ಸ್ತೋಮಾಃ ಕೃಣುಷ್ವ ರಾಧೋ ಅದ್ರಿವಃ ।
ಅವ ಬ್ರಹ್ಮದ್ವಿಷೋ ಜಹಿ ॥ ೧ ॥

|| **ಪದಪಾಠಃ** ||

**ಉತ್ । ತ್ವಾ । ಮಂದಂತು । ಸ್ತೋಮಾಃ । ಕೃಣುಷ್ವ । ರಾಧಃ । ಅದ್ರಿಽವಃ ।**
**ಅವ । ಬ್ರಹ್ಮಽದ್ವಿಷಃ । ಜಹಿ** ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ ತ್ವಾಂ ಸ್ತೋಮಾಃ ಸ್ತುತಯ ಉದುತ್ಕೃಷ್ಟಂ ಮಂದಂತು । ಮಾದಯಂತು । ಕೃಣುಷ್ವ ಕುರು ರಾಧೋಽನ್ನಂ ಹೇ ಅದ್ರಿವೋ ವಜ್ರವನ್ನಿಂದ್ರ ಅಸ್ಮಭ್ಯಂ । ಕಿಂಚ ಬ್ರಹ್ಮದ್ವಿಷೋ ಬ್ರಾಹ್ಮಣದ್ವೇಷ್ಟ್ರೂನವ ಜಹಿ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತ್ವಾ—ನಿನ್ನನ್ನು । ಸ್ತೋಮಾಃ—ನಮ್ಮ ಸ್ತುತಿಗಳು । ಉತ್—ಅತ್ಯುತ್ಕೃಷ್ಟವಾಗಿ । ಮಂದಂತು—ಹರ್ಷಗೊಳಿಸಲಿ । ಅದ್ರಿವಃ—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । ರಾಧಃ—ನಮಗಾಗಿ ಅನ್ನವನ್ನು । ಕೃಣುಷ್ವ—ನಿರ್ಮಿಸು । ಬ್ರಹ್ಮದ್ವಿಷಃ—ಬ್ರಾಹ್ಮಣದ್ವೇಷಿಗಳನ್ನು । ಅವ ಜಹಿ—ಸೋಲಿಸಿ ನಾಶಪಡಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನು ನಮ್ಮ ಸ್ತುತಿಗಳು ಅತ್ಯುತ್ಕೃಷ್ಟವಾಗಿ ಹರ್ಷಗೊಳಿಸಲಿ. ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನಮಗಾಗಿ ಅನ್ನವನ್ನು ನಿರ್ಮಿಸು. ಬ್ರಾಹ್ಮಣದ್ವೇಷಿಗಳನ್ನು ಸೋಲಿಸಿ ನಾಶಪಡಿಸು.

## English Translation.

May our praises exhilarate you; thunderer, make food for us, destroy the haters of the Brahmans.

॥ ಸಂಹಿತಾಪಾಠಃ ॥

ಪದಾ ಪಣೀँರರಾಧಸೋ ನಿ ಬಾಧಸ್ವ ಮಹಾँ ಅಸಿ ।
ನಹಿ ತ್ವಾ ಕಶ್ಚನ ಪ್ರತಿ ॥ ೨ ॥

॥ ಪದಪಾಠಃ ॥

ಪದಾ । ಪಣೀನ್ । ಅರಾಧಸಃ । ನಿ । ಬಾಧಸ್ವ । ಮಹಾನ್ । ಅಸಿ ।
ನಹಿ । ತ್ವಾ । ಕಃ । ಚನ । ಪ್ರತಿ ॥ ೨ ॥

॥ ಸಾಯಣಭಾಷ್ಯಂ ॥

ಪಣೀँಲ್ಲುಬ್ಧಾನರಾಧಸೋ ಯಷ್ಟವ್ಯಧನರಹಿತಾನ್ ಕೇವಲಧನಾನ್ ಪದಾ ಪಾದೇನಾತಿಕ್ರಮ್ಯ ನಿ ನಿತರಾಂ ಬಾಧಸ್ವ । ತ್ವಾ ತ್ವಾಂ ತವ ಕಶ್ಚನ ಕಶ್ಚಿದಪಿ ದೇವೋಽಸುರೋ ಮನುಷ್ಯೋ ವಾ ಪ್ರತಿ ಪ್ರತಿನಿಧಿಃ ಸದೃಶೋ ನಹ್ಯಸ್ತಿ ಖಲು ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಪಣೀನ್**—ಲುಬ್ಧರೂ | **ಅರಾಧಸಃ**—ಯಜ್ಞರಹಿತರೂ ಆದ ಪಣಿಗಳನ್ನು | **ಪದಾ**—ಪಾದದಿಂದ ತಳ್ಳಿ | **ನಿ ಬಾಧಸ್ವ**—ಪೂರ್ಣವಾಗಿ ಹಿಂಸಿಸು | **ಮಹಾನ್ ಅಸಿ**—ನೀನು ಮಹಾತ್ಮನಾಗಿದ್ದೀಯೆ | **ತ್ವಾ ಪ್ರತಿ**—ನಿನಗೆ ಸಮಾನವಾಗಿ ನಿನ್ನನ್ನು ಪ್ರತಿಬಿಂಬಿಸುವವನು | **ಕಶ್ಚನ**—ಯಾರೂ ಸಹ | **ನಹಿ**—ಖಂಡಿತ ಇಲ್ಲ

॥ ಭಾವಾರ್ಥ ॥

ಎಲೈ ಇಂದ್ರನೇ, ಯಜ್ಞರಹಿತರೂ, ಲುಬ್ಧರೂ ಆದ ಪಣಿಗಳನ್ನು ಪಾದದಿಂದ ಕೆಳಕ್ಕೆ ತಳ್ಳಿ ಪೂರ್ಣವಾಗಿ **ಹಿಂಸಿಸು.** ನೀನು ಮಹಾತ್ಮನಾಗಿದ್ದೀಯೆ. ನಿನಗೆ ಸಮಾನನಾಗಿ ನಿನ್ನನ್ನು ಪ್ರತಿಬಿಂಬಿಸುವವನು ಯಾರೂ ಇಲ್ಲ.

## English Translation.

Crush with your foot the Panis who offer no oblations; you are **mighty**; there is none like you.

। ಸಂಹಿತಾಪಾಠಃ ।

ತ್ವಮೀಶಿಷೇ ಸುತಾನಾಮಿಂದ್ರ ತ್ವಮಸುತಾನಾಂ ।
ತ್ವಂ ರಾಜಾ ಜನಾನಾಂ ॥ ೩ ॥

॥ ಪದಪಾಠಃ ॥

**ತ್ವಂ । ಈಶಿಷೇ । ಸುತಾನಾಂ । ಇಂದ್ರ । ತ್ವಂ । ಅಸುತಾನಾಂ ।**
**ತ್ವಂ । ರಾಜಾ । ಜನಾನಾಂ ॥ ೩ ॥**

। ಸಾಯಣಭಾಷ್ಯಂ ।

**ಹೇ ಇಂದ್ರ ತ್ವಂ ಸುತಾನಾಮಭಿಷುತಾನಾಂ ಸೋಮಾನಾಮೀಶಿಷೇ । ಈಶ್ವರೋ ಭವಸಿ । ತಥಾ ತ್ವಮಸುತಾನಾಂ ವಲ್ಲ್ಯಾಕಾರೇ ವರ್ತಮಾನಾನಾಂ ಚೇಶಿಷೇ । ತ್ವಂ ಜನಾನಾಂ ಸರ್ವೇಷಾಂ ರಾಜಾ ಭವಸಿ ॥**

। ಪ್ರತಿಪದಾರ್ಥ ।

**ಇಂದ್ರ**—ಎಲೈ ಇಂದ್ರನೇ | **ತ್ವಂ**—ನೀನು | **ಸುತಾನಾಂ**—ಹಿಂಡಿರುವ ಸೋಮರಸಗಳಿಗೆ | **ಈಶಿಷೇ**—ಪ್ರಭುವಾಗಿದ್ದೀಯೆ | **ತ್ವಂ**—ನೀನೇ | **ಅಸುತಾನಾಂ**—ಹಿಂಡಿಲ್ಲದೇ ಇರುವ ಸೋಮಲತೆಗಳಿಗೂ ಪ್ರಭುವಾಗಿದ್ದೀಯೆ | **ತ್ವಂ**—ನೀನು | **ಜನಾನಾಂ**—ಮಾನವರಿಗೆಲ್ಲಾ (ದೇವಮಾನವಾದಿಗಳಿಗೆಲ್ಲಾ) | **ರಾಜಾ**—ಪ್ರಭುವಾಗಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಹಿಂಡಿರುವ ಸೋಮರಸಗಳಿಗೆ ಪ್ರಭುವಾಗಿದ್ದೀಯೆ. ಹಿಂಡಿಲ್ಲದೇ ಇರುವ ಸೋಮಲತೆಗಳಿಗೂ ನೀನೇ ಪ್ರಭುವಾಗಿದ್ದೀಯೆ. ಸಕಲ ದೇವಮಾನವಾದಿ ಜನರಿಗೆಲ್ಲಾ ನೀನೇ ಪ್ರಭುವು.

## English Translation.

You, Indra, are the lord of the Soma effused or not effused, **you are** the king of all men.

॥ ಸಂಹಿತಾಪಾಠಃ ॥

ಏಹಿ ಪ್ರೇಹಿ ಕ್ಷಯೋ ದಿವ್ಯಾ ೩ ಘೋಷಞ್ಚರ್ಷಣೀನಾಂ ।
ಓಭೇ ಪೃಣಾಸಿ ರೋದಸೀ ॥ ೪ ॥

॥ ಪದಪಾಠಃ ॥

ಆ । ಇಹಿ । ಪ್ರ । ಇಹಿ । ಕ್ಷಯಃ । ದಿವಿ । ಆಽಘೋಷನ್ । ಚರ್ಷಣೀನಾಂ ।
ಆ । ಉಭೇ ಇತಿ । ಪೃಣಾಸಿ । ರೋದಸೀ ಇತಿ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಏಹಿ । ಆಗಚ್ಛ । ತಥಾ ಪ್ರೇಹಿ । ಪ್ರಗಚ್ಛ । ದಿವಿ ದ್ಯುಲೋಕಾತ್ । ಕಿಂ । ಕ್ಷಯೋ ನಿವಾಸಂ । ಕಿಂ ಕುರ್ವನ್ । ಅಘೋಷಞ್ಛಬ್ದಂ ಕುರ್ವನ್ । ಕಿಮರ್ಥಂ । ಚರ್ಷಣೀನಾಂ ಮನುಷ್ಯಾಣಾಮರ್ಥಾಯ । ಅಥವಾ । ಹವಿಃ ಸ್ವೀಕೃತ್ಯ ಪ್ರೇಹಿ । ಸುಖೇನ ಗಚ್ಛ । ದಿವಮಾಘೋಷನ್ ಯಜಮಾನಂ ಸ್ತುವನ್ । ಉಭೇ ರೋದಸೀ ದ್ಯಾವಾಪೃಥಿವ್ಯಾವಾ ಪೃಣಾಸಿ । ಅಪೂರಯಸಿ ತೇಜಸಾ ವೃಷ್ಟ್ಯಾ ವಾ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಏಹಿ**—ದಯಮಾಡು । **ಚರ್ಷಣೀನಾಂ**—ಮಾನವರ ಹಿತಕ್ಕಾಗಿ । **ಆಘೋಷನ್**—ಶಬ್ದಮಾಡುತ್ತಾ । **ದಿವಿ**—ದ್ಯುಲೋಕದಿಂದ । **ಕ್ಷಯಃ**—ನಮ್ಮ ನಿವಾಸಸ್ಥಾನಕ್ಕೆ । **ಪ್ರೇಹಿ**—ಅತಿಶಯವಾಗಿ ಬಾ । **ಉಭೇ ರೋದಸೀ**—ದ್ಯಾವಾಪೃಥಿವಿಗಳೆರಡನ್ನೂ । **ಆ ಪೃಣಾಸಿ**—ನೀನು ವ್ಯಾಪಿಸಿದ್ದೀಯೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಇಲ್ಲಿಗೆ ಬಾ. ಮಾನವರ ಹಿತಕ್ಕಾಗಿ ಶಬ್ದಮಾಡುತ್ತಾ ದ್ಯುಲೋಕದಿಂದ ನಮ್ಮ ನಿವಾಸಸ್ಥಾನಕ್ಕೆ ಅತಿಶಯವಾಗಿ ಬಾ. ನೀನು ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿದ್ದೀಯೆ.

## English Translation.

Come hither, come forth from heaven to our dwelling, shouting for the sake of men ; you fill both heaven and earth.

|| ಸಂಹಿತಾಪಾಠಃ ||

ತ್ಯಂ ಚಿತ್ಪರ್ವತಂ ಗಿರಿಂ ಶತವಂತಂ ಸಹಸ್ರಿಣಂ |
ವಿ ಸ್ತೋತೃಭ್ಯೋ ರುರೋಜಿಥ || ೫ ||

|| ಪದಪಾಠಃ ||

ತ್ಯಂ | ಚಿತ್ | ಪರ್ವತಂ | ಗಿರಿಂ | ಶತऽವಂತಂ | ಸಹಸ್ರಿಣಂ |
ವಿ | ಸ್ತೋತೃऽಭ್ಯಃ | ರುರೋಜಿಥ || ೫ ||

|| ಸಾಯಣಭಾಷ್ಯಂ ||

**ಹೇ ಇಂದ್ರ ತ್ವಂ ತ್ಯಂ ಚಿತ್ತಂ | ಚಿದಿತಿ ಪೂರಣಃ | ಪರ್ವತಂ ಪರ್ವವಂತಂ ಗಿರಿಂ ಮೇಘಂ | ಉಭಯೋರ್ಮೇಘನಾಮತ್ವಾದೇಕೋ ಯೋಗರೂಢೋ ದ್ರಷ್ಟವ್ಯಃ | ಶತವಂತಂ ಶತೋದಕವಂತಂ ತಥಾ ಸಹಸ್ರಿಣಮಪರಿಮಿತವೃಷ್ಟಿಂ ಮೇಘಂ ಸ್ತೋತೃಭ್ಯೋऽರ್ಥಾಯ ವಿ ರುರೋಜಿಥ | ವಿರುಜ ವಜ್ರೇಣ ||**

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) **ಸ್ತೋತೃಭ್ಯಃ**—ಸ್ತುತಿಕರ್ತರಿಗಾಗಿ | **ತ್ಯಂ ಚಿತ್**-ಪ್ರಸಿದ್ಧವಾದುದೂ | **ಪರ್ವತಂ**—ಗಿಣ್ಣುಗಳುಳ್ಳದ್ದೂ | **ಶತವಂತಂ**—ಶತಪರಿಮಾಣವಾದ ಉದಕವುಳ್ಳದ್ದೂ | **ಸಹಸ್ರಿಣಂ**—ಅಪರಿಮಿತವಾದ ವೃಷ್ಟಿಯುಳ್ಳದ್ದೂ ಆದ | **ಗಿರಿಂ**—ಮೇಘವನ್ನು | **ವಿ ರುರೋಜಿಥ**—ವಜ್ರಾಯುಧದಿಂದ ಸೀಳಿಹಾಕು.

|| ಭಾವಾರ್ಥ ||

ಎಲೈ ಇಂದ್ರನೇ, ಸ್ತುತಿಕರ್ತರಿಗೋಸ್ಕರವಾಗಿ ನೀನು ಪ್ರಸಿದ್ಧವಾದುದೂ, ಗಿಣ್ಣುಗಳುಳ್ಳದ್ದೂ, (ಗುಂಪು ಗುಂಪಾಗಿರುವುದೂ) ಅಪರಿಮಿತವಾದ ವೃಷ್ಟ್ಯುದಕವುಳ್ಳದ್ದೂ ಆದ ಮೇಘವನ್ನು ನಿನ್ನ ವಜ್ರಾಯುಧದಿಂದ ಸೀಳಿಹಾಕು.

## English Translation.

Burst, for your worshippers, the gnarled cloud, with its hundreds and thousands of showers.

॥ ಸಂಹಿತಾಪಾಠಃ ॥

ವಯಮು ತ್ವಾ ದಿವಾ ಸುತೇ ವಯಂ ನಕ್ತಂ ಹವಾಮಹೇ ।
ಅಸ್ಮಾಕಂ ಕಾಮಮಾ ಪೃಣ ॥ ೬ ॥

॥ ಪದಪಾಠಃ ॥

ವಯಂ । ಊಂ ಇತಿ । ತ್ವಾ । ದಿವಾ । ಸುತೇ । ವಯಂ । ನಕ್ತಂ । ಹವಾಮಹೇ ।
ಅಸ್ಮಾಕಂ । ಕಾಮಂ । ಆ । ಪೃಣ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಯಂ ತ್ವಾ ತ್ವಾಂ ದಿವಾಹನಿ ಸುತೇ ಸೋಮೇಭಿಷುತೇ ಹವಾಮಹೇ । ಆಹ್ವಯಾಮಃ । ತಥಾ ವಯಂ ನಕ್ತಂ ಹವಾಮಹೇ । ಆಹೂತ ಆಗತ್ಯಾಸ್ಮಾಕಂ ಕಾಮಮಾ ಪೃಣ । ಆಪೂರಯ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ವಯಂ**—ನಾವು । **ತ್ವಾಂ**—ನಿನ್ನನ್ನು । **ದಿವಾ**—ಅಹಸ್ಸುಗಳಲ್ಲಿ । **ಸುತೇ**—ಸೋಮರಸವು ಹಿಂಡಲ್ಪಟ್ಟಾಗ । **ಹವಾಮಹೇ**—ಪ್ರಾರ್ಥಿಸಿ ಕರೆಯುತ್ತೇವೆ । **ವಯಂ**—ನಾವು । **ನಕ್ತಂ**—ರಾತ್ರಿ ವೇಳೆಯಲ್ಲಿಯೂ ಕರೆಯುತ್ತೇವೆ । **ಅಸ್ಮಾಕಂ**—ನಮ್ಮ । **ಕಾಮಂ**—ಇಷ್ಟಾರ್ಥವನ್ನು । **ಆ ಪೃಣ**—ತುಂಬಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ನಾವು ನಿನ್ನನ್ನು ಅಹಸ್ಸುಗಳಲ್ಲಿ ಸೋಮರಸವು ಹಿಂಡಲ್ಪಟ್ಟಾಗ ಪ್ರಾರ್ಥಿಸಿ ಕರೆಯುತ್ತೇವೆ. ರಾತ್ರಿ ವೇಳೆಯಲ್ಲಿಯೂ ಕರಯುತ್ತೇವೆ. ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಿ ನಮ್ಮನ್ನು ತೃಪ್ತಿಪಡಿಸು.

## English Translation.

We invoke you when the Soma is effused by day, we invoke you by night; fulfil our desire.

॥ ಸಂಹಿತಾಪಾಠಃ ॥

ಕ್ವ ೧ ಸ್ಯ ವೃಷಭೋ ಯುವಾ ತುವಿಗ್ರೀವೋ ಅನಾನತಃ ।
ಬ್ರಹ್ಮಾ ಕಸ್ತಂ ಸಪರ್ಯತಿ ॥ ೭ ॥

॥ ಪದಪಾಠಃ ॥

ಕ್ವ । ಸ್ಯಃ । ವೃಷಭಃ । ಯುವಾ । ತುವಿऽಗ್ರೀವಃ । ಅನಾನತಃ ।

ಬ್ರಹ್ಮಾ । ಕಃ । ತಂ । ಸಪರ್ಯತಿ ॥ ೭ ॥

॥ ಸಾಯಣಭಾಷ್ಯಂ ॥

ಸ್ಯ ಸ ವೃಷಭೋ ವರ್ಷಿತಾ ಯುವಾ ನಿತ್ಯತರುಣಸ್ತುವಿಗ್ರೀವೋ ವಿಸ್ತೀರ್ಣಕಂಧರೋಽನಾನತಃ ಕದಾಚಿದಪ್ಯನವನತ ಇಂದ್ರಃ ಕ್ವ ಕುತ್ರ ವರ್ತತ ಇತಿ ಕೋ ಜಾನಾತೀತ್ಯರ್ಥಃ । ಕೋ ಬ್ರಹ್ಮಾ ಸ್ತೋತಾ ತ್ವಾ ತ್ವಾಂ ಸಪರ್ಯತಿ । ಪೂಜಯತಿ ॥

॥ ಪ್ರತಿಪದಾರ್ಥ ॥

ಸ್ಯಃ— ಪ್ರಸಿದ್ಧನೂ । ವೃಷಭಃ— ಕಾಮವರ್ಷಕನೂ । ಯುವಾ— ನಿತ್ಯತರುಣನೂ । ತುವಿಗ್ರೀವಃ— ವಿಸ್ತೃತವಾದ ಕತ್ತುಳ್ಳವನೂ । ಅನಾನತಃ- ಯಾರಿಗೂ ತಲೆಬಾಗಿಸದವನೂ ಆದ ಇಂದ್ರನು । ಕ್ವ-- ಎಲ್ಲಿದ್ದಾನೆ । ಕಃ ಬ್ರಹ್ಮಾ— ಯಾವ ಸ್ತುತಿಕರ್ತನು । ತಂ— ಆ ಇಂದ್ರನನ್ನು । ಸಪರ್ಯತಿ— ಪೂಜಿಸುತ್ತಾನೆ?

॥ ಭಾವಾರ್ಥ ॥

ಪ್ರಸಿದ್ಧನೂ, ಕಾಮವರ್ಷಕನೂ, ನಿತ್ಯತರುಣನೂ, ವಿಸ್ತೃತವಾದ ಕತ್ತುಳ್ಳವನೂ, ಯಾರಿಗೂ ತಲೆಬಾಗಿಸದವನೂ ಆದ ಇಂದ್ರನು ಎಲ್ಲಿದ್ದಾನೆ? ಯಾವ ಸ್ತುತಿಕರ್ತನು ಆ ಇಂದ್ರನನ್ನು ಪೂಜಿಸುತ್ತಾನೆ?

## English Translation.

Where is that ever-youthful showerer, strong-necked and bowing to none? what hymner worships you?

॥ ಸಂಹಿತಾಪಾಠಃ ॥

ಕಸ್ಯ ಸ್ವಿತ್ಸವನಂ ವೃಷಾ ಜುಜುಷ್ವಾಁ ಅವ ಗಚ್ಛತಿ ।

ಇಂದ್ರಂ ಕ ಉ ಸ್ವಿದಾ ಚಕೇ ॥ ೮ ॥

॥ ಪದಪಾಠಃ ॥

ಕಸ್ಯ । ಸ್ವಿತ್ । ಸವನಂ । ವೃಷಾ । ಜುಜುಷ್ವಾನ್ । ಅವ । ಗಚ್ಛತಿ ।

ಇಂದ್ರಂ । ಕಃ । ಊಂ ಇತಿ । ಸ್ವಿತ್ । ಆ । ಚಕೇ ॥ ೮ ॥

|| ಸಾಯಣಭಾಷ್ಯಂ ||

ಕಸ್ಯ ಸ್ವಿತ್ಸವನಂ । ಸ್ವಿದಿತಿ ವಿಚಿಕಿತ್ಸಾಯಾಂ । ವೃಷಾ ವರ್ಷಿತೇಂದ್ರೋ ಜುಜುಷ್ವಾನ್ ಪ್ರೀಯಮಾಣೋಽವ ಗಚ್ಛತಿ । ಕ ಉ ಕೋ ವಾ ಯಜಮಾನ ಇಂದ್ರಮಾ ಚಕೇ । ಜಾನಾತಿ ಸ್ತೋತುಂ । ಸ್ವಿದಿತಿ ಪೂರಣಃ ||

|| ಪ್ರತಿಪದಾರ್ಥ ||

**ವೃಷಾ**—ಕಾಮವರ್ಷಕನಾದ ಇಂದ್ರನು । **ಕಸ್ಯ ಸ್ವಿತ್**—ಯಾವ ಯಜಮಾನನ । **ಸವನಂ**—ಯಜ್ಞವನ್ನು । **ಜುಜುಷ್ವಾನ್**—ಪ್ರೀತಿಸುತ್ತಾ । **ಅವ ಗಚ್ಛತಿ**—ಸಮಿಾಪಿಸಿ ಹೋಗುತ್ತಾನೆ । **ಕ ಉ ಸ್ವಿತ್**—ಯಾವ ಯಜಮಾನನು ತಾನೇ । **ಇಂದ್ರಂ**—ಇಂದ್ರನನ್ನು । **ಆ ಚಕೇ**—ಸ್ತುತಿಸಲು ಅರಿಯುತ್ತಾನೆ?

|| ಭಾವಾರ್ಥ ||

ಕಾಮವರ್ಷಕನಾದ ಇಂದ್ರನು ಯಾವ ಯಜಮಾನನ ಯಜ್ಞವನ್ನು ಪ್ರೀತಿಸುತ್ತಾ ಅದನ್ನು ಸಮಿಾಪಿಸಿ ಹೋಗುತ್ತಾನೆ? ಯಾವ ಯಜಮಾನನು ತಾನೇ ಇಂದ್ರನನ್ನು ಸ್ತುತಿಸಲು ಪೂರ್ಣವಾಗಿ ಅರಿಯುತ್ತಾನೆ?

## English Translation.

To whose offering does the showerer come down pleased? who can praise Indra?

|| ಸಂಹಿತಾಪಾಠಃ ||

ಕಂ ತೇ ದಾನಾ ಅಸಕ್ಷತ ವೃತ್ರಹನ್ಕಂ ಸುವೀರ್ಯಾ ।
ಉಕ್ಥೇ ಕ ಉ ಸ್ವಿದಂತಮಃ || ೯ ||

|| ಪದಪಾಠಃ ||

ಕಂ । ತೇ । ದಾನಾಃ । ಅಸಕ್ಷತ । ವೃತ್ರಽಹನ್ । ಕಂ । ಸುಽವೀರ್ಯಾ ।
ಉಕ್ಥೇ । ಕಃ । ಊಂ ಇತಿ । ಸ್ವಿತ್ । ಅಂತಮಃ || ೯ ||

|| ಸಾಯಣಭಾಷ್ಯಂ ||

ತೇ ತ್ವಾಂ ದಾನಾ ಯಜಮಾನೈರ್ದತ್ತಾ ಅಸಕ್ಷತ । ಸೇವಂತೇ । ಹೇ ವೃತ್ರಹನ್ ವೃತ್ರಸ್ಯ ಹಂತರಿಂದ್ರ ಕಂ ಕೀದೃಶಂ ತ್ವಾಮುಕ್ಥೇ ಶಸ್ತ್ರೇ ಸುವೀರ್ಯಾ ಶೋಭನವೀರ್ಯಾಣಿ ಸ್ತೋತ್ರಾಣ್ಯಸಕ್ಷತ । ಕ ಉ ಸ್ವಿದಂತಮೋ ವಾಂತಿಕತಮೋ ಭವತಿ ಯುದ್ಧೇ ||

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ದಾನಾಃ**— ಯಜಮಾನರಿಂದ ಅರ್ಪಿತವಾದ ಹವಿರಾದಿ ದಾನಗಳು | **ಕಂ**— ಯಾವ ವಿಧವಾದ | **ತೇ**— ನಿನ್ನನ್ನು | **ಆಸಕ್ಷತ**— ಸೇವಿಸುತ್ತವೆ | **ವೃತ್ರಹನ್**— ವೃತ್ರನಾಶಕನಾದ ಎಲೈ ಇಂದ್ರನೇ | **ಸುವೀರ್ಯಾ**— ಉತ್ತಮವಾದ ಶಕ್ತಿಯಿಂದ ಕೂಡಿದ ಸ್ತುತಿಗಳು | **ಉಕ್ಥೇ**— ಶಸ್ತ್ರಕಾಲದಲ್ಲಿ | **ಕಂ**— ಯಾವ ರೂಪದ ನಿನ್ನನ್ನು ಸೇವಿಸಬಲ್ಲವು | **ಕ ಉ ಸ್ವಿತ್**— ಯಾರು ತಾನೇ | **ಅಂತಮಃ**— ಯುದ್ಧಕಾಲದಲ್ಲಿ ನಿನ್ನ ಸಮೀಪದಲ್ಲಿರಬಲ್ಲನು ?

॥ ಭಾವಾರ್ಥ ॥

ಎಲೈ ಇಂದ್ರನೇ, ಯಜಮಾನರಿಂದ ಅರ್ಪಿತವಾದ ಹವಿರಾದಿದಾನಗಳು ಯಾವ ವಿಧವಾದ ನಿನ್ನನ್ನು ಸೇವಿಸುತ್ತವೆ? ವೃತ್ರನಾಶಕನಾದ ಎಲೈ ಇಂದ್ರನೇ, ಉತ್ತಮವಾದ ಶಕ್ತಿಯಿಂದ ಕೂಡಿದ ಸ್ತುತಿಗಳು ಶಸ್ತ್ರಮಂತ್ರಪಠನ ಕಾಲದಲ್ಲಿ ಯಾವ ರೂಪದ ನಿನ್ನನ್ನು ಸೇವಿಸಬಲ್ಲವು? ಯಾರುತಾನೆ ಯುದ್ಧಕಾಲದಲ್ಲಿ ನಿನ್ನ ಸಮೀಪದಲ್ಲಿರಬಲ್ಲನು ?

## English Translation.

In what character, O slayer of Vritra, do the sacrificial offerings honour you, or the brave praises in the hymn ? Who is nearest (in time of battle) ?

॥ ಸಂಹಿತಾಪಾಠಃ ॥

ಅಯಂ ತೇ ಮಾನುಷೇ ಜನೇ ಸೋಮಃ ಪೂರುಷು ಸೂಯತೇ |
ತಸ್ಯೇಹಿ ಪ್ರ ದ್ರವಾ ಪಿಬ ॥ ೧೦ ॥

॥ ಪದಪಾಠಃ ॥

ಅಯಂ | ತೇ | ಮಾನುಷೇ | ಜನೇ | ಸೋಮಃ | ಪೂರುಷು | ಸೂಯತೇ |
ತಸ್ಯ | ಆ | ಇಹಿ | ಪ್ರ | ದ್ರವ | ಪಿಬ ॥ ೧೦ ॥

॥ ಸಾಯಣಭಾಷ್ಯಂ ॥

**ದ್ವಿತೀಯೇ ಪರ್ಯಾಯೇ ಹೋತುಃ ಶಸ್ತ್ರೇಽಯಂ ತೇ ಮಾನುಷ ಇತಿ ತೃಚೋಽನುರೂಪಃ | ಸೂತ್ರಿತಂ ಚ | ಅಯಂ ತೇ ಮಾನುಷೇ ಜನ ಉದ್ವೇದಭಿ | ಆ. ೬-೪ | ಇತಿ ॥**

**ಅಯಂ ಸೋಮಸ್ತೇ ತ್ವದರ್ಥಂ ತವ ಸ್ವಭೂತೋ ವಾ ಪೂರುಷು ಮನುಷ್ಯೇಷು ಮಧ್ಯೇ ಮಾನುಷೇ ಜನೇ ಮಯಿ ಸೂಯತೇ | ಅಥವಾ ಪೂರುನಾಮಸು ರಾಜಸು ಸೂಯತೇ | ತಸ್ಯ | ತಮಿತ್ಯರ್ಥಃ | ತಮೇಹಿ | ಆಗಚ್ಛ | ಆಗತ್ಯ ಚ ಪ್ರ ದ್ರವ ಗೃಹಸಮೀಪಂ | ತಥಾ ಕೃತ್ವಾ ಪಿಬ ತಂ ಸೋಮಂ ॥**

‖ ಪ್ರತಿಪದಾರ್ಥ ‖

(ಎಲೈ ಇಂದ್ರನೇ) **ಅಯಂ ಸೋಮಃ**—ಈ ಸೋಮರಸವು । **ತೇ**—ನಿನ್ನನ್ನುದ್ದೇಶಿಸಿ । **ಪೂರುಷು**—ಮಾನವರ ನಡುವೆ ಇರುವ । **ಮಾನುಷೇ ಜನೇ**—ಯಜಮಾನನಾದ ನನ್ನಲ್ಲಿ । **ಸೂಯತೇ**—ಹಿಂಡಲ್ಪಡುತ್ತದೆ । **ತಸ್ಯ**—ಅದಕ್ಕಭಿಮುಖವಾಗಿ । **ಏಹಿ**—ದಯಮಾಡು । **ಪ್ರ ದ್ರವ**—ಓಡಿ ಬಾ । **ಪಿಬ**—ಅದನ್ನು ಪಾನಮಾಡು.

‖ ಭಾವಾರ್ಥ ‖

ಎಲೈ ಇಂದ್ರನೇ, ಈ ಸೋಮರಸವು ನಿನ್ನನ್ನುದ್ದೇಶಿಸಿ ಮಾನವರ ನಡುವೆ ಇರುವ ಯಜಮಾನನಾದ ನನ್ನಲ್ಲಿ (ನನ್ನ ಯಜ್ಞದಲ್ಲಿ) ಹಿಂಡಲ್ಪಡುತ್ತದೆ. ಅದಕ್ಕಭಿಮುಖವಾಗಿ ವೇಗವಾಗಿ ಬಂದು ಅದನ್ನು ಪಾನಮಾಡು.

## English Translation.

For you is this Soma effused among men by me of mortal race; draw near, hasten, drink it.

‖ ವಿಶೇಷವಿಷಯಗಳು ‖

ಎರಡನೆಯ ಪರ್ಯಾಯದಲ್ಲಿ ಹೋತೃವು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ **ಅಯಂ ತೇ ಮಾನುಷೇ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಅನುರೂಪತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ಅಯಂ ತೇ ಮಾನುಷೇ ಜನ ಉದ್ಘೇದಭಿ** ಎಂಬ ಸೂತ್ರದಿಂದ (ಆ. ೬-೪) ವಿವೃತವಾಗಿರುವುದು.

‖ ಸಂಹಿತಾಪಾಠಃ ‖

ಅಯಂ ತೇ ಶರ್ಯಣಾವತಿ ಸುಷೋಮಾಯಾಮಧಿ ಪ್ರಿಯಃ ।
ಆರ್ಜೀಕೀಯೇ ಮದಿಂತಮಃ ‖ ೧೧ ‖

‖ ಪದಪಾಠಃ ‖

ಅಯಂ । ತೇ । ಶರ್ಯಣಾऽವತಿ । ಸುऽಸೋಮಾಯಾಂ । ಅಧಿ । ಪ್ರಿಯಃ ।
ಆರ್ಜೀಕೀಯೇ । ಮದಿನ್ऽತಮಃ ‖ ೧೧ ‖

‖ ಸಾಯಣಭಾಷ್ಯಂ ‖

**ಅಯಮಸ್ಮಾಭಿರಭಿಷುತಃ ಸೋಮಸ್ತೇ ತ್ವಾಂ ಮದಿಂತಮೋ ಮಾದಯಿತೃತಮಃ । ಅಯಮಧಿಶ್ರಿತ ಆಶ್ರಿತಃ । ಕುತ್ರೇತಿ ತದುಚ್ಯತೇ । ಶರ್ಯಣಾವತಿ ಕುರುಕ್ಷೇತ್ರಸ್ಯ ಜಘನಾರ್ಧಭವೇ ಶರತೃಣೋಪೇತೇ ಸರಸಿ । ತತ್ಸರಃ ಕುತ್ರ ವರ್ತತ ಇತಿ ಉಚ್ಯತೇ । ಸುಷೋಮಾಯಾಮೇತನ್ನಾಮ-**

ಶಾಯೇಣಾಂ ನದ್ಯಾಂ । ಸಾ ಚ ಕುತ್ರ ವರ್ತತ ಇತಿ ತದುಚ್ಯತೇ । ಆರ್ಜೀಕೀಯೇ ಏತನ್ನಾಮಕೇ ದೇಶೇ । ಏವಮುಕ್ತಪ್ರಕಾರೇಣಾತ್ಯಂತದೂರದೇಶೇ ವರ್ತತೇ ಯಃ ಸೋಮಃ ಸ ಏವಾಯಂ । ಅಭಿಷುತಂ ಪಿಬೇತ್ಯುತ್ತರತ್ರಾನ್ವಯಃ ॥

॥ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ತೇ**—ನಿನಗೆ । **ಪ್ರಿಯಃ**—ಪ್ರಿಯವಾದುದೂ । **ಮದಿಂತಮಃ**—ಅತಿಶಯವಾಗಿ ಹರ್ಷವನ್ನುಂಟುಮಾಡುವುದೂ ಆದ । **ಅಯಂ**—ಈ ಸೋಮರಸವು । **ಆರ್ಜೀಕೀಯೇ**—ಆರ್ಜೀಕ ದೇಶದಲ್ಲಿರುವ । **ಸುಷೋಮಾಯಾಂ**—ಸುಷೋಮಾನದಿಯ ಸಮೀಪದಲ್ಲಿರುವ । **ಶರ್ಯಣಾವತಿ**—ಶರ್ಯಣಾವತ್ತೆಂಬ ಸರಸ್ಸಿನಲ್ಲಿ । **ಅಧಿ**—ಆಶ್ರಯವನ್ನು ಪಡೆದಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನಗೆ ಪ್ರಿಯವಾದುದೂ, ಅತಿಶಯವಾಗಿ ಹರ್ಷವನ್ನುಂಟುಮಾಡುವುದೂ ಆದ ಈ ಸೋಮರಸವು ಆರ್ಜೀಕದೇಶದಲ್ಲಿರುವ ಸುಷೋಮಾನದಿಯ ಸಮೀಪದಲ್ಲಿರುವ ಶರ್ಯಣಾವತ್ತೆಂಬ ಸರಸ್ಸಿನಲ್ಲಿ ಬೆಳೆದಿದೆ.

## English Translation.

This is your beloved most exhilarating Soma which grows in the Sharyanavat lake by the Sushoma river in the Arjikiya country.

॥ ಸಂಹಿತಾಪಾಠಃ ॥

ತಮದ್ಯ ರಾಧಸೇ ಮಹೇ ಚಾರುಂ ಮದಾಯ ಘೃಷ್ವಯೇ ।
ಏಹೀಮಿಂದ್ರ ದ್ರವಾ ಪಿಬ ॥ ೧೨ ॥

॥ ಪದಪಾಠಃ ॥

ತಂ । ಅದ್ಯ । ರಾಧಸೇ । ಮಹೇ । ಚಾರುಂ । ಮದಾಯ । ಘೃಷ್ವಯೇ ।
ಆ । ಇಹಿ । ಈಂ । ಇಂದ್ರ । ದ್ರವ । ಪಿಬ ॥ ೧೨ ॥

॥ ಸಾಯಣಭಾಷ್ಯಂ ॥

ತಂ ಪೂರ್ವಮಂತ್ರೇ ಉಪವರ್ಣಿತಂ ಚಾರುಂ ಚರಣಶೀಲಂ ಸೋಮಂ ಮಹೇ ಮಹತೇ ರಾಧಸೇಽಸ್ಮಾಕಂ ಧನಾಯ ತವ ಘೃಷ್ವಯೇ ಶತ್ರೂಣಾಂ ಘರ್ಷಣಶೀಲಾಯ ಮದಾಯ ಪಿಬ । ಹೇ ಇಂದ್ರ ತದರ್ಥಂ ದ್ರವ । ಗಚ್ಛ ಶೀಘ್ರಂ ಸೋಮಪಾತ್ರಂ ಪ್ರತಿ । ತದರ್ಥಮೀಮಿದಾನೀಮೇಹಿ । ಆಗಚ್ಛ ॥

|| ಪ್ರತಿಪದಾರ್ಥ ||

**ಇಂದ್ರ**—ಎಲೈ ಇಂದ್ರನೇ | **ತಂ**—ಹಿಂದೆ ವರ್ಣಿತವಾದುದೂ | **ಚಾರುಂ**—ಮನಸ್ಸಿಗೆ ಪ್ರಿಯಕರವಾದುದೂ ಆದ ಸೋಮವನ್ನು | **ಧೃಷ್ಣಯೇ**—ಶತ್ರುವನ್ನು ಸೋಲಿಸಲು ಸಮರ್ಥವಾದ | **ಮದಾಯ**—ಹರ್ಷಕ್ಕಾಗಿಯೂ | **ಮಹೇ**—ಮಹತ್ತಾದ | **ರಾಧಸೇ**—ನಮ್ಮ ಧನಲಾಭಕ್ಕಾಗಿಯೂ | **ಪಿಬ**—ಪಾನಮಾಡು | **ಅದ್ಯ**—ಈಗ | **ದ್ರವ**—ಅದಕ್ಕಾಗಿ ಶೀಘ್ರವಾಗಿ ಬಾ | **ಈಂ**—ಈ ರಸಾಭಿಮುಖವಾಗಿ | **ಏಹಿ**—ದಯಮಾಡು

|| ಭಾವಾರ್ಥ ||

ಎಲೈ ಇಂದ್ರನೇ, ಹಿಂದೆ ವರ್ಣಿತವಾದುದೂ, ಮನಸ್ಸಿಗೆ ಪ್ರಿಯಕರವಾದುದೂ ಆದ ಸೋಮವನ್ನು, ಶತ್ರುವನ್ನು ಸೋಲಿಸಲು ಸಮರ್ಥವಾದ ಹರ್ಷಕ್ಕಾಗಿಯೂ, ಮಹತ್ತಾದ ಧನಲಾಭಕ್ಕಾಗಿಯೂ ಪಾನಮಾಡು. ಅದಕ್ಕಾಗಿ ಶೀಘ್ರವಾಗಿ ಬಾ. ಈ ರಸಾಭಿಮುಖವಾಗಿ ದಯಮಾಡು

**English Translation.**

Come to day, Indra, hasten, drink this grateful Soma for our great wealth, and for your own foe-crushing exultation.



## ಅರವತ್ತೈದನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ಯದಿಂದ್ರ ಪ್ರಾಗಿತಿ ದ್ವಾದಶರ್ಚಂ ಷಷ್ಠಂ ಸೂಕ್ತಂ ಪ್ರಗಾಥಸ್ಯಾರ್ಷಂ ಗಾಯತ್ರಮೈಂದ್ರಂ | ಯದಿಂದ್ರೇತ್ಯನುಕ್ರಾಂತಂ || ವಿನಿಯೋಗೋ ಲೈಂಗಿಕಃ ||**

ಅನುವಾದವು—**ಯದಿಂದ್ರ ಪ್ರಾಕ್** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಗಾಥನು ಋಷಿಯು; ಇಂದ್ರನು ದೇವತೆಯು; ಗಾಯತ್ರೀ ಛಂದಸ್ಸು; ಅನುಕ್ರಮಣಿಕೆಯಲ್ಲಿ—**ಯದಿಂದ್ರ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

### ಸೂಕ್ತ—೬೫

ಮಂಡಲ—೮ || ಅನುವಾಕ—೭ || ಸೂಕ್ತ—೬೫ ||
ಅಷ್ಟಕ—೬ || ಅಧ್ಯಾಯ—೪ || ವರ್ಗ—೪೬, ೪೭ ||
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥
॥ ಋಷಿಃ—ಪ್ರಾಗಾಥಃ ಕಾಣ್ವಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಗಾಯತ್ರೀ ॥

|| ಸಂಹಿತಾಪಾಠಃ ||

ಯದಿಂದ್ರ ಪ್ರಾಗಪಾಗುದಙ್ನ್ಯಗ್ವಾ ಹೂಯಸೇ ನೃಭಿಃ ।
ಆ ಯಾಹಿ ತೂಯಮಾಶುಭಿಃ || ೧ ||

|| ಪದಪಾಠಃ ||

ಯತ್ । ಇಂದ್ರ । ಪ್ರಾಕ್ । ಅಪಾಕ್ । ಉದಕ್ । ನ್ಯಕ್ । ವಾ । ಹೂಯಸೇ । ನೃಽಭಿಃ ।
ಆ । ಯಾಹಿ । ತೂಯಂ । ಆಶುಽಭಿಃ || ೧ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ನೃಭಿಃ ಕರ್ಮನೇತೃಭಿರಸ್ಮದೀಯೈರಧ್ವರ್ಯ್ವಾದಿಭಿಃ ಪ್ರಾಗ್ವಾಪಾಗುದಗ್ವಾ ನ್ಯಗ್ವಾ ಯತಃ ಕುತಶ್ಚಿದ್ಧೂಯಸೇಽತಸ್ತ್ವಂ ತೂರ್ಣಮಾಶುಭಿರಾಶುಗಾಮಿಭಿರಶ್ವೈರಾ ಯಾಹಿ । ಆಗಚ್ಛ ||

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । ನೃಭಿಃ—ಕರ್ಮನೇತೃಗಳಾದ ನಮ್ಮಿಂದ । ಪ್ರಾಕ್—ಪೂರ್ವ ದಿಕ್ಕಿನಲ್ಲಾಗಲಿ । ಅಪಾಕ್—ಪಶ್ಚಿಮ ದಿಕ್ಕಿನಲ್ಲಾಗಲಿ । ಉದಕ್—ಉತ್ತರ ದಿಕ್ಕಿನಲ್ಲಾಗಲಿ । ನ್ಯಗ್ವಾ—ಅಥವಾ ದಕ್ಷಿಣ ದಿಕ್ಕಿನಲ್ಲಾಗಲಿ । ಯತ್ ಹೂಯಸೇ—ಯಾವ ದಿಕ್ಕಿನಿಂದ ಕರೆಯಲ್ಪಟ್ಟರೂ । ತೂಯಂ—ಶೀಘ್ರವಾಗಿ । ಆಶುಭಿಃ—ವೇಗಗಾಮಿಗಳಾದ ನಿನ್ನ ಅಶ್ವಗಳೊಡನೆ । ಆ ಯಾಹಿ—ದಯಮಾಡು.

|| ಭಾವಾರ್ಥ ||

ಎಲೈ ಇಂದ್ರನೇ, ಕರ್ಮನೇತೃಗಳಾದ ನಮ್ಮಿಂದ ಪೂರ್ವ ದಿಕ್ಕಿನಿಂದಾಗಲಿ, ಪಶ್ಚಿಮ ದಿಕ್ಕಿನಿಂದಾಗಲಿ, ಉತ್ತರ ದಿಕ್ಕಿನಿಂದಾಗಲಿ, ದಕ್ಷಿಣ ದಿಕ್ಕಿನಿಂದಾಗಲಿ ಅಥವಾ ಯಾವ ದಿಕ್ಕಿನಿಂದಾಗಲೀ ಕರೆಯಲ್ಪಟ್ಟರೂ, ವೇಗಗಾಮಿಗಳಾದ ನಿನ್ನ ಅಶ್ವಗಳೊಡನೆ ಶೀಘ್ರವಾಗಿ ನಮ್ಮ ಯಾಗಕ್ಕೆ ದಯಮಾಡು

## English Translation.

Whether you are invoked by us, the leaders of rites, from the east, the west, the north, or the south, come hither quickly with your rapid steeds.

|| ಸಂಹಿತಾಪಾಠಃ ||

ಯದ್ವಾ ಪ್ರಸ್ರವಣೇ ದಿವೋ ಮಾದಯಾಸೇ ಸ್ವರ್ಣರೇ ।
ಯದ್ವಾ ಸಮುದ್ರೇ ಅಂಧಸಃ || ೨ ||

॥ ಪದಪಾಠಃ ॥

**ಯತ್ । ವಾ । ಪ್ರಽಸ್ರವಣೇ । ದಿವಃ । ಮಾದಯಾಸೇ । ಸ್ವಃಽನರೇ ।**

**ಯತ್ । ವಾ । ಸಮುದ್ರೇ । ಅಂಧಸಃ ॥ ೨ ॥**

। ಸಾಯಣಭಾಷ್ಯಂ ।

ಯದ್ವಾಥವಾ ದಿವೋ ದ್ಯುಲೋಕಸ್ಯ ಪ್ರಸ್ರವಣೇಽಮೃತನಿಷ್ಯಂದನಸ್ಥಾನೇ ಮಾದಯಾಸೇ ಮಾದ್ಯಸಿ । ಯದ್ವಾ ಸ್ವರ್ಣರೇ ಸ್ವರ್ಗನಯನೇ ವಾ ಭೂಲೋಕೇಽನ್ಯಸ್ಯ ಯಾಗದೇಶೇ ಮಾದ್ಯಸಿ । ಯದ್ವಾಂಧಸಃ । ಅಂಧೋಽನ್ನಂ । ತೇನ ತತ್ಕಾರಣಮುದಕಂ ಲಕ್ಷ್ಯತೇ । ತಸ್ಯ ಸಮುದ್ರೇ ಸಮುಂದನಾಪಾದಾನಭೂತೇಽಂತರಿಕ್ಷೇ ಮಾದ್ಯಸಿ । ತತ್ರ ತತ್ರ ವರ್ತಮಾನಮಪಿ ಹುವ ಇತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

**ಯದ್ವಾ**—ಒಂದು ವೇಳೆ । **ದಿವಃ**—ದ್ಯುಲೋಕದ । **ಪ್ರ ಸ್ರವಣೇ**—ಅಮೃತಕ್ಕೆ ಮೂಲಸ್ಥಾನದಲ್ಲಿ । **ಮಾದಯಸೇ**—ಹರ್ಷಿಸುತ್ತಿದ್ದರೂ । **ಸ್ವರ್ಣರೇ**—ಸ್ವರ್ಗಕ್ಕೆ ಸಾಧನವಾದ ಬೇರೆ ಯಜ್ಞಸ್ಥಾನದಲ್ಲಿದ್ದರೂ । **ಯದ್ವಾ**—ಅಥವಾ । **ಅಂಧಸಃ**—ಉದಕಕ್ಕೆ । **ಸಮುದ್ರೇ**—ಆಶ್ರಯಸಾಧನವಾದ ಅಂತರಿಕ್ಷದಲ್ಲಿದ್ದರೂ (ಅಂತಹ ಇಂದ್ರನನ್ನೇ ಕರೆಯುತ್ತೇವೆ).

। ಭಾವಾರ್ಥ ।

ಒಂದು ವೇಳೆ ಇಂದ್ರನು ದ್ಯುಲೋಕದಲ್ಲಿ ಅಮೃತವನ್ನು ಸುರಿಸುವ ಮೂಲಸ್ಥಾನದಲ್ಲಿ ಹರ್ಷಿಸುತ್ತಿದ್ದರೂ, ಅಥವಾ ಉದಕಕ್ಕೆ ಆಶ್ರಯಸ್ಥಾನವಾದ ಅಂತರಿಕ್ಷದಲ್ಲಿದ್ದರೂ ಅಂತಹ ಇಂದ್ರನನ್ನೇ ಕರೆಯುತ್ತೇವೆ.

## English Translation.

Whether you rejoice in thc ambrosia-fountain of heaven, or in some other heaven-ward-leading sacrifice (on earth). or in the ocean-like firmament of the waters ;

॥ ಸಂಹಿತಾಪಾಠಃ ॥

ಆ ತ್ವಾ ಗೀರ್ಭಿರ್ಮಹಾಮುರುಂ ಹುವೇ ಗಾಮಿವ ಭೋಜಸೇ

ಇಂದ್ರ ಸೋಮಸ್ಯ ಪೀತಯೇ ॥ ೩ ॥

। ಪದಪಾಠಃ ।

ಆ । ತ್ವಾ । ಗೀಃऽಭಿಃ । ಮಹಾಂ । ಉರುಂ । ಹುವೇ । ಗಾಂऽಇವ । ಭೋಜಸೇ ।

ಇಂದ್ರ । ಸೋಮಸ್ಯ । ಪೀತಯೇ ॥ ೩ ॥

। ಸಾಯಣಭಾಷ್ಯಂ ।

ಹೇ ಇಂದ್ರ ತ್ವಾ ತ್ವಾಂ ಗೀರ್ಭಿಃ ಸ್ತುತಿಭಿರ್ಹುವೇ । ಆಹ್ವಯಾಮಿ । ಕೀದೃಶಂ ತ್ವಾಂ । ಮಹಾಂ ಮಹಾಂತಮುರುಂ ಪ್ರಭೂತಂ । ಕಿಮರ್ಥಂ । ಸೋಮಸ್ಯ ಪೀತಯೇ ಪಾನಾಯ । ಹ್ವಾನೇ ದೃಷ್ಟಾಂತಃ । ಭೋಜಸೇ ಭೋಗಾಯ ಗಾಮಿವ ॥

। ಪ್ರತಿಪದಾರ್ಥ ।

ಇಂದ್ರ—ಎಲೈ ಇಂದ್ರನೇ । ಭೋಜಸೇ—ಹುಲ್ಲನ್ನು ತಿನ್ನಲು । ಗಾಂ ಇವ—ಗೋವನ್ನು ಕರೆಯುವಂತೆ । ಸೋಮಸ್ಯ—ಸೋಮರಸದ । ಪೀತಯೇ—ಪಾನಕ್ಕಾಗಿ । ಮಹಾಂ—ಮಹಾತ್ಮನೂ । ಉರುಂ—ವಿಸ್ತೃತವಾದ ರೂಪವುಳ್ಳವನೂ ಆದ । ತ್ವಾ—ನಿನ್ನನ್ನು । ಗೀರ್ಭಿಃ—ಸ್ತುತಿಗಳ ಪೂರ್ವಕ । ಆ ಹುವೇ—ಕರೆಯುತ್ತೇನೆ.

। ಭಾವಾರ್ಥ ।

ಎಲೈ ಇಂದ್ರನೇ, ಹುಲ್ಲನ್ನು ತಿನ್ನಲು ಗೋವನ್ನು ಕರೆಯುವಂತೆ ಸೋಮರಸದ ಪಾನಕ್ಕಾಗಿ ಮಹಾತ್ಮನೂ, ವಿಸ್ತೃತವಾದ ರೂಪವುಳ್ಳವನೂ ಆದ ನಿನ್ನನ್ನು ಸ್ತುತಿಗಳ ಪೂರ್ವಕ ಕರೆಯುತ್ತೇನೆ.

## English Translation.

Indra, by my praises I invoke you, great and strong one, to drink the Soma. as a bull to eat (his fodder).

। ಸಂಹಿತಾಪಾಠಃ ।

ಆ ತ ಇಂದ್ರ ಮಹಿಮಾನಂ ಹರಯೋ ದೇವ ತೇ ಮಹಃ ।

ರಥೇ ವಹಂತು ಬಿಭ್ರತಃ ॥ ೪ ॥

। ಪದಪಾಠಃ ।

ಆ । ತೇ । ಇಂದ್ರ । ಮಹಿಮಾನಂ । ಹರಯಃ । ದೇವ । ತೇ । ಮಹಃ ।

ರಥೇ । ವಹಂತು । ಬಿಭ್ರತಃ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಮಹಿಮಾನಂ ಮಾಹಾತ್ಮ್ಯಂ ರಥೇ ಬಿಭ್ರತೋ ಧಾರಯಂತೋ ಹರಯೋಽಶ್ವಾ ಆ ವಹಂತು । ತಥಾ ಹೇ ದೇವ ತೇ ಮಹಸ್ತೇಜೋ ರಥೇ ಬಿಭ್ರತೋಽಶ್ವಾ ಆ ವಹಂತು । ಅತ್ರ ಮಹಿಮ್ನೋ ಮಹಸಶ್ಚ ಪೃಥಗಾವಹನಾಸಂಭವಾತ್ತಾಭ್ಯಾಂ ವಿಶಿಷ್ಟಂ ವಹಂತ್ವಿತ್ಯರ್ಥಃ । ಅಥವಾ ಮಹಿಮಾನಂ ಬಿಭ್ರತಸ್ತೇ ತ್ವಾಂ ರಥೇ ವಹಂತು ಮಹೋ ಬಿಭ್ರತಶ್ಚ ತ್ವಾಂ ವಹಂತ್ವಿತಿ ಯೋಜ್ಯಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ಮಹಿಮಾನಂ—ಮಾಹಾತ್ಮ್ಯವನ್ನು । ರಥೇ—ರಥದಲ್ಲಿ । ಬಿಭ್ರತಃ—ಧರಿಸಿಕೊಂಡು । ಹರಯಃ—ನಿನ್ನ ಅಶ್ವಗಳು । ಆ ವಹಂತು—ಇಲ್ಲಿಗೆ ಬರಮಾಡಲಿ । ದೇವ—ದೇವತಾತ್ಮನಾದ ಎಲೈ ಇಂದ್ರನೇ । ತೇ ಮಹಃ—ನಿನ್ನ ತೇಜಸ್ಸನ್ನೂ ಸಹ ರಥದಲ್ಲಿಟ್ಟು ಕೊಂಡು ಬರಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಅಶ್ವಗಳು ನಿನ್ನ ಮಾಹಾತ್ಮ್ಯವನ್ನೂ ಮತ್ತು ನಿನ್ನ ತೇಜಸ್ಸನ್ನೂ ರಥದಲ್ಲಿಟ್ಟು ಕೊಂಡು ನಮ್ಮಲ್ಲಿಗೆ ಬರಮಾಡಲಿ. ಅಥವಾ ಮಾಹಾತ್ಮ್ಯವನ್ನೂ, ತೇಜಸ್ಸನ್ನೂ ಧರಿಸಿರುವ ನಿನ್ನನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಕರೆತರಲಿ.

## English Translation.

Let your steeds, Indra, bearing you in your chariot, bring hither your might, (may they bring hither) your splendour, O divine one.

॥ ಸಂಹಿತಾಪಾಠಃ ॥

ಇಂದ್ರ ಗೃಣೀಷ ಉ ಸ್ತುಷೇ ಮಹಾ ಉಗ್ರ ಈಶಾನಕೃತ್ ।
ಏಹಿ ನಃ ಸುತಂ ಪಿಬ ॥ ೫ ॥

॥ ಪದಪಾಠಃ ॥

ಇಂದ್ರ । ಗೃಣೀಷೇ । ಊಂ ಇತಿ । ಸ್ತುಷೇ । ಮಹಾನ್ । ಉಗ್ರಃ । ಈಶಾನಽಕೃತ್ ।
ಆ । ಇಹಿ । ನಃ । ಸುತಂ । ಪಿಬ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಗೃಣೀಷೇ । ಉಚ್ಯಸೇ । ಇದಂ ದೇಹೀದಂ ಕುರ್ವಿತಿ । ತಥಾ ಸ್ತುಷ ಉ । ಸ್ತೂಯಸೇ ಚ । ಉ ಇತಿ ಚಾರ್ಥೇ । ಕೀದೃಶಸ್ತ್ವಂ । ಮಹಾನ್ ಗುಣೈಃ ಪ್ರವೃದ್ಧ ಉಗ್ರ ಉದ್ಗೂರ್ಣಬಲ ಈಶಾನಕೃದೈಶ್ವರ್ಯಸ್ಯ ಕರ್ತಾ । ತಾದೃಶಸ್ತ್ವಮೇಹಿ । ಆಗಚ್ಛ । ಆಗತ್ಯ ಚ ನಃ ಸುತಂ ಸೋಮಂ ಪಿಬ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಮಹಾನ್**—ಮಹದ್ಗುಣವುಳ್ಳವನೂ । **ಉಗ್ರಃ**—ಅತ್ಯಧಿಕವಾದ ಬಲವುಳ್ಳವನೂ । **ಈಶಾನಕೃತ್**—ಐಶ್ವರ್ಯದಾತೃವೂ ಆದ ನೀನು । **ಗೃಣೀಷೇ**—ತತ್ತತ್ಕಾರ್ಯಗಳಿಂದ ವರ್ಣಿತನಾಗುತ್ತೀಯೆ । **ಸ್ತುಷೇ ಉ**—ಪ್ರಶಂಸಿತನೂ ಆಗುತ್ತೀಯೆ । **ಏಹಿ**—ಇಲ್ಲಿಗೆ ದಯಮಾಡು । **ನಃ**—ನಮ್ಮಿಂದ । **ಸುತಂ**—ಹಿಂಡಲ್ಪಟ್ಟ ಸೋಮವನ್ನು । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ಮಹದ್ಗುಣವುಳ್ಳವನೂ, ಅತ್ಯಧಿಕವಾದ ಬಲವುಳ್ಳವನೂ, ಪ್ರಭುತ್ವದ ಕರ್ಮವುಳ್ಳವನೂ ಆದ ನೀನು ತತ್ತತ್ಕಾರ್ಯಗಳಿಂದ ವರ್ಣಿತನಾಗುತ್ತೀಯೆ ಮತ್ತು ಪ್ರಶಂಸಿತನೂ ಆಗುತ್ತೀಯೆ. ಇಲ್ಲಿಗೆ ಬಾ. ನಮ್ಮಿಂದ ಹಿಂಡಲ್ಪಟ್ಟ ಸೋಮವನ್ನು ಪಾನಮಾಡು.

## English Translation.

Indra, you are invoked, you are praised, the great, the strong, the wielder of soverignty ; come hither and drink our libation.

॥ ಸಂಹಿತಾಪಾಠಃ ॥

ಸುತಾವಂತಸ್ತ್ವಾ ವಯಂ ಪ್ರಯಸ್ವಂತೋ ಹವಾಮಹೇ ।
ಇದಂ ನೋ ಬರ್ಹಿರಾಸದೇ ॥ ೬ ॥

॥ ಪದಪಾಠಃ ॥

ಸುತಽವಂತಃ । ತ್ವಾ । ವಯಂ । ಪ್ರಯಸ್ವಂತಃ । ಹವಾಮಹೇ ।
ಇದಂ । ನಃ । ಬರ್ಹಿಃ । ಆಽಸದೇ ॥ ೬ ॥

॥ ಸಾಯಣಭಾಷ್ಯಂ ॥

**ಸುತಾವಂತೋಽಭಿಷುತಸೋಮವಂತಃ ಪ್ರಯಸ್ವಂತಶ್ಚರುಪುರೋಡಾಶಾದ್ಯನ್ನವಂತಶ್ಚ ವಯಂ ತ್ವಾ ತ್ವಾಂ ಹವಾಮಹೇ । ಆಹ್ವಯಾಮಃ । ಕಿಮರ್ಥಂ । ಇದಂ ನೋಽಸ್ಮದೀಯಂ ಬರ್ಹಿರ್ಬರ್ಹಿಷಿ ಯಜ್ಞೇ ಬರ್ಹಿಷಿ ವಾಸದ ಆಸಾದನಾಯ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಸುತಾವಂತಃ**—ಸೋಮರಸವನ್ನು ಹಿಂಡಿರುವವರೂ । **ಪ್ರಯಸ್ವಂತಃ**-ಚರುಪುರೋಡಾಶಾದ್ಯನ್ನವುಳ್ಳವರೂ ಆದ । **ವಯಂ**—ನಾವು । **ತ್ವಾ**—ನಿನ್ನನ್ನು । **ನಃ**—ನಮ್ಮಿಂದ ಸಂಸ್ಕೃತವಾದ । **ಇದಂ ಬರ್ಹಿಃ**—ಈ ದರ್ಭಾಸನದ ಮೇಲೆ । **ಆ ಸದೇ**—ಕುಳಿತುಕೊಳ್ಳಲು । **ಹವಾಮಹೇ**—ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಸೋಮರಸವನ್ನು ಹಿಂಡಿರುವವನೂ, ಚರುಪುರೋಡಾಶಾದ್ಯನ್ನವುಳ್ಳವರೂ ಆದ ನಾವು ನಮ್ಮಿಂದ ಸಂಸ್ಕೃತವಾದ ಈ ದರ್ಭಾಸನದ ಮೇಲೆ ಕುಳಿತುಕೊಳ್ಳಲು ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ.

## English Translation.

Bearing the effused Soma and the sacrificial food, we invoke you, Indra, to sit on our sacred grass.

॥ ಸಂಹಿತಾಪಾಠಃ ॥

ಯಚ್ಚಿದ್ಧಿ ಶಶ್ವತಾಮಸೀಂದ್ರ ಸಾಧಾರಣಸ್ತ್ವಂ ।
ತಂ ತ್ವಾ ವಯಂ ಹವಾಮಹೇ ॥ ೭ ॥

॥ ಪದಪಾಠಃ ॥

ಯತ್ । ಚಿತ್ । ಹಿ । ಶಶ್ವತಾಂ । ಅಸಿ । ಇಂದ್ರ । ಸಾಧಾರಣಃ । ತ್ವಂ ।
ತಂ । ತ್ವಾ । ವಯಂ । ಹವಾಮಹೇ ॥ ೭ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ತ್ವಂ ಯಚ್ಚಿದ್ಧಿ ಯಸ್ಮಾತ್ಖಲು ಶಶ್ವತಾಂ ಬಹೂನಾಂ ಯಜಮಾನಾನಾಂ ಸಾಧಾರಣೋಽಸಿ । ಚಿದಿತಿ ಪೂರಣಃ । ಹೀತಿ ಪ್ರಸಿದ್ಧೌ । ತಂ ತಾದೃಶಂ ಸಾಧಾರಣಂ ತ್ವಾ ತ್ವಾಂ ವಯಂ ಹವಾಮಹೇ । ಆಹ್ವಯಾಮಃ । ಇತರೇಭ್ಯಃ ಪೂರ್ವಮಿತಿ ಭಾವಃ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತ್ವಂ**—ನೀನು । **ಯಚ್ಚಿದ್ಧಿ**—ಯಾವ ನಿನ್ನ ಮಹಾತ್ಮ್ಯದಿಂದ । **ಶಶ್ವತಾಂ**—ಅನೇಕ ಯಜಮಾನರಿಗೆ । **ಸಾಧಾರಣಃ**—ಅವರೆಲ್ಲರಿಗೂ ಸಮಾನವಾದ ಪೂಜ್ಯನಾಗಿ । **ಅಸಿ**—ಆಗಿದ್ದೀಯೋ । **ತಂ ತ್ವಾ**—ಅಂತಹ ಮಹಾತ್ಮ್ಯವುಳ್ಳವನೂ, ಎಲ್ಲರಿಗೂ ಒಂದೇ ರೀತಿಯಲ್ಲಿ ಪೂಜ್ಯನೂ ಆದ ನಿನ್ನನ್ನು । **ವಯಂ**—ನಾವು । **ಹವಾಮಹೇ**—ಕರೆಯುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಯಾವ ನಿನ್ನ ಮಾಹಾತ್ಮ್ಯದಿಂದ ಅನೇಕ ಯಜಮಾನರಿಗೆಲ್ಲಾ ಒಂದೇ ರೀತಿಯಲ್ಲಿ ಪೂಜ್ಯನಾಗಿ ಆಗಿದ್ದೀಯೋ ಅಂತಹ ಮಾಹಾತ್ಮ್ಯವುಳ್ಳವನೂ, ಎಲ್ಲರಿಗೂ ಒಂದೇ ರೀತಿಯಲ್ಲಿ ಪೂಜ್ಯನೂ ಆದ ನಿನ್ನನ್ನು ನಾವು ಕರೆಯುತ್ತೇವೆ.

## English Translation.

Because you are common to many worshippers, therefore, Indra, we invoke you.

॥ ಸಂಹಿತಾಪಾಠಃ ॥

ಇದಂ ತೇ ಸೋಮ್ಯಂ ಮಧ್ವಧುಕ್ಷನ್ನದ್ರಿಭಿರ್ನರಃ ।
ಜುಷಾಣ ಇಂದ್ರ ತತ್ಪಿಬ ॥ ೮ ॥

॥ ಪದಪಾಠಃ ॥

ಇದಂ । ತೇ । ಸೋಮ್ಯಂ । ಮಧು । ಅಧುಕ್ಷನ್ । ಅದ್ರಿऽಭಿಃ । ನರಃ ।
ಜುಷಾಣಃ । ಇಂದ್ರ । ತತ್ । ಪಿಬ ॥ ೮ ॥

॥ ಸಾಯಣಭಾಷ್ಯಂ ॥

**ಪ್ರಾತಃಸವನ ಇದಂ ತೇ ಸೋಮ್ಯಮಿತಿ ಹೋತುಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಇದಂ ತೇ ಸೋಮ್ಯಂ ಮಧು ಮಿತ್ರಂ ವಯಂ ಹವಾಮಹೇ । ಆ. ೫-೫ । ಇತಿ ॥**

**ಹೇ ಇಂದ್ರ ತೇ ತ್ವದರ್ಥಮಿದಂ ಸೋಮ್ಯಂ ಸೋಮಸಂಬಂಧಿ ಮಧ್ವಧುಕ್ಷನ್ನದ್ರಿಭಿರ್ಗ್ರಾವಭಿರಭಿಷವಸಾಧನೈರ್ನರೋಽಸ್ಮದೀಯಾ ಅಧ್ವರ್ಯ್ವಾದಯಃ । ಹೇ ಇಂದ್ರ ತನ್ಮಧು ಜುಷಾಣಃ ಪ್ರೀಯಮಾಣಃ ಪಿಬ ॥**

॥ ಪ್ರತಿಪದಾರ್ಥ ॥

**ಇಂದ್ರ**—ಎಲೈ ಇಂದ್ರನೇ । **ತೇ**—ನಿನ್ನನ್ನುದ್ದೇಶಿಸಿ । **ನರಃ**—ನಮ್ಮ ಅಧ್ವರ್ಯುವೇ ಮುಂತಾದ ಋತ್ವಿಕ್ಕುಗಳು । **ಸೋಮ್ಯಂ**—ಸೋಮಸಂಬಂಧಿಯಾದುದೂ । **ಇದಂ ಮಧು**—ಮಧುರವಾದುದೂ ಆದ ಈ ರಸವನ್ನು । **ಅದ್ರಿಭಿಃ**—ಹಿಂಡುವ ಕಲ್ಲುಗಳಿಂದ । **ಅಧುಕ್ಷನ್**—ಹಿಂಡಿದ್ದಾರೆ । **ತತ್**—ಈ ಮಧುರವಾದ ರಸವನ್ನು । **ಜುಷಾಣಃ**—ಸೇವಿಸುತ್ತಾ । **ಪಿಬ**—ಪಾನಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ನಮ್ಮ ಅಧ್ವರ್ಯುವೇ ಮುಂತಾದ ಋತ್ವಿಕ್ಕುಗಳು ಸೋಮಸಂಬಂಧಿಯಾದುದೂ, ಮಧುರವಾದುದೂ ಆದ ಈ ರಸವನ್ನು ಹಿಂಡುವ ಕಲ್ಲುಗಳಿಂದ ಹಿಂಡಿದ್ದಾರೆ. ಈ ಮಧುರವಾದ ರಸವನ್ನು ಸೇವಿಸುತ್ತಾ ಪಾನಮಾಡು.

## English Translation.

The priests have milked for you with their stones this nectar of the Soma; drink it, Indra, well pleased.

॥ ವಿಶೇಷವಿಷಯಗಳು ॥

ಪ್ರಾತಸ್ಸವನಕಾಲದಲ್ಲಿ **ಇದಂ ತೇ ಸೋಮ್ಯಂ** ಎಂಬ ಈ ಋಕ್ಕನ್ನು ಹೋತೃವು ಪ್ರಸ್ಥಿತಯಾಜ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಇದಂ ತೇ ಸೋಮ್ಯಂ ಮಧು ಮಿಶ್ರಂ ವಯಂ ಹವಾಮಹೇ** ಎಂಬ ಸೂತ್ರದಿಂದ (ಆ. ೫-೫) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

ವಿಶ್ವಾಁ ಅರ್ಯೋ ವಿಪಶ್ಚಿತೋಽತಿ ಖ್ಯಸ್ತೂಯಮಾ ಗಹಿ ।
ಅಸ್ಮೇ ಧೇಹಿ ಶ್ರವೋ ಬೃಹತ್ ॥ ೯ ॥

॥ ಪದಪಾಠಃ ॥

ವಿಶ್ವಾನ್ । ಅರ್ಯಃ । ವಿಪಃಽಚಿತಃ । ಅತಿ । ಖ್ಯಃ । ತೂಯಂ । ಆ । ಗಹಿ ।
ಅಸ್ಮೇ ಇತಿ । ಧೇಹಿ । ಶ್ರವಃ । ಬೃಹತ್ ॥ ೯ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಅರ್ಯಃ ಸ್ವಾಮೀ ತ್ವಂ ವಿಶ್ವಾನ್ವಿಪಶ್ಚಿತಃ ಸ್ತೋತೄನತಿ ಖ್ಯಃ । ಅತಿಕ್ರಮ್ಯ ಪಶ್ಯ । ತದರ್ಥಂ ತೂಯಂ ಕ್ಷಿಪ್ರಮಾ ಗಹಿ । ಆಗತ್ಯ ಚಾಸ್ಮೇ ಅಸ್ಮಾಸು ಬೃಹಚ್ಛ್ರವೋಽನ್ನಂ ಯಶೋ ವಾ ಧೇಹಿ ॥**

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) **ಅರ್ಯಃ**—ಸ್ವಾಮಿಯಾದ ನೀನು । **ವಿಶ್ವಾನ್**—ಸಮಸ್ತರಾದ । **ವಿಪಶ್ಚಿತಃ**—ಸ್ತೋತೃಗಳನ್ನೂ । **ಅತಿ ಖ್ಯಃ**—ಹಿಂದಕ್ಕೆ ಬಿಟ್ಟು । **ತೂಯಂ**—ಕ್ಷಿಪ್ರವಾಗಿ । **ಆ ಗಹಿ**—ನಮ್ಮಲ್ಲಿಗೆ ಬಾ । **ಅಸ್ಮೇ**—ನಮ್ಮಲ್ಲಿ । **ಬೃಹತ್**—ಪ್ರಭೂತವಾದ । **ಶ್ರವಃ**—ಅನ್ನವನ್ನು । **ಧೇಹಿ**—ಸ್ಥಾಪಿಸು.

॥ ಭಾವಾರ್ಥ ॥

ಎಲೈ ಇಂದ್ರನೇ, ಸ್ವಾಮಿಯಾದ ನೀನು ಸಮಸ್ತರಾದ ಸ್ತೋತೃಗಳನ್ನೂ ಹಿಂದಕ್ಕೆ ಬಿಟ್ಟು (ಎಂದರೆ ಅವರಲ್ಲಿಗೆ ಹೋಗದೆ) ಕ್ಷಿಪ್ರವಾಗಿ ನಮ್ಮಲ್ಲಿಗೆ ಬಾ. ನಮ್ಮಲ್ಲಿ ಪ್ರಭೂತವಾದ ಅನ್ನವನ್ನು ಸ್ಥಾಪಿಸು.

## English Translation.

Do you, the lord, pass by all other worshippers and come quickly to us, and bestow on us abundant food.

॥ ಸಂಹಿತಾಪಾಠಃ ॥

ದಾತಾ ಮೇ ಪೃಷತೀನಾಂ ರಾಜಾ ಹಿರಣ್ಯವೀನಾಂ ।
ಮಾ ದೇವಾ ಮಘವಾ ರಿಷತ್ ॥ ೧೦ ॥

॥ ಪದಪಾಠಃ ॥

ದಾತಾ । ಮೇ । ಪೃಷತೀನಾಂ । ರಾಜಾ । ಹಿರಣ್ಯऽವೀನಾಂ ।
ಮಾ । ದೇವಾಃ । ಮಘऽವಾ । ರಿಷತ್ ॥ ೧೦ ॥

॥ ಸಾಯಣಭಾಷ್ಯಂ ॥

ಹಿರಣ್ಯವೀನಾಂ ಹಿರಣ್ಯವೀತಾನಾಂ ಪೃಷತೀನಾಂ ರಾಜೇಂದ್ರೋ ಮೇ ದಾತಾ ಭವತು । ಹೇ ದೇವಾಃ ಮಘವೇಂದ್ರೋ ಮಾ ರಿಷತ್ । ರಿಷ್ಟೋ ಮಾ ಭವತು ॥

॥ ಪ್ರತಿಪದಾರ್ಥ ॥

**ರಾಜಾ**—ಪ್ರಭುವಾದ ಇಂದ್ರನು । **ಹಿರಣ್ಯವೀನಾಂ**—ಸುವರ್ಣಮಯವಾದ ಆಭರಣಗಳಿಂದ ಅಲಂಕೃತವಾದ । **ಪೃಷತೀನಾಂ**—ಅಶ್ವಗಳನ್ನು (ಅಥವಾ ಗೋವುಗಳನ್ನು) । **ಮೇ**—ನನಗೆ । **ದಾತಾ**—ದಾನ ಮಾಡುವವನಾಗಲಿ । **ದೇವಾಃ**—ಎಲೈ ದೇವತೆಗಳೇ । **ಮಘವಾ**—ಇಂದ್ರನು । **ಮಾ ರಿಷತ್**—ಹಿಂಸಿತನಾಗದಿರಲಿ.

॥ ಭಾವಾರ್ಥ ॥

ಪ್ರಭುವಾದ ಇಂದ್ರನು ಸುವರ್ಣಮಯವಾದ ಆಭರಣಗಳಿಂದ ಅಲಂಕೃತವಾದ ಅಶ್ವಗಳನ್ನು, ಅಥವಾ ಗೋವುಗಳನ್ನು ನಮಗೆ ದಾನಮಾಡುವವನಾಗಲಿ. ಎಲೈ ದೇವತೆಗಳೇ, ಇಂದ್ರನು ಹಿಂಸಿತನಾಗದಿರಲಿ.

## English Translation.

May (Indra) the king give me cows adorned with gold ; O gods, let not Maghavan be harmed.

॥ ಸಂಹಿತಾಪಾಠಃ ॥

ಸಹಸ್ರೇ ಪೃಷತೀನಾಮಧಿ ಶ್ಚಂದ್ರಂ ಬೃಹತ್ಪೃಥು ।
ಶುಕ್ರಂ ಹಿರಣ್ಯಮಾ ದದೇ ॥ ೧೧ ॥

॥ ಪದಪಾಠಃ ॥

ಸಹಸ್ರೇ । ಪೃಷತೀನಾಂ । ಅಧಿ । ಚಂದ್ರಂ । ಬೃಹತ್ । ಪೃಥು ।

ಶುಕ್ರಂ । ಹಿರಣ್ಯಂ । ಆ । ದದೇ ॥ ೧೧ ॥

॥ ಸಾಯಣಭಾಷ್ಯಂ ॥

ಅಹಂ ಪೃಷತೀನಾಂ ಗವಾಂ ಸಹಸ್ರೇಽಧ್ಯುಪರಿ ಧಾರಿತಂ ಬೃಹನ್ಮಹತ್ಪೃಥು ವಿಸ್ತೃತಂ ಚಂದ್ರಮಾಹ್ಲಾದಕಂ ಶುಕ್ರಂ ನಿರ್ಮಲಂ ಹಿರಣ್ಯಮಾ ದದೇ । ಸ್ವೀಕರೋಮೀಂದ್ರೇಣಾನೀತಂ ॥

॥ ಪ್ರತಿಪದಾರ್ಥ ॥

**ಸಹಸ್ರೇ**—ಸಹಸ್ರಸಂಖ್ಯಾಕವಾದವೂ । **ಪೃಷತೀನಾಂ ಅಧಿ**—ಇಂದ್ರನಿಂದ ದತ್ತವಾದವೂ ಆದ ಗೋವುಗಳ ಮೇಲೆ ಇರುವ । **ಬೃಹತ್**—ಮಹತ್ಸ್ವರೂಪವುಳ್ಳವೂ । **ಪೃಥು**—ವಿಸ್ತೃತವಾದವೂ । **ಚಂದ್ರಂ**—ಆಹ್ಲಾದಕರವೂ । **ಶುಕ್ರಂ**—ನಿರ್ಮಲವೂ ಆದ । **ಹಿರಣ್ಯಂ**—ಸುವರ್ಣದ ಆಭರಣಗಳನ್ನು । **ಆ ದದೇ**—ನಾನು ಸ್ವೀಕರಿಸುತ್ತೇನೆ

॥ ಭಾವಾರ್ಥ ॥

ಸಹಸ್ರಸಂಖ್ಯಾಕವಾದವೂ, ಇಂದ್ರನಿಂದ ದತ್ತವಾದವೂ, ಆದ ಗೋವುಗಳ ಮೇಲೆ ಇರುವ ಮಹತ್ಸ್ವರೂಪವುಳ್ಳವೂ, ವಿಸ್ತೃತವಾದವೂ, ಆಹ್ಲಾದಕರವೂ, ನಿರ್ಮಲವೂ ಆದ ಸುವರ್ಣದ ಆಭರಣಗಳನ್ನು ನಾನು ಸ್ವೀಕರಿಸುತ್ತೇನೆ.

## English Translation.

Upon a thousand cows I obtain gold, abundant, delightful, wide-spread, and pure.

॥ ಸಂಹಿತಾಪಾಠಃ ॥

ನಪಾತೋ ದುರ್ಗಹಸ್ಯ ಮೇ ಸಹಸ್ರೇಣ ಸುರಾಧಸಃ ।

ಶ್ರವೋ ದೇವೇಷ್ವಕ್ರತ ॥ ೧೨ ॥

॥ ಪದಪಾಠಃ ॥

ನಪಾತಃ । ದುಃಽಗಹಸ್ಯ । ಮೇ । ಸಹಸ್ರೇಣ । ಸುಽರಾಧಸಃ ।

ಶ್ರವಃ । ದೇವೇಷು । ಅಕ್ರತ ॥ ೧೨ ॥

॥ ಸಾಯಣಭಾಷ್ಯಂ ॥

ನಪಾತೋಽರಕ್ಷಿತಸ್ಯ ದುರ್ಗಹಸ್ಯ ದುಃಖಂ ಗಾಹಮಾನಸ್ಯ ಮೇ ಸಂಬಂಧಿನೋ ಜನಾಃ ಸಹಸ್ರೇಣಾಪರಿಮಿತೇನೇಂದ್ರದತ್ತೇನ ಗವಾದಿಧನೇನ ಸುರಾಧಸಃ ಸುಧನಾಃ ಸಂತೋ ದೇವೇಷು ಪ್ರೀತೇಷು । ಇಂದ್ರೇ ಪ್ರೀತ ಇತ್ಯರ್ಥಃ । ಶ್ರವೋಽನ್ನಂ ಯಶೋ ವಾಕ್ರತ । ಅಲಭಂತೇತ್ಯರ್ಥಃ ॥

॥ ಪ್ರತಿಪದಾರ್ಥ ॥

**ನಪಾತಃ**—ರಕ್ಷಣೆಯಿಲ್ಲದವನೂ । **ದುರ್ಗಹಸ್ಯ**—ದುಃಖದಲ್ಲಿ ಮುಳುಗಿದವನೂ ಆದ । **ಮೇ**—ನನ್ನ ಪುತ್ರಪೌತ್ರಾದಿಗಳು । **ದೇವೇಷು**— ದೇವತೆಗಳು ಪ್ರೀತರಾದಾಗ । **ಸಹಸ್ರೇಣ**—ಇಂದ್ರನಿಂದ ದತ್ತವಾದ ಅಪರಿಮಿತವಾದ ಸಂಖ್ಯೆಯುಳ್ಳ ಧನದಿಂದ । **ಸುರಾಧಸಃ**—ಉತ್ತಮವಾದ ಐಶ್ವರ್ಯವಂತರಾಗಿ । **ಶ್ರವಃ**—ಅನ್ನವನ್ನೂ (ಯಶಸ್ಸನ್ನೂ) । **ಅಕ್ರತ**—ಪಡೆದರು.

॥ ಭಾವಾರ್ಥ ॥

ರಕ್ಷಣೆಯಿಲ್ಲದೇ ಬಿದ್ದವರೂ, ದಾರಿದ್ರ್ಯದುಃಖದಲ್ಲಿ ಮುಳುಗಿದವರೂ ಆದ ನನ್ನ ಪುತ್ರಪೌತ್ರಾದಿಗಳು ದೇವತೆಗಳ ಅನುಗ್ರಹಕ್ಕೆ ಪಾತ್ರರಾಗಿ ಇಂದ್ರನಿಂದ ದತ್ತವಾದ ಅಪರಿಮಿತವಾದ ಸಂಖ್ಯೆಯುಳ್ಳ ಧನದಿಂದ ಉತ್ತಮವಾದ ಐಶ್ವರ್ಯವಂತರಾಗಿ ಅನ್ನವನ್ನೂ, ಯಶಸ್ಸನ್ನೂ ಪಡೆದರು.

### English Translation.

Plunged as I am in sorrow, my children, by the favour of the gods, obtain food, and are blessed with abundance in a thousand cattle.



## ಅರವತ್ತಾರನೆಯ ಸೂಕ್ತವು

॥ ಸಾಯಣಭಾಷ್ಯಂ ॥

ತರೋಭಿರ್ವ ಇತಿ ಪಂಚದಶರ್ಚಂ ಸಪ್ತಮಂ ಸೂಕ್ತಂ ಪ್ರಗಾಥಪುತ್ರಸ್ಯ ಕಲೇರಾರ್ಷಂ । ಪ್ರಥಮಾತೃತೀಯಾದ್ಯಯುಜೋ ಬೃಹತ್ಯೋ ದ್ವಿತೀಯಾಚತುರ್ಥ್ಯಾದಿಯುಜಃ ಸತೋಬೃಹತ್ಯಃ ಪಂಚದಶೀ ತ್ವನುಷ್ಟುಪ್ । ತಥಾ ಚಾನುಕ್ರಮಣಿಕಾ । ತರೋಭಿಃ ಪಂಚೋನಾ ಕಲಿಃ ಪ್ರಾಗಾಥಃ ಪ್ರಾಗಾಥಮಂತ್ಯಾನುಷ್ಟುಬಿತಿ ॥ ಮಹಾವ್ರತೇ ನಿಷ್ಕೇವಲ್ಯೇ ಬಾರ್ಹತತೃಚಾಶೀತಾವೇತತ್ಸೂಕ್ತಂ । ತಥಾ ಚ ಪಂಚಮಾರಣ್ಯಕೇ ಸೂತ್ರಿತಂ । ತರೋಭಿರ್ವೋ ವಿದದ್ವಸುಮಿತ್ಯೃತ್ತಮಾಪುದ್ಧರತಿ । ಐ. ಆ. ೫-೨ ೪ । ಇತಿ ॥ ಅಗ್ನಿಷ್ಟೋಮೇಽಚ್ಛಾವಾಕಶಸ್ತ್ರೇಽಯಂ ಪ್ರಗಾಥಃ ಸ್ತೋತ್ರಿಯಃ । ತಥಾ ಚ ಸೂತ್ರಿತಂ ।

**ತರೋಭಿರ್ವೋ ವಿದದ್ವಸುಂ ತರಣಿರಿತ್ಸಿಷಾಸತೀತಿ ಪ್ರಗಾಥೌ ಸ್ತೋತ್ರಿಯಾನುರೂಪೌ । ಆ. ೫-೧೬ । ಇತಿ ॥ ಚಾತುರ್ವಿಂಶಿಕೇಽಹನ್ಯಯಮೇವ ಪ್ರಗಾಥಃ ಸ್ತೋತ್ರಿಯಃ । ಸೂತ್ರಿತಂ ಚ । ತರೋಭಿರ್ವೋ ವಿದದ್ವಸುಂ ತರಣಿರಿತ್ಸಿಷಾಸತಿ । ಆ. ೭-೪ । ಇತಿ ॥**

ಅನುವಾದವು—**ತರೋಭಿರ್ವಃ** ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಏಳನೆಯ **ಸೂಕ್ತವು.** ಇದರಲ್ಲಿ ಹದಿನೈನು ಋಕ್ಕುಗಳಿರುವುವು. ಈ ಸೂಕ್ತದಲ್ಲಿ ಒಂದು, ಮೂರು ಮೊದಲಾದ ಅಸಮಸಂಖ್ಯೆಯ ಋಕ್ಕುಗಳು ಬೃಹತೀಛಂದಸ್ಕವು ; ಎರಡು, ನಾಲ್ಕು ಮೊದಲಾದ ಸಮಸಂಖ್ಯೆಯ ಋಕ್ಕುಗಳು ಸತೋಬೃಹತೀಛಂದಸ್ಕವು ; ಆದರೆ ಕೊನೆಯ ಋಕ್ಕಾದ ಹದಿನೈದನೆಯ ಋಕ್ಕು ಅನುಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ತರೋಭಿಃ ಪಂಚೋನಾ ಕಲಿಃ ಪ್ರಾಗಾಥಃ ಪ್ರಾಗಾಥಮಂತ್ಯಾನುಷ್ಟುಪ್** ಎಂದು ಹೇಳಿರುವುದು. ಮಹಾವ್ರತೇಷ್ಟಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಪಠನಕಾಲದಲ್ಲಿ ಬೃಹತೀಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ಕೊನೆಯ ಋಕ್ಕನ್ನು ಬಿಟ್ಟು ಉಳಿದ ಋಕ್ಕುಗಳ ವಿನಿಯೋಗವಿರುವುದೆಂದು ಐತರೇಯಾರಣ್ಯಕದ ಪಂಚಮಾರಣ್ಯಕದಲ್ಲಿ—**ತರೋಭಿರ್ವೋ ವಿದದ್ವಸುಮಿತ್ಯುಕ್ತಮಾಮುದ್ಧರತಿ** ಎಂಬ ವಾಕ್ಯದಿಂದ (ಐ. ಆ. ೫-೨-೪) ನಿರ್ದಿಷ್ಟವಾಗಿರುವುದು. ಅಗ್ನಿಷ್ಟೋಮ ಯಾಗದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲ ಎರಡು ಋಕ್ಕುಗಳನ್ನು ಸ್ತೋತ್ರೀಯಪ್ರಗಾಥವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತರೋಭಿರ್ವೋ ವಿದದ್ವಸುಂ ತರಣಿರಿತ್ಸಿಷಾಸತೀತಿ ಪ್ರಗಾಥೌ ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ (ಆ. ೫-೧೬) ವಿವೃತವಾಗಿರುವುದು. ಯಾಗದ ಚಾತುರ್ವಿಂಶಿಕವೆಂಬ ದಿನದಲ್ಲಿ ಈ ಎರಡು ಋಕ್ಕುಗಳನ್ನೇ ಸ್ತೋತ್ರೀಯಪ್ರಗಾಥವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತರೋಭಿರ್ವೋ ವಿದದ್ವಸುಂ ತರಣಿರಿತ್ಸಿಷಾಸತಿ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿಗುವುದು.

## ಸೂಕ್ತ—೬೬

ಮಂಡಲ—೮ ॥ ಅನುವಾಕ—೭ ॥ ಸೂಕ್ತ—೬೬ ॥
ಅಷ್ಟಕ—೬ ॥ ಅಧ್ಯಾಯ—೪ ॥ ವರ್ಗ—೪೮, ೪೯, ೫೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
॥ ಋಷಿಃ—ಕಲಿಃ ಪ್ರಾಗಾಥಃ ॥
॥ ದೇವತಾ—ಇಂದ್ರಃ ॥
॥ ಛಂದಃ—೧-೧೪. ಪ್ರಾಗಾಥಂ (ಅಯುಜಃ ಬೃಹತ್ಯಃ । ಯುಜಃ ಸತೋಬೃಹತ್ಯಃ) । ೧೫. ಅನುಷ್ಟುಪ್ ॥

॥ ಸಂಹಿತಾಪಾಠಃ ॥

ತರೋಭಿರ್ವೋ ವಿದದ್ವಸುಮಿಂದ್ರಂ ಸಬಾಧ ಊತಯೇ ।
ಬೃಹದ್ಗಾಯಂತಃ ಸುತಸೋಮೇ ಅಧ್ವರೇ ಹುವೇ ಭರಂ ನ ಕಾರಿಣಂ ॥೧॥

॥ ಪದಪಾಠಃ ॥

ತರಃಽಭಿಃ । ವಃ । ವಿದತ್‌ಽವಸುಂ । ಇಂದ್ರಂ । ಸಽಬಾಧಃ । ಊತಯೇ ।

ಬೃಹತ್ । ಗಾಯಂತಃ । ಸುತಽಸೋಮೇ । ಅಧ್ವರೇ । ಹುವೇ । ಭರಂ । ನ । ಕಾರಿಣಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜಃ ವೋ ಯೂಯಂ ತರೋಭಿರ್ವೇಗೈರಶ್ವೈರುಪೇತಂ ವೇಗೈರೇವ ವಾ ವಿದದ್ವಸುಂ ವೇದಯದ್ವಸುಂ ಧನಾವೇದಕಮಿಂದ್ರಂ ಸಬಾಧೋ ಬಾಧಾಸಹಿತಾ ಊತಯೇ ರಕ್ಷಣಾಯ ಬೃಹತ್ಸಾಮ್ನ್ಯುತ್ಪನ್ನಂ ಗಾಯಂತಃ ಸಂತಃ ಪರಿಚರತೇತಿ ಶೇಷಃ । ಕುತ್ರೇತಿ ತದುಚ್ಯತೇ । ಸುತಸೋಮೇ ಸುತಸೋಮಕೇಽಧ್ವರೇ ಯಜ್ಞೇ ಸೋಮಯಾಗೇ । ಅಹಂ ಚ ತಮಿಂದ್ರಂ ಹುವೇ । ಆಹ್ವಯಾಮಿ । ಕಮಿವ । ಭರಂ ಭರ್ತಾರಂ ಕುಟುಂಬಪೋಷಕಂ ಕಾರಿಣಂ ಹಿತಕರಣಶೀಲಂ ಯಥಾ ಸ್ವಹಿತಕರಣಾಯಾಹ್ವಯಂತಿ ಪುತ್ರಾದಯಸ್ತದ್ವತ್ತಥಾಭೂತಮಿಂದ್ರಂ ಹುವ ಇತಿ ॥

॥ ಪ್ರತಿಪದಾರ್ಥ ॥

(ಎಲೆ ಋತ್ವಿಕ್ಕುಗಳೇ) ವಃ—ನೀವು । ಸುತಸೋಮೇ—ಹಿಂಡಿರುವ ಸೋಮಪೂರಿತವಾದ । ಅಧ್ವರೇ—ಯಜ್ಞದಲ್ಲಿ । ತರೋಭಿಃ—ವೇಗಗಾಮಿಗಳಾದ ಅಶ್ವೋಪೇತನೂ । ವಿದದ್ವಸುಂ—ಧನದ ರಹಸ್ಯವನ್ನು ತಿಳಿದವನೂ ಆದ । ಇಂದ್ರಂ—ಇಂದ್ರನನ್ನು । ಸಬಾಧಃ—ಎಲ್ಲರೂ ಒಟ್ಟುಗೂಡಿದವರಾಗಿ । ಊತಯೇ—ರಕ್ಷಣೆಗೋಸ್ಕರ । ಬೃಹತ್—ಬೃಹತ್ಸಾಮವನ್ನು । ಗಾಯಂತಃ—ಗಾನರೂಪದಲ್ಲಿ ಪಠಿಸುತ್ತಾ ಪೂಜಿಸಿರಿ । ಭರಂ—ಕುಟುಂಬವನ್ನು ಭರಿಸುವವನೂ । ಕಾರಿಣಂ ನ—ಕುಟುಂಬಕ್ಕೆ ಹಿತವನ್ನು ಮಾಡುವವನೂ ಆದ ಪಿತೃವನ್ನು ಪುತ್ರಾದಿಗಳು ಸಹಾಯಕ್ಕೆ ಕರೆಯುವಂತೆ । ಹುವೇ—ಪಿತೃರೂಪನಾದ ಇಂದ್ರನನ್ನು ನಾನೂ ಕರೆಯುತ್ತೇನೆ.

॥ ಭಾವಾರ್ಥ ॥

ಎಲೈ ಋತ್ವಿಕ್ಕುಗಳೇ, ಹಿಂಡಿರುವ ಸೋಮಪೂರಿತವಾದ ಯಜ್ಞದಲ್ಲಿ ವೇಗಗಾಮಿಗಳಾದ ಅಶ್ವೋಪೇತನೂ, ಧನದ ರಹಸ್ಯವನ್ನು ತಿಳಿದವನೂ ಆದ ಇಂದ್ರನನ್ನು ಎಲ್ಲರೂ ಒಟ್ಟುಗೂಡಿದವರಾಗಿ ರಕ್ಷಣೆಗೋಸ್ಕರ ಬೃಹತ್ಸಾಮವನ್ನು ಗಾನರೂಪದಲ್ಲಿ ಪಠಿಸುತ್ತಾ ಪೂಜಿಸಿರಿ. ಕುಟುಂಬವನ್ನು ಭರಿಸುವವನೂ, ಕುಟುಂಬಕ್ಕೆ ಹಿತವನ್ನು ಮಾಡುವವನೂ ಆದ ಪಿತೃವನ್ನು ಪುತ್ರಾದಿಗಳು ಸಹಾಯಕ್ಕೆ ಕರೆಯುವಂತೆ ಪಿತೃರೂಪನಾದ ಇಂದ್ರನನ್ನು ನಾನೂ ಕರೆಯುತ್ತೇನೆ.

## English Translation.

Thronging together, (worship) for your protection Indra full of might and the revealer of wealth; (worship him), chanting the Brihat-Saman at his sacrifice where the Soma is effused; I invoke him as (men invoke) a beneficent master of a household.

॥ ಸಂಹಿತಾಪಾಠಃ ॥

ನ ಯಂ ದುಧ್ರಾ ವರಂತೇ ನ ಸ್ಥಿರಾ ಮುರೋ ಮದೇ ಸುಶಿಪ್ರಮಂಧಸಃ ।
ಯ ಆದೃತ್ಯಾ ಶಶಮಾನಾಯ ಸುನ್ವತೇ ದಾತಾ ಜರಿತ್ರ ಉಕ್ಥ್ಯಂ ॥ ೨ ॥

॥ ಪದಪಾಠಃ ॥

ನ । ಯಂ । ದುಧ್ರಾಃ । ವರಂತೇ । ನ । ಸ್ಥಿರಾಃ । ಮುರಃ । ಮದೇ । ಸುಽಶಿಪ್ರಂ । ಅಂಧಸಃ ।
ಯಃ । ಆಽದೃತ್ಯ । ಶಶಮಾನಾಯ । ಸುನ್ವತೇ । ದಾತಾ । ಜರಿತ್ರೇ । ಉಕ್ಥ್ಯಂ ॥ ೨ ॥

॥ ಸಾಯಣಭಾಷ್ಯಂ ॥

ಯಂ ಸುಶಿಪ್ರಮಿಂದ್ರಂ ದುಧ್ರಾ ದುರ್ಧರಾ ಅಸುರಾದಯೋ ನ ವರಂತೇ ನ ವಾರಯಂತಿ ಸಂಗ್ರಾಮೇ । ತಥಾ ಸ್ಥಿರಾ ದೇವಾ ನ ವರಂತೇ । ಕಿಂಚ ಮುರೋ ಮರಣಸ್ವಭಾವಾ ಮನುಷ್ಯಾ ನ ವರಂತೇ । ಅಂಧಸೋಽನ್ನಸ್ಯ ಸೋಮಸ್ಯ ಮದೇ ಮದಾಯ ಸೋಮಪಾನಜನಿತಾಯಾದೃತ್ಯ ಯಃ ಶಶಮಾನಾಯ ಶಂಸಮಾನಾಯ ಸುನ್ವತೇಽಭಿಷವಂ ಕುರ್ವತೇ ಜರಿತ್ರೇ ಸ್ತೋತ್ರೇ ಚ ದಾತಾ ಭವತಿ । ಕಿಂ । ಉಕ್ಥ್ಯಂ ಸ್ತುತ್ಯಂ ಧನಂ । ಸ ರೇಜಯತೀತ್ಯುತ್ತರತ್ರ ಸಂಬಂಧಃ ॥

॥ ಪ್ರತಿಪದಾರ್ಥ ॥

**ಅಂಧಸಃ**—ಸೋಮಪಾನದಿಂದ । **ಮದೇ**—ಹರ್ಷವುಂಟಾದಾಗ । **ಸುಶಿಪ್ರಂ**—ಉತ್ತಮವಾದ ಕೆನ್ನೆಯುಳ್ಳ । **ಯಂ**—ಯಾವ ಇಂದ್ರನನ್ನು । **ದುಧ್ರಾಃ**—ಅಪ್ರತಿಹತರಾದ ಅಸುರಾದಿಗಳೂ । **ನ ವರಂತೇ**—ತಡೆಯಲಾರರೋ । **ಸ್ಥಿರಾಃ**—ಶಾಶ್ವತಸ್ಥಿತಿಯುಳ್ಳ ದೇವತೆಗಳೂ । **ನ**—ತಡೆಯಲಾರರೋ । **ಮುರಃ**—ಮರಣಧರ್ಮವುಳ್ಳ ಮಾನವರೂ ತಡೆಯಲಾರರೋ ಅಂತಹವನೂ । **ಯಃ**—ಯಾವ ಇಂದ್ರನು । **ಆದೃತ್ಯ**—ತನ್ನನ್ನು ಆದರಿಸಿ । **ಶಶಮಾನಾಯ**—ಪ್ರಶಂಸಿಸುವವನೂ । **ಸುನ್ವತೇ**—ಸೋಮವನ್ನು ಹಿಂಡಿ ಅರ್ಪಿಸುವವನೂ ಆದ । **ಜರಿತ್ರೇ**—ಸ್ತುತಿಕರ್ತನಿಗೆ । **ಉಕ್ಥ್ಯಂ**—ಪ್ರಶಸ್ಯವಾದ ಧನಕ್ಕೆ । **ದಾತಾ**—ದಾತೃವಾಗುವನೋ ಅಂತಹವನೂ ಆದ ಇಂದ್ರನು ಗೋಸ್ಥಾನಗಳನ್ನು ಚಲಿಸುವಂತೆ ಮಾಡುತ್ತಾನೆ.

॥ ಭಾವಾರ್ಥ ॥

ಸೋಮಪಾನದಿಂದ ಹರ್ಷವುಂಟಾದಾಗ ಉತ್ತಮವಾದ ಕೆನ್ನೆಯುಳ್ಳ ಯಾವ ಇಂದ್ರನನ್ನು ಅಪ್ರತಿಹತರಾದ ಅಸುರಾದಿಗಳೂ ತಡೆಯಲಾರರೋ, ಶಾಶ್ವತವಾದ ಸ್ಥಿತಿಯುಳ್ಳ ದೇವತೆಗಳಾಗಲಿ, ಮರಣಧರ್ಮವುಳ್ಳ ಮಾನವರಾಗಲಿ ತಡೆಯಲಾರರೋ ಅಂತಹವನೂ ಮತ್ತು ಯಾವ ಇಂದ್ರನು ತನ್ನನ್ನು ಆದರಿಸಿ ಪ್ರಶಂಸಿಸುವವನೂ, ಸೋಮವನ್ನು ಹಿಂಡಿ ಅರ್ಪಿಸುವವನೂ ಆದ ಸ್ತುತಿಕರ್ತನಿಗೆ ಪ್ರಶಸ್ಯವಾದ ಧನದ ದಾತೃವಾಗುವನೋ ಅಂತವನೂ ಆದ ಇಂದ್ರನು ಗೋವುಗಳು ಅಡಗಿರುವ ಜಾಗವನ್ನು ಚಲಿಸುವಂತೆ ಮಾಡುತ್ತಾನೆ. ಎಂದರೆ ಗೋವುಗಳನ್ನು ಬಿಡಿಸಿ ಹೊರಡಿಸುತ್ತಾನೆ.

## English Translation.

He, the handsome-jawed, whom, in the intoxication of the Soma, the fierce (demons) withstand not, nor the firm gods, nor mortal (men),—who confers glorious wealth on him who reverently praises him, offers the Soma, and sings hymns;

|| ಸಂಹಿತಾಪಾಠಃ ||

ಯಃ ಶಕ್ರೋ ಮೃಕ್ಷೋ ಅಶ್ವ್ಯೋ ಯೋ ವಾ ಕೀಜೋ ಹಿರಣ್ಯಯಃ ।
ಸ ಊರ್ವಸ್ಯ ರೇಜಯತ್ಯಪಾವೃತಿಮಿಂದ್ರೋ ಗವ್ಯಸ್ಯ ವೃತ್ರಹಾ || ೩ ||

|| ಪದಪಾಠಃ ||

ಯಃ । ಶಕ್ರಃ । ಮೃಕ್ಷಃ । ಅಶ್ವ್ಯಃ । ಯಃ । ವಾ । ಕೀಜಃ । ಹಿರಣ್ಯಯಃ ।
ಸಃ । ಊರ್ವಸ್ಯ । ರೇಜಯತಿ । ಅಪऽವೃತಿಂ । ಇಂದ್ರಃ । ಗವ್ಯಸ್ಯ । ವೃತ್ರಹಾ || ೩ ||

|| ಸಾಯಣಭಾಷ್ಯಂ ||

ಯಃ ಶಕ್ರ ಇಂದ್ರಃ ಸ್ತೋತೄಣಾಂ ಮೃಕ್ಷಃ ಶೋಧಕಃ ಪರಿಚರಣೀಯೋ ವಾ । ಯಶ್ಚಾಶ್ವ್ಯಃ । ಅಶ್ವಕುಶಲೋಽಶ್ವ್ಯಃ । ಅಥವಾಶ್ವ್ಯ ಇತಿ ಸ್ವಾರ್ಥಿಕೋ ಯತ್ । ಮೃಕ್ಷೋಽಶ್ವಃ ಪ್ರಕ್ಷಾಲಿತೋಽಶ್ವ ಇವ ವರ್ತತೇ । ಯೋ ವಾ ಕೀಜಃ । ಕೀಜ ಇತ್ಯದ್ಭುತನಾಮ । ಕಿಮಸ್ಯ ಕಥಂ ಜಾತ ಇತಿ ವ................ । ಯಶ್ಚ ಹಿರಣ್ಯಯೋ ಹಿರಣ್ಮಯಶರೀರಃ ಸ ಏವಮಾಶ್ಚರ್ಯಭೂತ ಇಂದ್ರೋ ವೃತ್ರಹಾ ಗವ್ಯಸ್ಯ ಗೋಸಮೂಹಸ್ಯ । ಕೀದೃಶಸ್ಯ । ಊರ್ವಸ್ಯ ಬಹುಲಸ್ಯಾಪಾವೃತಿಮಪವರಣೀಯಂ ರೇಜಯತಿ । ಕಂಪಯತೀತ್ಯರ್ಥಃ ||

। ಪ್ರತಿಪದಾರ್ಥ ।

ಶಕ್ರಃ—ಪರಾಕ್ರಮಿಯಾದ । ಯಃ—ಯಾವ ಇಂದ್ರನು । ಮೃಕ್ಷಃ—ಯಜಮಾನನಿಗೆ ಶುದ್ಧಿಕಾರಕನಾಗಿರುವನೋ । ಅಶ್ವ್ಯಃ—ಯಾವನು ಅಶ್ವಪರೀಕ್ಷೆಯಲ್ಲಿ ಚತುರನೋ । ಯೋ ವಾ—ಯಾರು । ಕೀಜಃ—ಅದ್ಭುತವಾದ ಪರಾಕ್ರಮವುಳ್ಳವನೂ । ಹಿರಣ್ಯಯಃ—ಸುವರ್ಣಮಯವಾದ ಶರೀರವುಳ್ಳವನೂ ಆಗಿರುವನೋ । ವೃತ್ರಹಾ—ವೃತ್ರಹಂತಕನಾದ । ಸ ಇಂದ್ರಃ—ಅದೇ ಇಂದ್ರನು । ಊರ್ವಸ್ಯ—ವಿಸ್ತೃತವಾದ । ಗವ್ಯಸ್ಯ—ಗೋಸಮೂಹಕ್ಕೆ । ಅಪಾವೃತಿಂ—ನಿರೋಧಕವಾದ ಸ್ಥಾನವನ್ನು । ರೇಜಯತಿ—ಕಂಪಿಸುವಂತೆ ಮಾಡುತ್ತಾನೆ.

॥ ಭಾವಾರ್ಥ ॥

ಪರಾಕ್ರಮಿಯಾದ ಯಾವ ಇಂದ್ರನು ಯಜಮಾನನಿಗೆ ಶುದ್ಧಿಕಾರಕನಾಗಿರುವನೋ, ಯಾವನು ಅಶ್ವಪರೀಕ್ಷೆಯಲ್ಲಿ ಚತುರನೋ, ಯಾರು ಅದ್ಭುತವಾದ ಪರಾಕ್ರಮವುಳ್ಳವನೂ, ಸುವರ್ಣಮಯವಾದ ಶರೀರವುಳ್ಳವನೂ ಆಗಿರುವನೋ ವೃತ್ರಹಂತಕನಾದ ಅದೇ ಇಂದ್ರನು ವಿಸ್ತೃತವಾದ ಗೋಸಮೂಹಕ್ಕೆ ನಿರೋಧಕವಾದ ಸ್ಥಾನವನ್ನು ಕಂಪಿಸುವಂತೆ ಮಾಡುತ್ತಾನೆ. ಎಂದರೆ ದ್ವಾರವನ್ನು ತೆಗೆದು ಗೋವುಗಳನ್ನು ಬಿಡುಗಡೆ ಮಾಡುತ್ತಾನೆ.

## English Translation.

He, Shakra, who is the purifier (of his worshippers), and well-skilled in horses, who is wonderful and golden-bodied,—He, Indra, the slayer of Vritra, shakes the hilding-place of the numerous herd of cows.

॥ ಸಂಹಿತಾಪಾಠಃ ॥

ನಿಖಾತಂ ಚಿದ್ಯಃ ಪುರುಸಂಭೃತಂ ವಸೂದಿದ್ವಪತಿ ದಾಶುಷೇ ।
ವಜ್ರೀ ಸುಶಿಪ್ರೋ ಹರ್ಯಶ್ವ ಇತ್ಕರದಿಂದ್ರಃ ಕ್ರತ್ವಾ ಯಥಾ ವಶತ್ ॥ ೪ ॥

॥ ಪದಪಾಠಃ ॥

ನಿऽಖಾತಂ । ಚಿತ್ । ಯಃ । ಪುರುऽಸಂಭೃತಂ । ವಸು । ಉತ್ । ಇತ್ । ವಪತಿ । ದಾಶುಷೇ ।
ವಜ್ರೀ । ಸುऽಶಿಪ್ರಃ । ಹರಿऽಅಶ್ವಃ । ಇತ್ । ಕರತ್ । ಇಂದ್ರಃ । ಕ್ರತ್ವಾ । ಯಥಾ । ವಶತ್ ॥ ೪ ॥

॥ ಸಾಯಣಭಾಷ್ಯಂ ॥

ನಿಖಾತಂ ಚಿದ್ಭೂವಮೌ ಖಾತ್ವಾ ಸ್ಥಾಪಿತಮಪಿ ಸಂಭೃತಂ ಸಂಗೃಹೀತಂ ಯಾಗದಾನಾದಿಕಂ ಕೃತ್ವೇದ್ವೃತಂ ಪುರು ಬಹು ವಸು ಧನಮುದಿದ್ವಪತಿ ಉದ್ವಪತ್ಯೇವ ದಾಶುಷೇ ಯಜಮಾನಾಯ । ಏವಂ ಯೋ ದೇವಃ ಕರೋತಿ ಸ ವಜ್ರೀ ಸುಶಿಪ್ರಃ ಸುಹನುರ್ಹರ್ಯಶ್ವ ಇದ್ಧರಿತವರ್ಣಾಶ್ವಯುಕ್ತ ಇಂದ್ರ ಏವ ಕರೋತಿ । ಕೇನೋಪಾಧಿನಾ । ಕ್ರತ್ವಾ ಕರ್ಮಣಾ ಯಾಗೇನೋಪಾಧಿನಾ । ಯಥಾ ವಶತ್ ಯೇನ ಪ್ರಕಾರೇಣ ಕಾಮಯತೇ ತಥಾ ಸ ಏವ ಕರೋತಿ ॥

॥ ಪ್ರತಿಪದಾರ್ಥ ॥

ಕ್ರತ್ವಾ—ಯಜ್ಞಕರ್ಮದಿಂದ । ಯಥಾ—ಯಾವ ರೀತಿ । ಯಃ ವಶತ್—ಯಾರು ಸಂತೃಪ್ತನಾಗುವನೋ ಅದೇ ರೀತಿ (ಅದಕ್ಕೆ ಫಲರೂಪವಾಗಿ) । ವಜ್ರೀ—ವಜ್ರಾಯುಧಧಾರಿಯೂ । ಸುಶಿಪ್ರಃ—ಉತ್ತಮವಾದ ಕೆನ್ನೆಯುಳ್ಳವನೂ । ಹರ್ಯಶ್ವ ಇತ್—ಹಸಿರುವರ್ಣವುಳ್ಳ ಅಶ್ವೋಪೇತನೂ ಆದ ಅದೇ । ಇಂದ್ರಃ—

ಇಂದ್ರನು | **ದಾಶುಷೇ**—ಹವಿರ್ದಾತನಾದ ಯಜಮಾನನಿಗೆ | **ನಿಖಾತಃ ಚಿತ್**—ಭೂಮಿಯನ್ನೂ ಅಗೆದು | **ಸಂಭೃತಂ**—ಇತರರಿಂದ ಶೇಖರಿಸಲ್ಪಟ್ಟ | **ಪುರು ವಸು**—ಅತ್ಯಧಿಕವಾದ ಧನವನ್ನೂ | **ಉದಿಷ್ಯತಿ**—ತಂದು ಸುರಿಯುತ್ತಾನೆ.

|| ಭಾವಾರ್ಥ ||

ವಜ್ರಾಯುಧಧಾರಿಯೂ, ಉತ್ತಮವಾದ ಕೆನ್ನೆಯುಳ್ಳವನೂ, ಹರಿತವರ್ಣವುಳ್ಳ ಅಶ್ವೋಪೇತನೂ ಆದ ಯಾವ ಇಂದ್ರನು ಯಜ್ಞಕರ್ಮದಿಂದ ಸಂತೃಪ್ತನಾಗುವನೋ ಆದೇ ಇಂದ್ರನು ತನ್ನ ಸಂತೃಪ್ತಿಗೆ ಪ್ರತಿಯಾಗಿ ಇತರ ಧನಿಕರು ಭೂಮಿಯನ್ನು ಅಗೆದು ಹೂತಿದ್ದ ಧನವನ್ನೆಲ್ಲಾ ಕೂಡಿಸಿ ಪ್ರಭೂತವಾದ ಧನವನ್ನು ತನಗೆ ಹವಿಸ್ಸನ್ನರ್ಪಿಸುವ ಯಜಮಾನನಿಗೆ ತಂದು ಸುರಿಯುವನು.

## English Translation

He who verily pours forth to the offerer the buried wealth accumulated by many, he, Indra, the thunderer, handsome-jawed, borne on bay steeds, does as he pleases, (when propitiated) with sacrifice.

|| ಸಂಹಿತಾಪಾಠಃ ||

ಯದ್ವಾವಂಥ ಪುರುಷ್ಟುತ ಪುರಾ ಚಿಚ್ಛೂರ ನೃಣಾಂ |
ವಯಂ ತತ್ತ ಇಂದ್ರ ಸಂ ಭರಾಮಸಿ ಯಜ್ಞಮುಕ್ಥಂ ತುರಂ ವಚಃ || ೫ ||

|| ಪದಪಾಠಃ ||

ಯತ್ | ವವಂಥ | ಪುರುಽಸ್ತುತ | ಪುರಾ | ಚಿತ್ | ಶೂರ | ನೃಣಾಂ |
ವಯಂ | ತತ್ | ತೇ | ಇಂದ್ರ | ಸಂ | ಭರಾಮಸಿ | ಯಜ್ಞಂ | ಉಕ್ಥಂ | ತುರಂ | ವಚಃ || ೫ ||

|| ಸಾಯಣಭಾಷ್ಯಂ ||

ಹೇ ಪುರುಷ್ಟುತ ಬಹುಭಿಃ ಸ್ತುತೇಂದ್ರ ಶೂರ ವಿಕ್ರಾಂತ ನೃಣಾಂ ನೇತೄಣಾಂ ಸ್ತೋತೄಣಾಂ ಸಕಾಶಾತ್ ಪುರಾ | ಚಿದಿತ್ಯುಪಮಾರ್ಥೇ | ತಥೇದಾನೀಮಪಿ ಯದ್ವವಂಥ ಅಚೀಕಮಥಾಃ ತದೇವ ವಯಂ ತುರಂ ತೂರ್ಣಂ ತೇ ತುಭ್ಯಮಿಂದ್ರ ಸಂ ಭರಾಮಸಿ | ಸಂಭರಾಮಃ | ಕಿಂ ತದಿತಿ ಉಚ್ಯತೇ | ಯಜ್ಞಂ ಯಾಗಯೋಗ್ಯಂ ಹವಿರುಕ್ಥಂ ಶಸ್ತ್ರಂ ವಚೋ ವಾಚ್ಯಂ | ತವ ಪ್ರಿಯತಮಂ ಹವಿಃ ಸ್ತೋತ್ರಂ ಚ ಸಂಭರಾಮ ಇತ್ಯರ್ಥಃ

॥ ಪ್ರತಿಪದಾರ್ಥ ॥

**ಪುರುಷ್ಟುತ**—ಅನೇಕರಿಂದ ಸ್ತುತಿಸಲ್ಪಡುವವನೂ | **ಶೂರ**—ಪರಾಕ್ರಮಿಯೂ ಆದ | **ಇಂದ್ರ**—ಎಲೈ ಇಂದ್ರನೇ | **ನೃಣಾಂ**—ಹಿಂದಿನ ಯಜ್ಞಕರ್ತರಿಂದ | **ಪುರಾ ಚಿತ್**—ಹಿಂದೆಲ್ಲಾ | **ಯದ್ವವಂಥ**—ಯಾವ ಯಾವುದನ್ನು ಅಪೇಕ್ಷಿಸಿದೆಯೋ | **ತತ್ ಯಜ್ಞಂ**—ಅದೇ ಯಜ್ಞವನ್ನೂ (ಹವಿಸ್ಸನ್ನೂ) | **ಉಕ್ಥಂ**—ಅದೇ ಶಸ್ತ್ರಮಂತ್ರವನ್ನೂ | **ವಚಃ**—ಅದೇ ಸ್ತುತಿವಾಕ್ಯವನ್ನೂ | **ವಯಂ**—ನಾವು | **ತುರಂ**—ಶೀಘ್ರವಾಗಿ | **ತೇ**—ನಿನ್ನನ್ನುದ್ದೇಶಿಸಿ | **ಸಂ ಭರಾಮಸಿ**—ಸಂಪಾದಿಸಿ ಅರ್ಪಿಸುತ್ತೇವೆ.

॥ ಭಾವಾರ್ಥ ॥

ಅನೇಕರಿಂದ ಸ್ತುತಿಸಲ್ಪಡುವವನೂ, ಪರಾಕ್ರಮಿಯೂ ಆದ ಎಲೈ ಇಂದ್ರನೇ, ಹಿಂದಿನ ಯಜ್ಞಕರ್ತರಿಂದ ಹಿಂದೆಲ್ಲಾ ಯಾವ ಯಾವುದನ್ನು ಅಪೇಕ್ಷಿಸಿದೆಯೋ, ಅದೇ ಯಜ್ಞಭಾಗದ ಹವಿಸ್ಸನ್ನೂ, ಅದೇ ಶಸ್ತ್ರಮಂತ್ರವನ್ನೂ, ಅದೇ ಸ್ತುತಿವಾಕ್ಯವನ್ನೂ ಸಹ ನಾವೂ ಶೀಘ್ರವಾಗಿ ಸಂಪಾದಿಸಿ ನಿನಗೆ ಅರ್ಪಿಸುತ್ತೇವೆ.

## English Translation.

Hero, praised of many, what of old time you desired from your votaries, that, Indra, we hasten to bring to you,—oblation and recited praise.

॥ ಸಂಹಿತಾಪಾಠಃ ॥

**ಸಚಾ ಸೋಮೇಷು ಪುರುಹೂತ ವಜ್ರಿವೋ ಮದಾಯ ದ್ಯುಕ್ಷ ಸೋಮಪಾಃ।**
**ತ್ವಮಿದ್ಧಿ ಬ್ರಹ್ಮಕೃತೇ ಕಾಮ್ಯಂ ವಸು ದೇಷ್ಠಃ ಸುನ್ವತೇ ಭುವಃ ॥ ೬ ॥**

॥ ಪದಪಾಠಃ ॥

**ಸಚಾ । ಸೋಮೇಷು । ಪುರುऽಹೂತ । ವಜ್ರಿऽವಃ । ಮದಾಯ । ದ್ಯುಕ್ಷ । ಸೋಮಽಪಾಃ ।**
**ತ್ವಂ । ಇತ್ । ಹಿ । ಬ್ರಹ್ಮऽಕೃತೇ । ಕಾಮ್ಯಂ । ವಸು । ದೇಷ್ಠಃ । ಸುನ್ವತೇ । ಭುವಃ ॥ ೬ ॥**

॥ ಸಾಯಣಭಾಷ್ಯಂ ॥

**ಹೇ ಪುರುಹೂತ ಬಹುಭಿರಾಹೂತ ಹೇ ವಜ್ರಿವೋ ವಜ್ರವನ್ ದ್ಯುಕ್ಷ ದ್ಯುಮನ್ ಸೋಮಪಾಃ ಸೋಮಸ್ಯ ಪಾತಃ ತ್ವಂ ಸೋಮೇಷ್ವಭಿಷುತೇಷು ಮದಾಯ ಸಚಾ ಸಹ ಭವೇತಿ ಶೇಷಃ। ತ್ವಮಿತ್ತ್ವಮೇವ ಬ್ರಹ್ಮಕೃತೇ ಸ್ತೋತ್ರಕರ್ತ್ರೇ ಸುನ್ವತೇ ಚ ಕಾಮ್ಯಂ ಕಮನೀಯಂ ವಸು ಧನಂ ದೇಷ್ಠೋ ದಾತೃತಮೋ ಭುವಃ । ಭವಸಿ ॥**

॥ ಪ್ರತಿಪದಾರ್ಥ ॥

**ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನೂ । **ವಜ್ರಿವಃ**—ವಜ್ರಾಯುಧಧಾರಿಯೂ । **ದ್ಯುಕ್ಷ**—ಕಾಂತಿಯುತನೂ । **ಸೋಮಪಾಃ**-ಸೋಮಪಾನವನ್ನು ಮಾಡತಕ್ಕವನೂ ಆದ ಎಲೈ ಇಂದ್ರನೇ । **ಸೋಮೇಷು**-ಸೋಮರಸಗಳು ಹಿಂಡಿ ಸಿದ್ಧವಾಗಿರುವಾಗ । **ಮದಾಯ**—ನಿನ್ನ ಹರ್ಷಕ್ಕಾಗಿ । **ಸಚಾ**—ನಮ್ಮೊಡಗೂಡಿರು । **ತ್ವಮಿತ್ ಹಿ**—ನೀನೊಬ್ಬನೇ । **ಬ್ರಹ್ಮಕೃತೇ**—ಸ್ತುತಿಕರ್ತನಿಗೂ । **ಸುನ್ವತೇ**—ಯಜಮಾನನಿಗೂ । **ಕಾಮ್ಯಂ**—ಆಕರ್ಷಕವಾದ । **ವಸು**—ಧನವನ್ನು । **ದೇಷ್ಠಃ**—ಅತ್ಯತಿಶಯವಾಗಿ ದಾನಮಾಡುವವನಾಗಿ । **ಭುವಃ**—ಆಗಿದ್ದೀಯೆ.

॥ ಭಾವಾರ್ಥ ॥

ಅನೇಕರ ಆಹ್ವಾನಕ್ಕೆ ಪಾತ್ರನೂ, ವಜ್ರಾಯುಧಧಾರಿಯೂ, ಕಾಂತಿಯುತನೂ, ಸೋಮಪಾನವನ್ನು ಮಾಡುವವನೂ ಆದ ಎಲೈ ಇಂದ್ರನೇ, ಸೋಮರಸಗಳು ಹಿಂಡಿ ಸಿದ್ಧವಾಗಿರುವಾಗ ನಿನ್ನ ಹರ್ಷಕ್ಕಾಗಿ ನಮ್ಮೊಡಗೂಡಿರು. ನೀನೊಬ್ಬನೇ ಸ್ತುತಿಕರ್ತನಿಗೂ ಯಜಮಾನನಿಗೂ, ಸಹ ಆಕರ್ಷಕವಾದ ಧನವನ್ನು ಅತ್ಯತಿಶಯವಾಗಿ ಕೊಡುವವನಾಗಿದ್ದೀಯೆ.

## English Translation.

Bearer of the thunderbolt, be present at our libations for your exhilaration; for you are an abundant giver of desirable wealth to him who utters your praises and effuses the Soma.

॥ ಸಂಹಿತಾಪಾಠಃ ॥

**ವಯಮೇನಮಿದಾ ಹ್ಯೋಽಪೀಪೇಮೇಹ ವಜ್ರಿಣಂ ।**

**ತಸ್ಮಾ ಉ ಅದ್ಯ ಸಮನಾ ಸುತಂ ಭರಾ ನೂನಂ ಭೂಷತ ಶ್ರುತೇ ॥ ೭ ॥**

॥ ಪದಪಾಠಃ ॥

**ವಯಂ । ಏನಂ । ಇದಾ । ಹ್ಯಃ । ಅಪೀಪೇಮ । ಇಹ । ವಜ್ರಿಣಂ ।**

**ತಸ್ಮೈ । ಊಂ ಇತಿ । ಅದ್ಯ । ಸಮನಾ । ಸುತಂ । ಭರ । ಆ । ನೂನಂ । ಭೂಷತ । ಶ್ರುತೇ ॥ ೭ ॥**

। ಸಾಯಣಭಾಷ್ಯಂ ।

**ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇಽಚ್ಛಾವಾಕಶಸ್ತ್ರೇ ವಯಮೇನಮಿತಿ ವೈಕಲ್ಪಿಕೋಽನುರೂಪಃ । ತಥಾ ಚ ಸೂತ್ರಿತಂ । ವಯಮೇನಮಿದಾ ಹ್ಯೋ ಯೋ ರಾಜಾ ಚರ್ಷಣೀನಾಂ । ಆ. ೭.೪ । ಇತಿ ॥**

**ವಯಂ ಯಜಮಾನಾ ಏನಮಿಂದ್ರಂ ವಜ್ರಿಣಮಿದೇದಾನೀಂ ಹ್ಯಶ್ಚೋಹಾತ್ರಾಪಿಪೇಮ ಆಪ್ಯಾಯಯಾಮ ಸೋಮೇನ । ತಸ್ಮಾ ಉ ತಸ್ಮಾ ಏವಾದ್ಯಾತ್ರ ಸಮನಾ ಸಂಗ್ರಾಮಾರ್ಥಂ ಸುತಮಭಿಷುತಂ ಸೋಮಂ ಭರ ಹರತ ಹೇ ಅಧ್ವರ್ಯವಾದಯಃ । ನೂನಮಿದಾನೀಂ ಶ್ರುತೇ ಸ್ತೋತ್ರೇ ಶ್ರುತೇ ಸತ್ಯಾ ಭೂಷತ । ಅಭವತು । ಆಗಚ್ಛತು ॥**

॥ ಪ್ರತಿಪದಾರ್ಥ ॥

**ವಯಂ**—ಯಜಮಾನರಾದ ನಾವು । **ವಜ್ರಿಣಂ**—ವಜ್ರಾಯುಧಧಾರಿಯಾದ । **ಏನಂ**—ಈ ಇಂದ್ರನನ್ನು । **ಇದಾ**—ಇಂದೂ । **ಹ್ಯಃ**—ನೆನ್ನೆಯೂ । **ಇಹ**—ಇದೇ ಯಜ್ಞಪ್ರದೇಶದಲ್ಲಿ । **ಅಪೀಪೇಮ**—ಸೋಮದಿಂದ ತೃಪ್ತಿಗೊಳಿಸಿದ್ದೇವೆ । **ತಸ್ಮಾ ಉ**—ಅವನನ್ನೇ ಉದ್ದೇಶಿಸಿ । **ಅದ್ಯ**—ಈಗಲೂ । **ಸಮನಾ**—ಸಂಗ್ರಾಮಾರ್ಥವಾಗಿ । **ಸುತಂ**—ಹಿಂಡಿರುವ ಸೋಮವನ್ನು । **ಭರ**—ಸಂಪಾದಿಸಿರಿ । **ನೂನಂ**—ಈಗ । **ಶ್ರುತೇ**—ಸ್ತೋತ್ರಕಾಲದಲ್ಲಿ । **ಆ ಭೂಷತ**—ಇಂದ್ರನು ಬಂದು ಅಲಂಕರಿಸಲಿ.

॥ ಭಾವಾರ್ಥ ॥

ಯಜಮಾನರಾದ ನಾವು ವಜ್ರಾಯುಧಧಾರಿಯಾದ ಈ ಇಂದ್ರನನ್ನು ಇಂದೂ, ನೆನ್ನೆಯೂ ಇದೇ ಯಜ್ಞಪ್ರದೇಶದಲ್ಲಿ ಸೋಮಾರ್ಪಣೆಯಿಂದ ತೃಪ್ತಿಪಡಿಸಿದ್ದೇವೆ. ಅವನನ್ನೇ ಉದ್ದೇಶಿಸಿ ಈಗಲೂ ಸಂಗ್ರಾಮಾರ್ಥವಾಗಿ ಪ್ರೇರಿಸಲು ಹಿಂಡಿರುವ ಸೋಮವನ್ನು ಸಂಪಾದಿಸಿರಿ. ಈಗ ಸ್ತೋತ್ರಕಾಲದಲ್ಲಿ ಇಂದ್ರನು ಬಂದು ಅಲಂಕರಿಸಲಿ.

## English Translation.

To-day and yesterday we have here refreshed him, the thunderer; bring to him to-day our libation effused for (success in) battle; let him now hasten hither on hearing our praise.

॥ ವಿಶೇಷವಿಷಯಗಳು ॥

ಯಾಗದ ಚಾತುರ್ವಿಂಶಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ವಯಮೇನಂ** ಎಂಬ ಈ ಪ್ರಗಾಥವನ್ನು ವೈಕಲ್ಪಿಕಾನುರೂಪಪ್ರಗಾಥವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ವಯಮೇನಮಿದಾ ಹ್ಯೋ ಯೋ ರಾಜಾ ಚರ್ಷಣೀನಾಂ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು.

॥ ಸಂಹಿತಾಪಾಠಃ ॥

**ವೃಕಶ್ಚಿದಸ್ಯ ವಾರಣ ಉರಾಮಥಿರಾ ವಯುನೇಷು ಭೂಷತಿ ।**

**ಸೇಮಂ ನಃ ಸ್ತೋಮಂ ಜುಜುಷಾಣ ಆ ಗಹೀಂದ್ರ ಪ್ರ ಚಿತ್ರಯಾ ಧಿಯಾ ॥**

॥ ಪದಪಾಠಃ ॥

ವೃಕಃ । ಚಿತ್ । ಅಸ್ಯ । ವಾರಣಃ । ಉರಾಽಮಥಿಃ । ಆ । ವಯುನೇಷು । ಭೂಷತಿ ।

ಸಃ । ಇಮಂ । ನಃ । ಸ್ತೋಮಂ । ಜುಜುಷಾಣಃ । ಆ । ಗಹಿ । ಇಂದ್ರ । ಪ್ರ । ಚಿತ್ರಯಾ । ಧಿಯಾ ॥ ೪ ॥

॥ ಸಾಯಣಭಾಷ್ಯಂ ॥

ವೃಕಶ್ಚಿತ್ಸ್ತೇನೋಽಪಿ ವಾರಣೋ ವಾರಯಿತಾ ಸರ್ವಸ್ಯ ಸನ್ನುರಾಮಥಿಃ ಶತ್ರೂಣಾಂ ಮಾರ್ಗೇ ಗಚ್ಛತಾಂ ಮಥಿತಾ ಸನ್ನಪ್ಯಸ್ಯೇಂದ್ರಸ್ಯ ವಯುನೇಷು ಮಾರ್ಗೇಷು ಪ್ರಜ್ಞಾನೇಷು ವಾ ಭೂಷತಿ । ಆನುಕೂಲ್ಯಮೇವ ಭಜತೇ । ಅತೀವಹಿಂಸ್ರೋಽಪೀಂದ್ರಸ್ಯಾನುಕೂಲೋ ಭವತೀತ್ಯರ್ಥಃ ಯದ್ವಾ ॥ ಸ್ಯೇತಿ ಕರ್ಮಣಿ ಷಷ್ಠೀ ॥ ಅಮುಮಿಂದ್ರಮುಕ್ತರೂಪೋ ವೃಕೋಽಪಿ ವಯುನೇಷು ಸ್ತೋತ್ರೇಷ್ವಾ ಭೂಷತಿ । ಸ ತ್ವಮಿಮಂ ನಃ ಸ್ತೋಮಂ ಜುಜುಷಾಣಃ ಪ್ರೀಯಮಾಣ ಆ ಗಹಿ । ಆಗಚ್ಛ । ಹೇ ಇಂದ್ರ ಚಿತ್ರಯಾ ಧಿಯಾ ಕರ್ಮಣಾ ಸ್ತುತಿಲಕ್ಷಣೇನ ನಿಮಿತ್ತೇನ ಪ್ರ ಪ್ರಕರ್ಷೇಣ ಗಹಿ । ಶೀಘ್ರಮಾಗಚ್ಛ ॥

॥ ಪ್ರತಿಪದಾರ್ಥ ॥

**ವಾರಣಃ**—ಮಾರ್ಗನಿರೋಧಕನೂ । **ಉರಾಮಥಿಃ**—ಮಾರ್ಗಗಳಲ್ಲಿ ಸಿಕ್ಕಿದವರನ್ನು ಅತಿಯಾಗಿ ಹಿಂಸಿಸುವವನೂ ಆದ । **ವೃಕಶ್ಚಿತ್**—ಕಳ್ಳನೂ ಸಹ । **ಅಸ್ಯ**—ಈ ಇಂದ್ರನ । **ವಯುನೇಷು**—ಸಂಚಾರ ಮಾರ್ಗಗಳಲ್ಲಿ । **ಆ ಭೂಷತಿ**—ಅನುಕೂಲರೀತಿಯಲ್ಲಿಯೇ ವರ್ತಿಸುತ್ತಾನೆ । (ಎಲೈ ಇಂದ್ರನೇ) **ಸಃ**—ಅಂತಹ ಮಾಹಾತ್ಮ್ಯವುಳ್ಳ ನೀನು । **ನಃ**—ನಮ್ಮಿಂದ ಪಠಿತವಾಗುವ । **ಇಮಂ ಸ್ತೋಮಂ**—ಈ ಸ್ತೋತ್ರವನ್ನು । **ಜುಜುಷಾಣಃ**—ಸೇವಿಸುತ್ತಾ । **ಆ ಗಹಿ**—ದಯಮಾಡು । **ಇಂದ್ರ**—ಎಲೈ ಇಂದ್ರನೇ । **ಚಿತ್ರಯಾ ಧಿಯಾ**—ಆಕರ್ಷಕವಾದ ಸ್ತುತಿನಿಮಿತ್ತವಾಗಿ । **ಪ್ರ**—ಅತಿಶಯವಾಗಿ ಬಾ.

॥ ಭಾವಾರ್ಥ ॥

ಮಾರ್ಗನಿರೋಧಕನೂ, ಮಾರ್ಗದಲ್ಲಿ ಸಿಕ್ಕಿದವರನ್ನು ಅತಿಯಾಗಿ ಹಿಂಸಿಸುವವನೂ ಆದ ಕಳ್ಳನೂ ಸಹ ಈ ಇಂದ್ರನ ಸಂಚಾರಮಾರ್ಗಗಳಲ್ಲಿ ಅನುಕೂಲವಾದ ರೀತಿಯಲ್ಲಿಯೇ ವರ್ತಿಸುತ್ತಾನೆ. ಎಲೈ ಇಂದ್ರನೇ, ಅಂತಹ ಮಾಹಾತ್ಮ್ಯವುಳ್ಳ ನೀನು ನಮ್ಮಿಂದ ಪಠಿತವಾಗುವ ಈ ಸ್ತೋತ್ರವನ್ನು ಸೇವಿಸುತ್ತಾ ದಯಮಾಡು. ಎಲೈ ಇಂದ್ರನೇ, ಆಕರ್ಷಕವಾದ ಸ್ತುತಿನಿಮಿತ್ತವಾಗಿ ಅತಿಶಯವಾಗಿ ನಮ್ಮಲ್ಲಿಗೆ ಬಾ.

## English Translation.

The obstructing robber, the destroyer of travelling enemies, is obedient to him in his ways; hasten, Indra. (drawn) by our gorgeous rite, welcoming this our hymn.

॥ ವಿಶೇಷವಿಷಯಗಳು ॥

ವೃಕೇ—ವೃಕಶಬ್ದಾರ್ಥದ ವಿಷಯದಲ್ಲಿ ಯಾಸ್ಕರು ಹೇಳಿರುವ ನಾನಾರ್ಥಗಳನ್ನೂ, ನಿರ್ವಚನವನ್ನೂ ನಾವು ಋ. ಸಂ. ಭಾಗ 9 ಪುಟ 520 ಮತ್ತು ಭಾಗ 13 ಪುಟ 638 ರಲ್ಲಿ ವಿಸ್ತಾರವಾಗಿ ವಿವರಿಸಿರುವುದನ್ನು ಆ ಭಾಗಗಳಲ್ಲಿ ನೋಡಿ.

॥ ಸಂಹಿತಾಪಾಠಃ ॥

ಕದೂ ನ್ವ೧ಸ್ಯಾಕೃತಮಿಂದ್ರಸ್ಯಾಸ್ತಿ ಪೌಂಸ್ಯಂ ।
ಕೇನೋ ನು ಕಂ ಶ್ರೋಮತೇನ ನ ಶುಶ್ರುವೇ ಜನುಷಃ ಪರಿ ವೃತ್ರಹಾ ॥೯॥

॥ ಪದಪಾಠಃ ॥

ಕತ್ । ಊಂ ಇತಿ । ನು । ಅಸ್ಯ । ಅಕೃತಂ । ಇಂದ್ರಸ್ಯ । ಅಸ್ತಿ । ಪೌಂಸ್ಯಂ ।
ಕೇನೋ ಇತಿ । ನು । ಕಂ । ಶ್ರೋಮತೇನ । ನ । ಶುಶ್ರುವೇ । ಜನುಷಃ । ಪರಿ । ವೃತ್ರಽಹಾ ॥ ೯ ॥

॥ ಸಾಯಣಭಾಷ್ಯಂ ॥

ಚಾತುರ್ವಿಂಶಿಕೇಽಹನಿ ಮಾಧ್ಯಂದಿನಸವನೇಽಚ್ಛಾವಾಕಶಸ್ತ್ರ ಏವ ಕದೂ ನ್ವಿತಿ ಕದ್ವತ್ಪ್ರಗಾಥಃ । ಕದೂ ನ್ವಸ್ಯಾಕೃತಮಿತಿ ಕದ್ವಂತಃ ಪ್ರಗಾಥಾಃ । ಆ. ೭-೪ । ಇತಿ ಹಿ ಸೂತ್ರಿತಂ ॥

ಅಸ್ಯೇಂದ್ರಸ್ಯ ಕದೂ ನು ಕಿಂ ತು ಖಲು ಪೌಂಸ್ಯಂ ಪೌರುಷಮಕೃತಮನಾಚಾರಿತಮಸ್ತಿ । ಸರ್ವಮಪಿ ವೃತ್ರವಧಾದಿಕಮನೇನ ಕೃತಮೇವ ಇತಃ ಪರಂ ನ ಕಿಂಚಿ ಪೌಂಸ್ಯಂ ಕೃತ್ಯಮಸ್ತೀತ್ಯರ್ಥಃ । ಲೋಕೇ ಸ್ವಲ್ಪಮಪಿ ಯಃ ಪುಂಸ್ತ್ವಂ ಕುರ್ಯಾತ್ಸ ತೇನ ಸ್ತೂಯತೇಽಯಂ ತು ನ ಸ್ತುತ ಏತದುಚ್ಯತೇ । ಕೇನೋ ನು ಕಂ ಕೇನ ಖಲು ಶ್ರೋಮತೇನ ಶ್ರವಣೀಯೇನ ಪುಂಸ್ತ್ವೇನ ನ ಶುಶ್ರುವೇ । ನ ಶ್ರೂಯತೇ। ಕಿಂ ಕತಿಪಯೈರೇವಾಹೋಭಿಃ ಕೃತೇನ ನೇತ್ಯಾಹ। ಅಯಂ ವೃತ್ರಹಾ ವೃತ್ರಸ್ಯಾತಿಪ್ರಬಲಸ್ಯ ಹಂತಾಯಂ ಜನುಷಃ ಪರಿ ಜನ್ಮಪ್ರಭೃತಿ ಕ್ರಿಯಮಾಣೈಃ ಸಾಮರ್ಥ್ಯೈಃ ಶ್ರೂಯತೇ । ವೃತ್ರಹತ್ಯಂ ತತ್ಪುಂಸ್ತ್ವಪ್ರದರ್ಶನಾದ್ಯೋತನಾಯ । ಯಥಾ ವೃತ್ರಹನನಂ ಸರ್ವೈಃ ಶ್ರೂಯತೇ ತದ್ವದನ್ಯಾನ್ಯಪೀತಿ ಭಾವಃ ॥

॥ ಪ್ರತಿಪದಾರ್ಥ ॥

ಪೌಂಸ್ಯಂ—ವೀರ್ಯಕರ್ಮಗಳಲ್ಲಿ । ಕದೂ ನು—ಯಾವುದು ತಾನೇ । ಅಸ್ಯ ಇಂದ್ರಸ್ಯ—ಈ ಇಂದ್ರನಿಂದ । ಅಕೃತಂ ಅಸ್ತಿ—ಆಚರಿಸಲ್ಪಡದೇ ಇರುತ್ತದೆ । ಶ್ರೋಮತೇನ—ಕಿವಿಯಿರುವ । ಕೇನೋ ನು ಕಂ—ಯಾವ ಪುರುಷನಿಂದ ತಾನೇ । ನ ಶುಶ್ರುವೇ—ಇಂದ್ರನ ಮಹತ್ಕಾರ್ಯವು ಕೇಳಲ್ಪಟ್ಟಿಲ್ಲ । ವೃತ್ರಹಾ—ವೃತ್ರಹಂತಕನಾದ ಇಂದ್ರನು । ಜನುಷಃ ಪರಿ—ಜನ್ಮಾರಭ್ಯ ಪ್ರಖ್ಯಾತನಾಗಿದ್ದಾನೆ.

|| ಭಾವಾರ್ಥ ||

ಈ ಇಂದ್ರನಿಂದ ಆಚರಿಸಲ್ಪಡದೇ ಇರುವ ವೀರ್ಯಕರ್ಮವು ಯಾವುದು ತಾನೇ ಇದೆ? ಯಾವ ಪುರುಷನು ತಾನೇ ಇವನ ಮಹತ್ಕಾರ್ಯವನ್ನು ಕೇಳಿಲ್ಲ? ಈ ಇಂದ್ರನು ವೃತ್ರಹಂತಕನೆಂದೂ, ಮಹತ್ಕಾರ್ಯಸಾಧಕನೆಂದೂ ಹುಟ್ಟಿದಾರಭ್ಯ ಪ್ರಖ್ಯಾತನಾಗಿದ್ದಾನೆ.

## English Translation.

What act of might is there, unperformed by Indra? Who has not heared of his famous (heroism)? He, the slayer of Vritra, (is renowned) from his birth.

|| ವಿಶೇಷವಿಷಯಗಳು ||

ಯಾಗದ ಚಾತುರ್ವಿಂಶಿಕವೆಂಬ ದಿನದ ಮಾಧ್ಯಂದಿನಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸುವ ಶಸ್ತ್ರಮಂತ್ರಗಳಲ್ಲಿ **ಕದೂ ನು** ಎಂಬ ಈ ಪ್ರಗಾಥವನ್ನು ಕದ್ವತ್ಪ್ರಗಾಥಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಕದೂ ನ್ವಸ್ಯಾಕೃತಮಿತಿ ಕದ್ವಂತಃ ಪ್ರಗಾಥಾಃ** ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು

|| ಸಂಹಿತಾಪಾಠಃ ||

ಕದೂ ಮಹೀರಧೃಷ್ಟಾ ಅಸ್ಯ ತವಿಷೀಃ ಕದು ವೃತ್ರಘ್ನೋ ಅಸ್ತೃತಂ ।
ಇಂದ್ರೋ ವಿಶ್ವಾನ್ಬೇಕನಾಟಾँ ಅಹರ್ದೃಶ ಉತ ಕ್ರತ್ವಾ ಪಣೀರಭಿ ॥ ೧೦ ॥

। ಪದಪಾಠಃ ।

ಕತ್ । ಊಂ ಇತಿ । ಮಹೀಃ । ಅಧೃಷ್ಟಾಃ । ಅಸ್ಯ । ತವಿಷೀಃ । ಕತ್ । ಊಂ ಇತಿ । ವೃತ್ರಽಘ್ನಃ । ಅಸ್ತೃತಂ ।
ಇಂದ್ರಃ । ವಿಶ್ವಾನ್ । ಬೇಕಽನಾಟಾನ್ । ಅಹಃಽದೃಶಃ । ಉತ । ಕ್ರತ್ವಾ । ಪಣೀನ್ । ಅಭಿ ॥ ೧೦ ॥

। ಸಾಯಣಭಾಷ್ಯಂ ।

ಕದೂ ಕದಾ ಖಲ್ವಸ್ಯೇಂದ್ರಸ್ಯ ತವಿಷೀರ್ಬಲಾನ್ಯಧೃಷ್ಟಾ ಅಧೃಷ್ಟಾನ್ಯಧರ್ಷಕಾಣ್ಯಾಸನ್ । ಕದು ಕದಾ ನು ಖಲು ವೃತ್ರಘ್ನೋ ವೃತ್ರಹಂತುರಿಂದ್ರಸ್ಯ ಹಂತವ್ಯಮಸ್ತೃತಮಹಿಂಸಿತಮಭವತ್ । ನ ಕದಾಚಿದಿತ್ಯ........ ...ವ್ಯಯಂಹಂ ಅಥವದಿತ್ಯರ್ಥಃ । ಅಥವಾಸ್ಯ ಮಹಾಂತಿ ಬಲಾನಿ ಸೇನಾಲಕ್ಷಣಾನಿ ಕದಾಪ್ಯಧೃಷ್ಟಾನ್ಯನ್ಯಬಲೈರಹಿಂಸಿತಾನಿ ತಥಾ ವೃತ್ರಘ್ನೋ ಶಾರೀರಂ ಬಲಮಸ್ತೃತಮನ್ಯೈರಹಿಂಸ್ಯಂ ।

ಈದೃಶೇನ ದ್ವಿವಿಧೇನ ಬಲೇನೇಂದ್ರೋ ವಿಶ್ವಾನ್ ಸರ್ವಾನ್ಬೇಕನಾಟಾನ್ । ಅನೇನ ಕುಸೀದಿನೋ ವೃದ್ಧಿಜೀವಿನೋ ವಾರ್ಧುಷಿಕಾ ಉಚ್ಯಂತೇ । ಕಥಂ ತದ್ವ್ಯುತ್ಪತ್ತಿಃ। ಬೇ ಇತ್ಯಪಭ್ರಂಶೋ ದ್ವಿಶಬ್ದಾರ್ಥೇ। ಏಕಂ ಕಾರ್ಷಾಪಣಮೃಣಿಕಾಯ ಪ್ರಯಚ್ಛನ್ ದ್ವೌ ಮಹ್ಯಂ ದಾತವ್ಯ............ನಯೇನ ದರ್ಶಯಂತಿ ತತೋ ದ್ವಿಶಬ್ದೇನೈಕಶಬ್ದೇನ ಚ ನಾಟಯಂತೀತಿ ಬೇಕನಾಟಾಃ । ತಾನಹರ್ದೃಶಃ । ಅಹಃಶಬ್ದೇನ ತದುತ್ಪಾದಕ ಆದಿತ್ಯೋಽಭಿಧೇಯೋ ಭವತಿ । ತಂ ಪಶ್ಯಂತೀತ್ಯಹರ್ದೃಶಃ । ನನು ಸರ್ವೇ ಸೂರ್ಯಂ ಪಶ್ಯಂತಿ ಕೋಽತ್ರಾತಿಶಯ ಇತಿ ಉಚ್ಯತೇ । ಇಹೈವ ಜನ್ಮನಿ ಸೂರ್ಯಂ ಪಶ್ಯಂತಿ ನ ಜನ್ಮಾಂತರೇ । ಲುಬ್ಧಕಾ ಅಯಷ್ಟಾರೋಽಂಧೇ ತಮಸಿ ಮಜ್ಜಂತಿ । ಅಥವಾ ಲೌಕಿಕಾನ್ಯೇವಾಹಾನಿ ಪಶ್ಯಂತಿ ನ ಪಾರಲೌಕಿಕಾನ್ಯದೃಷ್ಟಾನಿ । ದೃಷ್ಟಪ್ರಧಾನಾ ಹಿ ನಾಸ್ತಿಕಾಃ । ಅತೋ............ತಾನ್ ಪಣೀನ್ ಪಣಿಸದೃಶಾಞ್ಛೂದ್ರಕಲ್ಪಾನ್ । ಉತಶಬ್ದ ಏವಾರ್ಥೇ । ಕ್ರತ್ವೋತ ಕರ್ಮಣೈವ ತಾಡನಾದಿವ್ಯಾಪಾರೇಣೈವಾಭಿ ಭವತೀತಿ ಶೇಷಃ । ಯದ್ವಾ । ಪಣೀನುತ ಪಣೀನೇವಾಭಿಭವತಿ ನ ಯಷ್ಟಾರಂ । ಪಣೀನಾಂ ನಿಂದಾ ಸ್ಮರ್ಯತೇ। ಗೋರಕ್ಷಕಾನ್ವಾಣಿಕಾಂಸ್ತಥಾ ಕಾರುಕುಶೀಲವಾನ್। ಪ್ರೇಷ್ಯಾನ್ವಾರ್ಧುಷಿಕಾಂಶ್ಚೈವ ವಿಪ್ರಾನ್ ಶೂದ್ರವದಾಚರೇತ್ । ಮನುಂ ೮-೧೦೨ ಇತಿ ॥

ಪ್ರತಿಪದಾರ್ಥ ।

**ಅಸ್ಯ**—ಇಂದ್ರನ । **ತವಿಷೀಃ**—ಶಕ್ತಿಯುತವಾದ । **ಮಹೀಃ**—ಮಹತ್ಸೇನೆಗಳೂ । **ಕದಾ**—ಯಾವಾಗ ತಾನೇ । **ಅಧೃಷ್ಟಾಃ**—ಶತ್ರುಗಳನ್ನು ಪ್ರತಿಭಟಿಸದೆ ಅಲಸವಾಗಿವೆ । **ವೃತ್ರಘ್ನೇ**—ವೃತ್ರಹಂತಕನಾದ ಇಂದ್ರನಿಗೆ । **ಕದು**—ಯಾವಾಗ ತಾನೇ । **ಅಸ್ತೃತಂ**—ದುಷ್ಟವಸ್ತುಗಳಲ್ಲಿ ನಾಶವಿಷಯವಾಗದೇ **ಇರುತ್ತದೆ** । **ಇಂದ್ರಃ**—ಇಂದ್ರನು । **ಕ್ರತ್ವಾ**—ತನ್ನ ಅಸಾಧಾರಣವಾದ ಕರ್ಮಗಳಿಂದ । **ಅಹರ್ದೃಶಃ**—ಕೇವಲ ಇಹದಲ್ಲಿ ಮಾತ್ರ ಸೂರ್ಯನನ್ನು ನೋಡಬಲ್ಲ ನಾಸ್ತಿಕರೂ । **ಬೇಕನಾಟಾನ್**— ಮೋಸವ್ಯಾಪಾರವುಳ್ಳವರೂ ಆದ । **ವಿಶ್ವಾನ್ ಪಣೀನ್**—ಸಮಸ್ತ ವಂಚಕರನ್ನೂ (ಲುಬ್ಧರನ್ನೂ) । **ಅಭಿ**—ಸೋಲಿಸಿ ನಾಶಪಡಿಸುತ್ತಾನೆ.

॥ ಭಾವಾರ್ಥ ।

ಇಂದ್ರನ ಶಕ್ತಿಯುತವಾದ ಮಹಾಸೇನೆಗಳು ಯಾವಾಗ ತಾನೇ ಶತ್ರುಗಳನ್ನು ಪ್ರತಿಭಟಿಸದೇ ಅಲಸವಾಗಿವೆ ? ವೃತ್ರಹಂತಕನಾದ ಇಂದ್ರನಿಗೆ ದುಷ್ಟವಸ್ತುಗಳಲ್ಲಿ ಯಾವುದು ತಾನೇ ನಾಶವಿಷಯವಾಗುವುದಿಲ್ಲ. ಇಂದ್ರನು ತನ್ನ ಅಸಾಧಾರಣವಾದ ಕರ್ಮಗಳಿಂದ ಕೇವಲ ಇಹದಲ್ಲಿ ಮಾತ್ರ ಸೂರ್ಯನನ್ನು ನೋಡಬಲ್ಲ ನಾಸ್ತಿಕರೂ, ಮೋಸವ್ಯಾಪಾರವುಳ್ಳರೂ ಆದ ಸಮಸ್ತ ವಂಚಕರನ್ನೂ ಸೋಲಿಸಿ ನಾಶಪಡಿಸುತ್ತಾನೆ.

## English Translation.

When were his mighty forces ever languid? When was aught undestroyed before the slayer of Vritra? Indra by his energy overpowers all the huckstering usurers who see only this world's days.

॥ ವಿಶೇಷವಿಷಯಗಳು ॥

**ಬೇಕನಾಟಾನ್—ಅನೇನ ಕುಸೀದಿನೋ ವೃದ್ಧಿಜೀವಿನೋ ವಾರ್ಧುಷಿಕಾ ಉಚ್ಯಂತೇ ।** ಈ ಶಬ್ದಕ್ಕೆ—ಹಣದ ತೊಂದರೆಗೆ ಒಳಗಾಗಿ ಕಷ್ಟಪಡುತ್ತಿರುವ ಜನರಿಗೆ ದ್ರವ್ಯವನ್ನು ಸಾಲವಾಗಿ ಕೊಟ್ಟು ಆ ದ್ರವ್ಯಕ್ಕೆ ಅಸಲನ್ನೂ ಬಡ್ಡಿಯನ್ನೂ ಅವರಿಂದ ವಸೂಲುಮಾಡಿ ಜೀವಿಸುವ ಲೇವಾದೇವಿ ಮಾಡುವ ಜನರಿಗೆ ಕುಸೀದಿಗಳು ಎಂದರೆ ಬಡ್ಡಿಯಿಂದ ಜೀವಿಸುವವರು ಎಂದರ್ಥವಿರುವುದು. ಈ ಶಬ್ದಕ್ಕೆ ಯಾಸ್ಕರು ನಿರ್ವಚನವನ್ನು ಹೇಳಿದಾರೆ—

> **ಬೇಕನಾಟಾನ್—ಬೇಕನಾಟಾಃ ಖಲು ಕುಸೀದಿನೋ ಭವಂತಿ ದ್ವಿಗುಣಕಾರಿಣೋ ವಾ ದ್ವಿಗುಣದಾಯಿನೋ ವಾ ದ್ವಿಗುಣಂ ಕಾಮಯಂತ ಇತಿ ವಾ** ಇಂದ್ರೋ ವಿಶ್ವಾನ್ಬೇಕನಾಟಾँ ಅಹರ್ದೃಶ ಉತ ಕ್ರತ್ವಾ ಪಣೀँರಭಿ । ಇಂದ್ರೋ ಯಃ ಸರ್ವಾನ್ ಬೇಕನಾಟಾನಹರ್ದೃಶಃ ಸೂರ್ಯದೃಶೋ ಯ ಇಮಾನ್ಯಹಾನಿ ಪಶ್ಯಂತಿ ನ ಪರಾಣೀತಿ ವಾಭಿಭವತಿ ಕರ್ಮಣಾ ಪಣೀಂಶ್ಚ ವಣಿಜಃ ॥　　(ನಿ. ೬-೨೬)

**ಬೇಕನಾಟಾಃ** ಎಂಬ ಶಬ್ದಕ್ಕೆ ದುಬಾರಿ ಹಣವನ್ನು ಬಡ್ಡಿರೂಪದಲ್ಲಿ ವಸೂಲು ಮಾಡುವವರು ಎಂದರೆ ಬಡ್ಡಿಯೂ ಸೇರಿ ಸಾಲಕೊಟ್ಟ ಹಣಕ್ಕೆ ಎರಡರಷ್ಟನ್ನು ವಸೂಲುಮಾಡುವವರು ಅಥವಾ ಯಾವುದಾದರೂ ಹೆಚ್ಚು ಎಂದರೆ ಸಾಲದ ಎರಡರಷ್ಟು ಬೆಲೆಬಾಳುವ ಸ್ವತ್ತಿನ ಆಧಾರದ ಮೇಲೆ ಸಾಲಕೊಡುವವರು ಅಥವಾ ಕೊಟ್ಟ ಸಾಲದ ಮೊಬಲಿಗಿನ ಎರಡಷ್ಟು ತಮಗೆ ಬರಬೇಕೆಂದು ಅಪೇಕ್ಷಿಸುವವರು ಎಂದರ್ಥವಿರುವುದು.

ಇಂದ್ರನು ಅತ್ಯಾಶೆಯಿಂದ ಕೂಡಿದ ಲೇವಾದೇವಿ ವ್ಯಾಪಾರವನ್ನು ಮಾಡುವ ಅಪ್ರಮಾಣಿಕ ವರ್ತಕರನ್ನು ಶಿಕ್ಷಿಸುವನು.

ಇಂದ್ರನು ಅತ್ಯಂತ ಹೆಚ್ಚು ಬಡ್ಡಿಯನ್ನು ತೆಗೆದುಕೊಳ್ಳುವ ದಯಾರಹಿತರಾದ ದುಷ್ಟವರ್ತಕರನ್ನು ಶಿಕ್ಷಿಸುವನು. ಆ ವರ್ತಕರ ತಮ್ಮ ಆಗಿನಕಾಲದ ಸಂದರ್ಭವನ್ನು ಮಾತ್ರ ಗಮನಿಸಿ ಮುಂದಾಲೋಚನೆಯಿಲ್ಲದೆ ತಮ್ಮ ವ್ಯಾಪಾರವು ನ್ಯಾಯವಾದುದೇ ಅಲ್ಲವೇ ಎಂಬುದನ್ನು ಗಮನಿಸದೆ ಇರುವವರು. ವರ್ತಕರು ಎಂದರೆ ವ್ಯಾಪಾರ ಮಾಡುವವರು ಇಂತಹ ದುಷ್ಟವ್ಯಾಪಾರಗಾರರನ್ನು ಇಂದ್ರನು ಶಿಕ್ಷಿಸುವನು ಎಂದಭಿಪ್ರಾಯವು.

॥ ಸಂಹಿತಾಪಾಠಃ ॥

ವಯಂ ಘಾ ತೇ ಅಪೂರ್ವ್ಯೇಂದ್ರ ಬ್ರಹ್ಮಾಣಿ ವೃತ್ರಹನ್ ।
ಪುರೂತಮಾಸಃ ಪುರುಹೂತ ವಜ್ರಿವೋ ಭೃತಿಂ ನ ಪ್ರ ಭರಾಮಸಿ ॥ ೧೧ ॥

॥ ಪದಪಾಠಃ ॥

ವಯಂ । ಘ । ತೇ । ಅಪೂರ್ವ್ಯಾ । ಇಂದ್ರ । ಬ್ರಹ್ಮಾಣಿ । ವೃತ್ರ್ಽಹನ್ ।
ಪುರುಽತಮಾಸಃ । ಪುರುಽಹೂತ । ವಜ್ರಿಽವಃ । ಭೃತಿಂ । ನ । ಪ್ರ । ಭರಾಮಸಿ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಯಂ ಘ ಖಲು ತೇ ತವಾಪೂರ್ವ್ಯಾ ನೂತನಾನಿ ಬ್ರಹ್ಮಾಣಿ ಪರಿವೃಢಾನಿ ಸ್ತೋತ್ರಾಣಿ ಪ್ರ ಭರಾಮಸಿ ಸಂಭರಾಮಃ ಪುರೂತಮಾಸೋ ಬಹುತಮಾ ವಯಮೃತ್ವಿಗ್ಯಜಮಾನರೂಪೇಣ ವೃತ್ರಹನ್ ವೃತ್ರಸ್ಯ ಹಂತಃ ಪುರುಹೂತ ಬಹುಭಿರಾಹೂತ ಹೇ ವಜ್ರಿವೋ ವಜ್ರಯುಕ್ತೇಂದ್ರ । ಕಿಮಿವ । ಭೃತಿಂ ನ ಭೃತಿಮಿವ । ತಂ ಯಥಾ ನಿಯಮೇನ ಪ್ರಯಚ್ಛಂತಿ ತದ್ವತ್ । ನಿಯಮೇನ ಪ್ರದಾನತಾತ್ಪರ್ಯೋರ್ಭೃತಿದೃಷ್ಟಾಂತತ್ವಮವಿರುದ್ಧಂ ॥

॥ ಪ್ರತಿಪದಾರ್ಥ ॥

**ವೃತ್ರಹನ್**—ವೃತ್ರಹಂತಕನೂ । **ಪುರುಹೂತ**—ಅನೇಕರ ಸ್ತುತಿಗೆ ಪಾತ್ರನೂ । **ವಜ್ರಿವಃ**—ವಜ್ರಾಯುಧಧಾರಿಯೂ ಆದ । **ಇಂದ್ರ**—ಎಲೈ ಇಂದ್ರನೇ । **ಪುರೂತಮಾಸಃ**—ಋತ್ವಿಗ್ಯಜಮಾನಾದ್ಯನೇಕರ ರೂಪದಲ್ಲಿರುವ । **ವಯಂ ಘ**—ನಾವೇ । **ತೇ**—ನಿನ್ನನ್ನುದ್ದೇಶಿಸಿ । **ಭೃತಿಂ ನ**—ಕಾಣಿಕೆಯಂತೆ । **ಅಪೂರ್ವ್ಯಾ**—ನೂತನವಾದ । **ಬ್ರಹ್ಮಾಣಿ**—ಸ್ತುತಿಗಳನ್ನು । **ಪ್ರ ಭರಾಮಸಿ**—ಸಂಪಾದಿಸಿ ಅರ್ಪಿಸುತ್ತೇವೆ.

॥ ಭಾವಾರ್ಥ ॥

ವೃತ್ರಹಂತಕನೂ, ಅನೇಕರ ಸ್ತುತಿಗೆ ಪಾತ್ರನೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, ಋತ್ವಿಗ್ಯಜಮಾನಾದ್ಯನೇಕರೂಪದಲ್ಲಿರುವ ನಾವು ನಿನ್ನನ್ನುದ್ದೇಶಿಸಿ ನೂತನವಾಗಿ ನಿರ್ಮಿತವಾದ ಸ್ತುತಿಗಳನ್ನು ಕಾಣಿಕೆಯಂತೆ ಅರ್ಪಿಸುತ್ತೇವೆ.

## English Translation.

Indra, slayer of Vritra, invoked of many, we, your many worshippers, offer new hymns to you, thunderer, as your wages.

॥ ಸಂಹಿತಾಪಾಠಃ ॥

ಪೂರ್ವೀಶ್ಚಿದ್ಧಿ ತ್ವೇ ತುವಿಕೂರ್ಮಿನ್ನಾಶಸೋ ಹವಂತ ಇಂದ್ರೋತಯಃ ।
ತಿರಶ್ಚಿದರ್ಯಃ ಸವನಾ ವಸೋ ಗಹಿ ಶವಿಷ್ಠ ಶ್ರುಧಿ ಮೇ ಹವಂ ॥ ೧೨ ॥

॥ ಪದಪಾಠಃ ॥

ಪೂರ್ವೀಃ । ಚಿತ್ । ಹಿ । ತ್ವೇ ಇತಿ । ತುವಿಽಕೂರ್ಮಿನ್ । ಆಽಶಸಃ । ಹವಂತೇ । ಇಂದ್ರ । ಊತಯಃ ।
ತಿರಃ । ಚಿತ್ । ಅರ್ಯಃ । ಸವನಾ । ಆ । ವಸೋ ಇತಿ । ಗಹಿ । ಶವಿಷ್ಠ । ಶ್ರುಧಿ । ಮೇ । ಹವಂ ॥ ೧೨ ॥

|| ಸಾಯಣಭಾಷ್ಯಂ ||

ಹೇ ತುವಿಕೂರ್ಮಿನ್ ಬಹುಕರ್ಮನ್ನಿಂದ್ರ ತ್ವೇ ತ್ವಯಿ ಪೂರ್ವೀರ್ಬಹೂನ್ಯಾಶಸ ಆಶಂಸನಾನಿ ಸ್ಥಿತಾನಿ ತಥೋತಯೋ ರಕ್ಷಾಶ್ಚ ತ್ವಯ್ಯವಸ್ಥಿತಾ ಲಬ್ಧ್ವಂ ಹವಂತ ಆಹ್ವಯಂತಿ ಸ್ತೋತಾರೋಽನ್ಯೇ । ಅತೋಽರ್ಯೋಽರಿಃ ಸವನಾ ಸವನಾನಿ ತಿರಶ್ಚಿತ್ತಿರಸ್ಕೃತ್ಯಾರೀನ್ಸ್ವಾ ತಿರಸ್ಕೃತ್ಯಾಸ್ಮತ್ಸವನಾನ್ಯಭಿಲಕ್ಷ್ಯ ಹೇ ವಸೋ ವಾಸಕೇಂದ್ರ ಆ ಗಹಿ । ಆಗಚ್ಛ । ಅತೋ ಹೇ ಶವಿಷ್ಠಾತಿಶಯೇನ ಬಲವನ್ ಮೇ ಹವಂ ಶ್ರುಧಿ । ಶೃಣು ॥

। ಪ್ರತಿಪದಾರ್ಥ ।

**ತುವಿಕೂರ್ಮಿನ್**—ಅನೇಕ ಕರ್ಮಕರ್ತನಾದ । **ಇಂದ್ರ**—ಎಲೈ ಇಂದ್ರನೇ । **ತ್ವೇ ಚಿದ್ಧಿ**—ನಿನ್ನಲ್ಲೇ ಲಬ್ಧವಾಗತಕ್ಕ । **ಪೂರ್ವೀಃ**—ಅನೇಕವಾದ । **ಆಶಸಃ**—ಇಷ್ಟಾರ್ಥಗಳನ್ನೂ । **ಊತಯಃ**—ರಕ್ಷಣೆಗಳನ್ನೂ ಅಪೇಕ್ಷಿಸಿ । **ಹವಂತೇ**—ಇತರ ಸ್ತುತಿಕರ್ತರೂ ನಿನ್ನನ್ನು ಕರೆಯುತ್ತಾರೆ । **ವಸೋ**—ವಸತಿ ದಾಯಕನಾದ ಎಲೈ ಇಂದ್ರನೇ । **ಅರ್ಯಃ**—ಶತ್ರುವಿನ । **ಸವನಾ**—ಯಜ್ಞಗಳನ್ನು । **ತಿರಶ್ಚಿತ್**—ತಿರಸ್ಕರಿಸಿ । **ಆ ಗಹಿ**—ನಮ್ಮಲ್ಲಿಗೆ ಬಾ । **ಶವಿಷ್ಠ**—ಅತ್ಯಧಿಕವಾದ ಶಕ್ತಿಯುಳ್ಳ ಎಲೈ ಇಂದ್ರನೇ । **ಮೇ**—ನನ್ನ । **ಹವಂ**—ಸ್ತುತಿಯನ್ನು । **ಶ್ರುಧಿ**—ಕೇಳು.

। ಭಾವಾರ್ಥ ।

ಅನೇಕ ಕರ್ಮಕರ್ತನಾದ ಎಲೈ ಇಂದ್ರನೇ, ನಿನ್ನಿಂದ ಮಾತ್ರ ಲಬ್ಧವಾಗತಕ್ಕ ಅನೇಕ ಇಷ್ಟಾರ್ಥಗಳನ್ನೂ, ರಕ್ಷಣೆಗಳನ್ನೂ ಅಪೇಕ್ಷಿಸಿ ಇತರ ಸ್ತುತಿಕರ್ತರೂ ನಿನ್ನನ್ನು ಕರೆಯುತ್ತಾರೆ. ವಸತಿದಾಯಕನಾದ ಎಲೈ ಇಂದ್ರನೇ, ಶತ್ರುವಿನ ಯಜ್ಞಗಳನ್ನು ತಿರಸ್ಕರಿಸಿ ನಮ್ಮಲ್ಲಿಗೆ ಬಾ. ಅತ್ಯಧಿಕವಾದ ಶಕ್ತಿಯುಳ್ಳ ಎಲೈ ಇಂದ್ರನೇ, ನನ್ನ ಸ್ತುತಿಯನ್ನು ಕೇಳು.

## English Translation.

Indra, doer of many great deeds, (other worshippers) invoke the manifold hopes and protections which abide in you; but rejecting the enemy's oblations, come to us, bestower of dwellings ; O mightiest, hear my appeal.

। ಸಂಹಿತಾಪಾಠಃ ।

ವಯಂ ಘಾ ತೇ ತ್ವೇ ಇದ್ವಿಂದ್ರ ವಿಪ್ರಾ ಅಪಿ ಷ್ಮಸಿ ।

ನಹಿ ತ್ವದನ್ಯಃ ಪುರುಹೂತ ಕಶ್ಚನ ಮಘವನ್ನಸ್ತಿ ಮರ್ಡಿತಾ ॥ ೧೩ ॥

॥ ಪದಪಾಠಃ ॥

ವಯಂ । ಘ । ತೇ । ತ್ವೇ ಇತಿ । ಇತ್ । ಊಂ ಇತಿ । ಇಂದ್ರ । ವಿಪ್ರಾಃ । ಅಪಿ । ಸ್ಮಸಿ ।

ನಹಿ । ತ್ವತ್ । ಅನ್ಯಃ । ಪುರುऽಹೂತ । ಕಃ । ಚನ । ಮಘऽವನ್ । ಅಸ್ತಿ । ಮರ್ಡಿತಾ ॥ ೧೩ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ವಯಂ ಘ ವಯಂ ಖಲು ತೇ ತವ ಸ್ವಭೂತಾಃ । ಅತಸ್ತ್ವೇ ಇತ್ತ್ವಯ್ಯೇವ ವಿಪ್ರಾ ಮೇಧಾವಿನಃ ಸ್ತೋತಾರೋऽಪಿ ಸ್ಮಸಿ । ಅಪಿಃ ಸಂಭಾವನಾಯಾಂ । ತ್ವದಧೀನಾ ಸ್ಮೇತ್ಯರ್ಥಃ । ಅನ್ಯಾನ್ನಿಹಾಯೇಂದ್ರ ಏವ ವರ್ತತೇ । ತಸ್ಮಿನ್ನೋ್ಯತಿಶಯ ಇತಿ ಆಹ । ಹೇ ಪುರುಹೂತ ತ್ವದನ್ಯಃ ಕಶ್ಚನ ಹೇ ಮಘವನ್ ಮರ್ಡಿತಾ ಸುಖಯಿತಾ ನಾಸ್ತಿ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ವಯಂ**—ನಾವು । **ತೇ ಘ**—ನಿನ್ನವರೇ ಆಗಿದ್ದೇವೆ । **ವಿಪ್ರಾಃ**—ಮೇಧಾವಿಗಳಾದ ನಾವು । **ತ್ವೇ ಇತ್**—ನಿನ್ನಲ್ಲಿಯೇ । **ಅಪಿ ಸ್ಮಸಿ**—ಆಶ್ರಯಿಸಿದ್ದೇವೆ । **ಪುರುಹೂತ**—ಅನೇಕರ ಆಹ್ವಾನಕ್ಕೆ ಪಾತ್ರನಾದವನೂ । **ಮಘವನ್**—ಧನವಂತನೂ ಆದ ಎಲೈ ಇಂದ್ರನೇ । **ತ್ವದನ್ಯಃ**—ನಿನಗಿಂತಲೂ ಬೇರೆಯವನಾದ । **ಕಶ್ಚನ**—ಯಾರೂ ಸಹ । **ಮರ್ಡಿತಾ**—ಸುಖಕಾರಕನಾಗಿ । **ನಹಿ ಅಸ್ತಿ**—ಖಂಡಿತ ಇಲ್ಲ.

॥ ಭಾವಾರ್ಥ ॥

ಎಲೈ ಇಂದ್ರನೇ, ನಾವು ನಿನ್ನವರೇ ಆಗಿದ್ದೇವೆ. ಮೇಧಾವಿಗಳಾದ ನಾವು ನಿನ್ನನ್ನೇ ಆಶ್ರಯಿಸಿದ್ದೇವೆ. ಅನೇಕರ ಆಹ್ವಾನಕ್ಕೆ ಪಾತ್ರನಾದವನೂ, ಧನವಂತನೂ ಆದ ಎಲೈ ಇಂದ್ರನೇ, ನಿನಗಿಂತಲೂ ಬೇರೆ ಯಾರೂ ನಿನ್ನಷ್ಟು ಸುಖಕಾರಕನಾಗಿ ಖಂಡಿತ ಇಲ್ಲ.

## English Translation.

Indra, we are yours, therefore we, your worshippers, depend **on you**; other than you, Maghavan, invoked of many, there is no giver of happiness.

॥ ಸಂಹಿತಾಪಾಠಃ ॥

ತ್ವಂ ನೋ ಅಸ್ಯಾ ಅಮತೇರುತ ಕ್ಷುಧೋ೩ ಭಿಶಸ್ತೇರವ ಸ್ಪೃಧಿ ।

ತ್ವಂ ನ ಊತೀ ತವ ಚಿತ್ರಯಾ ಧಿಯಾ ಶಿಕ್ಷಾ ಶಚಿಷ್ಠ ಗಾತುವಿತ್ ॥೧೪ ॥

|| ಪದಪಾಠಃ ||

ತ್ವಂ | ನಃ | ಅಸ್ಯಾಃ | ಅಮತೇಃ | ಉತ | ಕ್ಷುಧಃ | ಅಭಿಽಶಸ್ತೇಃ | ಅವ | ಸ್ಪೃಧಿ |

ತ್ವಂ | ನಃ | ಊತೀ | ತವ | ಚಿತ್ರಯಾ | ಧಿಯಾ | ಶಿಕ್ಷ | ಶಚಿಷ್ಠ | ಗಾತುಽವಿತ್ || ೧೪ ||

|| ಸಾಯಣಭಾಷ್ಯಂ ||

ಹೇ ಇಂದ್ರ ತ್ವಂ ನೋಽಸ್ಮಾಕಮಸ್ಯಾ ಅಮತೇರ್ದಾರಿದ್ರ್ಯಾತ್ಮಿಕಾಯಾ ಉತಾಪಿ ಚ ಕ್ಷುಧೋಽಭಿಶಸ್ತೇರ್ನಿಂದಾಯಾಶ್ಚ ಸಕಾಶಾದವ ಸ್ಪೃಧಿ | ಅವಮೋಚಯ | ಕಿಂಚ ತ್ವಂ ನೋಽಸ್ಮಭ್ಯಂ ತವೋತ್ಯೋತ್ಯಾ ಚಿತ್ರಯಾ ಧಿಯಾ ವಿಚಿತ್ರೇಣ ಕರ್ಮಣಾ ಶಿಕ್ಷ | ದೇಹ್ಯಭಿಮತಂ | ಹೇ ಶವಿಷ್ಠ ಗಾತುವಿನ್ಮಾರ್ಗಜ್ಞ ಉಪಾಯಜ್ಞಸ್ತ್ವಂ ||

|| ಪ್ರತಿಪದಾರ್ಥ ||

ಶವಿಷ್ಠ—ಅತ್ಯತಿಶಯವಾದ ಶಕ್ತಿಯುಳ್ಳವನೂ | ಗಾತುವಿತ್—ಸನ್ಮಾರ್ಗವನ್ನು ತಿಳಿದವನೂ ಆದ ಎಲೈ ಇಂದ್ರನೇ | ತ್ವಂ—ನೀನು | ನಃ—ನಮ್ಮನ್ನು | ಅಸ್ಯಾಃ ಅಮತೇಃ—ದಾರಿದ್ರ್ಯರೂಪವಾದ ಈ ದುಷ್ಟ ಶಕ್ತಿಯಿಂದಲೂ | ಉತ—ಮತ್ತು | ಕ್ಷುಧಃ - ಹಸಿವಿನಿಂದಲೂ | ಅಭಿಶಸ್ತೇಃ—ನಿಂದಾವಾಕ್ಯಗಳಿಂದಲೂ | ಅವ ಸ್ಪೃಧಿ—ಬೇರೆಮಾಡು | ತ್ವಂ—ನೀನು | ನಃ—ನಮಗೆ | ತವ—ನಿನ್ನ | ಊತೀ—ರಕ್ಷಣೆಯಿಂದಲೂ | ಚಿತ್ರಯಾ—ನಾನಾ ವಿಧವಾದ | ಧಿಯಾ—ಕರ್ಮಗಳಿಂದಲೂ | ಶಿಕ್ಷ—ನಮ್ಮ ಇಷ್ಟಾರ್ಥಗಳನ್ನು ಕೊಡು.

|| ಭಾವಾರ್ಥ ||

ಅತ್ಯತಿಶಯವಾದ ಶಕ್ತಿಯುಳ್ಳವನೂ, ಸನ್ಮಾರ್ಗವನ್ನು ತಿಳಿದವನೂ ಆದ ಎಲೈ ಇಂದ್ರನೇ, ನೀನು ದಾರಿದ್ರ್ಯ ರೂಪವಾದ ಈ ದುಷ್ಟಶಕ್ತಿಯಿಂದಲೂ, ಹಸಿವಿನಿಂದಲೂ, ನಿಂದಾವಾಕ್ಯಗಳಿಂದಲೂ ಬೇರೆಮಾಡು. ನಿನ್ನ ರಕ್ಷಣೆ ಯಿಂದಲೂ, ನಾನಾವಿಧವಾದ ಕರ್ಮಗಳಿಂದಲೂ ನಮಗೆ ನಮ್ಮ ಇಷ್ಟಾರ್ಥಗಳನ್ನು ಒದಗಿಸಿಕೊಡು

## English Translation.

Deliver us from this poverty, hunger, and calumny; give us (our desire) by your protection and wondrous working; O mightiest, you know the right way.

| ಸಂಹಿತಾಪಾಠಃ |

ಸೋಮಮು ಇಂದ್ರಃ ಸುತೋ ಅಸ್ತು ಕಲಯೋ ಮಾ ಬಿಭೀತನ |

ಅಪೇದೇಷ ಧ್ವಸ್ಮಾಯತಿ ಸ್ವಯಂ ಘೈಷೋ ಅಪಾಯತಿ || ೧೫ ||

‖ ಪದಪಾಠಃ ‖

ಸೋಮಃ । ಇತ್ । ವಃ । ಸುತಃ । ಅಸ್ತು । ಕಲಯಃ । ಮಾ । ಬಿಭೀತನ ।
ಅಪ । ಇತ್ । ಏಷಃ । ಧ್ವಸ್ಮಾ । ಅಯತಿ । ಸ್ವಯಂ । ಘ । ಏಷಃ । ಅಪ । ಅಯತಿ ‖ ೧೫ ‖

‖ ಸಾಯಣಭಾಷ್ಯಂ ‖

ಸೋಮಃ ಸುತೋಽಭಿಷುತೋ ವೋ ಯುಷ್ಮಾಕಂ ಸಂಬಂಧ್ಯಸ್ತ್ವಿತ್ । ಭವತ್ವೇವೇಂದ್ರಾಯ । ಹೇ ಕಲಯಃ । ಕಲಿಮಹರ್ಷೇರ್ಜಾತಯಃ ಪುತ್ರಾಶ್ಚಾತ್ರ ಸಂಬೋಧ್ಯಂತೇ । ಯೂಯಂ ಮಾ ಬಿಭೀತನ । ಭೀತಾ ಮಾ ಭವತ । ಭೀತ್ಯಭಾವೇ ಕಾರಣಮಾಹ । ಏಷ ಧ್ವಸ್ಮಾ ಧ್ವಂಸಕೋ ರಾಕ್ಷಸಾದಿರಪಾಯತಿ । ಅಪಗಚ್ಛತ್ಯೇವೇಂದ್ರಸಾಮರ್ಥ್ಯಾತ್ । ಸ್ವಯಂ ಘ ಸ್ವಯಮೇವೈಷೋಽಪಾಯತಿ । ಉ ಇತಿ ಪೂರಣಃ । ಪುನರುಕ್ತಿರ್ದಾರ್ಢ್ಯಾರ್ಥಾ ‖

‖ ಪ್ರತಿಪದಾರ್ಥ ‖

ಕಲಯಃ—ಎಲೈ ಕಲಿಮಹರ್ಷಿಯ ಸಂಬಂಧಿಗಳೇ । ವಃ--ನಿಮ್ಮಿಂದ । ಸುತಃ—ಹಿಂಡಿರುವ । ಸೋಮಃ—ಸೋಮವು । ಅಸ್ತು ಇತ್—ಇಂದ್ರಾರ್ಥವಾಗಿಯೇ ವಿನಿಯುಕ್ತವಾಗಿರಲಿ । ಮಾ ಬಿಭೀತನ—ಬೆದರಬೇಡಿರಿ । ಧ್ವಸ್ಮಾ—ಧ್ವಂಸಕನಾದ । ಏಷಃ—ಈ ರಾಕ್ಷಸನು । ಅಪಾಯತಿ ಇತ್—ದೂರ ತೊಲಗುತ್ತಾನೆ । ಸ್ವಯಂ ಘ—ತಾನಾಗಿಯೇ । ಏಷಃ—ಇವನು । ಅಪಾಯತಿ—ದೂರಕ್ಕೆ ತೊಲಗುತ್ತಾನೆ.

‖ ಭಾವಾರ್ಥ ‖

ಎಲೈ ಕಲಿಮಹರ್ಷಿಯ ಸಂಬಂಧಿಗಳೇ, ನಿಮ್ಮಿಂದ ಹಿಂಡಿರುವ ಈ ಸೋಮವು ಇಂದ್ರಾರ್ಪಣೆಗಾಗಿಯೇ ವಿನಿಯುಕ್ತವಾಗಿರಲಿ. ಬೆದರಬೇಡಿರಿ. ಧ್ವಂಸಕನಾದ ಈ ರಾಕ್ಷಸನು ದೂರ ತೊಲಗುತ್ತಾನೆ. ಇವನು ತಾನಾಗಿಯೇ ತೊಲಗಿ ಹೋಗುತ್ತಾನೆ.

## English Translation.

Let your effused Soma juice be only (for Indra); O sons of Kali, fear not; that malignant (spirit) departs, of his own accord he departs.



# ಅರವತ್ತೇಳನೆಯ ಸೂಕ್ತವು

‖ ಸಾಯಣಭಾಷ್ಯಂ ‖

ತ್ಯಾನ್ನ್ವಿತ್ಯೇಕವಿಂಶತ್ಯೃಚಮಷ್ಟಮಂ ಸೂಕ್ತಂ । ಅತ್ರಾನುಕ್ರಮಣಿಕಾ । ತ್ಯಾನ್ನು ಸೈಕಾ ಮತ್ಸ್ಯಃ ಸಾಂಮದೋ ಮೈತ್ರಾವರುಣಿರ್ಮಾನ್ಯೋ ವಾ ಬಹವೋ ವಾ ಮತ್ಸ್ಯಾ ಜಾಲನದ್ಧಾ ಆದಿತ್ಯಾನಸ್ತುವನ್ । ಸಂಮದಾಖ್ಯಸ್ಯ ಮಹಾಮೀನಸ್ಯ ಪುತ್ರೋ ಮತ್ಸ್ಯೋ ಯದ್ವಾ ಮಿತ್ರಾವರುಣಯೋಃ ಪುತ್ರೋ

ಮಾನ್ಯೋಽಥವಾ ಬಹವೋ ವಾ ಮತ್ಸ್ಯಾ ಜಾಲನದ್ಧಾಃ ಸಂತೋ ಬಂಧನಮೋಕ್ಷಾಯಾದಿತ್ಯಾನಸ್ತುವನ್ I ಅತಸ್ತ ಏವರ್ಷಯಃ I ಪರಂ ಗಾಯತ್ರಂ ಪ್ರಾಗ್ಘ್ವತ್ಸಪ್ರೇರಿತಿ ಪರಿಭಾಷಯಾ ಗಾಯತ್ರೀ ಛಂದಃ I ಆದಿತ್ಯಾ ದೇವತಾ II ಸೂಕ್ತವಿನಿಯೋಗೋ ಲೈಂಗಿಕಃ II

ಅನುವಾದವು—ತ್ಯಾನ್ನು ಎಂಬ ಈ ಸೂಕ್ತವು ಏಳನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—ತ್ಯಾನ್ನು ಸೈಕಾ ಮತ್ಸ್ಯಃ ಸಾಂಮದೋ ಮೈತ್ರಾವರುಣಿರ್ವಾನ್ಯೋ ವಾ ಬಹವೋ ವಾ ಮತ್ಸ್ಯಾ ಜಾಲನದ್ಧಾ ಆದಿತ್ಯಾನಸ್ತುವನ್ ಎಂದು ಹೇಳಿರುವುದು. ಸಂಮದ ಮಹಾಮೀನನ ಪುತ್ರನಾದ ಮತ್ಸ್ಯನೆಂಬುವನು ಅಥವಾ ಮಿತ್ರಾವರುಣರ ಪುತ್ರನಾದ ಮಾನ್ಯ ಅಥವಾ ಬಹವ ಎಂಬುವನು ಅಥವಾ ಬಲೆಯಲ್ಲಿ ಸಿಕ್ಕಿಬಿದ್ದಿದ್ದ ಮೀನುಗಳು ಬಲೆಯಿಂದ ತಮ್ಮ ಬಿಡಿಸಬೇಕೆಂದು ಆದಿತ್ಯರನ್ನು ಈ ಸೂಕ್ತದಿಂದ ಸ್ತುತಿಸಿರುವವು. ಆದ್ದರಿಂದ ಈ ಸೂಕ್ತಕ್ಕೆ ಅವರೇ ಋಷಿಗಳು; ಆದಿತ್ಯರು ದೇವತೆಯು; ಗಾಯತ್ರೀಛಂದಸ್ಸು. ಸೂಕ್ತವಿನಿಯೋಗವು ಲೈಂಗಿಕವು.

## ಸೂಕ್ತ—೬೭

ಮಂಡಲ—೮ II ಅನುವಾಕ—೭ II ಸೂಕ್ತ—೬೭ II
ಅಷ್ಟಕ—೬ II ಅಧ್ಯಾಯ—೪ II ವರ್ಗ—೫೧, ೫೨, ೫೩, ೫೪ II

I ಸೂಕ್ತದಲ್ಲಿರುವ ಋಕ್ಸಂಖ್ಯೆ—೨೧ II
II ಋಷಿಃ—ಮತ್ಸ್ಯಃ ಸಾಂಮದೋ ಮಾನ್ಯೋ ವಾ ಮೈತ್ರಾವರುಣಿರ್ಬಹವೋ ವಾ ಮತ್ಸ್ಯಾ ಜಾಲನದ್ಧಾಃ II
II ದೇವತಾ—ಆದಿತ್ಯಾಃ I
II ಛಂದಃ—ಗಾಯತ್ರೀ II

I ಸಂಹಿತಾಪಾಠಃ I

ತ್ಯಾನ್ನು ಕ್ಷತ್ರಿಯಾँ ಅವ ಆದಿತ್ಯಾನ್ಯಾಚಿಷಾಮಹೇ I
ಸುಮೃಳೀಕಾँ ಅಭಿಷ್ಟಯೇ II ೧ II

I ಪದಪಾಠಃ I

ತ್ಯಾನ್ I ನು I ಕ್ಷತ್ರಿಯಾನ್ I ಅವಃ I ಆದಿತ್ಯಾನ್ I ಯಾಚಿಷಾಮಹೇ I
ಸುಽಮೃಳೀಕಾನ್ I ಅಭಿಷ್ಟಯೇ II ೧ II

II ಸಾಯಣಭಾಷ್ಯಂ II

ತ್ಯಾಂಸ್ತಾನಾದಿತ್ಯಾನ್ ಕ್ಷತ್ರಿಯಾಞ್ಚಾತ್ಯಾ ಕ್ಷತ್ರಿಯಾನವೋ ರಕ್ಷಣಂ ಯಾಚಿಷಾಮಹೇ I ಯಾಚಾಮಹೇ I ಕೀದೃಶಾನ್ I ಸುಮೃಳೀಕಾನ್ ಸುಷ್ಠು ಸುಖಯಿತೄನ್ I ಕಿಮರ್ಥಂ I ಅಭಿಷ್ಟಯೇಽಭಿಗಮನಾಯಾಭಿಮತಾಯ ವಾ I ಮತ್ಸ್ಯಪಕ್ಷೇ ಜಾಲನಿರ್ಗಮನಂ ಪ್ರಾರ್ಥಿತಮಿತರಪಕ್ಷೇಽಭಿಮತಮಿತಿ ವಿವೇಕಃ II

॥ ಪ್ರತಿಪದಾರ್ಥ ॥

ಸುಮೃಳೀಕಾನ್—ಉತ್ತಮವಾದ ಸುಖವನ್ನು ಕೊಡತಕ್ಕವರೂ । ಕ್ಷತ್ರಿಯಾನ್—ಕ್ಷತ್ರಿಯ ವಂಶಕ್ಕೆ ಸೇರಿದವರೂ ಆದ । ತ್ಯಾನ್ನು ಆದಿತ್ಯಾನ್—ಆದಿತ್ಯರನ್ನೇ । ಅಭಿಷ್ಟಯೇ—ಇಷ್ಟಾರ್ಥಸಿದ್ಧಿಗಾಗಿ । ಅವಃ—ರಕ್ಷಣವನ್ನು । ಯಾಚಿಷಾಮಹೇ—ಯಾಚಿಸುತ್ತೇವೆ.

॥ ಭಾವಾರ್ಥ ॥

ಉತ್ತಮವಾದ ಸುಖವನ್ನು ಕೊಡತಕ್ಕವರೂ, ಕ್ಷತ್ರಿಯವಂಶಕ್ಕೆ ಸೇರಿದವರೂ, ಪ್ರಸಿದ್ಧರೂ ಆದ ಆದಿತ್ಯರನ್ನೇ ನಮ್ಮ ಇಷ್ಟಾರ್ಥಸಿದ್ಧಿಗಾಗಿ ರಕ್ಷಣವನ್ನು ಯಾಚಿಸುತ್ತೇವೆ.

**English Translation.**

We solicit for protection those Kshatriyas, the Adıtyas who bless (their votaries) abundantly to the attainment of their desires.

॥ ಸಂಹಿತಾಪಾಠಃ ॥

ಮಿತ್ರೋ ನೋ ಅತ್ಯಂಹತಿಂ ವರುಣಃ ಪರ್ಷದರ್ಯಮಾ ।
ಆದಿತ್ಯಾಸೋ ಯಥಾ ವಿದುಃ ॥ ೨ ॥

॥ ಪದಪಾಠಃ ॥

ಮಿತ್ರಃ । ನಃ । ಅತಿ । ಅಂಹತಿಂ । ವರುಣಃ । ಪರ್ಷತ್ । ಅರ್ಯಮಾ ॥
ಆದಿತ್ಯಾಸಃ । ಯಥಾ । ವಿದುಃ ॥ ೨ ॥

॥ ಸಾಯಣಭಾಷ್ಯಂ ॥

ಮಿತ್ರೋ ವರುಣೋಽರ್ಯಮಾದಿತ್ಯಾಸ ಆದಿತ್ಯಾ ನೋಽಸ್ಮಾನಂಹತಿಮತಿ ಪರ್ಷತ್ । ಅತಿನಯಂತು । ತೇ ಯಥಾ ವಿದುಃ ಯೇನ ಪ್ರಕಾರೇಣ ದುಃಸಹಂ ಜಾನಂತಿ ತಥಾತಿ ಪರ್ಷದಿತಿ । ಇತರಪಕ್ಷೇಽಂಹತಿಂ ಪಾಪಮತಿ ಪರ್ಷದಿತಿ ॥

॥ ಪ್ರತಿಪದಾರ್ಥ ॥

ಯಥಾ—ಯಾವ ತಮ್ಮ ಶಕ್ತಿಯಿಂದ । ವಿದುಃ—ಅರಿತಿರುವರೋ ಅದೇ ರೀತಿಯಲ್ಲಿ । ಮಿತ್ರಃ—ಮಿತ್ರನೂ । ವರುಣಃ—ವರುಣನೂ । ಅರ್ಯಮಾ—ಅರ್ಯಮನೂ । ಆದಿತ್ಯಾಸಃ—ಆದಿತ್ಯರೂ । ನಃ—ನಮ್ಮನ್ನು । ಅಂಹತಿಂ—ದುಃಖದಿಂದ । ಅತಿ ಪರ್ಷತ್—ದೂರಕ್ಕೆ ದಾಟಿಸಲಿ.

॥ ಭಾವಾರ್ಥ ॥

ಮಿತ್ರ, ಅರ್ಯಮ, ವರುಣ ಮತ್ತು ಆದಿತ್ಯರು ಯಾವ ತಮ್ಮ ಶಕ್ತಿಯಿಂದ ಅರಿತಿರುವರೋ ಅದೇ ಶಕ್ತಿಯಿಂದ ನಮ್ಮನ್ನು ಆಪತ್ತಿನಿಂದ ದೂರಕ್ಕೆ ದಾಟಿಸಲಿ.

## English Translation.

May the Adityas, Mitra, Varuna, and Aryaman, bear us across our distress, as they know it well.

॥ ಸಂಹಿತಾಪಾಠಃ ॥

ತೇಷಾಂ ಹಿ ಚಿತ್ರಮುಕ್ಥ್ಯಂ೧ ವರೂಥಮಸ್ತಿ ದಾಶುಷೇ ।
ಆದಿತ್ಯಾನಾಮರಂಕೃತೇ ॥ ೩ ॥

॥ ಪದಪಾಠಃ ॥

ತೇಷಾಂ । ಹಿ । ಚಿತ್ರಂ । ಉಕ್ಥ್ಯಂ । ವರೂಥಂ । ಅಸ್ತಿ । ದಾಶುಷೇ ।
ಆದಿತ್ಯಾನಾಂ । ಅರಂऽಕೃತೇ ॥ ೩ ।

॥ ಸಾಯಣಭಾಷ್ಯಂ ॥

**ತೇಷಾಮಾದಿತ್ಯಾನಾಂ ಹಿ ಖಲು ಚಿತ್ರಂ ಚಾಯನೀಯಮುಕ್ಥ್ಯಂ ಸ್ತುತ್ಯಂ ವರೂಥಂ ಧನಮಸ್ತಿ ದಾಶುಷೇ ಹವಿರ್ದಾತ್ರೇऽರಂಕೃತೇऽರಂಕರ್ತ್ರೇ ಪರ್ಯಾಪ್ತಕಾರಿಣೇ ಯಜಮಾನಾಯ ದಾತವ್ಯಂ ಧನಮಸ್ತೀತಿ ॥**

॥ ಪ್ರತಿಪದಾರ್ಥ ॥

**ದಾಶುಷೇ**—ಹವಿಸ್ಸನ್ನರ್ಪಿಸುವ ಯಜಮಾನನಿಗೆ । **ಅರಂಕೃತೇ**—ತೃಪ್ತಿಪಡಿಸಲು ಸಾಕಾಗುವಷ್ಟು । **ಚಿತ್ರಂ**—ಆಕರ್ಷಕವಾದುದೂ । **ಉಕ್ಥ್ಯಂ**—ಪ್ರಶಸ್ಯವಾದುದೂ ಆದ । **ವರೂಥಂ**—ಧನವು । **ಅಸ್ತಿ**—ಯಾವುದಿದೆಯೋ ಅದು । **ತೇಷಾಂ**—ಪ್ರಸಿದ್ಧರಾದ । **ಆದಿತ್ಯಾನಾಂ ಹಿ**—ಆದಿತ್ಯರಿಗೇ ಸೇರಿದುದಾಗಿದೆ.

॥ ಭಾವಾರ್ಥ ॥

ಹವಿಸ್ಸನ್ನರ್ಪಿಸುವ ಯಜಮಾನನಿಗೆ ತೃಪ್ತಿಯನ್ನುಂಟುಮಾಡಲು ಸಾಕಾಗುವಷ್ಟು ಆಕರ್ಷಕವಾದುದೂ, ಪ್ರಶಸ್ಯವಾದುದೂ ಆದ ಯಾವ ಧನವಿದೆಯೋ ಅದೆಲ್ಲವೂ ಪ್ರಸಿದ್ಧರಾದ ಆದಿತ್ಯರಿಗೇ ಸೇರಿದುದಾಗಿದೆ.

## English Translation.

To those Adityas belongs wonderful wealth, worthy of all praise, (laid up) for the offerer of oblations and the sacrificer.

॥ ಸಂಹಿತಾಪಾಠಃ ॥

ಮಹಿ ವೋ ಮಹತಾಮವೋ ವರುಣ ಮಿತ್ರಾರ್ಯಮನ್ ।
ಅವಾಂಸ್ಯಾ ವೃಣೀಮಹೇ ॥ ೪ ॥

॥ ಪದಪಾಠಃ ॥

ಮಹಿ । ವಃ । ಮಹತಾಂ । ಅವಃ । ವರುಣ । ಮಿತ್ರ । ಅರ್ಯಮನ್ ।
ಅವಾಂಸಿ । ಆ । ವೃಣೀಮಹೇ ॥ ೪ ॥

॥ ಸಾಯಣಭಾಷ್ಯಂ ॥

ಹೇ ವರುಣಾದಯಃ ಮಹತಾಂ ವೋಽವೋ ರಕ್ಷಣಂ ಮಹಿ ಮಹದ್ದಾಶುಷೇ ಹವಿರ್ದಾತ್ರೇ ಕರಣೀಯಮಸ್ತಿ । ಅತೋಽವಾಂಸಿ ರಕ್ಷಣಾನ್ಯಾ ವೃಣೀಮಹೇ ॥

॥ ಪ್ರತಿಪದಾರ್ಥ ॥

**ವರುಣ**—ಎಲೈ ವರುಣನೇ । **ಮಿತ್ರ**—ಎಲೈ ಮಿತ್ರನೇ । **ಅರ್ಯಮನ್**—ಎಲೈ ಅರ್ಯಮನೇ । **ಮಹತಾಂ**—ಮಹತ್ಸ್ವರೂಪವುಳ್ಳ । **ವಃ**—ನಿಮ್ಮ । **ಅವಃ**—ರಕ್ಷಣವು । **ಮಹಿ**—ಅತ್ಯಧಿಕವಾದ ಶಕ್ತಿಯುಳ್ಳದ್ದಾಗಿದೆ । **ಅವಾಂಸಿ**—ನಿಮ್ಮ ರಕ್ಷಣೆಗಳನ್ನೇ । **ಆ ವೃಣೀಮಹೇ**—ನಾವು ಪ್ರಾರ್ಥಿಸಿ ಬೇಡುತ್ತೇವೆ.

॥ ಭಾವಾರ್ಥ ॥

ಎಲೈ ಮಿತ್ರ, ವರುಣ ಮತ್ತು ಅರ್ಯಮದೇವತೆಗಳೇ, ಮಹತ್ಸ್ವರೂಪವುಳ್ಳ ನಿಮ್ಮ ರಕ್ಷಣವು ಅತ್ಯಧಿಕವಾದ ಶಕ್ತಿಯುಳ್ಳದ್ದಾಗಿದೆ. ನಾವು ನಿಮ್ಮ ರಕ್ಷಣೆಗಳನ್ನೇ ಪ್ರಾರ್ಥಿಸಿ ಬೇಡುತ್ತೇವೆ.

## English Translation.

You are great, Varuna, Mitra, and Aryaman, and great is your protection ; your protections we implore.

॥ ಸಂಹಿತಾಪಾಠಃ ॥

ಜೀವಾನ್ನೋ ಅಭಿ ಧೇತನಾದಿತ್ಯಾಸಃ ಪುರಾ ಹಥಾತ್ ।
ಕದ್ಧ ಸ್ಥ ಹವನಶ್ರುತಃ ॥ ೫ ॥

॥ ಪದಪಾಠಃ ॥

ಜೀವಾನ್ । ನಃ । ಅಭಿ । ಧೇತನ । ಆದಿತ್ಯಾಸಃ । ಪುರಾ । ಹಥಾತ್ ।

ಕತ್ । ಹ । ಸ್ಥ । ಹವನಃಶ್ರುತಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಆದಿತ್ಯಾಸ ಆದಿತ್ಯಾಃ ನೋಽಸ್ಮಾನಿದಾನೀಂ ಜೀವಾಞ್ಜೀವತಃ ಸತೋಽಭಿ ಧೇತನ । ಅಭಿಧಾವತ । ಅಭಿಧಾವನಂ ಕುರುತ । ಪುರಾ ಹಥಾದ್ಧನನಾನ್ಮೃತೇಃ ಪೂರ್ವಂ । ಕತ್ಕ್ವೇ ಸ್ಥ । ಭವಥ । ಹೇ ಹವನಶ್ರುತ ಆಹ್ವಾನಶ್ರೋತಾರಃ । ಆಹ್ವಾನಂ ಶ್ರುತ್ವಾ ಶೀಘ್ರಮಾಗಚ್ಛತೇತಿ ॥

॥ ಪ್ರತಿಪದಾರ್ಥ ॥

ಹವನಶ್ರುತಃ—ನಮ್ಮ ಮೊರೆಯನ್ನು ಕೇಳತಕ್ಕ । ಆದಿತ್ಯಾಸಃ—ಎಲೈ ಆದಿತ್ಯರೇ । ಪುರಾ ಹಥಾತ್—ನಾವು ಮರಣವನ್ನು ಹೊಂದುವುದಕ್ಕೆ ಮುಂಚೆಯೇ । ಜೀವಾನ್—ನಾವು ಜೀವಿಸಿರುವಾಗಲೇ । ನಃ—ನಮ್ಮಲ್ಲಿಗೆ । ಅಭಿ ಧೇತನ—ಓಡಿಬನ್ನಿರಿ । ಕತ್ ಸ್ಥ—ಈಗ ಎಲ್ಲಿದ್ದೀರಿ?

॥ ಭಾವಾರ್ಥ ॥

ನಮ್ಮ ಮೊರೆಯನ್ನು ಕೇಳತಕ್ಕ ಎಲೈ ಆದಿತ್ಯರೇ, ನಾವು ಮರಣವನ್ನು ಹೊಂದುವುದಕ್ಕೆ ಮುಂಚೆಯೇ, ನಾವು ಜೀವಂತರಾಗಿರುವಾಗಲೇ ನಮ್ಮಲ್ಲಿಗೆ ಓಡಿಬನ್ನಿರಿ. ಈಗ ನೀವು ಎಲ್ಲಿದ್ದೀರಿ?

## English Translation.

Adityas, hasten to us ere our death, while we are yet alive; where are you, hearers of prayer?

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿರುವ ಅಭಿಧೇತನ ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾ ಯಾಸ್ಕರು—

> ಅಭಿಧೇತನ ॥ ಜೀವಾನ್ನೋ ಅಭಿಧೇತನಾದಿತ್ಯಾಸಃ ಪುರಾ ಹಥಾತ್ । ಕದ್ಧ ಸ್ಥ ಹವನಶ್ರುತಃ ॥ ಜೀವತೋ ನೋಽಭಿಧಾವತಾದಿತ್ಯಾಃ ಪುರಾ ಹನನಾತ್ ಕ್ವ ನು ಸ್ಥ ಹ್ವಾನಶ್ರುತ ಇತಿ । ಮತ್ಸ್ಯಾನಾಂ ಜಾಲಮಾಪನ್ನಾನಾಮೇತದಾರ್ಷಂ ವೇದಯಂತೇ । ಮತ್ಸ್ಯಾ ಮಧೌ ಉದಕೇ ಸ್ಯಂದಂತೇ ಮಾದ್ಯಂತೇಽನ್ಯೋನ್ಯಂ ಭಕ್ಷಣಾಯೇತಿ ವಾ । ಜಾಲಂ ಜಲಚರಂ ಭವತಿ ಜಲೇಭವಂ ವಾ ಜಲೇಶಯಂ ವಾ ॥ (ನಿ. ೬-೨೭)

ಎಂದು ನಿರ್ವಚನವನ್ನು ಹೇಳಿದಾರೆ. ಬಲೆಯಲ್ಲಿ ಸಿಕ್ಕಿಬಿದ್ದಿರುವ ಮೀನುಗಳು ಆದಿತ್ಯರನ್ನು ಮರೆಹೊಕ್ಕು ತಮ್ಮನ್ನು ಬಲೆಯಿಂದ ಬಿಡಿಸಬೇಕೆಂದು ಪ್ರಾರ್ಥಿಸಿರುತ್ತವೆ—ಎಲೈ ಆದಿತ್ಯರೇ, ಬಲೆಯಲ್ಲಿ ಸಿಕ್ಕಿಬಿದ್ದಿರುವ ನಾವುಗಳು ಕೊಲ್ಲಲ್ಪಡುವದಕ್ಕೆ ಮುಂಚಿತವಾಗಿಯೇ ನಮ್ಮನ್ನು ಬಲೆಯಿಂದ ಬಿಡಿಸಿ ಕಾಪಾಡಿ. ನಿಧಾನಮಾಡಿದಲ್ಲಿ ಬೆಸ್ತರು

ನಮ್ಮನ್ನು ಬಲೆಯಿಂದ ಬಿಡಿಸಿ, ಎಂದು ನಮ್ಮ ಪ್ರಾರ್ಥನೆಯನ್ನು ಕೇಳುತ್ತಿರುವ ನೀವು ಈಗ ಎಲ್ಲಿದ್ದೀರಿ? ಬೇಗನೆ ನಮ್ಮ ಬಳಿಗೆ ಓಡಿಬನ್ನಿ, ನಮ್ಮನ್ನು ಬಲೆಯಿಂದ ಬಿಡಿಸಿ, ಎಂದು ನಿರ್ವಚನದ ಅಭಿಪ್ರಾಯವು.

ಬಲೆಯಲ್ಲಿ ಸಿಕ್ಕಿಬಿದ್ದ ಮೀನುಗಳು ಆದಿತ್ಯರನ್ನು ಪ್ರಾರ್ಥಿಸಿರುವುದನ್ನು ಇಲ್ಲಿ ಹೇಳಿರುವುದೆಂದು ಋಷಿಯ ಅಭಿಪ್ರಾಯವು.

ಮತ್ಸ್ಯ ಶಬ್ದಕ್ಕೆ—ಮದೌ ಎಂದರೆ ಉದಕದಲ್ಲಿ ತೇಲುತ್ತಿರುವುದರಿಂದಾಗಲಿ ಅಥವಾ ಈ ಮೀನುಗಳು ಒಂದನ್ನೊಂದು ಭಕ್ಷಿಸುವುದರಿಂದಾಗಲಿ ಮೀನುಗಳಿಗೆ ಮತ್ಸ್ಯವೆಂಬ ಹೆಸರು ಬಂದಿದೆ ಎಂದು ರೂಪನಿಷ್ಪತ್ತಿಯು.

ಜಾಲಂ ಎಂದರೆ ಬಲೆಯು. ಜಲದಲ್ಲಿ ಈ ಬಲೆಯು ಚಲಿಸುವುದರಿಂದ ಅಥವಾ ನೀರಿನಲ್ಲಿ ಇದನ್ನು ಹಾಕಿರುವುದರಿಂದ ಅಥವಾ ನೀರಿನಲ್ಲಿ ಇದು ಬಿದ್ದಿರುವುದರಿಂದ ಬಲೆಗೆ ಜಾಲವೆಂದು ಹೆಸರು ಎಂದು ಜಾಲಶಬ್ದದ ನಿಷ್ಪತ್ತಿಯು.

|| ಸಂಹಿತಾಪಾಠಃ ||

ಯದ್ವಃ ಶ್ರಾಂತಾಯ ಸುನ್ವತೇ ವರೂಥಮಸ್ತಿ ಯಚ್ಛರ್ದಿಃ ।
ತೇನಾ ನೋ ಅಧಿ ವೋಚತ || ೬ ||

|| ಪದಪಾಠಃ ||

ಯತ್ । ವಃ । ಶ್ರಾಂತಾಯ । ಸುನ್ವತೇ । ವರೂಥಂ । ಅಸ್ತಿ । ಯತ್ । ಛರ್ದಿಃ ।
ತೇನ । ನಃ । ಅಧಿ । ವೋಚತ || ೬ ||

|| ಸಾಯಣಭಾಷ್ಯಂ ||

ಶ್ರಾಂತಾಯ ಕರ್ಮಣಃ ಸುನ್ವತೇಽಭಿಷುಣ್ವತೇ ಯಜಮಾನಾಯ ದಾತವ್ಯಂ ಯದ್ವರೂಥಂ ವರಣೀಯಂ ಧನಂ ವೋ ಯುಷ್ಮಾಕಮಸ್ತಿ ಯಚ್ಚ ಛರ್ದಿಃ ಸುಖವಾಸಯೋಗ್ಯಂ ಗೃಹಮಸ್ತಿ ತೇನ ದ್ವಯೇನಾಸ್ಮಾನ್ಪ್ರೀಣಯಿತ್ವಾ ನೋಽಸ್ಮಾನಧಿ ವೋಚತ । ಅಧಿವಚನಂ ಕುರುತ ||

|| ಪ್ರತಿಪದಾರ್ಥ ||

(ಎಲೈ ಆದಿತ್ಯರೇ) ಶ್ರಾಂತಾಯ—ಕರ್ಮದಿಂದ ಬಳಲಿದವನೂ । ಸುನ್ವತೇ—ಸೋಮವನ್ನು ಹಿಂಡಿ ಅರ್ಪಿಸುವವನೂ ಆದ ಯಜಮಾನನಿಗೆ ಕೊಡಬೇಕಾದ । ವಃ—ನಿಮ್ಮ । ವರೂಥಂ—ಪೂಜ್ಯವಾದ । ಯತ್—ಯಾವ ಧನವು । ಅಸ್ತಿ—ಇದೆಯೋ । ಯತ್—ಯಾವ । ಛರ್ದಿಃ—ವಾಸಯೋಗ್ಯವಾದ ಗೃಹವಿದೆಯೋ । ತೇನ—ಅದರೊಂದಿಗೆ ಬಂದು । ನಃ—ನಮಗೆ । ಅಧಿ ವೋಚತ—ಧೈರ್ಯವಾಕ್ಯಗಳನ್ನು ಕೊಡಿರಿ.

|| ಭಾವಾರ್ಥ ||

ಎಲೈ ಆದಿತ್ಯರೇ, ಕರ್ಮದಿಂದ ಬಳಲಿದವನೂ, ಸೋಮವನ್ನು ಹಿಂಡಿ ಅರ್ಪಿಸುವವನೂ ಆದ ಯಜಮಾನನಿಗೆ ಕೊಡಬೇಕಾದ ನಿಮ್ಮ ಪೂಜ್ಯವಾದ ಧನವು ಯಾವುದಿದೆಯೋ, ವಾಸಯೋಗ್ಯವಾದ ನಿಮ್ಮ ಯಾವ ಗೃಹವಿದೆಯೋ ಅದರೊಂದಿಗೆಲ್ಲ ಬಂದು ನಮಗೆ ಧೈರ್ಯವಾಕ್ಯಗಳನ್ನು ಹೇಳಿರಿ.

## English Translation.

Whatever wealth, whatever dwelling is yours (to give) to the wearied offerer of librations,—with these speak to us a kindly answer.

|| ಸಂಹಿತಾಪಾಠಃ ||

ಅಸ್ತಿ ದೇವಾ ಅಂಹೋರುರ್ವಸ್ತಿ ರತ್ನಮನಾಗಸಃ ।
ಆದಿತ್ಯಾ ಅದ್ಭುತೈನಸಃ || ೬ ||

|| ಪದಪಾಠಃ ||

ಅಸ್ತಿ । ದೇವಾಃ । ಅಂಹೋಃ । ಉರು । ಅಸ್ತಿ । ರತ್ನಂ । ಅನಾಗಸಃ ।
ಆದಿತ್ಯಾಃ । ಅದ್ಭುತ೯ಽಏನಸಃ || ೬ ||

|| ಸಾಯಣಭಾಷ್ಯಂ ||

**ಹೇ ದೇವಾಃ ಅಂಹೋರ್ಹಂತುಃ ಪಾಪಶೀಲಸ್ಯೋರ್ವಸ್ತಿ । ಮಹತ್ಪಾಪಮಸ್ತಿ । ಅನಾಗಸೋಽಪಾಪಸ್ಯ ರತ್ನಂ ರಮಣೀಯಂ ಸುಕೃತಂ ಶ್ರೇಯೋಽಸ್ತಿ । ತತೋ ಹೇ ಆದಿತ್ಯಾ ಅದ್ಭುತೈನಸೋಽಭೂತಪಾಪಾಃ । ಅತೋಽಸ್ಮದಭಿಮತಂ ಕುರುತೇತಿ ಭಾವಃ ||**

|| ಪ್ರತಿಪದಾರ್ಥ ||

**ದೇವಾಃ**— ದೇವತಾತ್ಮರಾದ । **ಆದಿತ್ಯಾಸಃ**—ಎಲೈ ಆದಿತ್ಯರೇ । **ಅಂಹೋಃ**— ಯಾವಾಗಲೂ ಪಾಪಕರ್ಮವನ್ನೇ ಮಾಡುವವನ ಪಾಪವು । **ಉರು**—ಅತ್ಯಧಿಕವಾಗಿಯೇ । **ಅಸ್ತಿ**—ಇರುತ್ತದೆ । **ರತ್ನಂ**— ನಿಮ್ಮಿಂದ ಕೊಡಲ್ಪಡುವ ರಮಣೀಯವಾದ ಧನವು । **ಅನಾಗಸಃ ಅಸ್ತಿ**—ಪಾಪರಹಿತನಿಗೆ ಮಾತ್ರವಿರುತ್ತದೆ । **ಅದ್ಭುತೈನಸಃ**— ನಾವು ಪಾಪರಹಿತರಾಗಿರುತ್ತೇವೆ.

|| ಭಾವಾರ್ಥ ||

ದೇವತಾತ್ಮರಾದ ಎಲೈ ಆದಿತ್ಯರೇ, ಯಾವಾಗಲೂ ಪಾಪಕರ್ಮವನ್ನೇ ಮಾಡುವವನ ಪಾಪವು ಅತ್ಯಧಿಕವಾಗಿಯೇ ಇರುತ್ತದೆ. ನಿಮ್ಮಿಂದ ಕೊಡಲ್ಪಡುವ ಧನವು ಪಾಪರಹಿತನಿಗೆ ಮಾತ್ರವಿರುತ್ತದೆ. ನಾವು ಪಾಪರಹಿತರಾಗಿದ್ದೇವೆ ಆದುದರಿಂದ ನಮಗೆ ಧನವನ್ನು ಒದಗಿಸಿ.

## English Translation.

Great, O deities, is (the guilt) of the sinner, but to the sinless is happiness ; Adityas, you are void of sin.

॥ ಸಂಹಿತಾಪಾಠಃ ॥

ಮಾ ನಃ ಸೇತುಃ ಸಿಷೇದಯಂ ಮಹೇ ವೃಣಕ್ತು ನಸ್ಪರಿ ।
ಇಂದ್ರ ಇದ್ಧಿ ಶ್ರುತೋ ವಶೀ ॥ ೮ ॥

॥ ಪದಪಾಠಃ ॥

ಮಾ । ನಃ । ಸೇತುಃ । ಸಿಸೇತ್ । ಅಯಂ । ಮಹೇ । ವೃಣಕ್ತು । ನಃ । ಪರಿ ।
ಇಂದ್ರಃ । ಇತ್ । ಹಿ । ಶ್ರುತಃ । ವಶೀ ॥ ೮ ॥

॥ ಸಾಯಣಭಾಷ್ಯಂ ॥

ಸೋಽಸ್ಮಾನ್ಸೇತುರ್ಬಂಧಕೋ ಜಾಲೋ ಮಾ ಸಿಷೇತ್ । ಮಾ ಬಧ್ನಾತು । ಸೋಽಸ್ಮಾನ್ಮಹೇ ಮಹತೇ ಕರ್ಮಣೇ ಪರಿ ವೃಣಕ್ತು । ಪರಿವರ್ಜಯತು ಜಾಲಾತ್ । ಕಃ । ಇಂದ್ರ ಇದಿಂದ್ರ ಏವ ಶ್ರುತೋ ವಿಶ್ರುತೋ ವಶೀ ಸರ್ವಸ್ಯ ವಶೀಕರ್ತಾ । ಸ ಪರಿ ವೃಣಕ್ತು ॥

॥ ಪ್ರತಿಪದಾರ್ಥ ॥

**ನಃ**—ನಮ್ಮನ್ನು । **ಸೇತುಃ**—ಬಂಧಕವಾದ ಬಲೆಯು । **ಮಾ ನಿಷೇತ್**—ಪ್ರತಿಬಂಧಿಸದಿರಲಿ । **ಶ್ರುತಃ**—ಪ್ರಖ್ಯಾತನೂ । **ವಶೀ**—ಸಕಲವನ್ನೂ ತನ್ನ ವಶದಲ್ಲಿಟ್ಟುಕೊಳ್ಳುವವನೂ ಆದ । **ಅಯಂ ಇಂದ್ರ ಇತ್**—ಈ ಇಂದ್ರನೇ । **ಮಹೇ**—ಮಹತ್ಕರ್ಮಸಾಧನೆಗಾಗಿ । **ನಃ**—ನಮ್ಮನ್ನು । **ಪರಿ ವೃಣಕ್ತು**—ಬಂಧಕವಾದ ಈ ಬಲೆಯಿಂದ ಬಿಡಿಸಲಿ.

॥ ಭಾವಾರ್ಥ ॥

ನಮ್ಮನ್ನು ಬಂಧಕವಾದ ಬಲೆಯು ಪ್ರತಿಬಂಧಿಸದಿರಲಿ. ಪ್ರಖ್ಯಾತನೂ, ಸಕಲವನ್ನೂ ತನ್ನ ವಶದಲ್ಲಿಟ್ಟುಕೊಳ್ಳುವವನೂ ಆದ ಈ ಇಂದ್ರನೇ, ಮಹತ್ಕಾರ್ಯಸಾಧನೆಗಾಗಿ ನಮ್ಮನ್ನು ಬಂಧಕವಾದ ಈ ಬಲೆಯಿಂದ ಬಿಡಿಸಲಿ.

## English Translation.

Let not the snare bind us ; may Indra, the renowned, the subduer of all, deliver us for a glorious act.

॥ ಸಂಹಿತಾಪಾಠಃ ॥

ಮಾ ನೋ ವೃಕಾಯ ರಿಪೂಣಾಂ ವೃಜಿನಾನಾಮವಿಷ್ಯವಃ ।
ದೇವಾ ಅಭಿ ಪ್ರ ಮೃಕ್ಷತ ॥ ೯ ॥

॥ ಪದಪಾಠಃ ॥

ಮಾ । ನಃ । ವೃಕಾಯ । ರಿಪೂಣಾಂ । ವೃಜಿನಾನಾಂ । ಅವಿಷ್ಯವಃ ।
ದೇವಾಃ । ಅಭಿ । ಪ್ರ । ಮೃಕ್ಷತ ॥ ೯ ॥

॥ ಸಾಯಣಭಾಷ್ಯಂ ॥

ಹೇ ಅವಿಷ್ಯವೋ ರಕ್ಷಿತುಮಿಚ್ಛಂತೋ ದೇವಾಃ ನೋಽಸ್ಮಾನ್ವೃಜಿನಾನಾಂ ಹಿಂಸಕಾನಾಂ ರಿಪೂಣಾಂ ವೃಕಾಯ । ವೃಕಿರ್ಹಿಂಸಾಕರ್ಮಾ । ಯುಕ್ತ್ವ್ಸ್ರೇಣ ಮರ್ಚಯಿತಾ ಸುಪೇಶಸಾ । ಆ. ಗೃ. ೧-೧೭-೧೫ । ಇತ್ಯಾದಿಷು ತಥಾ ದೃಷ್ಟತ್ವಾತ್ । ಹಿಂಸಕೇನ ಜಾಲೇನ ಮಾಭಿ ಪ್ರ ಮೃಕ್ಷತ । ಅಭಿಮರ್ಶನಮುಪರಿ ಜಾಲಸ್ಯ ಪ್ರೇರಣಂ ಮಾ ಕುರುತ । ಯದ್ವಾ । ವೃಕಾ ಜಾಲೇನ ಪ್ರಾಪ್ತಾ ಬಾಧಾ ನೋಽಸ್ಮಾಕಂ ಮಾ ಭವತು । ಹೇ ದೇವಾಃ ಯೂಯಂ ಚ ಪರಿಮಾರ್ಜಯತ । ಪರಿಹರತ ॥

॥ ಪ್ರತಿಪದಾರ್ಥ ॥

**ಅವಿಷ್ಯವಃ**—ನಮ್ಮನ್ನು ರಕ್ಷಿಸಲಿಚ್ಛಿಸುವ । **ದೇವಾಃ**—ಎಲೈ ದೇವತೆಗಳೇ । **ನಃ**—ನಮ್ಮನ್ನು । **ವೃಜಿನಾನಾಂ**—ಪಾಪಕರ್ಮಿಗಳಾದ । **ರಿಪೂಣಾಂ**—ಶತ್ರುಗಳ । **ವೃಕಾ**—ಹಿಂಸಕವಾದ ಬಲೆಯಿಂದ । **ಮಾ ಅಭಿ ಪ್ರ ಮೃಕ್ಷತ**—ಬಂಧಿತರೂ ಹಿಂಸಕರೂ ಆಗುವಂತೆ ಮಾಡಲವಕಾಶಕೊಡಬೇಡಿರಿ.

॥ ಭಾವಾರ್ಥ ॥

ನಮ್ಮನ್ನು ರಕ್ಷಿಸಲಿಚ್ಛಿಸುವ ಎಲೈ ದೇವತೆಗಳೇ, ಪಾಪಕರ್ಮಿಗಳಾದ ಶತ್ರುಗಳ ಹಿಂಸಕವಾದ ಬಲೆಯಿಂದ ನಾವು ಬಂಧಿತರೂ, ಹಿಂಸಿತರೂ ಆಗುವಂತೆ ಅವಕಾಶವನ್ನು ಶತ್ರುಗಳಿಗೆ ಕಲ್ಪಿಸಬೇಡಿರಿ.

## English Translation.

O deities, ready to protect, molest us not with the destructive net of our wicked enemies.

॥ ಸಂಹಿತಾಪಾಠಃ ॥

ಉತ ತ್ವಾಮದಿತೇ ಮಹ್ಯಹಂ ದೇವ್ಯುಪ ಬ್ರುವೇ ।
ಸುಮೃಳೀಕಾಮಭಿಷ್ಟಯೇ ॥ ೧೦ ॥

॥ ಪದಪಾಠಃ ॥

**ಉತ । ತ್ವಾಂ । ಅದಿತೇ । ಮಹಿ । ಅಹಂ । ದೇವಿ । ಉಪ । ಬ್ರುವೇ ।**

**ಸುऽಮೃಳೀಕಾಂ । ಅಭಿಷ್ಟಯೇ ॥ ೧೦ ॥**

॥ ಸಾಯಣಭಾಷ್ಯಂ ॥

**ಅಥಾನೇ ಪವಮಾನೇಷ್ಟಿಷೂತ ತ್ವಾಮದಿತ ಇತ್ಯನುವಾಕ್ಯಾ । ಸೂತ್ರಿತಂ ಚ । ಉತ ತ್ವಾಮದಿತೇ ಮಹಿ ಮಹೀಮೂ ಷು ಮಾತರಂ । ಆ. ೨-೧ । ಇತಿ ॥ ಆದಿತ್ಯಪಶೌ ವಪಾಯಾ ಅನುವಾಕ್ಯೇಯಮೇವ । ಸೂತ್ರಿತಂ ಚ । ಉತ ತ್ವಾಮದಿತೇ ಮಹ್ಯನೇಹೋ ನ ಉರುವ್ರಜೇ । ಆ. ೩-೮ । ಇತಿ ॥**

**ಹೇ ಮಹಿ ಮಹತ್ಯದಿತೇ ದೇವಮಾತರ್ದೇವಿ ತ್ವಾಮಹಂ ಮತ್ಸ್ಯಪ್ರಮುಖೋऽಹಮುಪ ಬ್ರುವೇ । ಉಪೇತ್ಯ ಸ್ತೌಮಿ । ಕೀದೃಶೀಂ । ಸುಮೃಳೀಕಾಂ ಸುಷ್ಠು ಸುಖಯಿತ್ರೀಂ । ಕಿಮರ್ಥಂ । ಅಭಿಷ್ಟಯೇऽಭಿಮತಾಯ ॥**

॥ ಪ್ರತಿಪದಾರ್ಥ ॥

**ಮಹಿ**—ಮಹತ್ಸ್ವರೂಪವುಳ್ಳವಳೂ । **ದೇವಿ**—ದೇವತಾತ್ಮಳೂ ಆದ । **ಅದಿತೇ**—ಎಲೈ ಅದಿತಿ ದೇವಿಯೇ । **ಸುಮೃಳೀಕಾಂ**—ಉತ್ತಮವಾದ ಸುಖಪ್ರದಳಾದ । **ತ್ವಾಂ**—ನಿನ್ನನ್ನು । **ಅಭಿಷ್ಟಯೇ**—ಇಷ್ಟಾರ್ಥಸಿದ್ಧಿಗಾಗಿ । **ಅಹಂ**—ಮಾನುಗಳಿಗೆ ಪ್ರಮುಖನಾದ ನಾನು । **ಉಪ ಬ್ರುವೇ**—ಸ್ತುತಿಸುತ್ತೇನೆ

॥ ಭಾವಾರ್ಥ ॥

ಮಹತ್ಸ್ವರೂಪವುಳ್ಳವಳೂ, ದೇವತಾತ್ಮಳೂ ಆದ ಎಲೈ ಆದಿತಿದೇವಿಯೇ, ಉತ್ತಮವಾದ ಸುಖಪ್ರದಳಾದ ನಿನ್ನನ್ನು ಇಷ್ಟಾರ್ಥಸಿದ್ಧಿಗಾಗಿ ನಾನು ಸ್ತುತಿಸುತ್ತೇನೆ.

## English Translation.

I address you who give abundant delight, the great goddess Aditi, for the attainment of my desire.

॥ ವಿಶೇಷವಿಷಯಗಳು ॥

ಅಗ್ನ್ಯಾಧಾನದ ಪವಮಾನೇಷ್ಟಿಗಳಲ್ಲಿ—**ಉತ ತ್ವಾಮದಿತೇ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಉತ ತ್ವಾಮದಿತೇ ಮಹಿ ಮಹೀಮೂ ಷು ಮಾತರಂ** ಎಂಬ ಸೂತ್ರದಿಂದ (ಆ. ೨-೧) ವಿವೃತವಾಗಿರುವುದು. ಮತ್ತೂ ಆದಿತ್ಯನನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ವಪಾಹೋಮವನ್ನು ಮಾಡುವಾಗ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ಉತ ತ್ವಾಮದಿತೇ ಮಹ್ಯನೇಹೋ ನ ಉರುವ್ರಜೇ** ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

ಅಹಂ— ಈ ಋಕ್ಕಿನಲ್ಲಿ ಸೂಕ್ತದ್ರಷ್ಟೃವಾದ ಋಷಿಯು ತಾನು ವಿಶಾನುಗಳಿಗೆ ಪ್ರಮುಖನೆಂದು ಹೇಳಿಕೊಂಡಿರುವನು.

|| ಸಂಹಿತಾಪಾಠಃ ||

ಪರ್ಷಿ ದೀನೇ ಗಭೀರ ಆँ ಉಗ್ರಪುತ್ರೇ ಜಿಘಾಂಸತಃ ।

ಮಾಕಿಸ್ತೋಕಸ್ಯ ನೋ ರಿಷತ್ ॥ ೧೧ ॥

। ಪದಪಾಠಃ ।

ಪರ್ಷಿ । ದೀನೇ । ಗಭೀರೇ । ಆ । ಉಗ್ರಽಪುತ್ರೇ । ಜಿಘಾಂಸತಃ ।

ಮಾಕಿಃ । ತೋಕಸ್ಯ । ನಃ । ರಿಷತ್ ॥ ೧೧ ॥

|| ಸಾಯಣಭಾಷ್ಯಂ ||

ಹೇ ಅದಿತೇ ಆ ಪರ್ಷಿ । ಸರ್ವತಃ ಪಾಲಯಸಿ । ದೀನೇ ಕ್ಷೀಣೇ ಗಭೀರ ಉದಕೇ । ಉದಕನಾಮೈತತ್ ಗಂಭೀರಂ ಗಹನಮಿತಿ ತನ್ನಾಮಸು ಪಾಠಾತ್ । ಉಗ್ರಪುತ್ರೇ । ಉದ್ಗೂರ್ಣಾಃ ಪುತ್ರಾ ಯಸ್ಮಿನ್ ತತ್ । ತಸ್ಮಿನ್ನುದಕೇ ಜಿಘಾಂಸತೋ ಹಿಂಸತೋ ಜಾಲಂ ತೋಕಸ್ಯಾಸ್ಮಾಕಂ ತನಯಸ್ಯ ತನಯಂ ಮಾಕೀ ರಿಷತ್ । ಮೈವ ಹಿಂಸಾಂ ಕರೋತು ॥

। ಪ್ರತಿಪದಾರ್ಥ ।

(ಎಲೈ ಅದಿತಿದೇವಿಯೇ) ಆ ಪರ್ಷಿ—ನೀನು ಸರ್ವತ್ರ ರಕ್ಷಕಳಾಗಿದ್ದೀಯೆ । ದೀನೇ—ಆಳವಿಲ್ಲದಿರುವುದೂ । ಉಗ್ರಪುತ್ರೇ—ಭಯಂಕರವಾದ ಗ್ರಾಹಾದಿಗಳಿರುವುದೂ ಆದ । ಗಭೀರೇ—ಈ ಉದಕದಲ್ಲಿ । ನಃ ತೋಕಸ್ಯ—ನಮ್ಮ ಪುತ್ರನಿಗೆ । ಜಿಘಾಂಸತಃ—ಕೇಡನ್ನು ಬಯಸುವ ಶತ್ರುವಿನ ಬಲೆಯು । ಮಾಕಿಃ ರಿಷತ್—ಖಂಡಿತ ಹಿಂಸೆಯನ್ನುಂಟುಮಾಡದಿರಲಿ.

। ಭಾವಾರ್ಥ ।

ಎಲೈ ಅದಿತಿದೇವಿಯೇ, ನೀನು ನಮಗೆ ಸರ್ವತ್ರ ರಕ್ಷಕಳಾಗಿದ್ದೀಯೆ. ಆಳವಿಲ್ಲದಿರುವುದೂ, ಭಯಂಕರವಾದ ಗ್ರಾಹಾದಿಗಳಿರುವುದೂ ಆದ ಈ ಉದಕದಲ್ಲಿ ನಮ್ಮ ಪುತ್ರನಿಗೆ ಕೇಡನ್ನು ಬಯಸುವ ಶತ್ರುವಿನ ಬಲೆಯು ಹಿಂಸೆಯನ್ನುಂಟುಮಾಡದಿರಲಿ.

## English Translation.

You protect on every side ; let not (the net) of the destroyer hurt our children, in this shallow water full of mighty offspring.

|| ಸಂಹಿತಾಪಾಠಃ ||

ಅನೇಹೋ ನ ಉರುವ್ರಜ ಉರೂಚಿ ವಿ ಪ್ರಸರ್ತವೇ ।
ಕೃಧಿ ತೋಕಾಯ ಜೀವಸೇ ॥ ೧೨ ॥

|| ಪದಪಾಠಃ ||

ಅನೇಹಃ । ನಃ । ಉರುऽವ್ರಜೇ । ಉರೂಚಿ । ವಿ । ಪ್ರऽಸರ್ತವೇ ।
ಕೃಧಿ । ತೋಕಾಯ । ಜೀವಸೇ ॥ ೧೨ ॥

|| ಸಾಯಣಭಾಷ್ಯಂ ||

ಅದಿತ್ಯಸ್ಯ ಪಶಾವನೇಹೋ ನ ಇತಿ ಪುರೋಡಾಶಸ್ಯಾನುವಾಕ್ಯಾ । ಸೂತ್ರಂ ಚ । ಅನೇಹೋ ನ ಉರುವ್ರಜೇऽದಿತಿರ್ದ್ಯೌರದಿತಿರಂತರಿಕ್ಷಂ । ಆ. ೩-೮. ಇತಿ ॥

ಅನೇಹೋऽಪಾಪಾನ್ನೋऽಸ್ಮಾನ್ ಹೇ ಉರುವ್ರಜೇ ವಿಸ್ತೀರ್ಣಗಮನೇ । ದೂರಮಿಯಮದಿತಿ-ರ್ಭೂಮಿರೂಪಾ ಗತಾ ಭವತ್ಯತಿವಿಸ್ತೃತತ್ವಾತ್ । ಅಥವೋರುಗಮನೇ ಧೀರೇ ಹೇ ಉರೂಚಿ ಉರುತ್ವಂ ವಿ ಪ್ರಸರ್ತವೇऽಭಿಸರಣಾಯ ಕೃಧಿ । ಕುರು । ಕಸ್ಮೈ । ತೋಕಾಯ ಪುತ್ರಾಯ ಮತ್ಸ್ಯಾಯ ಜೀವಸೇ ಜೀವನಾಯ । ಯಥಾ ಜೀವೇನಾಪ್ಯತ್ಯಾನ್ನಕ್ಷಿತುಂ ತಥೋರುತ್ವಂ ಕುರ್ವಿತಿ ॥

|| ಪ್ರತಿಪದಾರ್ಥ ||

**ಉರುವ್ರಜೇ**—ವಿಸ್ತೃತವಾದ ಗಮನವುಳ್ಳವಳೂ । **ಉರೂಚೀ**—ದೂರದೇಶಸಂಚಾರಿಯೂ ಆದ ಎಲೈ ಅದಿತಿಯೇ । **ತೋಕಾಯ**—ನಮ್ಮ ಪುತ್ರನಿಗೆ । **ಜೀವಸೇ**—ಜೀವಿಸಲು ಅನುಕೂಲವಾಗಲು । **ಅನೇಹಃ**—ಪಾಪರಹಿತರಾದ । **ನಃ**—ನಮ್ಮಲ್ಲಿಗೆ । **ವಿ ಪ್ರಸರ್ತವೇ**—ಶೀಘ್ರವಾಗಿ ಬರಲು । **ಕೃಧಿ**—ಸಂಕಲ್ಪವನ್ನು ಮಾಡು.

। ಭಾವಾರ್ಥ ।

ವಿಸ್ತೃತವಾದ ಗಮನವುಳ್ಳವಳೂ, ದೂರದೇಶಸಂಚಾರಿಯೂ ಆದ ಎಲೈ ಅದಿತಿಯೇ, ನಮ್ಮ ಪುತ್ರನಿಗೆ ಜೀವಿಸಲು ಅನುಕೂಲವಾಗಲು ಪಾಪರಹಿತರಾದ ನಮ್ಮಲ್ಲಿಗೆ ಶೀಘ್ರವಾಗಿ ಬರಲು ಮನಸ್ಸು ಮಾಡು.

## English Translation.

Wide-traversing, far-reaching goddess, put forth your power to come to us, innocent ones, that our children may live.

|| ವಿಶೇಷವಿಷಯಗಳು ||

ಆದಿತ್ಯನನ್ನುದ್ದೇಶಿಸಿ ಮಾಡುವ ಪಶುಹೋಮದಲ್ಲಿ ಪುರೋಡಾಶವನ್ನು ಹೋಮಮಾಡುವಾಗ **ಅನೇಹೋ ನಃ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅನೇಹೋ ನ ಉರುವ್ರಜೇऽದಿತಿರ್ಹ್ಯಜನಿಷ್ಟ** ಎಂಬ ಸೂತ್ರದಿಂದ (ಆ ೩-೮) ವಿವೃತವಾಗಿರುವುದು.

| ಸಂಹಿತಾಪಾಠಃ ||

ಯೇ ಮೂರ್ಧಾನಃ ಕ್ಷಿತೀನಾಮದಬ್ಧಾಸಃ ಸ್ವಯಶಸಃ |
ವ್ರತಾ ರಕ್ಷಂತೇ ಅದ್ರುಹಃ || ೧೩ ||

|| ಪದಪಾಠಃ ||

ಯೇ | ಮೂರ್ಧಾನಃ | ಕ್ಷಿತೀನಾಂ | ಅದಬ್ಧಾಸಃ | ಸ್ವऽಯಶಸಃ |
ವ್ರತಾ | ರಕ್ಷಂತೇ | ಅದ್ರುಹಃ || ೧೩ ||

|| ಸಾಯಣಭಾಷ್ಯಂ ||

**ಯೇ ಮೂರ್ಧಾನಃ ಸರ್ವೇಷಾಂ ಮೂರ್ಧಸ್ಥಾನೀಯಾ ಉಚ್ಛ್ರಯಂತಃ ಕ್ಷಿತೀನಾಂ ಮನುಷ್ಯಾಣಾಮದಬ್ಧಾಸೋऽಹಿಂಸಕಾಃ ಸ್ವಯಶಸಃ ಸ್ವಾಯತ್ತಕೀರ್ತಯೋ ವ್ರತಾ ವ್ರತಾನ್ಯಸ್ಮದೀಯಾನಿ ಕರ್ಮಾಣಿ ರಕ್ಷಂತೇ ಪಾಲಯಂತೇऽದ್ರುಹೋऽದ್ರೋಗ್ಧಾರಃ ಸಂತಃ ||**

| ಪ್ರತಿಪದಾರ್ಥ |

**ಯೇ**—ಯಾರು | **ಮೂರ್ಧಾನಃ**—ಎಲ್ಲರಿಗಿಂತಲೂ ಮೇಲ್ಭಾಗದಲ್ಲಿರುವವರೂ | **ಕ್ಷಿತೀನಾಂ**—ಮಾನವರಿಗೆ | **ಅದಬ್ಧಾಸಃ**—ಅಹಿಂಸಕರಾಗಿರುವವರೂ | **ಸ್ವಯಶಸಃ**—ಸ್ವಯಂಸಂಪಾದಿತವಾದ ಕೀರ್ತಿಯುಳ್ಳವರೂ ಆಗಿರುವರೋ ಅಂತಹ ಆದಿತ್ಯರು | **ಅದ್ರುಹಃ**—ನಮಗೆ ಕೇಡನ್ನು ಬಯಸದೆ | **ವ್ರತಾ**—ನಮ್ಮ ವೈದಿಕಕರ್ಮಗಳನ್ನು | **ರಕ್ಷಂತೇ**—ಪಾಲಿಸುತ್ತಾರೆ.

| ಭಾವಾರ್ಥ |

ಸಕಲ ದೇವಮಾನವಾದಿಗಳಿಗಿಂತಲೂ ಮೇಲ್ಭಾಗದಲ್ಲಿರುವವರೂ, ಮಾನವರಿಗೆ ಹಿಂಸಾರಹಿತರೂ, ಸ್ವಯಂ ಸಂಪಾದಿತವಾದ ಕೀರ್ತಿಯುಳ್ಳವರೂ ಆದ ಆದಿತ್ಯರು ನಮಗೆ ಕೇಡನ್ನು ಬಯಸದೆ ನಮ್ಮ ವೈದಿಕ ಕರ್ಮಗಳನ್ನು ಪಾಲಿಸುತ್ತಾರೆ.

## English Translation.

You who are the heads of men, unharming, and of self-sustained glory, who, benevolent ones, protect our rites.

॥ ಸಂಹಿತಾಪಾಠಃ ॥

ತೇ ನ ಆಸ್ನೋ ವೃಕಾಣಾಮಾದಿತ್ಯಾಸೋ ಮುಮೋಚತ ।
ಸ್ತೇನಂ ಬದ್ಧಮಿವಾದಿತೇ ॥ ೧೪ ॥

॥ ಪದಪಾಠಃ ॥

ತೇ । ನಃ । ಆಸ್ನಃ । ವೃಕಾಣಾಂ । ಆದಿತ್ಯಾಸಃ । ಮುಮೋಚತ ।
ಸ್ತೇನಂ । ಬದ್ಧಂऽಇವ । ಅದಿತೇ ॥ ೧೪ ॥

॥ ಸಾಯಣಭಾಷ್ಯಂ ॥

**ಹೇ ಆದಿತ್ಯಾಸ ಆದಿತ್ಯಾಃ ತೇ ಯೂಯಂ ನೋऽಸ್ಮಾನ್ವೃಕಾಣಾಂ ಹಿಂಸಕಾನಾಮದಾತ್ವೈಣಾಂ ವಾಸ್ನ ಆಸ್ಯಾತ್ಸಕಾಶಾನ್ಮುಮೋಚತ । ವಿಮೋಚತ । ವಿಮೋಚನಂ ಕುರುತ ಸ್ತೇನಂ ಬದ್ಧಮಿವ । ಹೇ ಅದಿತೇ ತ್ವಂ ಚ ಮೋಚಯಾಸ್ಮಾನಿತಿ ॥**

॥ ಪ್ರತಿಪದಾರ್ಥ ॥

**ಆದಿತ್ಯಾಸಃ**—ಎಲೈ ಆದಿತ್ಯರೇ । **ತೇ**—ಆ ನೀವು । **ಬದ್ಧಂ**—ಬಂಧಿತನಾದ । **ಸ್ತೇನಂ ಇವ**—ಕಳ್ಳನಂತೆ ತವಕಪಡುತ್ತಿರುವ । **ನಃ**—ನಮ್ಮನ್ನು । **ವೃಕಾಣಾಂ**—ತೋಳನಂತೆ ಹಿಂಸಿಸುವ **ಶತ್ರು**ಗಳ । **ಆಸ್ನಃ**—ಬಾಯಿನಿಂದ (ಅಥವಾ ಹಿಂಸಕವಾದ ತೋಳನ ಬಾಯಿನಿಂದ) । **ಮುಮೋಚತ—ಬಿಡಿಸಿರಿ** । **ಅದಿತೇ**—ಎಲೈ ಅದಿತಿಯೇ, ನೀನು ನಮ್ಮನ್ನು ಬಿಡಿಸು.

॥ ಭಾವಾರ್ಥ ॥

ಎಲೈ ಆದಿತ್ಯರೇ, ಬಂಧಿತನಾದ ಕಳ್ಳನಂತೆ ತವಕಪಡುತ್ತಿರುವ ನಮ್ಮನ್ನು ಹಿಂಸಕವಾದ **ತೋಳ**ಗಳ ಬಾಯಿನಿಂದ ಬಿಡಿಸಿರಿ. ಎಲೈ ಅದಿತಿಯೇ, ನೀನೂ ನಮ್ಮನ್ನು ಬಿಡಿಸು.

## English Translation.

Adityas, deliver us from the jaws of the destroyers like a bound thief ; O Aditi, (deliver us).

॥ ಸಂಹಿತಾಪಾಠಃ ॥

ಅಪೋ ಷು ಣ ಇಯಂ ಶರುರಾದಿತ್ಯಾ ಅಪ ದುರ್ಮತಿಃ ।
ಅಸ್ಮದೇತ್ವಜಘ್ನುಷೀ ॥ ೧೫ ॥

|| ಪದಪಾಠಃ ||

**ಅಪ್ರೋ ಇತಿ । ಸು । ನಃ । ಇಯಂ । ಶರುಃ । ಆದಿತ್ಯಾಃ । ಅಪ । ದುಃಽಮತಿಃ ।**

**ಅಸ್ಮತ್ । ಏತು । ಅಜಘ್ನುಷೀ ॥ ೧೫ ॥**

|| ಸಾಯಣಭಾಷ್ಯಂ ||

ಹೇ ಆದಿತ್ಯಾಃ ಇಯಂ ಶರುರ್ಹಿಂಸಿಕಾ ಪ್ರಸಿತಿರ್ಜಾಲಿಕಪ್ರೇರಿತಾಜಘ್ನುಷ್ಯಹಿಂಸಂತೀ ಸತ್ಯಸ್ಮ-ದಸ್ಮತ್ತಃ ಸು ಸುಷ್ಠ್ವಪ್ರೋ ಏತು । ಅಪಗಚ್ಛತ್ವೇವ । ತಥಾ ದುರ್ಮತಿರ್ದುಷ್ಟಾ ಮತಿರಪ್ಯಜಘ್ನುಷ್ಯ-ಸ್ಮತ್ತೋಽಪಗಚ್ಛತು ॥

|| ಪ್ರತಿಪದಾರ್ಥ ||

**ಆದಿತ್ಯಾಃ**—ಎಲೈ ಆದಿತ್ಯರೇ । **ನಃ**—ನಮಗೆ । **ಇಯಂ ಶರುಃ**—ಹಿಂಸಕವಾದ ಈ ಬಲೆಯು । **ಅಜಘ್ನುಷೀ**—ನಮ್ಮನ್ನು ಹಿಂಸಿಸದೇ । **ಅಸ್ಮತ್**—ನಮ್ಮಿಂದ । **ಸು**—ಬಹುವಾಗಿ । **ಅಪ್ರೋ ಏತು**—ದೂರ ಸರಿದುಹೋಗಲಿ । **ದುರ್ಮತಿಃ**—ಶತ್ರುವಿನ ಕೆಟ್ಟ ಸಂಕಲ್ಪವೂ । **ಅಪ**—ದೂರ ಸರಿದು ನಾಶವಾಗಲಿ.

|| ಭಾವಾರ್ಥ ||

ಎಲೈ ಆದಿತ್ಯರೇ, ನಮಗೆ ಹಿಂಸಕವಾದ ಈ ಬಲೆಯು ನಮ್ಮನ್ನು ಹಿಂಸಿಸದೇ ನಮ್ಮಿಂದ ಬಹುದೂರ ಸರಿದು ಹೋಗಲಿ. ಶತ್ರುವಿನ ಕೆಟ್ಟ ಸಂಕಲ್ಪವೂ ಹಾಗೆಯೇ ದೂರ ಸರಿದು ನಾಶವಾಗಲಿ.

## English Translation.

Adityas, let this net, let the malevolent design turn away from us innocuous.

|| ಸಂಹಿತಾಪಾಠಃ ||

ಶಶ್ವದ್ಧಿ ವಃ ಸುದಾನವ ಆದಿತ್ಯಾ ಊತಿಭಿರ್ವಯಂ ।
ಪುರಾ ನೂನಂ ಬುಭುಜ್ಮಹೇ ॥ ೧೬ ॥

|| ಪದಪಾಠಃ ||

**ಶಶ್ವತ್ । ಹಿ । ವಃ । ಸುಽದಾನವಃ । ಆದಿತ್ಯಾಃ । ಊತಿಽಭಿಃ । ವಯಂ ।**

**ಪುರಾ । ನೂನಂ । ಬುಭುಜ್ಮಹೇ ॥ ೧೬ ॥**

|| ಸಾಯಣಭಾಷ್ಯಂ ||

ಹೇ ಸುದಾನವಃ ಸುದಾನಾ ಹೇ ಆದಿತ್ಯಾಃ ವೋ ಯುಷ್ಮಾಕಮೂತಿಭೀ ರಕ್ಷಾಭಿರ್ವಯಂ ಪುರಾ ನೂನಮಿದಾನೀಮಪಿ ಶಶ್ವತ್ಸರ್ವದಾ ಬುಭುಜ್ಮಹೇ । ಯದ್ವಾ । ಶಶ್ವದ್ಬಹೂನ್ಭೋಗಾನ್ಭುಂಜ್ಮಹೇ ||

|| ಪ್ರತಿಪದಾರ್ಥ ||

**ಸುದಾನವಃ**—ಉತ್ತಮವಾದ ದಾನವಂತರಾದ | **ಆದಿತ್ಯಾಃ**—ಎಲೈ ಆದಿತ್ಯರೇ | **ವಃ ಹಿ**—ನಿಮ್ಮ | **ಊತಿಭಿಃ**—ರಕ್ಷಣೆಗಳಿಂದಲೇ ಕೂಡಿ | **ವಯಂ**—ನಾವು | **ಪುರಾ**—ಹಿಂದೆಯೂ | **ನೂನಂ**—ಈಗಲೂ | **ಶಶ್ವತ್**—ಸರ್ವಕಾಲದಲ್ಲಿಯೂ | **ಬುಭುಜ್ಮಹೇ**—ಅನೇಕ ಸುಖಗಳನ್ನು ಅನುಭವಿಸುತ್ತಿದ್ದೇವೆ.

|| ಭಾವಾರ್ಥ ||

ಉತ್ತಮವಾದ ದಾನವಂತರಾವ ಎಲೈ ಆದಿತ್ಯರೇ, ನಿಮ್ಮ ರಕ್ಷಣೆಗಳಿಂದಲೇ ಕೂಡಿದ ನಾವು ಹಿಂದೆಯೂ ಈಗಲೂ ಸರ್ವಕಾಲದಲ್ಲಿಯೂ ಸಹ ಅನೇಕ ವಿಧವಾದ ಸುಖಗಳನ್ನು ಅನುಭವಿಸುತ್ತಿದ್ದೇವೆ.

### English Translation.

Bounteous Adityas, by your protections we have continually possessed enjoyments from of old.

|| ಸಂಹಿತಾಪಾಠಃ ||

ಶಶ್ವಂತಂ ಹಿ ಪ್ರಚೇತಸಃ ಪ್ರತಿಯಂತಂ ಚಿದೇನಸಃ ।
ದೇವಾಃ ಕೃಣುಥ ಜೀವಸೇ || ೧೭ ||

|| ಪದಪಾಠಃ ||

ಶಶ್ವಂತಂ । ಹಿ । ಪ್ರಽಚೇತಸಃ । ಪ್ರತಿಽಯಂತಂ । ಚಿತ್ । ಏನಸಃ ।
ದೇವಾಃ । ಕೃಣುಥ । ಜೀವಸೇ || ೧೭ ||

|| ಸಾಯಣಭಾಷ್ಯಂ ||

ಹೇ ಪ್ರಚೇತಸಃ ಪ್ರಕೃಷ್ಟಮಾಯಾ ಹೇ ದೇವಾಃ ಶಶ್ವಂತಂ ಬಹುಮಪಿ ಪ್ರತಿಯಂತಂ ಚಿತ್ ಪ್ರತಿಗಚ್ಛಂತಮಪಿ ಶತ್ರುಮೇನಸಃ ಪಾಪಸ್ಯ ಕರ್ತಾರಂ । ಅಥವೈನಸಃ ಪಾಪಕೃತಃ ॥ ವ್ಯತ್ಯಯೇನ ಬಹುವಚನಂ ॥ ಪಾಪಕರ್ತಾರಂ ಜೀವಸೇ ಜೀವನಾಯಾಸ್ಮಾಕಂ ಕೃಣುಥ । ಕುರುತ । ಅಸ್ಮತ್ತೋ ವಿಯುಕ್ತಮಿತಿ ಶೇಷಃ ||

॥ ಪ್ರತಿಪದಾರ್ಥ ॥

**ಪ್ರಚೇತಸಃ**—ಉತ್ಕೃಷ್ಟವಾದ ಜ್ಞಾನವುಳ್ಳ । **ದೇವಾಃ**—ಎಲೈ ದೇವತೆಗಳೇ । **ಪ್ರತಿಯಂತಂ**—ನಮ್ಮ ಮೇಲೆ ಬೀಳುವ । **ಏನಸಃ**—ಪಾಪಿಷ್ಠರನ್ನು । **ತತ್ವಂತಂ ಚಿತ್ ಹಿ**—ಅನೇಕ ಸಂಖ್ಯೆಯುಳ್ಳವರಾಗಿದ್ದರೂ ಸಹ । **ಜೀವಸೇ**—ನಾವು ಸುಖವಾಗಿ ಜೀವಿಸಲು । **ಕೃಣುಥ**—ದೂರವಾಗಿಡಿರಿ.

॥ ಭಾವಾರ್ಥ ॥

ಉತ್ಕೃಷ್ಟವಾದ ಜ್ಞಾನವುಳ್ಳ ಎಲೈ ದೇವತೆಗಳೇ, ನಮ್ಮ ಮೇಲೆ ಬೀಳುವ ಪಾಪಿಷ್ಠರನ್ನು ಅನೇಕ ಸಂಖ್ಯೆಯುಳ್ಳವರಾದರೂ ಸಹ, ನಾವು ಸುಖವಾಗಿ ಜೀವಿಸಲು ನಮ್ಮಿಂದ ದೂರವಾಗಿಡಿರಿ.

## English Translation.

Wise deities, keep away from us, that we may live, the many doers of sin who come against us.

॥ ಸಂಹಿತಾಪಾಠಃ ॥

ತತ್ಸು ನೋ ನವ್ಯಂ ಸನ್ಯಸ ಆದಿತ್ಯಾ ಯನ್ಮುಮೋಚತಿ ।
ಬಂಧಾದ್ಬದ್ಧಮಿವಾದಿತೇ ॥ ೧೮ ॥

॥ ಪದಪಾಠಃ ॥

**ತತ್ । ಸು । ನಃ । ನವ್ಯಂ । ಸನ್ಯಸೇ । ಆದಿತ್ಯಾಃ । ಯತ್ । ಮುಮೋಚತಿ ।**
**ಬಂಧಾತ್ । ಬದ್ಧಂऽಇವ । ಅದಿತೇ ॥ ೧೮ ॥**

॥ ಸಾಯಣಭಾಷ್ಯಂ ॥

**ತದ್ವಂಧಕಂ ನೋऽಸ್ಮಾಕಂ ಸು ಸುಷ್ಠು ನವ್ಯಂ ಸ್ತುತ್ಯಂ ಸಂನ್ಯಸೇ ಸಂಭಜನಾಯ ಭವತು । ಅಸ್ಮಾಕಂ ಮೋಚನೇನ ಸ್ತುತ್ಯಂ ಭವತ್ವಿತ್ಯರ್ಥಃ । ಹೇ ಆದಿತ್ಯಾ ಅದಿತೇಃ ಪುತ್ರಾ ಹೇ ಅದಿತೇ ತ್ವದನುಗ್ರಹಾದ್ಯನ್ಮುಮೋಚತಿ ಮುಂಚತ್ಯಸ್ಮಾನ್ ಬಂಧನಸಾಧನಂ ಪೂರ್ವಂ ಯತ್ಪ್ರತಿಬಂಧಕತ್ವಾದಾಸೀತ್ ತದೇವ ಯುಷ್ಮದನುಗ್ರಹಾದಸ್ಮಾನ್ಮುಂಚತು । ಯದ್ವಾ । ಯುಷ್ಮಾಕಂ ಯದ್ರಕ್ಷಣಮಸ್ಮಾನ್ಮುಂಚತಿ ತುತ್ಸುಷ್ಠು ಸ್ತುತ್ಯಂ ಸಂಭಜನಾಯ ಭವತ್ವಿತಿ ಯೋಜ್ಯಂ ॥**

॥ ಪ್ರತಿಪದಾರ್ಥ ॥

**ಆದಿತ್ಯಾಃ**—ಎಲೈ ಆದಿತ್ಯರೇ । **ಅದಿತೇ**—ಎಲೈ ಅದಿತಿದೇವಿಯೇ । **ಬದ್ಧಂ**—ಬಂಧಿತನಾದ ಪುರುಷನನ್ನು । **ಬಂಧಾತ್ ಇವ**—ಬಂಧನದಿಂದ ಬಿಡಿಸಿದರೆ ಯಾವ ಸುಖವುಂಟೋ ಹಾಗೆ । **ಯತ್**—ಯಾವ

**ಬಂಧನದಿಂದ** | **ಮುಮೋಚತಿ**— ನೀವು ಬಿಡಿಸುವಿರೋ | **ತತ್**— ಆ ಮುಕ್ತಿಯು | **ನಃ**—ನಮಗೆ | **ಸು**— ಅತಿಶಯವಾಗಿ | **ನವ್ಯಂ**— ಪ್ರಶಸ್ಯವೂ | **ಸನ್ಯಸೇ**— ಭೋಗಾರ್ಹವೂ ಆಗಿರಲಿ.

॥ ಭಾವಾರ್ಥ ॥

ಎಲೈ ಆದಿತ್ಯರೇ ಮತ್ತು ಅದಿತಿದೇವಿಯೇ, ಬಂಧಿತನಾದ ಪುರುಷನನ್ನು ಬಂಧನದಿಂದ ಬಿಡಿಸಿದರೆ ಯಾವ ಸುಖವುಂಟೋ ಹಾಗೆ, ಯಾವ ಬಂಧನದಿಂದ ನೀವು ಬಿಡಿಸುವಿರೋ ಆ ಮೋಚನಕರ್ಮವು ನಮಗೆ ಅತಿಶಯವಾಗಿ ಪ್ರಶಸ್ಯವೂ ಭೋಗಾರ್ಹವೂ ಆಗಿರಲಿ.

## English Translation.

Adityas and Aditi, let that which releases us as a prisoner from his bond, be ever the object of our praise and worship.

॥ ಸಂಹಿತಾಪಾಠಃ ॥

ನಾಸ್ಮಾಕಮಸ್ತಿ ತತ್ತರ ಆದಿತ್ಯಾಸೋ ಅತಿಷ್ಕದೇ ।
ಯೂಯಮಸ್ಮಭ್ಯಂ ಮೃಳತ ॥ ೧೯ ॥

॥ ಪದಪಾಠಃ ॥

ನ । ಅಸ್ಮಾಕಂ । ಅಸ್ತಿ । ತತ್ । ತರಃ । ಆದಿತ್ಯಾಸಃ । ಅತಿऽಸ್ಕದೇ ।
ಯೂಯಂ । ಅಸ್ಮಭ್ಯಂ । ಮೃಳತ ॥ ೧೯ ॥

॥ ಸಾಯಣಭಾಷ್ಯಂ ॥

**ಹೇ ಆದಿತ್ಯಾಸ ಆದಿತ್ಯಾಃ ಯುಷ್ಮತ್ಕೃತಕೃತಸ್ತತ್ತರೋ ವೇಗೋಽಸ್ಮಾಕಂ ನಾಸ್ತಿ ಯೋ ವೇಗೋ ಬಂಧಕಾಜ್ಜಾಲಾದತಿಷ್ಕದೇಽಸ್ಮಾಕಮತಿಷ್ಕಂದನಾಯ ಪ್ರಭವತಿ । ಅತೋ ಯೂಯಮಸ್ಮಭ್ಯಂ ಮೃಳತ ತತ್ತಾದೃಶಂ ತರಃ ಕುರುತೇತ್ಯರ್ಥಃ ॥**

॥ ಪ್ರತಿಪದಾರ್ಥ ॥

**ಆದಿತ್ಯಾಸಃ**— ಎಲೈ ಆದಿತ್ಯರೇ | **ಅತಿಷ್ಕದೇ**— ಈ ಬಂಧನದಿಂದ ನಾವಾಗಿಯೇ ತಪ್ಪಿಸಿಕೊಂಡು ಹೋಗಲು | **ತತ್ ತರಃ**— ಯಾವ ಶಕ್ತಿಯು ಬೇಕೋ ಆ ಶಕ್ತಿಯು | **ಅಸ್ಮಾಕಂ**— ನಮಗೆ | **ನ ಅಸ್ತಿ**— ಖಂಡಿತ ಇಲ್ಲ (ಆದುದರಿಂದ) | **ಯೂಯಂ**— ನೀವು | **ಅಸ್ಮಭ್ಯಂ**— ನಮಗೆ | **ಮೃಳತ**— ಸುಖಕಾರಕರಾಗಿರಿ.

॥ ಭಾವಾರ್ಥ ॥

ಎಲೈ ಆದಿತ್ಯರೇ, ಈ ಬಂಧನದಿಂದ ನಾವಾಗಿಯೇ ತಪ್ಪಿಸಿಕೊಂಡು ಹೋಗಲು ಯಾವ ಶಕ್ತಿಯು ಬೇಕೋ, ಆ ಶಕ್ತಿಯು ನಮ್ಮಲ್ಲಿ ಖಂಡಿತ ಇಲ್ಲ. ಆದುದರಿಂದ ನೀವು ನಮಗೆ ಸುಖಕಾರಕರಾಗಿರಿ.

## English Translation.

Not to us is there strength enough to burst from this (net); O Adityas, grant us your favour.

|| ಸಂಹಿತಾಪಾಠಃ ||

ಮಾ ನೋ ಹೇತಿರ್ವಿವಸ್ವತ ಆದಿತ್ಯಾಃ ಕೃತ್ರಿಮಾ ಶರುಃ ।

ಪುರಾ ನು ಜರಸೋ ವಧೀತ್ || ೨೦ ||

|| ಪದಪಾಠಃ ||

ಮಾ । ನಃ । ಹೇತಿಃ । ವಿವಸ್ವತಃ । ಆದಿತ್ಯಾಃ । ಕೃತ್ರಿಮಾ । ಶರುಃ ।

ಪುರಾ । ನು । ಜರಸಃ । ವಧೀತ್ || ೨೦ ||

| ಸಾಯಣಭಾಷ್ಯಂ |

ಹೇ ಆದಿತ್ಯಾಃ ನೋಽಸ್ಮಾನ್ವಿವಸ್ವತೋ ವಿವಸ್ವತ್ಪುತ್ರಸ್ಯ ಯಮಸ್ಯ । ಪುತ್ರೇ ಪಿತೃಶಬ್ದಃ । ತಸ್ಯ ಹೇತಿರಾಯುಧಭೂತಾ ಕೃತ್ರಿಮಾ ಕ್ರಿಯಯಾ ನಿಷ್ಪನ್ನಾ ಶರುರ್ಹಿಂಸಿಕಾ ಪ್ರಸಿತಿಃ ಪುರಾ ಪೂರ್ವಂ ನ್ವಿದಾನೀಂ । ಸರ್ವದೇತ್ಯರ್ಥಃ । ಜರಸ ಇದಾನೀಂ ಜೀರ್ಣಾನ್ನಾ ವಧೀತ್ । ಮಾ ಹಿಂಸ್ಯಾತ್ ||

|| ಪ್ರತಿಪದಾರ್ಥ ||

ಆದಿತ್ಯಾಃ—ಎಲೈ ಆದಿತ್ಯರೇ । ವಿವಸ್ವತಃ—ವಿವಸ್ವತ್ಪುತ್ರನಾದ ಯಮನಿಂದ । ಕೃತ್ರಿಮಾ—ರಚಿತವಾದುದೂ । ಶರುಃ—ಹಿಂಸಕವಾದುದೂ । ಹೇತಿಃ—ಆಯುಧರೂಪವಾದುದೂ ಆದ ಈ ಬಲೆಯು । ನಃ—ನಮ್ಮನ್ನು । ಪುರಾ ನು ಜರಸಃ—ನಮಗೆ ವಾರ್ಧಕ್ಯವು ಬರುವುದಕ್ಕೆ ಮೊದಲೇ । ಮಾ ವಧೀತ್—ಕೊಲ್ಲದಿರಲಿ.

| ಭಾವಾರ್ಥ |

ಎಲೈ ಆದಿತ್ಯರೇ, ವಿವಸ್ವತ್ಪುತ್ರನಾದ ಯಮನಿಂದ ರಚಿತವಾದುದೂ, ಹಿಂಸಕವಾದ ಆಯುಧದಂತಿರುವುದೂ, ಆದ ಈ ಬಲೆಯು ನಮ್ಮನ್ನು ನಮಗೆ ವಾರ್ಧಕ್ಯವು ಬರುವುದಕ್ಕೆ ಮೊದಲೇ ಕೊಲ್ಲದಿರಲಿ.

## English Translation.

Let not this weapon of Vivaswat, this net made with hands. Adityas. destroy us before old age.

|| ಸಂಹಿತಾಪಾಠಃ ||

ವಿ ಷು ದ್ವೇಷೋ ವ್ಯಂಹತಿಮಾದಿತ್ಯಾಸೋ ವಿ ಸಂಹಿತಂ |

ವಿಷ್ವಗ್ವಿ ವೃಹತಾ ರಪಃ || ೨೧ ||

|| ಪದಪಾಠಃ ||

ವಿ | ಸು | ದ್ವೇಷಃ | ವಿ | ಅಂಹತಿಂ | ಆದಿತ್ಯಾಸಃ | ವಿ | ಸಂऽಹಿತಂ |

ವಿಷ್ವಕ್ | ವಿ | ವೃಹತ | ರಪಃ || ೨೧ ||

|| ಸಾಯಣಭಾಷ್ಯಂ ||

ಹೇ ಆದಿತ್ಯಾಸ ಆದಿತ್ಯಾಃ ದ್ವೇಷೋ ದ್ವೇಷ್ಟ್ರೄನ್ ಸು ಸುಷ್ಠು ವಿ ವೃಹತ | ಉನ್ಮೂಲಯತ | ನಾಶಯತೇತ್ಯರ್ಥಃ | ತಥಾಂಹತಿಂ ಪಾತಕಂ ಪಾಪಂ ವಿ ವೃಹತ || ಹಂತೇರಂಹ ಚ | ಉ. ೪-೬೨ | ಇತ್ಯತಿಪ್ರತ್ಯಯಃ || ತಥಾ ಸಂಹಿತಂ ಜಾಲಂ ವಿ ವೃಹತ | ತಥಾ ರಪಃ ಪಾಪಂ ಸರ್ವಂ ವಿಷ್ವಗ್ವಿಷೂಚೀನಂ ವಿ ವೃಹತ | ರಪೋ ರಿಪ್ರಮಿತಿ ಪಾಪನಾಮನೀ ಭವತಃ | ನಿ. ೪-೨೧ | ಇತಿ ಯಾಸ್ಕಃ ||

|| ಪ್ರತಿಪದಾರ್ಥ ||

**ಆದಿತ್ಯಾಸಃ**—ಎಲೈ ಆದಿತ್ಯರೇ | **ದ್ವೇಷಃ**—ನಮ್ಮ ಶತ್ರುಗಳನ್ನು | **ಸು**—ಪೂರ್ಣವಾಗಿ | **ವಿ ವೃಹತ**—ನಿರ್ಮೂಲಮಾಡಿರಿ | **ಅಂಹತಿಂ**—ನಮ್ಮ ಪಾಪವನ್ನು | **ವಿ**—ನಿರ್ಮೂಲಮಾಡಿರಿ | **ಸಂಹಿತಂ**—ಒಟ್ಟಾಗಿರುವ ಈ ಬಲೆಯನ್ನು | **ವಿ**—ನಾಶಮಾಡಿರಿ | **ರಪಃ**—ನಮ್ಮ ಪಾಪಗಳನ್ನು | **ವಿಷ್ವಕ್**—ಪೂರ್ಣವಾಗಿ | **ವಿ**—ನಾಶಪಡಿಸಿರಿ.

|| ಭಾವಾರ್ಥ ||

ಎಲೈ ಆದಿತ್ಯರೇ, ನಮ್ಮ ಶತ್ರುಗಳನ್ನು ಪೂರ್ಣವಾಗಿ ನಿರ್ಮೂಲಮಾಡಿರಿ. ನಮ್ಮ ಪಾಪವನ್ನು ನಿರ್ಮೂಲಮಾಡಿರಿ. ಒಟ್ಟಗಿರುವ ಈ ಬಲೆಯನ್ನು ನಾಶಪಡಿಸಿ, ನಮ್ಮ ಪಾಪವನ್ನು ಪೂರ್ಣವಾಗಿ ನಾಶಪಡಿಸಿರಿ.

## English Translation.

Adityas, utterly destroy our enemies, destroy wickedness, destroy the closely drawn net, destroy evil everywhere.



ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜ ಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲಸಾಮ್ರಾಜ್ಯ-ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಷಷ್ಠಾಷ್ಟಕೇ ಚತುರ್ಥೋಽಧ್ಯಾಯಃ ಸಮಾಪ್ತಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕ ಭಾಷಾನುವಾದಯುತವೂ ಆದ ಋಗ್ವೇದಸಂಹಿತೆಯಲ್ಲಿ ಆರನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

---

